ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೩೫

# RIG-VEDA

ಋಗ್ವೇದಕ್ಕೆ ಸಂಬಂಧಪಟ್ಟ ಷಡಂಗಗಳಲ್ಲಿ ಅತಿ ಮುಖ್ಯವೂ ಮತ್ತು ಪ್ರಾಚೀನವೂ ಆದ

ಯಾಸ್ಕಮಹರ್ಷಿ ವಿರಚಿತ

# ನಿರುಕ್ತಂ

(ಕರ್ಣಾಟಕ ಅರ್ಥಾನುವಾದವಿವರಣೆಗಳೊಡನೆ)

ಭಾಗ ೩೫

|| ಉತ್ತರ ಷಟ್ಕಂ ||

ಎರಡನೆಯ ಭಾಗವು

*Translated with Exhaustive Critical Notes & Explanations*

*by*

Asthana Mahavidwan

H. P. VENKATA RAO

Editor



*Printed at*

SREE SHARADA PRESS, MYSORE

1962


ಋಗ್ವೇದಸಂಹಿತಾ
ಭಾಗ—೩೫
ನಿರುಕ್ತ ಉತ್ತರಷಟ್ಕಂ
ಎರಡನೆಯ ಭಾಗವು

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೩೫

# RIG-VEDA

ಋಗ್ವೇದಕ್ಕೆ ಸಂಬಂಧಪಟ್ಟ ಷಡಂಗಗಳಲ್ಲಿ ಅತಿ ಮುಖ್ಯವೂ ಮತ್ತು ಪ್ರಾಚೀನವೂ ಆದ

ಯಾಸ್ಕಮಹರ್ಷಿ ವಿರಚಿತ

# ನಿರುಕ್ತಂ

(ಕರ್ಣಾಟಕ ಅರ್ಥಾನುವಾದವಿವರಣೆಗಳೊಡನೆ)

ಭಾಗ ೩೫

|| ಉತ್ತರ ಷಟ್ಕಂ ||

ಎರಡನೆಯ ಭಾಗವು

---

*Translated with Exhaustive Critical Notes & Explanations*

*by*

Asthana Mahavidwan

H. P. VENKATA RAO

Editor



---

*Printed at*

SREE SHARADA PRESS, MYSORE

1962

# ಪೀಠಿಕೆ

---

ನಿರುಕ್ತವೆಂಬ ಈ ಗ್ರಂಥವು ವೇದಗಳಿಗೆ ಸಂಬಂಧಪಟ್ಟ ಷಡಂಗಗಳಲ್ಲಿ ಮುಖ್ಯವಾದುದೂ, ಪ್ರಾಚೀನವಾದುದೂ ಎಂದು ಪರಿಗಣಿಸಲ್ಪಟ್ಟಿದೆ. ವೇದಗಳು ಅತಿಪ್ರಾಚೀನ ಗ್ರಂಥಗಳಾದ್ದರಿಂದ ಅವುಗಳನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧನ ಗ್ರಂಥಗಳು ಆವಶ್ಯಕವು. ವೇದಗಳು ಅನೇಕ ಸಾವಿರ ವರ್ಷಗಳ ಪ್ರಾಚೀನ ಗ್ರಂಥಗಳಾದ್ದರಿಂದ ಅವುಗಳಲ್ಲಿ-ಅದರಲ್ಲಿಯೂ ಋಗ್ವೇದದಲ್ಲಿ ಬಳಸಲಾಗಿರುವ ಭಾಷೆಯೂ, ವಿಷಯಗಳೂ ಬಹಳ ಕ್ಲಿಷ್ಟವೂ ಈಗಿನ ಎಂದರೆ ಆಧುನಿಕ ಸಂಸ್ಕೃತಭಾಷೆಯಲ್ಲಿಲ್ಲದ ಶಬ್ದಗಳ ಪ್ರಯೋಗದಿಂದ ಕೂಡಿರುವುವೂ ಆದುದರಿಂದ ಸಾಮಾನ್ಯ ಜನರಿಗೆ-ಆಧುನಿಕ ಸಂಸ್ಕೃತ ಭಾಷೆಗಳಲ್ಲಿ ಪರಿಣತರಾದ ವಿದ್ವಾಂಸರಿಗೂ ಸಹ-ತಿಳಿದುಕೊಳ್ಳಲು ಕಷ್ಟಸಾಧ್ಯವಾಗಿರುವುದು. ಆದುದರಿಂದ ಕ್ರಿ. ಪೂ. ೨೦೦೦ ವರ್ಷಗಳಿಗಿಂತಲೂ ಪೂರ್ವ ದಲ್ಲಿಯೇ ವೇದಾರ್ಥವಿಚಾರದಲ್ಲಿ ಭಿನ್ನಾಭಿಪ್ರಾಯಗಳೂ, ಸಂಶಯಗಳೂ ಉದ್ಭವಿಸಿದುವು ಆ ಹಿಂದಿನ ಕಾಲದಲ್ಲಿ ವೇದಗಳಲ್ಲಿ, ಬಳಸಲಾಗಿರುವ ಶಬ್ದಗಳೂ ಭಾಷೆಯೂ ಜನರಿಗೆ ತಕ್ಕಮಟ್ಟಿಗೆ ತಿಳಿದುಕೊಳ್ಳಲು ಸಾಧ್ಯವಾಗಿದ್ದರೂ ಈಚೀಚೆಗೆ ಸಂಸ್ಕೃತ ಭಾಷೆಯು ದುರವಗಾಹವಾಗುತ್ತ ಬರುತ್ತಿರುವುದರಿಂದ ಯಾಸ್ಕರೆಂಬಮಹರ್ಷಿಗಳು ವೇದಗಳ ಸರಿಯಾದ ಅರ್ಥವನ್ನು ತಿಳಿಯಲು ಸಾಧಕವಾದ ನಿರುಕ್ತವೆಂಬ ಗ್ರಂಥವನ್ನು ರಚಿಸಿದರು. ಈ ಯಾಸ್ಕರಿಗಿಂತ ಹಿಂದೆ ಎಂದರೆ ಎಷ್ಟೋ ಶತಮಾನಗಳಲ್ಲಿ ಅನೇಕ ಮಹರ್ಷಿಗಳೂ ವೇದಪಾರಂಗತರೂ ನಿರುಕ್ತಗ್ರಂಥಕ್ಕೆ ಹೋಲುವ ಅನೇಕಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಆ ಗ್ರಂಥಗಳು ಅತಿವಿಸ್ತಾರವಾಗಿರಲ್ಲಿಲ್ಲ ಮತ್ತು ಈಗ ಸಂಪೂರ್ಣವಾಗಿ ಲುಪ್ತವಾಗಿವೆ ಎಂದರೆ ದೊರೆಯುವಂತಿಲ್ಲ. ಯಾಸ್ಕರೇ ತಮ್ಮ ಗ್ರಂಥ ಗಳಲ್ಲಿ ಈ ಗ್ರಂಥಕರ್ತರಲ್ಲಿ ಮುಖ್ಯರಾದವರ ಹೆಸರುಗಳನ್ನೂ ಅವರ ಅಭಿಪ್ರಾಯಗಳನ್ನು ಅಲ್ಲಲ್ಲಿ ಸೂಚಿಸಿದ್ದಾರೆ. ಈ ನಿರುಕ್ತ ಗ್ರಂಥದ ಸಹಾಯವಿಲ್ಲದೆ ವೇದಾರ್ಥವು ಸಾಧ್ಯವಿಲ್ಲವಾದ್ದರಿಂದ ವೇದಗಳಿಗೆ ಭಾಷ್ಯವನ್ನು ಬರೆದಿರುವ ವೆಂಕಟಮಾಧವರೂ, ಸ್ಕಂದಸ್ವಾಮಿಗಳೂ, ಸಾಯಣಾಚಾರ್ಯರೂ ಮತ್ತು ಇತರರೂ ತಮ್ಮ ವೇದಾರ್ಥಸಂಬಂಧವಾದ ಗ್ರಂಥಗಳಲ್ಲಿ ಈ (ಯಾಸ್ಕರ) ನಿರುಕ್ತವನ್ನು ಧಾರಾಳವಾಗಿ ಪ್ರಮಾಣಗ್ರಂಥವನ್ನಾಗಿ ಉಪಯೋಗಿಸಿದ್ದಾರೆ. ಮತ್ತು ಈ ನಿರುಕ್ತವು ವೇದಗಳಷ್ಟೇ ಪ್ರಮಾಣ ವೆಂದು ಸರ್ವರಿಂದಲೂ ಎಂದರೆ ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರುಗಳಿಂದ ಅಂಗೀಕರಿಸಲ್ಪಟ್ಟಿದೆ. ಆದ್ದರಿಂದ ಈ ಗ್ರಂಥವು ಸಂಸ್ಕೃತ, ಇಂಗ್ಲೀಷ್, ಜರ್ಮನ್, ಮೊದಲಾದ ಪ್ರಪಂಚದ ಮುಖ್ಯವಾದ ಭಾಷೆಗಳಿಗೆ ಪರಿವರ್ತಿತವಾಗಿ ಸಕಲ ವಿದ್ವಜ್ಜನರ ಮನ್ನಣೆಗೂ ಪಾತ್ರವಾಗಿದೆ. ಆದರೆ ದೇಶೀಯ ಭಾಷೆಗಳಿಗೆ ಭಾಷಾಂತರವಾಗಿರುವುದು ಕಂಡುಬರುವುದಿಲ್ಲ.

ಈ ನಿರುಕ್ತಗ್ರಂಥಕ್ಕೆ ಅನೇಕರು ಅರ್ಥವಿವರಣೆಮಾಡುವುದಕ್ಕಾಗಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ನಿರುಕ್ತ ಗ್ರಂಥದ ಭಾಷೆಯು ಪ್ರಾಚೀನವೂ ಕಠಿಣವೂ ಆದುದರಿಂದ ಇದಕ್ಕೆ ವ್ಯಾಖ್ಯಾನವು ಆವಶ್ಯಕವು. ಈ ವ್ಯಾಖ್ಯಾನವನ್ನು ಬರೆದಿರು ವವರಲ್ಲಿ, ದುರ್ಗಾಚಾರ್ಯರು, ದೇವರಾಜಯಜ್ವಾ, ಮಾಹೇಶ್ವರ, ಮೊದಲಾದವರು ಮುಖ್ಯರು. ಈ ಗ್ರಂಥವು ಸ್ವಲ್ಪಮಟ್ಟಿಗೆ ವ್ಯಾಕರಣವನ್ನು ಹೋಲುವುದಾದರೂ, ಇದು ವ್ಯಾಕರಣ ಗ್ರಂಥವೇನಲ್ಲ. ವೇದಾರ್ಥಕ್ಕೆ ಬೇಕಾದ ಸಮಸ್ತವಿಷಯಗಳನ್ನೂ ಒಳಕೊಂಡಿರುವುದರಿಂದ ಇದಕ್ಕೆ ವೇದದಷ್ಟೇ ಪ್ರಾಮುಖ್ಯತೆಯೂ ಪೂಜ್ಯತೆಯೂ ಇರುವುದಲ್ಲದೆ ಪ್ರಮಾಣಗ್ರಂಥವೂ ಆಗಿರುವುದು.

ನಿರುಕ್ತದ ಈ ಭಾಗದಲ್ಲಿ ಮೂರು ಕಾಂಡಗಳೆಂಬ ಭಾಗಗಳಿವೆ. ಮೊದಲನೆಯದು ನೈಘಂಟುಕಕಾಂಡ, ಎರಡನೆಯದು ನೈಗಮಕಾಂಡ, ಮೂರನೆಯದು ದೈವತಕಾಂಡ. ಗೌಃ ಎಂಬ ಶಬ್ದದ ವಿವರಣೆಯಿಂದ ಆರಂಭವಾಗಿ ಅಪಾರ ಶಬ್ದದವರೆವಿಗೂ ನೈಘಂಟುಕಕಾಂಡವು. ಈ ಕಾಂಡದ ಪ್ರಾರಂಭದಲ್ಲಿರುವ ಮೊದಲನೇ ಅಧ್ಯಾಯ ಪೀಠಿಕಾರೂಪವಾಗಿದೆ. ಈ ಕಾಂಡದಲ್ಲಿ ಸಾಮಾನ್ಯ ಮತ್ತು ವೇದಗಳಲ್ಲಿರುವ ಶಬ್ದಗಳ ವಿವರಣೆಯಿರುವುದು. ಜಹಾ ಎಂದು ಪ್ರಾರಂಭವಾಗಿ ಉಲ್ಬಂ ಋಬೀಷಂ ಎನ್ನುವವರೆವಿಗೂ ಇರುವುದು ನೈಗಮಕಾಂಡವು. ನಿಗಮವೆಂದರೆ ವೇದವು. ಈ ಭಾಗದಲ್ಲಿರುವ ಶಬ್ದಗಳು ಈಗಿನ ಕೋಶಗಳಲ್ಲಿ (Dictionary) ದೊರೆಯುವುದಿಲ್ಲ. ; ಅಗ್ನಿ ಎಂದು ಆರಂಭವಾಗಿ ದೇವಪತ್ನ್ಯಃ ಎಂದು ಮುಗಿಯುವ ಮೂರನಯದೇ ದೈವತಕಾಂಡವು. ಈ ದೈವತಕಾಂಡದಲ್ಲಿ ಅಗ್ನಿ ಶಬ್ದದಿಂದ ಊರ್ಜಾಹುತಿ ಎನ್ನುವವರೆಗೆ ಇರುವಶಬ್ದಗಳು ಭೂಮಿಯ ಮೇಲೆ ಇರುವ ದೇವತೆಗಳ ಸಮೂಹವನ್ನು ಸೂಚಿಸುವವು ; ವಾಯುವಿನಿಂದ ಭಗದ ವರೆಗಿನ ಶಬ್ದಗಳು ಅಂತರಿಕ್ಷದಲ್ಲಿರುವ ದೇವತೆಗಳ ಗಳ ಹೆಸರುಗಳು. ಸೂರ್ಯನಿಂದ ಮೊದಲುಮಾಡಿ ದೇವಪತ್ನಿವರೆಗೆ ಇರುವ ಶಬ್ದಗಳು ಸ್ವರ್ಗದಲ್ಲಿರುವ ದೇವತೆಗಳ ಹೆಸರುಗಳು ಈ ಪ್ರಕಾರವಾಗಿ ಗೌಃ ಎಂಬ ಶಬ್ದದಿಂದ ಮೊದಲುಮಾಡಿ ದೇವಪತ್ನ್ಯಃ ಎನ್ನುವವರೆಗಿನ ಶಬ್ದಗಳ ಅರ್ಥವಿವರಣೆಯು ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು.

ಏಕಾರ್ಥವಾಚಿಗಳಾದ ಎಂದರೆ ಒಂದೇ ಅರ್ಥವನ್ನು ಸೂಚಿಸುವ ಶಬ್ದಗಳ ಸಮೂಹವನ್ನು ಒಂದು ಕ್ರಮದಲ್ಲಿ ಹೇಳಿರುವ ಗ್ರಂಥವಿಭಾಗಕ್ಕೆ ನಿಘಂಟವೆಂದು ಹೆಸರು. ಅಂತಹ ನಿಘಂಟುಗಳಲ್ಲಿ ಅಮರಸಿಂಹ, ವೈಜಯಂತಿ, ಹಲಾಯುದ್ಧ, ಮೊದಲಾದ ಹತ್ತು ನಿಘಂಟಗಳು ಪ್ರಸಿದ್ಧವಾಗಿ ಬಳಕೆಯಲ್ಲಿವೆ ಆದರೆ ಈ ನಿಘಂಟುಗಳೆಲ್ಲಾ ಆಧುನಿಕ ಸಂಸ್ಕೃತಭಾಷೆಯಲ್ಲಿರುವ ಶಬ್ದ ಗಳನ್ನೇ ವಿವರಿಸುತ್ತವೆ. ವೇದಶಬ್ದಗಳನ್ನು ವಿವರಿಸುವ ಹವ್ಯಾಸಕ್ಕೆ ಹೋಗಿಲ್ಲ. ಆಗೆಯೇ ಈ ನಿರುಕ್ತ ಗ್ರಂಥದ ಮೊದಲನೆಯ ಕಾಂಡದಲ್ಲಿ ಏಕಾರ್ಥವಾಚಿಗಳಾದ ಪರ್ಯಾಹ ಶಬ್ದಸಮೂಹಗಳನ್ನು ಹೇಳಿರುವುದರಿಂದ ಅದಕ್ಕೆ ನೈಘಂಟುಕ ಕಾಂಡ ಅಥವಾ ನಿಘಂಟು ಎಂದುಹೆಸರು ನಿಘಂಟುಕಾಂಡದಲ್ಲಿ ಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಪೃಥಿವೀ ಮೊದಲಾದ ಲೋಕಗಳು, ದಿಕ್ಕುಗಳು, ಕಾಲ ಮೊದಲಾದವುಗಳ ಹೆಸರುಗಳಿವೆ. ಎರಡನೆಯ ಅಧ್ಯಾಯದಲ್ಲಿ ಮನುಷ್ಯಶರೀರದ ಅವಯವಾದಿ ಗಳು ಮುಂತಾದ ವಸ್ತುಗಳ ಹೆಸರುಗಳಿವೆ. ಮೂರನೆಯ ಅಧ್ಯಾಯದಲ್ಲಿ ಮೇಲೆ ಹೇಳಿದ ವಸ್ತುಗಳ ಗುಣಾವಗುಣಗಳೂ ಬಹುತ್ವ ಹ್ರಸ್ವತ್ವಮೊದಲಾದ ಧರ್ಮಗಳೂ ವಿವರಿಸಲ್ಪಟ್ಟಿವೆ.

ನಿಗಮವೆಂದರೆ ವೇದವು. ಏಕೆಂದರೆ ಯಾಸ್ಕರು ಅಲ್ಲಲ್ಲಿ ವೇದಗಳಿಂದ ಎತ್ತಿ ಉದಹರಿಸುವ ವಾಕ್ಯಗಳನ್ನು ನಿಗಮ ವಾಕ್ಯಗಳೆಂದು ಕರೆದಿದ್ದಾರೆ, ನಾಲ್ಕನೇ ಅಧ್ಯಾಯವಾದ ಈ ಎರಡನೆಯ ಕಾಂಡದಲ್ಲಿ ಸಾಧಾರಣವಾಗಿ ವೇದದಲ್ಲಿರುವ ಶಬ್ದ ಗಳನ್ನೇ ವಿವರಿಸುವುದರಿಂದ ಈ ಕಾಂಡಕ್ಕೆ ನೈಗಮಕಾಂಡವೆಂದೂ ಹೆಸರು ಬಂದಿರುವುದು. ಈಕಾಂಡದಲ್ಲಿ ವಿವರಿಸಿರುವ ಶಬ್ದ ಗಳಿಗೆಲ್ಲಾ ನಾವು ಸಾಧ್ಯವಾದಷ್ಟು ವ್ಯಾಕರಣನಿಷ್ಪತ್ತಿಯನ್ನು ಬರೆದಿದ್ದೇವೆ. ಅಲ್ಲಲ್ಲಿ ಯಾಸ್ಕಮಹರ್ಷಿಯಿಂದ ಉದಾಹರಣೆಗಾಗಿ ಅನೇಕ ಉಪಾಖ್ಯಾನಗಳೂ, ಪೂರ್ವೇತಿಹಾಸಿಕಗಳೂ ವಿವರಿಸಲ್ಪಟ್ಟಿವೆ. ಅವುಗಳಲ್ಲಿ ವಿಶ್ವಾಮಿತ್ರಋಷಿಗೂ ನದಿಗೂ ಆದ ಸಂವಾದವು, ದೇವಾಪಿ ಮತ್ತು ಶಂತನು ಎಂಬ ರಾಜರ ವೃತ್ತಾಂತ, ಉರ್ವಶೀ ಮತ್ತು ಪುರೂರುವ ಮೊದಲಾದ ಅನೇಕ ಪೂರ್ವೇತಿಹಾಸಗಳಿವೆ.

ಐದನೆಯ ಅಧ್ಯಾಯರೂಪವಾದ ಮೂರನೆಯ ಕಾಂಡದಲ್ಲಿ ದೇವತೆಗಳ ವಿಷಯವನ್ನೇ ಹೆಚ್ಚಾಗಿ ಹೇಳಿರುವುದರಿಂದ ಈ ಕಾಂಡಕ್ಕೆ ದೈವತಕಾಂಡವೆಂದು ಹೆಸರು. ಈ ಗ್ರಂಥವನ್ನು **ಸಮಾಮ್ನಾಯಃ ಸಮಾಮ್ನಾತಃ** ಎಂದು ಆರಂಭಿಸಿ

**ತೆಸ್ಯಾಸ್ತ್ರಸ್ಯಾಧ್ಯವ್ಯಮನು ಭವತ್ಯನು ಭವತಿ** ಎನ್ನುವವರೆಗೆ ಒಟ್ಟು ಹನ್ನೆರಡು ಅಧ್ಯಾಯಗಳನ್ನು ರಚಿಸಿರುವರು. ಈ ಅಧ್ಯಾಯಗಳಲ್ಲಿ ವಿವರಿಸಿರುವ ಪದಗಳಿಗೆ ಅನ್ವಯಾರ್ಥಗಳನ್ನು ನಿಃಶೇಷವಾಗಿ (ಪೂರ್ತಿಯಾಗಿ) ಹೇಳಿರುವುದರಿಂದ ಈ ಗ್ರಂಥಕ್ಕೆ ನಿರುಕ್ತವೆಂದು ಹೆಸರು, ವ್ಯುತ್ಪತ್ತಿಕ್ರಮದಿಂದ ಸಲ್ಲುವುದು. ಈ ಗ್ರಂಥದಲ್ಲಿ ನಾಮ, ಆಖ್ಯಾತ, ಉಪಸರ್ಗ, ನಿಪಾತ (ಅವ್ಯಯ) ಎಂಬ ನಾಲ್ಕುವಿಧವಾದ ಪದಸಮೂಹಗಳಿರುವವೆಂದು ಹೇಳಿ ಅವುಗಳಲ್ಲಿ ನಿಪಾತವೆಂಬ ಪದಗಳು ನಾನಾರ್ಥಗಳಲ್ಲಿ ಉಪಯೋಗಿಸಲ್ಪಡುವುದರಿಂದ, **ಉಚ್ಚಾವಚೇಷ್ವರ್ಥೇಷು ನಿಪತಂತೀತಿ ನಿಪಾತಾಃ**—ಪರಸ್ಪರ ವಿರೋಧಾರ್ಥಗಳಲ್ಲಿ ಇವುಗಳು ಉಪಯೋಗಿಸಲ್ಪಡುವುದರಿಂದ ಈ ಶಬ್ದಸಮೂಹಕ್ಕೆ ನಿಪಾತವೆಂದು ಹೆಸರು ಬಂದಿರುವುದು ಎಂದು ಹೇಳಿದ್ದಾರೆ.

ಈ ನಿರ್ವಚನಗಳಿಗೆ ಮೂಲವಿಲ್ಲ (ಆಧಾರ ಅಥವಾ ಪ್ರಮಾಣವಿಲ್ಲ) ಎಂದು ಹೇಳಬೇಕಾಗಿಲ್ಲ. ವೇದಗಳಲ್ಲಿ ಅಲ್ಲಲ್ಲಿರುವ ಈ ವ್ಯುತ್ಪತ್ತಿಯನ್ನು ಹಿಡಿದು ಕೆಲವು ಪದಗಳಿಗೆ ನಿರ್ವಚನವನ್ನು ಹೇಳಿರುವುದುಂಟು. ಉದಾಹರಣೆಗಾಗಿ—**ತೆದಾಹುತೀ ನಾಮಾಹುತಿತ್ವಂ**(ಐ.ಬ್ರಾ. ೧–೧–೨) ಈ ಕಾರಣದಿಂದ ಆಹುತಿಗಳಿಗೆ ಆಹುತಿಯೆಂದು ಹೆಸರುಬಂದಿದೆ. **ಯುದಪ್ರಥಯತ್। ತತ್ಪೃಥಿವ್ಯೈ ಪೃಥಿವಿತ್ವಂ।** (ತೈ. ಬ್ರಾ ೧–೧–೩–೭) ಅದನ್ನು ಹರಡಿದನು ಎಂದರೆ ತಗ್ಗುದಿಣ್ಣೆಗಳಿಲ್ಲದೆ ಸಮ ಪ್ರದೇಶವಾಗಿ ಹರಡಿಕೊಂಡಿರುವುದರಿಂದ ಭೂಮಿಗೆ (ಪೃಥಿವಿಗೆ) ಪೃಥಿವೀ ಎಂದು ಹೆಸರಾಯಿತು. ಇವೇ ಮೊದಲಾದ ಅನೇಕ ಮಂತ್ರಗಳನ್ನು ಉದಾಹರಿಸಿರುವರು. ನಿರುಕ್ತಗ್ರಂಥಕಾರರೂ ಕೂಡ ಅಲ್ಲಲ್ಲಿ ತಾವು ಹೇಳಿರುವ ನಿರ್ವಚನಗಳಿಗೆ ಆಧಾರವಾದ ವೇದವಾಕ್ಯಗಳನ್ನು ಉದಾಹರಿಸಿದ್ದಾರೆ. ಕೆಲವು ಪದಗಳಿಗೆ ವ್ಯಾಕರಣ ಬಲದಿಂದ ನಿರ್ವಚನ ಮಾಡಲು ಸಾಧ್ಯವಿದ್ದರೂ ಎಲ್ಲಾ ಪದಗಳಿಗೂ ವ್ಯಾಕರಣಬಲದಿಂದಲೇ ನಿರ್ವಚನವು ಸಿದ್ಧಿಸುವುದಿಲ್ಲ. ಆದುದರಿಂದ ಗ್ರಂಥಕಾರರು ಹೀಗೆ ಹೇಳಿದ್ದಾರೆ—**ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥಸಾಧಕಂ ಚ** (ನಿರುಕ್ತ ೧-೧೫) ಆದುದರಿಂದ ಈ ಶಾಸ್ತ್ರವು ವ್ಯಾಕರಣ ಶಾಸ್ತ್ರಕ್ಕೆ ಸಾರಭೂತವಾಗಿರುವುದು. ಈ ಕಾರಣಗಳಿಂದ ವೇದಾರ್ಥವನ್ನು ತಿಳಿಯುವುದಕ್ಕಾಗಿ ನಿರುಕ್ತವು ಬೇಕೇಬೇಕು.

ವೇದಸಾಹಿತ್ಯದಲ್ಲಿ ಅತಿ ಮುಖ್ಯವೂ ಪ್ರಾಚೀನವೂ ಆದ ಋಗ್ವೇದಸಂಹಿತೆಯು ಮತ್ತು ಇದರ ಮುಂದಿನ ಗ್ರಂಥಗಳು ಕನ್ನಡ ಭಾಷೆಯಲ್ಲಿ ಇದೇ ಪ್ರಥಮವಾಗಿ ಅಚ್ಚಾಗಿ ಕನ್ನಡ ಸಾಹಿತ್ಯಾಭಿವೃದ್ಧಿಗೆ ಕಾರಣವಾಗಿವೆ. ಇಂತಹ ಗ್ರಂಥಗಳು ಇದುವರೆಗೆ ಯಾವ ದೇಶಭಾಷೆಯಲ್ಲಿಯೂ ಪ್ರಕಟವಾಗಿರುವುದಿಲ್ಲ. ಇದುವರೆಗೆ 30ಕ್ಕೂ ಹೆಚ್ಚಿನ ಗ್ರಂಥಗಳು ಪ್ರಕಟವಾಗಿವೆ. ಈ ಪುಸ್ತಕಗಳು ದೊಡ್ಡ ಸೈಜಿನ (ಡೆಮ್ಮಿ ಕಾಲುಭಾಗ) ಸುಮಾರು 30,000 ಪೇಜುಗಳಿಗಿಂತಲೂ ಹೆಚ್ಚಾಗಿ ಒಳಗೊಂಡ ಕನ್ನಡ ಭಾಷೆಯಲ್ಲಿಯೇ (ಇತರ ಭಾಷೆಗಳಲ್ಲಿಯೂ ಸಹ) ಅತಿ ದೊಡ್ಡಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ನಮ್ಮ ಘನ ಸರ್ಕಾರದವರೂ, ಪ್ರಗತಿಪರವಾದ ಈಗಿನ ಮಂತ್ರಿ ಮಂಡಲವೂ ಈ ವಿಧವಾದ ಕನ್ನಡ ಸಾಹಿತ್ಯಾಭಿವೃದ್ಧಿಗೆ ನೆರವನ್ನು ನೀಡಿ ಉದಾರವಾಗಿ ಆಶ್ರಯನ್ನು ಪ್ರೋತ್ಸಾಹವನ್ನೂ ನೀಡುತ್ತಿರುವುದು ಅಭಿನಂದನೀಯವಾಗಿದೆ.

ಅತಿ ಪ್ರಾಚೀನವೂ, ಅತಿ ಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನೂ, ವೇದಸಾಹಿತ್ಯಕ್ಕೆ ಸಂಬಂಧಪಟ್ಟ ಇತರ ಗ್ರಂಥಗಳನ್ನೂ ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದ ಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.**

ಮಹಾಪ್ರಭುವರ್ಯರೂ, ಘನ ಸರ್ಕಾರದವರೂ ಬಹುದ್ರವ್ಯ ಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯ ದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕರಾಜ್ಯದ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರ ಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ ಪ್ರಗತಿಪರರಾದ ಸಚಿವರಾದಿಯಾಗಿ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರ ಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶ್ರೀಶುಭಕೃನ್ನಾಮ ಸಂ। ಮಾರ್ಗಶಿರ ಶುಕ್ಲದಶಮಿ
ಗುರುವಾರ ತಾ॥ 6–12–1962

ಅನುವಾದಕ
ಹೆಚ್. ಪಿ. ವೆಂಕಟರಾವ್,
ಆಸ್ಥಾನ ಮಹಾವಿದ್ವಾನ್



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**

**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು**

# ನಿರುಕ್ತ ಉತ್ತರಷಟ್ಕದ ವಿಷಯ ಸೂಚಿಕೆ

## ಏಳನೆಯ ಅಧ್ಯಾಯ

### ಒಂದನೇಪಾದ ಖಂಡ ೧–೪



### ಎರಡನೇಪಾದ ಖಂಡ ೫–೭



### ಮೂರನೇಪಾದ ಖಂಡ ೮–೧೩



### ನಾಲ್ಕನೇಪಾದ ಖಂಡ ೧೪–೧೮



### ಐದನೇಪಾದ ಖಂಡ ೧೯–೨೦



### ಆರನೇಪಾದ ಖಂಡ ೨೧–೨೩



### ಏಳನೇಪಾದ ಖಂಡ ೨೪–೩೧



## ಎಂಟನೆ ಅಧ್ಯಾಯ

### ಪ್ರಥಮಪಾದ ಖಂಡ ೧–೩

ದ್ವಿತೀಯಪಾದ ಖಂಡ ೪–೧೫



ಒಂಬತ್ತನೆಯ ಅಧ್ಯಾಯ

ಪ್ರಥಮಪಾದ ಖಂಡ ೧–೧೦



ದ್ವಿತಿಯಪಾದ ಖಂಡ ೧೧–೨೧

## ಹನ್ನೆರಡನೆಯ ಅಧ್ಯಾಯ

### ಪ್ರಥಮಪಾದ ಖಂಡ ೧-೧೧



### ದ್ವಿತೀಯಪಾದ ಖಂಡ ೧೨-೧೯



### ತೃತೀಯಪಾದ ಖಂಡ ೧೦—೩೪



### ನಾಲ್ಕನೆಯಪಾದ ಖಂಡ ೩೫—೪೬

## ಹದಿಮೂರನೇ ಅಧ್ಯಾಯ ಪರಿಶಿಷ್ಟ



## ಹದಿನಾಲ್ಕನೆಯ ಅಧ್ಯಾಯ



ಓಂ

॥ ಶ್ರೀಃ ॥



॥ ಶ್ರೀಃ ॥

ಶ್ರೀಗಣಾಧಿಪತಯೇ ನಮಃ

ಶ್ರೀ ಯಾಸ್ಕಮಹರ್ಷಿ ವಿರಚಿತಂ

# ॥ ನಿರುಕ್ತಂ ॥

(ಉತ್ತರಷಟ್ಕಂ)

---

ಕರ್ನಾಟಕಭಾಷಾನುವಾದ ವಿವರಣೆ ಸಹಿತವಾದುದೂ

ವೇದದ ಷಡಂಗಗಳಲ್ಲಿ ಮುಖ್ಯವಾದುದೂ ಆದ

# ನಿರುಕ್ತಗ್ರಂಥವು

ಎರಡನೇ ಭಾಗವು

---

## ॥ ಅಥ ಸಪ್ತಮೋಽಧ್ಯಾಯಃ ॥

## ಏಳನೆಯ ಅಧ್ಯಾಯವು

---

ವೇದಾರ್ಥವನ್ನು ತಿಳಿಯಬೇಕೆಂದಪೇಕ್ಷಿಸುವವರಿಗೆ ನಿರುಕ್ತವೆಂಬ ಈ ಗ್ರಂಥವು ಅತ್ಯವಶ್ಯಕವು. ಈ ಗ್ರಂಥದ ಸಹಾಯವಿಲ್ಲದೆ ವೇದಾರ್ಥವನ್ನು ಸರಿಯಾಗಿ ತಿಳಿದುಕೊಳ್ಳುವುದು ಸಾಧ್ಯವಿಲ್ಲ. ವೇದಾರ್ಥವನ್ನು ಚೆನ್ನಾಗಿ ತಿಳಿದುಕೊಳ್ಳಲು ಅನುಕೂಲವಾಗುವಂತೆ ಪೂರ್ವದ ಋಷಿಗಳಲ್ಲಿ ಕೆಲವರು ಕೆಲವು ಸಹಾಯಕ ಗ್ರಂಥಗಳನ್ನು ರಚಿಸಿರುವರು. ಇವುಗಳಿಗೆ ವೇದದ ಷಡಂಗಗಳೆಂದು ಹೆಸರು. ಈ ಸಹಾಯಕ ಗ್ರಂಥಗಳು ಮುಖ್ಯಭಾಗಗಳಾಗಿಲ್ಲದಿದ್ದರೂ ವೇದಾರ್ಥಜ್ಞಾನಕ್ಕೆ ಇವು ಅತ್ಯಂತ ಅವಶ್ಯಕವಾಗಿ ಉಪಯೋಗಿಸಲ್ಪಡಲೇಬೇಕಾದ ಗ್ರಂಥಗಳಾದ್ದರಿಂದ ಇವುಗಳನ್ನು ವೇದಗಳ ಅಂಗ ಅಥವಾ ಭಾಗಗಳೆಂದೇ ಪರಿಗಣಿಸುವುದು ರೂಢಿಯಾಗಿವೆ. ಇವು ಪ್ರತ್ಯೇಕವಾದ ವಿಷಯಗಳನ್ನು ಪ್ರತಿಪಾದಿಸುವ ಆರು ಪ್ರತ್ಯೇಕ ಗ್ರಂಥಗಳಾಗಿವೆ. ಅವು ಯಾವವೆಂದರೆ— (1) ಶಿಕ್ಷಾ, (2) ಛಂದಃಶಾಸ್ತ್ರ, (3) ಜ್ಯೋತಿಷ, (4) ವ್ಯಾಕರಣ, (5) ಕಲ್ಪ, (6) ನಿರುಕ್ತ ಎಂಬಿವೇ ವೇದದ ಷಡಂಗಗಳು. ಇವುಗಳೆಲ್ಲಾ ಸಾವಿರಾರು ವರ್ಷಗಳ ಹಿಂದೆಯೇ ಅನೇಕ ಮಹರ್ಷಿಗಳಿಂದ ರಚಿತವಾಗಿ ಈಗಲೂ ಬಳಕೆಯಲ್ಲಿವೆ. ಇವುಗಳ ವಿಷಯವನ್ನು ನಾವು ಈ ಗ್ರಂಥದ ಮೊದಲನೇ ಭಾಗದಲ್ಲಿ ಸೂಕ್ಷ್ಮವಾಗಿ ವಿಮರ್ಶೆಮಾಡಿದೇವೆ. ನಿರುಕ್ತವೆಂಬ ಮಹಾ ಗ್ರಂಥದ ಪೂರ್ವಭಾಗವನ್ನು ಎಂದರೆ ಮೊದಲಿನ ಆರು ಅಧ್ಯಾಯಗಳನ್ನು ನಾವು ಮೊದಲನೇ ಭಾಗದಲ್ಲಿ ಅರ್ಥ ಮತ್ತು ಉದಾಹರಣೆಸಹಿತವಾಗಿ ವಿವರಿಸಿದೇವೆ. ಈಗ ಎರಡನೇ ಭಾಗದಲ್ಲಿ ನಿರುಕ್ತದ ಉತ್ತರಾರ್ಧವನ್ನು ವಿವರಿಸುತ್ತೇವೆ.

### ಅಥ ಸಪ್ತಮಾಧ್ಯಾಯಸ್ಯ ಪ್ರಥಮಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

ಓಂ ॥ ಅಥಾತೋ ದೈವತಂ ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಸೈಷಾ ದೇವತೋಪಪರೀಕ್ಷಾ । ಯತ್ಕಾಮ

ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾ ಪ್ರತ್ಯಕ್ಷಕೃತಾ ಅಧ್ಯಾತ್ಮಿಕಾಶ್ಚ ತತ್ರ ಪರೋಕ್ಷಕೃತಾ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ ॥ ೧ ॥

ಓಂ ॥ ಅಥಾತೋ ದೈವತಂ ॥

ಇದುವರೆಗೂ ಎಂದರೆ ಹಿಂದಿನ ಅಧ್ಯಾಯಗಳಲ್ಲಿ ನಾನಾ ಋಷಿಗಳು ನಾನಾರ್ಥಗಳಲ್ಲಿ ಉಪಯೋಗಿಸಿರುವ ಪದಗಳ ವಿಷಯವನ್ನು ವಿವರಿಸಿದ್ದಾಯಿತು. ಎಂದರೆ ಅನೇಕ ಪದಗಳಿಗೆ (ಪದಸಮೂಹಕ್ಕೆ) ಇರುವ ಒಂದೇ ಅರ್ಥವನ್ನೂ, ಒಂದೇ ಪದಕ್ಕೆ ಇರುವ ಅನೇಕಾರ್ಥಗಳನ್ನೂ ಉದಾಹರಣೆಸಹಿತವಾಗಿ ವಿವರಿಸಲಾಯಿತು. ಈಗ ದೇವತೆಗಳ ವಿಷಯವನ್ನೂ ವಿವರಿಸುತ್ತೇವೆ. ದೇವತೆಗಳ ವಿಷಯವನ್ನು ವಿವರಿಸುವ ಈ ಭಾಗಕ್ಕೆ ದೈವತಕಾಂಡವೆಂದು ಹೆಸರು. ಈ ಭಾಗವಲ್ಲಿ ಏಳರಿಂದ ಹನ್ನೆರಡುವರೆಗಿನ ಆರು ಅಧ್ಯಾಯಗಳಿರುವವು.

ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ತದ್ದೇವತಮಿತ್ಯಾಚಕ್ಷತೇ ॥

ಈ ಗ್ರಂಥದಲ್ಲಿ ಅಗ್ನಿ ಎಂಬ ದೇವತೆಯಿಂದ ಮೊದಲುಮಾಡಿ ದೇವಪತ್ನಿ ಎನ್ನುವವರೆಗೆ ಅನೇಕ ದೇವತೆಗಳ ವಿಷಯವನ್ನು ವಿವರಿಸಲಾಗಿದೆ. ಯಾವ ಯಾವ ಸ್ತುತಿಯಲ್ಲಿ ಯಾವ ದೇವತೆಯನ್ನು ಪ್ರಧಾನವಾಗಿ (ಮುಖ್ಯವಾಗಿ) ವಿವರಿಸಲಾಗಿದೆಯೋ ಆ ದೇವತೆಯೇ ಆ ಸ್ತುತಿಗೆ ಪಾತ್ರರಾದ ಪ್ರಧಾನ ದೇವತೆಯು. ಎಂದರೆ ಆ ಸ್ತುತಿಯಲ್ಲಿ ಅಥವಾ ಮಂತ್ರದಲ್ಲಿ ಆ ದೇವತೆಯ ವಿಷಯವನ್ನು ಅಥವಾ ಗಣವನ್ನು ಮುಖ್ಯವಾಗಿ ವರ್ಣಿಸಲಾಗಿದೆ. ಇಂತಹ ಅನೇಕ ಮಂತ್ರಗಳ ವಿಷಯವರ್ಣನೆ ಇರುವುದರಿಂದ ಈ ಭಾಗಕ್ಕೆ ದೈವತಕಾಂಡವೆಂಬ ಹೆಸರು ಬಂದಿದೆ.

ಸೈಷಾ ದೇವತೋಪಪರೀಕ್ಷಾ ॥

ಈ ಭಾಗದಲ್ಲಿ ದೇವತೆಗಳ ವಿಷಯವನ್ನು ವಿಸ್ತಾರವಾಗಿ ಅಥವಾ ವಿಶದವಾಗಿ ವಿಮರ್ಶಿಸಲಾಗಿರುವುದು.

ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ ॥

ಮಂತ್ರವೆಂದರೆ ಏನು ಎಂದರೆ ಯಾವನಾದರೂ ಒಬ್ಬ ಋಷಿಯು ತನ್ನ ಮನಸ್ಸಿದಲ್ಲಿರುವ ಅಭೀಷ್ಟವು (ಅಪೇಕ್ಷೆಯು) ಸಿದ್ಧಿಸುವುದಕ್ಕಾಗಿ ತನ್ನ ಮನಸ್ಸಿನಲ್ಲಿರುವ ಭಾವನೆಗಳನ್ನು ವಿಶದವಾಗಿ ವಾಕ್ಯಗಳಲ್ಲಿ ವಿವರಿಸಿ, ಅದನ್ನು ಮುಖ್ಯವಾದ ಯಾವುದಾದರೂ ದೇವತೆಗೆ ಸಂಬೋಧನೆ ಮಾಡಿ ವ್ಯಕ್ತಪಡಿಸುವನ್ನೋ ಆ ವಾಕ್ಯಕ್ಕೆ ಅಥವಾ ವಾಕ್ಯಸಮೂಹಕ್ಕೆ ಮಂತ್ರವೆಂದು ಹೆಸರು. ಎಂದರೆ ಮಂತ್ರವೆಂದರೆ ಒಂದು ವಾಕ್ಯವು. ಈ ವಾಕ್ಯ ಅಕ್ಷರ ಸಂಖ್ಯೆಯಿಂದ ನಿಯಮಬದ್ಧವಾಗಿ ರಚಿತವಾಗಿರಬಹುದು ಅಥವಾ ಇಲ್ಲದಿರಬಹುದು. ಇದು ಯಾವುದಾದರೂ ದೇವತೆಯನ್ನುದ್ದೇಶಿಸಿ ಓರ್ವ ಋಷಿಯಿಂದ ದೇವತೆಗೆ ಸಂಬೋಧಿತವಾಗಿರಬೇಕು. ಅದರಲ್ಲಿ ದೇವತೆಯ ಗುಣವರ್ಣನೆ ಅಥವಾ ಋಷಿಯ ಅಭೀಷ್ಟದ ವಿವರಣೆ ಇರಬೇಕು. ಈರೀತಿ ಇದ್ದರೆ ಅದು ಮಂತ್ರವೆನಿಸುವುದು. ಇಂತಹ ಮಂತ್ರವು ಯಾವ ವೇದಕ್ಕಾದರೂ ಸೇರಿದಂತಿರಬಹುದು. ಯಾವ ದೇವತೆಯನ್ನಾದರೂ ಉದ್ದೇಶಿಸಿ ರಚಿತವಾಗಿರಬಹುದು. ಇವುಗಳನ್ನು (ಇವು ಋಗ್ವೇದಕ್ಕೆ ಸೇರಿದ್ದರೆ) ಋಕ್ಕುಗಳೆಂದು ಕರೆಯುವ ರೂಢಿಇರುವುದು.

ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕ್ಯಶ್ಚ ||

ಋಗ್ವೇದದ ಋಕ್ಕುಗಳನ್ನು ಅರ್ಥಾನುಸಾರವಾಗಿ ವಿಭಜಿಸುವಾಗ ಯಾಸ್ಕರು ಪರೋಕ್ಷಕೃತ, ಪ್ರತ್ಯಕ್ಷಕೃತ, ಪರೋಕ್ಷಕೃತಃ ಪ್ರತ್ಯಕ್ಷಕೃತಶ್ಚ, ಆಧ್ಯಾತ್ಮಿಕಾಸ್ತುತಿ, ಆಶೀರ್ವಾದ ಶಪಥ ಅಭಿಶಾಪ, ಕಸ್ಯಚಿದ್ಭಾವ, ಪರಿದೇವನಾ, ನಿಂದಾ ಇತ್ಯಾದಿ ವಿಷಯಗಳನ್ನೊಳಗೊಂಡ ನಾನಾ ಪ್ರಭೇದಗಳಿರುವವೆಂದು ಹೇಳಿ ಅವುಗಳನ್ನು ಉದಾಹರಣೆ ಮೂಲಕವಾಗಿ ವಿವರಿಸಿದ್ದಾರೆ.

ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮ-ಪುರುಷೈಶ್ಚಾ ಖ್ಯಾತಸ್ಯ ||

(೧) ಪರೋಕ್ಷಕೃತ— ಈ ಋಕ್ಕಿನಲ್ಲಿ ದೇವತೆಯು ತನ್ನ ಎದುರಿಗೆ ಇಲ್ಲದಂತೆ ಎಂದರೆ ತನಗೆ ಕಾಣಿಸದಂತೆ ಪರೋಕ್ಷದಲ್ಲಿರುವನೆಂದು (ಋಷಿಯು) ಭಾವಿಸಿ ಆ ದೇವತೆಯನ್ನು ಸ್ತುತಿಸುವುದು. ಈ ಸಂದರ್ಭದಲ್ಲಿ ಪ್ರಥಮಾಂತವಾಗಿ ಸಪ್ತಮ್ಯಂತದವರೆಗೆ ಇರುವ ಯಾವ ವಿಭಕ್ತಿಯನ್ನಾದರೂ ಉಪಯೋಗಿಸಬಹುದು. ಆದರೆ ಕ್ರಿಯಾಪದವು ಮಾತ್ರ ಪ್ರಥಮ ಪುರುಷದಲ್ಲಿರಬೇಕು. ಇದರಂತೆ ಏಳು ವಿಭಕ್ತಿಗಳಿಗೂ ಏಳು ಉದಾಹರಣೆಗಳನ್ನು ಮುಂದಿನ ಖಂಡದಲ್ಲಿ ಕೊಟ್ಟಿರುವರು.

ಇತಿ ಸಪ್ತಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಏಳನೆಯ ಅಧ್ಯಾಯದಲ್ಲಿ ಪ್ರಥಮಖಂಡವು ಸಮಾಪ್ತವು.

## ಅಥ ದ್ವಿತೀಯಃ ಖಂಡಃ

## ಎರಡನೆಯ ಖಂಡವು.

ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾ ಇಂದ್ರಮಿದ್ಗಾಥಿನೋ ಬೃಹದಿಂದ್ರೇಣೈತೇ ತೃತ್ಸವೋ ವೇವಿಷಾಣಾ ಇಂದ್ರಾಯ ಸಾಮಗಾಯತ ನೇಂದ್ರಾದೃತೇ ಪವತೇ ಧಾಮ ಕಿಂಚನೇಂದ್ರಸ್ಯನು ವೀರ್ಯಾಣಿ ಪ್ರವೋಚಮಿಂದ್ರೇ ಕಾಮಾ ಅಯಂಸತೇತ್ಯಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ತ್ವಮಿಂದ್ರ ಬಲಾದಧಿ ವಿನ ಇಂದ್ರ ಮೃಧೋ ಜಹೀತ್ಯಥಾಪಿ ಪ್ರತ್ಯಕ್ಷ ಕೃತಾ ಸ್ತೋತಾರೋ ಭವಂತಿ ಪರೋಕ್ಷಕೃತಾನಿ ಸ್ತೋತವ್ಯಾನಿ ಮಾ ಚಿದನ್ಯದ್ವಿಶಂಸತ ಕಣ್ವಾ ಅಭಿ ಪ್ರ ಗಾಯತೋಪಪ್ರೇತ ಕುಶಿಕಾಶ್ಚೇತಯಧ್ವಮಿತ್ಯಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ ಯಥೈತದಿಂದ್ರೋ ವೈಕುಂಠೋ ಲಬಸೂಕ್ತಂ ವಾಗಾಂಭೃಣೀ-ಯಮಿತಿ || ೨ ||

ಮೇಲೆ ಹೇಳಿದಂತೆ ಎಲ್ಲಾ ವಿಭಕ್ತಿಗಳಲ್ಲಿಯೂ ಒಂದೊಂದು ಉದಾಹರಣೆಯನ್ನು ಕೊಡುವರು. ಅವುಗಳಲ್ಲಿ ಪ್ರಥಮಾ ವಿಭಕ್ತಿಯ ಉದಾಹರಣೆಯು—

**ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾ ಇಂದ್ರೋ ಅಪಾಮಿಂದ್ರ ಇತ್ಪರ್ವತಾನಾಂ |**
**ಇಂದ್ರೋ ವೃಧಾಮಿಂದ್ರ ಇನ್ಮೇಧಿರಾಣಾಮಿಂದ್ರಃ ಕ್ಷೇಮೇ ಯೋಗೇ ಹವ್ಯ ಇಂದ್ರಃ ||**

(ಋ. ಸಂ ೧೦–೮೯–೧೦)

ಇದರ ಅರ್ಥವು—ಇಂದ್ರನು ಸ್ವರ್ಗಲೋಕಕ್ಕೆ ಪ್ರಭುವಾಗಿದ್ದಾನೆ. ಪೃಥ್ವಿಗೂ ಇಂದ್ರನೇ ಪ್ರಭುವಾಗಿದ್ದಾನೆ ಇಂದ್ರನು ಉದಕಗಳಿಗೂ ಪ್ರಭುವಾಗಿದ್ದಾನೆ. ಇಂದ್ರನು ಮೇಘಗಳಿಗೂ ಪ್ರಭುವಾಗಿದ್ದಾನೆ; ಇಂದ್ರನು ಮೇಧಾವಿಗಳಿಗೂ ಜ್ಞಾನಿಗಳಿಗೂ ಪ್ರಭುವಾಗಿದ್ದಾನೆ. ಸಂಪಾದಿಸಿರುವ ಮತ್ತು ಸಂಪಾದಿಸದೇ ಇರುವ ಸಮಸ್ತ ಧನಗಳಿಗೂ ಇಂದ್ರನೇ ಪ್ರಭುವಾಗಿದ್ದಾನೆ.

**ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ |**
**ಇಂದ್ರಂ ವಾಣೀರನೂಷತ || ೧ ||**

(ಋ. ಸಂ ೧–೭–೧)

ಇದು ದ್ವಿತೀಯಾವಿಭಕ್ತಿಯ ಉದಾಹರಣೆಯು. ಇದರ ಅರ್ಥವು ಯಜ್ಞಮಾಡುವ ಸಮಯದಲ್ಲಿ ಋತ್ವಿಕ್ಕುಗಳು ಇಂದ್ರನನ್ನು ವಿಧವಿಧವಾಗಿ ಸ್ತೋತ್ರಮಾಡುವರು. ಎಂದರೆ ಉದ್ಗಾತೃವೊದಲಾದ ಸಾಮಗಾಯಕರು ತಮ್ಮ ಸಾಮವೇದ ದಲ್ಲಿರುವ ಬೃಹತ್ಸಾಮವೆಂಬ (ಈ ಮಂತ್ರವು ಋಗ್ವೇದದಲ್ಲಿ ೬–೪೬–೧ ನೇ ಋಕ್ಕಿನಲ್ಲಿರುವುದು) ಮಂತ್ರದಿಂದ ಗಾನಮಾಡುವರು ಹೋತೃವರ್ಗದವರು ತಮ್ಮ ಋಗ್ವೇದದಲ್ಲಿರುವ ಶಸ್ತ್ರರೂಪವಾದ ಮಂತ್ರಗಳಿಂದ ಸ್ತೋತ್ರಮಾಡುವರು, ಅಧ್ವರ್ಯು ಮೊದ ಲಾದ ಇತರ ಋತ್ವಿಕ್ಕುಗಳು ತಮ್ಮ ವೇದವಾದ ಯಜುರ್ವೇದದ ವಾಕ್ಯರೂಪವಾದ ಮಂತ್ರಗಳಿಂದ ಇಂದ್ರನನ್ನು ಸ್ತೋತ್ರ ಮಾಡುವರು ಎಂದರೆ, ಋತ್ವಿಕ್ಕುಗಳು ಇಂದ್ರನನ್ನು ಋಗ್ಯಜುಸ್ಸಾಮವೆಂಬ ಮೂರುವಿಧವಾದ ವೇದಮಂತ್ರಗಳಿಂದಲೂ ಸ್ತೋತ್ರ ಮಾಡುವರು.

ಈ ಋಕ್ಕಿನಲ್ಲಿ ಋಗ್ಯಜುಸ್ಸಾಮಗಳೆಂಬ ವೇದಗಳ ಹೆಸರು ನಿರ್ದಿಷ್ಟವಾಗಿ ಸೂಚಿಸಲ್ಪಡದಿದ್ದರೂ ಭಾಷ್ಯಕಾರರು ಬೃಹತ್, ಅರ್ಕೇಭಿಃ ವಾಣೀಃ ಎಂಬ ಶಬ್ದಗಳು ಸಾಮವೇದ, ಋಗ್ವೇದ, ಯಜುರ್ವೇದ ಎಂಬ ಮೂರು ವೇದಗಳ ಮಂತ್ರಗಳನ್ನು ಸೂಚಿಸುವುದೆಂದು ಅಭಿಪ್ರಾಯ ಪಡುವರು. ಪಾಶ್ಚಾತ್ಯಪಂಡಿತರು ಈ ವಾದವನ್ನು ಒಪ್ಪುವುದಿಲ್ಲ. ಅವರು ಋಗ್ವೇದವೇ ಇತರ ವೇದಗಳಿಗಿಂತ ಪ್ರಾಚೀನವಾದುದೆಂತೂ ಆದುದರಿಂದ ಋಗ್ವೇದದಲ್ಲಿ ಈಚಿನ ವೇದಗಳಾದ ಯಜುರ್ವೇದ ಸಾಮವೇದಗಳು ಸೂಚಿಸಲ್ಪಡಲು ಕಾರಣವಿಲ್ಲವೆಂತಲೂ ಹೇಳುವರು. ಈ ವಾದವನ್ನು ತಿರಸ್ಕರಿಸಲು ಸಾಧ್ಯವಿಲ್ಲವಾದರೂ ಋಗ್ವೇದದ ಪುರುಷಸೂಕ್ತದಲ್ಲಿ (ಋ. ಸ. ೧೦–೯೦–೯) ಯಜುಸ್ಸಾಮಶಬ್ದಗಳು ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಇದಲ್ಲದೆ ಸಾಮವೇದದ ಬಹುಭಾಗಮಂತ್ರಗಳು ಋಗ್ವೇದಮಂತ್ರಗಳೇ ಆಗಿರುವುದರಿಂದಲೂ, ಋಗ್ವೇದ ಕಾಲದಲ್ಲಿಯೂ ಋಗ್ವೇದದ ಅನೇಕ ಋಕ್ಕುಗಳನ್ನು ಗಾನರೂಪವಾಗಿ ಪಠಿಸುವುದು ರೂಢಿಯಾಗಿದ್ದುದರಿಂದಲೂ ಇಲ್ಲಿ ಸಾಮಮಂತ್ರವನ್ನು ನಿರ್ದೇಶಿಸಿರುವುದು ಅಸಂಭವವೇನೂ ಅಲ್ಲ. ಮತ್ತೂ ಯಜುರ್ವೇದವು ಋಗ್ವೇದದ ಸಾಮವೇದಗಳಿಗಿಂತ ಈಚಿನದೆಂದು ಎಲ್ಲರೂ ಒಪ್ಪಬೇಕಾದ ವಿಷಯ. ಈಗಿನ ಯಜುರ್ವೇದವು ಕ್ರಮಪಡಿಸಲ್ಪಟ್ಟಿರುವಂತೆ ಆ ಕಾಲದಲ್ಲಿ ಇಲ್ಲದಿದ್ದರೂ ಅನೇಕ ಯಜುರ್ವೇದ ಮಂತ್ರಗಳು ಮುಖ್ಯವಾಗಿ ಯಜ್ಞದಲ್ಲಿ ಉಪಯೋಗಿಸುವ ಕೆಲವು ವಾಕ್ಯಗಳು ಆಗ ವಿಶೇಷವಾಗಿ ಬಳಕೆಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಅಂತಹ ಅನೇಕ ವಾಕ್ಯಗಳೂ, ಯಜ್ಞಮಾಡುವ ಕ್ರಮ, ವಿಧಾನಗಳೂ ಒಟ್ಟುಗೂಡಿ ಈಗಿರುವ ಯಜುರ್ವೇದ

ವಾಗಿ ರೂಪುಗೊಂಡಿರಬಹುದು. ಇದಲ್ಲದೆ ಋಗ್ವೇದದಲ್ಲಿ ಅನೇಕ ಕಡೆ ಯಜುರ್ವೇದದ ಮುಖ್ಯ ಋತ್ವಿಜನಾದ ಅಧ್ವರ್ಯುವಿನ ಹೆಸರು ಸ್ಪಷ್ಟವಾಗಿ ಉಕ್ತವಾಗಿದೆ. ಮತ್ತು ಈ ಋಕ್ಕಿನಲ್ಲಿ ವಾಣೀಃ ಎಂಬ ಶಬ್ದಪ್ರಯೋಗವಿರುವುದರಿಂದ ಛಂದೋಬದ್ಧವಲ್ಲದ ಯಜುರ್ವೇದ ವಾಕ್ಯಗಳೆಂದು ಊಹಿಸುವುದಕ್ಕೂ ಸಾಕಾದಷ್ಟು ಅವಕಾಶವಿದೆ. ಈ ಕಾರಣಗಳಿಂದ ಭಾಷ್ಯಕಾರರು ಋಗ್ಯಜುಸ್ಸಾಮ ವೇದಮಂತ್ರಗಳೆಂದು ಅರ್ಥಮಾಡಿರುವ ಅಂಶವನ್ನೂ ತಿರಸ್ಕರಿಸುವಹಾಗಿಲ್ಲ.

**ಗಾಥಿನಃ—ಗಾಥಾ ಏಷಾಂ ಸಂತೀತಿ ಗಾಥಿನಃ**—ಸಾಮವೇದಮಂತ್ರಗಳಿಗೆ ಗಾಥಾ ಎಂದು ಹೇಳುವುದೂ ಉಂಟು. ಈ ಗಾಥೆಗಳನ್ನು ಎಂದರೆ ಸಾಮಮಂತ್ರಗಳನ್ನು ಗಾನಮಾಡುವವರಿಗೆ ಗಾಥಿನಃ ಎಂದು ಹೇಳುವರು.

**ಬೃಹತ್**—ಬೃಹತ್ ಎಂದರೆ ದೊಡ್ಡದು ಎಂದು ಈ ಶಬ್ದದ ಸಾಧಾರಣಾರ್ಥವು. ಆದರೆ ಸಾಮವೇದದಲ್ಲಿ ಬೃಹತ್ಸಾಮವೆಂಬ ಯಜ್ಞಗಳಲ್ಲಿ ಗಾನಮಾಡುವ ಮುಖ್ಯವಾದ ಸಾಮಮಂತ್ರವಿರುವುದು ಇದು ಋಗ್ವೇದದಲ್ಲಿ—

ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ ।
ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ ॥
(ಋ. ಸಂ. ೬–೪೬–೧)

ಈ ಮಂತ್ರವು ಸಾಮವೇದದಲ್ಲಿ ೨೩೪ ; ೮೦೯ ; ಅಥರ್ವವೇದ ೨೦–೯೮–೧ ; ವಾಜಸನೇಯ ಸಂಹಿತಾ (ಶು. ಯಜುರ್ವೇದ) ೨೭–೩೭ ; ತೈತ್ತಿರೀಯ ಸಂಹಿತಾ (ಕೃಷ್ಣಯಜುರ್ವೇದ) ೨–೪–೧೪–೩ ; ಮೈತ್ರಾಯಣೀಯ ಸಂಹಿತಾ ೬–೨–೬ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ. ಈ ಬೃಹತ್ಸಾಮವು ಸಾಮವೇದದಲ್ಲಿ ಒಂದು ಮುಖ್ಯ ಮಂತ್ರವಾಗಿದೆ. ಯಜುರ್ವೇದದಲ್ಲಿ ಅನೇಕ ಕಡೆ ಇದರ ವಿವರಣೆ ಇದೆ;

**ಅರ್ಕೇಭಿಃ—ಅರ್ಕೋ ಮಂತ್ರೋ ಭವತಿ ಯದೇನೇನಾರ್ಚಂತಿ** (ನಿ. ೫–೪) ಎಂದು ಯಾಸ್ಕರು ನಿರುಕ್ತದಲ್ಲಿ ಅರ್ಕಶಬ್ದದ ಅರ್ಥವನ್ನು ಹೇಳಿರುವರು. **ಅರ್ಚ-ಪೂಜಾಯಾಂ**—ಪೂಜಿಸುವುದರಿಂದ ಇದಕ್ಕೆ ಅರ್ಕಃ—ಮಂತ್ರವು ಎಂದು ಹೆಸರು.

**ಅರ್ಕಿಣಃ—ಅರ್ಕಾಃ ಸ್ತುತಿಸಾಧನಭೂತಾ ಮಂತ್ರಾ ಯೇಷಾಂ ಸಂತೀತ್ಯರ್ಕಿಣಃ**—ಎಂದರೆ ಸ್ತುತಿ ಸಾಧನಭೂತವಾದ ಮಂತ್ರಗಳಿಂದ (ಅರ್ಕಗಳಿಂದ) ಸ್ತೋತ್ರಮಾಡುವವರು.

**ವಾಣೀಃ**—ಶ್ಲೋಕಃ, ಧಾರಾ ಮೊದಲಾದ ಐವತ್ತೇಳು ವಾಙ್ನಾಮಸೂಚಕ ಶಬ್ದಗಳ ಮಧ್ಯದಲ್ಲಿ ವಾಣೀ ಎಂಬ ಶಬ್ದವು ಪಠಿತವಾಗಿದೆ. (ನಿ. ೨–೨೩) ಇಲ್ಲಿ ವಾಣೀಃ—ಎಂದರೆ ಯಜುರ್ವೇದವಾಕ್ಯಗಳೆಂದು ಭಾಷ್ಯಕಾರರು ಹೇಳಿರುವರು ಯಜುರ್ವೇದದಲ್ಲಿ ಛಂದೋಬದ್ಧವಾದ ಮಂತ್ರಗಳು ವಿಶೇಷವಾಗಿ ಇಲ್ಲದಿರುವುದರಿಂದ ಈ ವೇದದ ಮಂತ್ರಗಳಿಗೆ ವಾಕ್ಯಗಳೆಂದು ಹೇಳುವ ರೂಢಿ ಇರುವುದು. ಈ ಋಕ್ಕಿನಲ್ಲಿ ವಾಣೀಃ ಎಂಬ ಪ್ರಥಮಾವಿಭಕ್ತಿಶಬ್ದವು ತೃತೀಯಾವಿಭಕ್ತ್ಯರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಅನೂಷತ**— ಣು ಸ್ತುತೌ ಎಂಬ ಧಾತುವಿನ ಲುಙ್ ರೂಪವು. ಇದು ಪರಸ್ಮೈಪದಧಾತುವಾದರೂ ವ್ಯತ್ಯಯ ದಿಂದ ಆತ್ಮನೇಪದಧಾತುವಿನಂತೆ ಉಪಯೋಗಿಸಲ್ಪಟ್ಟಿರುವುದು.

**ಇಂದ್ರೇಣೈತೇ ತೃತ್ಸವೋ ವೇವಿಷಾಣಾ ಆಪೋ ನ ಸೃಷ್ಟಾ ಅಧವಂತ ನೀಚೀಃ |**
**ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾ ಜಹುರ್ವಿಶ್ವಾನಿ ಭೋಜನಾ ಸುದಾಸೇ ||**

(ಋ. ಸಂ ೭–೧೮–೧೫)

ಇದು ತೃತೀಯಾವಿಭಕ್ತಿಗೆ ಉದಾಹರಣೆಯು ; ಇದರ ಅರ್ಥವು–

ನಂಬಿಕೆಗೆ ಅನರ್ಹರೂ, ಶತ್ರುರೂಪರೂ ಅವಿವೇಕಿಗಳೂ ಆದ ಈ ತೃತ್ಸುಗಳು ಇಂದ್ರನೊಡನೆ ಯುದ್ಧಮಾಡಬೇಕೆಂಬ ಹಠದಿಂದ ಪ್ರಯತ್ನಿಸಿ ಕೈಲಾಗದೆ ಪಲಾಯನಕ್ಕೆ ಉದ್ಯುಕ್ತರಾಗಿ ಅಧೋಭಾಗಕ್ಕೆ ಪ್ರವಹಿಸುವ ನೀರಿನ ಪ್ರವಾಹದಂತೆ ವೇಗವಾಗಿ ಓಡಿಹೋದರು. ಅನಂತರ ಸುದಾಸನಿಂದ ಹಿಂಸಿತರಾದ ಶತ್ರುಗಳು ಸಮಸ್ತ ಭೋಗಸಾಮಗ್ರಿಗಳನ್ನೂ ಸಹ ಸುದಾಸನ ವಶಕ್ಕೆ ಬಿಟ್ಟುಕೊಟ್ಟರು.

**ಪ್ರಕಲವಿತ್**– ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ನಿರ್ವಚನವನ್ನು ಹೇಳಿದ್ದಾರೆ.

**ಪ್ರಕಲವಿತ್ | ಪ್ರಕಲವಿದ್ವಣಿಗ್ಭವತಿ | ಕಲಾಶ್ಚ ವೇದ ಪ್ರಕಲಾಶ್ಚ |**
**ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾಃ ಇತ್ಯಪಿ ನಿಗಮೋ ಭವತಿ ||**

**ಪ್ರಕಲವಿತ್**—ಎಂದರೆ ವ್ಯಾಪಾರಮಾಡುವ ವಣಿಗ್ಜನ. ವರ್ತಕ ಎಂದರ್ಥವು. ಇವನು ತನ್ನ ವ್ಯಾಪಾರದಲ್ಲಿ ಲಾಭ ಬರಬೇಕೆಂಬ ಉದ್ದೇಶದಿಂದ ವ್ಯಾಪಾರಾದಿ ವಿಷಯಗಳಲ್ಲಿ ಸಣ್ಣದು, ದೊಡ್ಡದು ಎಂಬ ಭೇದವಿಲ್ಲದೆ ಸಣ್ಣ ಸಣ್ಣ ವಿಷಯಗಳನ್ನು ಸಹ ಚೆನ್ನಾಗಿ ತಿಳಿದುಕೊಂಡಿರುವನು. ಮತ್ತು ವ್ಯಾಪಾರ ಮಾಡುವಾಗ ನ್ಯಾಯಾನ್ಯಾಯವನ್ನು ಗಮನಿಸದೆ ತನ್ನ ಲಾಭದ ಮೇಲೆಯೇ ದೃಷ್ಟಿಯಿಟ್ಟು ಕೆಟ್ಟಬುದ್ಧಿಯಿಂದ ಪ್ರವರ್ತಿಸುವನು ಪ್ರವರ್ತಿಸುವನು ಎಂದರೆ ವ್ಯಾಪಾರದಲ್ಲಿ ಮೋಸ ಮಾಡಲು ಹಿಂಜರಿಯುವುದಿಲ್ಲ. ಆದ್ದರಿಂದ ಅಧರ್ಮಪ್ರವರ್ತಕರು ಅಥವಾ ದುಷ್ಟಜನರು, ಮೋಸಗಾರರು ಮೊದಲಾದ ದುಷ್ಟಜನರನ್ನು ನಿರ್ದೇಶಿಸುವಾಗ ವಣಿಗ್ಜನರನ್ನು ದೃಷ್ಟಾಂತವಾಗಿ ಹೇಳುವುದು ರೂಢಿಯಲ್ಲಿದೆ.

**ಇಂದ್ರಾಯ ಸಾಮ ಗಾಯತ ವಿಪ್ರಾಯ ಬೃಹತೇ ಬೃಹತ್ |**
**ಧರ್ಮಕೃತೇ ವಿಪಶ್ಚಿತೇ ಪನಸ್ಯವೇ ||**

(ಋ. ಸಂ ೮–೯–೮೧)

ಇದು ಚತುರ್ಥೀವಿಭಕ್ತಿಗೆ ಉದಾಹರಣೆಯು ; ಇದರ ಅರ್ಥವು—

ಎಲೈ ಉದ್ಗಾತೃಗಳೇ, ಮೇಧಾವಿಯೂ, ಮಹತ್ಸ್ವರೂಪನೂ ಅಸಾಧಾರಣವಾದ ಕರ್ಮಕರ್ತನೂ, ಪ್ರಾಜ್ಞನೂ ಸ್ತುತಿಪ್ರಿಯನೂ ಆದ ಇಂದ್ರನನ್ನು ಉದ್ದೇಶಿಸಿ ಬೃಹತ್ಸಾಮವೆಂಬ ಸಾಮಗಾನವನ್ನು ಗಾನಮಾಡಿರಿ.

**ಸೂರ್ಯಸ್ಯೇವ ರಶ್ಮಯೋ ದ್ರಾವಯಿತ್ನವೋ ಮತ್ಸರಾಸಃ ಪ್ರಸುಪಃ ಸಾಕಮೀರತೇ |**
**ತಂತುಂ ತತಂ ಪರಿಸರ್ಗಾಸ ಆಶವೋನೇಂದ್ರಾದೃತೇಪವತೇ ಧಾಮ ಕಿಂಚನ || ೬ ||**

(ಋ. ಸಂ ೯–೬೯–೬)

ಇದು ಪಂಚಮೀವಿಭಕ್ತಿಗೆ ಉದಾಹರಣೆಯು ; ಇದರ ಅರ್ಥವು—

ಪ್ರಸರಿಸುವ ಸ್ವಭಾವವುಳ್ಳವೂ, ಹರ್ಷಕಾರಕಗಳೂ, ಶತ್ರುನಾಶಕಗಳೂ, ಶೀಘ್ರಗಾಮಿಗಳೂ, ಯಜ್ಞಾರ್ಥವಾಗಿ ಅರ್ಪಿತವಾದವೂ ಆದ ಸೋಮರಸಗಳು ವಿಸ್ತೃತವಾದುದೂ, ನೂಲಿನಿಂದ ಮಾಡಿದುದೂ ಆದ ವಸ್ತ್ರದ ಮೇಲೆ ಸೂರ್ಯನ ಕಿರಣಗಳಂತೆ ಒಟ್ಟಿಗೆ ಸುತ್ತಲೂ ವ್ಯಾಪಿಸುತ್ತವೆ. ಇಂದ್ರನನ್ನು ಬಿಟ್ಟು ಈ ಸೋಮನು ಬೇರೆ ಯಾವ ಪ್ರದೇಶಕೂ ಪ್ರವೇಶಿಸುವುದಿಲ್ಲ.

**ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ ।**
**ಅಹನ್ನಹಿಮನ್ವಪಸ್ತತರ್ದ ಪ್ರವಕ್ಷಣಾ ಅಭಿನತ್ಪರ್ವತಾನಾಂ ॥**

(ಋ. ಸಂ ೧–೩೨–೧)

ಇದು ಷಷ್ಠೀವಿಭಕ್ತಿಗೆ ಉದಾಹರಣೆಯು ; ಇದರ ಅರ್ಥವು—

ಈ ಸೂಕ್ತದ ಋಷಿಯಾದ ಹಿರಣ್ಯಸ್ತೂಪ ಋಷಿಯು ಈ ಸೂಕ್ತದಿಂದಲೂ ಮುಂದಿನ ಸೂಕ್ತದಿಂದಲೂ ಇಂದ್ರನನ್ನು ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿ ಇಂದ್ರನ ಸಾಹಸಕೃತ್ಯಗಳನ್ನು ಒಂದೊಂದಾಗಿ ವರ್ಣಿಸುವನೆಂದು ಹೇಳಿರುವನು. ಅವುಗಳಲ್ಲಿ ಇಂದ್ರನು ಮೇಘರೂಪದಿಂದಿರುವ ವೃತ್ರನನ್ನು ವಜ್ರಾಯುಧದಿಂದ ಪ್ರಹರಿಸಿದ್ದು ಮೊದಲನೆಯ ಸಾಹಸಕೃತ್ಯವೆಂದೂ, ಆ ಮೇಘದಿಂದ ಮಳೆಯು ಭೂಮಿಯ ಮೇಲೆ ಬೀಳುವಂತೆ ಮಾಡಿರುವ ಕಾರ್ಯವು ಎರಡನೆಯದೆಂದೂ; ಭೂಮಿಯ ಮೇಲೆ ಬಿದ್ದ ನೀರು ಪ್ರವಾಹರೂಪದಿಂದ ನದಿಯಾಗಿ ಪರ್ವತಗಳನ್ನು ಭೇಧಿಸಿಕೊಂಡು ಹರಿಯುವುದೆಂದು ಮೂರನೆಯ ಕೆಲಸವನ್ನೂ ವರ್ಣಿಸಲಾಗಿರುವುದೆಂದೂ ಭಾಷ್ಯಕಾರರು ಹೇಳಿರುವರು.

**ವೀರ್ಯಾಣಿ**— ಪರಾಕ್ರಮಗಳು, ಎಂದರೆ ಪರಾಕ್ರಮದಿಂದ ಕೂಡಿದ ಸಾಹಸಕೃತ್ಯಗಳು.

**ಪ್ರ ವೋಚಂ**— ಹೇಳುವೆನು, ಒಂದೊಂದಾಗಿ ವರ್ಣಿಸುವೆನು.

**ಯಾನಿ ಪ್ರಥಮಾನಿ**— ಮೊದಲು ಮಾಡಿದ ಸಾಹಸಕೃತ್ಯಗಳು, ಅಥವಾ ಪ್ರಥಮಾನಿ ಎಂಬ ಶಬ್ದಕ್ಕೆ ಮುಖ್ಯವಾದ ಎಂಬರ್ಥವನ್ನು ಹೇಳಬಹುದು. ಮುಖ್ಯವಾದ ಸಾಹಸಕೃತ್ಯಗಳು ಎಂದಭಿಪ್ರಾಯವು,

**ವಜ್ರೀ— ವಜ್ರಯುಕ್ತಃ ।** ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನು.

**ಅಹಿಂ**— ಮೇಘವನ್ನು; ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಅಹಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅಹಿಂ ಎಂದರೆ ಮೇಘವನ್ನು ಎಂದರ್ಥವು (ನಿ· ೫–೨೧). ಅಹಿ ಎಂದರೆ ಉದಕವೆಂದೂ ಅರ್ಥವು (ನಿ· ೨–೨೪). ಆಧುನಿಕ ಸಂಸ್ಕೃತದಲ್ಲಿ ಅಹಿ ಎಂದರೆ ಸರ್ಪವು.

**ವಕ್ಷಣಾಃ— ಅವನಯಃ ಯಹ್ವ್ಯಃ** ಮೊದಲಾದ ಮೂವತ್ತೇಳು ನದೀನಾಮಗಳ ಮಧ್ಯದಲ್ಲಿ ವಕ್ಷಣಾಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಕ್ಷಣಾಃ ಎಂದರೆ ನದಿಗಳು ಎಂದರ್ಥವು. ಮೇಘವು ಸುರಿಸಿದ ಮಳೆಯು ಪರ್ವತಗಳ ಮೇಲೆ ಬಿದ್ದು ಅಲ್ಲಿಂದ ಹನಿಯಾಗಿ ಹರಿದುಹೋಗುವುದು. ಅದನ್ನೇ ಇಲ್ಲಿ ವರ್ಣಿಸಿರುವುದು.

**ಪ್ರ ಅಭಿನತ್ ಪರ್ವತಾನಾಂ**— ಪರ್ವತಗಳಿಂದ ಹೊರಟ ನದಿಗಳು ಪರ್ವತವನ್ನೂ ಭೂಮಿಯನ್ನೂ ಕೊರೆದು ಹರಿಯುವುದಕ್ಕೆ ದಾರಿಮಾಡಿಕೊಂಡು ಹೋಗುವವು ಎಂದಭಿಪ್ರಾಯವು.

ಋಗ್ವೇದಸಂಹಿತಾ ಭಾಗ ೨. ಪೇಜು, 123–124 ರಲ್ಲಿ ವೃತ್ರಾಸುರನ ವಿಷಯವಾದ ವರ್ಣನೆಯನ್ನು ನೋಡಿ.

**ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ||**

**ಪ್ರತ್ಯಕ್ಷಕೃತ**— ಈ ವಿಧವಾದ ಋಕ್ಕಿನಲ್ಲಿ ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎಂದರೆ ಎದುರಿಗೆ ನಿಂತಿರ ವಂತೆ ಭಾವಿಸಿ. ಆ ದೇವತೆಯನ್ನು ಎಲ್ಲಾ ವಿಭಕ್ತಿಗಳಲ್ಲೂ ಹಿಂದೆ ಹೇಳಿದಂತೆ ಸ್ತುತಿಸಬಹುದು. ಆದರೆ, ನೀನು ನಿನ್ನ ಇತ್ಯಾದಿ ಮಧ್ಯಮಪುರುಷ ಕ್ರಿಯಾಪದಗಳನ್ನೂ ಉಪಯೋಗಿಸಬೇಕು. ಪ್ರತ್ಯಕ್ಷಕೃತ ಎಂಬ ಋಕ್ಕಿಗೆ ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ—

**ತ್ವಮಿಂದ್ರ ಬಲಾದಧಿ ಸಹಸೋ ಜಾತ ಓಜಸಃ |**
**ತ್ವಂ ವೃಷನ್ವೃಷೇದಸಿ || ೨ ||**

(ಋ, ಸಂ. ೧೦—೧೫೩—೨)

ಇದರ ಅರ್ಥವು—

ಎಲೈ ಇಂದ್ರನೇ, ನೀನು ಹುಟ್ಟುವಾಗಲೇ ವೃತ್ರವಧಾದಿಗಳಿಗೆ ಆವಶ್ಯಕವಾದ ಶತ್ರುನಿಗ್ರಹಶಕ್ತಿಯಿಂದಲೂ, ಮನಸ್ಸಿನ ಅಪಾರವಾದ ಧೈರ್ಯದಿಂದ ಸಹಿತನಾಗಿಯೂ ಉತ್ಪನ್ನನಾಗಿದ್ದೀಯೆ. ಕಾಮಪ್ರದನಾದ ಎಲೈ ಇಂದ್ರನೇ, ನೀನು ಇಷ್ಟಾರ್ಥಗಳನ್ನು ಸುರಿಸುವವನಾಗಿಯೂ ಇದ್ದೀಯೆ.

ಇನ್ನೊಂದು ಉದಾಹರಣೆ ಮತ್ತು ಅದರ ಅರ್ಥವು—

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ |**
**ಯೋ ಅಸ್ಮಾँ ಅಭಿದಾಸತ್ಯಧರಂ ಗಮಯಾ ತಮಃ ||**

(ಋ. ಸಂ. ೧೦—೧೫೨—೪)

ಇದರ ಅರ್ಥವು—

ಎಲೈ ಇಂದ್ರನೇ, ನಮ್ಮೊಡನೆ ಯುದ್ಧಮಾಡುತ್ತಿರುವ ಶತ್ರುಗಳನ್ನು ನಾಶಮಾಡು. ಹಾಗೆಯೇ ಶತ್ರುಸೇನೆಯಲ್ಲಿ ನಮ್ಮ ಅಭಿಮುಖವಾಗಿ ಹೋರಾಡುತ್ತಿರುವ ಶತ್ರುಗಳನ್ನು ಕೆಳಗೆ ಬೀಳುವಂತೆ ಮಾಡು. ಯಾವ ಶತ್ರುವು ನಮ್ಮನ್ನು ಸುತ್ತಲೂ ಮುತ್ತಿ ನಾಶಮಾಡಲಿಚ್ಛಿಸುವನೋ ಅವನು ಕೆಳಗೆ ಬಿದ್ದು ಕತ್ತಲೆಯಂತಿರುವ ಮರಣಕ್ಕೆ ಈಡಾಗುವರತೆ ಮಾಡು.

**ಅಥಾಪಿ ಪ್ರತ್ಯಕ್ಷಕೃತಾಃ ಸ್ತೋತಾರೋ ಭವಂತಿ ಪರೋಕ್ಷಕೃತಾನಿ ಸ್ತೋತವ್ಯಾನಿ ||**
**ಮಾಚಿದನ್ಯದ್ವಿಶಂಸತ ||**
**ಕಣ್ವಾ ಅಭಿ ಪ್ರಗಾಯತ ||**
**ಉಪಪ್ರೇತ ಕುಶಿಕಾಶ್ಚೇತಯಧ್ವಂ ||**

**ಪ್ರತ್ಯಕ್ಷಕೃತ ಮತ್ತು ಪರೋಕ್ಷಕೃತ**— ಈ ಎರಡು ವಿಧವೂ ಸೇರಿದ ಕೆಲವು ಋಕ್ಕುಗಳಲ್ಲಿ ಸ್ತೋತ್ರಮಾಡುವ ಜನರು ಪ್ರತ್ಯಕ್ಷಕೃತರೆಂದೂ, ಸ್ತೋತ್ರಮಾಡಲ್ಪಡುವ ದೇವತೆಗಳು ಪರೋಕ್ಷಕೃತರೆಂದೂ ವ್ಯವಹರಿಸಲ್ಪಡುವರು. ಈ ವಿಷಯದಲ್ಲಿ ಮೂರು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ.

ಮಾ ಚಿದನ್ಯದ್ವಿ ಶಂಸತ ಸಖಾಯೋ ಮಾ ರಿಷಣ್ಯತ ।
ಇಂದ್ರಮಿತ್ಸ್ತೋತಾ ವೃಷಣಂ ಸಚಾ ಸುತೇ ಮುಹುರುಕ್ಥಾ ಚ ಶಂಸ ತ ॥

ಇದರ ಅರ್ಥವು—

ಎಲೈ ಮಿತ್ರರೇ, ಇಂದ್ರಸ್ತುತಿಗಿಂತಲೂ ಬೇರೆಯಾದ ಯಾವ ಸ್ತುತಿಯನ್ನೂ ಖಂಡಿತವಾಗಿಯೂ ಪಠಿಸಬೇಡಿರಿ. ನಿಮಗೆ ನೀವೇ ತೊಂದರೆಯನ್ನುಂಟುಮಾಡಿಕೊಳ್ಳಬೇಡಿರಿ. ಸೋಮರಸವು ಹಿಂಡಲ್ಪಟ್ಟಾಗ ಕಾಮವರ್ಷಕನಾದ ಕೇವಲ ಇಂದ್ರನನ್ನೇ ಒಟ್ಟಿಗೆ ಕೂಡಿಕೊಂಡು ಸ್ತುತಿಸಿರಿ. ಇಂದ್ರೋದ್ದಿಷ್ಟವಾದ ಉಕ್ಥಗಳನ್ನು (ಸ್ತೋತ್ರಗಳನ್ನು) ಪುನಃ ಪುನಃ ಪಠಿಸಿರಿ.

ಋಗ್ವೇದಸಂಹಿತೆಯಲ್ಲಿರುವ ಒಟ್ಟು ಹತ್ತು ಮಂಡಲಗಳಲ್ಲಿ ಒಂಭತ್ತನೆಯ ಮಂಡಲದ ಸೂಕ್ತಗಳಿಗೆಲ್ಲಾ **ಪವಮಾನಃ ಸೋಮಃ** ಎಂಬುದೇ ದೇವತೆಯಾಗಿರುವುದು. ಈ ಮಂಡಲದಲ್ಲಿ ಬೇರೆ ದೇವತೆಯ ಸ್ತುತಿಯಿರುವುದಿಲ್ಲ. ಆದರೆ ಉಳಿದ ಒಂಭತ್ತು ಮಂಡಲಗಳಲ್ಲಿ ಸೋಮದೇವತೆಯನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳ ಸ್ತುತಿಯೂ ಇದೆ. ಈ ಮಂಡಲಗಳ ಸೂಕ್ತಗಳನ್ನು ವಿಂಗಡಿಸುವಾಗ ಅಗ್ನಿಯನ್ನು ಸ್ತುತಿಸುವ ಸೂಕ್ತಗಳಿಂದಲೇ ಎಲ್ಲಾ ಮಂಡಲಗಳೂ ಪ್ರಾರಂಭವಾಗುವುವು. ಎಂದರೆ, ಮೊದಲನೆಯ ಸೂಕ್ತವೂ ಅದರ ಮುಂದಿನ ಕೆಲವು ಸೂಕ್ತಗಳೂ ಅಗ್ನಿಪರವಾಗಿಯೇ ಇರುವವು. ಆದರೆ ಈ ಎಂಟನೆಯ ಮಂಡಲದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಪ್ರಾರಂಭದಲ್ಲಿ ಇಂದ್ರದೇವತಾಕವಾದ ಸೂಕ್ತದಿಂದಲೇ ಮಂಡಲವು ಪ್ರಾರಂಭವಾಗಿರುವುದು. ಇದು ಈ ಮಂಡಲದ ವೈಶಿಷ್ಟ್ಯವು ಮತ್ತು ಈ ಮಂಡಲದಲ್ಲಿ ೪೮ ಸೂಕ್ತಗಳಾದಮೇಲೆ ೧೧ ಸೂಕ್ತಗಳಿಂದ ಕೂಡಿರುವ ವಾಲಖಿಲ್ಯವೆಂಬ ಭಾಗವಿದೆ. ಈ ವಾಲಖಿಲ್ಯಸೂಕ್ತಗಳಲ್ಲಿ ಒಟ್ಟು ೮೦ ಋಕ್ಕುಗಳಿವೆ. ಇವುಗಳನ್ನು ಪರಿಶಿಷ್ಟ ಮಂತ್ರಗಳೆಂದು ಕೆಲವರು ಭಾವಿಸುವರು. ಈ ಅಭಿಪ್ರಾಯದಿಂದಲೇ ಸಾಯಣಾಚಾರ್ಯರು ಈ ಸೂಕ್ತಗಳಿಗೆ ಭಾಷ್ಯವನ್ನು ಬರೆದಿರುವುದಿಲ್ಲ. ಆದರೆ ಪೂನಾ ನಗರದ ವೈದಿಕ ಸಂಶೋಧನ ಮಂಡಲವೆಂಬ Vedic Research Institute ಸಮಿತಿಯಿಂದ ಪ್ರಕಟವಾದ ಋಗ್ವೇದ ಸಾಯಣಭಾಷ್ಯದಲ್ಲಿ ಈ ವಾಲಖಿಲ್ಯಸೂಕ್ತಗಳಿಗೆ ಭಾಷ್ಯವನ್ನು ಬರೆದಿದಾರೆ. ಆ ಪುಸ್ತಕದ ಸೂಚನೆಯಲ್ಲಿ ಹೇಳಿರುವಂತೆ ಕಾಶಿಯಲ್ಲಿ ಒಬ್ಬ ಪಂಡಿತರಬಳಿ ದೊರೆತ ಹಸ್ತಲಿಖಿತಪ್ರತಿಯಲ್ಲಿ ಈ ಸೂಕ್ತಗಳ ಭಾಷ್ಯವಿದ್ದುದನ್ನು ಪರಿಶೋಧಿಸಿ ಪ್ರಕಟಿಸಲಾಗಿದೆ. ಇದನ್ನು ಯಾರು ಬರೆದಿರುವರೆಂಬುದು ಗೊತ್ತಾಗುವುದಿಲ್ಲ ಎಂದು ತಿಳಿಸಿದಾರೆ. ಬೇರೆ ಯಾವ ಭಾಷ್ಯವೂ ದೊರೆಯುವುದಿಲ್ಲವಾದ್ದರಿಂದ ಇದನ್ನೇ ನಾವೂ ಇಲ್ಲಿ ಕೊಟ್ಟದ್ದೇವೆ. ಐದನೆಯ ಮಂಡಲದಲ್ಲಿರುವಂತೆ ಈ ಮಂಡಲದಲ್ಲಿಯೂ ಪ್ರಸಿದ್ಧರೂ, ಸೂಕ್ತದ್ರಷ್ಟೃಗಳೂ ಆದ ಅನೇಕ ಋಷಿಗಳಿದಾರೆ. ಇವರ ವಿಷಯವಾಗಿ ಹೆಚ್ಚು ಸಂಗತಿಗಳು ತಿಳಿಯಬರುವುದಿಲ್ಲವಾದ್ದರಿಂದ ಕಣ್ವಋಷಿಯ ಪರಿಚಯವನ್ನು ಮಾತ್ರ ಬರೆದು, ಉಳಿದ ಈ ಮಂಡಲದ ಋಷಿಗಳಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳನ್ನು ಮಾತ್ರ ಇಲ್ಲಿ ಕೊಟ್ಟದೇವೆ

## ಕಣ್ವ ಋಷಿಯ ಪರಿಚಯ

ಋಗ್ವೇದಾದಿ ಸಂಹಿತೆಗಳಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಕಣ್ವನ ಹೆಸರು ಅತ್ಯಂತ ಪ್ರಸಿದ್ಧವಾದುದಾಗಿದೆ. **ಯುವಂ ಕಣ್ವಾಯ ನಾಸತ್ಯಾ** (೮–೫–೨೩) ಇತ್ಯಾದಿಯಾಗಿ ಕಣ್ವನಿಗೆ ದೈವಾನುಗ್ರಹವಿದ್ದುದೂ, ಕಣ್ವನ ಮಂತ್ರದ್ರಷ್ಟೃತ್ವವೂ ಅನೇಕ ಸಂದರ್ಭಗಳಲ್ಲಿ ಪ್ರಶಂಸಿತವಾಗಿದೆ. ಋಕ್ಸಂಹಿತೆಯ ಎಂಟನೆಯ ಮಂಡಲವು ಕಣ್ವಮಂಡಲವೆಂದೇ ಪ್ರಖ್ಯಾತವಾಗಿದೆ. ಈ ಮಂಡಲಕ್ಕೆ ಈ ಋಷಿಯ ಹೆಸರೇ ಪ್ರಸಿದ್ಧವಾಗಲು ಒಂದು ಐತಿಹಾಸಿಕ ಸನ್ನಿವೇಶವು ಈ ರೀತಿ ತಿಳಿಸಲ್ಪಟ್ಟಿದೆ.

ಕಣ್ವಶ್ಚೈವ ಪ್ರಗಾಥಶ್ಚ ಘೋರಪುತ್ರೌ ಬಭೂವತುಃ ।
ಗುರುಣಾ ತಾವನುಜ್ಞಾತಾವೂಷತುಃ ಸಹಿತೌ ವನೇ ॥

(ಬೃ. ದೇ. ೬-೩೫)

ಕಣ್ವ ಮತ್ತು ಪ್ರಗಾಥ ಎಂಬ ಇಬ್ಬರೂ ಘೋರನೆಂಬ ಋಷಿಯ ಪುತ್ರರು. ಇವರು ಒಟ್ಟಿಗೆ ಒಂದೇ ಗುರುವಿನಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಮುಗಿಸಿದನಂತರ ಗುರುವು ಇವರನ್ನು ಆಶೀರ್ವದಿಸಿ ಕಳುಹಿಸಿಕೊಟ್ಟನು. ಆಗ ಇವರಿಬ್ಬರೂ ಒಟ್ಟಿಗೆ ಒಂದೇ ವನದಲ್ಲಿ ವಾಸಮಾಡುತ್ತಿದ್ದರು.

ವಸತೋಸ್ತು ತಯೋಸ್ತತ್ರ ಕಣ್ವಪತ್ನ್ಯಾಃ ಶಿರಃ ಸ್ವಪತ್ ।
ಕೃತ್ವಾ ಕನೀಯಾನ್ ಕಣ್ವಸ್ಯ ಉತ್ಸಂಗೇ ನಾನ್ವಬುಧ್ಯತ ॥

ಕಣ್ವ ಮತ್ತು ಪ್ರಗಾಥ ಎಂಬಿಬ್ಬರೂ ಒಟ್ಟಿಗೆ ವನದಲ್ಲಿ ವಾಸಮಾಡುತ್ತಿರುವಕಾಲದಲ್ಲಿ ಒಂದುಸಲ ಚಿಕ್ಕವನಾದ ಪ್ರಗಾಥನು ಕಣ್ವಪತ್ನಿಯ ತೊಡೆಯಮೇಲೆ ಮಲಗಿ ನಿದ್ರೆಮಾಡಿಬಿಟ್ಟನು. ಬಹಳಕಾಲ ಇವನಿಗೆ ಎಚ್ಚರವಾಗಲೇಯಿಲ್ಲ. ಆಗ ದೊಡ್ಡವನಾದ ಕಣ್ವನು ಇದನ್ನು ಕಂಡನು.

ಶಪ್ತುಕಾಮುಸ್ತು ತಂ ಕಣ್ವಃ ಕ್ರುದ್ಧಃ ಪಾಪಾಭಿಶಂಕಯಾ ।
ಬೋಧಯಾಮಾಸ ಪಾದೇನ ದಿಧಕ್ಷನ್ನಿವ ತೇಜಸಾ ॥ ೩೭ ॥

ಇದನ್ನು ನೋಡಿದಾಗ ಕಣ್ವನಿಗೆ ಪ್ರಗಾಥನ ವಿಷಯದಲ್ಲಿ ಮಹಾಕೋಪವುಂಟಾಯಿತು. ಪ್ರಗಾಥನಲ್ಲಿ ಪಾಪಕರ್ಮವನ್ನು ಶಂಕಿಸಿ ಅವನನ್ನು ಶಪಿಸಬೇಕೆಂದು ಸಂಕಲ್ಪಿಸಿದನು. ಆಗ ಕಾಲಿನಿಂದ ಅವನನ್ನು ಒದ್ದು ಎಬ್ಬಿಸಿ ಅವನನ್ನು ಸುಟ್ಟುಬಿಡುವಂತೆ ತನ್ನ ತೇಜಸ್ಸಿನಿಂದ ಕೂಡಿದ ಕ್ರೂರ ದೃಷ್ಟಿಯಿಂದ ಅವನನ್ನು ನೋಡಿದನು.

ವಿದಿತ್ವಾ ತಸ್ಯ ತಂ ಭಾವಂ ಪ್ರಗಾಥಃ ಪ್ರಾಂಜಲಿಸ್ಥಿತಃ ।
ಮಾತೃತ್ವೇ ಚ ಪಿತೃತ್ವೇ ಚ ವರಯಾಮಾಸ ತಾವುಭೌ ॥ ೩೮ ॥

ಕಣ್ವನ ಈ ಶಂಕಾಪೂರಿತವೂ, ಕೋಪಪೂರಿತವೂ ಆದ ದೃಷ್ಟಿಯಿಂದ ಅವನ ಮನಸ್ಸಂಕಲ್ಪವನ್ನರಿತ ಪ್ರಗಾಥನು ತನ್ನ ಕೈ ಜೋಡಿಸಿ ಪ್ರಣಾಮಮಾಡುತ್ತಾ ತನ್ನ ನಿಷ್ಕಲ್ಮಷವಾದ ವ್ಯವಹಾರವನ್ನು ಅವನಿಗೆ ಸೂಚಿಸಿ ಕಣ್ವನೂ ಅವನ ಪತ್ನಿಯೂ ತನಗೆ ತಂದೆತಾಯಿಗಳಂತಿರುವಾಗ ತಾನು ಆ ಪಾಪಕಾರ್ಯಕ್ಕೆಂದೂ ಪ್ರಯತ್ನಿಸಲಾರನೆಂದು ಭಕ್ತಿಪುರಃಸರವಾಗಿ ತಿಳಿಸಿದನು.

ಸ ಘೌರೋ ವಾಥ ಕಾಣ್ವೋ ವಾ ವಂಶಜೈರ್ಬಹುಭಿಃ ಸಹ ।
ದದರ್ಶಾಸ್ಯೈಶ್ಚ ಸಹಿತ ಋಷಿರ್ಮಂಡಲಮಷ್ಟಮಂ ॥ ೩೯ ॥

ಘೋರಪುತ್ರನೆಂದೂ ಅಥವಾ ಕಣ್ವಪುತ್ರನೆಂದೂ ಪ್ರಸಿದ್ಧನಾದವನೂ ಮಂತ್ರದ್ರಷ್ಟೃವೂ ಆದ ಈ ಋಷಿಯು ಅದೇ ಕಣ್ವವಂಶದ ಇತರ ಋಷಿಗಳೊಡಗೂಡಿ ಋಕ್ಸಂಹಿತೆಯ ಎಂಟನೆಯ ಮಂಡಲದ ನಿರ್ಮಾಪಕನಾದನು ಎಂದು ಬೃಹದ್ದೇವತೆಯಲ್ಲಿ ಋಕ್ಸಂಹಿತೆಯ ಎಂಟನೆಯ ಮಂಡಲಕ್ಕೆ ಕಾಣ್ವಮಂಡಲವೆಂಬ ಹೆಸರು ಪ್ರಸಿದ್ಧವಾದ ಸನ್ನಿವೇಶವು ತಿಳಿಸಲ್ಪಟ್ಟಿದೆ.

ಆದರೆ, ಅನೇಕ ಸಂದರ್ಭಗಳಲ್ಲಿ ಕಣ್ವಪದವು ಅಂಕಿತನಾಮವನ್ನು ನಿರ್ದೇಶಿಸುವುದಿಲ್ಲವೆಂದು ತಿಳಿಯುತ್ತದೆ. ಕಣ್ವ ಶಬ್ದಕ್ಕೆ ಸ್ತುತಿಕರ್ತನೆಂದೂ, ಮೇಧಾವಿಯೆಂದೂ ಸಂದರ್ಭಾನುಸಾರವಾಗಿ ಅರ್ಥಮಾಡಿದ್ದಾರೆ. ಅಂತಹ ಸಂದರ್ಭಗಳಲ್ಲಿ ಕಣ್ವಶಬ್ದಕ್ಕೆ ಕಣ್ವಋಷಿಯೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ—

ಈಳತೇ ತ್ವಾಮವಸ್ಯವಃ ಕಣ್ವಾಸೋ ವೃಕ್ತಬರ್ಹಿಷಃ । ಹವಿಷ್ಮಂತೋ ಅರಂಕೃತಃ ॥

(ಋ. ಸಂ. ೧–೧೪–೫

ಎಂಬಲ್ಲಿ ಕಣ್ವಶಬ್ದಕ್ಕೆ ಸಾಯಣರು ಈ ರೀತಿ ವಿವರಣೆಯನ್ನು ತಿಳಿಸಿದ್ದಾರೆ. "ಕಣ್ವಶಬ್ದಾರ್ಥಃ । ಕಣಂತಿ ಧ್ವನಂತಿ ಸ್ತೋತ್ರಾದಿಪಾಠೇನೇತಿ ಕಣ್ವಾಃ ಋತ್ವಿಜಃ" ಶಬ್ದವೆಂಬ ಅರ್ಥವನ್ನು ಕೊಡತಕ್ಕ ಕಣ್ ಧಾತುವಿನಿಂದ ಕಣ್ವ ಶಬ್ದವು ನಿಷ್ಪನ್ನವಾಗಿದೆ. ಸ್ತುತಿರೂಪವಾದ ಶಬ್ದವನ್ನು ಮಾಡುವುದರಿಂದ ಋತ್ವಿಕ್ಕುಗಳಿಗೆ ಈ ಹೆಸರು ಪ್ರಸಿದ್ಧವಾಗಿದೆಯೆಂದು ಸಾಯಣರು ತಿಳಿಸುತ್ತಾರೆ. 'ವ' ಎಂಬ ಪ್ರತ್ಯಯವು 'ಅಶ್' ಧಾತುವಿನೊಂದಿಗೆ ಸೇರಿ "ಅಶ್ವ" ಎಂದಾಗುವಂತೆ, "ಕಣ್" ಧಾತುವಿಗೆ "ವ" ಪ್ರತ್ಯಯವು ಸೇರಿ "ಕಣ್ವ" ಪದವಾಗಿದೆಯೆಂದು ವಿವರಿಸಿದೆ. ಇದರಂತೆಯೇ,

"ಕಣ್ವಾಸಸ್ತ್ವಾ ಸುತಸೋಮಾಸ ಇಂಧತೇ" (೧–೪೪–೮)
"ದಿವಸ್ಕಣ್ವಾಸ ಇಂದವೋ ವಸು ಸಿಂಧೂನಾಂ ಪದೇ" (೧–೪೬–೯)

ಇತ್ಯಾದಿ ಸ್ಥಳಗಳಲ್ಲೂ ಇದೇ ವಿಧವಾಗಿ ಅರ್ಥಮಾಡಿದೆ. ಈ ಸ್ತುತಿಕರ್ತರೇ ಕಣ್ವಪುತ್ರರೆಂದು ತಿಳಿಯಬೇಕು ಎಂದು ಆಕ್ಷೇಪಿಸಿದರೆ, ಅದಕ್ಕೆ ಉತ್ತರವಾಗಿ "ಕಣ್ವಪುತ್ರಾಃ ಯದ್ವಾ ಮೇಧಾವಿನಃ ಋತ್ವಿಜಃ" ಎಂದು ವಿವರಿಸಿದ್ದಾರೆ (೧–೪೬–೯) ಎಂದರೆ, ಕಣ್ವರೆಂದರೆ ಕಣ್ವ ಅಥವಾ ಕಣ್ವಪುತ್ರರೇ ಆಗಿರಬೇಕೆಂಬ ನಿಯಮವಿಲ್ಲ. ಹೀಗೆಯೇ ಸುಮಾರು ಹನ್ನೆರಡು ಸನ್ನಿವೇಶಗಳಲ್ಲಿ ಸಾಯಣರು ಈ ರೀತಿ ಅರ್ಥಮಾಡಿದ್ದಾರೆ. ಇಂತಹ ಸಂದರ್ಭಗಳಲ್ಲಿ ಸಾಯಣರ ವಿವರಣೆಯು ಉಚಿತವಾಗಿರುವಂತೆಯೇ ತೋರುತ್ತದೆ.

ಋಕ್ಸಂಹಿತೆಯಲ್ಲಿ ಸುಮಾರು ಅರವತ್ತೈದು ಮಂತ್ರಗಳಲ್ಲಿ ಕಣ್ವಶಬ್ದದ ಸಾಕ್ಷಾತ್ಪ್ರಯೋಗವಿರುತ್ತದೆ. ಇವುಗಳಲ್ಲಿ ೨೨ ಮಂತ್ರಗಳು ಇಂದ್ರನನ್ನುದ್ದೇಶಿಸಿಯೂ, ೧೮ ಅಶ್ವಿನೀದೇವತೆಗಳನ್ನು ನಿರ್ದೇಶಿಸಿಯೂ, ೧೨ ಮಂತ್ರಗಳು ಅಗ್ನಿಪ್ರಶಂಸಕವಾಗಿಯೂ, ೭ ಮಂತ್ರಗಳು ಮರುದ್ದೇವತಾಕವಾಗಿಯೂ, ೨ ಮಂತ್ರಗಳು ಉಷಸ್ಸನ್ನು ಸ್ತುತಿಸುವುವಾಗಿಯೂ, ೧ ಇಂದ್ರಾಗ್ನೀ ಮತ್ತು ೧ ವಿಶ್ವದೇವತೆಗಳನ್ನು ಸ್ತುತಿಸುವುದಾಗಿಯೂ ಇರುತ್ತದೆ.

ಅಗ್ನಿಯನ್ನು ಪ್ರಶಂಸಿಸುವ ಮಂತ್ರಗಳಲ್ಲಿ ಕೇವಲ ಅಗ್ನಿಯ ಪ್ರಜ್ವಲನಕ್ರಮವನ್ನು ಸ್ತುತಿಸಿದೆ. ಕಣ್ವರಿಂದ ಪ್ರಜ್ವಲಿತನಾದ ಅಗ್ನಿಯು ಅತಿಯಾಗಿ ಪ್ರಕಾಶಿಸುತ್ತಾನೆಂಬ ಸ್ತುತಿಯಿರುತ್ತದೆ. ಕಣ್ವರಿಂದ ಪ್ರಜ್ವಲಿತನಾದ ಅಗ್ನಿಯು ಕಣ್ವತಮನೆಂದೇ ಸ್ತುತಿಸಲ್ಪಟ್ಟಿದ್ದಾನೆ. ಉದಾಹರಣೆಗೆ—

"ಸ ಇದಗ್ನಿಃ ಕಣ್ವತಮಃ ಕಣ್ವಸಖಾರ್ಯಃ ಪರಸ್ಯಾಂತರಸ್ಯ ತರುಷಃ ॥

(ಋ. ಸಂ. ೧೦–೧೧೫–೫)

ಕಣ್ವತಮಃ ಎಂಬುದು ಅಗ್ನಿಗೆ ವಿಶೇಷಣವಾಗಿದೆ. ಕಣ್ವಶಬ್ದಕ್ಕೆ ಸ್ತುತಿಕರ್ತನು ಎಂದೂ, ಕಣ್ವತಮಃ ಎಂಬುದಕ್ಕೆ ಅತಿಶಯವಾಗಿ ಸ್ತುತಿಸುವವನು ಎಂದೂ ಅರ್ಥ. ಇವನೇ ಕಣ್ವಸಖನು ಎಂದರೆ ಸ್ತುತಿಕರ್ತನಿಗೆ ಸಖನು

ಸಾಧಾರಣವಾಗಿ ಇಂದ್ರಪರವಾಗಿರತಕ್ಕ ಸ್ತುತಿಗಳಲ್ಲೆಲ್ಲಾ ಕಣ್ವಶಬ್ದಕ್ಕೆ ಕಣ್ವಋಷಿ ಅಥವಾ ಕಣ್ವಗೋತ್ರೋತ್ಪನ್ನನಾದ ಋಷಿಯೆಂದೇ ಅರ್ಥವಾಗುತ್ತದೆ. ಅಲ್ಲದೇ ಈ ಋಷಿಯ ಮತ್ತು ಇವನ ವಂಶೋತ್ಪನ್ನರಾದ ಋಷಿಗಳ ಪ್ರಭಾವವನ್ನು ಸೂಚಿಸುವ ಸನ್ನಿವೇಶಗಳೂ ಅನೇಕವಾಗಿರುತ್ತವೆ. ಉದಾಹರಣೆಗೆ—

ಧೀಭಿಃ ಸಾತಾನಿ ಕಾಣ್ವಸ್ಯ ವಾಜಿನಃ ಪ್ರಿಯಮೇಧೈರಭಿದ್ಯುಭಿಃ ।
ಷಷ್ಟಿಂ ಸಹಸ್ರಾನು ನಿರ್ಮಜಾಮಜೇ ನಿಯೂರ್ಥಾನಿ ಗವಾಮೃಷಿಃ ॥

(ಋ. ಸಂ. ೮–೪–೨೦)

ಎಂಬಲ್ಲಿ ಕಣ್ವಋಷಿಯ ಸ್ತುತಿಯ ಮಹಿಮೆಯು ವರ್ಣಿತವಾಗಿದೆ. ಈ ಮಹರ್ಷಿಯ ಸ್ತುತಿಯಿಂದ ಸಂತುಷ್ಟರಾದ ಯಜಮಾನರು ಅರವತ್ತು ಸಹಸ್ರಸಂಖ್ಯೆಯುಳ್ಳ ಉತ್ತಮವಾದ ಗೋವುಗಳನ್ನು ಕೊಟ್ಟರು ಎಂದು ಸ್ತುತಿಯ ಫಲನಾದ ಸಂತುಷ್ಟಿಯನ್ನೂ ಔದಾರ್ಯವನ್ನೂ ತಿಳಿಸಿದೆ. ಇದೇ ಅಲ್ಲವೇ, ಋಷಿಗಳು ಸಹ ತಮ್ಮ ಕೃತಿಕೌಶಲ್ಯವನ್ನು ಕಣ್ವನ ಸ್ತುತಿಗಳಿಗೆ ಹೋಲಿಸಿಕೊಂಡಿರುವುದರಿಂದ ಕಣ್ವನ ರಚನಾಸಾಮರ್ಥ್ಯವು ಅದರಿಂದ ತಿಳಿಯುತ್ತದೆ,

ಅಹಂ ಪ್ರತ್ನೇನ ಮನ್ಮನಾ ಗಿರಃ ಶುಂಭಾಮಿ ಕಣ್ವವತ್ । ಯೇನೇಂದ್ರಃ ಶುಷ್ಮಮಿದ್ದಧೇ ॥

(ಋ. ಸಂ. ೮–೬–೧೧)

ಯಾವ ಕಣ್ವಋಷಿಯ ಸ್ತುತಿಯಿಂದ ಇಂದ್ರನು ಪ್ರೀತನಾವನೋ ಅಂತಹ ಋಷಿಯ ಕೃತಿಯಂತೆಯೇ ಉತ್ತಮವೂ ಧ್ಯಾನಾತ್ಮಕವೂ ಆದ ಸ್ತುತಿಯನ್ನು ನಾನು ನಿರ್ಮಿಸುತ್ತೇನೆ ಎಂದು ಕಣ್ವವಂಶೋತ್ಪನ್ನನಾದ ಇನ್ನೊಬ್ಬ ಋಷಿಯು ತಿಳಿಸುತ್ತಾನೆ.

ಇತ್ಥಾ ಧೀವಂತಮದ್ರಿವಃ ಕಾಣ್ವಂ ಮೇಧ್ಯಾತಿಥಿಂ । ಮೇಷೋ ಭೂತೋಽಭಿ ಯನ್ನಯಃ ॥

(ಋ. ಸಂ; ೮–೨–೪೦)

ವಜ್ರಾಯುಧಧಾರಿಯಾದ ಇಂದ್ರನು ಕಣ್ವಪುತ್ರನಾದ ಮೇಧ್ಯಾತಿಥಿಯಲ್ಲಿಗೆ ಮೇಷರೂಪದಲ್ಲಿ ಎಂಬ ವರ್ಣನೆಯೂ ಕಣ್ವನ ಮತ್ತು ಕಣ್ವಗೋತ್ರೋತ್ಪನ್ನವಾದ ಋಷಿಗಳ ಮಾಹಾತ್ಮ್ಯವನ್ನು ತಿಳಿಸುತ್ತದೆ. ಕಣ್ವಾಸಸ್ತ್ವಾ ಬ್ರಹ್ಮಭಿಃ ಸ್ತೋಮವಾಹಸಃ" (೮–೪–೨) ಇತ್ಯಾದಿ ವಾಕ್ಯಗಳು ಇಂದ್ರನಿಗೂ ಕಣ್ವರಿಗೂ ಇರುವ ನಿಕಟವಾದ ಸಂಬಂಧವನ್ನು ತಿಳಿಸುತ್ತದೆ. ಇಂದ್ರನು ಅನೇಕ ಸಂದರ್ಭಗಳಲ್ಲಿ ಕಣ್ವರ ಜೊತೆಯಲ್ಲಿಯೇ ಇರುವ ಅಂಶವೂ ತಿಳಿಯುತ್ತದೆ. "ಆ ತೂ ಷಿಂಚ ಕಣ್ವಮಂತಂ" (೮–೨–೨೨) ಇತ್ಯಾದಿಯಾಗಿ ಕಣ್ವಮಂತಂ ಎಂಬ ಪದವು ಇಂದ್ರನಿಗೆ ವಿಶೇಷಣವಾಗಿರುತ್ತದೆ. ಇಂತಹ ಸಂದರ್ಭಗಳು ಅನೇಕವಾಗಿವೆ.

ಕಣ್ವನಂತೆಯೇ, ಪ್ರಸ್ಕಣ್ವನೂ ಸಹ ಅಗ್ನ್ಯಾದಿಗಳನ್ನು ಪ್ರಶಂಸಿಸಿ ಸ್ತುತಿಗಳನ್ನು ನಿರ್ಮಿಸಿದ್ದಾನೆ. ಆದರೆ ಇಂತಹ ಪ್ರಶಂಸೆಗಳು ಎರಡು ಮಂತ್ರಗಳಲ್ಲಿ ಮಾತ್ರವಿರುತ್ತದೆ. ಇವುಗಳಲ್ಲಿ ಮೊದಲನೆಯದಾದ,

ಪ್ರಿಯಮೇಧವದತ್ರಿವಜ್ಜಾತವೇದೋ ವಿರೂಪವತ್ ।
ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥

(೧–೪೫–೩)

ಎಂಬ ಮಂತ್ರದಲ್ಲಿ ಪ್ರಸ್ಕಣ್ವನು ಕಣ್ವಪುತ್ರನೆಂದು ತಿಳಿಯುತ್ತದೆ.

ಸಾಯಣರೂ ಸಹ ಕಣ್ವಪುತ್ರನೆಂದೇ ಅರ್ಥಮಾಡಿದ್ದಾರೆ, ಇಲ್ಲಿ ಮಂತ್ರದ್ರಷ್ಟೃವಾದ ಋಷಿಯು "ಪ್ರಿಯಮೇಧಾದಿ ಋಷಿಗಳ ಸ್ತುತಿಗಳನ್ನು ಅಗ್ನಿಯು ಸ್ವೀಕರಿಸಿದಂತೆ" ತನ್ನ ಸ್ತುತಿಗಳನ್ನೂ ಸ್ವೀಕರಿಸಬೇಕೆಂದು ಪ್ರಾರ್ಥಿಸಿದ್ದಾನೆ ಎರಡನೆಯದು ಇಂದ್ರನಿರ್ದಿಷ್ಟವಾದುದು.

**ತತ್ತ್ವಾ ಯಾಮಿ ಸುವೀರ್ಯಂ ತದ್ಬ್ರಹ್ಮ ಪೂರ್ವಚಿತ್ತಯೇ ।**
**ಯೇನಾ ಯತಿಭ್ಯೋ ಭೃಗವೇ ಧನೇ ಹಿತೇ ಯೇನ ಪ್ರಸ್ಕಣ್ವಮಾವಿಥ ॥**

(ಋ. ಸಂ. ೮-೩-೯)

ಯತಿ, ಭೃಗು ಇತ್ಯಾದಿಗಳಿಗೆಲ್ಲಾ ರಕ್ಷಣೆಯನ್ನು ನೀಡಿದ ಇಂದ್ರನು ಪ್ರಸ್ಕಣ್ವನಿಗೂ ರಕ್ಷಣೆಯನ್ನು ನೀಡಬೇಕೆಂದು ಪ್ರಾರ್ಥಿಸಿದೆ.

ಇದಲ್ಲದೇ, ಅನೇಕ ಸಂದರ್ಭಗಳಲ್ಲಿ ಕಣ್ವಶಬ್ದವು ಒಂದು ತಮೋಯುತವಾದ ಶಕ್ತಿಯೆಂಬರ್ಥದಲ್ಲೂ ಪ್ರಯೋಗಿಸಿರುವ ಸಂದರ್ಭಗಳುಂಟು. (ಅ. ವೇ. ೨-೭-೫), ಆದರೆ ಪ್ರಕೃತದಲ್ಲಿ ಋಕ್ಸಂಹಿತೆಯಲ್ಲಿ ಎಂಟನೆಯ ಮಂಡಲದ ದ್ರಷ್ಟೃಗಳೂ ನಿರ್ಮಾಪಕನೂ ಆದ ಕಣ್ವ ಮತ್ತು ತತ್ಸಂತತಿಯ ವಿಷಯವು ಮಾತ್ರ ವಿಮರ್ಶಿಸಲ್ಪಡಬೇಕಾಗಿದೆ. ಪುರಾಣಾದಿಗಳಲ್ಲಿ ಕಣ್ವಋಷಿಯ ಹೆಸರು ಪ್ರಸಿದ್ಧವಾಗಿದ್ದರೂ, ಇತರ ಸಂಹಿತಾ ಮತ್ತು ಬ್ರಾಹ್ಮಣಾದಿಗಳಲ್ಲಿ ಈ ಹೆಸರು ಅಷ್ಟು ಪ್ರಸಿದ್ಧವಾಗಿಲ್ಲ. ಋಕ್ಸಂಹಿತೆಯಲ್ಲಿಯೂ ಕಣ್ವಶಬ್ದವು ಅನೇಕಸಲ ಸ್ತೋತೃಗಳೆಂದೇ ಸಾಧಾರಣವಾದ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇ ಶುಭಂ ।**
**ಕಣ್ವಾ ಅಭಿ ಪ್ರಗಾಯತ ॥**

(ಋ. ಸಂ. ೧-೩೭-೧)

ಇದು ಎರಡನೆಯ ಉದಾಹರಣೆಯು, ಇದರ ಅರ್ಥವು—

ಎಲೈ ಕಣ್ವಋಷಿಯ ವಂಶಸ್ಥರಾದ ಜನರೇ, ಮಹಾಬಲಶಾಲಿಗಳಾದ ಮರುದ್ದೇವತೆಗಳು ತಮ್ಮ ಶೋಭನಕರವಾದ ಮತ್ತು ಅಪ್ರತಿಹತವಾದ ರಥದಲ್ಲಿ ಕುಳಿತು ವಿಹರಿಸುತ್ತಿರುವರು, ಅಂತಹ ಮರುದ್ದೇವತೆಗಳ ಸಮೂಹವನ್ನು ಸ್ತೋತ್ರಾದಿಗಳಿಂದ ಚೆನ್ನಾಗಿ ಗುಣಗಾನಮಾಡಿರಿ.

**ಮರುತಃ** ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈ ರೀತಿ ಇರುವುದು—

**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ॥**

ಮಿತಂ ಎಂದರೆ ಸುಶ್ಲಿಷ್ಟವೆಂದರ್ಥವು. ಸುಶ್ಲಿಷ್ಟವಾಗಿ ಶಬ್ದಮಾಡುವುದರಿಂದ ಎಂದರೆ ಶಬ್ದಮಾಡುತ್ತಾ ಬೀಸುವುದರಿಂದ ಅಥವಾ ಚೆನ್ನಾಗಿ ಪ್ರಕಾಶಿಸುವುದರಿಂದ ಅಥವಾ ಬಹಳವಾಗಿ ಶಬ್ದಮಾಡುವುದರಿಂದ ಇವರಿಗೆ ಮರುತಃ ಎಂದು ಹೆಸರು. ಇಲ್ಲಿ ಕೆಲವರು ಮರುತೋ: ಮಿತರಾವಿಣೋ ವಾ ಎಂಬ ಸ್ಥಳದಲ್ಲಿ ಮರುತಃ ಅಮಿತರಾವಿಣಃ ಎಂದು ಪದಚ್ಛೇದ ಮಾಡಬೇಕೆಂದೂ ಹಾಗೆ ಮಾಡಿದರೆ ಅಮಿತ ಎಂದರೆ ಬಹಳವಾಗಿ, ರಾವಿಣಃ–ಶಬ್ದಮಾಡುವುದರಿಂದ ಎಂದರ್ಥಮಾಡುವರು. ಅದರಂತೆಯೇ ಅಮಿತರೋಚಿನಃ ಎಂದೂ ಪದಚ್ಛೇದಮಾಡಿ ಬಹಳ ಪ್ರಕಾಶವುಳ್ಳವರು ಎಂಬರ್ಥವನ್ನು ಹೇಳಬಹುದು.

ಮರುದ್ದೇವತೆಗಳು ಅನೇಕ ಸಂದರ್ಭಗಳಲ್ಲಿ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವರು. **ಮರುದ್ಭಿರಿಂದ್ರ ಸಖ್ಯಂತೇ ಅಸ್ತು** (ಋ. ಸಂ. ೮-೬೯-೭) ಎಂದು ಇಂದ್ರನ ಸ್ತುತಿಯಿರುವುದರಿಂದ ಇಂದ್ರನಂತೆ ಇವರಿಗೂ ಶ್ರೇಷ್ಠತೆ. ಇದೆ ಋಗ್ವೇದದಲ್ಲಿ

ಮೂವತ್ತುಮೂರು ಸೂಕ್ತಗಳು ಸಂಪೂರ್ಣವಾಗಿ ಮರುದ್ದೇವತಾಕವಾಗಿವೆ. ಇದಲ್ಲದೆ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವ ಏಳು ಸೂಕ್ತಗಳೂ, ಪೂಷಾ ಮತ್ತು ಅಗ್ನಿಯೊಡನೆ ಸ್ತುತಿಸಲ್ಪಡುವ ಒಂದೊಂದು ಸೂಕ್ತಗಳೂ ಇವೆ. ಈ ಮರುದ್ದೇವತೆಗಳು ಅನೇಕರಿರುವರು. ಕೆಲವು ಸ್ಥಳಗಳಲ್ಲಿ ತ್ರಿಸಪ್ತೈಃ (ಋ. ಸಂ. ೧೧-೩-೩೬) ಎಂದರೆ ಸಪ್ತಸಂಖ್ಯಾಕವಾದ ಮೂರು ವರ್ಗ ಅಥವಾ ಗುಂಪುಗಳೆಂದೂ, ಮತ್ತೆ ಕೆಲವು ಸ್ಥಳಗಳಲ್ಲಿ ತ್ರಿ ಷಷ್ಟಿಸ್ತ್ವಾ ಮರುತೋ (ಋ. ಸಂ. ೮-೯೬-೮) ಮೂರು ಅರವತ್ತು ಎಂದರೆ ನೂರಎಂಭತ್ತು ಮರುದ್ದೇವತೆಗಳಿರುವರೆಂದೂ ಹೇಳಿದೆ. ಇವರು ರುದ್ರರ ಪುತ್ರರೆಂದೂ ಆದುದರಿಂದ ಇವರಿಗೆ ರುದ್ರಿಯಾಃ ಎಂಬ ಹೆಸರಿನಿಂದ ಕರೆಯಲ್ಪಡುವರೆಂದು ಪ್ರಸಿದ್ಧಿಯು. ಈ ಮರುದ್ದೇವತೆಗಳಿಗೆ ಪೃಶ್ನಿಯು (ಸ್ವರ್ಗ ಲೋಕದ ಹಸುವು) ತಾಯಿಯೆಂದೂ ಆದುದರಿಂದ ಇವರು ಪೃಶ್ನಿಮಾತರಃ—ಎಂದರೆ ಪೃಶ್ನಿಯೇ ತಾಯಿಯಾಗಿವುಳ್ಳವರು ಎಂಬ ಅರ್ಥವಿರುವುದರಿಂದ ಪೃಶ್ನಿಮಾತರಃ ಎಂಬ ಹೆಸರಿನಿಂದಲೂ ಕರೆಯಲ್ಪಡುವರು. ಇಲ್ಲಿ ಪೃಶ್ನಿಯೆಂದರೆ ಮೇಘಗಳಾಗಿರ ಬಹುದು. ಮೇಘಗಳು ಮಳೆಯನ್ನು ಸುರಿಸುವಾಗ ಸಾಧಾರಣವಾಗಿ ಗಾಳಿಯು ವೇಗವಾಗಿಯೂ ಶಬ್ದಸಹಿತವಾಗಿಯೂ ಬೀಸುತ್ತಿರುವುದರಿಂದ ಈ ದೇವತೆಗಳಿಗೆ ಈ ಹೆಸರು ಬಂದಿರಬಹುದು. ಅಗ್ನಿಯಿಂದಲೂ ಮಿಂಚಿನಿಂದಲೂ ಇವರು ಉತ್ಪನ್ನ ರಾದವರೆಂದೂ ಮತ್ತು ವಾಯುವಿನಿಂದಲೂ, ಸ್ವರ್ಗದಿಂದಲೂ ಉತ್ಪನ್ನರಾದವರೆಂದೂ, ಸ್ವತಃ ಉತ್ಪನ್ನರೆಂದೂ ಅಲ್ಲಲ್ಲಿ ಹೇಳಿದೆ. ರೋದಸೀ ಎಂಬ ದೇವತೆಯು ಇವರ ಪತ್ನಿಯೆಂದೂ ಇಂದ್ರಾಣೀ ಮತ್ತು ಸರಸ್ವತಿಯರಿಗೂ ಇವರಿಗೂ ವಿಶೇಷ ಸಂಬಂಧವಿದೆ ಯೆಂದೂ ಅಲ್ಲಲ್ಲಿ ಸೂಚಿತವಾಗಿರುವುದು.

ಮರುದ್ದೇವತೆಗಳ ಸ್ಥಾನವು ಸ್ವರ್ಗಾಂತರಿಕ್ಷಭೂಮಿಗಳೆಂಬ ಮೂರು ಲೋಕಗಳು. ಸಿಡಿಲು ಮಿಂಚಿನೊಡನೆ ಸುರಿ ಯುವ ಮಳೆಯಲ್ಲಿ ಇವರ ಸಂಬಂಧವು ವಿಶೇಷವಾಗಿರುವುದರಿಂದ ಇವರು ಬಹಳ ಪ್ರಕಾಶಮಾನರಾದವರೆಂದು ಕರೆಯುವುದು ರೂಢಿಯಾಗಿದೆ. ಮಿಂಚೇ ಇವರ ಆಯುಧವಾಗಿರುವುದು. ಶಿರಸ್ಸು, ಪಾದಗಳು, ಹೃದಯ ಮೊದಲಾದ ಅವಯವಗಳಲ್ಲಿ ಸುವರ್ಣಾಭರಣಗಳನ್ನು ಧರಿಸಿರುವಂತೆಯೂ ಕೈಯಲ್ಲಿ ಚಿನ್ನದ ಕೊಡಲಿಯನ್ನು ಹಿಡಿದಿರುವಂತೆಯೂ ಇರುವ ವರ್ಣನೆ ಗಳನೇಕವಿವೆ. ಪೃಷತೀ ಅಥವಾ ಚುಕ್ಕೆಗಳಿಂದ ಕೂಡಿದ ಜಿಂಕೆಯನ್ನು (spotted deer) ಕಟ್ಟಿದ ರಥದಲ್ಲಿ ಕುಳಿತು ಸಂಚರಿಸುವ ವರ್ಣನೆಯೂ ಇದೆ.

ಈ ಮರುದ್ದೇವತೆಗಳು ದೊಡ್ಡವರು, ಶ್ರೇಷ್ಠರು, ತರುಣರು, ದುಷ್ಟಮೃಗಗಳಂತೆ ಕ್ರೂರರಾದವರ. ಆದರೆ ಮಕ್ಕಳಂತೆ ಆಟಪಾಟಗಳಲ್ಲಿ ಆಸಕ್ತರಾದವರು. ಅವರು ಸಂಚರಿಸುವ ರಭಸವು ಸಿಡಿಲಿನಂತೆ ಮಹಾಭಯಂಕರ ವಾಗಿರುವುದು. ಅವರು ತಮ್ಮ ಜತೆಯಲ್ಲಿಯೇ ವೃಷ್ಟಿಯನ್ನು ಎಂದರೆ ಮಳೆಯನ್ನು ತರುವರು. ಮರುದ್ವೃಧೇ ಎಂಬ ಪ್ರಸಿದ್ಧವಾದ ನದಿಯು ಇವರ ಸಾಹಸಕ್ಕೆ ಹೆಗ್ಗುರುತಾಗಿರುವುದು. ಇವರು ಉಂಟುಮಾಡುವ ವೃಷ್ಟಿಯು ಜೇನುತುಪ್ಪ, ಹಾಲು, ತುಪ್ಪ ಎಂದು ವಿಧವಿಧವಾದ ಹೆಸರುಗಳಿಂದ ಕರೆಯಲ್ಪಡುವುದು. ಇವರು ತಮ್ಮ ಜತೆಯಲ್ಲಿ ವೃಷ್ಟಿಯನ್ನು ತರುವುದ ಲ್ಲದೆ ಕತ್ತಲೆಯನ್ನು ಹೋಗಲಾಡಿಸುವರೆಂದು ಪ್ರಸಿದ್ಧಿಯು, ಇವರ ಗಾನವು ಇಂದ್ರನಿಗೆ ವೃತ್ರಾಸುರನ ಸಂಹಾರಕಾಲದಲ್ಲಿ ಶಕ್ತಿಯನ್ನು ಕೊಡುವುದು. ಕೆಲವು ವೇಳೆ ಇವರು ಸೋಮಪಾನ ಮಾಡುವರೆಂದೂ, ಗಾನಮಾಡುವರೆಂದೂ ಯಜ್ಞಗಳನ್ನು ಸಹ ಮಾಡುವರೆಂದೂ ವಿಧವಿಧವಾದ ಅನೇಕ ವರ್ಣನೆಗಳಿವೆ.

ಮರುದ್ದೇವತೆಗಳ ಮುಖ್ಯ ಪರಾಕ್ರಮವೆಂದರೆ ವೃತ್ರಾಸುರನನ್ನು ಸಂಹಾರಮಾಡುವಾಗ ಇಂದ್ರನಿಗೆ ಸಹಾಯ ಮಾಡುವುದೇ ಆಗಿದೆ. ಕೆಲವು ಕಡೆ ಇವರನ್ನು ಇಂದ್ರನ ಪುತ್ರರು ಅಥವಾ ಸಹೋದರರೆಂದು ಸಂಬೋಧಿಸಿದ್ದರೂ ಇಂದ್ರನಿಗೆ ಮುಖ್ಯವಾದ ಕೆಲವು ಸಂದರ್ಭದಲ್ಲಿ ಸಹಾಯಮಾಡದೆ ಕೈಬಿಟ್ಟರೆಂದೂ ಆದಕ್ಕಾಗಿ ಇಂದ್ರನು ಇವರ ಮೇಲೆ ಪ್ರತೀಕಾರ

ಕ್ರಮವನ್ನು ಕೈಗೊಂಡು ಸಂಹಾರಮಾಡಲುದ್ಯುಕ್ತನಾದನೆಂದೂ, ಅಗಸ್ತ್ಯಋಷಿಯು ಬಹಳ ಪ್ರಯತ್ನದಿಂದ ಇಂದ್ರನನ್ನು ಸಮಾಧಾನ ಮಾಡಬೇಕಾಯಿತೆಂದೂ ವರ್ಣಿಸಿರುವ ಒಂದೆರಡು ಸೂಕ್ತಗಳಿವೆ. (ಋ. ಸಂ. ೧–೧೬೫; ೧–೧೭೦)

ಮರುತ್ತುಗಳೊಡನೆ ರುದ್ರನು ಇರುವ ಸಂಬಂಧದಲ್ಲಿ ಈ ಮರುದ್ದೇವತೆಗಳು ತಮ್ಮ ಆಯುಧವನ್ನು (ಕೊಡಲಿ, ಭರ್ಜಿ) ಉಪಯೋಗಿಸಿರುವ ವರ್ಣನೆ ಇದೆ. (ಋ. ಸಂ. ೭–೫೬–೯; ೭–೫೬–೧೭; ೭–೫೭–೪; ೧–೧೬೧–೧; ೧–೧೬೨–೨ ೧–೧೬೪–೮; ೧–೬೪–೯)

ಯಜ್ಞಾನುಷ್ಠಾನಕರ್ಮಗಳ ವಿಷಯದಲ್ಲಿ ಅದರಲ್ಲಿಯೂ ಸೋಮಯಾಗದಲ್ಲಿ ಮರುದ್ದೇವತೆಗಳಿಗೂ ವಾಯು ದೇವತೆಗೂ ಅನೇಕ ವ್ಯತ್ಯಾಸಗಳಿವೆ. ವಾಯುವನ್ನು ಪ್ರಾತಸ್ಸವನದಲ್ಲಿಯೂ ಮರದ್ದೇವತೆಗಳನ್ನು ಮಾಧ್ಯಂದಿನ ಮತ್ತು ತೃತೀಯ ಸವನಗಳಲ್ಲಿಯೂ ಆಹ್ವಾನಮಾಡುವುದು ರೂಢಿಯಾಗಿದೆ. ಚಾತುರ್ಮಾಸ್ಯವೆಂಬ ಯಾಗದಲ್ಲಿ ಮರುದ್ದೇವತೆಗಳ ಪಾತ್ರವು ವಿಶೇಷವಾಗಿರುವುದು.

ಮರುದ್ದೇವತೆಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿಚಾರಮಾಡುವೆವು. ವಾಯುವಿಗೂ ಮರುತ್ತುಗಳಿಗೂ ಇರುವ ವ್ಯತ್ಯಾಸವೇನೆಂದರೆ—ವಾಯುವು ಸಾಧಾರಣವಾಗಿ ಬೀಸುವ ಗಾಳಿಯು; ಮರುತ್ತುಗಳು ವರ್ಷಾಕಾಲದಲ್ಲಿ ಗುಡುಗು, ಸಿಡಿಲು, ಮಿಂಚುಗಳಿಂದ ಕೂಡಿ ಮಳೆಯು ಹುಯ್ಯುವಕಾಲದಲ್ಲಿ ಮಹಾ ಆರ್ಭಟದೊಡನೆ ವೇಗವಾಗಿಯೂ, ಭಯಂಕರವಾಗಿಯೂ ಬೀಸುವ ಗಾಳಿಯು. ಆದುದರಿಂದಲೇ ಮರುದ್ದೇವತೆಗಳು ಪ್ರಕಾಶಮಾನರೆಂದೂ, ಶಬ್ದ ಮಾಡುವರೆಂದೂ, ಕ್ರೂರರಾದವರೆಂದೂ, ಬಹಳ ಶಕ್ತಿ ಸಾಮರ್ಥ್ಯಗಳುಳ್ಳವರೆಂದೂ, ಅಂತರಿಕ್ಷದ (ಸ್ವರ್ಗದ) ಪುತ್ರರೆಂದೂ, ಅಂತರಿಕ್ಷದಲ್ಲಿ ಸದಾ ಬೀಸುತ್ತಿರುವುದರಿಂದ ಯಾವಾಗಲೂ ಕ್ರೀಡೆಗಳಲ್ಲಿ (ಆಟಗಳಲ್ಲಿ) ಆಸಕ್ತರಾದವರೆಂದೂ ವಿಧವಿಧವಾದ ವರ್ಣನೆಗಳು ಕಂಡುಬರುವವು.

**ಕ್ರೀಳಂ—ವಿಹರಣಶೀಲಂ** । ಆಟವಾಡುವ ಸ್ವಭಾವವುಳ್ಳ, ಆಟಪಾಟಗಳಲ್ಲಿ ಆಸಕ್ತರಾದ, ವಿಹರಾದಿಗಳಲ್ಲಿ ತೊಡಗಿರುವ ಇತ್ಯಾದಿ.

**ಶರ್ಧಃ**—ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶರ್ಧಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩–೯) ಶರ್ಧಃ ಎಂದರೆ ಬಲವನ್ನು ಅಥವಾ ಸಾಹಸವನ್ನು ಎಂದರ್ಥವು.

**ಮಾರುತಂ—ಮರುತ್ಸಮೂಹಂ** । ಮರುದ್ದೇವತೆಗಳು ಯಾವಾಗಲೂ ಅನೇಕರಿರುವುದರಿಂದ ಇವರನ್ನು ಬಹುವಚನದಲ್ಲಿಯೇ ಸಂಬೋಧಿಸಲಾಗಿರುವುದು. ಇಲ್ಲಿ ಮಾರುತಂ ಎಂಬ ಏಕವಚನ ಶಬ್ದಕ್ಕೆ ಮರುದ್ದೇವತೆಗಳ ಸಮೂಹವು ಎಂದರ್ಥವು.

**ಅನರ್ವಾಣಂ—ಭ್ರಾತೃವ್ಯರಹಿತಂ,** ಎಂದರೆ ಶತ್ರುರಹಿತರಾದವರು ಈ ಶಬ್ದಕ್ಕೆ ಈ ಅರ್ಥವು ಹೇಗೆ ಅನ್ವಯಿಸುವುದೆಂಬುದನ್ನು ತೋರಿಸುವುದಕ್ಕಾಗಿ ಭಾಷ್ಯಕಾರರು—**ಅನರ್ವಾ ಪ್ರೇಹೀತ್ಯಾಹ । ಭ್ರಾತೃವ್ಯೋ ವಾ ಭ್ರಾತೃವ್ಯಾಸನುತ್ಯ॥** ಅರ್ವಾ ಎಂದರೆ ಕುದುರೆಯು. ಅನರ್ವಾ ಎಂದರ ಕುದುರೆ ಇಲ್ಲದವರು. ಕುದುರೆಯಿಲ್ಲದ ಮರುದ್ದೇವತೆಗಳೆಂದರೆ, ಮರುದ್ದೇವತೆಗಳ ರಥಕ್ಕೆ ಕುದುರೆಗಳನ್ನು ಕಟ್ಟದೆ ಅವಕ್ಕೆ ಬದಲಾಗಿ **ಪೃಷತೀ** ಎಂಬ ಜಿಂಕೆಗಳನ್ನು ಕಟ್ಟುವುದರಿಂದ ಇವರನ್ನು ಅನರ್ವಾಣಂ ಎಂದು ಕರೆಯಲಾಗಿದೆ ಎಂದಭಿಪ್ರಾಯಪಡುವರು.

**ರಥೇಶುಭಂ**—ಸ್ವಕೀಯವಾದ ರಥದಲ್ಲಿ ಕುಳಿತು ಶೋಭಿಸುವ ಎಂದರ್ಥವು.

ಕಣ್ವಾಃ— ಕಣ್ವರು ಎಂದರೆ ಕಣ್ವಋಷಿಯ ವಂಶದಲ್ಲಿ ಉತ್ಪನ್ನರಾದವರು,

ಅಭಿ ಪ್ರಗಾಯತ—ಎಲ್ಲರೂ ಒಟ್ಟಾಗಿ ಸೇರಿ ಉಚ್ಚಸ್ವರದಿಂದ ಮರುದ್ದೇವತೆಗಳ ಗುಣಗಾನಮಾಡಿರಿ ಎಂದಭಿಪ್ರಾಯವು.

**ಉಪಪ್ರೇತ ಕುಶಿಕಾಶ್ಚೇತಯಧ್ವಮಶ್ವಂ ರಾಯೇ ಮುಂಚತಾ ಸುದಾಸಃ ।**
**ರಾಜಾ ವೃತ್ರಂ ಜಂಘನತ್ಪ್ರಾಗಪಾಗುದಗಥಾ ಯಜಾತೇ ವರ ಆ ಪೃಥಿವ್ಯಾಃ ॥**

(ಋ. ಸಂ. ೩–೫೩–೧೧)

ಇದು ಮೂರನೆಯ ಉದಾಹರಣೆಯು, ಇದರ ಅರ್ಥವು–

ಕುಶಿಕವಂಶೋತ್ಪನ್ನರಾದ ಎಲೈ ಋಷಿಗಳೇ, ಅಶ್ವದ ಸಮೀಪಕ್ಕೆ ಹೋಗಿ ಅಶ್ವರಕ್ಷಕರನ್ನು ಸಾವಧಾನಚಿತ್ತರಾಗಿರುವಂತೆ ಮಾಡಿರಿ. ದೇವತೆಗಳಲ್ಲೆಲ್ಲಾ ಪ್ರಭುವಾದ ಇಂದ್ರನು ಯಜ್ಞಕರ್ಮಕ್ಕೆ ವಿಘ್ನವನ್ನುಂಟುಮಾಡುವ ವೃತ್ರಾಸುರನನ್ನು ಪೂರ್ವಾದಿಸಮಸ್ತದಿಕ್ಕಿನಲ್ಲಿಯೂ ನಾಶಪಡಿಸಿದ್ದಾನೆ, ಆದುದರಿಂದ ನೀವು ಕೊಂಚವೂ ಭಯವಿಲ್ಲದೆ ಸುದಾಸನೆಂಬ ರಾಜನ್ನ ಅಶ್ವವನ್ನು ಧನಸಂಪಾದನೆಗಾಗಿ ಸಡಿಲಿಸಿಬಿಡಿರಿ. ಅನಂತರ ಪೃಥಿವಿಯ ಉತ್ತಮವಾದ ಪ್ರದೇಶದಲ್ಲಿ ನಿರ್ಭೀತರಾಗಿ ಯಜ್ಞ ಮಾಡಿರಿ.

ಈ ಋಕ್ಕಿನಲ್ಲಿ ಸುದಾಸನೆಂಬ ರಾಜನು ವಿಶ್ವಾಮಿತ್ರನ ಸಹಾಯದಿಂದ ಅಶ್ವಮೇಧಯಾಗವನ್ನು ಮಾಡಿದ ವಿಷಯಕವಾದ ವರ್ಣನೆ ಇದೆ.

**ಕುಶಿಕಾಃ ಉಪ ಪ್ರ ಇತ ಚೇತಯಧ್ವಂ—ಕುಶಿಕಗೋತ್ರೋತ್ಪನ್ನಾ ಪುತ್ರಾ ಅಶ್ವಸ್ಯ ಸಮೀಪೇ ಗಚ್ಛತ। ಗತ್ವಾ ಚ ಸಾವಧಾನಾ ಭವತ। ಅಶ್ವರಕ್ಷಿಣಃ ಸಾವಧಾನಾನ್ ಕುರುತ।** ವಿಶ್ವಾಮಿತ್ರಋಷಿಯು ಕುಶಿಕಗೋತ್ರೋತ್ಪನ್ನರಾದ ತನ್ನ ಪುತ್ರರನ್ನೂ ಬಂಧುಗಳನ್ನೂ ಸಂಬೋಧಿಸಿ ಈರೀತಿ ಹೇಳುವನು—ಎಲೈ ಕುಶಿಕಗೋತ್ರೋದ್ಭವರಾದ ಪುತ್ರಾದಿಗಳೇ ನಾನು ಹೇಳುವ ಮಾತನ್ನು ಕೇಳಿ. ಈ ಸುದಾಸರಾಜನು ಮಾಡುತ್ತಿರುವ ಅಶ್ವಮೇಧಯಾಗದಲ್ಲಿ ಯಜ್ಞಾಶ್ವದ ಸಮೀಪಕ್ಕೆ ಹೋಗಿ ಅಲ್ಲಿ ಎಚ್ಚರಿಕೆಯಿಂದ ಇದ್ದು ಅದನ್ನು ರಕ್ಷಿಸುವುದಕ್ಕೆ ಸಹಾಯ ಮಾಡಿರಿ.

**ಸುದಾಸಃ ಅಶ್ವಂ ರಾಯೇ ಪ್ರ ಮುಂಚತ**—ಧನಲಾಭಕ್ಕಾಗಿ ಮಾಡಿದ ಸುದಾಸನ ಯಜ್ಞದಲ್ಲಿ (ಅಥವಾ ಜೈತ್ರಯಾತ್ರೆಯಲ್ಲಿ) ಯಜ್ಞಾಶ್ವವನ್ನು ಸಂಚಾರಾರ್ಥವಾಗಿ ಬಿಡಿರಿ ಎಂಬ ವಿಷಯದಲ್ಲಿ ವಿವರಣೆಯು ಅವಶ್ಯಕವಾಗಿದೆ. ಅಶ್ವಮೇಧವೆಂಬ ಯಜ್ಞವನ್ನು ಕ್ಷತ್ರಿಯರಾದ ರಾಜರು ಮಾತ್ರವೇ ಮಾಡುವ ಯಾಗವು. ಈ ಯಾಗವನ್ನು ಮಾಡುವುದಕ್ಕೆ ಬಹಳವಾಗಿ ದ್ರವ್ಯವು ಬೇಕಾಗುವುದು. ಆದುದರಿಂದ ಯಜ್ಞಮಾಡುವ ರಾಜನು ಯಜ್ಞದೀಕ್ಷೆಯನ್ನು ಕೈಗೊಂಡು ಯಜ್ಞಾಶ್ವವನ್ನು ವಿಧ್ಯುಕ್ತಪೂಜಾದಿಗಳಿಂದ ಉಪಚರಿಸಿ ಅದನ್ನು ಒಂದು ವರ್ಷಕಾಲದವರೆಗೆ ಸ್ವೇಚ್ಛೆಯಾಗಿ ಸಂಚಾರಮಾಡಲು ಬಿಡುವನು. ಆ ಅಶ್ವವನ್ನನುಸರಿಸಿ ರಾಜನ ಕಡೆಯವರು ಸೈನ್ಯಸಮೇತವಾಗಿ ಹೊರಟು ಅಶ್ವವು ಯಾವ ಯಾವ ದೇಶಗಳಿಗೆ ಹೋಗುವುದೋ ಆ ದೇಶದ ರಾಜರುಗಳನ್ನು ಗೆದ್ದು ಅವರಿಂದ ಕಪ್ಪಕಾಣಿಕೆಗಳನ್ನು ಸಂಗ್ರಹಿಸುತ್ತಾ ಒಂದು ಸಂವತ್ಸರಾನಂತರ ಸ್ವದೇಶಕ್ಕೆ ಬಂದು ಸೇರುವರು. ಅದುವರೆಗೂ ರಾಜನು ಬ್ರಹ್ಮಚರ್ಯಾದಿನಿಯಮದಿಂದಿದ್ದು ಅಶ್ವವು ಹಿಂತಿರುಗಿ ಬಂದ ಬಳಿಕ ಯಜ್ಞವನ್ನು ನೆರವೇರಿಸುವುದು ಪದ್ಧತಿಯಾಗಿದೆ. ಈ ವಿಷಯವನ್ನೇ ಇಲ್ಲಿ—**ರಾಯೇ ಅಶ್ವಂ ಪ್ರ ಮುಂಚತ**—ಅಶ್ವವನ್ನು ಧನಾರ್ಜನೆಗಾಗಿ ಬಿಡಿ ಎಂಬ ವಾಕ್ಯದಿಂದ ಸೂಚಿಸಲಾಗಿದೆ. ಇದು ಪಿಜವನಪುತ್ರನಾದ ಸುದಾಸನೆಂಬ ರಾಜನು ಧನಲಾಭಕ್ಕಾಗಿ ಕೈಗೊಂಡ ದಿಗ್ವಿಜಯವರ್ಣನೆಯೂ ಆಗಿರುವುದು. ಈ ಋಕ್ಕಿನ ಉತ್ತರಾರ್ಧದ ಅರ್ಥವು ಸ್ಪಷ್ಟವಾಗಿರುವುದು.

**ಅಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವ-ನಾಮ್ನಾ ॥ ಯಥೈತದಿಂದ್ರೋ ವೈಕುಂಠೋ ಲಬಸೂಕ್ತಂ ವಾಗಾಂಭೃಣೀಯಮಿತಿ ॥**

ಆಧ್ಯಾತ್ಮಿಕ—ಸ್ತುತಿಸಲ್ಪಡುವ ದೇವತೆಗಳೇ ತಾವು ಮಾತನಾಡಿದಂತೆ ಉತ್ತಮಪುರುಷ ಪ್ರಯೋಗದಿಂದ ವಾಕ್ಯಗಳನ್ನು ಹೇಳಿರುವುದು. ಸರ್ವನಾಮಪ್ರದ ಮತ್ತು ಉತ್ತಮಪುರುಷಪ್ರಯೋಗದಿಂದ ಸಹಿತವಾದ ಋಕ್ಕುಗಳು ಆಧ್ಯಾತ್ಮಿಕವೆನಿಸುವುವು. ಅಹಂ ಎಂಬ ಸರ್ವನಾಮಪದದಿಂದಲೂ ಸಹಿತವಾದ ಋಕ್ಕುಗಳು ಆಧ್ಯಾತ್ಮಿಕವು. ಈ ವಿಷಯದಲ್ಲಿ ಇಂದ್ರೋ ವೈಕುಂಠ ಎಂಬ ಋಷಿದೃಷ್ಟವಾದ ವಾಗಾಂಭೃಣೀಸೂಕ್ತವೇ ಉದಾಹರಣೆಯು. ವಿಕುಂಠಾ ಎಂಬ ಓರ್ವ ಅಸುರ ಸ್ತ್ರೀ ಇದ್ದಳು. ಅವಳು ತಪಸ್ಸು ಮಾಡಿ ಇಂದ್ರನನ್ನೆ ಪುತ್ರನನ್ನಾಗಿ ಪಡೆದಳು. ಆ ಪುತ್ರನಿಗೆ ವೈಕುಂಠ ಎಂದು ಹೆಸರಾಯಿತು. ಈ ಪುತ್ರನು ತನ್ನ ಆತ್ಮಪ್ರಶಂಸೆಯನ್ನೇ ಈ ಸೂಕ್ತದಲ್ಲಿ ಹೇಳಿಕೊಂಡಿರುವನು. ಇದನ್ನು ವಾಗಾಂಭೃಣೀಯ ಸೂಕ್ತವೆಂದೂ ಹೇಳುವರು. ಉದಾಹರಣೆಗಾಗಿ ಇಲ್ಲಿ ಈ ಸೂಕ್ತದ ಒಂದು ಋಕ್ಕನ್ನು ಮಾತ್ರ ಕೊಟ್ಟಿರುತ್ತೆ.

**ಅಹಂ ಭುವಂ ವಸುನಃ ಪೂರ್ವ್ಯಸ್ಪತಿರಹಂ ಧನಾನಿ ಸಂಜಯಾಮಿ ಶಶ್ವತಃ ।**
**ಮಾಂ ಹವಂತೇ ಪಿತರಂ ನ ಜಂತವೋಽಹಂ ದಾಶುಷೇ ವಿಭಜಾಮಿ ಭೋಜನಂ ॥**

(ಋ. ಸಂ. ೧೦–೪೮–೧)

ಇದು ಮೊದಲನೆಯ ಉದಾಹರಣೆಯು. ಇದರ ಅರ್ಥವು—

ಇಂದ್ರನಾದ ನಾನು ಧನಕ್ಕೆಲ್ಲಾ ಮುಖ್ಯವಾದ ಎಂದರೆ ಏಕಮಾತ್ರ ಅಧಿಪತಿಯಾಗಿದ್ದೇನೆ. ಶತ್ರುಗಳ ಧನಗಳನ್ನು ಗೆದ್ದು ತರುತ್ತೇನೆ. ಸಮಸ್ತ ಪ್ರಾಣಿಗಳೂ ಎಂದರೆ ಯಜ್ಞಮಾಡುವ ಯಜಮಾನರೂ, ಪುತ್ರರೂ ತಮ್ಮ ತಂದೆಯನ್ನು ಪ್ರೀತ್ಯಾದರಗಳಿಂದ ಕರೆಯುವಂತೆ ನನ್ನನ್ನು ಕರೆಯುತ್ತಾರೆ. ನನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಭೋಗಯೋಗ್ಯವಾದ ಅನ್ನವನ್ನು ಒದಗಿಸಿಕೊಡುತ್ತೇನೆ.

**ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ ।**
**ಕುವಿತ್ಸೋಮಸ್ಯಾಪಾಮಿತಿ ॥ ೧ ॥**

(ಋ. ಸಂ. ೧೦–೧೧೯–೧)

ಇದು ಎರಡನೆಯ ಉದಾಹರಣೆಯು. ಇದರ ಅರ್ಥವು—

(ಇಂದ್ರನ ವಾಕ್ಯವು) ನಾನು ಅನೇಕಾವರ್ತಿ ಸೋಮಪಾನ ಮಾಡಿದ್ದೇನೆ. ಅದರಿಂದ ಹರ್ಷಗೊಂಡ ನಾನು ನನ್ನನ್ನು ಸ್ತೋತ್ರಮಾಡುವ ಜನರಿಗೆ ಈಪ್ರಕಾರವಾಗಿ ಗೋವನ್ನೂ ಅಶ್ವವನ್ನೂ ಕೊಡುತ್ತೇನೆ. ಹೀಗೆ ಕೊಡಬೇಕೆಂಬುದಾಗಿಯೇ ನನ್ನ ಮನಸ್ಸಿನಲ್ಲಿದೆ.

ಈ ಸೂಕ್ತಕ್ಕೆ ಲಬನೆಂಬುವನು ಋಷಿಯು. ಒಂದು ಸಮಯದಲ್ಲಿ ಲಬಋಷಿಯ ಆಶ್ರಮದಲ್ಲಿ ಇಂದ್ರನು ಲಬ ಋಷಿಯ ರೂಪವನ್ನೇ ಧರಿಸಿ ಸೋಮಪಾನಮಾಡಿದನು. ಅದನ್ನು ಇತರ ಋಷಿಗಳು ನೋಡಿದರು. ಆಗ ಲಬರೂಪದಿಂದಿದ್ದ ಇಂದ್ರನು ಈ ಸೂಕ್ತದಿಂದ ತನ್ನನ್ನೇ ಪ್ರಶಂಸೆ ಮಾಡಿಕೊಂಡಿರುವನು.

# ನಲವತ್ತೊಂಭತ್ತನೆಯ ಸೂಕ್ತ

**ಪೀಠಿಕೆ**

ಈ ಸೂಕ್ತದಲ್ಲಿಯೂ ಇಂದ್ರನು ತನ್ನ ಸಾಹಸಕೃತ್ಯಗಳನ್ನು ಪ್ರಶಂಸೆ ಮಾಡಿಕೊಂಡಿದ್ದಾನೆ
ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

**ವೃತ್ರಾಸುರವಧವರ್ಣನೆ**

ವೃತ್ರಾಸುರನು ದುಷ್ಟ ಸ್ವಭಾವದವನು. ಇವನ ಸ್ವಭಾವವು ಯಾರಿಗೂ ತಿಳಿಯದು ಇವನಿಗೆ ಯಾವ ಉತ್ತಮ ಪರಿಜ್ಞಾನವೂ ಇಲ್ಲ. ಯಾವಾಗಲೂ ಉದಕಗಳನ್ನು ಅಡ್ಡಗಟ್ಟಿ ಮಲಗಿರುವುದೇ ಇವನ ಸ್ವಭಾವ. ಇಂತಹ ನೀಚ ಸ್ವಭಾವವುಳ್ಳ ವೃತ್ರನನ್ನು ಇಂದ್ರನು ಪೌರ್ಣಮಾಸಿಯದಿವಸ ವಜ್ರಾಯುಧದಿಂದ ಸಂಹರಿಸಿದನೆಂದು ವರ್ಣನೆ ಇದೆ. ಈ ವಿಷಯದಲ್ಲಿ ಭಾಷ್ಯಕಾರರು—

ತೈತ್ತಿರೀಯಸಂಹಿತಾವಾಕ್ಯವನ್ನುದಾಹರಿಸಿ ಅದರಲ್ಲಿ ಇಂದ್ರನು ವೃತ್ರನನ್ನು ಪೌರ್ಣಮಾಸಿಯ ದಿನದಲ್ಲಿ ಸಂಹಾರ ಮಾಡಿರುವ ವಿಷಯವು ಉಕ್ತವಾಗಿದೆಯೆಂದು ತಿಳಿಸಿದಾರೆ. ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ಎಲ್ಲಾ ಋಷಿಗಳೂ ಪ್ರಶಂಸೆ ಮಾಡಿರುವುದರಿಂದ ಆ ವೃತ್ರಹನನದ ವಿಸ್ತಾರವಾದ ವಿವರಣೆಯನ್ನು ಇಲ್ಲಿ ಹೇಳುವುದು ಆವಶ್ಯಕವು. ಆದುದರಿಂದ ಆ ವಿವರವನ್ನು ತಿಳಿಸುವ ಯಜುರ್ವೇದದ ಮಂತ್ರಭಾಗವನ್ನೂ ಅದರ ಅರ್ಥಾನುವಾದವನ್ನೂ ಇಲ್ಲಿ ವಿವರಿಸಿದೇದೆ—

ತ್ವಷ್ಟಾ ಹತಪುತ್ರೋ ವೀಂದ್ರೆಗ್ಂ ಸೋಮಮಾಹರತ್ತಸ್ಮಿನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ಯದ, ವರ್ತಯತ್ತದ್ವೃತ್ರಸ್ಯ ವೃತ್ರತ್ವಂ ಯದಬ್ರವೀತ್ಸ್ವಾಹೇಂದ್ರಶತ್ರುರ್ದರ್ಧಸ್ವೇತಿ ತಸ್ಮಾದಸ್ಯೇಂದ್ರಃ ಶತ್ರುರ ಭವತ್ಸ ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನವೃಣೋದ್ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂ-ದ್ರೋಽಬಿಭೇತ್ ॥

(ತೈ. ಸಂ. ೨–೫–೨–೧)

ಈ ಅನುವಾಕದಲ್ಲಿ ಇಂದ್ರನು ವೃತ್ರನನ್ನು ಸಂಹರಿಸಿದ ವಿವರವು ಉಕ್ತವಾಗಿದೆ. ಈ ಕಥಾಸಂದರ್ಭಕ್ಕೆ ಹಿನ್ನೆಲೆಯಾಗಿ ಇನ್ನೊಂದು ಉಪಾಖ್ಯಾನವಿರುವುದು. ಅದನ್ನು ನಾವು ಹಿಂದೆ ವಿವರಿಸಿರುವೆವಾದರೂ ಇಲ್ಲಿ ಮುಂದಿನ ವಿವರಣೆಗೆ ಇನ್ನೊಂದು ಉಪಾಖ್ಯಾನವನ್ನು ಪೀಠಿಕಾರೂಪವಾಗಿ ಸೂಕ್ಷ್ಮರೀತಿಯಿಂದ ವಿವರಿಸುವುದು ಅವಶ್ಯಕವು. ಪೂರ್ವದಲ್ಲಿ ತ್ವಷ್ಟೃ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದನು. ಆದರೂ ಇವನು ಅಸುರಸ್ತ್ರೀಯಲ್ಲಿ ಜನ್ಮಿಸಿದವನಾದ್ದರಿಂದ ಇವನಿಗೆ ಅಸುರರ ವಿಷಯದಲ್ಲಿ ವಿಶೇಷವಾಗಿ ಅಭಿಮಾನವಿತ್ತು. ಹೀಗಿರುವಾಗ ಈ ವಿಶ್ವರೂಪನು ನಮಗೆ ಪುರೋಹಿತನಾಗಿದ್ದರೂ ಅಸುರ ಪಕ್ಷಪಾತಿಯಾದ್ದರಿಂದ ಸಮಯ ಸಾಧಿಸಿ ಅಸುರರಿಗೆ ಸಹಾಯಮಾಡುತ್ತಾ ದೇವತೆಗಳಿಗೆ ರಾಜ್ಯವೇ ಇಲ್ಲದಂತೆ ಒಳಸಂಚು

ನಡೆಸಬಹುದೆಂದು ಇಂದ್ರನು ಹೆದರಿದನು. ಆದ್ದರಿಂದ ಇಂದ್ರನು ಇವನನ್ನು ಉಪಾಯಾಂತರದಿಂದ ಸಂಹಾರಮಾಡಿದನು. ಈ ವಿಷಯವನ್ನೇ ಇಲ್ಲಿ **ತ್ವಷ್ಟಾ ಹತಪುತ್ರಂ ವೀಂದ್ರಗ್ಂ ಸೋಮಮಾಹರತ್** ಎಂಬ ವಾಕ್ಯದಿಂದ ಹೇಳಲಾಗಿದೆ. ತನ್ನ ಮಗನನ್ನು ಕೊಂದನೆಂದು ಕೋಪದಿಂದ ತ್ವಷ್ಟೃವು ತಾನು ಯಜ್ಞಮಾಡುವಾಗ ಇಂದ್ರನನ್ನು ಯಜ್ಞದಲ್ಲಿ ಆಹ್ವಾನ ಮಾಡದೆ ಅವನನ್ನು ಬಿಟ್ಟೇ ಯಜ್ಞಮಾಡಿದನು. ಅವನಿಗೆ ಪಾನಾರ್ಥವಾಗಿ ಸೋಮವನ್ನೂ ಕೊಡಲಿಲ್ಲ. ಆದರಿಂದ ಕೋಪಗೊಂಡ ಇಂದ್ರನು ಅವನ ಯಜ್ಞಕ್ಕೆ ಬಂದು ಯಜ್ಞಕ್ಕೆ ವಿಘ್ನವನ್ನುಂಟುಮಾಡಿದ್ದಲ್ಲದೆ ಯಜ್ಞಕ್ಕಾಗಿ ಸಿದ್ಧಪಡಿಸಿಟ್ಟದ್ದ ಸೋಮರಸವನ್ನು ಬಲಾತ್ಕಾರವಾಗಿ ಪಾನಮಾಡಿದನು. ಇದನ್ನು ನೋಡಿ ತ್ವಷ್ಟೃವು ಇಂದ್ರನಿಗೆ ತಕ್ಕ ಪ್ರತೀಕಾರಮಾಡ ಬೇಕೆಂದು ಯೋಚಿಸಿ ಇಂದ್ರನು ಕುಡಿದು ಮಿಕ್ಕ ಸೋಮರಸವನ್ನು ಅಹವನೀಯಾಗ್ನಿಯಲ್ಲಿ ಸುರಿದು **ಸ್ವಾಹೇಂದ್ರ ಶತ್ರುರ್ವರ್ಧಸ್ವ**—ಇಂದ್ರನನ್ನು ಜಯಿಸುವ ಮತ್ತು ಇಂದ್ರನಿಗೇ ಶತ್ರುವಾದ ಪುತ್ರನುಂಟಾಗಲೀ ಎಂದು ಅಗ್ನಿಯನ್ನು ಪ್ರಾರ್ಥಿಸುತ್ತಾ ಸೋಮಶೇಷವನ್ನು ಅಗ್ನಿಯಲ್ಲಿ ಹೋಮಮಾಡಿದನು. ಹೀಗೆ ಹೋಮಮಾಡುವಾಗ ಮಂತ್ರದಲ್ಲಿ ಸ್ವರ ವ್ಯತ್ಯಾಸವಾದುದರಿಂದ ಇಂದ್ರನನ್ನು ಜಯಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಜಯಿಸಲ್ಪಡುವ ಪುತ್ರನಾದನು. ಈ ಪುತ್ರನೇ ವೃತ್ರನು. ಇದೇ ಇವನ ಉತ್ಪತ್ತಿಯ ಕ್ರಮವು. ಯಜ್ಞಾದಿಗಳಲ್ಲಿ ಮಂತ್ರಪಠನಮಾಡುವಾಗ ಸ್ವರವ್ಯತ್ಯಾಸ ವಾದರೆ ಯಜಮಾನನಿಗೆ ಹಾನಿಯುಂಟಾಗುವುದೆಂದು—

**ದುಷ್ಟಃ ಶಬ್ದಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥**

(ಪಾಣಿನೀಯಶಿಕ್ಷಾ)

ಪಾಣಿನಿಮಹರ್ಷಿಯು ಈ ಮಂತ್ರವನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡು ಹೇಳಿರುವರು. ಹೀಗೆ ಮಂತ್ರದ ಸ್ವರ ವ್ಯತ್ಯಾಸದಿಂದ ತ್ವಷ್ಟೃವಿಗೆ ತನಗೆ ಬೇಕಾದ ಇಂದ್ರನನ್ನು ನಿಗ್ರಹಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಸಂಹೃತನಾಗುವ ಪುತ್ರನು ಜನಿಸಿದನು. ಆದರೂ ಆ ವೃತ್ರನು. ಅಗ್ನಿಯಲ್ಲಿ ಅಗ್ನಿ ಮತ್ತು ಸೋಮದೇವತೆಗಳನ್ನು ಉದ್ದೇಶಿಸಿ ಮಾಡಿದ ಹವಿಸ್ಸಿನಿಂದ ವೃದ್ಧಿಯನ್ನೈದುತ್ತಾ ಬಂದನು. ಅವನು ಪ್ರತಿದಿನವೂ ಒಂದು ಬಿಲ್ಲಿನ ಪ್ರಮಾಣದಂತೆ ಬೆಳೆಯುತ್ತಾ ದೊಡ್ಡ ಆಕಾರವುಳ್ಳವನಾಗಿ ಈ ಲೋಕಗಳನ್ನೆಲ್ಲಾ ಎಲ್ಲೆಲ್ಲಿಯೂ ವ್ಯಾಪಿಸಿದನು ಹೀಗೆ ಸರ್ವಪ್ರದೇಶಗಳನ್ನೂ ವ್ಯಾಪಿಸುವ ಸ್ವಭಾವ ವುಳ್ಳವನಾದ್ದರಿಂದ ವೃತ್ರನಿಗೆ ವೃತ್ರನೆಂದು ಹೆಸರಾಯಿತು. ಆಚ್ಛಾದಿಸು, ಮುಚ್ಚು, ವ್ಯಾಪಿಸು ಎಂಬರ್ಥವುಳ್ಳ ವೃಞ್-ವರಣೇ ಎಂಬ ಧಾತುವಿನಿಂದ ವೃತ್ರ, ಶಬ್ದವು ನಿಷ್ಪನ್ನವಾಗಿ ಇವನು ಸರ್ವವನ್ನೂ ವ್ಯಾಪಿಸುವವನು ಎಂಬ ಅನ್ವರ್ಥನಾಮವನ್ನು ಸೂಚಿಸುವುದು. ವೃತ್ರನ ಈ ವಿಧವಾದ ಬೆಳವಣಿಗೆಯನ್ನು ಕಂಡು ಇಂದ್ರನು ಹೆದರಿದನು.

**ಸ ಪ್ರಜಾಪತಿಮುಪಾಧಾವಚ್ಛತ್ರುರ್ಮೇಽಜನೀತಿ ತಸ್ಮೈ ವಜ್ರಗ್ಂ ಸಿಕ್ತ್ವಾಽಪ್ರಾಯಚ್ಛದೇತೇನ ಜಹೀತಿ ತೇನಾಭ್ಯಾಯತ ॥**

(ತೈ. ಸಂ. ೨-೪-೨-೯)

ಬಳಿಕ ಇಂದ್ರನು ಪ್ರಜಾಪತಿಯ ಸಮೀಪಕ್ಕೆ ಹೋಗಿ ಎಲೈ ಬ್ರಹ್ಮನೇ, ನನಗೆ ಒಬ್ಬ ಶತ್ರುವು ಜನಿಸಿರುವನು. ಅವನನ್ನು ಸಂಹರಿಸುವ ಬಗೆ ಹೇಗೆ ಎಂದು ಪ್ರಾರ್ಥಿಸಲು, ಪ್ರಜಾಪತಿಯು ಇಂದ್ರನನ್ನು ಹೆದರಬೇಡವೆಂದು ಸಂತೈಸಿ ಅವನ ವಜ್ರಾಯುಧ ವನ್ನು ಹರಿತವನ್ನಾಗಿ ಮಾಡಿಕೊಟ್ಟು ಈ ಆಯುಧದಿಂದ ನಿನ್ನ ಶತ್ರುವನ್ನು ಸಂಹರಿಸೆಂದು ಹೇಳಲು ಇಂದ್ರನು ಅದನ್ನು ತೆಗೆದು ಕೊಂಡು ವೃತ್ರನ ಬಳಿಗೆ ಬಂದನು.

ತಾವಬ್ರೂತಾಮಗ್ನೀಷೋಮೌ ಮಾ ಪ್ರಹಾರಾವಮಂತಃ ಸ್ವ ಇತಿ ಮಮ ವೈ ಯುವಗ್‌ಂ ಸ್ಥ ಇತ್ಯಬ್ರವೀನ್ಮಾಮಭ್ಯೇತಮಿತಿ ತೌ ಭಾಗಧೇಯಮೈಚ್ಛೇತಾಂ ತಾಭ್ಯಾಮೇತಮಗ್ನೀಷೋಮೀಯ-ಮೇಕಾದಶಕಪಾಲಂ ಪೂರ್ಣಮಾಸೇ ಪ್ರಾಯಚ್ಛತ್ತಾವಬ್ರೂತಾಮಭಿ ಸಂದಷ್ಟೌ ವೈ ಸ್ವೋ ನ ಶಕ್ನುವ ಐತುಮಿತಿ ಸ ಇಂದ್ರ ಆತ್ಮನಃ ಶೀತರೂರಾವಜನಯತ್ತಚ್ಛೀತರೂರಯೋರ್ಜನ್ಮ ಯ ಏವಗ್‌ಂ ಶೀತರೂರಯೋರ್ಜನ್ಮ ವೇದ ನೈನಗ್‌ಂ ಶೀತರೂರೌ ಹತಸ್ತಾಭ್ಯಾಮೇನಮಭ್ಯನಯತ್ತಸ್ಮಾಜ್ಜಂಜಭ್ಯ-ಮಾನಾವಗ್ನೀಷೋಮೌ ನಿರಕ್ರಾಮತಾಂ ॥

(ತೈ. ಸಂ. ೨-೫-೨-೧೦)

ಅನಂತರ ಇಂದ್ರನು ತನ್ನ ಆಯುಧದಿಂದ ವೃತ್ರನನ್ನು ಪ್ರಹರಿಸಲು ಉದ್ಯುಕ್ತನಾದಾಗ ಅಗ್ನಿ ಮತ್ತು ಸೋಮರು ಇಂದ್ರನನ್ನು ಹೊಡೆಯಬೇಡವೆಂದು ತಡೆದು—ಎಲೈ ಇಂದ್ರನೇ, ಈಗ ವೃತ್ರನನ್ನು ಹೊಡೆಯಬೇಡ. ಅಗ್ನಿಸೋಮ ದೇವತೆಗಳಾದ ನಾವು ಈ ವೃತ್ರನ ಮುಖದಲ್ಲಿ ವಾಸಿಸುತಿ ರುವೆವು ಎನ್ನಲು, ಇಂದ್ರನು ಎಲೈ ಅಗ್ನಿಸೋಮರೇ, ನೀವು ನಮ್ಮವರುತಾನೆ. ಆದ್ದರಿಂದ ನೀವು ವೃತ್ರನ ಶರೀರವನ್ನು ಬಿಟ್ಟು ನನ್ನ ಬಳಿಗೆ ಬನ್ನಿ ಅನಂತರ ನಾನು ವೃತ್ರನನ್ನು ಸಂಹರಿಸುವೆನು ಎಂದನು. ಅದನ್ನು ಕೇಳಿ ಅಗ್ನಿಸೋಮದೇವತೆಗಳು—ಎಲೈ ಇಂದ್ರನೇ, ನೀನು ಹೇಳುವಂತೆ ನಾವು ಮಾಡುವುದಾದರೆ ನಮಗೆ ಏನು ಉಪಕಾರಮಾಡುತ್ತೀಯೆ ? ನಮಗೂ ಯಜ್ಞದಲ್ಲಿ ಭಾಗವನ್ನು ಕಲ್ಪಿಸಿಕೊಡುವುದಾದರೆ ನೀನು ಹೇಳುವಂತೆ ಕೇಳುವೆವು ಎನ್ನಲು ಆದಕ್ಕೆ ಇಂದ್ರನು ಸಮ್ಮತಿಸಿ ಅವರಿಗೆ ಪೂರ್ಣಮಾಸಯಾಗದಲ್ಲಿ ಏಕಾದಶ ಕಪಾಲವೆಂಬ ಪುರೋಡಾಶ ಹವಿಸ್ಸಿನ ಆಹುತಿಭಾಗವನ್ನು ಕಲ್ಪಿಸಿಕೊಟ್ಟನು. ಬಳಿಕ ಅಗ್ನಿಸೋಮದೇವತೆಗಳು ಈರೀತಿ ತಮಗೆ ಬೇಕಾದ ವರವನ್ನು ಪಡೆದರೂ ಸಹ ಇಂದ್ರನನ್ನು ಕುರಿತು—ಎಲೈ ಇಂದ್ರನೇ, ಈಗ ನಾವು ವೃತ್ರನ ಮುಖ ದಿಂದ ಹೊರಟುಬರಲು ಸಾಧ್ಯವಿಲ್ಲ. ನಾವು ವೃತ್ರನ ಹಲ್ಲುಗಳ ಮಧ್ಯೆ ಸಿಕ್ಕಿ ಬಲವಾಗಿ ಹಿಡಿಯಲ್ಪಟ್ಟದ್ದೇವೆ. ಅವನ್ನ ಬಾಯನ್ನು ತೆರೆದಲ್ಲದೆ ನಾವು ಈಚೆಗೆ ಬರಲಾಗುವುದಿಲ್ಲ ಎಂದರು. ಆಗ ಇಂದ್ರನು ಇದಕ್ಕೊಂದುಪಾಯವನ್ನು ಯೋಚಿಸಿದನು. ತನ್ನ ಶರೀರದಿಂದ ಶೀತಜ್ವರ ಮತ್ತು ಅದರಿಂದ ಉಂಟಾಗುವ ಮಹಾತಾಪವನ್ನು ಸೃಷ್ಟಿಮಾಡಿದನು. ಛಳಿಜ್ವರವು ಪ್ರಪಂಚ ದಲ್ಲಿ ಜನರನ್ನು ಬಾಧಿಸುವುದಕ್ಕೆ ಇದೇ ಮೊದಲು. ಈ ಛಳಿಜ್ವರದ, ಈ ರೀತಿಯಾದ ಉತ್ಪತ್ತಿ ಕ್ರಮವನ್ನು ಯಾವ ಪುರುಷನು ತಿಳಿಯುವನೋ ಅವನಿಗೆ ಈ ಶೀತಜ್ವರದಿಂದ ಬಾಧೆ ಇರುವುದಿಲ್ಲ. ಬಳಿಕ ಇಂದ್ರನು ಸೃಷ್ಟಿಸಿದ ಛಳಿಜ್ವರಗಳನ್ನು ಕರೆದು ಕೊಂಡುಹೋಗಿ ವೃತ್ರಾಸುರನ ಶರೀರವನ್ನು ಪ್ರವೇಶಿಸುವಂತೆ ಮಾಡಿದನು. ಆಗ ವೃತ್ರಾಸುರನು ಛಳಿಯಿಂದ ನಡುಗುತ್ತಾ ಜ್ವರದ ತಾಪದಿಂದ ಬಳಲಿ ಆಯಾಸದಿಂದ ನಿಟ್ಟುಸುರನ್ನು ಬಿಡುವುದಕ್ಕಾಗಿ ಬಾಯನ್ನು ಅಗಲವಾಗಿ ತೆರೆದನು. ತಕ್ಷಣ ಅವನ ಬಾಯಿಯಿಂದ ಅಗ್ನಿಸೋಮದೇವತೆಗಳು ಹೊರಹೊರಟು ಈಚೆಗೆ ಬಂದರು.

ಪ್ರಾಣಾಪಾನೌ ವಾ ಏನಂ ತದಜಹಿತಾಂ ಪ್ರಾಣೋ ವೈ ದಕ್ಷೋಽಪಾನಃ ಕ್ರತುಸ್ತಸ್ಮಾಜ್ಜಂಜಭ್ಯ-ಮಾನೋ ಬ್ರೂಯಾನ್ಮಯಿ ದಕ್ಷಕ್ರತೂ ಇತಿ ಪ್ರಾಣಾಪಾನಾವೇವಾತ್ಮನ್ಧತ್ತೇ ಸರ್ವಮಾಯುರೇತಿ ॥

ಅನಂತರ ಪ್ರಾಣ, ಅಪಾನ ಎಂಬ ವಾಯುಗಳು ಆ ವೃತ್ರನನ್ನು ತ್ಯಜಿಸಿದವು. ಎಂದರೆ ಅವನ ಶರೀರವನ್ನು ಬಿಟ್ಟು ಹೋದವು. ಪ್ರಾಣಶಬ್ದಕ್ಕೆ ದಕ್ಷವೆಂದೂ, ಅಪಾನಶಬ್ದಕ್ಕೆ ಕ್ರತುವೆಂದೂ ಅರ್ಥವಿರುವುದು. ದಕ್ಷವೆಂದರೆ ಕೆಲಸಕಾರ್ಯಗಳಲ್ಲಿ ಕುಶಲತೆಯು, ಪ್ರಜ್ಞೆಯು. ಕ್ರತುವೆಂದರೆಕೆಲಸಮಾಡುವ ದೇಹಶಕ್ತಿ, ಸಾಮರ್ಥ್ಯ, ಇವೆರಡೂ ಬಾಯನ್ನು ತೆರದಿದ್ದ ಆ ವೃತ್ರನನ್ನು ಬಿಟ್ಟುಹೋದುವು. ಆದ ರಿಂದ ಯಜ್ಞಕರ್ಮವನ್ನು ನೆರವೇರಿಸುತ್ತಿರುವಾಗ ದೇಹಚೇಷ್ಟೆ ಮಾಡಿದರೂ, ಆಕಳಿಸಿ ಬಾಯನ್ನು ತೆರೆದರೂ ಆಗ ಮಯಿ ದಕ್ಷಕ್ರತೂ ಎಂಬ ಮಂತ್ರವನ್ನುಚ್ಚರಿಸಬೇಕು. ಹಾಗೆ ಮಾಡಿದರೆ ಪ್ರಾಣಾಪಾನಗಳು ಯಜ ಮಾನನನ್ನು ಬಿಟ್ಟುಹೋಗದೆ ಸ್ಥಿರವಾಗಿ ನಿಲ್ಲುವವು. ದೀರ್ಘಾಯುಸ್ಸೂ ಉಂಟಾಗುವುದು.

ಸ ದೇವತಾ ವೃತ್ರಾನ್ನಿರ್ಹೂಯ ವಾರ್ತ್ರಘ್ನಗ್ಂ ಹವಿಃ ಪೂರ್ಣಮಾಸೇ ನಿರವಪದ್ ಘ್ನಂತಿ ವಾ ಏನಂ ಪೂರ್ಣಮಾಸ ಆಮಾವಾಸ್ಯಾಯಾಂ ಪ್ಯಾಯಯಂತಿ ತಸ್ಮಾದ್ವಾರ್ತ್ರಘ್ನೀ ಪೂರ್ಣಮಾಸೇಽನೂಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ ||

ಅನಂತರ ಇಂದ್ರನು ವೃತ್ರಾಸುರನ ಮುಖದಲ್ಲಿ ಇದ್ದ ಅಗ್ನೀಷೋಮಾದಿ ದೇವತೆಗಳನ್ನೆಲ್ಲಾ ಅಲ್ಲಿಂದ ಈಚೆಗೆ ಕರೆದು ವೃತ್ರನ ಸಂಹಾರಕ್ಕೆ ಸಾಧನಭೂತವಾದ ಹವಿರಾಜ್ಯಭಾಗದ್ರವ್ಯರೂಪವಾದ ಆಹುತಿಯನ್ನು ಪೌರ್ಣಮಾಸಿಯ ದಿವಸ ಸಿದ್ಧಪಡಿಸಿದನು. ಲೋಕವ್ಯವಹಾರದಲ್ಲಿಯೂ ಅಂಧಕಾರವೆಂಬ ಎಲ್ಲೆಲ್ಲಿಯೂ ಆವರಿಸಿರುವ ಕತ್ತಲೆಯೆಂಬ ಶತ್ರುವು ಪೌರ್ಣಮಾಸಿಯ ಪ್ರಕಾಶಮಾನವಾದ ಬೆಳದಿಂಗಳಿನಿಂದ ನಾಶವಾಗುವ ವಿಷಯವು ಎಲ್ಲರಿಗೂ ತಿಳಿದೇ ಇದೆ. ಆದರೆ ಅಮಾವಾಸ್ಯೆಯ ದಿವಸ ಪ್ರಕಾಶವು ಇರುವುದಿಲ್ಲವಾದುದರಿಂದ ಆಗ ಕತ್ತಲೆಯೆಂಬ ಶತ್ರುವು (ವೃತ್ರ) ಎಲ್ಲೆಲ್ಲಿಯೂ ಆವರಿಸಿ ವೃದ್ಧಿಯಾಗುವುದು. ಆದುದರಿಂದ ವೃತ್ರಹನನಕ್ಕಾಗಿ ಪೌರ್ಣಮಾಸಿಯ ದಿವಸ ಅಗ್ನಿಷೋಮೀಯ ಆಜ್ಯಭಾಗಗಳೆಂಬ ಆಹುತಿಗಳಿಗೆ ಪೂರ್ವಭಾವಿಯಾಗಿ,

ಅಗ್ನಿರ್ವೃತ್ರಾಣಿ ಜಂಘನದ್ದ್ರವಿಣಸ್ಯುರ್ವಿಪನ್ಯಯಾ | ಸಮಿದ್ಧಃ ಶುಕ್ರ ಆಹುತಃ |

(ಋ. ಸಂ. ೬-೧೬-೩೪)

ತ್ವಂ ಸೋಮಾಸಿ ಸತ್ಪತಿಸ್ತ್ವಂ ರಾಜೋತ ವೃತ್ರಹಾ | ತ್ವಂ ಭದ್ರೋ ಅಸಿ ಕ್ರತುಃ ||

(ಋ. ಸಂ. ೧-೯೧-೫)

ಎಂಬ ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕು. ಈ ಎರಡು ಋಕ್ಕುಗಳಲ್ಲಿಯೂ ವೃತ್ರಹನನವನ್ನು ಸೂಚಿಸುವ ಶಬ್ದಗಳ ಪ್ರಯೋಗವಿರುವುದರಿಂದ ಈ ಋಕ್ಕುಗಳಿಗೆ ವಾರ್ತ್ರಘ್ನೀ ಋಕ್ಕುಗಳೆಂದು ಹೆಸರು. ಏಕೆಂದರೆ—ಪೌರ್ಣಮಾಸಿಯ ದಿವಸವೇ ವೃತ್ರನ ಸಂಹಾರವಾಯಿತು. ಆದುದರಿಂದ ಆ ದಿವಸ ವೃತಹನನ ಸಂಬಂಧವಾದ ಋಕ್ಕುಗಳನ್ನು ಪಠಿಸಿ ಹೋಮಮಾಡುವುದು ಯುಕ್ತವಾಗಿದೆ. ಅಮಾವಾಸ್ಯೆಯ ದಿವಸ ಅಂಧಕಾರವು ವೃದ್ಧಿಯಾಗಿರುವುದು. ಎಂದರೆ, ತಮಸ್ಸಿನಿಂದ ಸರ್ವವನ್ನು ವ್ಯಾಪಿಸುವ ವೃತ್ರನು ಅಭಿವೃದ್ಧಿಯನ್ನೈದುವನು. ಆದುದರಿಂದ ಆ ದಿವಸ ವೃಧು-ವೃದ್ಧೌ ಎಂಬ ವೃದ್ಧಿಯನ್ನು ಸೂಚಿಸುವ ಧಾತುವಿನಿಂದ ನಿಷ್ಪನ್ನವಾದ ಶಬ್ದಗಳನ್ನೊಳಗೊಂಡ—

ಅಗ್ನಿಃ ಪ್ರತ್ನೇನ ಮನ್ಮನಾ ಶುಂಭಮಾನಸ್ತನ್ವಂ೧ ಸ್ವಾಂ | ಕವಿರ್ವಿಪ್ರೇಣ ವಾವೃಧೇ ||

(ಋ. ಸಂ. ೮-೪೪-೧೨)

ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ | ಸುಮೃಳೀಕೋ ನ ಆ ವಿಶ ||

(ಋ. ಸಂ, ೧-೯೧-೧೧)

ಎಂಬ ಋಕ್ಕುಗಳನ್ನು ಪಠಿಸಬೇಕು, ವೃದ್ಧಿಯನ್ನು ಸೂಚಿಸುವ ಶಬ್ದಗಳಿಂದ ಸಹಿತವಾದ ಈ ಋಕ್ಕುಗಳಿಗೆ ವೃಧನ್ವತೀ ಋಕ್ಕುಗಳೆಂದು ಹೆಸರು. ಇವುಗಳನ್ನು ಅಂಧಕಾರದಿಂದ ವೃದ್ಧಿಯಾಗಿರುವ ಅಮಾವಾಸ್ಯೆಯ ದಿವಸ ಪಠಿಸಬೇಕು.

ತತ್ಸಗ್ಂಸ್ಥಾಪ್ಯ ವಾರ್ತ್ರಘ್ನಗ್ಂ ಹವಿರ್ವಜ್ರಮಾದಾಯ ಪುನರಭ್ಯಾಯತ ತೇ ಅಬ್ರೂತಾಂ ದ್ಯಾವಾಪೃಥವೀ ಮಾ ಪ್ರಹಾರಾವಯೋರ್ವೈ ಶ್ರಿತ ಇತಿ ತೇ ಅಬ್ರೂತಾಂ ವರಂ ವೃಣಾವಹೈ ನಕ್ಷತ್ರವಿಹಿ-

ಮಾರುಕೋ ಯಾಭ್ಯಂಕ್ತೇ ತಸ್ಯೈ ದುಶ್ಚರ್ಮಾ ಯಾ ಪ್ರಲಿಖತೇ ತಸ್ಯೈ ಖಲತಿರಪಮಾರೀ ಯಾಂಕ್ತೇ ತಸ್ಯೈ ಕಾಣೋ ಯಾ ದತೋ ದಾವತೇ ತಸ್ಯೈ ಶಾವದನ್ ಯಾ ನಖಾನಿ ನಿಕೃಂತತೇ ತಸ್ಯೈ ಕುನಖೀ ಯಾ ಕೃಣತ್ತಿ ತಸ್ಯೈ ಕ್ಲೀಬೋ ಯಾ ರಜ್ಜುಗ್‍ಂಸೃಜತಿ ತಸ್ಯಾ ಉದ್ಬಂಧುಕೋ ಯಾ ಪರ್ಣೇನ ಪಿಬತಿ ತಸ್ಯಾ ಉನ್ಮಾದುಕೋ ಯಾ ಖರ್ವೇಣ ಪಿಬತಿ ತಸ್ಯೈ ಖರ್ವಸ್ತಿಸ್ರೋ ರಾತ್ರೀ ಚರೇದಂಜಲಿನಾ ವಾ ಪಿಬೇದಖರ್ವೇಣ ವಾ ಪಾತ್ರೇಣ ಪ್ರಜಾಯೈ ಗೋಪೀಥಾಯ ॥

(ತೈ. ಸಂ. ೨-೫-೧-೧ ರಿಂದ ೭)

ರಜಸ್ವಲೆಯಾಗಿರುವ ಕಾಲದಲ್ಲಿ (ಮುಟ್ಟಾಗಿರುವಾಗ) ಸಂಭೋಗ ಮಾಡಿದರೆ ಅದರಿಂದ ಹುಟ್ಟುವ ಪುತ್ರನು ಶಾಪಗ್ರಸ್ತನಾಗುವನು; ರಜಸ್ವಲೆಯಾದ ಸ್ತ್ರೀಯು ಅರಣ್ಯದಲ್ಲಿ ಸಂಭೋಗಿಸಿದರೆ ಅವಳಿಗೆ ಹುಟ್ಟುವ ಪುತ್ರನು ಕಳ್ಳನಾಗುವನು; ಮುಖವನ್ನು ಮುಚ್ಚಿಕೊಂಡು ಅಥವಾ ಬೇರೆ ಕಡೆಗೆ ತಿರುಗಿಸಿಕೊಂಡು ಸಂಭೋಗ ಮಾಡಿದರೆ ಹುಟ್ಟುವ ಮಗನು ನಾಚಿಕೆಯಿಂದ ಯಾರೊಡನೆಯೂ ಸರಿಯಾಗಿ ಮಾತನಾಡಲಾರದ ಮುಖೇಡಿಯಾಗುವನು; ಮುಟ್ಟಾದ ಕಾಲದಲ್ಲಿ ಸ್ನಾನ ಮಾಡುವ ಸ್ತ್ರೀಗೆ ಹುಟ್ಟುವ ಮಗನು ನೀರಿನಲ್ಲಿ ಮುಳುಗಿ ಸಾಯುವನು; ಅಭ್ಯಂಜನ ಮಾಡಿಕೊಳ್ಳುವ ಸ್ತ್ರೀಯ ಪುತ್ರನು ಚರ್ಮರೋಗದಿಂದ (ಕುಷ್ಠ, ತೊನ್ನು) ಪೀಡಿತನಾಗುವನು; ತಲೆಯನ್ನು ಬಾಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನು ತಲೆಯಲ್ಲಿ ಕೂದಲಿಲ್ಲದ ಬೋಳನಾಗುವನು ಮತ್ತು ಶಕ್ತಿಹೀನನಾಗುವನು; ಕಣ್ಣಿಗೆ ಕಪ್ಪು ಹಚ್ಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನಿಗೆ ಕುರುಡಾಗುವುದು; ಆ ಕಾಲದಲ್ಲಿ ಹಲ್ಲನ್ನುಜ್ಜಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನಿಗೆ ಕೊಳಕಾದ ಹಲ್ಲುಗಳಿರುವುವು; ಉಗುರನ್ನು ಕತ್ತರಿಸಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನಿಗೆ ನೋಡುವುದಕ್ಕೆ ವಿಕಾರವಾದ ಕೆಟ್ಟ ಉಗುರುಗಳಿರುವುವು. ಆ ಕಾಲದಲ್ಲಿ (ಚಾಪೆ ಮೊದಲಾದುವನ್ನು) ಹೆಣೆಯುವ ಸ್ತ್ರೀಗೆ ಹುಟ್ಟುವ ಪುತ್ರನು ನಪುಂಸಕನಾಗುವನು; ಹಗ್ಗವನ್ನು ಹೊಸೆಯುವ ಸ್ತ್ರೀಗೆ ಹುಟ್ಟುವ ಪುತ್ರನು ಆತ್ಮಹತ್ಯೆಯಿಂದ ಮೃತನಾಗುವನು; (ಪದ್ಮಪತ್ರಾದಿ) ಎಲೆಗಳಿಂದ ನೀರು ಕುಡಿಯುವ ಸ್ತ್ರೀಗೆ ಅಂಗಹೀನವಾದ ಅಥವಾ ಅಂಗವಿಕಾರವುಳ್ಳ ಪುತ್ರನಾಗುವನು. ಆದುದರಿಂದ ಸ್ತ್ರೀಯರು ಮುಟ್ಟಾಗಿರುವಾಗ ಮೂರು ರಾತ್ರಿಗಳು ಕಳೆಯುವವರೆಗೆ ಬಹಳ ಕಟ್ಟುನಿಟ್ಟಾಗಿ (ವ್ರತವನ್ನು) ಪಾಲಿಸಬೇಕು. ಒಳ್ಳೆಯ ಸಂತತಿಪ್ರಾಪ್ತಿಗಾಗಿ ಸ್ತ್ರೀಯರು ಆ ಕಾಲದಲ್ಲಿ ನೀರು ಕುಡಿಯುವಾಗ ಬೊಗಸೆಯಿಂದಾಗಲೀ ಅಥವಾ ಮುರಿಯದಿರುವ ಚೆನ್ನಾಗಿರುವ ಪಾತ್ರೆಯಿಂದಲೇ ನೀರು ಕುಡಿಯಬೇಕು.

ಮೇಲೆ ಹೇಳಿದ ಅಂಶಗಳಲ್ಲಿ ಇಂದ್ರನು ವಿಶ್ವರೂಪನನ್ನು ಸಂಹರಿಸಿದ ವಿಷಯವೂ ಅವನ ಸಂಹಾರದಿಂದ ಇಂದ್ರನಿಗೆ ಪ್ರಾಪ್ತಿಯಾದ ಬ್ರಹ್ಮಹತ್ಯಾದೋಷವೂ, ಆ ದೋಷಪರಿಹಾರಕ್ಕಾಗಿ ಇಂದ್ರನು ಆಚರಿಸಿದ ಕೃತ್ಯಗಳೂ ಅದರ ಪರಿಣಾಮವಾಗಿ ಸ್ತ್ರೀಯರು ರಜಸ್ವಲೆಯಾಗಿರುವಾಗ ನಿಯಮವಾಗಿರಬೇಕೆಂಬ ವಿಷಯವೂ ಉಕ್ತವಾಗಿದೆ ಪ್ರಕೃತಸಂದರ್ಭದಲ್ಲಿ ವಿಶ್ವರೂಪನ ವಿವರ ಮಾತ್ರ ಗ್ರಾಹ್ಯವಾಗಿದ್ದರೂ ಅದಕ್ಕೆ ಸಂಬಂಧಿಸಿದ ಮತ್ತು ಅದೇ ಅನುವಾಕದಲ್ಲಿರುವ ಇತರ ವಿಷಯಗಳ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ. ಏಕೆಂದರೆ ಪುರಾಣಾದಿಗಳಲ್ಲಿ ಇಂದ್ರನಿಗೆ ವೃತ್ರವಧೆಯಿಂದ ಬ್ರಹ್ಮಹತ್ಯಾದೋಷ ಪ್ರಾಪ್ತವಾಯಿತೆಂದೂ, ಅದರ ಪರಿಹಾರಕ್ಕಾಗಿ ಇಂದ್ರನು ಮೇಲೆ ಹೇಳಿದಂತೆ ಪ್ರಯತ್ನಪಟ್ಟನೆಂದೂ ಹೇಳಿರುವುದರಿಂದ ವೇದ ಮತ್ತು ಪುರಾಣಾದಿಗಳ ವಿವರಗಳಿಗೆ ಇರುವ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಈ ವಿವರಣೆಯು ಅವಶ್ಯಕವಾಯಿತು.

### ಇಂದ್ರವೈಕುಂಠನ ವಿಷಯ

ಜಗೃಭ್ಮಾ ೯ ಎಂಬ ೪೭ನೇ ಸೂಕ್ತದ ಋಷಿಯಾದ ಸಪ್ತಗು ಎಂಬ ಋಷಿಯ ವಿಷಯದಲ್ಲಿಯೂ ಇದರ ಮುಂದಿನ

ಸೂಕ್ತಗಳಾದ ಅಹಂ ಭುವಂ (೪೮) ಅಹಂ ದಾಂ (೪೯) ಎಂಬ ಸೂಕ್ತಗಳ ಋಷಿಯಾದ ವೈಕುಂಠ ಇಂದ್ರನ ವಿಷಯ ವಾಗಿಯೂ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈರೀತಿ ಹೇಳಿದೆ—

ಪ್ರಾಜಾಪತ್ಯಾಸುರೀ ತ್ವಾಸೀದ್ವಿಕುಂಠಾ ನಾಮ ನಾಮತಃ ।
ಸೇಚ್ಛಂತೀಂದ್ರಸಮಂ ಪುತ್ರಂ ತೇಪೇಽಥ ಸುಮಹತ್ತಪಃ ॥
ಸಾ ಪ್ರಜಾಪತಿತಃ ಕಾಮಾಂಲ್ಲೇಭೇಽಥ ವಿವಿಧಾನ್ವರಾನ್ ।
ತಸ್ಯಾಂ ಚೇಂದ್ರಃ ಸ್ವಯಂ ಜಜ್ಞೇ ಜಿಘಾಂಸುರ್ದೈತ್ಯದಾನವಾನ್ ॥

ಪೂರ್ವದಲ್ಲಿ ಪ್ರಜಾಪತಿಯ ಪುತ್ರಿಯಾದ ಓರ್ವ ಅಸುರಸ್ತ್ರೀ ಇದ್ದಳು. ಅವಳ ಹೆಸರು ವಿಕುಂಠಾ ಎಂದು. ಒಂದಾನೊಂದು ಕಾಲದಲ್ಲಿ ಶೌರ್ಯಪರಾಕ್ರಮಾದಿಗಳಲ್ಲಿ ಇಂದ್ರನಿಗೆ ಸಮನಾದ ಪುತ್ರನು ತನ್ನಲ್ಲಿ ಜನಿಸಬೇಕೆಂಬ ಬಯಕೆಯು ಅವಳಿಗುಂಟಾ ಯಿತು. ಆದ್ದರಿಂದ ಅವಳು ಬಹಳ ಘೋರವಾದ ತಪಸ್ಸನ್ನು ಮಾಡಿ ಪ್ರಜಾಪತಿಯಿಂದ ತನಗೆ ಬೇಕಾದ ವರಗಳನ್ನು ಪಡೆದಳು. ಇಂದ್ರನು ದೈತ್ಯದಾನವರನ್ನು ಸಂಹಾರಮಾಡಬೇಕೆಂದು ಇಚ್ಛಿಸಿ ಆ ವಿಕುಂಠಾ ಎಂಬ ಸ್ತ್ರೀಯಲ್ಲೇ ಅವಳ ಪುತ್ರ ನಾಗಿ ಜನಿಸಿದನು.

ಏಕದಾ ದಾನವೈಃ ಸಾರ್ಧಂ ಸಮರೇ ಸಮಸಜ್ಯತ ।
ಜಘಾನ ತೇಷಾಂ ನವತೀರ್ನವ ಸಪ್ತ ಚ ಸಪ್ತ ಕಾನ್ ॥

ಭಿತ್ವಾ ಸ್ವಬಾಹುವೀರ್ಯೇಣ ಹೈಮರೌಪ್ಯಾಯಸೀಃ ಪುರೀಃ ।
ಹತ್ವಾ ಸರ್ವಾನ್ಯಥಾಸ್ಥಾನಂ ಪೃಥಿವ್ಯಾದಿವ್ಯವಸ್ಥಿತಾನ್ ॥

ಪೃಥಿವ್ಯಾಂ ಕಾಲಕೇಯಾಂಶ್ಚ ಪೌಲೋಮಾಂಶ್ಚೈವ ಧನ್ವಿನಃ ।
ತಾಂಶ್ಚ ವೃತ್ರಾದಯಾನಾಸ ಪ್ರಹ್ಲಾದತನಯಾನ್ದಿವಿ ॥

ಇಂದ್ರನು ಒಂದು ಸಂದರ್ಭದಲ್ಲಿ ದಾನವರೊಡನೆ ಯುದ್ಧಮಾಡುತ್ತಿರುವಾಗ ಅವರ ೯೯ ಮತ್ತು ೭೭ ನಾಯಕರನ್ನು ಸಂಹಾರ ಮಾಡಿದನು. ಅವರು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಚಿನ್ನದಿಂದಲೂ, ಬೆಳ್ಳಿಯಿಂದಲೂ, ಕಬ್ಬಿಣದಿಂದಲೂ ಭದ್ರವಾದ ಕೋಟೆಗಳನ್ನು ಕಟ್ಟಿಕೊಂಡು ಅಲ್ಲಿ ವಾಸಮಾಡುತ್ತಿದ್ದರು. ಇಂದ್ರನು ತನ್ನ ಸ್ವಸಾಮರ್ಥ್ಯದಿಂದಲೇ ಅವುಗಳನ್ನೆಲ್ಲಾ ನಾಶ ಮಾಡಿ ಭೂಮಿಯ ಮೇಲಿದ್ದ ಕಾಲಕೇಯರು, ಪುಲೋಮವಂಶದವರು ಪ್ರಹ್ಲಾದನ ವಂಶದ ಅಸುರರು ಮೊದಲಾದವರನ್ನು ನಾಶಮಾಡಿದನು.

ರಾಜ್ಯಂ ಪ್ರಾಪ್ಯ ಸ ದೈತ್ಯೇಷು ಸ್ವೇನ ವೀರ್ಯೇಣ ದರ್ಪಿತಃ ।
ದೇವಾನ್ಬಾಧಿತುಮಾರೇಭೇ ಮೋಹಿತೋಽಸುರಮಾಯಯಾ ॥

ಬಾಧ್ಯಮಾನಾಸ್ತು ತೇನಾಪಿ ಅಸುರೇಣಾಮಿತೌಜಸಾ ।
ಉಪಾಧಾವನ್ನೃಷಿಶ್ರೇಷ್ಠಂ ತತ್ಪ್ರಬೋಧಾಯ ಸಪ್ತಗುಂ ॥

ಋಷಿಸ್ತು ಸಪ್ತಗುರ್ನಾಮ ತಸ್ಯಾಸೀತ್ಸುಪ್ರಿಯಃ ಸಖಾ ।
ನ ಚೈನಮಭಿತುಷ್ಟಾವ ಜಗೃಭ್ಮೇತಿ ಕರೇ ಸ್ಪೃಶನ್ ॥

ಈ ರೀತಿ ದೈತ್ಯರನ್ನು ಸಂಹಾರ ಮಾಡಿದ ವಿಕುಂಠಪುತ್ರನಾದ ಇಂದ್ರನು ಅಸುರಸ್ತ್ರೀಯಲ್ಲಿ ಹುಟ್ಟಿದ ಕಾರಣ ಮೋಹಪರವಶನಾಗಿ ತನ್ನ ಶಕ್ತಿಸಾಮರ್ಥ್ಯಗಳಿಂದ ರಾಜ್ಯವನ್ನು ಗಳಿಸಿ ಮೈಮರೆತು ಅಹಂಕಾರದಿಂದ ಕೂಡಿ ದೇವತೆಗಳನ್ನು ಹಿಂಸಿಸುವುದಕ್ಕೆ ಪ್ರಾರಂಭ ಮಾಡಿದನು. ದೈತ್ಯರೂಪನಾದ ಇಂದ್ರನು ತನ್ನ ಅಪಾರವಾದ ಪರಾಕ್ರಮದಿಂದ ಬೀಗಿ ಮೆರೆಯುತ್ತಾ ದೇವತೆಗಳನ್ನು ಹಿಂಸಿಸುತ್ತಾ ಇರುವಾಗ ಅವನ ಹಿಂಸೆಯನ್ನು ಸಹಿಸಲಾರದೆ ದೇವತೆಗಳು ಸಪ್ತಗು ಎಂಬ ಋಷಿಯ ಬಳಿಗೆ ಬಂದು ಅವನ ಮರೆಹೊಕ್ಕರು. ಆ ಋಷಿಯು ಇಂದ್ರನ ಪರಮಪ್ರಿಯ ಸ್ನೇಹಿತನಾಗಿದ್ದನು. ಆಗ ಸಪ್ತಗು ಋಷಿಯು ಇಂದ್ರನ ಕೈಯ್ಯನ್ನು ತನ್ನ ಕೈ ಹಿಡಿದುಕೊಂಡು ಜಗೃಭ್ಮಾ ತೇ ಎಂಬ ಸೂಕ್ತದಿಂದ (೪೭ನೇ ಸೂಕ್ತ) ಇಂದ್ರನನ್ನು ಸ್ತುತಿಸಿದನು.

> ತತಃ ಸ ಬುಧ್ವಾ ಚಾತ್ಮಾನಂ ಸಪ್ತಗುಸ್ತುತಿಹರ್ಷಿತಃ ।
> ಆತ್ಮಾನಮೇವ ತುಷ್ಟಾವ ಅಹಂ ಭುವಮಿತಿ ತ್ರಿಭಿಃ ॥
>
> ಕೀರ್ತಯನ್ ಸ್ವಾನಿ ಕರ್ಮಾಣಿ ಯಾನಿ ಸ್ಮ ಕೃತವಾನ್ಪುರಾ ।
> ಯಥಾಕರೋಚ್ಚ ವೈದೇಹಂ ವ್ಯಂಸಂ ಸೋಮವತಿಂ ನೃಪಂ ॥
>
> ವಸಿಷ್ಠಶಾಪಾದಭವದ್ವೈದೇಹೋ ನೃಪತಿಃ ಪುರಾ ।
> ಇಂದ್ರಪ್ರಸಾದಾದೇಜೇ ಚ ಸತ್ರೈಃ ಸಾರಸ್ವತಾದಿಭಿಃ ॥
>
> ಪ್ರಭೂತಾಂ ಶಕ್ತಿಮುತ್ತಾಂ ಚ ಶತ್ರೂಣಾಮುಪ್ಯಪಾಕ್ರಿಯಾಂ ।
> ಸ್ವೇಷು ಸರ್ವೇಷು ಚೈಶ್ವರ್ಯಂ ಪ್ರಭುತ್ವಂ ಭುವನೇಷು ಚ ॥

ಸಪ್ತಗು ಋಷಿಯಿಂದ ಸ್ತುತನಾದ ಇಂದ್ರವೈಕುಂಠನಿಗೆ ತನ್ನ ಪೂರ್ವಸ್ಮರಣೆಯುಂಟಾಗಿ ತಾನು ಯಾರು ಎಂಬ ಅರಿವುಂಟಾಯಿತು. ಅನಂತರ ಆ ವೈಕುಂಠ ಇಂದ್ರನು ತಾನು ಹಿಂದೆ ಮಾಡಿದ ಅನೇಕ ಸಾಹಸಕಾರ್ಯಗಳನ್ನು (೪೮-೫೦) ಅಹಂ ಭುವಂ ಎಂದು ಮೊದಲಾದ ಮೂರು ಸೂಕ್ತಗಳಲ್ಲಿ ಪ್ರಶಂಸೆ ಮಾಡಿಕೊಂಡಿದ್ದಾನೆ. ಹಿಂದೆ ವಿದೇಹ ದೇಶದ ರಾಜನಾದ ವ್ಯಂಸನನ್ನು ವಸಿಷ್ಠರು ಶಾಪದಿಂದ ವಿಮುಕ್ತನನ್ನಾಗಿ ಮಾಡಿದುದನ್ನು ಆ ರಾಜನು ಇಂದ್ರನ ಅನುಗ್ರಹದಿಂದ ಸರಸ್ವತೀನದೀ ತೀರದಲ್ಲಿ ಸತ್ರಯಾಗವನ್ನು ಮಾಡಿ ಶತ್ರುಗಳನ್ನು ಜಯಿಸಿ ಸಾರ್ವಭೌಮತ್ವವನ್ನು ಸ್ಥಾಪಿಸಿದ ವಿಷಯವೂ ಉಕ್ತವಾಗಿದೆ.

**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ**
**ಅಹಂ ಮಿತ್ರಾವರುಣೋಭಾಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿ-**
**ನೋಭಾ ॥೧॥**

(ಋ. ಸಂ. ೧೦–೧೨೫–೧)

ಇದು ಮೂರನೆಯ ಉದಾರಣೆಯು. ಇದರ ಅರ್ಥವು—

(ಈ ಸೂಕ್ತದ ದ್ರಷ್ಟೃವೂ ಅಂಭೃಣಋಷಿಯ ಪುತ್ರಿಯೂ ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮನಲ್ಲಿ ತಾದಾತ್ಮ್ಯವನ್ನು ಪಡೆದಿರುವವಳೂ ಆದ) ನಾನು ಏಕದಶರುದ್ರರೂಪದಿಂದಲೂ ಅಷ್ಟವಸುಗಳಿಂದಲೂ ದ್ವಾದಶದಿತ್ಯರ ರೂಪದಿಂದಲೂ ಇತರ ಸಮಸ್ತದೇವತೆಗಳ ರೂಪದಿಂದಲೂ ಕೂಡಿ ಸಂಚರಿಸುತ್ತೇನೆ ಎಂದರೆ ನಾನೇ ಈ ದೇವತೆಗಳ ರೂಪದಿಂದಿದ್ದು ಅವರ

ಕರ್ತವ್ಯ ಕರ್ಮಗಳನ್ನು ನೆರವೇರಿಸುತ್ತೇನೆ. ಇದಲ್ಲದೆ ಇಬ್ಬಿಬ್ಬರಾದ ಮಿತ್ರಾವರುಣರೆಂಬ ದೇವತೆಗಳನ್ನೂ, ಇಂದ್ರಾಗ್ನಿಗಳನ್ನೂ ಅಶ್ವಿನೀದೇವತೆಗಳನ್ನೂ ನಾನೇ ಧರಿಸಿ ಪೋಷಿಸುತ್ತೇನೆ. ನನ್ನ ಆಶ್ರಯದಿಂದಲೇ ಈ ಸಮಸ್ತ ದೇವತೆಗಳು ನನ್ನನ್ನೇ ಅವಲಂಬಿಸಿ ತಮ್ಮ ಕರ್ತವ್ಯನ್ನು ನೆರವೇರಿಸಲು ಸಮರ್ಥರಾಗುತ್ತಾರೆ.

ಇತಿ ಸಪ್ತಮಾಧ್ಯಾಯೇ ದ್ವಿತೀಯ ಖಂಡಃ

ಇಲ್ಲಿಗೆ ಏಳನೆಯ ಅಧ್ಯಾಯದಲ್ಲಿ ದ್ವಿತೀಯಖಂಡವು ಸಮಾಪ್ತವು.

---

## ಅಥ ತೃತೀಯಃ ಖಂಡಃ

### ಮೂರನೆಯ ಖಂಡವು.

ಪರೋಕ್ಷಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾ ಅಥಾಪ ಸ್ತುತಿರೇವ ಭವತಿ ನಾಶೀರ್ವಾದ ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚ ಮಿತಿ ಯಥೈತಸ್ಮಿನ್ಸೂಕ್ತೇಽಥಾಪ್ಯಾಶೀರೇವ ನ ಸ್ತುತಿಃ ಸುಚಕ್ಷಾ ಅಹಮಕ್ಷೀ-ಭ್ಯಾಂ ಭೂಯಾಸಂ ಸುವರ್ಚಾ ಮುಖೇನ ಶುಶ್ರುತ್ಕರ್ಣಾಭ್ಯಾಂ ಭೂಯಾಸಮಿತಿ (ಮಾನ-ಗೃ-೧-೯-೨೭) ತದೇತದ್ಬಹುಲಮಾಧ್ವರ್ಯವೇ ಯಾಜ್ಞೇಷು ಚ ಮಂತ್ರೇಷು ಥಾಪಿ ಶಪಥಾಭಿಶಾಪೌ। ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ। ಅಧಾ ಸ ವೀರೈರ್ದಶಭಿರ್ವಿಯೂಯಾ ಇತ್ಯಥಾಪಿ ಕಸ್ಯಚಿದ್ಭಾವಸ್ಯಾಚಿ ಖ್ಯಾಸಾ। ನ ಮೃತ್ಯುರಾಸೀದಮೃತಂ ನ ತರ್ಹಿ। ತಮ ಆಸೀತ್ತಮಸಾ ಗೂಹ್ಳಮಗ್ರೇ। ಅಥಾಪಿ ಪರಿದೇವನಾ ಕಸ್ಮಾಚ್ಚಿದ್ಭಾವಾತ್। ಸು ದೇ ವೋ ಅದ್ಯ ಪ್ರಪತೇದನಾವೃತ್। ನ ವಿಜಾನಾಮಿ ಯದಿ ವೇದಮಸ್ಮೀತ್ಯಥಾಪಿ ನಿಂದಾಪ್ರಶಂಸೇ। ಕೇವಲಾಘೋ ಭವತಿ ಕೇವಲಾದೀ। ಭೋಜಸ್ಯೇದಂ ಪುಷ್ಕರಿಣೀವ ವೇಶ್ಮೇತ್ಯೇವಮಕ್ಷಸೂಕ್ತೇ ದ್ಯೂತನಿಂದಾ ಚ ಕೃಷಿಪ್ರಶಂಸಾ ಚೈವಮುಚ್ಚಾವಚೈರಭಿಪ್ರಾಯೈರೃಷೀಣಾಂ ಮಂತ್ರದೃಷ್ಟಯೋ ಭವಂತಿ ॥ ೩ ॥

---

ಪರೋಕ್ಷಕೃತಾಃ ಮತ್ತು ಪ್ರತ್ಯಕ್ಷಕೃತಾಃ ಎಂಬ ಎರಡು ವಿಧಮಂತ್ರಗಳೇ ಋಗ್ವೇದದಲ್ಲಿಯೂ ಇತರ ಶಾಖೆ (ವೇದ) ಗಳಲ್ಲಿಯೂ ಹೆಚ್ಚಾಗಿರುವವು ಆಧ್ಯಾತ್ಮಿಕ ವೆಂಬ ಮಂತ್ರಗಳು ಬಹಳ ಸ್ವಲ್ಪವಾಗಿರುವವು

ಅಥಾಪಿ ಸ್ತುತಿರೇವ ಭವತಿ ನಾಶೀರ್ವಾದಃ।
ಇಂದ್ರಸ್ಯನು ವೀರ್ಯಾಣಿ ಪ್ರವೋಚಂ ಇತಿ ಯಥೈತಸ್ಮಿನ್ಸೂಕ್ತೇ ॥

ಕೆಲವು ಮಂತ್ರಗಳಲ್ಲಿ ದೇವತೆಗಳ ಸ್ತುತಿಮಾತ್ರವಿರುವುದು. ಆಶೀರ್ವಾದ ವಿರುವುದಿಲ್ಲ. ಆದರೆ ಆಶೀರ್ವಾದ ವಿಷಯದಲ್ಲಿಯೂ ಸ್ತುತಿಯನ್ನು ಉಪಯೋಗಿಸುವುದೂ ಉಂಟು. ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ (ಋ. ಸಂ. ೧-೩೨-೧) ಎಂಬ ಸೂಕ್ತದಲ್ಲಿ ಸ್ತುತಿಮಾತ್ರವಿರುವುದು. ಆದರೂ ಇದನ್ನು ಆಶೀರ್ವಾದದಲ್ಲಿಯೂ ಉಪಯೋಗಿಸುವುದುಂಟು.

ಅಥಾಪ್ಯಾಶೀರೇವ ನ ಸ್ತುತಿಃ ಸುಚಕ್ಷಾ ಅಹಮಕ್ಷೀಭ್ಯಾಂ ಸುವರ್ಚಾ
ಮುಖೇನ ಸುಶ್ರುತ್ಕರ್ಣಾಭ್ಯಾಂ ಭೂಯಾಸಮಿತಿ |
ತದೇತದ್ಬಹುಲಮಾಧ್ವರ್ಯವೇ ಯಾಜ್ಞೇಷು ಚ ಮಂತ್ರೇಷು ||

ಕೆಲವು ಮಂತ್ರಗಳಲ್ಲಿ ಆಶೀರ್ವಾದಮಾತ್ರವೇ ಇರುವುದು, ಸ್ತುತಿ ಇರುವುದಿಲ್ಲ ಈ ವಿಧವಾದ ಮಂತ್ರಗಳು ಅಧ್ವರ್ಯುವು ಪಠಿಸುವ ಯಜುರ್ವೇದ ಮಂತ್ರಗಳಲ್ಲಿಯೇ ವಿಶೇಷವಾಗಿರುವವು ಉದಾಹರಣೆಯು—

ಸುಚಕ್ಷಾ ಅಹಮಕ್ಷೀಭ್ಯಾಂ ಸುವರ್ಚಾ ಮುಖೇನ ಸುಶ್ರುತ್ಕ-
ರ್ಣಾಭ್ಯಾಂ ಭೂಯಾಸಮಿತಿ |

ಇದನ್ನು ಸಾಧಾರಣವಾಗಿ ಯಜ್ಞಸಂಬಂಧವಾದ ಮಂತ್ರಗಳಲ್ಲಿ ಉಪಯೋಗಿಸುವರು. ಇದರ ಅರ್ಥವು—ನಾನು ನನ್ನ ಕಣ್ಣು ಗಳಿಂದ ಚೆನ್ನಾಗಿ ನೋಡುವಂತಾಗಲಿ, ನನ್ನ ಮುಖವು ತೇಜಸ್ಸಿನಿಂದ ಕೂಡಿರಲಿ, ನಾನು ನನ್ನ ಕಿವಿಗಳಿಂದ ಚೆನ್ನಾಗಿ ಕೇಳುವಂತಾಗಲಿ.

ಅಥಾಪಿ ಶಪಥಾಭಿಶಾಪೌ ||

ಅಧಾ ಮುರೀಯ ಯದಿ ಯಾತುಧಾನೋ ಅಸ್ಮಿ ಯದಿವಾಯು-
ಸ್ತತಪಪೂರುಷಸ್ಯ |

ಅಥಾ ಸ ವೀರೈರ್ದಶಭಿರ್ವಿಯೂಯಾ ಯೋ ಮಾ ಮೋಘಂ
ಯಾತುಧಾನೇತ್ಯಾಹ ||

ಶಪಥ ಮತ್ತು ಅಭಿಶಾಪ—ಪ್ರತಿಜ್ಞೆ ಮತ್ತು ಮತ್ತೊಬ್ಬನಿಗೆ ಕೆಡುಕಾಗಲಿ ಎಂದು ಬಯಸಿ ಶಾಪಕೊಡುವುದು. ಉದಾ ಹರಣೆಯ ಋಕ್ಕು.

ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ ಯದಿ ವಾಯು-
ಸ್ತತಪಪೂರುಷಸ್ಯ |

ಅಥಾ ಸವೀರೈರ್ದಶಭಿರ್ವಿ ಯೂಯಾ ಯೋ ಮಾ ಮೋಘಂ
ಯಾತುಧಾನೇತ್ಯಾಹ ||

(ಋ. ಸಂ. ೭-೧೦೪-೧೫)

ಇದರ ಅರ್ಥವು—ಎಲೈ ರಾಕ್ಷಸನೇ, ಒಂದು ವೇಳೆ ನಾನೇ ರಾಕ್ಷಸನಾಗಿದ್ದರೆ ಇದೇ ದಿನ ಮರಣವನ್ನು ಹೊಂತುವಂತಾಗಲಿ. ಅಲ್ಲದೆ, ಬೇರೊಬ್ಬ ಮಾನವನ ಜೀವಿತವನ್ನು ನಾನು ಒಂದು ವೇಳೆ ಹಿಂಸಿಸಿದ್ದರೂ ಸಹ ನನಗೆ ಒಡನೆಯೇ ಮರಣವು ಸಂಭವಿಸಲಿ. ಅಲ್ಲದೆ, ಯಥಾರ್ಥವಾಗಿ ನಾನೇ ವಸಿಷ್ಠರಾಗಿ ನೀನೆ ಅಸುರನಾಗಿದ್ದರೆ ಯಾವ ಕಾರಣದಿಂದ ನೀನು ನನ್ನನ್ನು ಸಂಬೋಧಿಸಿ "ಎಲೈ ರಾಕ್ಷಸನೇ" ಎಂದು ಕರೆದಿಯೋ ಆ ಮೋಸದ ನಿಮಿತ್ತವಾಗಿ ನಿನ್ನ ಹತ್ತುಮಂದಿ ವೀರಪುತ್ರರನ್ನು ಕಳೆದುಕೋ. ಅವರೆಲ್ಲರೂ ಮೃತರಾಗಿ ನೀನು ದುಃಖವನ್ನನುಭವಿಸು.

(ತನ್ನ ನೂರು ಮಂದಿ ಪುತ್ರರನ್ನು ಸುದಾಸನ ಪುತ್ರರು ಸಂಹರಿಸಿದಾಗ ವಸಿಷ್ಠ ಋಷಿಯು ಕೋಪದಿಂದಲೂ 'ದುಃಖ ದಿಂದಲೂ ಆಡಿದ ವಾಕ್ಯಗಳಿವು.

ಅಥಾಪಿ ಕಸ್ಯಚಿದ್ಭಾವಸ್ಯಾಚಿಖ್ಯಾಸಾ ||

ನ ಮೃತ್ಯುರಾಸೀದಮೃತಂ ನ ತರ್ಹಿ |
ತಮ ಆಸೀತ್ತಮಸಾ ಗೂಳ್ಹಮಗ್ರೇ ||

ಕಸ್ಯಚಿದ್ಭಾವ—ಯಾವುದಾದರೂ ಒಂದು ವಿಷಯದ ವರ್ಣನೆ ಅಥವಾ ಪ್ರಸ್ತಾಪವಿರುವುದು. ಉದಾಹರಣೆಯ ಋಕ್ಕು—

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ |
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸಃ ||

(ಋ. ಸಂ. ೧೦–೧೨೯–೨)

ಇದರ ಅರ್ಥವು—ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಜಗತ್ಸೃಷ್ಟಿಗೆ ಪೂರ್ವದಲ್ಲಿದ ವಿಶ್ವದ ಸ್ಥಿತಿಯನ್ನು ವರ್ಣಿಸ ಲಾಗಿದೆ.

ಸೃಷ್ಟಿಗೆ ಪೂರ್ವದಲ್ಲಿದ್ದ ಲಯಾವಸ್ಥೆಯಲ್ಲಿ ಮರಣವೂ ಮರಣವಿಲ್ಲದಿರುವಿಕೆಯೂ ಯಾವುದೂ ಇರಲಿಲ್ಲ. ರಾತ್ರಿ ಯಾವುದು, ಹಗಲು ಯಾವುದು ಎಂಬ ಪರಿಜ್ಞಾನವಿರಲಿಲ್ಲ. ಸಮಸ್ತ ವೇದಾಂತಪ್ರಸಿದ್ಧವೂ ಅದ್ವಿತೀಯವೂ ಆದ ಬ್ರಹ್ಮತತ್ತ್ವ ಒಂದು ಮಾತ್ರವಿದ್ದು ಶ್ವಾಸೋಚ್ಛ್ವಾಸರಹಿತವಾದ ಎಂದರೆ ಜೀವವಿಲ್ಲದ ಜಡವಸ್ತುವನ್ನು ತನ್ನ ಮಾಯಾ ಎಂಬ ಸಾಮರ್ಥ್ಯಾತಿ ಶಯದಿಂದ ಸಚೇತನನನ್ನಾಗಿ ಮಾಡಿತು. ಆ ಸಾಮರ್ಥ್ಯವಿರುವ ಆ ಬ್ರಹ್ಮವಸ್ತುವಿಗಿಂತ ಇತರ ಬೇರೆ ಯಾವ ವಸ್ತುವೂ ಇರಲಿಲ್ಲ. ಅನಂತರ ಸ್ಪಷ್ಟವಾದ ಈ ಜಗತ್ತು ಆಗ ಇರಲಿಲ್ಲ.

ನ ಮೃತ್ಯುಃ ಆಸೀತ್ ಅಮೃತಂ ನ ತರ್ಹಿ—ಆ ಕಾಲದಲ್ಲಿ ಮರಣವಾಗಲಿ ಮರಣರಾಹಿತ್ಯವಾಗಲೀ ಇರಲಿಲ್ಲ ಇರಲಿಲ್ಲವೆಂದು ಇಲ್ಲಿ ಹೇಳಿದೆ. ಮರಣವೆಂದರೆ ಪ್ರಾಣಿಗಳ ಶರೀರಗಳಿಗೆ ಕೆಲವು ಕಾಲಾನಂತರ ಸಂಭವಿಸಬಹುದಾದ ಶರೀರವಿಯೋಗ. ಶರೀರಕ್ಕೂ ಪ್ರಾಣಕ್ಕೂ ಇರುವ ಸಂಬಂಧವಿಯೋಗ ಅಥವಾ ಇಲ್ಲಿ ಮೃತ್ಯುವೆಂದರೆ ನಾಶವೆಂದೂ ಅರ್ಥ ಮಾಡಬಹುದು. ಜಗದಾದಿಗಳ ನಾಶ ಎಂದರ್ಥವು. ಸರ್ವೇಷಾಂ ಪ್ರಾಣಿನಾಂ ಪರಿಪಕ್ವಂ ಭೋಗ ಹೇತುಭೂತಂ ಸರ್ವಂ ಕರ್ಮ ಯದೋಪಭುಕ್ತಮಾಸೀತ್ತದಾ ಭೋಗಭಾವಾನ್ನಿಷ್ಪ್ರಯೋಜನಮಿದಂ ಜಗದಿತಿ ಪರಮೇಶ್ವರಸ್ಯ ಮನಸಿ ಸಜಿಹೀರ್ಷಾ ಜಾಯತೇ | ತಥೈವ ಸ ಮೃತ್ಯುಃ ಸರ್ವಂ ಜಗತ್ ಸಂಹರತ ಇತಿ ಕಿಮನೇನ ಮೃತ್ಯುನಾ

ಸಂಹರ್ತ್ರಾ ತದಭಾವಕೃತಂ ವಾ ಕಥಮಮರಣಂ ಸ್ಯಾದಿತಿ || ಪರಮೇಶ್ವರನು ಜಗತ್ತನ್ನು ಸೃಷ್ಟಿಮಾಡಿ ಆದರಲ್ಲಿ ನಾನಾ ವಿಧ ಪ್ರಾಣಿಗಳನ್ನು ಸೃಷ್ಟಿಸಿ ಅವುಗಳು ತಮ್ಮ ಸುಖದುಃಖಗಳನ್ನು ಅನುಭವಸುವಂತೆ ಮಾಡಿರುವನಷ್ಟೆ. ಆ ಪ್ರಾಣಿಗಳು ತಮ್ಮ ಸುಖದುಃಖಾದಿಗಳಿನ್ನು ಪೂರ್ತಿಯಾಗಿ ಅನುಭವಿಸಿದನಂತರ ಈ ಜಗತ್ತು ನಿಷ್ಪ್ರಯೋಜನವೆಂದು ಜಿಗುಪ್ಸೆಯು ಮನಸ್ಸಿನಲ್ಲಿ ಹುಟ್ಟುವುದು. ಆಗ ಅದನ್ನು ಪರಮೇಶ್ವರನೇ ಮೃತ್ಯುರೂಪದಿಂದ (ಸಂಹಾರಕ) ನಾಶಗೊಳಿಸುವನು. ಈ ರೀತಿ ನಾಶ ವುಂಟಾಗುವುದನ್ನು ಮೃತ್ಯುವೆಂದು ಹೇಳಬಹುದು, ಇಂತಹ ಮೃತ್ಯುವು ಆಗ ಇರಲಿಲ್ಲವೆಂದರೆ, ಎಂದರೆ ನಾಶವಿಲ್ಲದ ಮೇಲೆ ಈ ಜಗತ್ತು ಅಮೃತವಾಗಿ ಎಂದರೆ ನಾಶವಿಲ್ಲದಂತೆ ಯಾವಾಗಲೂ ಚಿರಸ್ಥಾಯಿಯಾಗಿ ಇರುವುದೇ ಎಂದರೆ ಹಾಗೆ ಇರಲೂ ಸಾಧ್ಯವಿಲ್ಲ, ಜಗತ್ತೆ ಆಗಲಿ, ಅದರಲ್ಲಿರುವ ಪ್ರಾಣಿಗಳೇ ಆಗಲಿ ಇಲ್ಲದಿದ್ದ ಮೇಲೆ ಅದಕ್ಕೆ ಸಂಭವಿಸಬಹುದಾದ ಮೃತ್ಯುವಿನ ಪ್ರಶ್ನೆಯೇ ಏಳುವುದಿಲ್ಲ. ಹಾಗೆಯೇ ಅಮೃತ ಅಥವಾ ಮರಣರಾಹಿತ್ಯ (ವಿನಾಶ) ವೂ ಇರುವುದಿಲ್ಲ. ನಾಶಮಾಡುವುದಕ್ಕೆ ಯಾವುದಾದರೂ ಒಂದು ವಸ್ತುವಿದ್ದರಲ್ಲಿವೇ ಅದನ್ನು ನಾಶಮಾಡುವುದು ? ಯಾವ ವಸ್ತುವೂ ಇಲ್ಲದಿರುವಾಗ ದಾಶಮಾಡುವು ದಾದರೂ ಏನನ್ನು ? ಏನೂ ಇಲ್ಲ. ಆದ್ದರಿಂದ ಆ ಕಾಲದಲ್ಲಿ ಮರಣಕ್ಕಾಗಲಿ, ಮರಣರಾಹಿತ್ಯಕ್ಕಾಗಲಿ ಮಾಡಲು ಏನೂ ಕೆಲಸನರಲಿಲ್ಲ ಎಂದರೆ ಅವುಗಳ ಅವಶ್ಯಕತೆಯೇ ಇರಲಿಲ್ಲ. ಆದ್ದರಿಂದ ಅವು ಇರಲಿಲ್ಲ ಎಂದಭಿಪ್ರಾಯವು.

ನ ರಾತ್ರ್ಯಾಃ ಅಹ್ನಃ ಆಸೀತ್ ಪ್ರಕೇತಃ—ಪ್ರಕೇತಃ ಎಂದರೆ ತಿಳುವಳಿಕೆಯು, ಪರಿಜ್ಞಾನವು. ಆ ಕಾಲದಲ್ಲಿ ರಾತ್ರಿಯಾವುದು, ಹಗಲು ಯಾವುದು ಅಥವಾ ಈಗ ರಾತ್ರಿಯೋ ಹಗಲೋ ಎಂಬ ಪರಿಜ್ಞಾನವೂ ಇರಲಿಲ್ಲ. ಇಲ್ಲಿ ರಾತ್ರಿ ಎಂದರೇನು ಹಗಲೆಂದರೇನು ಎಂದು ತಿಳಿದುಕೊಳ್ಳುವುದು ಅವಶ್ಯಕವು. ಈಗ ನಮಗಿರುವ ಲೋಕಾನುಭವದಂತೆ ಸೂರ್ಯೋ ದಯದಿಂದ ಸೂರ್ಯಾಸ್ತಮಯದ ವರೆಗಿನ ಕಾಲಕ್ಕೆ ಹಗಲೆಂದೂ, ಸೂರ್ಯಾಸ್ತಮಯದಿಂದ ಪುನಃ ಸೂರ್ಯೋದಯದವರಗಿನ ಕಾಲಕ್ಕೆ ರಾತ್ರಿಯೆಂದೂ ತಿಳಿಯುತ್ತೇವೆ. ಈ ರಾತ್ರಿ ಹಗಲುಗಳ ಅವಶ್ಯಕತೆಯೇನು ? ಇವು ಹೇಗೆ ಉಂಟಾಗುತ್ತವೆ ? ಎಂದರೆ ಪ್ರಾಣಿಗಳು ಹಗಲಿನಲ್ಲಿ ತಮ್ಮ ಆಹಾರಾದಿಪ್ರಾಪ್ತಿಗಾಗಿ ನಾನಾ ವ್ಯಾಪಾರಗಳಲ್ಲಿ ತೊಡಗಿರುವವು. ರಾತ್ರಿಕಾಲದಲ್ಲಿ ತಮ್ಮ ಹಗಲಿನ ವ್ಯಾಪಾರಗಳನ್ನು ನಿಲ್ಲಿಸಿ ವಿಶ್ರಾಂತಿಯನ್ನು ಪಡೆಯುವವು. ಪ್ರಾಣಿಗಳಿಗೆ ವ್ಯಾಪಾರೋದ್ಯಮಗಳೂ ವಿಶ್ರಾಂತಿಯೂ ಎರಡೂ ಅವಶ್ಯಕವಾದ್ದರಿಂದ ಹಗಲು ರಾತ್ರಿಗಳೆರಡೂ ಅವಶ್ಯಕವು. ಪರಮಾತ್ಮನ ಶಕ್ತಿಸಾಮರ್ಥ್ಯಗಳಿಂದ ಉಂಟಾಗುವ ಭೂಮಿಯ ಚಲನ ವಲನಗಳಿಂದ ಹಗಲು ರಾತ್ರಿಗಳುಂಟಾಗುವವು. ಭೂಮಿಯು (ಅಥವಾ ಭೂಮಿಯ ಭಾಗವು) ಸೂರ್ಯಾಭಿಮುಖವಾಗಿದ್ದಾಗ ಹಗಲೆಂದೂ, ಸೂರ್ಯನ ಎದುರಗಿಲ್ಲದೆ ಬೇರೇಕಡೆಗೆ ತಿರುಗಿದಾಗ ರಾತ್ರಿಯೆಂತಲೂ ವ್ಯವಸ್ಥೆಯು. ಭೂಮಿಯ ಚಲನ ವಲನಗಳು ಒಂದು ನಿರ್ದಿಷ್ಟಕ್ರಮವನ್ನೂ. ನಿರ್ದಿಷ್ಟಕಾಲವನ್ನೂ ಅನುಸರಿಸುವುದರಿಂದ ಹಗಲು ರಾತ್ರಿಗಳ ಕಾಲಪರಿಮಿತಿಯೂ ಸ್ವಲ್ಪ ಹೆಚ್ಚುಕಡಿಮೆ ಸಮನಾಗಿರುವುದು ಇದಲ್ಲದೆ ಭೂಮಿಯು ಸೂರ್ಯನ ಸುತ್ತ ಪರಿಭ್ರಮಣಮಾಡುವುದು. ಆ ರೀತಿ ಒಂದುಸಲ ಪರಿಭ್ರಮಣಮಾಡುವ ಕಾಲಕ್ಕೆ ಒಂದು ಸಂವತ್ಸರವೆಂದು ಹೆಸರು. ಕಾಲವು ಆದ್ಯಂತಗಳಿಲ್ಲದೆ ಅನಂತವಾಗಿರುವುದರಿಂದ ಅದರಲ್ಲಿ ಕೆಲವು ಭಾಗವನ್ನು (ಕೆಲವು ಕಾಲವನ್ನು) ಅಳತೆ ಮಾಡಲು ಸಂವತ್ಸರ ವನ್ನು ಅಳತೆ ಕೋಲನ್ನಾಗಿ ಪರಿಗಣಿಸುವುದು ರೂಢಿಯಾಗಿದೆ. ಒಂದಾವರ್ತಿ ಭೂಮಿಯು ಸೂರ್ಯನನ್ನು ಸುತ್ತುವಾಗ ಕಳೆಯುವ ಕಾಲಕ್ಕೆ ಸಂವತ್ಸರವೆಂದೂ ಅಂತಹ ಪರಿಮಿತಿಯುಳ್ಳ ಅನೇಕ ಸಂವತ್ಸರಗಳ ಪರಿಮಿತಿಯೆಂದೂ ಕಾಲವನ್ನು ಅಳತೆ ಮಾಡಬಹುದು. ಅದರಂತೆ ಸಂವತ್ಸರಕ್ಕಿಂತಲೂ ಸಣ್ಣದಾದ ಕಾಲವಿಭಾಗವನ್ನು, ಮಾಸ, ಪಕ್ಷ, ದಿನ, ಹಗಲು,-ರಾತ್ರೆ ಮೂಹೂರ್ತ, ಕ್ಷಣ, ಕಲಾ, ಕಾಷ್ಠಾ ಇತ್ಯಾದಿ ವಿಭಾಗಗಳಿಂದ ಅಳೆಯಬಹುದು. ಇದೆಲ್ಲಾ ಭೂಮಿಗೆ ಸಂಬಂಧಪಟ್ಟ ವಿಷಯವಾಯಿತು. ಇತರ ಗ್ರಹಗಳಿಗೆ ಇದು ಅನ್ವಯಿಸುವುದಿಲ್ಲ. ಇವುಗಳ ಚಲನ ವಲನಗಳೂ, ಸೂರ್ಯನ ಸುತ್ತಲೂ ಮಾಡುವ ಪರಿಭ್ರಮಣವೂ ನಾನಾ ವಿಧವಾಗಿರುವುದರಿಂದ ಆ ಗ್ರಹಗಳಿಗೆ ಹಗಲು ರಾತ್ರಿಗಳ ಪರಿಮಾಣವೂ ಸಂವತ್ಸರದ

ಪರಿಮಾಣವೂ ಭೂಮಿಗಿಂತ ಹೆಚ್ಚು ಕಡಿಮೆಯಾಗಿ ನಾನಾವಿಧವಾಗಿರುವವು. ಪ್ರಕೃತ ಸಂದರ್ಭದಲ್ಲಿ ಅಹೋರಾತ್ರಿಗಳ ಪರಿಜ್ಞಾನಕ್ಕೆ ಆಗ ಅವಕಾಶವಿರಲಿಲ್ಲ ಎಂದು ಹೇಳುವಾಗ ಕಾಲವಿಭಾಗವನ್ನು ತಿಳಿಯಲು ಯಾವ ಸಾಧನವೂ ಇರಲಿಲ್ಲ. ಸೂರ್ಯ ಚಂದ್ರರಾಗಲಿ, ಇತರ ಗ್ರಹನಕ್ಷತ್ರಗಳಾಗಲಿ, ಅವುಗಳ ಚಲನ ವಲನಗಳಾಗಲೀ ಯಾವುದು ಇಲ್ಲದ್ದರಿಂದ ಕಾಲ ವಿಭಾಗವನ್ನು ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಕಾಲವೇ ಇರಲಿಲ್ಲವೇ ಎಂದರೆ ಕಾಲವು ಇತ್ತು ಅದು ಯಾವಾಗಲೂ ಇರುವುದು ಅದು ಅನಂತವಾಗಿಯೂ ಇದೆ. ಅದೂ ಪರಮಾತ್ಮಸ್ವರೂಪವೇ ಹೊರತು ಬೇರೆಯಲ್ಲ. ಎಂದು ಉಪನಿಷದಾದಿ ಗ್ರಂಥಗಳು ಸಾರುತ್ತಿರುವವು. ದೇಶಕಾಲವಸ್ತುಗಳಲ್ಲಿ ಅನಂತವಾಗಿರುವುದೇ ಪರಮಾತ್ಮನ ಸ್ವರೂಪವು ಎಂದು ಅನೇಕಕಡೆ ಉಕ್ತವಾಗಿದೆ.

**ಆನೀತ್ ಅವಾತಂ ಸ್ವಧಯಾ ತತ್ ಏಕಂ**—ಈ ವಾಕ್ಯದ ಅರ್ಥವನ್ನು ವಿವರಿಸುವುದಕ್ಕೆ ಪೂರ್ವಭಾವಿಯಾಗಿ ಈ ವಾಕ್ಯದಲ್ಲಿರುವ ಪ್ರತಿಪದವನ್ನು ಸೂಕ್ಷ್ಮವಾಗಿ ವಿವರಿಸುವುದು ಆವಶ್ಯಕವು. ಆನೀತ್ ಎಂಬ ಶಬ್ದವು **ಅನು—ಪ್ರಾಣನೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಭೂತಕಾಲವನ್ನು ಸೂಚಿಸುವುದು. ಯಾಸ್ಕರು ಅನಿತಿ ಎಂಬ ಶಬ್ದವನ್ನು (ಧಾತುವನ್ನು) ಗತ್ಯರ್ಥವಿರುವ ಶಬ್ದಗಳ ಮಧ್ಯದಲ್ಲಿ ಪಠಿಸಿರುವರು (ನಿ. ೩-೯). ಆದ್ದರಿಂದ ಈ ಧಾತುವಿಗೆ ಚಲಿಸು, ಉಸಿರಾಡು ಎಂದರ್ಥವಿರುವುದು. ಉಸಿರಾಡುವುದೂ, ಚಲಿಸುವುದೂ ಪ್ರಾಣಿಗಳಿಗೆ ಮುಖ್ಯ ಕರ್ಮವಾದ್ದರಿಂದ ಅವಿಲ್ಲದಿರುವ ಪ್ರಾಣಿಗಳಿಗೆ ಜೀವವಿಲ್ಲವೆಂದೂ, ಜಡವಸ್ತುವೆಂದೂ ಹೇಳಬೇಕಾಗುವುದು. ಆದ್ದರಿಂದ ಪ್ರಾಣಿಗಳಿಗೆ ಚೈತನ್ಯ ಅಥವಾ ಪ್ರಾಣವಿರುವುದೆಂದು ತಿಳಿಯಬೇಕಾದರೆ ಅವುಗಳು ಉಸಿರಾಡಬೇಕು ಅಥವಾ ಚಲನವಲನಗಳನ್ನು ವ್ಯಕ್ತಪಡಿಸಬೇಕು. ಇದೇ ಪ್ರಾಣವಿರುವುದಕ್ಕೆ ಗುರುತು. ಇಲ್ಲಿ ಆನೀತ್ ಎಂಬ ಕ್ರಿಯಾಪದಕ್ಕೆ **ಆನೀದಿತ್ಯತ್ರ ಧಾತ್ವರ್ಥಕ್ರಿಯಾ, ತತ್ಕರ್ತಾ ತಸ್ಯ ಚ ಭೂತಕಾಲ ಸಂಬಂಧ ಇತಿ ತ್ರಯೋಽರ್ಥಾಃ ಪ್ರತೀಯಂತೇ** ಎಂಬರ್ಥವಿರುವುದು. ಎಂದರೆ, ಆ ಶಬ್ದದಲ್ಲಿ ಧಾತುವಿನ ಅರ್ಥ, ಅದನ್ನು ಮಾಡುದ ಕರ್ತೃವು, ಅದನ್ನು ಮಾಡಿದ ಭೂತಕಾಲ ಎಂಬ ಮೂರು ವಿಷಯಗಳು ಅಡಕವಾಗಿವೆ. ಎಂದರೆ ಆ ಪರಬ್ರಹ್ಮನು (ಉಸಿರಾಡುವ ಮೊದಲಾದ) ಚಲನವನ್ನುಂಟುಮಾಡಿದನು ಎಂದು ಆನೀತ್ ಎಂಬ ಶಬ್ದದ ಮುಖ್ಯಾಭಿಪ್ರಾಯವು. ಇನ್ನು ಅವಾತಂ ಎಂದರೇನು? ವಾತ ಎಂದರೆ ವಾಯುವು. ವಾತಂ ಎಂದರೆ ಇಲ್ಲಿ ವಾಯುವನ್ನು ಸೇವಿಸುವ ಎಂದರೆ ಉಸಿರಾಡುವ ಪ್ರಾಣಿಯು, ಅವಾತಂ ಎಂದರೆ ಉಸಿರಾಡದೆ ಚಲನಶಕ್ತಿಯೂ ಇಲ್ಲದೆ ಇರುವ ಜಡವಸ್ತುವೆಂದರ್ಥವು. **ಸ್ವಧಯಾ— ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ । ತಯಾ ತದ್ಬ್ರಹ್ಮೈಕಮವಿಭಾಗಾಪನ್ನಮಾಸೀತ್ ॥** ತನ್ನಲ್ಲಿ (ಪರಮಾತ್ಮನಲ್ಲಿ) ತನ್ನನ್ನಾಶ್ರಯಿಸಿ ಇರುವ ಶಕ್ತಿಸಾಮರ್ಥ್ಯಕ್ಕೆ ಸ್ವಧಾ ಎಂದು ಹೆಸರು. ಇದನ್ನು ಕೆಲವರು ಮಾಯಾ ಎಂದೂ ಕರೆಯುವರು. ಈ ಸಾಮರ್ಥ್ಯವು ಬ್ರಹ್ಮನಲ್ಲಿ ಪ್ರತ್ಯೇಕವಾಗಿದ್ದಿತೇ ಎಂದರೆ ಇಲ್ಲ. ಬ್ರಹ್ಮನೇ ಬೇರೆ ಅವನ ಸಾಮರ್ಥ್ಯವೇ ಬೇರೆ ಎಂದು ಹೇಳುವಂತಿಲ್ಲ ಬ್ರಹ್ಮನಲ್ಲಿಯೇ ಸಮಸ್ತವೂ ಐಕ್ಯವಾಗಿರುವುದು. ಇಂತಹ ಬ್ರಹ್ಮನ ಮಾಯಾ ಎಂಬ ಅಸಾಧಾರಣ ಸಾಮರ್ಥ್ಯದಿಂದ ಎಂದು ಈ ಸ್ವಧಾ ಶಬ್ದಕ್ಕೆ ಅರ್ಥವು. **ತತ್— ತತ್ ಎಂದರೆ ಸಕಲ ವೇದಾಂತಪ್ರಸಿದ್ಧಂ ಬ್ರಹ್ಮತತ್ತ್ವಂ ।** ಸಕಲ ವೇದಾಂತಗಳಲ್ಲಿಯೂ ಪ್ರತಿಪಾದ್ಯವೂ ಅವ್ಯಕ್ತ ಸ್ವರೂಪವೂ ಆದ ಬ್ರಹ್ಮವೆಂಬ ಯಾವ ವಸ್ತುವಿರುವುದೋ ಅದನ್ನು ತತ್ ಎಂಬ ಶಬ್ದದಿಂದ ಕರೆಯುವರು, **ತತ್ ತ್ವಂ ಅಸಿ** ಎಂಬ ವಾಕ್ಯದಲ್ಲಿರುವ ತತ್ ಎಂಬ ಶಬ್ದದ ಅರ್ಥದಂತೆ ಇರುವ ಪರಬ್ರಹ್ಮವಸ್ತುವೆಂದರ್ಥವು. **ಏಕಂ. ಅದ್ವಿತೀಯಂ ಏಕಮೇವ ।** ಬ್ರಹ್ಮವಸ್ತುವಿಗೆ ಸರಿಸಮನಾದ ಅಥವಾ ಅಧಿಕವಾದ ಬೇರೆ ವಸ್ತುವಿಲ್ಲ. ಇದಕ್ಕೆ ಹೋಲಿಕೆಯಾಗುವ ವಸ್ತುವೂ ಇಲ್ಲ. ಎಂದರೆ ಇಂತಹ ಎರಡು ವಸ್ತುಗಳಿಲ್ಲ. ಯಾವಾಗಲೂ ಒಂದೇ ಆಗಿರುವುದು. ಪ್ರತಿಪದದನ್ನೂ ವಿವರಿಸಿದನಂತರ ಇನ್ನು ವಾಕ್ಯಾರ್ಥವನ್ನು ವಿಮರ್ಶೆಮಾಡೋಣ. ಯಾವಾಗಲೂ ಅದ್ವಿತೀಯವೂ, ಏಕಮಾತ್ರವಿರುವುದೂ ಆದ

ಪರಬ್ರಹ್ಮವಸ್ತುವು ತನ್ನ ಅಸಾಧಾರಣವಾದ ಮಾಯಾಶಕ್ತಿಯಿಂದ ಉಸಿರಾಡದಿರುವ ಜಡವಸ್ತುವನ್ನು ಉಸಿರಾಡುವಂತೆ ಅದಕ್ಕೆ ಚೈತನ್ಯವನ್ನು ತುಂಬಿ ಅದನ್ನು ಚಲಿಸುವ ಪ್ರಾಣಿಯನ್ನಾಗಿ ಮಾಡಿತು ಎಂದು ವಾಕ್ಯದ ಅಭಿಪ್ರಾಯವು. ಪರಬ್ರಹ್ಮನು ತಾನು ಸೃಷ್ಟಿಸಿದ ಜಗದಾದಿ ವಸ್ತುಗಳಲ್ಲಿ ತನ್ನ ಅಂಶವಾದ ಚೈತನ್ಯವನ್ನು ತುಂಬದಿದ್ದರೆ ಎಂದರೆ ತಾನು ಅವುಗಳಲ್ಲಿ ಪ್ರಜ್ಞೆಯ ರೂಪದಿಂದ ಪ್ರವೇಶಿಸದಿದ್ದರೆ ಅವುಗಳು ಜಡವಸ್ತುಗಳಾಗಿಯೇ ಉಳಿಯುತ್ತಿದ್ದವು. ಅವುಗಳಿಗೆ ಉಸಿರಾಡಲೂ ಚಲಿಸಲೂ ಶಕ್ತಿಯುಂಟಾಗುತ್ತಿರಲಿಲ್ಲ. ಆದ್ದರಿಂದ ಪರಬ್ರಹ್ಮನು ಮೊದಲು ತಾನು ಸೃಷ್ಟಿಸಿದ ವಸ್ತುಗಳಲ್ಲಿ ತಾನೇ ಅಂತರಾತ್ಮನಾಗಿ ಪ್ರವೇಶಿಸಿ ಪ್ರಾಣಿಗಳ ಮತ್ತು ಅಚೇತನ ವಸ್ತುಗಳ ಸಮಸ್ತ ವ್ಯವಹಾರಗಳನ್ನು ನಡೆಸುತ್ತಿರುವನು ಎಂದಭಿಪ್ರಾಯವು.

**ತಸ್ಮಾತ್ ಹ ಅನ್ಯತ್ ನ ಪರಃ ಕಿಂ ಚನ ಆಸ**—ಹಿಂದಿನ ವಾಕ್ಯದಲ್ಲಿ ಏಕಂ ಎಂಬ ಶಬ್ದಪ್ರಯೋಗವಿದೆ. ಏಕಂ ಎಂದರೆ ಅದ್ವಿತೀಯನು, ತನಗಿಂತ ಬೇರೆ ಯಾವ ವಸ್ತುವೂ ಇಲ್ಲದನು ಎಂದರ್ಥವು. ಬ್ರಹ್ಮವನ್ನು ಬಿಟ್ಟರೆ ಬೇರೆ ವಸ್ತುವೇ ಇಲ್ಲ ಎಂದು ಈ ಏಕಂ ಶಬ್ದದ ಅರ್ಥವು. ಹೀಗಿರುವಾಗ ಬ್ರಹ್ಮನು ಅವಾತಂ ಎಂವರೆ ಚಲನವಿಲ್ಲದ ಜಡವಸ್ತು ವನ್ನು ಚೇತನಾಯುಕ್ತವನ್ನಾಗಿ ಮಾಡಿದನು ಎಂದು ಹೇಳಿರುವುದು ಅಸಮಂಜಸವಲ್ಲವೇ ? ಬ್ರಹ್ಮವೊಂದನ್ನು ಬಿಟ್ಟರೆ ಬೇರೆ ವಸ್ತುವೇ ಇಲ್ಲದಿರುವಾಗ ಜಡವಸ್ತುವೆಲ್ಲಿಂದ ಬಂತು ? ಬ್ರಹ್ಮ , ಜಡವಸ್ತು ಎಂದು ಎರಡು ವಸ್ತುಗಳಾಗಲಿಲ್ಲವೇ ? ಇದು ಪರಸ್ಪರ ವಿರೋಧವಲ್ಲವೇ ಎಂದರೆ ಅದನ್ನೇ **ತಸ್ಮಾದ್ಧಾನ್ಯನ್ನ ಪರಃ ಕಿಂಚ ನಾಸ** ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿ ವಿವರಿಸು ವರು. ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವಸ್ತುವೊಂದೇ ಇದ್ದಿತು. ಅದೂ ಸಹ ಅವ್ಯಕ್ತ (ಅಸತ್) ರೂಪದಲ್ಲಿದ್ದಿತು. ಬೇರೆ ವಸ್ತುವಿರಲಿಲ್ಲ. ಸೃಷ್ಟಿಕಾಲದಲ್ಲಿ ಈ ಬ್ರಹ್ಮವೇ ತನ್ನ ಮಾಯಾಶಕ್ತಿಯಿಂದ ಜಗದಾದಿಗಳಾಗಿ ಪರಿವರ್ತಿತವಾಯಿತು. ಆದ್ದರಿಂದ ಈ ಪರಿವರ್ತಿತವಾದ ಜಗದಾದಿಗಳು ಬ್ರಹ್ಮವಸ್ತುವಲ್ಲದೆ ಬೇರೆಯಲ್ಲ. ಈ ಜಗದಾದಿಗಳು ತಮ್ಮ ವ್ಯವಹಾರಾದಿಗಳನ್ನು ನಡೆಸಲು ಅವುಗಳಲ್ಲಿ ಬ್ರಹ್ಮನು ಚೈತನ್ಯರೂಪದಿಂದ ಪ್ರವೇಶಿಸಿರುವನೆಂದು ಹೇಳಿದೆ. ಆದ ಮಾತ್ರಕ್ಕೆ ಬ್ರಹ್ಮಬೇರೆ, ಜಗದಾದಿ ಗಳು ಬೇರೆ, ಇವೆರಡೂ ಬೇರೆಬೇರೆ ಎರಡು ವಸ್ತುಗಳು ಎಂದು ಹೇಳುವುದು ಸರಿಯಲ್ಲ ಒಂದೇವಸ್ತುವಿನ ಎರಡು ಪ್ರತಿಬಿಂಬ ಗಳು. ಅನೇಕ ಪಾತ್ರೆಗಳಲ್ಲಿ ತುಂಬಿರುವ ನೀರುಗಳಲ್ಲಿ ಸೂರ್ಯನ ಪ್ರತಿ ಬಿಂಬವು ಅನೇಕ ಸೂರ್ಯಗಳಂತೆ ಕಾಣಿಸಿದರೂ ಸೂರ್ಯನು ಒಬ್ಬನೇ ಹೊರತು ಅನೇಕ ಸೂರ್ಯರಿಲ್ಲ. ಅದರಂತೆ ಜಗದಾದಿಗಳು ವಿಧವಿಧವಾಗಿ ಕಂಡರೂ ಅವೆಲ್ಲವೂ ಒಬ್ಬನೇ ಆದ ಪರಮಾತ್ಮನ ಸ್ವರೂಪವೇ ಆಗಿರುವುದು. ಆ ಪರಮಾತ್ಮನನ್ನು ಅಥ ವಾಬ್ರಹ್ಮವಸ್ತುವನ್ನು ಬಿಟ್ಟು ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ. ಆದ್ದರಿಂದ ಸೃಷ್ಟಿಗೆ ಪೂರ್ವದಲ್ಲಿ ಈಗ ಕಾಣುತ್ತಿರುವ ಈ ಜಗದಾದಿಗಳೂ ಇರಲೇ ಇಲ್ಲ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

ಈ ವಿಷಯದಲ್ಲಿ ಎರಡನೇ ಉದಾಹರಣೆಯು—

**ತಮ ಆಸೀತ್ತಮಸಾ ಗೂಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಂ |**
**ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾಜಾಯತೈಕಂ || ೩ ||**

(ಋ. ಸಂ. ೧೦–೧೨೯–೩)

ಇದರ ಅರ್ಥವು—ಎಲ್ಲಕ್ಕಿಂತ ಮೊದಲು ಎಂದರೆ, ಸೃಷ್ಟಿಯ ಆರಂಭದೆಶೆಯಲ್ಲಿ ಏನೊಂದನ್ನು ತಿಳಿಯಲು ಸಾಧ್ಯವಾಗದ ಅಂಧಕಾರದಿಂದ ದಟ್ಟವಾಗಿ ಕವಿದಿರುವ ಕತ್ತಲೆಯು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ಈ ಕಾಣುವ ಸಮಸ್ತ ಜಗತ್ತೂ (ವಿಶ್ವವೂ) ಈಗಿರುವಂತೆ ಇರದೆ ಎಲ್ಲವೂ ಉದಕಮಯವಾಗಿದ್ದಿತು. ಅಥವಾ ಉದಕದಂತೆ ನಿಬಿಡವಾದ ಅಂಧಕಾರದಿಂದ

ವ್ಯಾಪಿಸಿತ್ತು. ಯಾವ ಆಧಾರವೂ, ಆವರಣವೂ ಇಲ್ಲದ ಮತ್ತು ಕಾರ್ಯಕಾರಣಗಳೆಂಬ ಪ್ರತ್ಯೇಕವಿಭಾಗಗಳಿಲ್ಲದೆ ಒಂದೇ ಆಗಿದ್ದ ಅವ್ಯಕ್ತಸ್ವರೂಪವು ತನ್ನ ಸೃಷ್ಟಿಮಾಡಬೇಕೆಂಬ ಧ್ಯಾನರೂಪವಾದ ಮಹಿಮೆಯಿಂದ ಕಾರ್ಯರೂಪವಾದ ಜಗತ್ತಾಗಿ ಪರಿಣಮಿಸಿತು

ಪೂರ್ವದಲ್ಲಿ ಈ ಜಗತ್ತಿರಲಿಲ್ಲವೆಂದು ಹೇಳಿದೆಯಷ್ಟೆ. ಹಾಗಾದರೆ ಈ ಜಗತ್ತಿನ ಉತ್ಪತ್ತಿಯು ಹೇಗಾಯಿತು? ಒಂದು ವಸ್ತುವನ್ನು ನಿರ್ಮಿಸುವಾಗ ಅದನ್ನು ನಿರ್ಮಿಸುವ ಕರ್ತೃವು ಬೇಕು, ಅದಕ್ಕೆ ಬೇಕಾದ ಮೂಲವಸ್ತುವು ಬೇಕು. ಅದಕ್ಕೆ ಕಾರಣವೂ ಬೇಕು. ಹೇಗೆಂದರೆ ಒಂದು ಮಡಕೆಯುನ್ನು ನಿರ್ಮಿಸಬೇಕಾದರೆ ಅದನ್ನು ನಿರ್ಮಿಸಬಲ್ಲ ಕುಂಬಾರನಿರ ಬೇಕು. ಅವನೇ ಕರ್ತೃವು. ಅದಕ್ಕೆ ಬೇಕಾದ ಮೂಲವಸ್ತುವೆಂದರೆ ಮಣ್ಣು ಬೇಕು. ಕಾರಣವು ಬೇಕು. ಹೀಗಿರುವಾಗ ಜಗನ್ನಿರ್ಮಾಣಕಾರ್ಯಕ್ಕೆ ಕರ್ತೃವು ಯಾರೆಂದರೆ ಅವ್ಯಕ್ತಸ್ವರೂಪನಾದ ಬ್ರಹ್ಮನೇ ಕರ್ತೃವು; ಜಗನ್ನಿರ್ಮಾಣಕ್ಕೆ ಮೂಲ ವಸ್ತುವು ಯಾವುದು? ಮೂಲವಸ್ತುವೆಂದರೆ ನಿರ್ಮಿತವಸ್ತುವಿಗಿಂತ (finished article) ಪೂರ್ವದಲ್ಲಿದ್ದ ಬೇರೆ ಪದಾರ್ಥವು (raw material) ಇಲ್ಲಿ ಪರಬ್ರಹ್ಮವು ಮಾತ್ರವಿದ್ದು ಬೇರೆ ವಸ್ತುವೇ ಇಲ್ಲದಿರುವುದರಿಂದ ಕರ್ತೃವಾದ ಬ್ರಹ್ಮವು ಯಾವ ಪದಾರ್ಥದ ಸಹಾಯದಿಂದ ಜಗತ್ತನ್ನು ನಿರ್ಮಿಸುವನು? ಎಂದರೆ ಬ್ರಹ್ಮನಿಗೆ ಜಗತ್ತನ್ನು ಸೃಷ್ಟಿಮಾಡು ವುದಕ್ಕೆ ಮೂಲವಸ್ತುವಿನ (raw material) ಅವಶ್ಯಕತೆ ಇಲ್ಲ. ಅದು ಅವನಿಗೆ ಬೇಕಾಗಿಯೂ ಇಲ್ಲ. ಅವ್ಯಕ್ತಸ್ವರೂಪ ದಿಂದಿರುವ ಬ್ರಹ್ಮನೇ ತದ್ರೂಪವಾಗಿ ಎಂದರೆ ಜಗದಾದಿವಸ್ತುಗಳಾಗಿ ಪರಿಣಮಿಸುವನು. ಎಂದರೆ ಬ್ರಹ್ಮನು ಬೇರೆ ಅಲ್ಲ, ಸದ್ರೂಪಗಳಾದ ಜಗದಾದಿಗಳು ಬೇರೆ ಅಲ್ಲ. ಆದ್ದರಿಂದ ಅಸತ್ತಿನ ಸ್ವಲ್ಪಭಾಗವೇ ಸತ್ತಾಗಿ ಪರಿಣಮಿಸಿತು ಎಂದು ತಿಳಿಯ ಬೇಕು.

**ತಮ ಆಸೀತ್ ತಮಸಾ ಗೂಳ್ಹಂ ಅಗ್ರೇ ಅಪ್ರಕೇತಂ**—ಸೃಷ್ಟಿಗೆ ಪೂರ್ವದಲ್ಲಿ ಜಗದಾದಿಗಳೆಂದೂ ಇರಲಿಲ್ಲ ವಷ್ಟೆ. ಜಗತ್ತಿರಲಿಲ್ಲದಿದ್ದಮಾತ್ರಕ್ಕೆ ಅದಕ್ಕೆ ಮೂಲಕಾರಣವಾದ ಸತ್ ಇರಲಿಲ್ಲವೆಂದರ್ಥವಲ್ಲ, ಅಸತ್ ಸತ್ತಾಗಿ ಪರಿಣಮಿಸಿ ಅದೇ ಜಗದಾದಿಗಳಿಗೆ ಮೂಲಕಾರಣವಾಯಿತು. ಹೀಗಾಗುವುದಕ್ಕೆ ಮೊದಲು ಪ್ರಲಯದೆಶೆಯಲ್ಲಿ ಸರ್ವವೂ ಅಂಧಕಾರ ಮಯವಾಗಿದ್ದಿತ್ತು. ಏನನ್ನೂ ನೋಡಿ ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಸಮುದ್ರದಲ್ಲಿ ನೀರು ಎಲ್ಲೆಲ್ಲಿಯೂ ವ್ಯಾಪಿಸಿರು ವಂತೆ ಸರ್ವವೂ ಜಲಮಯವಾಗಿದ್ದಿತು ಅಥವಾ ಜಲದಂತೆ ನಿಬಿಡವಾದ ತಮಸ್ಸಿನಿಂದ ಆವೃತವಾಗಿದ್ದಿತು. ಈ ಸ್ಥಿತಿಯನ್ನೇ ಶ್ರುತ್ಯಾದಿಗಳಲ್ಲಿ—**ಆಪೋ ವಾ ಇದಮಗ್ರೇ ಸಲಿಲಮಾಸೀತ್** ಇತ್ಯಾದಿ ವಾಕ್ಯಗಳಿಂದ ವಿವರಿಸಲಾಗಿದೆ. ಇಲ್ಲಿ ಭಾಷ್ಯಕಾರರು ತಮಃಶಬ್ದಕ್ಕೆ ಬೇರೆ ವಿಧವಾದ ಅರ್ಥವನ್ನು ಹೇಳಿದ್ದಾರೆ—**ಆತ್ಮತತ್ತ್ವಸ್ಯಾವರಕತ್ವಾನ್ಮಾಯೊಪರಸಂಜ್ಞಂ ಭಾವರೂಪಾಜ್ಞಾನಮತ್ರ ತಮ ಇತ್ಯುಚ್ಯತೇ। ತೇನ ತಮಸಾ ನಿಗೂಢಂ ಸಂವೃತಂ ಕಾರಣಭೂತೇನ ತೇನಾ ಚ್ಛಾದಿತಂ ಭವತಿ। ಆಚ್ಛಾದಕಾತ್ ತಸ್ಮಾತ್ತಮಸೋ ನಾಮರೂಪಾಭ್ಯಾಂ ಯದಾವಿರ್ಭವನಂ ತದೇವ ತಸ್ಯ ಜನ್ಮೇತ್ಯುಚ್ಯತೇ। ಏತೇನ ಕಾರಣಾವಸ್ಥಾಯಾಮಸದೇವ ಕಾರ್ಯಮುತ್ಪದ್ಯತೇ ಇತ್ಯಸದ್ವಾನಿನೋ ಯೇ ಮನ್ಯಂತೇ ತೇ ಪ್ರತ್ಯಾಖ್ಯಾತಾಃ।** ಇಲ್ಲಿ ಆತ್ಮತತ್ತ್ವವೆಂಬ ಪರಬ್ರಹ್ಮಸ್ವರೂಪವನ್ನು ತಿಳಿಯದಂತೆ ಆತ್ಮನನ್ನು ಆವರಿಸುವ ಮಾಯಾ ಎಂಬುದೇ ಎಂದರೆ ಅಜ್ಞಾನವೇ ಆವರಣವೆಂದು ಹೇಳಲ್ಪಡುವುದು, ಎಂದರೆ ಅಜ್ಞಾನವೆಂಬ ಆವರಣವೇ ತಮಸ್ಸು. ಆಚ್ಛಾದಿತವಾದ ಆ ಅಜ್ಞಾನವೆಂಬ ತಮಸ್ಸಿನಿಂದ ಆವಿರ್ಭೂತವಾಗುವ ನಾಮರೂಪಗಳಿಂದ ಕೂಡಿದ ವಸ್ತುವೇ ಜಗದುತ್ಪತ್ತಿ ಯೆಂದು ಹೇಳಲ್ಪಡುವುದು. ಎಂದರೆ ಕಾರಣಾವಸ್ಥೆಯಲ್ಲಿರುವ ಅಸತ್ತೇ ಕಾರ್ಯರೂಪವನ್ನು ಹೊಂದುವುದು ಎಂದು ಅಸ ದ್ವಾದಿಗಳ ಮತವು. ಆದರೆ ಇದು **ಅಸದ್ವಾ ಇದಮಗ್ರ ಆಸೀತ್। ತತೋ ವೈ ಸದಜಾಯತ** ಮೊದಲು ಅಸತ್ ಮಾತ್ರವಿದ್ದಿತು ಅನಂತರ ಅದೇ ಸತ್ತಾಗಿ ಉತ್ಪನ್ನವಾಯಿತು. ಇತ್ಯಾದಿ ಶ್ರುತಿವಾಕ್ಯಗಳಿಗೆ ವಿರುದ್ಧವಾಗಿರುವುದು. ಮನವೂ

ಸಹ—ಆಸೀದಿದಂ ತಮೋಭೂತಮಪ್ರಜ್ಞಾನಮಲಕ್ಷಣಂ । ಅಪ್ರತರ್ಕ್ಯಮನಿರ್ದೇಶ್ಯಂ ಪ್ರಸುಪ್ತಮಿವ ಸರ್ವತಃ (ಮನು. ೧–೫) ಎಂದು ಅಸತ್ತಿನ ಸ್ಥಿತಿಯನ್ನು ವರ್ಣಿಸಿದಾನೆ. ಇದು ತಮಸ್ಸಿನಂತೆ ಎಲ್ಲೆಲ್ಲಿಯೂ ವ್ಯಾಪಿಸಿದೆ. ಇದನ್ನು ತಿಳಿಯುವುದಾಗಲಿ, ವಿಮರ್ಶಿಸುವುದಾಗಲಿ, ಇದು ಹೀಗೆಯೆ ಇದೆ ಎಂದು ವರ್ಣಿಸುವುದಾಗಲಿ ಸಾಧ್ಯವಿಲ್ಲ. ಯಾವ ಚಲನೆವಲನೆಯೂ, ಯಾವವಿಧವ್ಯಾಪಾರವೂ ಇಲ್ಲದೆ ನಿದ್ರಾವಸ್ಥೆಯಲ್ಲಿರುವ ಪುರುಷನು ಚಲನರಹಿತವಾಗಿ ನಿದ್ರಿಸುವಂತೆ ಇದು ಇರುತ್ತದೆ. ಇದನ್ನು ವಾಕ್ಯಗಳಿಂದ ವರ್ಣಿಸಲು ಸಾಧ್ಯವಿಲ್ಲ ಎಂದು ಇದರ ಅಭಿಪ್ರಾಯವು.

**ಸಲಿಲಂ ಸರ್ವಂ ಆ ಇದಂ**—ಇಲ್ಲಿ ಭಾಷ್ಯಕಾರರು ಈ ವಾಕ್ಯಕ್ಕೆ ಲುಪ್ತೋಪಮಾರ್ಥವನ್ನು ಹೇಳಿದ್ದಾರೆ. ಸಲಿಲವೆಂದರೆ ನೀರು. **ಯಥಾ ಕ್ಷೀರೇಣಾವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾವಿಭಾಗಾಪನ್ನಂ ಜಗನ್ನ ಶಕ್ಯವಿಜ್ಞಾನಮಿತ್ಯರ್ಥಃ ।** ಹಾಲುಮಿಶ್ರಿತವಾದ ನೀರಿನಲ್ಲಿ ಹಾಲು ಯಾವುದು, ನೀರು ಯಾವುದು ಎಂದು ಪ್ರತ್ಯೇಕಮಾಡಿ ಹೇಳಲಾಗುವುದಿಲ್ಲವೋ ಅದರಂತೆ ತಮಸ್ಸಿನಲ್ಲಿ ಎಂದರೆ ಅವ್ಯಕ್ತಸ್ವರೂಪ ತಮಸ್ಸಿನಲ್ಲಿ ಬೀಜಭೂತವಾಗಿರುವ ಜಗತ್ತು ಯಾವುದು ಎಂದು ನಿರ್ದೇಶಿಸಿ ಹೇಳುವುದಕ್ಕಾಗುವುದಿಲ್ಲ,

**ತುಚ್ಛ್ಯೇನ ಆಭು ಅಪಿಹಿತಂ ಯತ್ ಆಸೀತ್ ತಪಸಃ ತತ್ ಮಹಿನಾ ಅಜಾಯತ ಏಕಂ**—ಇಲ್ಲಿ ತುಚ್ಛಶಬ್ದಕ್ಕೆ ಏನೂ ಇಲ್ಲದಿರುವ ಅಭಾವ (nothing) ಎಂಬ ಅರ್ಥವು ಸೂಚಿತವಾಗಿದೆ. ಇಂತಹ ಅಭಾವ (ಯಾವ ವಸ್ತುವೂ ಇಲ್ಲದ) ದಿಂದ ಆವೃತನಾದ ಯಾವ ಬ್ರಹ್ಮವಸ್ತುಮಾತ್ರ ಇದ್ದಿತೋ, ಬೇರೆ ಯಾವುದೂ ಇರಲಿಲ್ಲವೋ ಆ ಒಂದೇ ಒಂದಾದ ಪರಬ್ರಹ್ಮದ ಧ್ಯಾನರೂಪವಾದ ಮಹಿಮೆಯಿಂದಲೇ, ಕಾರಣದಿಂದ ಬೇರೆಯಾದ ಕಾರ್ಯಸ್ವರೂಪವಾದ ಜಗತ್ತು ಸೃಷ್ಟಿಸಲ್ಪಟ್ಟಿತು ಎಂದಭಿಪ್ರಾಯವು.

> **ಅಥಾಪಿ ಪರಿದೇವನಾ ತಸ್ಮಾಚ್ಚಿದ್ಭಾವಾತ್ ॥**
> **ಸುದೇವೋ ಅದ್ಯ ಪ್ರಪತೇದನಾವೃತ್ ॥**
> **ನ ವಿಜಾನಾಮಿ ಯದಿ ವೇದಮಸ್ಮಿ ॥**

**ಪರಿದೇವನಾ**—ವ್ಯಥೆಪಡುವುದು. ಉದಾಹರಣೆಯ ಋಕ್ಕು—

> **ಸುದೇವೋ ಅದ್ಯ ಪ್ರಪತೇದನಾವೃತ್ಪರಾವತಂ ಪರಮಾಂ ಗಂತವಾ ಉ ।**
> **ಅಥಾ ಶಯೀತ ನಿರ್ಋತೇರುಪಸ್ಥೇಽಧೈನಂ ವೃಕಾ ರಭಸಾಸೋ ಅದ್ಯುಃ ॥**

(ಋ. ಸಂ. ೧೦–೯೫–೧೪)

ಇದರ ಅರ್ಥವು—

(ಪುರೂರವನ ವಾಕ್ಯ) ಎಲೈ ಉರ್ವಶಿಯೇ, ನಿನ್ನೊಡನೆ ಕ್ರೀಡಿಸುತ್ತಿದ್ದ ನಿನ್ನ ಪತಿಯು ಈಗಲೇ ನೆಲದ ಮೇಲೆ ಬಿದ್ದುಹೋಗಲಿ ಅಥವಾ ಹಿಂತಿರುಗಿ ಬಾರದಂತೆ ಅತ್ಯಧಿಕವಾದ ದೂರದೇಶಕ್ಕೆ (ಐಹಿಕವನ್ನು ತ್ಯಜಿಸಿ) ಮರೆಯಾಗಿ ಹೋಗಲಿ ಅಥವಾ ನಿರ್ಋತಿಸಂಜ್ಞಕಳಾದ ಪಾಪದೇವತೆಯ ತೊಡೆಯ ಮೇಲೆ ಬಿದ್ದುಕೊಳ್ಳಲಿ ಅಥವಾ ಇವನನ್ನು ವೇಗಗಾಮಿಗಳಾದ ತೋಳಗಳು ಭಕ್ಷಿಸಲಿ.

ಪುರೂರವನು ಊರ್ವಶಿಯ ವಿರಹದುಃಖವನ್ನು ತಡೆಯಲಾರದೆ ದುಃಖಸಂತಪ್ತನಾಗಿ ಜೀವಿಸುವುದಕ್ಕಿಂತಲೂ ನಾನಾ ಸಂಕಟಗಳಿಗೆ ಗುರಿಯಾಗಿ ಪ್ರಾಣವನ್ನು ತ್ಯಜಿಸುವುದೇ ಒಳ್ಳೆಯದೆಂದು ಸೂಚಿಸುತ್ತಾ, ನಾನಾವಿಧಪ್ರಲಾಪಗಳಿಂದ ತನ್ನ ವಿಷಾದವನ್ನು ಸೂಚಿಸುವನು. ಅದನ್ನೇ ಋಕ್ಕಿನಲ್ಲಿ ಹೃದಯಂಗಮವಾಗಿ ಹೇಳಿಕೊಂಡಿದ್ದಾನೆ. ಯಾಸ್ಕರು ಈ ಋಕ್ಕನ್ನು ವಿಷಾದ ಅಥವಾ ದುಃಖವನ್ನು ಸೂಚಿಸುವ ಋಕ್ಕಿಗೆ ಉದಾಹರಣೆಯನ್ನಾಗಿ ಹೇಳಿರುವರು. (ನಿ. ೭-೩)

ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಉರ್ವಶಿಯೇ, ಇದುವರೆಗೂ ನಿನ್ನೊಡನೆ ಕ್ರೀಡಿಸುತ್ತಿದ್ದ ನಾನು ನಿನ್ನನ್ನಗಲಿ ವಿರಹವ್ಯಥೆಯಿಂದ ಬಳಲಿ ಹೇಗೆತಾನೆ ಜೀವಿಸಲಿ ? ಈ ನನ್ನ ಶರೀರವು ನೆಲದಮೇಲೆ ನಿಶ್ಚೇಷ್ಟಿತವಾಗಿ ಬಿದ್ದುಹೋಗಬಾರದೇ ? ಅಥವಾ ಹಿಂದಕ್ಕೆ ಬರದಿರುವಂತೆ ಅತ್ಯಂತ ದೂರದೇಶಕ್ಕಾದರೂ ಹೋಗಲೇ ? ಅಥವಾ ಮೃತ್ಯುಶಯ್ಯೆಯಲ್ಲಿ ಮಲಗಿ ಮರಣಕ್ಕೆ ವಶವಾಗಲೇ ? ಅಥವಾ ನನ್ನನ್ನು ತೋಳಗಳಾದರೂ ತಿನ್ನಬಾರದೇ ?

ಈ ರೀತಿ ಪ್ರಲಾಪಿಸುತ್ತಿರುವ ಪುರೂರವನಿಗೆ ಉರ್ವಶಿಯು ಮುಂದಿನ ಋಕ್ಕಿನಲ್ಲಿ ಇದೇ ವಿಧವಾದ ವಾಕ್ಯಗಳಿಂದ ಪ್ರತ್ಯುತ್ತರವನ್ನು ಹೇಳಿ ಸಮಾಧಾನಮಾಡುವಳು.

ಎರಡನೇ ಉದಾಹರಣೆಯು—

**ನ ವಿ ಜಾನಾಮಿ ಯದಿವೇದಮಸ್ಮಿ ನಿಣ್ಯಃ ಸಂನದ್ಧೋ ಮನಸಾ ಚರಾಮಿ ||**
**ಯದಾ ಮಾಗನ್ಪ್ರಥಮಜಾ ಋತಸ್ಯಾದಿದ್ವಾಚೋ ಅಶ್ನುವೇ**
**ಭಾಗಮಸ್ಯಾಃ ||**

(ಋ. ಸಂ. ೧-೧೬೪-೩೭)

ಇದರ ಅರ್ಥವು—

ನಾನೇ ಈ ಸಕಲ ಪ್ರಪಂಚವ್ಯಾಪಿಯಾದ ಬ್ರಹ್ಮನಾಗಿರಬಹುದೇ ಎಂಬ ತತ್ತ್ವವನ್ನು ನಾನು ವಿಚಾರಮಾಡಿ ಅರಿತಿಲ್ಲ. ಆದುದರಿಂದಲೇ ಅವಿದ್ಯೆಯಿಂದ ಆವರಿಸಲ್ಪವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖ ವಾದ ಮನಸ್ಸುಳ್ಳವನಾಗಿಯೂ ವ್ಯವಹರಿಸುತ್ತಿದ್ದೇನೆ. ಸತ್ಯಾತ್ಮಕನಾದ ಪರಬ್ರಹ್ಮನ ಯಥಾರ್ಥಜ್ಞಾನವು ಯಾವಾಗ ಲಭಿಸುತ್ತದೆಯೋ ಆ ಒಡನೆಯೇ "ಅಹಂ ಬ್ರಹ್ಮಾಸ್ಮಿ" ಎಂಬ ತತ್ವವನ್ನುಪದೇಶಿಸುವ ಉಪನಿಷದ್ವಾಕ್ಯಗಳ ಅಂಶವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತೇನೆ.

"ಅಹಂ ಬ್ರಹ್ಮಾಸ್ಮಿ" ಎಂಬ ಪರಮಾರ್ಥಜ್ಞಾನದ ಆವಶ್ಯಕತೆಯನ್ನೂ ಈ ಜ್ಞಾನಾಭಾವದಿಂದ ಉಂಟಾಗತಕ್ಕ ಪಶ್ಚಾತ್ತಾಪದ ಸ್ವರೂಪವನ್ನೂ ಈ ಋಕ್ಕಿನಲ್ಲಿ ತಿಳಿಸಿದೆ. ಇದನ್ನೇ ನಿರುಕ್ತಕಾರರು ಪರಿದೇವನಾ ವಾಕ್ಯಗಳಲ್ಲಿ ಸೇರಿಸಿರು ತ್ತಾರೆ.

"ಅಥಾಪಿ ಪರಿದೇವನಾ ಕಸ್ಮಾಚ್ಚಿದ್ಭಾವಾತ್"

(ನಿ. ೭-೩)

ಮಾನಸಿಕವಾದ ಭಾವವನ್ನು ಪ್ರಕಾಶಪಡಿಸತಕ್ಕ ಪಶ್ಚಾತ್ತಾಪಸೂಚಕವಾದ ವಾಕ್ಯವಿದು ಎಂದು ವಿವರಿಸಿದೆ. "ಆತ್ಮ-ನಿಂದಾಪೂರ್ವಕೋ ವಿಲಾಪಃ ಪರಿದೇವನಾ " ತನ್ನ ಅಜ್ಞಾನಾದಿಗಳಿಗಾಗಿ ಆತ್ಮನಿಂದಾಪೂರ್ವಕವಾದ ಭಾವಪ್ರಕಾಶನಕ್ಕೆ ಪರಿದೇವನೆಯೆಂದು ದುರ್ಗಾಚಾರ್ಯರು ನಿರುಕ್ತವಾಕ್ಯವನ್ನು ವಿವರಿಸಿದ್ದಾರೆ

ಸಾಯಣರು ಈ ಬ್ರಹ್ಮಜ್ಞಾನವು ಯಾವ ಸಾಧನದಿಂದ ಲಭ್ಯವು ಎಂಬುವನ್ನು ತಿಳಿಸುತ್ತಾ ಮೊದಲು 'ಪರಂ ಶಾಸ್ತ್ರಜನಿತಮಿದಮಹಮಸ್ಮೀತಿ ಜ್ಞಾನಂ ' ಅತ್ಯುತ್ತಮವಾದ ವೇದಾಂತಶಾಸ್ತ್ರದಿಂದ ಲಭಿಸತಕ್ಕ ಜ್ಞಾನವಿದು. ಆ ಶಾಸ್ತ್ರಜ್ಞಾನವಿಲ್ಲದ ಅವಿವೇಕಿಯು ನಾನು ಎಂಬ ಪಶ್ಚಾತ್ತಾಪಪೂರ್ವಕವಾದ ಅಜ್ಞಾನಪ್ರಕಾಶನವಿದೆ ಯೆಂದು ಮೊದಲನೆಯ ಅರ್ಥವನ್ನು ತಿಳಿಸಿ ಅನಂತರ " ಯದಿವೇದಂ " ಎಂಬುದಕ್ಕೆ ಇವ ಶಬ್ದಕ್ಕೆ ಉಪಮಾರ್ಥವನ್ನು ತೋರಿಸಿ ಎರಡನೆಯ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದು ಶಾಸ್ತ್ರಜನಿತವಾದ ಜ್ಞಾನವನ್ನೂ , ಎರಡನೆಯದು ಆತ್ಮ ಸಾಕ್ಷಾತ್ಕಾರೂಪವಾದ ಜ್ಞಾನವನ್ನೂ ಸೂಚಿಸುತ್ತದೆ. ಕೇವಲ ಶಾಸ್ತ್ರಜನಿತವಾದ ಜ್ಞಾನವನ್ನು ಮಾತ್ರ ಸಂಪಾದಿಸಿದರೆ ಅದು ಸಾಲದು,

> " ...............ಏಹ್ಯಾಸ್ಸ್ವ ವ್ಯಾಖ್ಯಾಸ್ಯಾಮಿ ತೇ ವ್ಯಾಚಿಕ್ಷಾಣಸ್ಯ ತು । ಮೇ ನಿದಿಧ್ಯಾಸಸ್ವ " ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಂ ।
>
> (ಬೃ. ಉ ೨-೪-೪, ೫)

ಶಾಸ್ತ್ರೋಪದೇಶದ ಶ್ರವಣವಾದೊಡನೆಯೇ ಅಲ್ಲಿಗೆ ಪೂರ್ಣಜ್ಞಾನವು ಲಭಿಸಿತೆಂದು ತಿಳಿಯಕೂಡದು. ಶ್ರವಣಾನಂತರ ಮನನವೂ, ಮನನಾಂತದ ನಿದಿಧ್ಯಾಸನವೂ ಅತ್ಯವಶ್ಯವಾದ ಸಾಧನಗಳು. ಆ ನಿದಿಧ್ಯಾಸನವನ್ನೇ ಬೃಹದಾರಣ್ಯಕದಲ್ಲಿ ವಿಜ್ಞಾನವೆಂದಿದೆ. ಶ್ರವಣದಿಂದಲೂ, ಮತಿಯಿಂದಲೂ ವಿಜ್ಞಾನದಿಂದಲೂ ಈ ಆತ್ಮನ ಸ್ವರೂಪವನ್ನರಿಯಬೇಕೆಂದು ಯಾಜ್ಞ ವಲ್ಕ್ಯರು ಮೈತ್ರೇಯಿಗೆ ಉಪದೇಶವನ್ನು ಮಾಡುವಾಗ ಈ ಮೂರು ಸಾಧನಗಳ ಆವಶ್ಯಕತೆಯನ್ನು ತಿಳಿಸಿದ್ದಾರೆ. ಪ್ರಕೃತ ವಾದ ಋಕ್ಕಿನಲ್ಲಿಯೂ ಸಹ ಸಾಯಣರು " ಶಾಸ್ತ್ರಜನಿತಂ ಸಾರ್ವಾತ್ಮ್ಯಂ ಜಾತಂ ನ ತು ಆನುಭಾವಿಕಂ " "ಅಹಂ ಬ್ರಹ್ಮಾಸ್ಮಿ '' ಎಂಬ ಶಾಸ್ತ್ರಜನಿತಜ್ಞಾನವು ಬೋಧವಾಯಿತೇ ಹೊರತು, ಈ ವಿಷಯದಲ್ಲಿ ಮನನಪೂರ್ವಕವಾದ ಸಾಕ್ಷಾತ್ಕಾರ ವುಂಟಾಗಲಿಲ್ಲ ಎಂಬ ನಿರ್ವೇದವು ಸೂಚಿತವಾಗಿದೆಯೆಂದು ತಿಳಿಸಿದ್ದಾರೆ. ಆದರೆ ಶಾಸ್ತ್ರಜನಿತವಾದ ಬ್ರಹ್ಮಜ್ಞಾನವು ಮನನನಿದಿಧ್ಯಾಸನಗಳಿಗೆ ಆಧಾರವಾಗಿರುವುದರಿಂದ ಶಾಸ್ತ್ರೋಪದೇಶವು ಅತ್ಯವಶ್ಯವಾಗಿರುತ್ತದೆ. ಆದುದರಿಂದ ಮೊದಲು ಸಾಯಣರು ಶಾಸ್ತ್ರೋಪದಿಷ್ಟವಾದ ಜ್ಞಾನವಾವುದೆಂಬುದನ್ನು ನಿರ್ದೇಶಿಸಲು ಶ್ರುತಿವಾಕ್ಯಗಳನ್ನುದಹರಿಸಿದ್ದಾರೆ. ಆ ಜ್ಞಾನದ ಸ್ವರೂಪವೇನೆಂದರೆ,

> ಯದಿವೇದಂ ಅಸ್ಮಿ—ಯದಪೀದಂ ಕೃತ್ಸ್ನಃ ಪ್ರಪಂಚೋऽಪ್ಯಹಮಿವಾಸ್ಮಿ । ನಾಮರೂಪಾಂಶಂ ಪರಮಾರ್ಥಂ ತ್ಯಕ್ತ್ವಾ ಸರ್ವತ್ರ ಅನುಗತೋऽಸ್ಮಿ ............... ॥

ನಾನೇ ಪರಬ್ರಹ್ಮನು. ಸಕಲವಿಶ್ವವೂ ನನ್ನ ರೂಪವೇ, ನನ್ನ ಈ ವೈಯುಕ್ತಿಕವಾದ ನಾಮವೂ, ರೂಪವೂ ಮಿಥ್ಯೆಯು. ಈ ಮಿಥ್ಯಾಜ್ಞಾನವನ್ನು ದಾಟಿ ಪರಮಾರ್ಥಜ್ಞಾನವನ್ನು ಸಂಪಾದಿಸಿದರೆ ಆಗ ಭೇದಜ್ಞಾನವು ಹೋಗಿ ಸಕಲವೂ ಬ್ರಹ್ಮಮಯ ವೆಂಬ ಜ್ಞಾನವು ಲಭಿಸುತ್ತದೆ ಎಂಬ ಐಕ್ಯಜ್ಞಾನವು. ಇದಕ್ಕೆ ಆಧಾರವೇನು ಎಂದು ಕೇಳಿದರೆ, ಉಪನಿಷದಾದಿ ಸಕಲ ಶ್ರುತಿ ವ್ಯಾಕ್ಯಗಳೂ ಇದನ್ನೂ ಬೋಧಿಸುವುದೇ ಇದರ ಆಧಾರವು.

ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ।

(ಛಾ. ಉ. ೩–೧೪–೧)

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ।

(ಛಾ. ಉ. ೬–೮–೭)

ಅಥಾತೋಽಹಂಕಾರಾದೇಶ ಏವಾಹಮೇವಾಧಸ್ತಾದಹಮುಪರಿಷ್ಟಾದಹಂ ಪಶ್ಚಾದಹಂ ಪುರಸ್ತಾದಹಂ ದಕ್ಷಿಣತೋಽಹಮುತ್ತರತೋಽಹಮೇವೇದಂ ಸರ್ವಮಿತಿ ॥

(ಛಾ. ಉ. ೭–೨೫–೧)

' ಅಹಂ ' ಎಂಬ ಪ್ರತೀತಿಯಿಂದ ಪ್ರಸಿದ್ಧವಾದ ತತ್ವವೇ ಪರಬ್ರಹ್ಮವು. ' ಅಹಂ ' ಎಂಬುದು ಬ್ರಹ್ಮನಿಂದ ಬೇರೆಯಾದ ವಸ್ತುವಲ್ಲ. ಸರ್ವವೂ ಬ್ರಹ್ಮಮಯವಾದುದರಿಂದ ವ್ಯವಹಾರಕಾಲದಲ್ಲಿ ' ಅಹಂ ' ಎಂಬ ಶಬ್ದದಿಂದ ವ್ಯವಹರಿಸಲ್ಪಡತಕ್ಕ ವಸ್ತುವೂ ಆ ಬ್ರಹ್ಮವೇ ಆಗಿದೆ. ಸರ್ವವೂ ಬ್ರಹ್ಮ, ಸರ್ವವೂ ಆತ್ಮ. ' ಇದಂ ಸರ್ವಂ ಯದಯಮಾತ್ಮಾ ' ಎಂದಿರುವಂತೆ ಅಧಃಪ್ರದೇಶದಲ್ಲಿರತಕ್ಕದ್ದೂ, ಮೇಲುಭಾಗದಲ್ಲಿ ಯಾವುದಿರುವುದೋ ಅದೂ, ಮುಂಭಾಗದಲ್ಲಿರುವುದೂ, ದಕ್ಷಿಣದಲ್ಲಿರುವುದೂ, ಉತ್ತರಭಾಗದಲ್ಲಿರುವುದೂ, ಸಕಲವೂ ಸಹ ಆತ್ಮರೂಪದಲ್ಲಿರುವ ಬ್ರಹ್ಮವೇ ಆಗಿದೆ ಎಂದು ಛಾಂದೋಗ್ಯದಲ್ಲಿ ತಿಳಿಸಿದೆ. ಇದೇ ತತ್ತ್ವವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದಿಸುತ್ತಾ,

ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇತ್ । ಅಹಂ ಬ್ರಹ್ಮಾಸ್ಮೀತಿ । ತಸ್ಮಾತ್ತತ್ಸರ್ವಮಭವತ್ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ । ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾ ಹ್ಯೇಷಾಂ ಸ ಭವತಿ ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಂ ॥

(ಬೃ. ಉ. ೧–೪–೧೦)

ಆದಿಯಲ್ಲಿ ಬ್ರಹ್ಮವು ಮಾತ್ರವಿದ್ದು "ನಾನೇ ಸಮಸ್ತವು" ಎಂಬ ಜ್ಞಾನದಿಂದ ಅದೇ ಸಮಸ್ತವಿಶ್ವವಾಗಿ ಪರಿಣಮಿಸಿತು. ದೇವತೆಗಳಲ್ಲಿಯೂ ಯಾರು ಈ ಜ್ಞಾನವನ್ನು ಎಂದರೆ " ಅಹಂ ಬ್ರಹ್ಮಾಸ್ಮಿ " ಎಂಬ ಜ್ಞಾನವನ್ನು ಹೊಂದುವರೋ ಅವರೂ ಸಹ ವಿಶ್ವಾತ್ಮರಾಗಿಯೇ ಆಗುವರು. ಈ ಪರಮಾತ್ಮಜ್ಞಾನವನ್ನು ಪಡೆದ ಋಷಿಗಳೂ ಸಹ ವಿಶ್ವವ್ಯಾಪಕವಾದ ಬ್ರಹ್ಮದ ಸ್ವರೂಪವನ್ನೇ ಪಡೆಯುವರು. ಈ ತತ್ತ್ವವನ್ನು ತಿಳಿದ ವಾಮದೇವಋಷಿಯು 'ನಾನೇ ಮನುವು, ನಾನೇ ಸೂರ್ಯನು' ಎಂದು ಅರಿತನು. ಇದನ್ನೇ ಋಗ್ವೇದದಲ್ಲೂ ಸಹ,

ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।
ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ॥

(ಋ. ಸಂ. ೪–೨೬–೧)

ಎಂಬ ವಾಕ್ಯಗಳಿಂದ ಹೇಳಿದೆಯೆಂದು ಉದಹರಿಸಿ ವಾಮದೇವಾದಿಜ್ಞಾನಿಗಳು ಬ್ರಹ್ಮತ್ವವನ್ನು ಪಡೆದ ವಿಷಯವನ್ನು ತಿಳಿಸಿದೆ ಆದರೆ ಯಾರು—"ಬ್ರಹ್ಮವು ಬೇರೆ, ನಾನೇ ಬೇರೆ" ಎಂಬ ಭೇದಜ್ಞಾನವನ್ನು ಇಟ್ಟುಕೊಂಡಿರುವರೋ ಅವರು ದೇವತೆಗಳನ್ನುದ್ದೇಶಿಸಿದ ಯಜ್ಞಪಶುಗಳಾಗುವರು ಎಂದೂ ಸಹ ಎಚ್ಚರಿಸಿದೆ. ಇದೇ ತತ್ವವನ್ನು ಈಶಾವಾಸ್ಯೋಪನಿಷತ್ತಿನಲ್ಲಿ ಪ್ರತಿಪಾದಿಸುತ್ತಾ.

ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।

(ಈಶ. ಉ. ೧)

ಜಗದೀಶ್ವರನಾದ ಪರಮಾತ್ಮನೇ ಪ್ರತ್ಯಗಾತ್ಮರೂಪದಿಂದ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿದ್ದುಕೊಂಡು ಎಲ್ಲವನ್ನೂ ಆಳುತ್ತಿರುವನು. ಜಗತ್ತಿನಲ್ಲಿ ಜಂಗಮಾತ್ಮಕವಾಗಿರತಕ್ಕದ್ದನ್ನೆಲ್ಲಾ ಪ್ರತ್ಯಗಾತ್ಮರೂಪದಿಂದ ಈಶನಾಗಿರುವ ತನ್ನ ಆತ್ಮದಿಂದ "ಇದೆಲ್ಲವೂ ನಾನೇ" ಎಂದು ಪರಮಾರ್ಥಸತ್ಯವಾಗಿರುವ ರೂಪದಿಂದ ಹೊಂದಿಸಬೇಕು ಎಂದು ತಿಳಿಸಿದೆ ಈ ಬ್ರಹ್ಮಜ್ಞಾನವು ಅತ್ಯವಶ್ಯವಾದುದು. ಆದರೆ ಇದರ ತಿಳಿವಳಿಕೆಯು ಅತಿಕಠಿಣವಾದುದು. ಇದನ್ನು ಶ್ರುತಿವಾಕ್ಯದಿಂದ ಅರಿತು ಅನಂತರ ಇದರ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಬೇಕು ಎಂಬುದಾಗಿ ಶ್ರವಣಮನನಗಳ ಆವಶ್ಯಕತೆಯನ್ನು ತಿಳಿಸುತ್ತಾ ಕಠೋಪನಿಷತ್ತಿನಲ್ಲಿ.

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ॥
ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥

(ಕಠ. ಉ. ೨-೩-೧೭)

ಕೇವಲ ಅಂಗುಷ್ಠಪ್ರಮಾಣದ ಈ ಮಹಾಪುರುಷನು ಎಲ್ಲರಿಗೂ ಅಂತರಾತ್ಮನಾಗಿದ್ದಾನೆ. ಭೌತಿಕವಾದ ಶರೀರಾಂತರ್ಗತನಾದ ಈ ಆತ್ಮನನ್ನು ಬಂಧನದಿಂದ ಬಿಡಿಸಿ ಮುಕ್ತನನ್ನಾಗಿ ಮಾಡತಕ್ಕದ್ದು. ಆದರೆ ಇದು ಸಾಧಾರಣವಾದ ಪ್ರಯತ್ನದಿಂದ ಸಾಧ್ಯವಿಲ್ಲ. ಇವಕ್ಕೆ ಅಸಾಧಾರಣವಾದ ಧೈರ್ಯವು ಬೇಕು. ಈ ಆತ್ಮನು ಶುದ್ಧನು. ಅಮೃತನು. ಇವನನ್ನು ಅರಿಯಬೇಕಾದರೆ ಆತ್ಮಸಾಕ್ಷಾತ್ಕಾರವು ಅತ್ಯವಶ್ಯವಾದುದು. ಶ್ರುತಿಯ ಉಪದೇಶದಿಂದ ತಿಳಿದ ಬ್ರಹ್ಮಜ್ಞಾನವು ಸಾಕ್ಷಾತ್ಕಾರಕ್ಕೆ ಸಾಧನವಾಗುವುವೇ ಹೊರತು ಸಾಕ್ಷಾತ್ಕಾರವೇ ಆಗುವುದಿಲ್ಲ. ಆದೇ ಅಂಶವನ್ನು ಸಾಯಣರು ವಿವರಿಸುತ್ತಾ,

"ಇದಂ ಸರ್ವಮಹಮಸ್ಮೀತಿ ಜ್ಞಾನಂ ಮೇ ಜಾತಂ । ಅಪಿ ತ್ವೇತದ್ದಾರ್ಷ್ಟಾಂತಿಕಭೂತಂ । ಆನುಭವಿಕಂ ಸಾರ್ವಾತ್ಮ್ಯಂ ಯದಸ್ತಿ ತನ್ನ ವಿ ಜಾನಾಮಿ । ನ ಪ್ರಾಪ್ತೋಽಸ್ಮಿ । ಶಾಸ್ತ್ರಜನಿತಂ ಸಾರ್ವಾತ್ಮ್ಯಂ ಜಾತಂ ನ ತ್ವಾನುಭವಿಕಮಿತ್ಯರ್ಥಃ ॥

ಶಾಸ್ತ್ರೋಪದೇಶದಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವನ್ನೇನೋ ಪಡೆದುದು ನಿಜ, ಆದರೆ ಇದು ದೃಷ್ಟಾಂತ ರೂಪದ ಜ್ಞಾನವಾದುದೇ ಹೊರತು ನಾನು ಈ ಜ್ಞಾನವನ್ನು ಅನುಭವರೂಪದಲ್ಲಿ ಪಡೆಯಲಿಲ್ಲ. ಶಾಸ್ತ್ರಜನಿತಜ್ಞಾನವು ಸ್ವಂತವಾದ ಅನುಭವರೂಪದ ಜ್ಞಾನವಾಗುವುದೇ ಇಲ್ಲ. ಆದರಿಂದ ಬ್ರಹ್ಮಸಾಕ್ಷಾತ್ಕಾರವು ಪೂರ್ಣವಾಗುವುದಿಲ್ಲ. ಚಕ್ಷುರಾದೀಂದ್ರಿಯಗಳಾಗಲಿ, ವೇದಾದಿ ಶ್ರುತಿಗಳಾಗಲಿ, ಪೂರ್ಣವಾದ ಸಾಕ್ಷಾತ್ಕಾರವಾಗಲಾರವು ಎಂಬುದನ್ನು ಶ್ರುತಿವಾಕ್ಯಗಳು ಸಾರಿವೆ. ಉದಾಹರಣೆಗೆ ಮುಂಡಕೋಪನಿಷತ್ತಿನಲ್ಲಿ,

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।
ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಳಂ ಧ್ಯಾಯಮಾನಃ ॥

(ಮು. ಉ. ೩-೧-೮)

ನಾಯಮಾತ್ಮಾ ಪ್ರವಚನೇನ ಲಭ್ಯಸ್ತ ನ ಮೇಧಯಾ ನ ಬಹುನಾ ಶ್ರುತೇನ ।
ಯಮೈವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಂ ॥

(ಮು. ೩-೨-೩-)

ಈ ಆತ್ಮನನ್ನು ಕಣ್ಣಿನಿಂದ ಗ್ರಹಿಸಲಾಗುವುದಿಲ್ಲ. ಮಾತಿನಿಂದಲೂ ಆಗುವುದಿಲ್ಲ. ಬಾಹ್ಯವಾದ ಆಡಂಬರದ ಕರ್ಮಗಳಿಂದಾಲಿ ಆಗುವುದಿಲ್ಲ. ಜ್ಞಾನಪ್ರಸಾದದಿಂದ ಸತ್ತ್ವಶುದ್ಧಿಯನ್ನು ಮಾಡಿಕೊಂಡು ಧ್ಯಾನಮಾಡುವವನಿಗೆ ಮಾತ್ರ ನಿಷ್ಕಲನಾದ ಈ ಪರಮಾತ್ಮನು ಗೋಚರನಾಗುತ್ತಾನೆ. ಈ ಆತ್ಮನು ವೇದಶಾಸ್ತ್ರವನ್ನು ಹೆಚ್ಚಾಗಿ ಅಧ್ಯಯನ ಮಾಡಿ ಕೇವಲ ಪ್ರವಚನವನ್ನು ಮಾಡುವುದರಿಂದ ಸಿಕ್ಕುವವನಲ್ಲ. ಮೇಧೆಯಿಂದ (ಬುದ್ಧಿವಂತಿಕೆ) ಸಿಕ್ಕುವವನೂ ಅಲ್ಲ. ಆದರೆ, ಬಲ, ಅಪ್ರಮಾದ, ಸನ್ಯಾಸ, ಜ್ಞಾನ ಇವುಗಳಿಂದ ತತ್ಪರನಾಗಿ ಯಾವ ವಿದ್ವಾಂಸನು ಧ್ಯಾನರೂಪವಾದ ಪ್ರಯತ್ನವನ್ನು ಮಾಡುವನೋ ಅವನಿಗೆ ಮಾತ್ರ ಲಭ್ಯನು ಎಂದು ಖಚಿತವಾಗಿ ತಿಳಿಸಿದೆ.

ಈ ವಿಧವಾದ ಬ್ರಹ್ಮಸಾಕ್ಷಾತ್ಕಾರದ ನಿಜವಾದ ಸಾಧನಗಳಾವುವೆಂದರೆ,

ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ ।
ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥

(ಮು. ೩-೧-೫)

ಈ ಆತ್ಮನು ನಿತ್ಯವಾಗಿ ಸತ್ಯದಿಂದಲೂ ತಪಸ್ಸಿನಿಂದಲೂ ಸರಿಯಾದ ಜ್ಞಾನದಿಂದಲೂ ಬ್ರಹ್ಮಚರ್ಯೆಯಿಂದಲೂ ಲಭ್ಯನಾಗುವನು. ಅಂತಶ್ಶರೀರದಲ್ಲಿ ಇವನು ಜ್ಯೋತಿರ್ಮಯನಾಗಿಯೂ ಶುಭ್ರನಾಗಿಯೂ ಇರುವನು. ನಿದಿಧ್ಯಾಸನಪೂರ್ವಕವಾದ ತಪಸ್ಸಿನಿಂದ ಕ್ಷೀಣದೋಷರಾದ ಯತಿಗಳು ಮಾತ್ರ ಈ ಅಂತರಾತ್ಮನ ಸಾಕ್ಷಾತ್ಕಾರವನ್ನು ಪಡೆಯಲರ್ಹರಾಗಿರುವರು. ಈರೀತಿ ಮನನವೂ ನಿದಿಧ್ಯಾಸನವೂ ಇಲ್ಲದೆ ಕೇವಲ ಶ್ರುತಿವಾಕ್ಯದ ಶ್ರವಣದಿಂದಲೇ ತೃಪ್ತರಾಗುವವರು ಪೂರ್ಣವಾದ ಬ್ರಹ್ಮಜ್ಞಾನವಿಲ್ಲದೆ ಸಂದಿಗ್ಧಾವಸ್ಥೆಯಲ್ಲಿರುತ್ತಾರೆಂಬುದೇ 'ನ ವಿಜಾನಾಮಿ' ಎಂದು ಪ್ರಕೃತವಾದ ಋಕ್ಕಿನ ಪರಿದೇವನಾವಾಕ್ಯದ ಅರ್ಥವೆಂದು ಸಾಯಣರು ತಿಳಿಸಿದ್ದಾರೆ. ಸಕಲಶಾಸ್ತ್ರಪಾರಂಗತನಾದರೂ ಸಹ ಆತ್ಮತತ್ತ್ವವನ್ನರಿಯದ ವಿದ್ಯೆಯು ಪೂರ್ಣವಾದ ವಿದ್ಯೆಯಾಗಲಾರದೆಂದು ಛಾಂದೋಗ್ಯೋಪನಿಷತ್ತಿನಲ್ಲಿ ನಾರದನಿಗೂ ಸನತ್ಕುಮಾರನಿಗೂ ನಡೆದ ಸಂಭಾಷಣೆಯಲ್ಲಿ ನಾರದನು,

"ಸೋಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ತರತಿ ಶೋಕಮಾತ್ಮವಿತ್ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತ್ವಿತಿ" ॥

(ಛಾ. ಉ ೭-೧-೩)

" ನಾನು ಆಯಾ ಶಾಸ್ತ್ರಗಳ ಮಂತ್ರೋಚ್ಚಾರಣೆಯನ್ನು ಮಾತ್ರ ತಿಳಿದಿದ್ದೇನೆ. ಆತ್ಮತತ್ತ್ವಜ್ಞಾನವಿಲ್ಲವೇ ಸಂಸಾರ ದುಃಖದಿಂದ ಮುಕ್ತಿಯಿಲ್ಲ" ಎಂದು ಪರಿತಪಿಸುವುದನ್ನು ಹಿಂದೇ ಇದೇ ಸೂಕ್ತದ ೫ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಉದಹರಿಸಿದೆ (ಪುಟ. ೫೩೦) ಈ ವಿಧವಾದ ಸಂದಿಗ್ಧಾವಸ್ಥೆಯನ್ನೂ ಪರಿತಾಪವನ್ನೂ " ನಿಣ್ಯಃ ಸಂನದ್ಧೋ ಮನಸಾ ಚರಾಸ" ಎಂದಿದೆ. ಇದನ್ನು ಸಾಯಣರು ವಿವರಿಸುತ್ತಾ " ಅವಿದ್ಯಾಕಾಮುಕರ್ಮಭಿಃ ಸಮ್ಯಗ್‌ಬದ್ಧೋ ವೇಷ್ಟಿತಃ । ಅತ ಏವ ಭಾವನಾಸಹಿಷ್ಣುನಾ ಬಹಿರ್ಮುಖೇನ ನಿಕ್ಷಿಪ್ತೇನ ಚೇತಸಾ ಯುಕ್ತಃ ಸಂಚರಾಮಿ ಸಂಸಾರೇ । ಇಂದ್ರಿಯ ಪರವಶ ಏವ ಸನ್ ಸಂಸಾರೇ ದುಃಖಮನುಭವಾಮಿ " ಅವಿದ್ಯೆಯಿಂದಲೂ ಅದರಿಂದ ಉತ್ಪನ್ನವಾದ ಕಾಮ, ರಾಗ, ದ್ವೇಷ ಇತ್ಯಾದಿಗಳಿಂದ ಕೂಡಿದ ಕರ್ಮಗಳಿಂದಲೂ, ಬಂಧಿತನಾಗಿಯೂ, ಅಂತರ್ಧ್ಯಾನವಿಲ್ಲದೇ, ಬಾಹ್ಯಪ್ರವೃತ್ತಿಗಳಿಂದ ಕೂಡಿದ ಚೇತಸ್ಸಿನಿಂದ ಕೂಡಿಯೂ ಸಂಸಾರದ ದುಃಖವನ್ನನುಭವಿಸುತ್ತಿದ್ದೇನೆ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಇಲ್ಲಿ,

ನಿಣ್ಯಃ—ಎಂಬ ಪದಕ್ಕೆ ಅವಿದ್ಯೆಯಿಂದ ಆವೃತನಾಗಿ ಎಂದರ್ಥ. ನಿಣ್ಯಂ, ಸಸ್ವಃ, ಸನುತಃ ಇತ್ಯಾದಿ ೬ ಅಂತರ್ಹಿತನಾಮುಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೧೯) ಈ ಪದಕ್ಕೆ ಗೂಢವಾಗಿರುವುದು ಎಂಬರ್ಥವನ್ನು ಕೊಡುವ ಸಂದರ್ಭಗಳಲ್ಲಿ ನಿಣ್ಯಶಬ್ದದ ಪ್ರಯೋಗವನ್ನು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಗಲ್ಲಿ ನೋಡಬಹುದು. ಉದಾಹರಣೆಗೆ—

> ಕವಿರ್ನ ನಿಣ್ಯಂ ವಿದಥಾನಿ ಸಾಧನ್‌ವೃಷಾ ಯತ್ಸೇಕಂ ವಿಪಿಪಾನೋ ಅರ್ಚಾತ್ ।
> ದಿವ ಇತ್ಥಾ ಜೀಜನತ್ಸಪ್ತ ಕಾರೂನಹ್ನಾ ಚಿಚ್ಚಕ್ರುರ್ವಯುನಾ ಗೃಣಂತಃ
>
> (ಋ. ಸಂ. ೪–೧೬–೩)

ಎಂಬಲ್ಲಿ ಕವಿಯ ದೃಷ್ಟಿಗೆ ಮಾತ್ರ ಗೋಚರವಾಗುವುದು; ಸಾಧಾರಣವಾದ ಮತಿಗೆ ಗೋಚರವಾಗದೆ ರಹಸ್ಯವಾಗಿರುವುದು ಎಂದರ್ಥವಾಗಿರುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ತತ್ತ್ವಾನ್ವೇಷಣವನ್ನು ಮಾಡುವಾಗ ತತ್ತ್ವವು ಅತಿ ನಿಗೂಢವಾಗಿದ್ದು ಸಮಸ್ಯೆಯು ಬಹಳ ಜಟಿಲವಾದದ್ದೂ ತೊಡಕಾದುದೂ ಆದಾಗ ಮನಸ್ಸಿನ ಕ್ಷೋಭೆಯನ್ನು ಸೂಚಿಸುವಾಗ ಈ ಶಬ್ದದ ಪ್ರಯೋಗವಿದೆ, ಪ್ರಕೃತವಾದ ಋಕ್ಕಿನಲ್ಲಿ ಅದಕ್ಕೆ ನಿದರ್ಶನವಿದೆ. ಅವಿದ್ಯೆಯಿಂದ ಚೇತಸ್ಸು ಆವೃತವಾಗಿ, ಅಧ್ಯಾತ್ಮಜ್ಞಾನವಿಲ್ಲದೆ, ಆತ್ಮನ ವ್ಯವಹಾರಗಳೆಲ್ಲವೂ ಬಾಹ್ಯವಾದ ವಿಷಯಗಳಿಂದಲೇ ಆಕರ್ಷಿಸಲ್ಪಟ್ಟರೆ ಆಗ ಕೇವಲ ಬಾಹ್ಯವಿಷಯಗಳಿಂದಲೇ ಬಂಧಿತವಾಗಿ ಆತ್ಮನು ಚಲಿಸುತ್ತಿರುತ್ತದೆ ಎಂದು " ಸಂನ್ನದ್ಧೋ ಮನಸಾ ತರಾಮಿ " ಎಂಬ ವಾಕ್ಯದಿಂದ ತಿಳಿಸಿದೆ. ಅಜ್ಞಾನಾವೃತವಾದ ಚೇತಸ್ಸು ಪರಿತಪಿಸುವುದನ್ನು ಈಶಾದ್ಯುಪನಿಷತ್ತುಗಳಲ್ಲಿ ವಿಶದದಾಗಿ ವಿವರಿಸಿದೆ.

> ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।
> ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್‌ಂ ರತಾಃ ॥
>
> (ಈಶ ಉ. ೯.)

> ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।
> ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತಾದೃಙ್ ನೋ ಭೂಯಾನ್ನ ಚಿಕೇತಃ ಪ್ರಷ್ಟಾ ॥
>
> (ಕಠ. ೧–೨–೭ ರಿಂದ–೯)

ಯಾವ ಈ ಅಂತರಾತ್ಮರೂಪದಲ್ಲಿ ಬ್ರಹ್ಮವು ಬಹುಜನರ ಶ್ರವಣಕ್ಕೂ ಸಿಕ್ಕುವುದಿಲ್ಲವೋ, ಶ್ರುತಿಶ್ರವಣಾನಂತರವೂ ಅನೇಕರ ಅರಿವಿಗೆ ನಿಲುಕದೇ ಇರುತ್ತದೆಯೋ, ಅಂತಹ ಈ ಪರಬ್ರಹ್ಮದ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡು ವಿವರಿಸುವವನು ಬಹಳ ವಿರಳ. ಅದನ್ನು ಪಡೆಯತಕ್ಕವನು ಬಹುಕುಶಲನು. ಸಾಧಾರಣವಾದ ಬುದ್ಧಿಯುಳ್ಳ ಮಾನವನಿಂದ ಈ ಆತ್ಮನ ಸ್ವರೂಪವು ವರ್ಣಿತವಾಗತಕ್ಕದ್ದಲ್ಲ. ಪೂರ್ಣವಾಗಿ ಸಾಕ್ಷಾತ್ಕಾರವನ್ನು ಪಡೆದಿರುವವನಿಗೆ ಮಾತ್ರ ಇದರ ಅನುಭವವು ಸಾಧ್ಯ. ಅವನು ಮಾತ್ರ ಇತರರಿಗೆ ಗುರುವಾಗಬಲ್ಲನು. ತರ್ಕಾದಿಗಳಿಂದ ನಿಲುಕದೇ ಇರುವ ಈ ಬ್ರಹ್ಮಜ್ಞಾನವನ್ನು ಪಡೆಯಲು ಸತ್ಯಧೃತಿಯಾದ ನಚಿಕೇತಸ್ಸೇ ಮುಂತಾದವರಿಂದ ಸಾಧ್ಯವೇ ಹೊರತು ಉಳಿದವರಿಂದ ಸಾಧ್ಯವಿಲ್ಲವೆಂದು ಖಂಡಿತವಾಗಿಯೂ ತಿಳಿಸಿದೆ. ಅದನ್ನೇ ಸಾಯಣರು "ಸರ್ವೈಕಾತ್ಮ್ಯರೂಪಮನುಭವಿಕಮಸ್ತಿ ತಸ್ಯೈವೇವ" ಸ್ವಾನುಭವರೂಪವಾದ ಪೂರ್ಣಜ್ಞಾನವೆಂದು ತಿಳಿಸಿದ್ದಾರೆ.

"ಯದಾ ಮಾಗನ್ ಪ್ರಥಮಜಾ ಋತಸ್ಯಾದಿದ್ವಾಚೋ ಅಶ್ನುವೇ ಭಾಗಮಸ್ಯಾಃ ||

ಎಂಬ ಇದೇ ಋಕ್ಕಿನ ಉತ್ತರಾರ್ಧದಲ್ಲಿ ಸಾಕ್ಷಾತ್ಕಾರಪೂರ್ವಕವಾದುದೂ ಪೂರ್ಣವಾದುದೂ ಆದ ಬ್ರಹ್ಮಜ್ಞಾನವು ಲಭಿಸಿದ ಕೂಡಲೇ ಅದರ ರಸವನ್ನು ಅನುಭವಿಸುತ್ತೇನೆ ಎಂದು ಅನುಭವದ ಸ್ವರೂಪವನ್ನು ತಿಳಿಸಿದೆ. ಆ ಅನುಭವದ ಸ್ವರೂಪವೇನೆಂದರೆ—

ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ |
ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಯುಕ್ತಾತ್ಮಾನಃ ಸರ್ವಮೇವಾವಿಶಂತಿ ||

(ಮು. ಉ. ೩-೨-೫)

ಈ ಪರಮಾತ್ಮನನ್ನು ಅರಿತ ಋಷಿಗಳು ಅದೇ ಜ್ಞಾನದಿಂದಲೇ ತೃಪ್ತರಾಗಿಯೂ, ಕೃತಾತ್ಮರಾಗಿಯೂ, ಪರಬ್ರಹ್ಮಸ್ವರೂಪದಿಂದಲೇ ಏರ್ಪಟ್ಟಿರುವ ಆತ್ಮವುಳ್ಳವರಾಗಿಯೂ, ವೀತರಾಗರಾಗಿಯೂ, ಪ್ರಶಾಂತಚಿತ್ತರಾಗಿಯೂ ಇರುವರು.

ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ |
ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ||

(ಕಠ. ೧-೨-೧೨)

ಬಹುಶ್ರಮದಿಂದ ಮಾತ್ರ ಅರಿಯಲು ಸಾಧ್ಯವಿರುವವನೂ, ಅತ್ಯಂತ ಗೂಢನೂ, ಹೃದಯರೂಪವಾದ ಗುಹೆಯಲ್ಲಿರುವವನೂ, ಗಹ್ವರದಲ್ಲಿರುವವನೂ, ಪುರಾಣನೂ ಆದ ಬ್ರಹ್ಮನನ್ನು ಅಧ್ಯಾತ್ಮಯೋಗದಿಂದ ಸಾಕ್ಷಾತ್ಕಾರಮಾಡಿಕೊಂಡ ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ. ''ಸಂನದ್ಧೋ ಮನಸಾ ಚರಾಮಿ" ಎಂಬ ಪರಾಙ್ಮುಖವಾದ ಪ್ರವೃತ್ತಿಯೂ, ಅದರ ಫಲವಾದ ರಾಗದ್ವೇಷಗಳೂ ಇಲ್ಲದೇ ಪ್ರಶಾಂತಚಿತ್ತನಾಗಿರುತ್ತಾನೆ.

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ |
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ||
ಯಸ್ಮಿನ್ತ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ |
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ||

(ಈಶ. ಉ. ೬, ೭)

ಯಾವ ಮಹಾಜ್ಞಾನಿಯು 'ಅಹಂ ಬ್ರಹ್ಮಾಸ್ಮಿ' ಎಂಬ ಅನುಭವರೂಪವಾದ ಜ್ಞಾನದಿಂದ ಸಕಲ ಭೂತಗಳನ್ನೂ ತನ್ನ ಆತ್ಮನಲ್ಲಿಯೇ ಕಾಣುವನೋ, ಮತ್ತು ಎಲ್ಲಾ ಭೂತಗಳಲ್ಲಿಯೂ ತನ್ನ ಆತ್ಮನನ್ನು ಕಾಣುವನೋ ಅವನಿಗೆ ಜುಗುಪ್ಸೆಯೆಂಬುದೇ ಇಲ್ಲ. ತಾನೇ ಬ್ರಹ್ಮರೂಪನು, ಸಕಲ ವಿಶ್ವವೂ ತನ್ನ ರೂಪವೇ ಆಗಿದೆ ಎಂಬ ಅದ್ವೈತಾನುಭವವು ಲಭಿಸಿದವನಿಗೆ ಮೋಹವೂ ಇಲ್ಲ, ಶೋಕವೂ ಇಲ್ಲ. ಅಂತಹ ಪ್ರಶಾಂತಚಿತ್ತನಿಗೆ ಬ್ರಹ್ಮಾನಂದಾನುಭವವು ಲಭಿಸುತ್ತದೆ ಎಂಬುದೇ "ಅಶ್ನುವೇ ಭಾಗಮುಸ್ಯಾಃ" ಎಂಬ ಸಂಹಿತಾವಾಕ್ಯದ ಅಭಿಪ್ರಾಯವಾಗಿರುತ್ತದೆ.

ಅಥಾಪಿ ನಿಂದಾ ಪ್ರಶಂಸೇ ||

ಕೇವಲಾಘೋ ಭವತಿ ಕೇವಲಾದೀ ||

ಭೋಜಸ್ಯೇದಂ ಪುಷ್ಕರಿಣೀವ ವೇಶ್ಮ ಇತ್ಯೇವಮುಕ್ಷಸೂಕ್ತೇ ದ್ಯೂತನಿಂದಾ ಚ ಕೃಷಿಪ್ರಶಂಸಾ ಚ ||

ನಿಂದಾ ಮತ್ತು ಪ್ರಶಂಸೆ ಇರುವ ಮಂತ್ರಗಳು (ನಿಂದೆ ಇರುವ ಋಕ್ಕು) ಉದಾಹರಣೆಯ ಋಕ್ಕು

ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ
ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ ||

(ಋ. ಸಂ. ೧೦–೧೧೭–೬)

ಇವರ ಅರ್ಥವು—

ಅನ್ನದಾನಮಾಡುವ ಮನಸ್ಸಿಲ್ಲದ ಪುರುಷನಲ್ಲಿರುವ ಅನ್ನವು ವ್ಯರ್ಥವು. ನಾನು ಇದನ್ನು ಸತ್ಯವಾಗಿ ಹೇಳುತ್ತೇನೆ ಅಂತಹ ಪುರುಷನಲ್ಲಿರುವ ಅನ್ನವೇ ಅವನಿಗೆ ಮೃತ್ಯುಪ್ರಾಯವಾಗಿರುತ್ತದೆ. ಯಾವ ಪುರುಷನು ಅರ್ಯಮಾದಿ ದೇವತೆಗಳನ್ನು ಹವಿಷ್ಪ್ರದಾನಾದಿಗಳಿಂದ ಸತ್ಕರಿಸಿ ಪೋಷಿಸುವುದಿಲ್ಲವೋ, ಯಾವ ಪುರುಷನು ತನ್ನ ಸ್ನೇಹಿತನನ್ನು ಅನ್ನದಾನದಿಂದ ಪೋಷಿಸುವುದಿಲ್ಲವೋ, ಯಾವ ಪುರುಷನು ಊಟ ಮಾಡುವಾಗ ಯಾರನ್ನೂ ಜತೆಯಲ್ಲಿ ಕೂಡಿಸಿಕೊಳ್ಳದೆ ತಾನೊಬ್ಬನೇ ಏಕಾಂಗಿಯಾಗಿ ಕುಳಿತು ಭೋಜನ ಮಾಡುವನೋ ಅವನು ಬಹು ಪಾಪಿಷ್ಠನಾಗುತ್ತಾನೆ. (ಇದು ನಿಂದಾವಚನಕ್ಕೆ ಉದಾಹರಣೆಯು.)

ಪ್ರಶಂಸೆಯ ವಿಷಯವಾಗಿ ಮತ್ತೊಂದು ಋಕ್ಕನ್ನು ಉದಾಹರಣೆಯಾಗಿ ಕೊಡುವರು—

ಭೋಜಾಯಾಶ್ವಂ ಸಂ ಮೃಜಂತ್ಯಾಶುಂ ಭೋಜಾಯಾಸ್ತೇ
　ಕನ್ಯಾಃಶುಂಭಮಾನಾ |
ಭೋಜಸ್ಯೇದಂ ಪುಷ್ಕರಿಣೀವ ವೇಶ್ಮ ಪರಿಷ್ಕೃತಂ ದೇವಮಾನೇವಚಿ-
　ತ್ರಂ ||

(ಋ. ಸಂ. ೧೦–೧೦೭–೧೦)

ಇದರ ಅರ್ಥವು— ದಕ್ಷಿಣೆಯನ್ನು ಕೊಡುವ ಯಜಮಾನನಿಗಾಗಿ ಪರಿಚಾರಕರು ಶೀಘ್ರಗಾಮಿಯಾದ ಅಶ್ವವನ್ನು ಅಲಂಕರಿಸುತ್ತಾರೆ. ಸುಂದರಳಾದ ಕನ್ಯೆಯು ಅಲಂಕೃತಳಾಗಿ ಆವನಿಗೆ ಅರ್ಪಿತಳಾಗುತ್ತಾಳೆ. ಸರೋವರವು ಕಮಲ ಪುಷ್ಪಗಳಿಂದ ಅಲಂಕೃತವಾಗಿರುವಂತೆ ಧ್ವಜಾದಿಗಳಿಂದ ಅಲಂಕೃತವಾದ ಗೃಹವು ದಕ್ಷಿಣಾದಾತೃವಿಗೆ ಲಭಿಸುತ್ತದೆ. ಅದೇ ಗೃಹವು ದೇವತೆಗಳ ವಾಸಸ್ಥಾನದಂತೆ ಮನೋಹರವಾಗಿರುತ್ತದೆ.

ಮೂರನೇ ಉದಾಹರಣೆಯು—

ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇ ರಮಸ್ವ ಬಹು ಮನ್ಯಮಾನಃ ।
ತತ್ರ ಗಾವಃ ಕಿತವ ತತ್ರ ಜಾಯಾ ತನ್ಮೇ ವಿ ಚಷ್ಟೇ ಸವಿತಾಯಮರ್ಯಃ ॥

(ಋ. ಸಂ. ೧೦–೩೪–೧೩)

ಇದರ ಅರ್ಥವು—

ಎಲೈ ದ್ಯೂತಕಾರನೇ, ನನ್ನ ಮಾತನ್ನು ನಂಬು. ಅದಕ್ಕೆ ಮರ್ಯಾದೆಯನ್ನು ಕೋರಿಸಿ ಅದರಂತೆ ನಡೆದುಕೋ. ದಾಳಗಳಿಂದ ದ್ಯೂತವನ್ನಾಡವೇಡ. ಕೇವಲ ಭೂಮಿಯ ವ್ಯವಸಾಯವನ್ನೇ ಮಾಡು. ಆದರಿಂದ ಸಂಪಾದಿತವಾದ ಧನದಿಂದ ಸಂತೋಷವನ್ನನುಭವಿಸು. ಅಲ್ಲಿ ಪಶುಗಳು ಇರುತ್ತವೆ. ಅಲ್ಲಿ ಪತ್ನಿ ಇರುತ್ತಾಳೆ. ಈ ಉಪದೇಶವನ್ನೇ ಜಗತ್ಪ್ರೇರಕನೂ ಜಗದೀಶ್ವರನೂ ಆದ ಸವಿತೃವು ನನಗೆ ಹೇಳಿದನು.

ಇತಿ ಸಪ್ತಮಾಧ್ಯಾಯೇ ತೃತೀಯ ಖಂಡಃ

ಇಲ್ಲಿಗೆ ಏಳನೆಯ ಅಧ್ಯಾಯದಲ್ಲಿ ತೃತೀಯಖಂಡವು ಸಮಾಪ್ತವು.

## ಅಥ ಚತುರ್ಥಃ ಖಂಡಃ

## ನಾಲ್ಕನೆಯ ಖಂಡವು.

ತದ್ಯೇನಾದಿಷ್ಟದೇವತಾ ಮಂತ್ರಾಸ್ತೇಷು ದೇವತೋಪಪರೀಕ್ಷಾ ಯದ್ದೇವತಃ ಸ ಯಜ್ಞೋ ವಾ ಯಜ್ಞಾಂಗಂ ವಾ ತದ್ದೇವತಾ ಭವಂತ್ಯಥಾನ್ಯತ್ರ ಯಜ್ಞಾತ್ಪ್ರಾಜಾಪತ್ಯಾ ಇತಿ ಯಾಜ್ಞಿಕಾ ನಾರಾಶಂಸಾ ಇತಿ ನೈರುಕ್ತಾ ಅಪಿ ವಾ ಸಾ ಕಾಮದೇವತಾ ಸ್ಯಾತ್ಪ್ರಾಯೋದೇವತಾ ವಾಸ್ತಿ ಹ್ಯಾಚಾರೋ ಬಹುಲಂ ಲೋಕೇ ದೇವದೇವತ್ಯಮತಿಥಿದೇವತ್ಯಂ ಪಿತೃದೇವತ್ಯಂ ಯಾಜ್ಞದೈವತೋ ಮಂತ್ರ ಇತ್ಯಾಪಿ ಹ್ಯದೇವತಾ ದೇವತಾವತ್‌ಸ್ತೂಯಂತೇ ಯಥಾಶ್ವಪ್ರಭೃತೀನ್ಯೋಷಧಿಪರ್ಯಂತಾನ್ಯಥಾಪ್ಯಷ್ಟೌ ದ್ವಂದ್ವಾನಿ (ನಿಘ ೫-೩, ೨೯-೩೬) । ಸ ನ ಮನ್ಯೇತಾಗಂತೂನಿವಾರ್ಥಾನ್ದೇವತಾನಾಂ ಪ್ರತ್ಯಕ್ಷದೃಶ್ಯ-

ಮೇತದ್ಭವತಿ ಮಾಹಾಭಾಗ್ಯಾದ್ದೇವತಾಯಾ ಏಕ ಆತ್ಮಾ ಬಹುಧಾ ಸ್ತೂಯತ ಏಕಸ್ಯಾ-
ತ್ಮನೋಽನ್ಯೇ ದೇವಾಃ ಪ್ರತ್ಯಂಗಾನಿ ಭವಂತ್ಯಪಿ ಚ ಸತ್ವಾನಾಂ ಪ್ರಕೃತಿಭೂಮಭಿರ್ಋ-
ಷಯಃ ಸ್ತುವಂತೀತ್ಯಾಹುಃ ಪ್ರಕೃತಿಸಾರ್ವನಾಮ್ನ್ಯಾಚ್ಚೇತರೇತರಜನ್ಮಾನೋ
ಭವಂತೀತರೇತರಪ್ರಕೃತಯಃ ಕರ್ಮಜನ್ಮಾನ ಆತ್ಮಜನ್ಮಾನ ಆತ್ಮೈವೈಷಾಂ ರಥೋ
ಭವತ್ಯಾತ್ಮಾಶ್ವಾ ಆತ್ಮಾಯುಧಮಾತ್ಮೇಷವ ಆತ್ಮಾ ಸರ್ವಂ ದೇವಸ್ಯ ದೇವಸ್ಯ ॥ ೪ ॥

---

## ತದ್ಯೇನಾದಿಷ್ಟದೇವತಾ ಮಂತ್ರಾಸ್ತೇಷು ದೇವತೋಪಪರೀಕ್ಷಾ ॥

ಕೆಲವು ಮಂತ್ರಗಳಲ್ಲಿ, ದೇವತೆಗಳನ್ನು ನಿರ್ದಿಷ್ಟವಾಗಿ ಹೇಳಿರುವುದಿಲ್ಲ. ಎಂದರೆ ಇಂತಹ ಮಂತ್ರದಲ್ಲಿ, ಯಾವ ದೇವತೆಯನ್ನು ಸ್ತುತಿಸಲಾಗಿದೆ ಎಂದ ಋಷಿಯು ನಿರ್ದಿಷ್ಟವಾಗಿ ಎಂದರೆ ಹೆಸರನ್ನು ಹೇಳಿ ಸ್ತುತಿಸಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಆ ಮಂತ್ರಕ್ಕೆ ದೇವತೆಯಾರು ಎಂಬುವನ್ನು ತಿಳಿಯುವ ಬಗೆ ಹೇಗೆ ?

## ಯದ್ದೇವತಃ ಸ ಯಜ್ಞೋ ವಾ ಯಜ್ಞಾಂಗಂ ವಾ ತದ್ದೇವತಾ ಭವಂತಿ ॥

ಇಂತಹ ಸಂದರ್ಭದಲ್ಲಿ ಏನುಮಾಡಬೇಕೆಂದರೆ, ಯಾವ ಯಜ್ಞದಲ್ಲಿ, ಅಥವಾ ಯಾವ ಯಜ್ಞಾಂಗಕರ್ಮದಲ್ಲಿ ಯಾವ ದೇವತೆಯನ್ನು ಸ್ತುತಿಸುವ ಸಂದರ್ಭದಲ್ಲಿ ಈ ಮಂತ್ರವನ್ನು ಉಪಯೋಗಿಸಲಾಗುವುದೋ ಆ ಮಂತ್ರಕ್ಕೆ ಅದೇ ದೇವತೆಯೆಂದು ತಿಳಿಯಬೇಕು. ಹೇಗೆಂದರೆ ಆಗ್ನೇಯೋಽಗ್ನಿಷ್ಟೋಮಃ ಎಂಬಲ್ಲಿ ಅಗ್ನಿಷ್ಟೋಮ ಯಜ್ಞದಲ್ಲಿ ಅಗ್ನಿಯೇ ಪ್ರಧಾನ ದೇವತೆಯು ಹೀಗೆಯೇ ಯಜ್ಞಾಂಗಕರ್ಮದಲ್ಲಿಯೂ ಇರುವುದು. ಪ್ರಾತಸ್ಸವದಲ್ಲಿ ಉಪಯೋಗಿಸುವ ಮಂತ್ರವು ಅಗ್ನಿ ದೇವತಾಕವು ಮಾಧ್ಯಂದಿನಸವನದಲ್ಲಿ ಉಪಯೋಗಿಸುವ ಮಂತ್ರವು ಇಂದ್ರದೇವತಾಕವು ತೃತೀಯಸವನದಲ್ಲಿ ಉಪಯೋಗಿಸುವ ಮಂತ್ರವು ಆದಿತ್ಯದೇವತಾಕವು.

## ಅಥಾನ್ಯತ್ರ ಯಜ್ಞಾತ್ ಪ್ರಾಜಾಪತ್ಯಾ ಇತಿ ಯಾಜ್ಞಿಕಾಃ ॥

ಕೆಲವರು ಎಂದರೆ ಯಜ್ಞಕರ್ಮಕುಶಲರು ಈರೀತಿ ಹೇಳುವರು ಅನಿರುಕ್ತ ಎಂದರೆ ದೇವತೆಯ ವಿಷಯವನ್ನು ನಿರ್ದಿಷ್ಟವಾಗಿ ಹೇಳದೇ ಇರುವ ಮಂತ್ರಗಳಿಗೆ ಪ್ರಜಾಪತಿಯೇ ದೇವತೆಯು ಅಥವಾ ಆ ಮಂತ್ರವನ್ನು ಯಾವ ದೇವತಾಕವಾದ ಬ್ರಾಹ್ಮಣ ವಾಕ್ಯಗಳೊಡನೆ ಉಪಯೋಗಿಸುವರೋ ಆ ಬ್ರಾಹ್ಮಣವಾಕ್ಯಗಳಿಂದ ವ್ಯಕ್ತವಾಗುವ ದೇವತೆಯೇ ಆ ಮಂತ್ರದ ದೇವತೆಯು ಎಂದು.

## ನಾರಾಶಂಸಾ ಇತಿ ನೈರುಕ್ತಾಃ ॥

ಕೆಲವು ನಿರುಕ್ತಕಾರರು ಈರೀತಿ ಹೇಳುವರು ನರಾಶಂಸ ಶಬ್ದಕ್ಕೆ ಅಗ್ನಿ ಅಥವಾ ಯಜ್ಞವೆಂಬ ಅರ್ಥವಿರುವುದ ಯಜ್ಞ ಇತಿ ಕಾತ್ಥಕ್ಯಃ ಅಗ್ನಿರಿತಿ ಶಕಪೂಣಿಃ ತಾತ್ಥಕ್ಯರೆಂಬುವರು ನರಾಶಂಸ ಶಬ್ದಕ್ಕೆ ಯಜ್ಞವೆಂಬ ಅರ್ಥವನ್ನು ಹೇಳುವರು ಶಾಕಪೂಣಿ ಎಂಬುವರು ಅಗ್ನಿಯೆಂಬ ಅರ್ಥವನ್ನು ಹೇಳುವರು ಯಜ್ಞಶಬ್ದಕ್ಕೆ ವಿಷ್ಣುವೆಂದೂ ಅರ್ಥವಿರುವುದು ವಿಷ್ಣುರ್ವೈ ಯಜ್ಞಃ ಹೀಗೆಯೇ ಅಗ್ನಿಯು ಸಮಸ್ತದೇವತೆಗಳ ಸ್ವರೂಪನಾಗಿರುವನು—ಅಗ್ನಿಃ ಸರ್ವಾ ದೇವತಾಃ ಎಂದು ಶ್ರುತಿವಾಕ್ಯವಿರುವುದು. ಆದ್ದರಿಂದ ಈ ಎರಡುವಿಧ ಅರ್ಥಗಳಿಗೂ ಇಲ್ಲಿ ಅವಕಾಶವಿದೆ. ಇದಲ್ಲದೆ ನರಾ ಎಂದರೆ ಮನುಷ್ಯರು ಶಂಸ ಎಂದರೆ ಸ್ತುತಿಸುವುದು. ಮನುಷ್ಯರನ್ನು (ರಾಜರು ಮೊದಲಾದವರನ್ನು) ಪ್ರಶಂಸಮಾಡುವ ಮಂತ್ರಕೆ ನರಾಶಂಸವೆಂದು ಹೇಳಬೇಕು ಎಂದು ಇನ್ನು ಕೆಲವರು ಹೇಳುವರು.

**ಅಪಿ ವಾ ಸಾ ಕಾಮದೇವತಾ ಸ್ಯಾತ್ ||**

ಅಥವಾ ಋಷಿಯು ತನಗೆ ಇಷ್ಟಬಂದ ಯಾವುದಾದರೂ ದೇವತೆಯನ್ನು ನಿರ್ದೇಶಿಸಿ ಸ್ತುತಿಸಿರಬಹುದು. ಗಣಪತಿ ಎಂಬ ದೇವತೆಯು ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿಲ್ಲ. ಆದರೆ ಗಣಪತಿ ಎಂಬ ಶಬ್ದದ ಪ್ರಯೋಗ ಮಾತ್ರ ಕೆಲವುಕಡೆ ಇರುವುದು. ಋಷಿಯು ತನ್ನ ಮನಸ್ಸಿನಲ್ಲಿ ಯಾವ ದೇವದೆಯನ್ನಾದರೂ ಉದ್ದೇಶಿಸಿ ಈ ಪದಪ್ರಯೋಗದಿಂದ ವರ್ಣಿಸಿ ಸ್ತುತಿಸಿರಬಹುದು. ಇದರಂತೆಯೇ ಇನ್ನೂ ಅನೇಕ ಮಂತ್ರಗಳಿರುವವು.

**ಪ್ರಾಯೋದೇವತಾ ವಾ । ಅಸ್ತಿ ಹ್ಯಾಚಾರೋ ಬಹುಲಂ ಲೋಕೇ**
**ದೇವದೇವತ್ಯಮತಿಥಿದೇವತ್ಯಂ ಪಿತೃದೇವತ್ಯಂ ||**

ಕೆಲವು ಸಂದರ್ಭದಲ್ಲಿ ಮಂತ್ರದಲ್ಲಿ ಅನೇಕ ವ್ಯಕ್ತಿ (ದೇವತೆ) ಗಳನ್ನು ಉದ್ದೇಶಿಸಿ ವರ್ಣಿಸಲಾಗಿರಬಹುದು ಮತ್ತು ಲೋಕವ್ಯವಹಾರದಲ್ಲಿ ರೂಢಿಯಲ್ಲಿರುವಂತೆ, ದೇವತೆ, ಪುರುಷ, ಅತಿಥಿ ಪಿತೃದೇವತೆ ಕುದುರೆ ಮೊದಲಾದ ಪ್ರಾಣಿಗಳು ಅಥವಾ ಯಾವುದಾದರೂ ಬಳಕೆಯಲ್ಲಿರುವ ವಸ್ತುಗಳು ಮೊದಲಾದುವನ್ನು ನಿರ್ದೇಶಿಸಬಹುದು. ಋಷಿಯು ಮೇಲ್ಕಂಡ ಯಾವ ದೇವತೆ ಪುರುಷ ಪಿತೃ, ಪ್ರಾಣಿ ವಸ್ತು ಇವುಗಳಲ್ಲಿ ಯಾವದನ್ನಾದರೂ ತನಗೆ ಇಷ್ಟವಾದ ದೇವತೆಯನ್ನಾರೋಪಿಸಿ ಸ್ತುತಿಸಿರಬಹುದು.

**ಯಾಜ್ಞದೈವತೋ ಮಂತ್ರ ಇತ್ಯಪಿ ಹ್ಯದೇವತಾದೇವತಾವತ್**
**ಸ್ತೂಯಂತೇ ಯಥಾಶ್ವಪ್ರಭೃತೀನ್ಯೋಷಧಿಪರ್ಯಂತಾನಿ ||**

ಯಜ್ಞಾದಿಗಳಲ್ಲಿ ಸ್ತುತರಾಗಿರುವ ದೇವತೆಗಳನ್ನು ಮಾತ್ರವೇ ಮಂತ್ರಗಳಲ್ಲಿ ನಿರ್ದೇಶಮಾಡಿದೆಯೆಂದು ಹೇಳಬೇಕಾಗಿಲ್ಲ. ದೇವತೆಗಳಲ್ಲದ ಇತರ ವಸ್ತುಗಳಲ್ಲಿಯೂ ಎಂದರೆ, ಕುದುರೆ, ಓಷಧಿ, ಅಕ್ಷ (ಪಗಡೆ) ಮೊದಲಾದ ಜೀವ ಮತ್ತು ನಿರ್ಜೀವವಸ್ತುಗಳಲ್ಲಿಯೂ ದೇವತೆಯೆಂಬ ವ್ಯಕ್ತಿಯನ್ನು ನಿರ್ದೇಶಿಸಿ, ಋಷಿಯು ಸ್ತೋತ್ರಮಾಡಿರಬಹುದು ಎಂದರೆ ಋಷಿಯು ದೇವತೆಗಳಲ್ಲದ ಅಥವಾ ನಿರ್ಜೀವವಸ್ತುಗಳನ್ನು ಸ್ತೋತ್ರಮಾಡುವಾಗ ಅವುಗಳನ್ನು ದೇವತೆಗಳಂತೆಯೇ ಅಥವಾ ಜೀವಂತ ವಸ್ತುಗಳಂತೆ ಭಾವಿಸಿ ಸ್ತೋತ್ರಮಾಡಿರಬಹುದು.

ಅಥಾಪ್ಯಷ್ಟೌ ದ್ವಂದ್ವಾನಿ ಸ ನ ಮನ್ಯೇತಾಗುತೂನಿವಾರ್ಥಾನ್ ದೇವತಾನಾಂ ಪ್ರತ್ಯಕ್ಷದೃಶ್ಯಮೇತದ್ಭವತಿ ಮಾಹಾಭಾಗ್ಯಾದ್ದೇವತಾಯಾ ಏಕ ಆತ್ಮಾ ಬಹುಧಾ ಸ್ತೂಯತೇ ||

ದೇವತೆಗಳಿಗೂ ಮನುಷ್ಯ ಮೊದಲಾದದರಿಗೂ ಕೆಲವು ವಿಷಯಗಳಲ್ಲಿ ವ್ಯತ್ಯಾಸವು ಕಂಡುಬರುವುದು ದೇವತೆಗಳಿಗೆ ಅಷ್ಟೈಶ್ವರ್ಯ ನೆಂಬ ಮಹಾಶಕ್ತಿಯಿರುವುದು ಈ ಅಷ್ಟವಿಧ ಐಶ್ವರ್ಯವು ಯಾವವೆಂದರೆ—ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿಃ ಪ್ರಾಕಾಮ್ಯಮೇವ ಚ | ಈಶಿತ್ವಂ ಚ ವಶಿತ್ವಂ ಚ ಯತ್ರ ಕಾಮಾವಸಾಯಿತಾ || ಇವು ಅಷ್ಟಸಿದ್ಧಿ ಅಥವಾ ಅಷ್ಟೈಶ್ವರ್ಯಗಳು. ಇವು ದೇವತೆಗಳಿಗೆ ಸ್ವಭಾವಸಿದ್ಧವಾಗಿಯೇ ಇರುವುವು. ಮನುಷ್ಯಾದಿಗಳಿಗೆ ಕೆಲವು ಸಂದರ್ಭಗಳಲ್ಲಿ ಕೆಲವು ಶಕ್ತಿಗಳು ಬಂದು ಕೆಲವು ಕಾಲಾನಂತರ ಹೋಗುವುವು. ಯಾವಾಗಲೂ ಇರುವುದಿಲ್ಲ. ಇವುಗಳಿಗೆ ಮಹಾಭಾಗ ಗಳೆಂದು ಹೇಳುವರು. ದೇವತೆಗಳಲ್ಲಿರುವ ಆತ್ಮವು ಒಂದೇ ಆದರೂ ಅವುಗಳನ್ನು ನಾನಾವಿಧವಾಗಿ ನಾನಾರೂಪಗಳಿಂದ ಸ್ತುತಿಸಲಾಗುವುದು. ಈ ವಿಷಯದಲ್ಲಿ ಇಂದ್ರನಿಗಿರುವ ಮಹಾಭಾಗ್ಯ ಅಥವಾ ಶಕ್ತಿಯ ವಿಷಯದಲ್ಲಿ ಉದಾಹರಣೆಗಾಗಿ ಒಂದು ಋಕ್ಕನ್ನು ತಿಳಿಸುವರು—

ರೂಪಂ ರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನ-
ಸ್ತನ್ವಂ೧ ಪರಿಸ್ವಾಂ | ತ್ರಿರ್ಯದ್ದಿವಃ ಪರಿ ಮುಹೂರ್ತಮಾ-
ಗಾತ್ಸ್ವೈರ್ಮಂತ್ರೈರನೃತುಪಾ ಋತಾವಾ || ೮ ||

(ಋ. ಸಂ. ೩–೫೩–೮)

ಇದರ ಅರ್ಥವು—

ಧನವಂತನಾದ ಇಂದ್ರನು ಅನೇಕವಿಧವಾದ ರೂಪಗಳನ್ನು ಧರಿಸಿಕೊಂಡು ಕಾಣಿಸಿಕೊಳ್ಳುತ್ತಾನೆ ನಾನಾವಿಧವಾದ ಶಕ್ತಿಯುತಗಳನ್ನಾಗಿ ಮಾಡುತ್ತಾ ತನ್ನ ಶರೀರವನ್ನು ಅದರ ಮೂಲರೂಪಕ್ಕಿಂತಲೂ ಬೇರೆಯಾದ ಅನೇಕರೂಪವುಳ್ಳದ್ದನ್ನಾಗಿ ಮಾಡುತ್ತಾನೆ. ಯಾವ ಅದೇ ಶಕ್ತಿಯಿಂದಲೇ ತನ್ನನ್ನು ಪ್ರಶಂಸಿಸುವ ಮಂತ್ರಗಳಿಂದ ಆಹೂತನಾಗಿ ಋತುಕಾಲವಲ್ಲ ದಿದ್ದರೂ ಸಹ ಸೋಮಪಾನವನ್ನು ಮಾಡುತ್ತಾನೆ. ಸತ್ಯವಂತವಾದ ಇಂದ್ರನು ಸ್ವರ್ಗಲೋಕದಿಂದ ಒಂದೇ ಮುಹೂರ್ತದಲ್ಲಿ ನಾನಾದೇಶಗಳಲ್ಲಿ ನಡೆಯತಕ್ಕ ಯಜ್ಞಗಳಲ್ಲಿಯೂ ಸಹ ಸವನತ್ರಯಕಾಲದಲ್ಲೂ ಬರುತ್ತಾನೆ.

**ರೂಪಂರೂಪಂ ಮಘವಾ ಬೋಭವೀತಿ—ಧನವಾನಿಂದ್ರೋ ಯದ್ಯದ್ರೂಪಂ ಕಾಮಯತೇ ತತ್ತದ್ರೂಪಂ ಪ್ರಾಪ್ನೋತಿ, ತತ್ತದ್ರೂಪಾತ್ಮಕೋ ಭವತಿ |** ಸಕಲೈಶ್ವರ್ಯಸಂಪನ್ನನಾದ ಇಂದ್ರನು ತನಗೆ ಬೇಕಾದ ರೂಪಗಳನ್ನು ಧರಿಸುತ್ತಾನೆ. ಎಂದರೆ ಆಯಾ ರೂಪಾತ್ಮಕನಾಗಿ ಆಗುತ್ತಾನೆ. ಈ ವಿಷಯದಲ್ಲಿ—ಇಂದ್ರನು ಗೃತ್ಸಮದ ಋಷಿಯ ಯಜ್ಞ ವೇದಿಕೆಯಲ್ಲಿ ಕುಳಿತುಕೊಂಡಿರುವುದನ್ನು ಕೆಲವು ಅಸುರರು ತಿಳಿದು ಅವನು ಹೊರಕ್ಕೆ ಬಂದಕೂಡಲೇ ಕೊಲ್ಲಬೇಕೆಂದು ಹೊಂಚುಹಾಕುತ್ತಿದ್ದರು. ಈ ಸುಳುವನ್ನು ಇಂದ್ರನು ತಿಳಿದು ಯಜ್ಞ ಭೂಮಿಯಿಂದ ಹೊರಕ್ಕೆ ಹೋಗುವಾಗ ಗೃತ್ಸಮದ ಋಷಿಯ ರೂಪವನ್ನು ಧರಿಸಿ ಹೊರಟುಹೋದನು. ಗೃತ್ಸಮದನು ಹೋಗುತ್ತಿರುವನೆಂದು ಅಸುರರು ತಿಳಿದು ಇಂದ್ರನನ್ನು ಹಿಂಸೆಪಡಿಸಲಿಲ್ಲ ಅನಂತರ ಅಸುರರಿಗೆ ಈ ವಿಷಯವು ತಿಳಿಯಿತು ಎಂಬ ಕಥೆಯನ್ನು ನಾವು ಈ ಮಂಡಲದ ಪೀಠಿಕೆಯಲ್ಲಿ ವಿವರಿಸಿದೇವೆ.

ಮಾಯಾಃ ಕೃಣ್ವಾನಃ ತನ್ವಂ ಪರಿ ಸ್ವಾಂ—ಸ್ವಸ್ಮಾಚ್ಛರೀರಾತ್ ನಾನಾವಿಧಾನಿ ಶರೀರಾಣಿ ನಿರ್ಮಿ- ಮೀತೇ । ಯದ್ವಾ ಸ್ವಾಂ ತನೂಂ ನಾನಾವಿಧರೂಪೋಪೇತಾಂ ಕರೋತಿ । ಇದಲ್ಲದೆ ಇಂದ್ರನು ತನ್ನ ಶರೀರದಿಂದ ನಾನಾವಿಧ ರೂಪಗಳನ್ನೂ ನಿರ್ಮಿಸಬಲ್ಲನು ಅಥವಾ ತನ್ನ ಶರೀರವನ್ನು ನಾನಾವಿಧರೂಪಗಳುಳ್ಳದ್ದನ್ನಾಗಿಯೂ ಮಾಡಿಕೊಳ್ಳಬಲ್ಲನು. ಈ ವಿಷಯದಲ್ಲಿ—

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥

(ಋ. ಸಂ. ೬–೪೭–೧೮)

ಎಂಬ ಋಕ್ಕನ್ನು ಭಾಷ್ಯಕಾರರು ಉದಾಹರಣೆಯಾಗಿ ಕೊಟ್ಟಿರುವರು. ಎಂದರೆ ಇಂದ್ರನು ತನ್ನ ಮಾಯಾಶಕ್ತಿಗಳಿಂದ ಅನೇಕ ವಿಧವಾದ ರೂಪಗಳನ್ನು ಧರಿಸಲು ಸಮರ್ಥನೆಂದು ಇದರ ಮುಖ್ಯಾಭಿಪ್ರಾಯವು. ಹೇಗೆಂದರೆ—

ಯತ್ ಸ್ವಃ ಮಂತ್ರೈಃ ಅನೃತುಪಾಃ ಋತಾವಾ ದಿವಃ ಮುಹೂರ್ತಂ ಪರಿ ತ್ರಿಃ ಆಗಾತ್— ಸತ್ಯವಾನ್ ಇಂದ್ರ ಸ್ವರ್ಗಲೋಕಾತ್ಪರಿ ಏಕಸ್ಮಿನ್ನೇನ ಮುಹೂರ್ತೇ ನಾನಾದೇಶವರ್ತಿಷು ಯಜ್ಞೇಷು ತತ್ರಾಪಿ ತ್ರಿಷು ಸವನಕಾಲೇಷು ಆಗಚ್ಛತಿ । ನಾನಾದೇಶಗಳಲ್ಲಿ ಅನೇಕ ಯಜಮಾನರು ಮಾಡುವ ಅನೇಕ ಯಜ್ಞ ಗಳಲ್ಲಿಯೂ ಆ ಪ್ರತಿಯೊಂದು ಯಜ್ಞದ ಮೂರು ಸವನಕಾಲಗಳಲ್ಲಿಯೂ ತಾವು ಪಠಿಸುವ ಮಂತ್ರಗಳಿಂದ ಕರೆಯಲ್ಪಟ್ಟ ಕೂಡಲೇ ಏಕಕಾಲದಲ್ಲಿ ಇಂದ್ರನು ಕ್ಷಣಮಾತ್ರದಲ್ಲಿ ಸ್ವರ್ಗದಿಂದ ಬಂದು ಸೋಮಪಾನ ಮಾಡುವನು. ಈರೀತಿ ಏಕ ಕಾಲದಲ್ಲಿ ಇಂದ್ರನು ಅನೇಕ ಯಜ್ಞಗಳಿಗೆ ಹೋಗಲು ಅನೇಕ ರೂಪಗಳನ್ನು ಧರಿಸಿ ಹೋಗುವನು ಎಂದಭಿಪ್ರಾಯವು.

ಈ ವಿಷಯದಲ್ಲಿ ಎರಡನೇ ಉದಾಹರಣೆಯು—

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪ-
ರ್ಣೋ ಗುರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನ-
ಮಾಹುಃ ॥ ೪೬ ॥

(ಋ. ಸಂ. ೧–೧೬೪–೪೬)

ಇದರ ಅರ್ಥವು—

ಒಬ್ಬನೇ ಆದ ಆದಿತ್ಯನನ್ನು ಇಂದ್ರನೆಂದೂ ಮಿತ್ರನೆಂದೂ ವರಣನೆಂದೂ ಅಗ್ನಿಯೆಂದೂ ಕರೆಯುತ್ತಾರೆ. ಅಲ್ಲದೆ ಇವನೇ ದಿವ್ಯಾತ್ಮನಲ್ಲಿ ಶ್ರೇಷ್ಠವಾದ ಪತನವುಳ್ಳವನೂ (ಸಂಚಾರ) ಆದ ಗುರುತ್ಮಂತನಾಗಿದ್ದಾನೆ. ಮೇಧಾವಿಗಳಾದ ವಿಪ್ರರು ಏಕಾತ್ಮನಾದ ಒಬ್ಬ ಪರಮಾತ್ಮನನ್ನೇ ಅಗ್ನಿಯೆಂದೂ ಯಮನೆಂದೂ ಮಾತರಿಶ್ವನೆಂದೂ ನಾನಾವಿಧವಾಗಿ ಕರೆಯುತ್ತಾರೆ.

ಈ ಋಕ್ಕಿನಲ್ಲಿ ತಾತ್ವಿಕವಾದ ಐಕ್ಯವನ್ನು ಹೇಳಿದೆ. ಇಂದ್ರಾದಿದೇವತೆಗಳೆಲ್ಲರೂ ಈ ಒಂದೇ ಮೂಲ ತತ್ತ್ವದ ಬೇರೆ ಬೇರೆ ಸ್ವರೂಪಗಳೆಂದೂ ಅವರಲ್ಲಿ ತಾತ್ತ್ವಿಕವಾದ ವೈವಿಧ್ಯವಿಲ್ಲವೆಂದೂ ಸ್ಪಷ್ಟವಾಗಿ ತಿಳಿಸಿದೆ. ಇಂದ್ರಾದಿದೇವತೆ ಗಳನ್ನುದ್ದೇಶಿಸಿ ನೆರವೇರಿಸತಕ್ಕ ಸಕಲ ಪೂಜೆಗಳೂ ಈ ಪರದೇವತೆಗೇ ಅರ್ಪಿತಗಳಾಗುವುದೆಂದಭಿಪ್ರಾಯವು. "ಅಮುಮೇ-

ವಾದಿತ್ಯಂ " ಆದಿತ್ಯನೇ ಈ ಮೂಲತತ್ವನೆಂದು ಸಾಯಣರ ವಿವರಣೆ ಇದೆ. ಆದರೆ ನಿರುಕ್ತಕಾರರು ಏಕಂ ಎಂಬುದಕ್ಕೆ ಇಲ್ಲಿ ಅಗ್ನಿ ಯೆಂದರ್ಥಮಾಡಿದ್ದಾರೆ.

ಇಮಮೇವಾಗ್ನಿಂ ಮಹಾಂತಮಾತ್ಮಾನಂ ಬಹುಧಾ ಮೇಧಾವಿನೋ ವದಂತೀಂದ್ರಂ ಮಿತ್ರಂ ವರುಣ-ಮಗ್ನಿಂ ದಿವ್ಯಂ ಚ ಗರುತ್ಮಂತಂ ದಿವ್ಯೋ ದಿವಿಜೋ ಗರುತ್ಮಾನ್ ಗರಣವಾನ್ ಗುರ್ವಾತ್ಮಾ ಮಹಾತ್ಮೇತಿ ವಾ । ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿಃ ।

(ನಿ. ೭-೧೮)

ಮಹಾತ್ಮನಾದ ಈ ಅಗ್ನಿಯನ್ನೇ ತತ್ವವಿತ್ತುಗಳು ಇಂದ್ರ, ಮಿತ್ರ, ವರುಣ, ಗರುತ್ಮಾನ್ ಇತ್ಯಾದಿ ನಾನಾ ನಾಮಗಳಿಂದ ಕರೆಯುತ್ತಾರೆ. ಮಾನವರಿಂದ ಅರ್ಪಿತವಾಗತಕ್ಕ ಪ್ರಾರ್ಥನೆಯಾಗಲಿ, ಹವಿರಾದಿಗಳಾಗಲಿ ಈ ಅಗ್ನಿಯನ್ನೇ ಉದ್ದೇಶಿಸಿ ಮಾಡತಕ್ಕವು ಮತ್ತು ಈ ಅಗ್ನಿಯನ್ನೇ ಸೇರತಕ್ಕವು. ಈ ವಿಷಯವನ್ನೇ ಋಕ್ಸಂಹಿತಾವಾಕ್ಯಗಳಲ್ಲಿಯೇ ಸ್ಪಷ್ಟವಾಗಿ ತಿಳಿಸಿದೆ. ಉದಾಹರಣೆಗೆ—

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ।

(ಋ. ಸಂ. ೨-೧-೩)

ಎಲೈ ಅಗ್ನಿಯೇ, ಇಷ್ಟಾರ್ಥಗಳನ್ನು ಸುರಿಸುವವನಾದುದರಿಂದ ನೀನೇ ಇಂದ್ರನಾಗಿದ್ದೀಯೇ. ಎಲ್ಲರಿಂದಲೂ ಸ್ತುತಿಸಲ್ಪಡುವ ವಿಷ್ಣುವೂ ನೀನೇ. ಧನದ ಸ್ವರೂಪವನ್ನು ತಿಳಿದ ಬ್ರಹ್ಮನೂ ನೀನೇ. ನೀನು ಅನೇಕ ವಿಧವಾದ ಪ್ರಶಂಸೆಗಳಿಂದ ಸ್ತುತನಾಗಿದ್ದೀಯೆ.

ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।
ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ ತ್ವಮಂಶೋ ವಿದಥೇ ದೇವ ಭಾಜಯುಃ ॥

(ಋ. ಸಂ. ೨-೧-೪)

ಎಲೈ ಅಗ್ನಿಯೇ, ನೀನು ಧೃತವ್ರತನಾದ ವರುಣನೂ, ಶತ್ರುನಾಶಕನೂ, ಸ್ತುತ್ಯನೂ ಆದ ಮಿತ್ರನೂ, ಅಭಿಮತ ಪ್ರದಾತನಾದ ಅರ್ಯಮನೂ ಆಗಿದ್ದಿಯೇ ಮತ್ತು ಸೂರ್ಯನ ಮೂರ್ತ್ಯಂತರವಾದ ಅಂಶನೂ ನೀನಲ್ಲದೆ ಬೇರೆಯಲ್ಲ ಎಲ್ಲಾ ದೇವತೆಗಳ ಪ್ರಭಾವವನ್ನೂ ಪಡೆದಿರುವ ನೀನು ಫಲದಾತನಾಗು.

ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।
ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ॥

(ಋ. ಸಂ. ೨-೧-೬)

ಎಲೈ ಅಗ್ನಿಯೇ, ಲೋಕತ್ರಯದಿಂದಲೂ ಅಸುರರನ್ನು ಓಡಿಸತಕ್ಕ ರುದ್ರನೇ ನೀನು. ಮರುತ್ಸಮೂಹವೇ ನೀನು. ಎಲ್ಲರ ಪೋಷಕನೂ, ಸುಖದಾತನೂ ಆಗಿ ಯಜ್ಞಗೃಹವನ್ನು ಪ್ರವೇಶಿಸು. ಇತ್ಯಾದಿಯಾಗಿ ಅಗ್ನಿಯೇ ಸಕಲ ದೇವತೆಗಳ ಮೂಲತತ್ವವಾಗಿರುವನೆಂದು ಸ್ಪಷ್ಟವಾಗಿ ತಿಳಿಸಿದೆ. ಅಷ್ಟೇ ಅಲ್ಲದೆ,

ಅಗ್ನೇ ನೇಮಿರರಾ ಇವ ದೇವಾಸ್ತ್ವಂ ಪರಿಭೂರಸಿ । ಆ ರಾಧಶ್ಚಿತ್ರಮೃಂಜಸೇ ॥

(ಋ. ಸಂ. ೫–೧೩–೬)

ಎಂಬ ಋಕ್ಕಿನಲ್ಲಿ, ಅಗ್ನಿಯನ್ನು ರಥಚಕ್ರದ ನೇಮಿಗೂ ಇತರ ದೇವತೆಗಳನ್ನೆಲ್ಲಾ ರಥಚಕ್ರದ ಅರಗಳಿಗೂ ಹೋಲಿಸಿ ಯಾವ ರೀತಿ ರಥಚಕ್ರದ ನೇಮಿಯು ಅರಗಳನ್ನೆಲ್ಲಾ ಒಟ್ಟುಗೂಡಿಸಿ ಒಂದು ಐಕ್ಯವನ್ನು ಸಂಪಾದಿಸಿದೆಯೋ ಅದರಂತೆ ಅಗ್ನಿಯೂ ಸಹ ವೈವಿಧ್ಯವನ್ನು ತೋರಿಸುವ ಬೇರೆಬೇರೆ ದೇವತೆಗಳನ್ನು ವ್ಯಾಪಿಸಿ ಎಲ್ಲರಲ್ಲಿಯೂ ಸಹ ಏಕತತ್ತ್ವವನ್ನು ಪ್ರಕಾಶಪಡಿಸಿದ್ದಾನೆ.

ವಿಭೂಃ, ಪರಿಭೂಃ ಇತ್ಯಾದಿ ವಿಶೇಷಣಗಳಿಂದ ಅಗ್ನಿಯ ಸರ್ವವ್ಯಾಪಕತ್ವವು ಸೂಚಿತವಾಗಿದೆ. ಯಜ್ಞ ಕರ್ಮಗಳನ್ನೂ, ಅಗ್ನಿಯನ್ನೂ, ರಥದ ಶಂಕು ಮತ್ತು ವಲಯಗಳಿಗೆ ಹೋಲಿಸಿದೆ. ಯಜ್ಞವು ವಿಶ್ವತತ್ತ್ವವನ್ನು ಪ್ರತಿಬಿಂಬಿಸುತದೆ. ಯಜ್ಞವೇದಿಯು ಯಜ್ಞದ ನಾಭಿಯಾದುದರಿಂದ ವಿಶ್ವಕ್ಕೇ ನಾಭಿಯಾಗಿರುತ್ತದೆ. ಈ ನಾಭಿಯಲ್ಲಿ ಪ್ರತಿಷ್ಠಿತನಾದ ಅಗ್ನಿಯು ವಿಶ್ವದ ಸಕಲ ತತ್ತ್ವಕ್ಕೂ ಕೇಂದ್ರನಾಗಿಯೂ ಮತ್ತು ಸರ್ವವ್ಯಾಪಕನಾಗಿಯೂ ಇರುತ್ತಾನೆ. ಸೂರ್ಯಚಂದ್ರಾದಿ ಸಕಲಗ್ರಹಗಳೂ ಈ ಕೇಂದ್ರವನ್ನೇ ತಮ್ಮ ಚಲನವಲನಗಳಿಗೆ ಆಶ್ರಯವನ್ನಾಗಿಟ್ಟು ಕೊಂಡಿರುತ್ತಾರೆ.

ಸರ್ವಾಣಿ ಹ ತ್ವೇವ ಭೂತಾನಿ । ಸರ್ವೆ ದೇವಾ ಏಷೋಽಗ್ನಿಶ್ಚಿತ ಅಪೋ ವೈ ಸರ್ವೇ ದೇವಾಸ್ಸರ್ವಾಣಿ ಭೂತಾನಿ ತಾ ಹೈತಾ ಏವೈಷೋಽಗ್ನಿಶ್ಚಿಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ............ಯೋಽಯಂ ಹಿರಣ್ಮಯಃ ಪುರುಷಃ ।

(ಶ. ಬ್ರಾ. ೧೦–೫–೪–೧೪)

ಎಂಬ ವಾಕ್ಯಗಳಲ್ಲಿ ಅಗ್ನಿವೇದಿಕೆಯಲ್ಲಿ ಇದ್ಧನಾದ ಅಗ್ನಿಯು ಸಕಲಲೋಕಗಳನ್ನೂ ವ್ಯಾಪಿಸುವವನಾಗಿಯೂ, ಸಕಲ ಕರ್ಮಗಳಿಗೂ ಅಧ್ಯಕ್ಷನಾಗಿಯೂ, ಈ ಕೇಂದ್ರವನ್ನಾಶ್ರಯಿಸಿಯೇ ವಿಶ್ವವ್ಯವಹಾರವೆಲ್ಲವೂ ನಡೆಯುವುದಾಗಿಯೂ ವರ್ಣಿಸಿ, ಈ ವಿಶ್ವಾತ್ಮನಾದ ಅಗ್ನಿಯೇ ಹಿರಣ್ಮಯಾಕಾರನಾದ ಪರಮಪುರುಷನೆಂದು ತಿಳಿಸಿದೆ. ಹಿರಣ್ಮಯಃ ಪುರುಷಃ ಎಂಬ ವಿಶೇಷಣವು ಅಗ್ನಿಪರವಾಗಿರುವಂತೆ ಅನೇಕಕಡೆ ಆದಿತ್ಯನ ಪರವಾಗಿಯೂ ಇದೆ. ಆದಿತ್ಯನಿಗೂ ಅಗ್ನಿಗೂ ತಾತ್ತ್ವಿಕವಾದ ವೈವಿಧ್ಯವಿಲ್ಲದಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಅಮುಮೇವಾದಿತ್ಯಂ ಎಂದಿರುವುದಕ್ಕೂ, ನಿರುಕ್ತಕಾರರು ಇಮಮೇವಾಗ್ನಿಂ ಎಂದಿರುವುದಕ್ಕೂ ವಿರೋಧವಿರುವುದಿಲ್ಲ.

ಸುಪರ್ಣೋ ಗರುತ್ಮಾನ್ ಈ ವಿಶೇಷಣವು ಇಲ್ಲಿ ಗಮನಾರ್ಹವಾದದು. ಗರುತ್ಮಾನ್ ಎಂಬ ಪದಕ್ಕೆ ನಿರುಕ್ತಕಾರರು ಗುರ್ವಾತ್ಮಾ, ಮಹಾತ್ಮಾ ಎಂಬರ್ಥಮಾಡಿದ್ದಾರೆ. ವಿಶ್ವಾತ್ಮನಾದ ಪರಮಾತ್ಮನೆಂದರ್ಥ. ಪರಮಾತ್ಮನಿಗೆ ಸುಪರ್ಣವೆಂಬ ವಿಶೇಷಣವು ಋಕ್ಸಂಹಿತೆಯಲ್ಲಿ ಬಹಳವಾಗಿ ಪ್ರಯುಕ್ತವಾಗಿದೆ.

ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ।
ಛಂದಾಸಿ ಚ ದಧತೋ ಅಧ್ವರೇಷು ಗ್ರಹಾನ್ಸೋಮಸ್ಯ ಮಿಮತೇ ದ್ವಾದಶ ॥

(ಋ ಸಂ. ೧೦–೧೧೪–೫)

ಸುರಾತನನಾದವನೂ ಅದ್ವಿತೀಯನೂ ಆದ ಪರಮಾತ್ಮನನ್ನು ಕ್ರಾಂತಪ್ರಜ್ಞರಾದ ಮಾನವರು ನಾನಾವಿಧವಾದ ಕಲ್ಪನೆಗಳಿಂದ ಭಾವಿಸಿ ಅವನನ್ನು ಸ್ತುತಿಸುತ್ತಾರೆ. ಅಧ್ವರಗಳಲ್ಲಿ ಛಂದೋರೂಪನಾದ ಸ್ತುತಿವಾಕ್ಯಗಳಿಂದ ಅವನ ಮಹಿಮೆಯನ್ನು ಪ್ರಶಂಸಿಸುತ್ತಾರೆ ಇತ್ಯಾದಿಯಾಗಿ ಸುಪರ್ಣವೆಂಬ ವಿಶೇಷಣದಿಂದ ಪರಮಾತ್ಮನ ಸ್ತುತಿಯಿದೆ.

ಆಧ್ಯಾತ್ಮಿಕವಾದ ತತ್ತ್ವಪ್ರತಿಪಾದನೆಯನ್ನು ವಿವರಿಸಿ ವಿಮರ್ಶಿಸುವಾಗ ಪಾಶ್ಚಾತ್ಯಪಂಡಿತರು ಋಕ್ಸಂಹಿತೆಯಲ್ಲಿ ಮೂರುವಿಧವಾದ ಬೆಳವಣಿಗೆಯಿದೆಯೆಂದು ಅಭಿಪ್ರಾಯಪಡುತ್ತಾರೆ. Dr.ರಾಧಾಕೃಷ್ಣನ್‌ರವರು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾರೆ.

A religious growth of many cent ries can not be a simple and transparent creed admitting of easy definition and classification. A striking aspect of the hymns is their Polyt .estic character. A great many gods are named and worshipped. Yet some of the hym s shock us by their highly abstract philosphising and from primitive polytheism to systematic Philosphy, it is a long long way. There strata of thought can be discerned in the eligion of the hymns of the Rig-Veda, which are naturalistic polythe sm, monotheism and monism.

(Indian Philosophy. Vol. I.p. 72)

ಅನೇಕಶತಮಾನಗಳ ಕಾಲದಿಂದ ಬೆಳೆದುಬಂದ ತಾತ್ತ್ವಿಕವಾದ ಅನ್ವೇಷಣವನ್ನು ಸುಲಭವಾಗಿ ವಿವರಿಸುವುದು ಸಾಧ್ಯವಲ್ಲ. ಅದರ ಲಕ್ಷಣವು ಹೀಗೆಯೇ ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಋಕ್ಸಂಹಿತಾವಾಕ್ಯಗಳಲ್ಲಿ ಬಹು ದೇವತಾತತ್ತ್ವವು ಪ್ರತಿಪಾದಿತವಾಗಿರುವುದು ಮೊದಲನೆಯ ಮತ್ತು ಮುಖ್ಯವಾದ ಅಂಶವಾಗಿದೆ. ಆದರೂ ಸಹ ಕೆಲವು ಮಂತ್ರಗಳಲ್ಲಿ ಏಕದೇವತಾತತ್ತ್ವವು ಪ್ರತಿಪಾದಿತವಾಗಿರುವುದೂ, ಅದ್ವೈತವಾದಕ್ಕೆ ತಳಹದಿಯಾದ ಈ ಪ್ರತಿಪಾದನೆಯು ಋತ್ಸಹಿಂತೆಯಲ್ಲಿಯೂ ಸಹ ಕೆಲವೆಡೆಗಳಲ್ಲಿ ಪ್ರಧಾನವಾದ ಅಂಶವಾಗಿರುವುದೂ , ಸಹ ತತ್ತ್ವಾನ್ವೇಷಿಗಳಿಗೆ ಸೋಜಿಗವನ್ನುಂಟುಮಾಡುವುದಾಗಿದೆ. ಋಕ್ಸಂಹಿತಾವಾಕ್ಯಗಳಿಂದ ಸೂಚಿತವಾಗುವ ತತ್ತ್ವಭಾವನೆಯ ಶ್ರೇಣಿಯಲ್ಲಿ ಮುಖ್ಯವಾದ ಮೂರು ಮೆಟ್ಟಲುಗಳನ್ನು ನೋಡಬಹುದು. ಅವು—

೧) ಪ್ರಕೃತಿತತ್ತ್ವವನ್ನು ಪ್ರತಿಬಿಂಬಿಸುವ ಬಹುದೇವತಾಭಾಪ ;

೨) ನಾನಾದೇವತೆಗಳಲ್ಲೂ ಐಕ್ಯವನ್ನು ತೋರಿಸುವ ಏಕದೇವತಾಭಾವ

೩) ಏಕತತ್ತ್ವಪ್ರತಿಪಾದಕವಾದ ಅದ್ವೈತ

ಎಂಬ ಈ ಮೂರು ವಿಭಾಗಗಳನ್ನು ತೋರಿಸಿ ಈ ಮೂರು ಅಂಶಗಳನ್ನೂ ವಿಶದವಾಗಿ ವಿಮರ್ಶಿಸಿದ್ದಾರೆ. (p. 72-98) ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಭಾವವನ್ನು Monotheism ಎಂಬ ವರ್ಗಕ್ಕಾಗಲಿ ಅಥವಾ Morism (ಅದ್ವೈತ) ಎಂಬ ವರ್ಗಕ್ಕಾಗಲಿ ಸೇರಿಸಬಹುದು. ಅಗ್ನಿ ಅಥವಾ ಆದಿತ್ಯನೊಬ್ಬನೇ ಇಂದ್ರಾದಿದೇವತೆಗಳ ರೂಪದಲ್ಲಿ ಪೂಜಿತನಾಗಿರುವನು ಎಂದರೆ ಇಂದ್ರಾದಿದೇವತೆಗಳ ತತ್ತ್ವವನ್ನು ಅಂಗೀಕರಿಸಿ ಅವರಲ್ಲಿ ಐಕ್ಯವನ್ನು ಅಗ್ನಿರೂಪನಾದ ಏಕದೇವತೆಯು ಸಂಪಾದಿಸಿರುವನು ಎಂದು ಅರ್ಥಮಾಡಿದೆ ಅಥವಾ ಪ್ರಕೃತವಾದ ಋಕ್ಕಿನ ಉತ್ತರಾರ್ಧದಲ್ಲಿ " ಏಕಂ ಸದ್ವಿಪ್ರಾ ಬಹುಧಾ ವದಂತಿ " ಎಂಬ ವರ್ಣನೆಯು ಅದ್ವೈತವನ್ನು ಪ್ರತಿಪಾದಿಸುತ್ತದೆ. ಸದ್ವಿಪ್ರರು ಬಹುಪ್ರಕಾರವಾಗಿ ವರ್ಣಿಸುವ ಈ ಏಕತತ್ತ್ವವು ಋಕ್ಸಂಹಿತೆಯಲ್ಲಿ ನಾನಾಕಡೆಗಳಲ್ಲಿ ನಿರ್ದಿಷ್ಟವಾಗಿದೆ.

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥

(ಋ. ಸಂ. ೧೦–೧೨೯–೨)

ಈ ಏಕತತ್ತ್ವವು ವಿಶ್ವಕ್ಕೆ ಆದಿಯಾಗಿಯೂ ವಿಶ್ವಕ್ಕೆ ಆಧಾರವಾಗಿಯೂ ಇದೆ. ಈ ಅದ್ವೈತಭಾವದ ಮಹತ್ತ್ವವನ್ನೂ ಸೌಂದರ್ಯವನ್ನೂ Radhakrishn ಅವರು ತಮ್ಮ ಉತ್ತಮವಾದ ಶೈಲಿಯಲ್ಲಿ ಈ ರೀತಿ ವರ್ಣಿಸಿದ್ದಾರೆ.

This one is the soul of the world, the reason immenent in the Universe, the source of all nature, the internal energy. It is n ither heaven, nor the earth, neither sunshine nor storm, but another essence. perhaps the Rita substantiated. tne Aditi spiritualised the ONE breatning breateless. It is the supreme reality which [ives in all things and moves them all. the real one that blushes in the rose, breaks into beauty in the clouds, shows its strength in the storms and sets the stars in the sky.

(Indian Philosophy. p. 95)

ಈ ಏಕವೇ ವಿಶ್ವಾತ್ಮ, ವಿಶ್ವಾಂತರ್ಗತವಾದ ಚಿಚ್ಛಕ್ತಿ ಮತ್ತು ವಿಶ್ವಶಕ್ತಿಯ ಆಧಾರ. ಇದು, ಇತರ ಅನೇಕ ಋಕ್ಕುಗಳಲ್ಲಿ ವರ್ಣಿತವಾಗಿರುವ ಕೇವಲ ಪೃಥ್ವಿಯೂ ಅಲ್ಲ, ಅಂತರಿಕ್ಷವೂ ಅಲ್ಲ. ಸೂರ್ಯನ ಪ್ರಕಾಶವೂ ಅಲ್ಲ. ಭೌತಿಕವಾದ ಪ್ರಕೃತಿ ಶಕ್ತಿಯೂ ಅಲ್ಲ. ಬೃಹದಾರಣ್ಯದಲ್ಲಿ ' ನೇತಿ ನೇತಿ ' ಎಂಬ ನಿಷೇಧವಾಕ್ಯಗಳಿಂದಲೇ ಯಾವ ಪರಬ್ರಹ್ಮದ ಅಸ್ತಿತ್ವವನ್ನು ಪ್ರತಿಪಾದಿಸಿದೆಯೋ ಅದೇ ಬ್ರಹ್ಮತತ್ವವು ವಿಶ್ವಚೇತನವಾಗಿದೆ. ಋತ, ಅದಿತಿ ಎಂದು ಇತರ ಕಡೆಗಳಲ್ಲಿ ವರ್ಣಿತವಾಗಿರುವ ವಿಶ್ವತತ್ತ್ವವು ಇಲ್ಲಿ ಸ್ತುತವಾಗಿದೆ. ವಿಶ್ವದ ನಾನಾ ಜೀವಗಳಲ್ಲೂ ಜೀವತತ್ತ್ವವನ್ನು ತುಂಬುವ ಈ ಶಕ್ತಿಯು ಸರ್ವವ್ಯಾಪಕವಾಗಿದೆ. ಅದೇ ಅಂಶವನ್ನು Prof. Max Muller ಪಂಡಿತನು ವಿವರಿಸುತ್ತಾ ತನ್ನ ಅಭಿಪ್ರಾಯವನ್ನು ಈ ರೀತಿ ಹೇಳಿದ್ದಾನೆ.

" Wh tever is the age when the collection of our Rig-Veda Samhita was finished it was before that age that the conviction had been formed that there is but ONE, ONE being, neither male nor female, a Being raised high above all the conditions and limitations of personality and of human nature, and nevertheless the being that was really meant by all such names as Indra, Agni, Matariswan, nay, even by the name of Prajapathi, Lord of creatures. In fact, the Vedic poets had arrived at a conception of the god-head which was reached once more :y some of the christian Poilosophy at Alexandria, but which even at present is beyond the reach of many who call themselves Christians ".

(Six Systems of Indian Phylosophy. p. 51–52)

ಋಕ್ಸಂಹಿತಾಕಾಲವು ಯಾವ ಶತಮಾನದಲ್ಲಾಗಿದ್ದರೂ ಸಹ, ಸಂಹಿತಾಕಾಲಕ್ಕಿಂತಲೂ ಪೂರ್ವಭಾವಿಯಾದ ಮಂತ್ರಗಳ ಕಾಲದಲ್ಲಿಯೇ ಈ ಅದ್ವೈತತತ್ತ್ವದ ಪ್ರತಿಪಾದನೆಯು ಸ್ಪಷ್ಟವಾಗಿದ್ದಿತು. ಈ ಮಹಾಮೂಲತತ್ತ್ವವು ಲಿಂಗಾತೀತವೂ, ಮಾನವನ ಗೋಚರಾತೀತವೂ ಆದ ಏಕವೆಂದು ವರ್ಣಿತವಾಗಿದೆ. ಇದನ್ನು ಕೆಲವೆಡೆಗಳಲ್ಲಿ ಹಿರಣ್ಯಗರ್ಭನೆಂದೂ ವರ್ಣಿಸಿದೆ. ಈ ವಿಧವಾದ ಅದ್ವೈತತತ್ತ್ವಪ್ರತಿಪಾದನೆಯಲ್ಲಿರುವ ಮಹತ್ತ್ವವು ಈ ವಿಷಯದಲ್ಲಿ ಪರಿಶ್ರಮವನ್ನು ತೋರಿಸಿರುವ ಕ್ರಿಶ್ಚಿಯನ್‌ಮತದಲ್ಲಿ ಕೂಡ ಕಾಣುವುದಿಲ್ಲ.

ಇಂದ್ರಂ, ಮಿತ್ರಂ ಇತ್ಯಾದಿಪದಗಳು ಇಂದ್ರಾದಿನಾನಾದೇವತೆಗಳಲ್ಲಿರುವ ಮಹಚ್ಛಕ್ತಿಯೆಲ್ಲವೂ ಈ ಏಕದೇವನಲ್ಲಿಯೇ ಇದೆ ಎಂದು ಸೂಚಿಸುತ್ತವೆಯೆಂದು " ಐಶ್ವರ್ಯ ವಿಶಿಷ್ಟಂ " ಇತ್ಯಾದಿ ವಿವರಣೆಗಳಿಂದ ಸಾಯಣರು ತಿಳಿಸಿದ್ದಾರೆ. ಇಂದ್ರಾದಿಶಬ್ದಗಳ ನಿರ್ವಚನವನ್ನೂ ಅವುಗಳ ವಿಶೇಷಾರ್ಥವನ್ನೂ ಆಯಾ ದೇವತಾಪರವಾದ ಸೂಕ್ತಗಳನ್ನೂ ವಿವರಿಸುವಾಗ ತಿಳಿಸಿದೆ.

### ಏಕಸ್ಯಾತ್ಮನೋಽನ್ಯೇ ದೇವಾಃ ಪ್ರತ್ಯಂಗಾನಿ ಭವಂತಿ ||

ದೇಪತೆಯು ಒಬ್ಬನೇ ಆಗಿದ್ದರೂ ಅವನು ನಾನಾ ಹೆಸರುಗಳಿಂದ ಸ್ತುತಿಸಲ್ಪಡುತ್ತಾನೆ. ಉದಾ—ಇಂದ್ರನು ಒಬ್ಬ ದೇವತೆಯು ಅವನನ್ನು ಅಗ್ನಿಯೆಂದೂ, ಸೂರ್ಯನೆಂದೂ ಬೇರೆಬೇರೆ ನಾಮಗಳಿಂದ ಸ್ತುತಿಸುತ್ತಾರೆ. ಕಾರಣವೇನೆಂದರೆ ದೇವದೇವನಾದ ಪರಬ್ರಹ್ಮನು ಒಬ್ಬನೇ ಎಂದರೆ ಅವ್ಯಕ್ತಸ್ವರೂಪದಿಂದಿರುವ ಪರಬ್ರಹ್ಮವು ಒಂದೇ ಆಗಿದ್ದರೂ ಅದು ನಾನಾ (ದೇವತೆಗಳಾಗಿ) ದೇವತೆಗಳ ರೂಪದಂತೆ ವ್ಯಕ್ತವಾದಾಗ ಅದೇ ಬ್ರಹ್ಮವು ನಾನಾ ಹೆಸರುಗಳಿಂದ ವ್ಯವಹರಿಸಲ್ಪಡುವುದು. ಆತ್ಮನ ಒಂದೇ ಶರೀರವನ್ನು ನಾನಾ ಅಂಗಗಳನ್ನಾಗಿ (ಕಾಲು, ಕೈ ಇತ್ಯಾದಿ) ಭಾವಿಸಿ ಸ್ತುತಿಸುವಂತೆ. ದೇವದೇವನಾದ ಪರಬ್ರಹ್ಮನು ಒಬ್ಬನೇ ಆಗಿರುವನು. ಇತರ ದೇವತೆಗಳೆಲ್ಲರೂ ಆ ಪರಮಾತ್ಮನ ಅಂಗಗಳಂತೆ ಇರುವರು ಎಂದರೆ ದೇವತೆಗಳೆಲ್ಲರೂ ಪರಬ್ರಹ್ಮನ ಅಂಶಗಳೇ ಆಗಿರುವರು ಎಂದಭಿಪ್ರಾಯವು.

### ಅಪಿ ಚ ಸತ್ತ್ವಾನಾಂ ಪ್ರಕೃತಿಭೂಮಭಿರ್ಋಷಯಃ ಸ್ತುವಂತೀತ್ಯಾಹುಃ

ಜೀತನಾತ್ಮಕವಾದ ಸಮಸ್ತ ಪ್ರಾಣಿಗಳೂ ಆತ್ಮಪ್ರಕೃತಿಯಿಂದ ಕೂಡಿ ಭೂತಾತ್ಮಾ ಅಥವಾ ಭೂತಪ್ರಕೃತಿಯೇ ಸ್ಥಾವರ ಜಂಗಮಾದಿ ಸಮಸ್ತ ವಸ್ತುಗಳಿಗೂ ಮೂಲವು. ಇವೆಲ್ಲವೂ ಈ ಪ್ರಕೃತಿಯಿಂದಲೇ ಉತ್ಪನ್ನವಾಗಿ ಇದರಲ್ಲೇ ಲಯವನ್ನು ಹೊಂದುವವು. ಈ ಕಾರಣದಿಂದ ಯಜ್ಞಪಶುವನ್ನು ಉದ್ದೇಶಿಸಿ ಹೇಳುವಾಗ—ದ್ಯಾಸ್ತೇ ಪೃಷ್ಠಂ ಪೃಥಿವೀ ಶರೀರ-ಮಾತ್ಮಾಂತರಿಕ್ಷಂ ಎಂದು ಹೇಳುವರು ಜಗತ್ತಿನಲ್ಲಿ (ವಿಶ್ವದಲ್ಲಿ) ರುವ ಸಮಸ್ತ ಸ್ಥಾವರ ಜಂಗಮಾತ್ಮಕವಾದ ವಸ್ತುಗಳೂ ಪ್ರಕೃತಿಯಿಂದ ಭಿನ್ನವಾದವುಗಳಲ್ಲ.

### ಪ್ರಕೃತಿಸಾರ್ವನಾಮ್ಯಾಚ್ಚ

ಸರ್ವಕ್ಕೂ ಎಂದರೆ ಸಮಸ್ತವಸ್ತುಗಳಿಗೂ ಹೆಸರಾಗಿರುವುದಕ್ಕೆ ಸಾರ್ವನಾಮ ಎಂದು ಹೇಳುವರು ಪ್ರಕೃತಿಸಾರ್ವನಾಮವೆಂದರೆ ಸರ್ವವಸ್ತುಗಳೂ ಪ್ರಕೃತಿಮಯವಾಗಿರುವವು ಎಂದರ್ಥವು. ಸಮಸ್ತಚೇತನಾಚೇತನವಸ್ತುಗಳೆಲ್ಲವೂ ಪ್ರಕೃತಿಮಯವಾದ್ದರಿಂದ ಅಚೇತನ ವಸ್ತುಗಳನು ಸ್ತುತಿಸಿದರೂ ಚೇತನಾತ್ಮಕವಾದ ದೇವತೆಗಳನ್ನೇ ಸ್ತುತಿಸಲಾಗಿವೆ ಎಂದು ತಿಳಿಯಬೇಕು

ಸ್ಥಾವರಜಂಗಮ ಅಥವಾ ಚೇತನಾಚೇತನಾತ್ಮಕವಾದ ಸಮಸ್ತವಸ್ತುಗಳೂ ಅಥವಾ ಚೇತನಯುಕ್ತರಾದ ದೇವತೆಗಳೂ ಅಚೇತನ (ಜಡವಸ್ತು)ಗಳಾದ ವಸ್ತುಗಳಿಗೂ ಪ್ರಕೃತಿಯೇ ಮೂಲಭೂತವಾದುದರಿಂದ ಋಷಿಗಳು ಅಚೇತನ ವಸ್ತುಗಳನ್ನು ಚೈತನ್ಯಯುಕ್ತರಾದ ದೇವತೆಗಳಂತೆ ಭಾವಿಸಿ ಸ್ತುತಿಸುವುದರಲ್ಲಿ ಯಾವ ಬಾಧಕವೂ ಇರುವುದಿಲ್ಲ.

**ಇತರೇತರ ಜನ್ಮಾನೋ ಭವಂತೀತರೇತರಪ್ರಕೃತಯಃ ||**

ದೇವಮನುಷ್ಯಾದಿಗಳಲ್ಲಿ ಪ್ರಕೃತಿನಿಯಮದಂತೆ ಅವರವರ ಸ್ವಭಾವವೂ ಶಕ್ತಿಸಾಮರ್ಥ್ಯಗಳೂ ಇರುವವು. ದೇವತೆಗಳಿಗೆ ದೇವತಾ ಧರ್ಮಕ್ಕೆ ಅನುಸಾರವಾಗಿ ಶಕ್ತಿಯಿರುವುದು. ಮನುಷ್ಯರಿಗೆ (ಇತರ ಪ್ರಾಣಿಗಳಿಗೂ) ಮನುಷ್ಯಧರ್ಮಕ್ಕನುಸಾರವಾದ ಶಕ್ತಿ ಯಿರುವುದು ದೇವತೆಗಳಿಗೆ ಅಣಿಮಾದ್ಯಷ್ಟೈಶ್ವರ್ಯಗಳು ಸಹಜವಾಗಿಯೇ ಇರುವವು ಮನುಷ್ಯರಿಗೆ ಇರುವುದಿಲ್ಲ. ಮನುಷ್ಯ ಧರ್ಮವೆಂದರೆ, ತಂದೆಯಿಂದ ಮಗನು ಹುಟ್ಟುತ್ತಾನೆ. ಇಲ್ಲ ತಂದೆಯೇ ಪುತ್ರನಿಗೆ ಪ್ರಕೃತಿಯು. ಪುತ್ರನಿಂದ ತಂದೆಯು ಹುಟ್ಟುವುದಿಲ್ಲ. ಇದು ಮನುಷ್ಯಧರ್ಮವು. ಆದರೆ ದೇವತಾಧರ್ಮವು ಇದಕ್ಕೆ ವಿರುದ್ಧವಾಗಿರುವುದು ದೇವತೆಗಳಿಗೆ ಅಣಿಮಾದ್ಯಷ್ಟೈಶ್ವರ್ಯಗಳು ಇರುವವು. ಮತ್ತು ದೇವತೆಗಳ ವಿಷಯದಲ್ಲಿ ಅಗ್ನೇಃಸೂರ್ಯೋಽಜಾಯತ—ಅಗ್ನಿಯಿಂದ ಸೂರ್ಯನು ಉತ್ಪನ್ನನಾದನು ಎಂದು ಹೇಳಿದೆ. ಮತ್ತೊಂದುಕಡೆ ಸೂರ್ಯಾಚ್ಚಾಗ್ನಿ—ಸಾಯಂ ಜಾಯತೆ ಸಾಯಂಕಾಲ ದಲ್ಲಿ ಸೂರ್ಯನಿಂದ ಅಗ್ನಿಯು ಉತ್ಪನ್ನನಾಗುತ್ತಾನೆ ಎಂದಿದೆ ಮತ್ತು ಋಗ್ವೇದದಲ್ಲಿ ಒಂದುಕಡೆ ಅದಿತೇರ್ದಕ್ಷೋಽದಕ್ಷಾಚ್ಚ ಅದಿತಿರಿತಿ – ಅದಿತಿಯಿಂದ ದಕ್ಷನೂ ದಕ್ಷನಿಂದ ಅದಿತಿಯೂ ಉತ್ಪನ್ನರಾದರು ಎಂದು ಹೇಳಿದೆ. ಇದು ಪರಸ್ಪರವಿರುದ್ಧ ವಲ್ಲವೇ ಎಂದರೆ ವಿರುದ್ಧವಲ್ಲ ಇದು ಮನುಷ್ಯಧರ್ಮದಂತೆ ಪರಸ್ಪರ ವಿರುದ್ಧವೆನಿಸಿದರೂ ದೇವತಾದರ್ಮದಂತೆ ವಿರುದ್ಧವಾಗುವು ದಿಲ್ಲ. ಏಕೆಂದರೆ ಸಮಸ್ತದೇವತೆಗಳೂ ಪ್ರಕೃತಿಯ ಅಂಶವು ಅಥವಾ ಪರಬ್ರಹ್ಮನ ಅಂಶಭೂತರು. ಆದ್ದರಿಂದ ಒಂದೇವಸ್ತು ವಿನ ಅನೇಕ ಅಂಶಗಳಿಗೆ ಪರಸ್ಪರ ವಿರುದ್ಧವುಂಟಾಗುವುದು ಸಾಧ್ಯವಿಲ್ಲ ಇದು ದೇವತಾಧರ್ಮಪ್ರಕಾರ ನ್ಯಾಯವು. ಈ ಕಾರಣದಿಂದ ಋಷಿಗಳು ದೇವತೆಗಳನ್ನು ಅಚೇತನವಸ್ತುಗಳನ್ನು ಜೀವಂತವಸ್ತುಗಳೆಂದು ಭಾವಿಸಿ ನಾನಾವಿಧವಾಗಿ ಸ್ತುತಿಸಿ ದರೂ ಈ ವಿಷಯದಲ್ಲಿ ವಿರುದ್ಧವೇನೂ ಉಂಟಾಗುವುದಿಲ್ಲ.

**ಕರ್ಮಜನ್ಮಾನಃ ||**

ಕೆಲವರು ಏತಕ್ಕೆ ದೇವತೆಗಳಾಗಿ ಹುಟ್ಟುತ್ತಾರೆ? ಕೆಲವರು ಮನುಷ್ಯರಾಗಿ (ಅಥವಾ ಇತರ ಪ್ರಾಣಿಗಳಾಗಿ) ಹುಟ್ಟುವದೇತಕ್ಕೆ ಎಂದರೆ ಅವರವರ ಜನ್ಮವು ಅವರವರ (ಹಿಂದಿನ) ಕರ್ಮಾನುಸಾರವಾಗಿ ಉಂಟಾಗುವುದು ಎಂದು ತತ್ತ್ವವೇತ್ತರು ಹೇಳುವರು

**ಆತ್ಮಜನ್ಮಾನಃ ||**

ಈ ಜನ್ಮಗಳು ಹೇಗೆ ಉಂಟಾಗುವುವು ಎಂದರೆ ಜನರ ನಾನಾವಿಧ ಕರ್ಮಫಲಗಳೆಲ್ಲವೂ ಸೂಕ್ಷ್ಮರೂಪದಿಂದ (ವಾಸನಾರೂಪ ದಿಂದ) ಆತ್ಮನಲ್ಲಿ ನೆಲಸಿರುವವು ಆ ಕರ್ಮವಾಸನೆಗಳು ತಕ್ಕ ಸಮಯದಲ್ಲಿ ಸರಿಯಾದ ಫಲಗಳನ್ನುಂಟುಮಾಡುವವು ಎಂದರೆ ಕರ್ಮಫಲಕ್ಕನುಸಾರವಾಗಿ ಮುಂದೆ ಜನ್ಮಗಳುಂಟಾಗುವವು.

**ಆತ್ಮೈವೈಷಾಂ ರಥೋ ಭವತ್ಯಾತ್ಮಾಶ್ವ ಆತ್ಮಾಯುಧಮಾತ್ಮೇಷವ**
**ಆತ್ಮಾ ಸರ್ವಂ ದೇವಸ್ಯ ದೇವಸ್ಯ ||**

ದೇವತೆಗಳ ಸ್ವರೂಪವೇನು ಎಂದರೆ—ಅವರು ಅಣಿಮಾದ್ಯಷ್ಟೈಶ್ವರ್ಯಸಿದ್ಧಿಯುಳ್ಳವರು ಎಂದರೆ ಅವರು ಯಾವರೂಪವನ್ನಾಗಲಿ, ಯಾವ ಶಕ್ತಿಯನ್ನಾಗಲಿ ಪಡೆಯಬಲ್ಲರು. ಎಂದರೆ ದೇವತೆಗಳ ಆತ್ಮವೇ ಯಾವ ಶಕ್ತಿ ಸಾಮರ್ಥ್ಯರೂಪವನ್ನು ಬೇಕಾದರೂ ಪಡೆಯಬಲ್ಲದು. ಆತ್ಮವೇ ಅವರಿಗೆ ರಥವಾಗಬಲ್ಲದು. ಆತ್ಮವೇ ಅವರ ಅಶ್ವವು. ಆತ್ಮವೇ ಅವರ ಆಯುಧವು ಆತ್ಮವೇ ಅವರ ಬಾಣಗಳು. ಆತ್ಮವೇ ಅವರ ಸಮಸ್ತವೂ ಆಗಿರುವುದು ಎಂದರೆ ರಥಾಶ್ವಾದಿಗಳಿಂದ ಆಗಬೇಕಾದ ಕಾರ್ಯಾದಿಗಳು ಅವರಿಗೆ ಆತ್ಮದಿಂದಲೇ ಆಗುವವು. ಆದ್ದರಿಂದ ಋಷಿಗಳು ದೇವತೆಗಳನ್ನು ಯಾವವಿಧವಾಗಿ ಸ್ತುತಿಸಿದರೂ ಅವೆಲ್ಲವೂ ಅವರಿಗೆ ಅನ್ವಯಿಸುವವು.

ಇತಿ ಚತುರ್ಥಖಂಡಃ.

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು.

---

## ಅಥ ಪಂಚಮಃ ಖಂಡಃ

## ಐದನೆಯ ಖಂಡವು.

ತಿಸ್ರ ಏವ ದೇವತಾ ಇತಿ ನೈರುಕ್ತಾಃ ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಸ್ತಾಸಾಂ ಮಾಹಾಭಾಗ್ಯಾದೇಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತ್ಯಪಿ ವಾ ಕರ್ಮಪೃಥಕ್ತ್ವಾದ್ಯಥಾ ಹೋತಾಧ್ವರ್ಯುರ್ಬ್ರಹ್ಮೋದ್ಗಾತೇತ್ಯಪ್ಯೇಕಸ್ಯ ಸತೋಽಪಿ ವಾ ಪೃಥಗೇವ ಸ್ಯುಃ ಪೃಥಗ್ಘಿ ಸ್ತುತಯೋ ಭವಂತಿ ತಥಾಭಿಧಾನಾನಿ ಯಥೋ ಏತತ್ಕರ್ಮಪೃಥಕ್ತ್ವಾದಿತಿ ಬಹವೋಽಪಿ ವಿಭಜ್ಯ ಕರ್ಮಾಣಿ ಕುರ್ಯುಸ್ತತ್ರ ಸಸ್ಥಾನೈಕತ್ವಂ ಸಂಭೋಗೈಕತ್ವಂ ಚೋಪೇಕ್ಷಿತವ್ಯಂ ಯಥಾ ಪೃಥಿವ್ಯಾಂ ಮನುಷ್ಯಾಃ ಪಶವೋ ದೇವಾ ಇತಿ ಸ್ಥಾನೈಕತ್ವಂ ಚ ಸಂಭೋಗೈಕತ್ವಂ ಚ ದೃಶ್ಯತೇ ಯಥಾ ಪೃಥಿವ್ಯಾಃ ಪರ್ಜನ್ಯೇನ ಚ ವಾಯ್ವಾದಿತ್ಯಾಭ್ಯಾಂ ಚ ಸಂಭೋಗೋಽಗ್ನಿನಾ ಚೇತರಸ್ಯ ಲೋಕಸ್ಯ ತತ್ರೈತನ್ನರರಾಷ್ಟ್ರಮಿವ ॥ ೫ ॥

---

ತಿಸ್ರ ಏವ ದೇವತಾ ಇತಿ ನೈರುಕ್ತಾಃ। ಅಗ್ನಿಃ ಪೃಥಿವೀಸ್ಥಾನೋ.
ವಾಯುರ್ವೇಂದ್ರೋ ವಾ ಅಂತರಿಕ್ಷಸ್ಥಾನಃ, ಸೂರ್ಯೋ ದ್ಯುಸ್ಥಾನಃ ॥

ಪೂರ್ವದಲ್ಲಿ ಜ್ಞಾನಿಯದೃಷ್ಟಿಯಿಂದ ದೇವತೆಗಳಿಗೆ ಐಕಾತ್ಮ್ಯವನ್ನು ಹೇಳಿರುತ್ತಾರೆ. ನಾನಾತ್ವವು ಯಾಜ್ಞಿಕರಿಗೆ ಅಭಿಮತವಾಗಿದೆ. ಈ ಎರಡುಪಕ್ಷಗಳನ್ನೂ ನಿರಾಕರಿಸಿ ಈ ಸಿದ್ಧಾಂತವನ್ನು ಹೇಳುತ್ತಾರೆ. ನಿರುಕ್ತಕಾರರ ಮತದಲ್ಲಿ ಕೇವಲ ಮೂರುದೇವತೆಗಳಲ್ಲದೆ ಮೂರಕ್ಕೆ ಕಡಿಮೆಯೂ ಇಲ್ಲ ಹೆಚ್ಚಾಗಿಯೂ ಇಲ್ಲ. ಮೂರುರೀತಿಯಾಗಿ ವಿಭಾಗಿಸಲು ಸ್ಥಾನ ಭೇದವೇ ಕಾರಣ. ಪೃಥಿವೀ ಸ್ಥಾನವುಳ್ಳ ಮೊದಲನೆಯ ದೇವತೆ ಅಗ್ನಿಯು. ವಾಯು ಅಥವಾ ಇಂದ್ರನು ಅಂತರಿಕ್ಷದ

ದೇವತೆ. ದ್ಯುಲೋಕಸ್ಥಾನವುಳ್ಳ ಸೂರ್ಯನು ಮೂರನೆಯ ದೇವತೆ. ನಿರುಕ್ತಕಾರರ ಮತದಲ್ಲಿ ವಾಯು ಇಂದ್ರ ಪದಗಳು ಪರ್ಯಾಯಸೂಚಕವಾಗಿವೆ. ಮಧ್ಯಮದೇವತೆಗೆ ವಿದ್ಯುತ್ ವಾಯುಗಳೆಂಬ ಎರಡು ಕರ್ಮಾತ್ಮಗಳಿವೆ. ಅವುಗಳಲ್ಲಿ ವಿದ್ಯುತ್ (ಮಿಂಚು) ಅನಿತ್ಯದರ್ಶನವುಳ್ಳದು. ತ್ವಗಿಂದ್ರಿಯಪ್ರತ್ಯಕ್ಷವಾದುದರಿಂದ ವಾಯು ನಿತ್ಯದರ್ಶನವುಳ್ಳದ್ದು. ಹೀಗೆ ಎರಡು ಕರ್ಮಾತ್ಮಗಳಿಂದ ಕೂಡಿದ ಮುಖ್ಯವಾದ ಇಂದ್ರನನ್ನು ಅಮುಖ್ಯಪರ್ಯಾಯಸೂಚಕವಾದ ವಾಯುವಿನೊಡನೆ ವಿಕಲ್ಪವಾಗಿ ಹೇಳಿರುತ್ತಾರೆ. ಉಳಿದ ಎರಡು ಪಾರ್ಥಿವೋತ್ತಮರಿಗೆ ಎರಡು ಕರ್ಮಾತ್ಮಗಳಿಲ್ಲದಿರುವುದರಿಂದ ಎರಡು ಪದಗಳಿಂದ ಹೇಳಿಲ್ಲ.

**ತಾಸಾಂ ಮಹಾಭಾಗ್ಯಾದೇಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾತ್ ॥**

ಮೂರೇ ದೇವತೆಗಳಾದರೆ ಜಾತವೇತಾಃ ವೈಶ್ವಾನರ ಮುಂತಾದ ನಾನಾ ಹೆಸರು ಸಂಗತವಾಗುವುದು ಹೇಗೆಂದು ವಿವರಿಸುತ್ತಾರೆ. ಅಗ್ನ್ಯಾದಿದೇವತೆಗಳು ಮೂವರೇ ಆಗಿದ್ದರೂ ಮಹದೈಶ್ವರ್ಯಸಂಪನ್ನರಾದುದರಿಂದ ಒಬ್ಬರೇ ಆದರೂ ನಾನಾವಿಕಾರಗಳನ್ನು ಹೊಂದುತ್ತಾರೆ. ಈ ವಿಕಾರಭೇದದಿಂದ ಜಾತವೇದ, ವೈಶ್ವಾನರ, ವರುಣ, ರುದ್ರ ಉಷಾ ಇತ್ಯಾದಿ ಅನೇಕ ನಾಮಧೇಯವನ್ನು ಹೊಂದುತ್ತಾರೆ. ಪ್ರತಿಸ್ಥಾನದಲ್ಲಿಯೂ ಪ್ರಕೃತಿ ಒಂದೇ ಆದುದರಿಂದ ಐಕಾತ್ಮ್ಯವಿರುವಂತೆ ಏಕತ್ವಸಂಖ್ಯೆಯೂ ಇರುತ್ತದೆ. ಅಥವಾ ಸ್ವರೂಪವಿಕಾರವನ್ನು ಹೊಂದದಿದ್ದರೂ ಅನೇಕಕಾರ್ಯಮಾಡುವುದರಿಂದ ಆಯಾಯ ಕರ್ಮಭೇದದಿಂದ ನಾಮಭೇದವನ್ನು ಹೊಂದುತ್ತಾರೆ. ಐಶ್ವರ್ಯಯೋಗದಿಂದಲೇ ನಾಮಭೇದವೆಂಬುದು ಮುಖ್ಯ ಪಕ್ಷ. ಇದು ಗೌಣ ಪಕ್ಷ.

**ಯಥಾ ಹೋತಾಧ್ವರ್ಯು-ರ್ಬ್ರಹ್ಮೋ--ದ್ಗಾತಾ-ಇತ್ಯಪಿ ಏಕಸ್ಯ ಸತಃ ॥**

ನಾನಾ ಕರ್ಮಯೋಗದಿಂದ ನಾನಾ ನಾಮಧೇಯ ಭೇದವನ್ನು ಹೊಂದುತ್ತಾರೆ ಎಂಬ ವಿಷಯದಲ್ಲಿ ದೃಷ್ಟಾಂತ -ತೋರಿಸುತ್ತಾರೆ. ಕರ್ತೃ ಒಬ್ಬನೇ ಆಗಿದ್ದರೂ ಆಯಾಯ ಕರ್ಮಭೇದದಿಂದ ಹೋತೃ, ಅಧ್ವರ್ಯು, ಬ್ರಹ್ಮಾ, ಉದ್ಗಾತೃ ಇತ್ಯಾದಿ ನಾಮಭೇದವನ್ನು ಹೊಂದುವಂತೆ ಅಗ್ನ್ಯಾದಿಗಳು ಆಯಾಯಕರ್ಮಗಳನ್ನು ಮಾಡುವುದರಿಂದ ಆಯಾಯ ನಾಮಧೇಯವನ್ನು ಹೊಂದುತಶ್ತಾರೆ. ಲೋಕದಲ್ಲಿಯೂ ಒಬ್ಬನೇ ನಾನಾಕರ್ಮಗಳನ್ನು ಮಾಡುವುದಾದರೆ ಆಗಾಗ ಆಯಾಯ ಹೆಸರಿನಿಂದ ಕರೆಯುತ್ತಾರೆ. ಆದುದರಿಂದ ಬೇರೆ ಬೇರೆ ಕರ್ಮಗಳಿಂದಾಗಲೀ, ಐಶ್ವರ್ಯಯೋಗದಿಂದಾಗಲೀ ಬಹುನಾಮಧೇಯಗಳು ಸಂಗತವಾಗುತ್ತವೆ.

**ಅಪಿ ವಾ ಪೃಥಗೇವ ಸ್ಯುಃ । ಪೃಥಗ್ಘಿ ಸ್ತುತಯೋ ಭವಂತಿ ॥**

ಯಾಜ್ಞಿಕರ ಮತವನ್ನು ವಿವರಿಸುತ್ತಾರೆ. ಅಥವಾ ಉತ್ಪತ್ತಿಭೇದದಿಂದಲೇ ಅತ್ಯಂತ ವಿಭಿನ್ನಗಳಾಗಿ ಬೇರೆಬೇರೆ ಹೆಸರು ಬಂದಿವೆ. ಅಗ್ನ್ಯಾದಿ ದೇವತೆಗಳ ಸ್ತುತಿಗಳೂ ಭಿನ್ನ ಭಿನ್ನವಾಗಿರುವುದರಿಂದ ಅಗ್ನ್ಯಾದಿ ನಾಮಧೇಯಗಳು ಭಿನ್ನವಾಗಿರುತ್ತವೆ. ಬೇರೆಯಾದುದರಿಂದಲೇ ಅಧಿಯಜ್ಞದಲ್ಲಿ ಸ್ತುತಿನಿಯಮವೂ ಅಭಿಧಾನನಿಯಮವೂ ಹೇಳಿದೆ. ಅಗ್ನಿಮೀಳೇ (ಋ. ಸಂ. ೧-೧-೧) ಎಂಬುದು ಅಗ್ನಿಸ್ತುತಿ. ಪ್ರನೂನಂ ಜಾತವೇದಸಂ (ಋ. ಸಂ, ೮-೮-೪೬) ಎಂದು ಜಾತವೇದೋಸ್ತುತಿ. ಹೀಗೆಯೇ ಇಂದ್ರಾದಿಗಳ ಸ್ತುತಿಯೂ ಭಿನ್ನವಾಗಿರುವುದರಿಂದ ಒಬ್ಬರ ನಾಮದಿಂದ ಇನ್ನೊಬ್ಬರ ಸ್ತುತಿಯನ್ನು ಮಾಡಿದರೆ ಪ್ರಾಯಶ್ಚಿತ್ತವನ್ನು ಹೇಳಿರುತ್ತಾರೆ. ನಾಮಗಳೆಲ್ಲಾ ಪರ್ಯಾಯಪದಗಳೆಂದರೆ ಅದು ಸಂಗತವಾಗುವುದಿಲ್ಲ. ಆದುದರಿಂದ ಅಗ್ನಿ ವೈಶ್ವಾನರ ಮುಂತಾದವರು ಬೇರೆ ಬೇರೆ ದೇವತೆಗಳೆಂದು ಯಾಜ್ಞಿಕರ ಮತ.

**ತಥಾಭಿಧಾನಾನಿ ||**

ಸ್ತುತಿಭೇದದಿಂದ ಸ್ತುತಿಸಲ್ಪಡುವ ದೇವತಾಭೇದ ಸಿದ್ಧಿಸುವಂತೆ ಅಭಿಧಾನ ಅಂದರೆ ಹೆಸರಿನ ಭೇದದಿಂದ ಅಭಿಧೇಯಭೇದವು ಅಂದರೆ ಹೆಸರುಳ್ಳ ವ್ಯಕ್ತಿಭೇದವು ಸಿದ್ಧವಾಗುತ್ತದೆ, ಲೋಕದಲ್ಲಿಯೂ ಹೆಸರು ಬೇರೆಯಾದರೆ ಪದಾರ್ಥವೂ ಬೇರೆಬೇರೆಯಾಗಿರುತ್ತದೆ. ಆದುದರಿಂದ ಅಗ್ನ್ಯಾದಿಗಳು ಭಿನ್ನಭಿನ್ನದೇವತೆಗಳೆಂದು ಯಾಜ್ಞಿಕರ ಮತ.

**ಯಥೋ ಏತತ್ ಕರ್ಮಪೃಥಕ್ತ್ವಾದಿತಿ ? | ಬಹವೋऽಪಿ ವಿಭಜ್ಯ ಕರ್ಮಾಣಿ ಕುರ್ಯುಃ ||**

ಕರ್ಮಭೇದದಿಂದ ನಾಮಭೇಧವಲ್ಲದೆ ದೇವತೆಯೊಂದೇ ಎಂದು ಹಿಂದೆ ಹೇಳಿರುವುದು ಈ ಯಾಜ್ಞಿಕರ ಮತದಲ್ಲಿ ಸಂಗತವಾಗುವುದೇ ಅಂದರೆ ಅದು ವ್ಯಭಿಚರಿತವಾಗುತ್ತದೆಂದು ವಿವರಿಸುತ್ತಾರೆ. ಬೇರೆ ಬೇರೆ ಕರ್ಮವಿರಬೇಕೆಂಬ ನಿಯಮವಿಲ್ಲ. ಒಂದೇ ಕಾರ್ಯವನ್ನು ಹಂಚಿಕೊಂಡು ನಾನಾಜನರು ಮಾಡಲು ಸಾಧ್ಯವಿದೆ. ಅದರಂತೆ ನಾನಾದೇವತೆಗಳು ಒಂದೇಕಾರ್ಯವನ್ನು ವಿಭಾಗಿಸಿಕೊಂಡು ಮಾಡಬಹುದು.

**ತತ್ರ ಸಸ್ಥಾನೈಕತ್ವಂ, ಸಂಭೋಗೈಕತ್ವಂ, ಚೋಪೇಕ್ಷಿತವ್ಯಂ ||**

ಆತ್ಮಜ್ಞಾನಿಯು ಹೇಳಿರುವ ದೇವತಾತ್ಮೈಕ್ಯವು ಗೌಣವೆಂದು ವಿವರಿಸುತ್ತಾರೆ. ದೇವತೆಗಳು ಭಿನ್ನಭಿನ್ನವಾಗಿದ್ದರೂ ಅನೇಕರಿಗೆ ಒಂದೇಸ್ಥಾನವಾದುದರಿಂದ ಏಕತ್ವ ಹೇಳಬಹುದು. ಸಂಭೋಗನಿಮಿತ್ತವಾಗಿಯೂ ಐಕ್ಯ ಸಂಭವಿಸುತ್ತದೆ. ಪರಸ್ಪರೋಪಕಾರ ಭಾವಕ್ಕೆ ಸಂಭೋಗವೆಂದು ಹೆಸರು. ಸಮಾನಕಾರ್ಯವೆಂದು ತಾತ್ಪರ್ಯ. ಸಮಾನಸ್ಥಾನ ಸಮಾನಕಾರ್ಯ ಇವೆರಡನ್ನು ಆಲೋಚಿಸಿ ಗೌಣವಾಗಿ ಏಕತ್ವ ಸಂಭವಿಸುತ್ತದೆ.

**ಯಥಾ ಪೃಥಿವ್ಯಾಂ ಮನುಷ್ಯಾಃ ಪಶವೋ ದೇವಾ ಇತಿ ಸ್ಥಾನೈಕತ್ವಂ ಚ ಸಂಭೋಗೈಕತ್ವಂ ಚ ದೃಶ್ಯತೇ ||**

ಪೂರ್ವೋಕ್ತವಿಷಯದಲ್ಲಿ ದೃಷ್ಟಾಂತ ತೋರಿಸುತ್ತಾರೆ. ಪೃಥಿವಿಯಲ್ಲಿ ಮನುಷ್ಯರು ಪಶುಗಳು, ದೇವತೆಗಳು ಅಂದರೆ ಅವರಿಗೆ ಸಮಾನಸ್ಥಾನದಿಂದಲೂ ಸಮಾನಕಾರ್ಯದಿಂದಲೂ ಏಕತ್ವ ತೋರುತ್ತದೆ. ಸ್ಥಾನಸಾಮ್ಯದಿಂದಲೂ, ಸಮಾನಕಾರ್ಯದಿಂದಲೂ ಏಕತ್ವ ಲೋಕಪ್ರಸಿದ್ಧವಾಗಿದೆಯೆಂದು ತಾತ್ಪರ್ಯ. ಭಿನ್ನ ಭಿನ್ನ ಸ್ಥಾನದಲ್ಲಿರುವವರಿಗೆ ಐಕ್ಯವು ವಿಶೇಷವಾಗುವುದಿಲ್ಲ.

**ಯಥಾ ಪೃಥಿವ್ಯಾಃ ಪರ್ಜನ್ಯೇನ ಚ ವಾಯ್ವಾದಿತ್ಯಾಭ್ಯಾಂ ಚ ಸಂಭೋಗಃ ||**

ಸಂಭೋಗೈಕ್ಯವನ್ನು ವಿವರಿಸುತ್ತಾರೆ. ಪೃಥಿವಿಯು ತನ್ನ ಕಾರ್ಯವಾದ ಓಷಧಿವನಸ್ಪತಿಗಳನ್ನು ಹುಟ್ಟಿಸಬೇಕಾದರೆ ಪರ್ಜನ್ಯ, ವಾಯು, ಆದಿತ್ಯರ ಉಪಕಾರವನ್ನು ಅಪೇಕ್ಷಿಸುತ್ತದೆ. ತ್ರಯಸ್ತಪಂತಿ ಪೃಥಿವೀಮನೂಪಾಃ (ಋ. ಸಂ. ೭-೭-೧೯) ಎಂಬ ಮಂತ್ರದಿಂದ ಇದು ಸ್ಪಷ್ಟವಾಗಿದೆ.

ಅಗ್ನಿನಾ ಚೇತರಸ್ಯ ಲೋಕಸ್ಯ ||

ಅಗ್ನಿಯಿಂದ ಇತರ ಅಂದರೆ ಅಂತರಿಕ್ಷದ್ಯುಲೋಕಗಳಿಗೆ ಉಪಕಾರವಾಗುತ್ತದೆ. ವೃಷ್ಟಿಪ್ರೇರಣೆಗೆ ಅಗ್ನಿಯೇ ಕಾರಣನೆಂದು ಅಲ್ಲಲ್ಲಿ ವೇದದಲ್ಲಿ ಹೇಳಿದೆ. ಹೀಗೆ ಪರಸ್ಪರ ಉಪಕಾರಗಳಿಂದ ಐಕ್ಯವನ್ನು ಆರೋಪಿಸಬಹುದೆಂದು ತಾತ್ಪರ್ಯ.

ತತ್ರೈತನ್ನರರಾಷ್ಟ್ರಮಿವ ||

ಆತ್ಮಜ್ಞಾನ, ನಿರುಕ್ತಕಾರರು, ಯಾಜ್ಞಿಕರು ಹೀಗೆ ದೇವತೆಗಳಿಗೆ ಭೇದಾಭೇದವನ್ನು ಪ್ರತಿಪಾದಿಸಿದರೂ ಅವೆಲ್ಲವೂ ಪ್ರಮಾಣ ವಾಗುತ್ತದೆಂದು ದೃಷ್ಟಾಂತದಿಂದ ಸಮರ್ಥಿಸುತ್ತಾರೆ. ಅವರು ಸ್ವಕಪೋಲಕಲ್ಪಿತವಾಗಿ ಹೇಳದೆ ಮಂತ್ರಾರ್ಥವನ್ನುದ್ದೇಶಿಸಿ ಹೇಳಿರುವುದರಿಂದ ಎಲ್ಲವೂ ಸಂಗತವಾಗುತ್ತದೆ. ಲೋಕದಲ್ಲಿ ರಾಷ್ಟ್ರವೆಂದರೆ ಮನುಷ್ಯಾದಿಗಳಿಗೆ ಅಭೇದ ತೋರಿಸಿದಂತಾ ತುಗ್ತದೆ. ಮನುಷ್ಯರು ಎಂದರೆ ಭೇದ ವ್ಯಕ್ತವಾಗುವಂತೆ ಪೃಥಿವ್ಯಗ್ನಿ ಎಂದರೆ ಅಭೇದವೂ ಜಾತವೇದ, ವೈಶ್ವಾನರವೆಂದರೆ ಭೇದವೂ ತೋರುತ್ತದೆ. ಆತ್ಮ ಎಂದರೆ ಅಭೇದ, ಲೋಕ, ಲೌಕಿಕರೆಂದರೆ ಭೇದ ಸ್ಪಷ್ಟವಾಗಿ ತಿಳಿಯುತ್ತದೆ. ಆತ್ಮಜ್ಞಾನಿಗಳು ತ್ರಿತ್ವ, ನಾನಾತ್ವಗೌಣವೆಂದು ಏಕತ್ವ ಹೇಳುತ್ತಾರೆ. ನಿರುಕ್ತಕಾರರು ತ್ರಿತ್ವವನ್ನೂ ಯಾಜ್ಞಿಕರು ನಾನಾತ್ವವನ್ನೂ ಸಮರ್ಥಿಸಿ ಏಕತ್ವ ಗೌಣವೆನ್ನುತ್ತಾರೆ.

ವಿಶ್ವಕರ್ಮಾ ಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದಿತೀಯಃ |
ತೃತೀಯಃ ಪಿತಾ ಜನಿತಾಷಧೀನಾಮಪಾಂ ಗರ್ಭಂ ವ್ಯದಧಾತ್ಪುರುತ್ರಾ ||

(ತೈ.ಸಂ. ೪-೬-೨)

ಈರೀತಿ ಯಾಸ್ಕಮುನಿಗಳಿಂದ ರಚಿತವಾದ ನಿರುಕ್ತಭಾಷ್ಯದ ಏಳನೇ ಅಧ್ಯಾಯದಲ್ಲಿ
ಐದನೆಯಖಂಡ ಸಮಾಪ್ತವಾಗಿದೆ.

---

## ಅಥ ಷಷ್ಠಃ ಖಂಡಃ

## ಆರನೆಯ ಖಂಡವು.

ಅಥಾಕಾರಚಿಂತನಂ ದೇವತಾನಾಂ ಪುರುಷವಿಧಾ ಸ್ಯುರಿತ್ಯೇಕಂ ಚೇತನಾವದ್ವದ್ಧಿ ಸ್ತುತಯೋ ಭವಂತಿ ತಥಾಭಿಧಾನಾನ್ಯಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯಂತೇ | ಋಷ್ವಾ ತ ಇಂದ್ರ ಸ್ಥಿರಸ್ಯ ಬಾಹೂ | ಯತ್ಸಂಗೃಭ್ಣಾ ಮಘವನ್ಕಾಶಿರಿತ್ತೇ | ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ | ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹಿ | ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ | ಅಥಾಪಿ ಪೌರುಷವಿಧಿಕೈಃ

ಕರ್ಮಭಿಃ । ಅದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯಾಶ್ರುತ್ಕರ್ಣ ಶ್ರುಧೀ ಹವಮ್ । ಅಪುರುಷ-ವಿಧಾ ಸ್ಯುರಿತ್ಯಪರಮಪಿ ತು ಯದ್ ದೃಶ್ಯತೇ ॥ ೬ ॥

---

## ಅಥಾಕಾರಚಿಂತನಂ ದೇವತಾನಾಮ್ ॥

ಯಾಜ್ಞಿಕರ ಮತವನ್ನನುಸರಿಸಿ ದೇವತಾನಾನಾತ್ವವನ್ನು ವಿವರಿಸಿ ಈಗ ಆ ದೇವತೆಗಳ ಆಕಾರವನ್ನು ವಿವರಿಸುತ್ತಾರೆ. ದೇವತೆಗಳ ಆಕಾರಗಳು ಸ್ವಾಭಾವಿಕವೇ ಅಥವಾ ನಿರಾಕಾರವು ಅವರ ಸ್ವರೂಪವೇ ಎಂದು ವಿಚಾರಿಸಿ ನಿರ್ಣಯಿಸುತ್ತಾರೆ. ಯಾಜ್ಞಿಕರು ದೇವತೆಗಳಿಗೆ ನಾನಾನಾಮವನ್ನು ಹೇಳಿರುತ್ತಾರೆ. ಅವುಗಳಲ್ಲಿ ಕೆಲವು ಅಗ್ನಿ, ವಾಯು, ಸೂರ್ಯಮುಂತಾದ ನಾಮಗಳು ಪ್ರತ್ಯಕ್ಷಾಭಿಧಾನಸಂಬಂಧ ಹೊಂದಿರುತ್ತವೆ. ರುದ್ರಇಂದ್ರಪರ್ಜನ್ಯಾದಿ ನಾಮಗಳು ಅಪ್ರತ್ಯಕ್ಷಾರ್ಥವನ್ನು ಕೊಡುತ್ತವೆ. ಆದುದರಿಂದ ಅವು ಮನುಷ್ಯಾದಿಗಳಂತೆ ಆಕಾರವುಳ್ಳ ಅರ್ಥವನ್ನು ತಿಳಿಸುತ್ತವೆಯೇ ಅಥವಾ ಆಕಾಶಾದಿಗಳಂತೆ ನಿರಾಕಾರವುಳ್ಳ ಅರ್ಥವನ್ನು ತಿಳಿಸುತ್ತವೆಯೇ ಎಂದು ವಿಚಾರ ಉಂಟಾಗುತ್ತದೆ. ಆಕಾರವಿದೆಯೆಂದರೂ ಮನುಷ್ಯಾದಿಗಳಂತೆ ಚೈತನ್ಯವುಳ್ಳವರೇ ಅಥವಾ ಕಲ್ಲುಮುಂತಾದವುಗಳಂತೆ ಅಚೇತನಗಳೇ ಎಂದು ಜಿಜ್ಞಾಸೆ ಬರುತ್ತದೆ.

## ಪುರುಷಾವಿಧಾಃ ಸ್ಯುರಿತ್ಯೇಕಮ್ ॥

ಮೊದಲನೆಯ ಪಕ್ಷವನ್ನಾಶ್ರಯಿಸಿ ಅಚೇತನಪಕ್ಷವನ್ನು ನಿರಾಕರಿಸುತ್ತಾರೆ. ಮಂತ್ರಗಳಿಂದ ದೇವತಾಸ್ತಿತ್ವವು ಸಿದ್ಧವಾಗುತ್ತದೆ. ದೇವತೆಯೇ ಇಲ್ಲವೆಂದರೆ ಆ ದೇವತೆಯುಳ್ಳ ಮಂತ್ರಸಿದ್ಧವಾಗಲಾರದು. ಮಂತ್ರದಿಂದಲೇ ದೇವತಾಕಾರವೂ ಇದೆಯೆಂದು ವ್ಯಕ್ತವಾಗುತ್ತದೆ. ಆದುದರಿಂದ ಕೆಲವು ಮಂತ್ರಪ್ರಮಾಣದಿಂದ ದೇವತೆಗಳು ಮನುಷ್ಯರ ಆಕಾರವುಳ್ಳವರು ಎಂದು ಒಂದು ಪಕ್ಷದವರ ಅಭಿಪ್ರಾಯ.

## ಚೇತನಾವದ್ಧಿ ಸ್ತುತಯೋ ಭವಂತಿ ॥

ದೇವತೆಗಳು ಪುರುಷಾಕಾರವುಳ್ಳವರು ಎಂಬುದರಲ್ಲಿ ಕಾರಣ ತೋರಿಸುತ್ತಾರೆ. ಲೋಕದಲ್ಲಿ ವಿಶಿಷ್ಟಚೈತನ್ಯವಿರುವವರನ್ನೇ ಸ್ತುತಿಸುತ್ತಾರೆ. ಅದರಂತೆ ಮಂತ್ರಗಳು ದೇವತೆಗಳನ್ನು ಸ್ತುತಿಸುವುದರಿಂದ ಅವರು ಚೇತನಪುರುಷರಂತೆಯೇ ಇರುತ್ತಾರೆ. ಚೈತನ್ಯ ಪಶುಗಳಿಗೂ ಇರುತ್ತದೆ. ಆದರೆ ಹಿತಾಹಿತಪ್ರಾಪ್ತಿಪರಿಹಾರಸಾಮರ್ಥ್ಯವು ಪಶುಗಳಿಗಿಲ್ಲದಿರುವುದರಿಂದ ಅವು ಅಚೇತನಗಳೇ ನಾಳಿನಜ್ಞಾನ ಅವುಗಳಿಗಿರುವುದಿಲ್ಲ. ಹಿತಾಹಿತವಿವೇಕಲಕ್ಷಣ ಚೈತನ್ಯವೇ ಇಲ್ಲಿ ವಿವಕ್ಷಿತವಾದುದರಿಂದ ಅದು ಮನುಷ್ಯರಿಗೆ ಮಾತ್ರವಿರುವುದರಿಂದ ಮನುಷ್ಯಾಕಾರವುಳ್ಳವರು ದೇವತೆಗಳೆಂದು ಸ್ತುತಿ ವಿಧಾಯಕ ಮಂತ್ರಗಳಿಂದ ವ್ಯಕ್ತವಾಗುತ್ತದೆ.

## ತಥಾಭಿಧಾನಾನಿ ॥

ದೇವತೆಗಳು ಮನುಷ್ಯಾಕಾರವುಳ್ಳವರು ಎಂಬುದರಲ್ಲಿ ಸ್ತುತಿಯು ಕಾರಣವಾದಂತೆ ಕಯಾಶುಭೀಯಾದಿ ಸಂವಾದಸೂಕ್ತಗಳಲ್ಲಿ ಇಂದ್ರಮುಂತಾದ ನಾಮಧೇಯಗಳೂ ಕಾರಣವಾಗುತ್ತದೆ. ಉಕ್ತಿಪ್ರತ್ಯುಕ್ತಿಗಳಿಂದ ಪರಸ್ಪರನಾಮಧೇಯವನ್ನು ಹೇಳಿಕೊಳ್ಳುವುದು ಚೇತನಪುರುಷರಲ್ಲಿ ಕಂಡುಬಂದಿದೆ. ಅದರಂತೆ ಕುತಸ್ತ್ವಮಿಂದ್ರ ಇತ್ಯಾದಿ ನಾಮಧೇಯದಿಂದ ವ್ಯವಹರಿಸುವುದರಿಂದ ದೇವತೆಗಳು ಪುರುಷರಂತೆ ಶರೀರವುಳ್ಳವರೇ ಆಗಿರುತ್ತಾರೆ.

## ಅಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯಂತೇ ।

ಪುರುಷರಂತೆ ಇರುತ್ತಾರೆ ಎಂಬುದರಲ್ಲಿ ಕಾರಣಾಂತರವನ್ನು ತೋರಿಸುತ್ತಾರೆ. ದೇವತೆಗಳನ್ನು ಪುರುಷರಂತೆ ಅವಯವವುಳ್ಳವ

ರೆಂದು ಅವರ ಅವಯವಗಳನ್ನು ವಿಭಾಗಿಸಿ ಅಂದರೆ ಒಂದೊಂದನ್ನಾಗಿ ಸ್ತುತಿಸುವುದರಿಂದ ಅವರು ಪುರುಷಶರೀರವುಳ್ಳವರೆಂದು ಸಿದ್ಧವಾಗುತ್ತದೆ ಅವಯವಸ್ತುತಿಗೆ ಉದಾಹರಣೆ ತೋರಿಸುತ್ತಾರೆ.

**ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ ||**

(ಋ. ಸಂ. ೪–೭–೩೧)

**ಯತ್ಸಂಗೃಭ್ಣಾ ಮಘವನ್ಕಾಶಿರಿತ್ತೇ ||**

(ಋ. ಸಂ. ೩–೫–೧)

**ಅಪಾಃ ಸೋಮಮಸ್ತಮಿಂದ್ರ**

(ಋ. ಸಂ. ೩–೫೩–೭)

ಇಂದ್ರನೇ ನಿನ್ನ ಸುಂದರವಾದ, ಮಹತ್ತಾದ, ಸರ್ವರಕ್ಷಕವಾದ ತೋಳುಗಳನ್ನು ರಕ್ಷಣೆಗೋಸ್ಕರ ಸೇವಿಸುತ್ತೇನೆ. ಈ ಎರಡು ಮಂತ್ರಗಳಲ್ಲಿಯೂ ತೋಳು, ಮುಷ್ಟಿಸಂಬಂಧ ಇಂದ್ರನಿಗೆ ತೋರುವುದರಿಂದ ಪುರುಷಾಕಾರವ್ಯಕ್ತವಾಗುತ್ತದೆ. ಮನುಷ್ಯ ಶರೀರವನ್ನು ಅಂಗೀಕರಿಸದೇ ಇದ್ದರೆ ಆಗ ಮಂತ್ರವು ಅನ್ಯತಾರ್ಥವನ್ನು ತಿಳಿಸುವಂತಾಗಿ ಅವುಗಳಿಗೆ ಆನರ್ಥಕ್ಯ (ವೈಯರ್ಥ್ಯ) ವುಂಟಾಗಬೇಕಾಗುತ್ತದೆ. ಆದುದರಿಂದ ದೇವತೆಗಳಿಗೆ ಮನುಷ್ಯರಂತೆ ಅವಯವವಿದೆಯೆಂದು ಅಂಗೀಕರಿಸಬೇಕು.

**ಅಥಾಪಿ ಪೌರುಷೇಯವಿಧಿಕೈರ್ದ್ರವ್ಯಸಂಯೋಗೈಃ ||**

ಪುರುಷಾಕಾರವುಳ್ಳವರೆಂಬುದಕ್ಕೆ ಇನ್ನೊಂದು ಕಾರಣ ತೋರಿಸುತ್ತಾರೆ. ಮನುಷ್ಯರ ವ್ಯವಹಾರವನ್ನು ಸೂಚಿಸುವ ಪದಾರ್ಥ ಸಂಬಂಧದಿಂದ ದೇವತೆಗಳನ್ನು ಸ್ತುತಿಸುವುದರಿಂದ ಅವರು ಮನುಷ್ಯಾಕಾರವುಳ್ಳವರು. ಇದಕ್ಕೆ ಉದಾಹರಣೆ ತೋರಿಸುತ್ತಾರೆ.

**ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹಿ ||**

(ಋ. ಸಂ. ೨–೬–೨೧)

**ಕಲ್ಯಾಣೀ ಜಾಯಾ ಸುರಣಂ ಗೃಹೇ ತೇ**

(ಋ ಸಂ. ೩–೩–೨೦)

ಸೋಮಪಾನರೂಪಕಾರ್ಯಕ್ಕೋಸ್ಕರ ಎಲೈ ಇಂದ್ರನೇ ಎರಡು ಕುದುರೆಗಳುಳ್ಳ ರಥದಿಂದ ಬನ್ನಿರಿ. ಇಂದ್ರನೇ ನಿಮ್ಮ ಮನೆಯಲ್ಲಿ ಕಲ್ಯಾಣಗುಣದಿಂದ ಕೂಡಿದ ಹೆಂಡತಿಯಾದ ಶಚಿಯು ಇರುತ್ತಾಳೆ. ಸುಂದರವಾದುದು ಏನಿದೆಯೋ ಅವೆಲ್ಲವೂ ನಿಮ್ಮ ಮನೆಯಲ್ಲಿದೆ, ಹೀಗೆ ಈ ಎರಡು ಮಂತ್ರಗಳಲ್ಲಿ ಇಂದ್ರನಿಗೆ ಅಪ್ಪ, ಮನೆ, ಹೆಂಡತಿ, ರಥಾದಿಸಂಬಂಧ ಹೇಳಿರುವುದರಿಂದ ಮನುಷ್ಯರೂಪವು ಸಿದ್ಧವಾಗುತ್ತದೆ. ದುನುಷ್ಯರಂತೆ ಇಲ್ಲವಾದರೆ ಪತ್ನೀ ಮುಂತಾದವರ ಸಂಬಂಧವು ಸಂಗತವಾಗುವುದಿಲ್ಲ.

**ಅಥಾಪಿ ಪೌರುಷವಿಧಿಕೈಃ ಕರ್ಮಭಿಃ ||**

ದೇವತೆಗಳಿಗೆ ಮನುಷ್ಯ ರೂಪವೆಂಬುದಕ್ಕೆ ಕಾರಣಾಂತರವನ್ನು ತೋರಿಸುತ್ತಾರೆ. ಮನುಷ್ಯರೂ ಮಾಡತಕ್ಕ ಕಾರ್ಯ ಸಂಬಂಧವನ್ನು ದೇವತೆಗಳಿಗೆ ಹೇಳಿ ಸ್ತುತಿಸುವುದರಿಂದ ಅವರು ಮನುಷ್ಯರೂಪಿಗಳೆಂದು ಸಿದ್ಧವಾಗುತ್ತದೆ.

ಅದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ||

(ಋ. ಸಂ. ೮-೬-೨೧)

ಆಶ್ರುತ್ಕರ್ಣ ಶ್ರುಧೀ ಹವಮ್ ||

(ಋ. ಸಂ. ೧-೧-೨೦)

ಈ ಎರಡು ಮಂತ್ರಗಳಲ್ಲಿಯೂ ತಿನ್ನು, ಪಾನಮಾಡು, ಕೇಳು, ಎಂದು ಆಮಂತ್ರಣಪೂರ್ವಕವಾಗಿ ವಿನಿಯೋಗ ಹೇಳಿರುವುದರಿಂದ ದೇವತೆಗಳು ಪುರುಷಾಕಾರವುಳ್ಳವರೆಂದು ಸಿದ್ಧವಾಗುತ್ತದೆ. ಲೋಕದಲ್ಲಿ ಯಾರೂ ಪಶು ಮುಂತಾದುವುಗಳಿಗೆ ಈರೀತಿ ಹೇಳುವುದಿಲ್ಲ. ಹೀಗೆ ಕಾರ್ಯಕಾರಣ ಸನ್ನಿವೇಶದಿಂದ ಮನುಷ್ಯರಂತೆಯೇ ದೇವತೆಗಳಿಗೆ ಸ್ವರೂಪವಿದೆಯೆಂದು ಮಂತ್ರಗಳು ಸ್ಪಷ್ಟವಾಗಿ ತಿಳಿಸುತ್ತವೆ.

ಉರುಂ ನೋ ಲೋಕಮನು ನೇಷಿ ವಿದ್ವಾನ್ಸ್ವರ್ವಜ್ಜ್ಯೋತಿರಭಯಂ ಸ್ವಸ್ತಿ | ಋಷ್ವಾ ತ ಇಂದ್ರ ಸ್ಥವಿರಸ್ಯ ಬಾಹೂ ಉಪಸ್ಥೇಯಾಮ ಶರಣಾ ಬೃಹಂತಾ ||

(ಋ. ಸಂ. ೬-೪೭-೮)

ಇದರ ಅರ್ಥವು—ಎಲೈ ಇಂದ್ರನೇ, ಸರ್ವಜ್ಞನಾದ ನೀನು ನಮಗೆ ಕ್ಷೇಮವುಂಟಾಗುವಂತೆ ಸುಖಯುಕ್ತವಾದುದೂ ಭಯರಹಿತವಾದುದು ಶಾಂತಿಯುತವಾದುದೂ ವಿಸ್ತೃತವಾದುದೂ ಆದ ಸ್ಥಾನಕ್ಕೆ ನಮ್ಮನ್ನು ಕರೆದುಕೊಂಡುಹೋಗಿ ಸೇರಿಸು. ಎಲೈ ಇಂದ್ರನೇ, ದೃಢಕಾಯನಾದ ನಿನ್ನ ಆಕರ್ಷಕವಾದುದೂ ದೀರ್ಘವಾದುದು ಆದ ಬಾಹುಗಳನ್ನು ನಮಗೆ ರಕ್ಷಕಗಳಾಗಿರುವಂತೆ ಆಶ್ರಯಿಸಿ ನಾವು ಸುಖವಾಗಿರುವಂತಾಗಲಿ.

ದೇವತೆಗಳಿಗೆ ಮನುಷ್ಯರಿಗಿರುವಂತೆ ಹಸ್ತಪಾದಾದ್ಯವಯವಗಳುಂಟೇ? ಎಂಬ ವಿಚಾರದಲ್ಲಿ ಮತಭೇದವಿದ್ದರೂ ಋಗ್ವೇದದಲ್ಲಿ ಋಷಿಗಳು ಇಂದ್ರಾದಿ ದೇವತೆಗಳನ್ನು ಹಸ್ತಪಾದಾದಿ ಅವಯವಯುಳ್ಳವರನ್ನಾಗಿ ಭಾವಿಸಿ ಸ್ತುತಿಸಿರುವುದು ಕಂಡುಬರುವುದು. ಈ ವಿಷಯದಲ್ಲಿ ಯಾಸ್ಕರು—

ಅಥಾಕಾರಚಿಂತನಂ ದೇವತಾನಾಂ | ಪುರುಷವಿಧಾಃ ಸ್ಯುರಿತ್ಯೇಕಂ ಚೇತನಾವದ್ವದ್ಧಿ ಸ್ತುತಯೋ ಭವಂತಿ । ತಥಾಭಿಧಾನಾನಿ | ಅಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯತೇ | ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ | ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ||

(ನಿ. ೭-೬)

ಎಂದು ನಿರ್ವಚನವನ್ನು ಹೇಳಿದ್ದಾರೆ. ಈಗ ದೇವತೆಗಳ ಆಕಾರ, ರೂಪ ಮೊದಲಾದುವುಗಳನ್ನು ವಿಮರ್ಶೆಮಾಡೋಣ. ದೇವತೆಗಳಿಗೆ ಪುರುಷರಿಗಿರುವಂತೆ ಹಸ್ತಾದ್ಯವಯವಾದಿಗಳಿರುವವು ಎಂದು ಕೆಲವರ ಮತ, ಮನುಷ್ಯರಿಗೆ ಚೈತನ್ಯವಿರುವಂತೆ ದೇವತೆಗಳಿಗೂ ಚೈತನ್ಯ ಪ್ರಜ್ಞೆ ಮೊದಲಾದವು ಇರುವವು ಎಂದು ಭಾವಿಸಿ ಹಸ್ತಾದ್ಯವಯವಗಳೂ ಆಕಾರವೂ ಮನುಷ್ಯರಿಗಿರುವಂತೆ ದೇವತೆಗಳಿಗೂ ಇರುವುದರಿಂದ ಅವರನ್ನು ಚೈತನ್ಯಯುಕ್ತರೆಂದು ಭಾವಿಸಿ ಅದರಂತೆ ಸ್ತುತಿಸಲಾಗಿರುವುದು. ಈ ಕಾರಣಕ್ಕಾಗಿಯೇ ಇಂದ್ರ ಮೊದಲಾದ ದೇವತೆಗಳನ್ನು ವರ್ಣಿಸುವಾಗ ಅವರ ಹಸ್ತಾದಿಗಳನ್ನು ವರ್ಣಿಸುವುದು ರೂಢಿಯು. ಪ್ರಕೃತ ಋಕ್ಕಿನ ಋಷ್ವಾತೆ ಇಂದ್ರ ಸ್ಥವಿರಸ್ಯ ಬಾಹೂ ಎಂಬ ಮೂರನೆಯ ಪಾದದಲ್ಲಿ ಇಂದ್ರನ ಬಾಹುಗಳ ವರ್ಣನೆಇದೆ. ಅದರಂತೆ,

ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ ।
ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥

(ಋ. ಸಂ. ೩-೩೦-೫)

ಎಂಬ ಋಕ್ಕಿನಲ್ಲಿಯೂ ಇಂದ್ರನ ಅವಯವ ವರ್ಣನೆ ಇರುವುದನ್ನು ನಿರುಕ್ತಕಾರರು ಉದಾಹರಿಸಿದ್ದಾರೆ.

ದೇವತೆಗಳಿಗೆ ಪುರುಷಾದಿರೂಪಗಳಲ್ಲದೆ ಪುರುಷರಿಗಿರುವಂತೆ ನಾನಾವಿಧ ದ್ರವ್ಯ ಸಂಯೋಗವೂ ಉಂಟೆಂದು ಅನೇಕ ವರ್ಣನೆಗಳಿವೆ—

ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ । (ಅ. ೭-೬)

ಈ ವಿಷಯದಲ್ಲಿ—

ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ ।
ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮಖ ಮಾ ಮೃಧಸ್ಕಃ ।

(ಋ. ಸಂ ೨-೧೮-೪)

ಎಂಬ ಋಕ್ಕಿನ ಉದಾಹರಣೆಯನ್ನು ಕೊಟ್ಟು ಪುರುಷರಿಗೆ ಗೋವು, ಅಶ್ವಗಳು ಮೊದಲಾದವುಗಳಿರುವಂತೆ ಇಂದ್ರಾದಿ ದೇವತೆಗಳಿಗೂ ಅವುಗಳಿರುವವು ಎಂಬುದನ್ನು ಈ ಋಕ್ಕಿನಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಎಲೈ ಇಂದ್ರನೇ, ನೀನು ನಿನ್ನ ಹರೀ ಎಂಬ ಹೆಸರಿನ ಎರಡು ಕುದುರೆಗಳಿಂದ ಕೂಡಿ (ರಥದಲ್ಲಿ ಕುಳಿತು) ನಮ್ಮ ಯಜ್ಞಕ್ಕೆ ಬಾ. ಅಥವಾ ನಾಲ್ಕು, ಆರು, ಎಂಟು, ಹತ್ತು ಕುದುರೆಗಳಿಂದಲಾದರೂ ಕೂಡಿ ಸೋಮಪಾನಾರ್ಥವಾಗಿ ಇಲ್ಲಿಗೆ ಬಾ ಎಂದು ಹೇಳಿರುವುದರಿಂದ ಲೋಕವ್ಯವಹಾರದಲ್ಲಿ ಪುರುಷರಿಗೆ ಸ್ವತ್ತುಗಳಿರುವಂತೆಯೇ ದೇವತೆಗಳಿಗೂ ಅಶ್ವಾದಿಗಳಿರುವವು ಎಂಬಭಿಪ್ರಾಯವು ವ್ಯಕ್ತವಾಗಿರುವುದು. ಮತ್ತು

ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।
ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥

(ಋ. ಸಂ. ೩-೫೩-೬)

ಎಂಬ ಈ ಋಕ್ಕಿನಲ್ಲಿ ಪುರುಷರಿಗಿರುವಂತೆ ಇಂದ್ರನಿಗೂ ಮನೆಯಲ್ಲಿ ಪತ್ನಿಯೂ, ರಥ, ಕುದುರೆಗಳೂ ಇರುವ ವಿಷಯದ ಪ್ರಸ್ತಾಪವಿದೆ.

ಇನ್ನೂ ಪುರುಷರ ಕರ್ಮಗಳಂತೆ ದೇವತೆಗಳ ಕರ್ಮಗಳೂ ಇರುವವು ಎಂಬ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಸಮರ್ಥಿಸಿದ್ದಾರೆ—

ಅಥಾಪಿ ಪೌರುಷವಿಧಿಕೈಃ ಕರ್ಮಭಿಃ । (ನಿ. ೭-೬)

ಇದಂ ಹವಿರ್ಮಘವನ್ ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ ।
ತುಭ್ಯಂ ಸುತೋ ಮಘವನ್ ತುಭ್ಯಂ ಪಕ್ವೋಽದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥

(ಋ. ಸಂ. ೧೦-೧೧೬-೭)

ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ಧಧಿಷ್ವ ಮೇ ಗಿರಃ ।
ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥

ಎಂಬ ಋಕ್ಕಗಳನ್ನು ಉದಾಹರಣೆಗಾಗಿ ಕೊಟ್ಟಿದ್ದಾರೆ. ಮೊದಲನೆಯ ಋಕ್ಕಿನಲ್ಲಿ ಇಂದ್ರನಿಗಾಗಿ ಹವಿಸ್ಸನ್ನೂ ಸೋಮವನ್ನೂ ಅರ್ಪಿಸಿರುವುದೂ ಅದನ್ನು ಇಂದ್ರನು ಪಾನಮಾಡಬೇಕೆಂದು ಪ್ರಾರ್ಥಿಸಿರುವುದೂ ಉಕ್ತವಾಗಿದೆ. ಎರಡನೇ ಋಕ್ಕಿನಲ್ಲಿ ನಮ ಆಹ್ವಾನವನ್ನು ಸ್ತೋತ್ರವನ್ನೂ ಕೇಳಬೇಕೆಂಬ ಪ್ರಾರ್ಥನೆ ಇದೆ. ಎಂದರೆ ಮನುಷ್ಯರ ಕರ್ಮದಂತೆ, ಮನುಷ್ಯರು ಮಾಡುವಂತೆ ಹವಿಸ್ಸನ್ನು ಭಕ್ಷಿಸುವುದು, ಸೋಮರಸವನ್ನು ಪಾನಮಾಡುವುದು ಆಹ್ವಾನವನ್ನು ಮತ್ತು ಸ್ತೋತ್ರವನ್ನು ಆಲಿಸಿ ಕೇಳುವುದ್ಕ ಮೊದಲಾದ ಮನುಷ್ಯೋಚಿತವಾದ ಕರ್ಮಗಳನ್ನು ಇಂದ್ರಾದಿ ದೇವತೆಗಳಲ್ಲಿಯೂ ಆರೋಪಣಮಾಡಿ ಸ್ತುತಿಸಲಾಗಿದೆ. ಈ ರೀತಿ ಪುರುಷರಂತೆ ದೇವತೆಗಳಿಗೆ ಆಕಾರ, ಹಸ್ತಾದ್ಯವಯವಗಳು, ಭಕ್ಷಣಾದಿಕರ್ಮಗಳು ದೇವತೆಗಳಿಗೂ ಇರುವವು ಎಂಬುದು ಕೆಲವರ ವಾದವು ಮತ್ತೆ ಕೆಲವರು ದೇವತೆಗಳಿಗೆ ಮನುಷ್ಯರಿಗಿರುವಂತೆ ಆಕಾರಾದಿಗಳಿರುವುದಿಲ್ಲವೆಂದೂ, ಕರ್ಮಗಳೂ ಮನುಷ್ಯರು ಆಚರಿಸುವ ಕರ್ಮಗಳಿಗಿಂತ ಭಿನ್ನವಾಗಿರುವುವೆಂತಲೂ ದೇವತೆಗಳ ಮಹತ್ತ್ವವನ್ನು ವರ್ಣಿಸುವುದಕ್ಕಾಗಿ ಉತ್ಪ್ರೇಕ್ಷೆಯಿಂದ ಆ ರೀತಿ ವರ್ಣಿಸಲಾಗಿರುವುದೆಂದೂ ಅಭಿಪ್ರಾಯಪಡುವರು—

ಅಪುರುಷವಿಧಾಃ ಸ್ಯುರಿತ್ಯಪರಂ ॥

(ನಿ. ೭-೭)

ಪುರುಷರಿಗಿರುವಂತೆ ದೇವತೆಗಳಿಗೆ ರೂಪ, ಆಕಾರ, ಕರ್ಮ ಮೊದಲಾದುವುಗಳಿಲ್ಲವೆಂದೂ ಅವುಗಳ ವೈಶಿಷ್ಟ್ಯವೇ ಬೇರೆವಿಧ ವೆಂದೂ ಮತ್ತೆ ಕೆಲವರು ಅಭಿಪ್ರಾಯಪಡುವರು. ಹೇಗೆಂದರೆ—

ಅಪಿತು ಯದ್ದೃಶ್ಯತೇಽಪುರುಷವಿಧಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾಶ ಇತಿ ॥

(ನಿ. ೭—೭)

ಕೆಲವು ದೇವತೆಗಳ ರೂಪಗಳು, ಕರ್ಮಗಳು ಪುರುಷರಿಗಿರುವಂತೆ ಕಾಣಿಸುವುದಾದರೂ ಅವುಗಳು ಆ ರೀತಿಯಾಗಿಲ್ಲ. ಅಗ್ನಿ, ವಾಯು, ಆದಿತ್ಯ, ಪೃಥಿವೀ ಚಂದ್ರಮಾ ಇತ್ಯಾದಿ ದೇವತೆಗಳ ರೂಪ ಮತ್ತು ಕರ್ಮಗಳು ಪುರುಷರ (ಮನುಷ್ಯರ) ಕರ್ಮಗಳಂತೆ ಕಾಣಿಸುವುದಾದರೂ, ಅವುಗಳ ರೀತಿಯೇ ಬೇರೆ. ಆ ಕರ್ಮಗಳಿಗೂ ಮನುಷ್ಯರ ಕರ್ಮಗಳಿಗೂ ವಿಶೇಷ ವ್ಯತ್ಯಾಸವಿರುವುದು.

ಯಥೋ ಏತಚ್ಚೇತನಾವದ್ವದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂತೇ ಯಥಾ-ಕ್ಷಪ್ರಭೃತೀನ್ಯೋಷಧಿಪರ್ಯಂತಾನಿ ॥

(ನಿ. ೭-೭)

ಹೇಗೆಂದರೆ. ಅಗ್ನ್ಯಾದಿದೇವತೆಗಳನ್ನು ಸ್ತುತಿಸುವಾಗ ಅವುಗಳಿಗೆ ಚೇತನವಿರುವಂತೆಯೇ ಭಾವಿಸಿ ಸ್ತುತಿಸಲ್ಪಡುವವು, ಜೂಜಾಡುವಾಗ ದಾಳಗಳನ್ನು ಸಂಬೋಧಿಸುವರು. ದಾಳಗಳು ಚೇತನಾರಹಿತವಾಗಿದ್ದರೂ ಚೇತನವಿರುವ ಪ್ರಾಣಿಗಳಂತೆ ಅವುಗಳನ್ನು ಸಂಬೋಧಿಸುವರು. ಓಷಧಿಗಳನ್ನೂ ಎಂದರೆ, ಗಿಡ, ಮರ ಬಳ್ಳಿ ಇವುಗಳನ್ನೂ ಚೇತನವಿರುವಂತೆಯೇ ಭಾವಿಸಿ ಸಂಬೋಧಿಸುವರು.

**ಯಥೋ ಏತತ್ಪ್ಪೌರುಷವಿಧಿಕ್ಯೈರಂಗ್ಯೈಃ ಸಂಸ್ತೂಯಂತ ಇತ್ಯಚೇತನೇಷ್ವಪ್ಯೇತದ್ಭವತ್ಯಭಿಕ್ರಂದಂತಿ ಹರಿತೇಭಿರಾಸಭಿರಿತಿ ಗ್ರಾವಸ್ತುತಿಃ ||**

(ನಿ. ೭-೭)

ಹಾಗೆಯೇ ಅಚೇತನವಸ್ತುಗಳನ್ನೂ ಪುರುಷಸಂಬಂಧವಾದ ಅಂಗವುಳ್ಳವುಗಳಂತೆಯೇ ಭಾವಿಸಿ ಸ್ತುತಿಸಲಾಗಿರುವುದು. ಓಷಧಿಗಳು, ಸೋಮವನ್ನು ಜಜ್ಜುವ ಕಲ್ಲು ಇವುಗಳು ಅಚೇತವಾದುವು. ಆದರೂ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಉಂಟಾಗುವ ಶಬ್ದವನ್ನು—ಆ ಕಲ್ಲುಗಳು ತಮ್ಮ ಹಸುರಾದ ಬಾಯಿಗಳಿಂದ ಕೂಗುತ್ತವೆ—ಎಂದು ವರ್ಣಿಸಲಾಗಿದೆ. ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಪ್ರಾಣಿಗಳಿಗಿರುವಂತೆ ಬಾಯಿ ಇಲ್ಲ. ಆದರೂ ಕಲ್ಲಿನ ಮೇಲೆ ಲತೆಯನ್ನಿಟ್ಟು ಜಜ್ಜುವಾಗ ಆಗುವ ಶಬ್ದವನ್ನು ಕಲ್ಲುಗಳೇ ತಮ್ಮ ಬಾಯಿನಿಂದ ಮಾಡುತ್ತವೆ ಎಂದು ಋಷಿಯು ಆಲಂಕಾರಿಕವಾಗಿ ವರ್ಣಿಸಿದ್ದಾನೆ. ಸೋಮಲತೆಯನ್ನು ಜಜ್ಜುವಾಗ ಆ ಲತೆಗಳ ಹಸುರಾದ ವರ್ಣವು ಕಲ್ಲುಗಳಿಂದ ಅಂಟಿಕೊಳ್ಳುವುದರಿಂದ ಕಲ್ಲುಗಳ ಬಾಯಿಯು ಹಸರು ವರ್ಣವುಳ್ಳದ್ದಾಗಿವೆ ಎಂಬುದನ್ನು ಸೂಚಿಸುವುದಕ್ಕಾಗಿ ಕಲ್ಲುಗಳ ಬಾಯಿಯು ಹಸುರುವರ್ಣವುಳ್ಳದ್ದಾಗಿದೆ ಎಂದು ಉತ್ಪ್ರೇಕ್ಷೆಯುಳ್ಳ ವರ್ಣನೆಮಾಡಲಾಗಿದೆ.

**ಯಥೋ ಏತತ್ಪ್ಪೌರುಷವಿಧಿಕ್ಯೈರ್ದ್ರವ್ಯಸಂಯೋಗ್ಯೈರಿತ್ಯೇತದಪಿ ತಾದೃಶಮೇವ। ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ಇತಿ ನದೀಸ್ತುತಿಃ ||**

(ನಿ, ೭-೭)

ಪುರುಷರಿಗಿರುವಂತೆ ಅಚೇತನವಸ್ತುಗಳಿಗೂ ದ್ರವ್ಯಸಂಯೋಗವಿರುವ ವಿಷಯ—ನದಿಯ (ಸಿಂಧುವು) ತನ್ನ ಕುದುರೆಗಳನು ಸುಖಕರವಾದ ರಥಕ್ಕೆ ಹೂಡಿದಳು—ಇತ್ಯಾದಿ ವಾಕ್ಯಗಳಲ್ಲಿರುವಂತೆ ನದಿಯು ಅಚೇತನವಸ್ತುವಾದ್ದರಿಂದ ಅದಕ್ಕೆ ರಥವೂ ಇಲ್ಲ. ಆದರೂ ನದಿಯನ್ನೂ ಸ್ತುತಿಸುವಾಗ ಋಷಿಯು ಮನುಷ್ಯರಿಗಿರುವಂತೆ ನದಿಗೂ ದ್ರವ್ಯಸಂಯೋಗವನ್ನು (ಸ್ವತ್ತನ್ನು ಹೊಂದಿರುವಿಕೆ) ಆರೋಪಮಾಡಿ ಸ್ತುತಿಸಿರುವನು.

**ಯಥೋ ಏತತ್ಪ್ಪೌರುಷವಿಧಿಕ್ಯೈಃ। ಕರ್ಮಭಿರಿತ್ಯೇತದಪಿ ತಾದೃಶಮೇವ। ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ಇತಿ ಗ್ರಾವಸ್ತುತಿರೇವ ||**

(ನಿ. ೭-೭)

ಕರ್ಮಗಳ ವಿಷಯದಲ್ಲಿಯೂ ಪುರುಷರಿಗಿರುವಂತೆಯೇ ಅಚೇತನವಸ್ತುಗಳಾದ ಕಲ್ಲು ಮೊದಲಾದವುಗಳಿಗೂ ಕರ್ಮಕರ್ತೃತ್ವವನ್ನು ಆರೋಪಿಸಿ ಸ್ತುತಿಸಲಾಗಿದೆ. ಸೋಮಲತೆಯನ್ನು ಕಲ್ಲಿನಿಂದ ಜಜ್ಜುವಾಗ ಲತೆಯಿಂದ ಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದು ಸಹಜವಷ್ಟೆ. ಇದನ್ನೇ ಋಷಿಯು ಸೋಮಾಭಿಷಣವಸಾಧನವಾದ ಕಲ್ಲುಗಳು ಸೋಮರಸವನ್ನು ಹೋತೃ ಮೊದಲಾದ ಯಜ್ಞಕರ್ತರಿಗಿಂತಲೂ ಮೊದಲೇ ರುಚಿನೋಡುತ್ತವೆ-ಎಂದು ವರ್ಣಿಸಿದ್ದಾನೆ. ಕಲ್ಲಿಗೆ ಬಾಯಿಇಲ್ಲ, ಅದಕ್ಕೆ ರುಚಿನೋಡುವ ಸಾಮರ್ಥ್ಯವೂ ಇಲ್ಲ. ಆದರೂ ಲತೆಯನ್ನು ಕಲ್ಲಿನಿಂದ ಜಜ್ಜುವಾಗ ಹೊರಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದರಿಂತ ಕಲ್ಲು ಎಲ್ಲರಿಗಿಂದ ಮೊದಲೇ ಸೋಮರಸದ ರುಚಿ ನೋಡುತ್ತದೆ ಎಂದು ವರ್ಣಿಸಿರುವುದು ಉತ್ಪ್ರೇಕ್ಷೆಯುತವಾಗಿಯೂ ಆಲಂಕಾರಿಕವಾಗಿಯೂ ಇದೆ. ವಾಸ್ತವವಾಗಿ ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಬಾಯಿಯಾಗಲಿ ರುಚಿನೋಡುವ ಸಾಮರ್ಥ್ಯವಾಗಲಿ ಇಲ್ಲವೆಂಬ ವಿಷಯವು ಸರ್ವರಿಗೂ ಅನುಭವಸಿದ್ಧವಾಗಿದೆ.

ಅಪಿ ವಾ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುರ್ಯಥಾ ಯಜ್ಞೋ ಯಜಮಾನಸ್ಯ ।
ಏಷ ಚಾಖ್ಯಾನಸಮಯಃ ॥

(ನಿ. ೭-೭)

ಆದ್ದರಿಂದ ಈ ಎರಡು ವಿಧವಾದ ಮತಗಳಿಗೂ ಅವಕಾಶವಿದೆ. ಪೃಥಿವ್ಯಾದಿ ವಸ್ತುಗಳು ಅಚೇತನವಾದರೂ ಚೇತನಾ ಸಹಿತರಾದವರಂತೆ ಪ್ರವರ್ತಿರುವುದರಿಂದ ಅವುಗಳನ್ನು ಚೇತನರಂತೆಯೂ ಅಚೇತನರಂತೆಯೂ ಎರಡುವಿಧವಾಗಿಯೂ ಭಾವಿಸುವುದರಲ್ಲಿ ಭಿನ್ನಾಭಿಪ್ರಾಯವಿದ್ದರೂ ಆ ಎರಡುವಿಧಗಳನ್ನೂ ಸರಿಯೆಂದು ಒಪ್ಪಬಹುದು ಯಜ್ಞೋ ಯಜಮಾನಸ್ಯ ಎಂಬ ವಾಕ್ಯದಲ್ಲಿ ಯಜಮಾನನು ಚೇತನಾಸಹಿತನು. ಯಜ್ಞವು ಅಚೇತನವು. ಆದರೂ ಯಜ್ಞದ ವಿಷಯವನ್ನು ಮಾತನಾಡುವಾಗ—ಯಜ್ಞದ ಯಜಮಾನನಿಗೆ ಉತ್ತಮಸ್ಥಾನವಾದ ಸ್ವರ್ಗವನ್ನು ಒದಗಿಸಿಕೊಡುವುದು—ಇತ್ಯಾದಿ ವಾಕ್ಯಗಳಲ್ಲಿ ಯಜ್ಞವು ಚೇತನಾಸಹಿತರಾಗಿರುವಂತೆಯೇ ವ್ಯವಹರಿಸಲ್ಪಡುವುದು. ಆದ್ದರಿಂದ ಅಚೇತನವಸ್ತುಗಳನ್ನು ವರ್ಣಿಸುವಾಗ ಚೇತನಾಸಹಿತರಾಗಿರುವಂತೆ ವರ್ಣಿಸುವುದರಲ್ಲಿ ತಪ್ಪೇನಿಲ್ಲ. ಉದಾಹರಣೆಗೆ ಹೇಳುವುದಾದರೆ—ಪೃಥಿವೀ ಸ್ತ್ರೀರೂಪೇಣ ಭಾರಾವತರಣಾಯ ಬ್ರಹ್ಮಾಣಂ ಯಯಾಚೇ । ಅಗ್ನಿಶ್ಚ ಬ್ರಾಹ್ಮಣರೂಪೇಣ ವಾಸುದೇವಾರ್ಜುನಾವುಭೌ ಖಾಂಡವಂ ಯಯಾಚೇ ಪುರುಷರೂಪೇಣಾಗ್ನಿರೂಪೇಣ ಚ ಖಾಂಡವಂ ದದಾಹ । ಪೃಥಿವಿಯು ಸ್ತ್ರೀರೂಪವನ್ನು ಧರಿಸಿ ಭೂಭಾರವನ್ನು ಇಳುಹಿಸಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿದಳು,; ಅಗ್ನಿಯು ಬ್ರಾಹ್ಮಣರೂಪದಿಂದ ಕೃಷ್ಣಾರ್ಜುನರನ್ನು ಸಮೀಪಿಸಿ ಇಂದ್ರನ ಖಾಂಡವವನವನ್ನೂ ಪ್ರಾರ್ಥಿಸಿದನು. ಅಗ್ನಿಯು ಪುರುಷ ಮತ್ತು ಅಗ್ನಿರೂಪದಿಂದ ಖಾಂಡವವನವನ್ನು ದಹಿಸಿದನು. ಇತ್ಯಾದಿ ವಾಕ್ಯಗಳಲ್ಲಿ ಅಗ್ನಿ, ಪೃಥಿವೀ ಮೊದಲಾದ ನಿರ್ಜೀವವಸ್ತುಗಳು ಅಥವಾ ಅವುಗಳ ಅಭಿಮಾನಿದೇವತೆಗಳು ಪುರುಷರೂಪವನ್ನು ಧರಿಸಿ ನಾನಾಕಾರ್ಯಗಳನ್ನು ಮಾಡಿರುವರೆಂದು ಪುರಾಣಾದಿಗಳಲ್ಲಿಯೂ ಅನೇಕ ವರ್ಣನೆಗಳಿವೆ. ಆದ್ದರಿಂದ ಇವುಗಳನ್ನು ಚೇತನಾ ಮತ್ತು ಅಚೇತನಾ ಎಂದು ಎರಡು ವಿಧವಾಗಿ ಭಾವಿಸುವುದೂ ಸರಿಯೆಂಬುದೇ ಸಿದ್ಧಾಂತವು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಆದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯ
ಮಾನ ।
ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮಖ ಮಾ
ಮೃಧಸ್ಕಃ ॥

(ಋ. ಸಂ. ೨-೧೮-೪)

ಇದರ ಅರ್ಥವು—ಎಲೈ ಇಂದ್ರನೇ ನಮ್ಮಿಂದ ಕರೆಯಲ್ಪಟ್ಟ ಒಡನೆಯೇ ಎರಡು ಅಶ್ವಗಳೊಡನೆಯೂ ನಾಲ್ಕು ಅಥವಾ ಆರು ಅಶ್ವಗಳೊಡನೆಯೂ ಯಜ್ಞಾಭಿಮುಖವಾಗಿ ದಯಮಾಡು. ಸೋಮಪಾನಾರ್ಥವಾಗಿ ಎಂಟು ಅಥವಾ ಹತ್ತು ಅಶ್ವಗಳೊಡನೆ ಬಾ. ಶ್ರೇಷ್ಠವಾದ ರಥವುಳ್ಳ ಎಲೈ ಇಂದ್ರನೇ, ನಿನಗೆ ಪ್ರಿಯವಾದ ಸೋಮರಸವು ಹಿಂಡಲ್ಪಟ್ಟಿದೆ ಯಜ್ಞಕ್ಕೆ ಹಿಂಸೆಯನ್ನುಂಟು ಮಾಡಬೇಡ.

ಈ ಋಕ್ಕಿನಲ್ಲಿಯೂ, ಮುಂದಿನ ಎರಡು ಋಕ್ಕುಗಳಲ್ಲಿಯೂ ಸೋಮಪಾನಕ್ಕಾಗಿ ಇಂದ್ರನು ಯಜ್ಞಭೂಮಿಗೆ ಅಶ್ವಸಹಿತನಾಗಿ ಬರಬೇಕೆಂದು ಪ್ರಾರ್ಥಿಸಲಾಗಿದೆ. ಹೀಗೆ ಪ್ರಾರ್ಥಿಸುವಾಗ ದ್ವಾಭ್ಯಾಂ ಹರಿಭ್ಯಾಂ ಎಂದರೆ ಹರೀ ಎಂಬ ಇಂದ್ರನ ಎರಡು ಅಶ್ವಗಳಿಂದ ಸಹಿತನಾಗಿ ಬರಬೇಕೆಂದು ಆಹ್ವಾನಿಸಿರುವುದು ಸಹಜವಾಗಿದೆ. ಆದರೆ ಇತರ ವಾಕ್ಯಗಳಲ್ಲಿ

**ಚತುರ್ಭಿಃ ಷಡ್ಭಿಃ ಅಷ್ಟಾಭಿಃ ದಶಭಿಃ** ಎಂದರೆ ನಾಲ್ಕು, ಆರು, ಎಂಟು, ಹತ್ತು ಅಶ್ವಗಳಿಂದ ಸಹಿತನಾಗಿ ಬಾ ಎಂದಿರುವುದು ವಿರೋಧವಲ್ಲವೇ ಎಂದರೆ ಯದ್ಯಪೀಂದ್ರಸ್ಯ ದ್ವಾವೇವ ಹರೀ ತಥಾಪಿ ತಯೋರ್ವಿಭೂತಿಭೇದಾನ್ನಾನಾತ್ವಂ । **ಅತೋಽಶ್ವಬಹುತ್ವಮವಿರುದ್ಧಂ** । ಇಂದ್ರನ ಹರೀ ಎಂಬ ಕುದುರೆಗಳು ಎರಡೇ ಆದರೂ ಅವು ತಮ್ಮ ಮಹಿಮೆಯಿಂದ ಅನೇಕ ರೂಪಗಳನ್ನು ತಾಳಲು ಸಮರ್ಥವಾಗಿರುವವು. ಆದುದರಿಂದ ಅನೇಕ ಅಶ್ವಗಳೆಂದು ಹೇಳಿರ.ವುದು ವಿರೋಧಾರ್ಥವನ್ನೇನೂ ಸೂಚಿಸುವುದಿಲ್ಲ ಎಂದು ಭಾಷ್ಯಕಾರರು ವಿವರಿಸಿರುವರು.

ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾಃ
ಸುರಣಂ ಗೃಹೇ ತೇ ।
ಯತ್ರಾ ರಥಸ್ಯ ಬೃಹತೋ ನಿಧಾನೇ ವಿಮೋಚನಂ ವಾಜಿನೋ
ದಕ್ಷಿಣಾ ವತ್ ॥

(ಋ. ಸಂ. ೩–೫೩–೬)

ಇದರ ಅರ್ಥವು—ಎಲೈ ಇಂದ್ರನೇ, ನೀನು ಸೋಮವನ್ನು ಮೊದಲು ಪಾನಮಾಡು. ಅನಂತರ ನಿನ್ನ ಗೃಹಕ್ಕೆ ಹೋಗು ನಿನ ಗೃಹದಲ್ಲಿ ಮಂಗಳಕಾರಿಣಿಯಾದ ನಿನ್ನ ಪತ್ನಿಯು ನಿನಗೆ ಆಹ್ಲಾದಕರಳಾಗಿದ್ದಾಳೆ ಮಹತ್ತಾದ ರಥದ ಮೇಲೆ ನಿನ್ನ ಸ್ಥಾಪನವು ಪ್ರಯೋಜನಕಾರಿಯಾಗಿರುತ್ತದೆ. ಅಥವಾ ಇಲ್ಲೇ ಇದ್ದರೆ ನಿನ್ನ ರಥದಿಂದ ಅಶ್ವದ ವಿಮೋಚನವಾಗುತ್ತದೆ

ಅಹರ್ಗಣವೆಂಬ ಯಾಗದ ಕೊನೆಯ ದಿನದಲ್ಲಿ **ಅಪಾಃ ಸೋಮಂ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಹಾರಿಯೋಜನೋಽಪಾಃ ಸೋಮಸಸ್ತಮಿಂಪ್ರ** ಎಂಬ ಸೂತ್ರದಿಂದ ವಿವೃತವಾತರುವುದು (ಆ. ಶ್ರೌ. ೬–೧೧)

ಈ ಋಕ್ಕಿನಲ್ಲಿಯೂ ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ವಿಶದವಾಗಿ ತಿಳಿಸಿದೆ. ಮತ್ತು ಇಂದ್ರನ ಮನೆಯಲ್ಲಿ ಇಂದ್ರನ ಪತ್ನಿಯು ಅವನನ್ನು ಮಂಗಳಗೀತಾಧ್ವನಿಯಿಂದ ಸ್ವಾಗತಿಸುತ್ತಾಳೆಂಬ ವರ್ಣನೆಯೂ ಇದೆ.

**ಇಂದ್ರಂ ಸೋಮಮಪ್ತಾಃಅಸ್ತಂ ಪ್ರ ಯಾಹಿ**—ಎಲೈ ಇಂದ್ರನೇ, ನೀನು ನಮ್ಮ ಯಜ್ಞಭೂಮಿಯಲ್ಲಿ ಸೋಮನನ್ನು ಪಾನಮಾಡು. ಪಾನ ಮಾಡಿದ ನಂತರ ನಿನ್ನ ಗೃಹಾಭಿಮುಖವಾಗಿ ಹೊರಡು. ಳನೆಯ ಋಕ್ಕಿನಲ್ಲಿ ಹೇಳಿದಂತೆ ಇಲ್ಲಿಯೂ ಸಹ ಅಸ್ತಂ ಎಂಬ ಶಬ್ದಕ್ಕೆ ಗೃಹವೆಂದು ಅರ್ಥವಿವರಣೆಮಾಡಿರುವರು.

**ಕಲ್ಯಾಣೀಃ ಜಾಯಾ ತೇ ಗುಹೇ ಸುರಣಂ—ತವ ಗೃಹೇ ಮಂಗಲಕಾರಿಣೀ ತವ ಜಾಯಾ (ಶಚೀ) ವಿದ್ಯತೇ । ಶೋಭನಗೀತಾದಿಧ್ವನಿಶ್ಚಾಸ್ತಿ ।** ನಿನ್ನ ಗೃಹದಲ್ಲಿ ರಮಣೀಯವಾಗಿ ಶೋಭಿಸುತ್ತಿರುವ ಎಂದರೆ ಗೃಹಕ್ಕೆ ಅಲಂಕಾರಪ್ರಾಯಳಾದ ನಿನ್ನ ಪತ್ನಿಯು (ಶಚೀದೇವಿಯು) ಇರುವಳು. ಮತ್ತು ಅವಳು ನಿನ್ನ ಸ್ವಾಗತಾರ್ಥವಾಗಿ ಹಾಡುವ ಮಧುರವಾದ ಗೀತಾದಿ ಧ್ವನಿಯು ಇರುವುದು ಎಂದರೆ ಕೇಳಬರುತ್ತಿರುವುದು ಎಂದಭಿಪ್ರಾಯವು.

**ಯತ್ರ ರಥಸ್ಯ ...... ದಕ್ಷಿಣಾವತ್**—ಹಿಂದಿನ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿರುವುದನ್ನೇ ಇಲ್ಲಿ ಮತ್ತೆ ಹೇಳಲಾಗಿರುವುದು. ಇಂದ್ರನು ಹೊರಡುವುದಾದರೆ ತನ್ನ ದೊಡ್ಡದಾದ ರಥದಲ್ಲಿ ಕುಳಿತು ಎಲ್ಲರಿಗೂ ದರ್ಶನವನ್ನು

ಕೊಡುವುದೂ, ಹೊರಡದೆ ಇಲ್ಲಿಯೇ ಇದ್ದರೆ ತನ್ನ ರಥದ ಅಶ್ವಗಳನ್ನು ಬಿಚ್ಚಿ ಅವುಗಳಿಗೆ ಆಹಾರ, ಪಾನಗಳು ದೊರಕುವಂತೆ ಮಾಡುವುದು ಎಂಬ ಎರಡು ವಿಧವಾದ ಪ್ರಯೋಜನಗಳು ಇರುವುವು ಎಂದು ಋಷಿಯು ಮತ್ತೆ ಹೇಳಿದಾನೆ.

ಇದಂ ಹವಿರ್ಮಘವನ್ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ ।
ತುಭ್ಯಂ ಸುತೋ ಮಘವನ್ತುಭ್ಯಂ ಪಕ್ವೋಽದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥

(ಋ. ಸಂ. ೧೦–೧೧೬–೭)

ಇದರ ಅರ್ಥ—ಧನವಂತನೂ ಸರ್ವರಿಗೂ ಒಡೆಯನೂ ಆದ ಎಲೈ ಇಂದ್ರನೇ, ನಿನಗೋಸ್ಕರ ನಮ್ಮಿಂದ ಅರ್ಪಿತವಾದ ಈ ಹವಿಸ್ಸನ್ನು ಕೋಪರಹಿತನಾಗಿ ಸ್ವೀಕರಿಸು. ಎಲೈ ಇಂದ್ರನೇ, ಈ ಸೋಮರಸವು ನಿನಗಾಗಿಯೇ ಹಿಂಡಿ ಸಿದ್ಧವಾಗಿದೆ. ಈ ಪುರೋಡಾಶವೂ ನಿನಗಾಗಿಯೇ ಪಕ್ವಮಾಡಲ್ಪಟ್ಟಿದೆ. ಎಲೈ ಇಂದ್ರನೇ ಪಾತ್ರೆಯಲ್ಲಿ ತುಂಬಿ ಸಿದ್ಧವಾಗಿರುವ ಸೋಮರಸವನ್ನು ಪಾನಮಾಡು,

ಪುರುಷರಿಗಿರುವಂತೆಯೇ ದೇವತೆಗಳಿಗೂ ದೇಹಾದ್ಯಾಕಾರಗಳು, ಹಸ್ತಾದ್ಯವಯವಗಳು, ಆಹಾರಭಕ್ಷಣ, ಸೋಮ ಪಾನ ಮೊದಲಾದ ಕರ್ಮಗಳು ಉಂಟೇ ಇಲ್ಲವೇ ಎಂಬ ವಿಷಯದಲ್ಲಿ ಯಾಸ್ಕರು ಈ ಋಕ್ಕಿನ ಅದ್ಧೀಂದ್ರಪಿಬ ಚ ಪ್ರಸ್ಥಿತಸ್ಯ ಎಂಬ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ವಿಷಯದಲ್ಲಿ ಯಾಸ್ಕರ ನಿರ್ವಚನವು ಈ ರೀತಿ ಇದೆ—

ದೇವತೆಗಳಿಗೆ ಮನುಷ್ಯರಿಗಿರುವಂತೆ ಹಸ್ತಪಾದಾದ್ಯವಯವಗಳುಂಟೇ? ಎಂಬ ವಿಚಾರದಲ್ಲಿ ಮತಭೇದವಿದ್ದರೂ ಋಗ್ವೇದದಲ್ಲಿ ಋಷಿಗಳು ಇಂದ್ರಾದಿ ದೇವತೆಗಳನ್ನು ಹಸ್ತಪಾದಾದಿ ಅವಯವವುಳ್ಳವರನ್ನಾಗಿ ಭಾವಿಸಿ ಸ್ತುತಿಸಿರುವುದು ಕಂಡುಬರುವುದು. ಈ ವಿಷಯದಲ್ಲಿ ಯಾಸ್ಕರು—

ಅಥಾಕಾರಚಿಂತನಂ ದೇವತಾನಾಂ । ಪುರುಷವಿಧಾಃ ಸ್ಯುರಿತ್ಯೇಕಂ । ಚೇತನಾವದ್ವದ್ಧಿ ಸ್ತುತಯೋ ಭವಂತಿ । ತಥಾಭಿಧಾನಾನಿ । ಅಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯಂತೇ । ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ । ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ।

(ನಿ. ೭–೬)

ಎಂದು ನಿರ್ವಚನವನ್ನು ಹೇಳಿದ್ದಾರೆ. ಈಗ ದೇವತೆಗಳ ಆಕಾರ, ರೂಪ ಮೊದಲಾದವುಗಳನ್ನು ವಿಮರ್ಶೆಮಾಡೋಣ ದೇವತೆಗಳಿಗೆ ಪುರುಷರಿಗಿರುವಂತೆ ಹಸ್ತಾದ್ಯವಯವಾದಿಗಳಿರುನವು ಎಂದು ಕೆಲವರ ಮತ, ಮನುಷ್ಯರಿಗೆ ಚೈತನ್ಯವಿರುವಂತೆ ದೇವತೆಗಳಿಗೂ ಚೈತನ್ಯ ಪ್ರಜ್ಞೆ ಮೊದಲಾದವು ಇರುವವು ಎಂದು ಭಾವಿಸಿ ಹಸ್ತಾದ್ಯವಯವಗಳೂ ಆಕಾರವೂ ಮನುಷ್ಯರಿಗಿರು ವಂತೆ ದೇವತೆಗಳಿಗೂ ಇರುವುದರಿಂದ ಅವರನ್ನು ಚೈತನ್ಯಯುಕ್ತರೆಂದು ಭಾವಿಸಿ ಅದರಂತೆ ಸ್ತುತಿಸಲಾಗುವುದು. ಈ ಕಾರಣಕ್ಕಾಗಿಯೇ ಇಂದ್ರ ಮೊದಲಾದ ದೇವತೆಗಳನ್ನು ವರ್ಣಿಸುವಾಗ ಅದರ ಹಸ್ತಾದಿಗಳನ್ನು ವರ್ಣಿಸುವುದು ರೂಢಿಯು ಪ್ರಕೃತ ಋಕ್ಕಿನ ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ ಎಂಬ ಮೂರನೆಯ ಪಾದದಲ್ಲಿ ಇಂದ್ರನ ಬಾಹುಗಳ ವರ್ಣನೆ ಇದೆ. ಅದರಂತೆ,

ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ ।
ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥

(ಋ. ಸಂ. ೩-೩೦-೫)

ಎಂಬ ಋಕ್ಕಿನಲ್ಲಿಯೂ ಇಂದ್ರನ ಅವಯವ ವರ್ಣನೆ ಇರುವುದನ್ನು ನಿರುಕ್ತಕಾರರು ಉದಾಹರಿಸಿದ್ದಾರೆ.

ದೇವತೆಗಳಿಗೆ ಪುರುಷಾದಿರೂಪಗಳಲ್ಲದೆ ಪುರುಷರಿಗಿರುವಂತೆ ನಾನಾ ವಿಧ ದ್ರವ್ಯ ಸಂಯೋಗವೂ ಉಂಟೆಂದು ಅನೇಕ ವರ್ಣನೆಗಳಿವೆ—

ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ ।

(ನಿ. ೭-೬)

ಈ ವಿಷಯದಲ್ಲಿ—

ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ ।
ಅಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮುಖ ಮಾ ಮೃಧಸ್ಕಃ ॥

(ಋ. ಸಂ. ೨-೧೮-೪)

ಎಂಬ ಋಕ್ಕಿನ ಉದಾಹರಣೆಯನ್ನು ಕೊಟ್ಟು ಪುರುಷರಿಗೆ ಗೋವು, ಅಶ್ವಗಳು ಮೊದಲಾದವುಗಳಿರುವಂತೆ ಇಂದ್ರಾದಿ ದೇವತೆಗಳಿಗೂ ಅವುಗಳಿರುವವು ಎಂಬುದನ್ನು ಈ ಋಕ್ಕಿನಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಎಲೈ ಇಂದ್ರನೇ, ನೀನು ನಿನ್ನ ಹರೀ ಎಂಬ ಹೆಸರಿನ ಎರಡು ಕುದುರೆಗಳಿಂದ ಕೂಡಿ (ರಥದಲ್ಲಿ ಕುಳಿತು) ನಮ್ಮ ಯಜ್ಞಕ್ಕೆ ಬಾ ಅಥವಾ ನಾಲ್ಕು, ಆರು, ಎಂಟು, ಹತ್ತು ಕುದುರೆಗಳಿಂದಲಾದರೂ ಕೂಡಿ ಸೋಮಪಾನಾರ್ಥವಾಗಿ ಇಲ್ಲಿಗೆ ಬಾ ಎಂದು ಹೇಳಿರುವುದ ಲೋಕವ್ಯವಹಾರದಲ್ಲಿ ಪುರುಷರಿಗೆ ಸ್ವತ್ತುಗಳಿರುವಂತೆಯೇ ದೇವತೆಗಳಿಗೂ ಅಶ್ವಾದಿಗಳಿರುವುವು ಎಂದಭಿಪ್ರಾಯವು ವ್ಯಕ್ತವಾಗಿರುವುದು. ಮತ್ತು

ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।
ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥

(ಋ. ಸಂ. ೩-೫೩-೬)

ಎಂಬ ಈ ಋಕ್ಕಿನಲ್ಲಿ ಪುರುಷರಿಗಿರುವಂತೆ ಇಂದ್ರನಿಗೂ ಮನೆಯಲ್ಲಿ ಪತ್ನಿಯೂ, ರಥ, ಕುದುರೆಗಳೂ ಇರುವ ವಿಷಯದ ಪ್ರಸ್ತಾಪವಿದೆ.

ಇನ್ನೂ ಪುರುಷರ ಕರ್ಮಗಳಂತೇ ದೇವತೆಗಳ ಕರ್ಮಗಳೂ ಇರುವುವು ಎಂಬ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಸಮರ್ಥಿಸಿದ್ದಾರೆ—

ಅಥಾಪಿ ಪೌರುಷವಿಧಿಕೈಃ ಕರ್ಮಭಿಃ ।

(ನಿ.೭-೬)

ಇದಂ ಹವಿರ್ಮಘವನ್ ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ ।
ತುಭ್ಯಂ ಸುತೋ ಮಘವನ್ ತುಭ್ಯಂ ಪಕ್ವೋಽದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥

(ಋ. ಸಂ. ೧೦-೧೧೬-೭)

ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿಧ್ಧಿಷ್ವ ಮೇ ಗಿರಃ
ಇಂದ್ರ ಸೋಮಮಿಮಂ ಮಮ ಕೃಷ್ವಾ ಯಜಶ್ಚಿದಂತರಂ ।

ಎಂಬ ಋಕ್ಕಗಳನ್ನು ಉದಾಹರಣೆಗಾಗಿ ಕೊಟ್ಟಿದ್ದಾರೆ. ಮೊದಲನೆಯ ಋಕ್ಕಿನಲ್ಲಿ ಇಂದ್ರನಿಗಾಗಿ ಹವಿಸ್ಸನ್ನೂ ಸೋಮನನ್ನೂ ಅರ್ಪಿಸುವುದೂ ಅದನ್ನು ಇಂದ್ರನು ಪಾನಮಾಡಬೇಕೆಂದು ಪ್ರಾರ್ಥಿಸುವುದು ಉಕ್ತವಾಗಿದೆ. ಎರಡನೇ ಋಕ್ಕಿನಲ್ಲಿ ನಮ್ಮ ಆಹ್ವಾನವನ್ನೂ ಸ್ತೋತ್ರವನ್ನೂ ಕೇಳಬೇಕೆಂಬ ಪ್ರಾರ್ಥನೆ ಇದೆ. ಎಂದರೆ ಮನುಷ್ಯ ಕರ್ಮದಂತೆ, ಮನುಷ್ಯರು ಮಾಡುವಂತೆ ಭಕ್ಷಿಸುವುದು, ಸೋಮರಸವನ್ನು ಪಾನಮಾಡುವುದು ಆಹ್ವಾನವನ್ನು ಮತ್ತು ಸ್ತೋತ್ರವನ್ನು ಆಲಿಸಿ ಕೇಳುವುದು ಮೊದಲಾದ ಮನುಷ್ಯೋಚಿತವಾದ ಕರ್ಮಗಳನ್ನು ಇಂದ್ರಾದಿ ದೇವತೆಗಳಲ್ಲಿಯೂ ಆರೋಪಮಾಡಿ ಸ್ತುತಿಸಲಾಗಿದೆ. ಈ ರೀತಿ ಪುರುಷರಂತೆ ದೇವತೆಗಳಿಗೆ ಆಕಾರ, ಹಸ್ತಾದ್ಯವಯವಗಳು, ಭಕ್ಷಣಾದಿ ಕರ್ಮಗಳು ದೇವತೆಗಳಿಗೂ ಇರುವುವು ಎಂಬುದು ಕೆಲವರ ವಾದವು. ಮತ್ತೆ ಕೆಲವರು ದೇವತೆಗಳಿಗೆ ಮನುಷ್ಯರಿಗಿರುವಂತೆ ಆಕಾರಾದಿಗಳಿಲ್ಲವೆಂದೂ, ಕರ್ಮಗಳೂ ಮನುಷ್ಯರು ಆಚರಿಸುವ ಕರ್ಮಗಳಿಗಿಂತ ಭಿನ್ನವಾಗಿರುವುದೆಂತಲೂ ದೇವತೆಗಳ ಮಹತ್ತ್ವವನ್ನು ವರ್ಣಿಸುವುದಕ್ಕಾಗಿ ಉತ್ಪ್ರೇಕ್ಷೆಯಿಂದ ಆ ರೀತಿ ವರ್ಣಿಸಲಾಗಿರುವುದೆಂದೂ ಅಭಿಪ್ರಾಯಪಡುವರು—

ಅಪುರುಷವಿಧಾಃ ಸ್ಯುರಿತ್ಯಪರಂ ॥ (ನಿ. ೭–೭)

ಪುರುಷರಿಗಿರುವಂತೆ ದೇವತೆಗಳಿಗೆ ರೂಪ, ಆಕಾರ, ಕರ್ಮ ಮೊದಲಾದುವುಗಳಿಲ್ಲವೆಂದೂ ಅವುಗಳ ವೈಶಿಷ್ಟ್ಯವೇ ಬೇರೆ ವಿಧವೆಂದೂ ಮತ್ತೆ ಕೆಲವರು ಅಭಿಪ್ರಾಯಪಡುವರು . ಹೇಗೆಂದರೆ—

ಅಪಿ ತು ಯದ್ದೃಶ್ಯತೇಽಪುರುಷವಿಧಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾ ಇತಿ
(ನಿ. ೭–೭)

ಕೆಲವು ದೇವತೆಗಳ ರೂಪಗಳೂ, ಕರ್ಮಗಳು ಪುರುಷರಿಗಿರುವಂತ ಕಾಣಿಸುವುದಾದರೂ ಅವುಗಳು ಆ ರೀತಿಯಾಗಿಲ್ಲ. ಅಗ್ನಿ ವಾಯು, ಆದಿತ್ಯ, ಪೃಥಿವಿ, ಚಂದ್ರಮಾ ಇತ್ಯಾದಿ ದೇವತೆಗಳ ರೂಪ ಮತ್ತು ಕರ್ಮಗಳು ಪುರುಷರ (ಮನುಷ್ಯರ) ಕರ್ಮಗಳಂತೆ ಕಾಣಿಸುವುದಾದರೂ, ಅವುಗಳ ರೀತಿಯೆ ಬೇರೆ. ಆ ಕರ್ಮಗಳಿಗೂ ಮನುಷ್ಯರ ಕರ್ಮಗಳಿಗೂ ವಿಶೇಷ ವ್ಯತ್ಯಾಸವಿರುವುದು.

ಯಥೋ ಏತಚ್ಚೇತನಾ ವದದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂತೇ ಯಥಾ
ಕ್ಷಪ್ರಭೃತೀನ್ಯೋಷಧಿಪರ್ಯಂತಾನಿ ॥ (ನಿ. ೭೯೭)

ಹೇಗೆಂದರೆ, ಅಗ್ನ್ಯಾದಿದೇವತೆಗಳನ್ನು ಸ್ತುತಿಸುವಾಗ ದೇವತೆಗಳಿಗೆ ಚೇತನರಿಗಿರುವಂತೆಯೇ ಭಾವಿಸಿ ಸ್ತುತಿಸಲ್ಪಡುವುವು. ಜೂಜಾಡುವಾಗ ದಾಳಗಳನ್ನು ಸಂಬೋಧಿಸುವರು. ದಾಳಗಳು ಚೇತನಾರಹಿತವಾಗಿದ್ದರೂ ಚೇತನವಿರುವ ಪ್ರಾಣಿಗಳಂತೆ ಅವುಗಳನ್ನು ಸಂಬೋಧಿಸುವರು. ಓಷಧಿಗಳನ್ನು ಎಂದರೆ ಗಿಡ, ಮರ, ಬಳ್ಳಿ ಇವುಗಳನ್ನೂ ಚೇತನವಿರುವಂತೆಯೇ ಭಾವಿಸಿ ಸಂತೂಧಿಸುವರು।

ಯಥೋ ಏತತ್ಪಾರುಷವಿಧಿಕೈರಂಗೈಃ ಸಂಸ್ತೂಯಂತ ಇತ್ಯಚೇತನೇಷ್ವಪ್ಯೇತದ್ಭವತ್ಯಭಿಕ್ರಂದತಿ ಹರಿತೇಭಿ
ರಾಸಭಿರಿತಿ ಗ್ರಾವಸ್ತುತಿಃ ।

ಹಾಗೆಯೇ ಅಚೇತನವಸ್ತುಗಳನ್ನೂ ಪುರುಷಸಂಬಂಧವಾದ ಅಂಗವುಳ್ಳವುಗಳಂತೆಯೇ ಭಾವಿಸಿ ಸ್ತುತಿಸಲಾಗಿರುವುದು ಔಷಧಿಗಳು, ಸೋಮವನ್ನು ಜಜ್ಜುವ ಕಲ್ಲು ಇವುಗಳು ಅಚೇತನವಾದುವು. ಆದರೂ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಕೆ ಉಂಟಾಗುವ ಶಬ್ದವನ್ನು –ಆ ಕಲ್ಲುಗಳು ತಮ್ಮ ಹಸುರಾದ ಬಾಯಿಗಳಿಂದ ಕೂಗುತ್ತವೆ—ಎಂದು ವರ್ಣಿಸ ಲಾಗಿದೆ. ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಪ್ರಾಣಿಗಳಿಗಿರುವಂತೆ ಬಾಯಿ ಇಲ್ಲ. ಆದರೂ ಕಲ್ಲಿನ ಮೇಲೆ ಲತೆ ಯನ್ನಿಟ್ಟು ಜಜ್ಜುವಾಗ ಆಗುವ ಶಬ್ದವನ್ನು ಕಲ್ಲುಗಳೇ ತಮ್ಮ ಬಾಯಿನಿಂದ ಮಾಡುತ್ತವೆ ಎಂದು ಋಷಿಯು ಆಲಂಕಾ ರಿಕವಾಗಿ ವರ್ಣಿಸಿದ್ದಾನೆ. ಸೋಮಲತೆಯನ್ನು ಜಜ್ಜುವಾಗ ಆ ಲತೆಗಳ ಹಸುರಾದ ವರ್ಣವು ಕಲ್ಲುಗಳಿಗೆ ಅಂಟಿಕೊಳ್ಳು ವುದರಿಂದ ಕಲ್ಲುಗಳ ಬಾಯಿಯು ಹಸರು ವರ್ಣವುಳ್ಳದ್ದಾಗಿದೆ ಎಂಬುದನ್ನು ಸೂಚಿಸುವುದಕ್ಕಾಗಿ ಕಲ್ಲುಗಳ ಬಾಯಿಯು ಹಸರು ವರ್ಣವುಳ್ಳದ್ದಾಗಿವೆ ಎಂದು ಉತ್ಪ್ರೇಕ್ಷೆಯುಳ್ಳ ವರ್ಣನೆಮಾಡಲಾಗಿದೆ.

**ಯಥೋ ಏತತ್ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇತದಪಿ ತಾದೃಶಮೇವ। ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ಇತಿ ನದೀಸ್ತುತಿಃ ॥**

ಪುರುಷರಿಗಿರುವಂತೆ ಅಚೇತವಸ್ತುಗಳಿಗೂ ದ್ರವ್ಯಸಂಯೋಗವಿರವ ವಿಷಯದಲ್ಲಿ—ನದಿಯು (ಸಿಂಧುವು) ತನ್ನ ಕುದುರೆಗಳನ್ನು ಸುಖಕರವಾದ ರಥಕ್ಕೆ ಹೂಡಿದಳು— ಇತ್ಯಾದಿ ವಾಕ್ಯಗಳಲ್ಲಿರುವಂತೆ ನದಿಯು ಅಚೇತನವಸ್ತುವಾದ್ದರಿಂದ ಅದಕ್ಕೆ ರಥವೂ ಇಲ್ಲ. ಆದರೂ ನದಿಯನ್ನು ಸ್ತುತಿಸುವಾಗ ಋಷಿಯು ಮನುಷ್ಯರಿಗಿರುವಂತೆ ನದಿಗೂ ದ್ರವ್ಯಸಂಯೋಗವನ್ನು (ಸ್ವತ್ವನ ಹೊಂದಿರುವಿಕೆ) ಆರೋಪಮಾಡಿ ಸ್ತುತಿಸಿರುವನು.

**ಯಥೋ ಏತತ್ಪೌರುಷವಿಧಿಕೈಃ ಕರ್ಮಭಿರಿತ್ಯೇತದಪಿ ತಾದೃಶಮೇವ। ಹೋತುಶ್ಚಿತ್ಪೂರ್ವೇ ಹವಿ- ರದ್ಯಮಾಶತ ಇತಿ ಗ್ರಾವಸ್ತುತಿರೇವ ॥**

(ನಿ. ೭-೭)

ಕರ್ಮಗಳ ವಿಷಯದಲ್ಲಿಯೂ ಪುರುಷರಿಗಿರುವಂತೆಯೇ ಅಚೇತನವಸ್ತುಗಳಾದ ಕಲ್ಲು ಮೊದಲಾದವುಗಳಿಗೂ ಕರ್ಮಕರ್ತೃತ್ವ ವನ್ನು ಆರೋಪಿಸಿ ಸ್ತುತಿಸಲಾಗಿದೆ. ಸೋಮಲತೆಯನ್ನು ಕಲ್ಲಿನಿಂದ ಜಜ್ಜುವಾಗ ಲತೆಯಿಂದ ಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದು ಸಹಜವಷ್ಟೆ. ಇವನ್ನೇ ಋಷಿಯು ಸೋಮಾಭಿಷವಣಸಾಧನವಾದ ಕಲ್ಲುಗಳು ಸೋಮರಸವನು ಹೋತೃ ಮೊದಲಾದ ಯಜ್ಞಕರ್ತರಿಗಿಂತಲೂ ಮೊದಲೇ ರುಚಿನೋಡುತ್ತೇವೆ—ಎಂದು ವರ್ಣಿಸಿದ್ದಾನೆ. ಕಲ್ಲಿಗೆ ಬಾಯಿ ಇಲ್ಲ ಅದಕ್ಕೆ ರುಚಿನೋಡುವ ಸಾಮರ್ಥ್ಯವೂ ಇಲ್ಲ. ಆದರೂ ಲತೆಯನ್ನು ಕಲ್ಲಿನಿಂದ ಜಜ್ಜುವಾಗ ಹೊರಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದರಿಂದ ಕಲ್ಲು ಎಲ್ಲರಿಗಿಂತ ಮೊದಲೇ ಸೋಮರಸದ ರುಚಿ ನೋಡುತ್ತದೆ ಎಂದು ವರ್ಣಿಸಿರುವುದು ಉತ್ಪ್ರೇಕ್ಷೆ ಯುತವಾಗಿಯೂ ಅಲಂಕಾರಿಕವಾಗಿಯೂ ಇದೆ. ವಾಸ್ತವವಾತ ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಬಾಯಿ ಯಾಗಲೀ, ರುಬಿನೋಡುವ ಸಾಮರ್ಥ್ಯವಾಗಲಿ ಇಲ್ಲವೆಂಬ ವಿಷಯವು ಸರ್ವರಿಗೂ ಅನುಭವಸಿದ್ಧವಾಗಿದೆ.

**ಅಪಿ ವೋಭಯವಿಧಾಃ ಸ್ಯುಃ । ಅಪಿ ವ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುರ್ಯಥಾ ಯಜ್ಞೋ ಯಜಮಾನಸ್ಯ । ಏಷ ಚಾಖ್ಯಾನಸಮಯಃ ॥** (ನಿ. ೭-೭)

ಆದ್ದರಿಂದ ಈ ಎರಡು ವಿಧವಾದ ಮತಗಳಿಗ ಅವಕಾಶವಿದೆ. ಪೃಥಿವ್ಯಾದಿ ವಸ್ತುಗಳು ಅಚೇತನವಾದರೂ ಚೇತನಾಸಹಿತರಾದ ವರಂತೆ ಪ್ರವರ್ತಿಸುವುದರಿಂದ ಅವುಗಳನ್ನು ಚೇತನರಂತೆಯೂ ಅಚೇತನರಂತೆಯೂ ಎರಡು ವಿಧವಾಗಿಯೂ ಭಾವಿಸುವುದರಲ್ಲಿ

ಭಿನ್ನಾಭಿಪ್ರಾಯವಿದ್ದರೂ ಆ ಎರಡು ವಿಧಗಳನ್ನೂ ಸರಿಯೆಂದು ಒಪ್ಪಿಸಬಹುದು. **ಯಜ್ಞೋ ಯಜ್ಞಮಾನಸ್ಯ** ಎಂಬ ವಾಕ್ಯದಲ್ಲಿ ಯಜಮಾನನು ಚೇತನಾಸಹಿತನು. ಯಜ್ಞವು ಅಚೇತನವು. ಆದರೂ ಯಜ್ಞದ ವಿಷಯವನ್ನು ಮಾತನಾಡು ವಾಗ—ಯಜ್ಞವು ಯಜಮಾನನಿಗೆ ಉತ್ತಮಸ್ಥಾನವಾದ ಸ್ವರ್ಗವನ್ನು ಒದಗಿಸಿ ಕೊಡುವುದು—ಇತ್ಯಾದಿ ವಾಕ್ಯಗಳಲ್ಲಿ ಯಜ್ಞವು ಚೇತನಾಸಹಿತವಾಗಿರುವಂತೆಯೇ ವ್ಯವಹರಿಸಲ್ಪಡುವುದು. ಆದ್ದರಿಂದ ಅಚೇತನವಸ್ತುಗಳನ್ನು ವರ್ಣಿಸುವಾಗ ಚೇತನಾಸಹಿತವಾಗಿರುವಂತೆ ವರ್ಣಿಸುವುದರಲ್ಲಿ ತಪ್ಪೇನಿಲ್ಲ. ಉದಾಹರಣೆಗೆ ಹೇಳುವುದಾದರೆ—**ಪೃಥಿವೀ ಸ್ತ್ರೀರೂಪೇಣ ಭಾರಾವತರಣಾಯ ಬ್ರಹ್ಮಾಣಂ ಯಯಾಚೇ । ಅಗ್ನಿಶ್ಚ ಬ್ರಾಹ್ಮಣರೂಪೇಣ ವಾಸುದೇಹಾರ್ಜುನಾವುಭೌ ಖಾಂಡಂ ಯಯಾಚೇ । ಪುರುಷರೂಪೇಣಾಗ್ನಿರೂಪೇಣ ಚ ಖಾಂಡವಂ ದದಾಹ ।** ಪೃಥಿವಿಯು ಸ್ತ್ರೀರೂಪವನ್ನು ಧರಿಸಿ ಭೂಭಾರವನ್ನು ಇಳುಹಬೇಕೆಂದು ಬ್ರಹ್ಮಣನನ್ನು ಪ್ರಾರ್ಥಿಸಿದಳು; ಅಗ್ನಿಯು ಬ್ರಾಹ್ಮಣರೂಪದಿಂದ ಕೃಷ್ಣಾರ್ಜುನರನ್ನು ಸಮೀಪಿಸಿ ಇಂದ್ರನ ಖಾಂಡವವನವನ್ನೂ ಪ್ರಾರ್ಥಿಸಿದನು. ಅಗ್ನಿಯು ಪುರುಷ ಮತ್ತು ಅಗ್ನಿರಪದಿಂದ ಖಾಂಡವವನವನ್ನು ದಹಿಸಿದನು. ಇತ್ಯಾದಿ ವಾಕ್ಯಗಳಲ್ಲಿ ಅಗ್ನಿ, ಪೃಥಿವೀ ಮೊದಲಾದ ನಿರ್ಜೀವವಸ್ತುಗಳು ಅಥವಾ ಅವುಗಳ ಅಭಿಮಾನಿದೇವತೆ ಗಳು ಪುರುಷರೂಪವನ್ನು ಧರಿಸಿ ನಾನಾಕಾರ್ಯಗಳನ್ನು ಮಾಡಿರುವರೆಂದು ಪುರಾಣಾದಿಗಳಲ್ಲಿ ಅನೇಕ ವರ್ಣನೆಗಳಿವೆ. ಆದ್ದರಿಂದ ಇವುಗಳನ್ನು ಚೇತನಾ ಮತ್ತು ಅಚೇತನಾ ಎಂದು ಎರಡು ವಿಧವಾಗಿ ಭಾವಿಸುವುದೂ ಸರಿಯೆಂಬುದೇ ಸಿದ್ಧಾಂತವು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಆಶ್ರುತ್ಕರ್ಣ ಶ್ರುಧೀಹವಂ ನೂ ಚಿದ್ದಧಿಷ್ವ ಮೇ ಗಿರಃ ।**
**ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥**

(ಋ. ಸಂ. ೧–೧೦೧೯)

ಇದರ ಅರ್ಥವು—ಎಲೈ ಇಂದ್ರನೇ, ನಿನ್ನ ಕಿವಿಗಳ ಎಲ್ಲವನ್ನೂ (ಎಲ್ಲಾ ಕಡೆಯಲ್ಲಿಯೂ) ಕೇಳಲು ಸಮರ್ಥವಾಗಿರುವವು ನದುದರಿಂದ ನಾವು ಮಾಡುವ ಆಹ್ವಾನವನ್ನು ಬೇಗನೇ ಕೇಳು. ನನ್ನ ಮಾತನ್ನು ಮನಸ್ಸಿನಲ್ಲ ನೆನಪಿಡು ಮತ್ತು ನಾನು ಮಾಡುವ ಈ ಸ್ತೋತ್ರವನ್ನು ಅಥವಾ ಸ್ತೋತ್ರರೂಪವಾದ ವಾಕ್ಯಗಳನ್ನೂ ನಿನ್ನ ಸ್ನೇಹಿತನ ಮಾತಿನಂತೆ ಅತಿ ಪ್ರಿಯವಾದವು ಗಳೆಂದು ಭಾವಿಸು.

**ಆಶ್ರುತ್ಕರ್ಣ—ಆ ಸಮಂತಾತ್ ಶೃಣುತೆ ಇತ್ಯಾಶ್ರುತ್ । ತಾದೃಶೌ ಕರ್ಣೌ ಯಸ್ಯ ಸಃ । ಸರ್ವತಃ ಶ್ರೋತಾರೌ ಕರ್ಣೌ ಯಸ್ಯ ತಾದೃಗಿಂಪ್ರ**—ಆಶ್ರುತ್ ಎಂದರೆ ಎಲ್ಲಾ ಕಡೆಯಲ್ಲಿಯೂ ಸರ್ವ ಸ್ಥಳಗಳಲ್ಲಿಯೂ ಕೇಳುವ ಎಂದು. ಇಂತಹ ಕರ್ಣಗಳುಳ್ಳವನಿಗೆ ಆಶ್ರುತ್ಕರ್ಣ ಎಂದು ಹೆಸರು. ನಾವು ಮಾಡುವ ಸ್ತೋತ್ರವನ್ನೂ ನಮ್ಮ ವಾಕ್ಯ ಗಳನ್ನೂ ಇಂದ್ರನು ಎಲ್ಲಿದ್ದರೂ ಕೇಳುವ ಸಾಮರ್ಥವುಳ್ಳವನೆಂದಭಿಪ್ರಾಯವು.

**ಶ್ರುಧಿ, ನು, ಕೃಷ್ವ**—ಈ ಶಬ್ದಗಳ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘ ವಾಗಿರುವುದು.

**ದಧಿಷ್ವ ಮೇ ಗಿರಃ**—ನಮ್ಮ ಮಾತುಗಳನ್ನು ಅಥವಾ ನಮ್ಮ ಪ್ರಾರ್ಥನೆಯನ್ನು ನಿನ್ನ ಚಿತ್ತದಲ್ಲಿ ಧರಿಸಿ ಎಂದರೆ ನಾವು ಮಾಡುವ ಪ್ರಾರ್ಥನೆಯನ್ನು ಗಮನವಿಟ್ಟು ಕೇಳಿ ಅದನ್ನು ಮರೆಯದಂತೆ ಜ್ಞಾಪಕದಲ್ಲಿಡು ಎಂದರ್ಥವು.

ಯುಜಶ್ಚಿ ವಂತರಂ — ಸ್ನೇಹಿತರ ಮಾತಿನಂತೆ ಪ್ರಿಯವಾದುದನ್ನಾಗಿ ಎಂದು ಭಾಷ್ಯಕಾರರು ಅರ್ಥಮಾಡಿರುವರು. ಇಲ್ಲಿ ಸ್ನೇಹಿತರೆಂಬ ಪದವನ್ನು ಸೂಚಿಸುವ ಯಾವ ಶಬ್ದವೂ ಇಲ್ಲದಿದ್ದರೂ ಅರ್ಥವು ಹೊಂದುವಂತೆ ಭಾಷ್ಯಕಾರರ ಸಖ್ಯುಃ ಎಂಬ ಶಬ್ದವನ್ನು ಅಧ್ಯಾಹಾರ ಮಾಡಿರುವರು.

ಈರೀತಿ ಯಾಸ್ಕಮುನಿಗಳಿಂದ ರಚಿತವಾದ ನಿರುಕ್ತಭಾಷ್ಯದ ಏಳನೇ ಅಧ್ಯಾಯದಲ್ಲಿ ಆರನೆಯಖಂಡ ಸಮಾಪ್ತವಾಗಿದೆ.

---

## ಅಥ ಸಪ್ತಮಃ ಖಂಡಃ

## ಏಳನೆಯ ಖಂಡವು

ಅಪುರುಷವಿದಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾ ಇತಿ ಯಥೋ ಏತಚ್ಚೇತನಾವದ್ವದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂ-ತೇ ಯಥಾಕ್ಷಪ್ರಭೃತೀನ್ಯೋಷಧಿಪರ್ಯಂತಾನಿ (ನಿಘ-೫-೩-೪|೨೨) ಯಥೋ ಏತತ್ಪೌ-ರುಷವಿಧಿಕೈರಂಗೈಃ ಸಂಸ್ತೂಯಂತ ಇತ್ಯಚೇತನೇಷ್ವಪ್ಯೇತತ್ಭವತ್ಯಪಿ ಕ್ರಂದಂತಿ ಹರಿತೇ-ಭಿರಾಸಭಿರಿತಿ ಗ್ರಾವಸ್ತುತಿರ್ಯಥೋ ಏತತ್ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇತ-ದಪಿ ಶಾದೃಶಮೇವ ಸುಖಂ ರಥಂ ಯುಯುಜೇ ಸಿಂಧುರಶ್ವಿನಾ ಮಿತಿನದೀಸ್ತುತಿ ರ್ಯಥೋ ಏತತ್ಪೌರುಷವಿಧಿಕೈಃ ಕರ್ಮಭಿರಿತ್ಯೇತದಪಿ ತಾದೃಶಮೇವ ಹೋತುಶ್ಚಿ-ತ್ಪೂರ್ವೇ ಹವಿರದ್ಯಮಾಶತೇತಿ ಗ್ರಾವಸ್ತುತಿರೇವಾಪಿ ವೋಭಯವಿಧಾ ಸ್ಯುರಪಿ ವಾ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುರ್ಯಥಾ ಯಜ್ಞೋ ಯಜ-ಮಾನಸ್ಯೈಷ ಚಾಖ್ಯಾನಸಮಯಃ || ೭ ||

ಅಪುರುಷವಿಧಾಃ ಸ್ಯುರಿತ್ಯಪರಮ್ ||

ಪೂರ್ವಖಂಡದಲ್ಲಿ ದೇವತೆಗಳಿಗೆ ಪುರುಷಸ್ವರೂಪವನ್ನು ಸಮರ್ಥಿಸಿ ಇಲ್ಲಿ ಪುರುಷಾಕಾರವಿಲ್ಲವೆಂದು ವಿವರಿಸುತ್ತಾರೆ. ಕೆಲವು ಮಂತ್ರಗಳ ಪರಿಶೀಲನೆಯಿಂದ ಪುರುಷಸ್ವರೂಪವಿಲ್ಲವೆಂದೂ ವ್ಯಕ್ತವಾಗುತ್ತದೆ. ನೀರು ಮತ್ತು ವಿದ್ಯುತ್ಸಂಯೋಗದಿಂದ ಮಳೆಯಾದರೂ ಅದು ಇಂದ್ರವೃತ್ರಾಸುರರ ಯುದ್ಧವೆಂದು ಕಲ್ಪಿಸುವಂತೆ ಪುರುಷಾಕಾರವು ರೂಪಕವಿಲ್ಲದೆ ವಾಸ್ತವಸ್ವರೂಪ ವಲ್ಲವೆಂದು ಅವರ ಸಿದ್ಧಾಂತ ಇದು ಹಿಂದೆ (ನಿ–೨–೧೬–೨) ವಿವೃತವಾಗಿದೆ, ಇದನ್ನೇ ಮುಂದೆ ಸಮರ್ಥಿಸುತ್ತಾರೆ.

**ಅಪಿ ತು ಯದ್ದೃಶ್ಯತೇಽಪುರುಷವಿಧಂ ತತ್ ॥ ತದ್ಯಥಾ-ಅಗ್ನಿರ್ವಾಯು ರಾದಿತ್ಯಃ ಪೃಥಿವೀ, ಚಂದ್ರಮಾ ಇತಿ ॥**

ದೇವತೆಗಳ ಸ್ವರೂಪವನ್ನು ನೋಡುವುದಾದರೆ ಅದು ಪುರುಷಾಕಾರವಾಗಿಯೇ ಇರುತ್ತದೆ. ಅಗ್ನಿ ವಾಯು ಮುಂತಾದವರ ಸ್ವರೂಪವು ಮನುಷ್ಯರಂತಿಲ್ಲವೆಂದು ಪ್ರತ್ಯಕ್ಷವಾಗಿಯೇ ತಿಳಿಯಬಹುದು. ಪ್ರತ್ಯಕ್ಷದೃಷ್ಟವಾದುದನ್ನು ಬಿಟ್ಟು ಅದೃಷ್ಟವನ್ನು ಕಲ್ಪಿಸುವುದರಲ್ಲಿ ಯಾವ ಪ್ರಮಾಣವು ಇಲ್ಲಿ. ಹೀಗೆ ಕೆಲವು ದೇವತೆಗಳಲ್ಲಿ ಪ್ರತ್ಯಕ್ಷದಿಂದಲೇ ಪುರುಷಾಕಾರವಿಲ್ಲವೆಂದು ಸಿದ್ಧವಾದ ಸಾಮಾನ್ಯನಿಯಮದಿಂದ ಇಂದ್ರಾದಿಗಳಿಗೂ ಮನುಷ್ಯದೇಹವಿಲ್ಲವೆಂದು ವ್ಯಕ್ತವಾಗುತ್ತದೆ. ಕೆಲವರಿಗೆ ದೇಹವಿದೆ, ಕೆಲವರಿಗೆ ದೇಹವಿಲ್ಲವೆಂದು ಕಲ್ಪಿಸುವುದು ನ್ಯಾಯವಲ್ಲ. ಆದುದರಿಂದ ದೇವತಾ ಸಾಮಾನ್ಯಕ್ಕೂ ಮನುಷ್ಯ ದೇಹವಿಲ್ಲವೆಂದು ಸಿದ್ಧಾಂತ.

**ಯಥೋ ಏತತ್-ಚೇತನಾವದ್ಧಿ ಸ್ತುತಯೋ ಭವಂತಿ ಇತಿ । ಅಚೇತನಾನ್ಯಪ್ಯೇವಂ ಸ್ತೂಯಂತೇ, ಯಥಾಕ್ಷ ಪ್ರಭೃತೀನ್ಯೋಷಧಿ-ಪರ್ಯಂತಾನಿ ॥**

ಮನುಷ್ಯದೇಹವಿಲ್ಲವೆನ್ನುವುದಾದರೆ ಪೂರ್ವದಲ್ಲಿ ಚೈತನ್ಯಸಂಬಂಧಾದಿ ಹೇತುಗಳಿಂದ ಮನುಷ್ಯ ಸ್ವರೂಪವಿದೆಯೆಂದು ಇರ್ಣಯಿಸಿರುವುದು ಹೇಗೆ ಎಂದರೆ ಅದಕ್ಕೆ ಅಲ್ಲಿ ಸಮಾಧಾನ ತೋರಿಸುತ್ತಾರೆ. ಪೂರ್ವೋಕ್ತಗಳಾದ ಹೇತುಗಳೆಲ್ಲವೂ ಅಸಮರ್ಥಗಳು ಅಂದರೆ ಮನುಷ್ಯದೇಹವುಳ್ಳವರೆಂದು ಸಾಧಿಸಲು ಸಾಮರ್ಥ್ಯವಿಲ್ಲ. ಏಕೆಂದರೆ ಮಂತ್ರಗಳಲ್ಲಿ ಅಚೇತನಗಳಾದ ಇಂದ್ರಿಯ ಓಷಧಿವನಸ್ಪತಿಗಳನ್ನು ಚೇತನಗಳಂತೆಯೇ ಸ್ತುತಿಸಿರುವುದು ಉಪಲಬ್ಧಗಳಾಗುತ್ತವೆ. ಇದರಿಂದ ಪೂರ್ವೋಕ್ತ ಹೇತುಗಳು ಅಸಾಧಾರಣಗಳಾಗಲಿಲ್ಲವೆಂದು ವ್ಯಕ್ತವಾಗುತ್ತದೆ.

**ಯಥೋ ಏತತ್—ಪೌರುಷವಿಧಿಕೈರಂಗೈಃ ಸಂಸ್ತೂಯಂತೇ । ಇತಿ । ಅಚೇತನೇಷ್ವಪ್ಯೇತದ್ಭವತಿ ॥**
**ಅಭಿಕ್ರಂದಂತಿ ಹರಿತೇಭಿರಾಸಭಿಃ (ಋ. ಸಂ. ೮-೪-೨೯) ಇತಿ ಗ್ರಾವ-ಸ್ತುತಿಃ ॥**

(ಋ. ಸಂ. ೪-೮-೨೯)

ಪುರುಷಾವಯವಗಳಂತೆ ದೇವತೆಗಳ ಅವಯವಗಳನ್ನು ಸ್ತುತಿಸುವುದರಿಂದ ಅವರು ಪುರುಷಸ್ವರೂಪಿಗಳೆಂದು ನಿರ್ಣಯಿಸಲೂ ಸಾಧ್ಯವಿಲ್ಲ. ಏಕೆಂದರೆ ಅಚೇತನಗಳಲ್ಲಿಯೂ ಈ ರೀತಿಯಾಗಿ ಅಂಗಗಳನ್ನು ವರ್ಣಿಸಿರುತ್ತಾರೆ. ಈ ಮಂತ್ರವು ಸೋಮಲತೆಗಳನ್ನು ಕುಟ್ಟುವ ಪಾಷಾಣವನ್ನು ಸ್ತುತಿಸುತ್ತದೆ. ಕಲ್ಲುಗಳಿಗೆ ವಾಸ್ತವವಾದ ಹಚ್ಚಗಾದ ಬಾಯಿ ಇರುವುದಿಲ್ಲ. ಇಲ್ಲಿ ಅಂತಹ ಬಾಯಿ ಇರುವುದೆಂದು ವರ್ಣಿಸಿರುತ್ತದೆ. ಆದುದರಿಂದ ಇಂದ್ರಾದಿಗಳಿಗೂ ವಾಸ್ತವವಲ್ಲದ ತೋಳುಮುಷ್ಟಿ ಮುಂತಾದುವುಗಳ ಸಂಬಂಧದಿಂದ ಅಲ್ಲಲ್ಲಿ ಸುತ್ತಿಸುತ್ತಾರೆ. ಇದು ಮನುಷ್ಯದೇಹವುಳ್ಳವರೆಂಬ ನಿರ್ಣಯಕ್ಕೆ ಕಾರಣವಾಗಲಾರದು.

**ಯಥೋ ಏತತ್ — ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇ ತದಪಿ ತಾದೃಶಮೇವ ||**

**ಸುಖಂ ರಥಂ ಯುಯುಜೇ ಸಿಂಧುರಶ್ವಿನಮ್ ಇತಿ ನದೀಸ್ತುತಿಃ ||**

(ಋ. ಸಂ. ೮-೩-೭)

ಪುರುಷನಿಗೆ ಬಾಹ್ಯವಸ್ತುಗಳ ಸಂಬಂಧವಿದ್ದಂತೆ ದೇವತೆಗಳಿಗೂ ವರ್ಣಿಸಿರುವುದರಿಂದ ಅವರು ಮನುಷ್ಯರೂಪವುಳ್ಳವರೂ ಎಂದು ಸಮರ್ಥಿಸಿರುವುದೂ ಸರಿಯಲ್ಲ. ಏಕೆಂದರೆ ಅಚೇತನಗಳಾದ ನದ್ಯಾದಿಗಳಿಗೂ ಈ ವಸ್ತುಸಂಬಂಧವನ್ನು ವರ್ಣಿಸುತ್ತಾರೆ. ನದೀಸ್ತುತಿಯನ್ನು ಹೇಳುವಾಗ ಅದಕ್ಕೆ ರಥ,ಕುದುರೆ ಮುಂತಾದುವುಗಳ ಸಂಬಂಧವನ್ನು ಹೇಳಿರುತ್ತಾರೆ. ಇದು ಔಪಚಾರಿಕವಲ್ಲದೆ ವಾಸ್ತವಸ್ಥಿತಿಯಲ್ಲ. ಹರಿಯುವನೀರು ರಥದಲ್ಲಿ ಕುಳಿತು ಬರುವುದು ಅಸಾಧ್ಯ ಸ್ತುತಿಗೋಸ್ಕರ ರೂಪಕವನ್ನು ಕಲ್ಪಿಸಿ ಹೇಳಿದೆ. ಅದರಂತೆ ಇಂದ್ರಾದಿಗಳನ್ನು ಸ್ತುತಿಸುವುದಕ್ಕೋಸ್ಕರ ರಥಾದಿ ಸಂಬಂಧವನ್ನು ಕಲ್ಪಿಸಿ ಹೇಳಿರುವುದರಿಂದ ಅದು ದೇಹಸಾಧಕವಾಗಲಾರದು.

**ಯಥೋ ಏತತ್—ಪೌರುಷವಿಧಿಕೈಃ ಕರ್ಮಭಿಃ । ಇತಿ । ಏತದಪಿ ತಾದೃಷಮೇವ ||**

**ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ಇತಿ ಗ್ರಾವಸ್ತುತಿರೇವ ||**

(ಋ. ಸಂ. ೮-೪-೨೯)

ಪುರುಷರಂತೆ ಕಾರ್ಯಸಂಬಂಧವನ್ನು ವರ್ಣಿಸಿರುವುದರಿಂದ ದೇವತೆಗಳು ಪುರುಷಾಕಾರವುಳ್ಳವರೆಂಬ ವಾದವನ್ನೂ ನಿರಾಕರಿಸುತ್ತಾರೆ. ಹಿಂದಿನಂತೆ ಸ್ತುತಿದಾರ್ಢ್ಯಜ್ಞಾನಕ್ಕೋಸ್ಕರವೇ ಕಾರ್ಯಸಂಬಂಧವನ್ನು ಕಲ್ಪಿಸಿ ಸ್ತುತಿಸುತ್ತಾರೆ. ಇಲ್ಲವಾದರೆ ಅಚೇತನವಾದ ಪಾಷಾಣಕ್ಕೆ ಅಶನಕ್ರಿಯಾ (ತಿನ್ನುವುದು) ಈ ಮಂತ್ರದಲ್ಲಿ ಹೇಳಿರುವುದು ಅಸಂಗತವಾಗುತ್ತದೆ. ಪಾಷಾಣ ಸ್ತುತಿಗೋಸ್ಕರ ಅಶನ ಕ್ರಿಯೆಯನ್ನು ಕಲ್ಪಿಸಿ ವರ್ಣಿಸುತ್ತಾರೆ. ಇದರಿಂದ ಇಂದ್ರಾದಿ ದೇವತೆಗಳಿಗೆ ಹೇಳಿರುವ ಭಕ್ಷಣಾದಿ ಕಾರ್ಯಗಳು ವಾಸ್ತವವಲ್ಲವೆಂದು ಸಿದ್ಧವಾಗುತ್ತದೆ.

**ಅಪಿ ವಾ ಉಭಯವಿಧಾಃ ಸ್ಯುಃ ||**

ಎರಡು ರೀತಿಯಾಗಿ ಸಮರ್ಥಿಸಲು ಮಂತ್ರಪ್ರಮಾಣವಿರುವುದರಿಂದ ಪುರುಷಾಕಾರವಿದೆಯೆಂದೂ ಹೇಳಬಹುದು. ಇಲ್ಲವೆಂದೂ ಹೇಳಬಹುದು.

**ಅಪಿ ವಾ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುಃ ||**

ಎರಡು ರೀತಿಯಾಗಿ ಹೇಳುವುದು ಸಮಂಜಸವಲ್ಲವೆಂದು ಸಿದ್ಧಾಂತವನ್ನು ವಿವರಿಸುತ್ತಾರೆ. ಪುರುಷಾಕಾರವುಳ್ಳ ಪೃಥಿವ್ಯಾದಿ ದೇವತೆಗಳಿಗೆ ಭೂಮಿಜಲ ಮುಂತಾದುವುಗಳು ಕರ್ಮಾತ್ಮರೂಪಗಳಾಗಿರುತ್ತವೆ. ಕಾರ್ಯಕ್ಕೋಸ್ಕರ ಆಯಾಯ ಸ್ವರೂಪವನ್ನು ಹೊಂದಿರುತ್ತಾರೆ ಎಂದರ್ಥ. ಇನ್ನು ಕೆಲವರು ಭೂಮ್ಯಾದಿ ಅಧಿಷ್ಠಾತೃದೇವತೆಗಳಿಗೆ ಪುರುಷಶರೀರವೆನ್ನುತ್ತಾರೆ. ಹೀಗೆ ಹೇಳುವುದರಿಂದ ಪ್ರತ್ಯಕ್ಷ ಆಗಮಗಳೆರಡಕ್ಕೂ ಯಾವ ವಿರೋಧವೂ ಬರುವುದಿಲ್ಲ.

## ಯಥಾ ಯಜ್ಞೋ ಯಜಮಾನಸ್ಯ ||

ಭೂಮಿ ಜಲಾದಿಗಳು ಕರ್ಮಾತ್ಮಗಳೆಂಬುದರಲ್ಲಿ ದೃಷ್ಟಾಂತವನ್ನು ತೋರಿಸುತ್ತಾರೆ, ಲೋಕದಲ್ಲಿಯೂ ಪುರುಷಶರೀರಿಯಾದ ಯಜಮಾನನಿಗೆ ಯಜ್ಞವು ಕರ್ಮಾತ್ಮಕವಾಗಿರುತ್ತದೆ. ಅದರಂತೆ ದೇವತೆಗಳಿಗೂ ಉಭಯಸ್ವರೂಪ ತಿಳಿಯಬೇಕು.

## ಏಷ ಚಾಖ್ಯಾನಸಮಯ || ೪ || ೭||

ಮಹಾಭಾರತದಲ್ಲಿ ಇದೇ ಸಿದ್ಧಾಂತವನ್ನು ವ್ಯಕ್ತಪಡಿಸಿರುತ್ತಾರೆ. ಸಮಯವೆಂದರೆ ಸಿದ್ಧಾಂತ ಅಲ್ಲಿ—ಪೃಥಿವೀ ಹೆಂಗಸು ಗೋರೂಪದಿಂದ ಬ್ರಹ್ಮನ ಸಮೀಪಕ್ಕೆ ಹೋಗಿ ದುಷ್ಟರಿಂದುಂಟಾದ ಭಾರವನ್ನು ಹೋಗಲಾಡಿಸಬೇಕೆಂದು ಪ್ರಾರ್ಥಿಸಿತು ಅಗ್ನಿಯು ಬ್ರಾಹ್ಮಣ ರೂಪದಿಂದ ಕೃಷ್ಣಾರ್ಜುನರ ಸಮೀಪಕ್ಕೆ ಹೋಗಿ ಖಾಂಡವವನವನ್ನು ತಿನ್ನಲು ಬೇಡಿತು. ಅದು ಪುರುಷ ರೂಪದಿಂದಲೂ, ಅಗ್ನಿಯ ರೂಪದಿಂದಲೂ ಆ ವನವನ್ನು ಸುಟ್ಟುಹಾಕಿತು—ಎಂದು ವರ್ಣಿಸಿದೆ. ಹೀಗೆ ಪೂರ್ವೋಕ್ತಗಳಾದ ನಾಲ್ಕು ದರ್ಶನಗಳೂ ಸಂತವಾಗುತ್ತವೆ. 1. ಪುರುಷಾಕಾರ. 2. ಪುರುಷಾಕಾರವಿಲ್ಲದಿರುವುದು. 3. ಕರ್ಮಕ್ಕೋಸ್ಕರ ಆಯಾಯಸ್ವರೂಪ ಹೊಂದಿ ಪುರುಷಾಕಾರದಿಂದ ಇರುವುದು. 4. ನಿತ್ಯವಾಗಿ ಉಭಯಾಕಾರವಿರುವುದು. ಇವೆಲ್ಲವೂ ಮಹಾಭಾಗ್ಯದಿಂದ ದೇವತೆಗಳಿಗೆ ಸಂಗತವಾಗುತ್ತದೆ. ನಿತ್ಯೈಶ್ವರ್ಯದಿಂದ ಅವರು ನಾನಾರೂಪವನ್ನು ಹೊಂದಿರುವಾಗ ಮಂತ್ರದ್ರಷ್ಟೃ ಮುನಿಗಳು ಯಾವ ಯಾವ ರೂಪಗಳನ್ನು ನೋಡಿದರೋ ಅದರಂತೆ ಸ್ತುತಿಸಿರುವುದರಿಂದ ಪೂರ್ವಾಪರ ವಿರೋಧಕ್ಕೆ ಅವಕಾಶವಿಲ್ಲ.

ಏತೇ ವದಂತಿ ಶತವತ್ಸಹಸ್ರವದಭಿ ಕ್ರಂದಂತಿ ಹರಿತೇಭಿರಾಸಭಿಃ |
ವಿಷ್ಟ್ವೀ ಗ್ರಾವಾಣಃ ಸುಕೃತಃ ಸುಕೃತ್ಯಯಾ ಹೋತುಶ್ಚಿತ್ಪೂರ್ವೇ
ಹವಿರದ್ಯಮಾಶತ ||

(ಋ. ಸಂ. ೧೦–೯೪–೨)

ಇದರ ಅರ್ಥವು—

ಸಾವಿರಾರು ಜನರು ಒಟ್ಟಿಗೆ ಸೇರಿ ಶಬ್ದಮಾಡುವಂತೆ ಈ ಹಿಂಡುವ ಕಲ್ಲುಗಳು ಶಬ್ದಮಾಡುತ್ತವೆ. ಪಚ್ಚೆವರ್ಣವುಳ್ಳ ಮುಖಗಳಿಂದ ಗಟ್ಟಿಯಾಗಿ ಶಬ್ದಮಾಡುತ್ತವೆ. ಉತ್ತಮವಾದ ಕರ್ಮವುಳ್ಳ ಹಿಂಡುವ ಕಲ್ಲುಗಳು ಯಜ್ಞವನ್ನು ಸಮಾಪಿಸಿ ಹೋತೃರೂಪನಾದ ಅಗ್ನಿಗಿಂತಲೂ ಪೂರ್ವಭಾವಿಯಾಗಿಯೇ ಭಕ್ಷಿಸಲು ಯೋಗ್ಯವಾದ ಹವಿಸ್ಸನ್ನು ಪಡೆಯುತ್ತವೆ. (ಪಾನ ಮಾಡುತ್ತವೆ).

ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಉಂಟಾಗುವ ಧ್ವನಿಯನ್ನು ಸಾವಿರಾರು ಜನರು ಒಟ್ಟಿಗೆ ಸೇರಿ ಮಾಡುವ ಶಬ್ದಕ್ಕೆ ಹೋಲಿಸಿವೆ. ಎಂದರೆ ಬಹಳ ಘಟ್ಟಿಯಾಗಿ ಶಬ್ದಮಾಡುವವು ಎಂದರ್ಥವು.

**ಹರಿತೇಭಿಃ ಆಸಭಿಃ**—ಹಸರುವರ್ಣದ ಮುಖಗಳಿಂದ : ಸೋಮಲತೆಗಳೂ ಅವುಗಳಿಂದ ಹೊರಸೂಸುವ ರಸವೂ ಪಚ್ಚೆವರ್ಣ ಎಂದರೆ ಹಸಿರುವರ್ಣದ್ದಾಗಿರುವುವು. ಲತೆಗಳನ್ನು ಜಜ್ಜುವ ಕಲ್ಲುಗಳಿಗೆ ಹಸಿರಾದ ಸೋಮರಸವು ಅಂಟಿ ಕೊಳ್ಳುವುದರಿಂದ ಆ ಕಲ್ಲುಗಳು ಹಸಿರು ಬಣ್ಣದ ಮುಖಗಳಿಂದ ಶಬ್ದಮಾಡುತ್ತಿರುವವು ಎಂದು ಇಲ್ಲಿ ಪ್ರಕಾಶಾಂತರವಾಗಿ

ಹೋತುಃ ಚಿತ್ ಪೂರ್ವೇ ಆದ್ಯಂ ಹವಿಃ ಆಶತ—ಸೋಮಲತೆಗಳನ್ನು ಜಜ್ಜುವಾಗಲೇ ಕಲ್ಲುಗಳಿಗೆ ರಸವು ಮೆತ್ತಿಕೊಳ್ಳುವುದರಿಂದ ಕಲ್ಲುಗಳೇ ಎಲ್ಲರಿಗಿಂತಲೂ ಎಂದರೆ ಹೋತೃ ಅಥವಾ ಅಗ್ನಿತಂತಲೂ ಮೊದಲೇ ಸೋಮಪಾನ ಮಾಡಿದಂತಾಯಿತೆಂದು ಋಷಿಯ ಪ್ರಕಾರಾಂತವಾಗಿ ವರ್ಣಿಸಿದ್ದಾನೆ.

ಸಖಂ ರಥಂ ಯುಯುಜೇ ಸಿಂಧುರಶ್ವಿನಂ ತೇನ ವಾಜಂ ಸನಿಷದಸ್ಮಿ-
ನ್ನಾಜಾ। ಮಹಾನ್ಹ್ಯಸ್ಯ ಮಹಿಮಾ ಪನಸ್ಯತೇಽದಬ್ಧಸ್ಯ ಸ್ವಯಶಸೋ
ವಿರಪ್ಶಿನಃ॥

(ಋ. ಸಂ. ೧೦—೭೫—೯)

ಇದರೆ ಅಥವು—

ಸಿಂದುದೇವತೆಯು ಸುಖಕರವಾದುದೂ ಅಶ್ವಯುಕ್ತವೂ ಆದ ತನ್ನ ರಥವನ್ನು ಹೂಡುತ್ತಾ.ಳೆ ಇದೇ ರಥದಲ್ಲಿ ನಮಗೆ ಅನ್ನವನ್ನೂ ಒದಗಿಸಲಿ, ಅಹೆಂಸತ್ವವೂ ಸ್ವಯಂ ಸಂಪಾದಿತರಾದ ಕೀರ್ತಿಯುಳ್ಳದ್ದೂ ಮಹತ್ವವುಳ್ಳದ್ದೂ ಆದ ಸಿಂಧು ದೇವತೆಯ ರಥದ ಮಹಿಮೆಯು ಅತ್ಯಧಿಕವಾಗಿ ಪ್ರಶಂಸಿಸಲ್ಪಡುತ್ತದೆ,

ಇಲ್ಲಿ ಸಿಂಥುನದಿಯು ಅಥವಾ ದೇವತೆಯು ತನ್ನ ರಥವನ್ನು ಹೂಡುತ್ತಾಳೆಂದು ಹೇಳಿದೆ. ಅಚೇತನವಾದ ನದಿಗೆ ಈ ಕ್ರಿಯಾಶಕ್ತಿಯನ್ನು ಹೇಳುವುದು ತಪ್ಪಲ್ಲವೇ ಎಂದರೆ, ಇದಕ್ಕೆ ಸಮಾಧಾನವಾಗಿ ಯಾಸ್ಕರು ಹೇಳಿರುವ ವಿವರಣೆಯನ್ನು ನಾವು ಈ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿಸ್ತಾರವಾಗಿ ವಿಮರ್ಶೆಮಾಡಿದೇವೆ. ಅದನ್ನು ಅಲ್ಲಿ ನೋಡಿ ತಿಳಿಯಬಹುದು.

ಋಗ್ವೇದಸಂಹಿತೆಯ ೫ನೇ ಭಾಗದ ೮೭ನೇ ಪೇಜು ಮತ್ತು ಮುಂದೆ ೧೦ನೇ ಮಂಚಲದ ೭೪ ನೇ ಸೂಕ್ತದ ಪೀಠಿಕೆಯನ್ನು ನೋಡಿ.

(ಋ. ಸಂ. ೩—೨೫—೪)

ಇದರ ಅರ್ಥವು—ಎಲೈ ಅಗ್ನಿಯೇ ಹೇವತಾತ್ಮರಾದ ನೀನೂ ಇಂದ್ರನೂ ಸಹ ಯಜ್ಞಕರ್ತನ ವಿಷಯದಲ್ಲಿ ಅಹಿಂಸಿತರಾಗಿ ಸೋಮರಸನನ್ನು ಹಿಂಡತಕ್ಕವನೂ ಹವಿಸ್ಸನ್ನು ಅರ್ಪಿಸುವವನೂ ಆದ ಯೆಜಮಾನನ ಈ ಯಜ್ಞಗೃಹದಲ್ಲಿ ನೆರವೇರಿಸಲ್ಪಡುವ ಯಜ್ಞವನ್ನುದ್ದೇಶಿಸಿ ಸೋಮರಸದ ಪಾನಕ್ಕಾಗಿ ಬನ್ನಿರಿ.

ಈರೀತಿ ಶ್ರೀಮದ್ಯಾಸ್ಕಮುನಿ ರಚಿತ ನಿರುಕ್ತ ಭಾಷ್ಯದ

ಏಳನೇ ಅಧ್ಯಾಯದಲ್ಲಿ ಏಳನೆಯ ಖಂಡ ಸಮಾಪ್ತವು.

## ಅಥ ಅಷ್ಟಮಃ ಖಂಡಃ
## ಎಂಟನೆಯ ಖಂಡವು

ತಿಸ್ರ ಏವ ದೇವತಾ ಇತ್ಯುಕ್ತಂ ಪುರಸ್ತಾತ್ತಾಸಾಂ ಭಕ್ತಿಸಾಹಚರ್ಯಂ ವ್ಯಾಖ್ಯಾಸ್ಯಾಮೋಽಥೈತಾನ್ಯಗ್ನಿಭಕ್ತೀನ್ಯಯಂ ಲೋಕಃ ಪ್ರಾತಃಸವನಂ ವಸಂತೋ ಗಾಯತ್ರೀ ತ್ರಿವೃತ್‌ಸ್ತೋಮೋ ರಥಂತರಂ ಸಾಮ ಯೇ ಚ ದೇವಗಣಾಃ ಸಮಾಮ್ನಾತಾಃ ಪ್ರಥಮೇ ಸ್ಥಾನೇಽಗ್ನಾಯೀ ಪೃಥಿವೀಳೇತಿ ಸ್ತ್ರಿಯೋಽಥಾಸ್ಯ ಕರ್ಮ ವಹನಂ ಚ ಹವಿಷಾಮಾವಾಹನಂ ಚ ದೇವತಾನಾಂ ಯಚ್ಚ ಕಿಂಚಿದ್ದಾರ್ಷ್ಟಿವಿಷಯಿಕಮಗ್ನಿಕರ್ಮೈವ ತದಥಾಸ್ಯ ಸಂಸ್ತವಿಕಾ ದೇವಾ ಇಂದ್ರಃ ಸೋಮೋ ವರುಣಃ ಪರ್ಜನ್ಯ ಋತವ ಆಗ್ನಾವೈಷ್ಣವಂ ಹವಿರ್ನತ್ವೃವಸಂಸ್ತವಿಕೀ ದಶತಯೀಷು ವಿದ್ಯತೇಽಥಾಪ್ಯಾಗ್ನಾಪೌಷ್ಣಂ ಹವಿರ್ನ ತು ಸಂಸ್ತವಸ್ತತ್ರೈತಾಂ ವಿಭಕ್ತಸ್ತುತಿಮೃಚಮುದಾಹರಂತಿ ॥ ೮ ॥

ತಿಸ್ರ ಏವ ದೇವತಾ ಇತ್ಯುಕ್ತಂ ಪುರಸ್ತಾತ್ ॥

ಅಗ್ನ್ಯಾದಿದೇವತಾತ್ರಯವು ಪ್ರಸ್ತುತವಾಗಿ ಅದು ಅವರ ಆಕಾರಚಿಂತನೆಯಿಂದ ವ್ಯವಹಿತವಾದುದರಿಂದ ಈಗ ವಿಶೇಷವಿಷಯವನ್ನು ಹೇಳುವುದಕ್ಕೋಸ್ಕರ ಆರನೇ ಕಾಂಡದಲ್ಲಿ ಹೇಳಿರುವುದನ್ನು ಪುನಃ ಜ್ಞಾಪಿಸುತ್ತಾರೆ. ಆರನೆಯ ಕಾಂಡದಲ್ಲಿ ಮೂರೇ ದೇವತೆಗಳೆಂದು ಹೇಳಿದೆ.

ತಾಸಾಂ ಭಕ್ತಿಸಾಹಚರ್ಯಂ ವ್ಯಾಖ್ಯಾಸ್ಯಾಮಃ ॥

ಮೂರು ದೇವತೆಗಳೆಂಬ ವಿಷಯದಲ್ಲಿ ವಿವಕ್ಷಿತವಾದ ವಿಶೇಷವನ್ನು ವಿವರಿಸುತ್ತಾರೆ. ಆ ಮೂರು ದೇವತೆಗಳ ಭಕ್ತಿಸಾಹಚರ್ಯವನ್ನು ಈಗ ವಿವರಿಸುತ್ತೇವೆ ಎಂದರ್ಥ. ಭಕ್ತಿ ಮತ್ತು ಸಾಹಚರ್ಯ ಅಥವಾ ಭಕ್ತಿಯಿಂದಾದ ಸಾಹಚರ್ಯ ಭಕ್ತಿಸಾಹಚರ್ಯವಾಗುತ್ತದೆ. ಅಗ್ನ್ಯಾದಿಗಳಿಂದ ಲೋಕಪ್ರಾಪ್ತಿಗೆ ಭಕ್ತಿಯೆಂದು ಹೆಸರು. ಅಗ್ನ್ಯಾದಿ ದೇವತೆಗಳು ಏನೇನು ಹೊಂದಿರುತ್ತಾರೆ ಎಂದು ತಿಳಿಸುವುದು. ಒಟ್ಟಿಗೆ ಇರುವುದಕ್ಕೆ ಸಾಹಚರ್ಯವೆಂದು ಹೆಸರು. ಸ್ಪಷ್ಟವಾಗಿ ಅರ್ಥವಾಗದ ಪದಗಳುಳ್ಳ ಮಂತ್ರಗಳಲ್ಲಿ ಭಕ್ತಿಯಿಂದಲೂ, ಸಾಹಚರ್ಯದಿಂದಲೂ ದೇವತಾವಿಶೇಷ ನಿರ್ಣಯವಾಗುವುದರಿಂದ ಈ ಭಕ್ತಿಸಾಹಚರ್ಯವಿವರಣೆ ಸಾರ್ಥಕವಾಗಿದೆ.

ಅಥೈತಾನ್ಯಗ್ನಿಭಕ್ತೀನಿ ॥

ಅಥಶಬ್ದವು ವಿಶೇಷಾಧಿಕಾರವನ್ನು ತಿಳಿಸುತ್ತದೆ. ಅಗ್ನಿಯನ್ನು ಹೊಂದಿರುವವುಗಳು ಯಾವುವು? ಅಥವಾ ಅಗ್ನಿಯು ಯಾವುದನ್ನು ಹೊಂದಿರುತ್ತದೆ? ಎಂದು ವಿಚಾರಿಸುತ್ತಾರೆ. ಅಗ್ನಿಭಕ್ತಿಪದಕ್ಕೆ ಹಿಂದೆ ಹೇಳಿದಂತೆ ಎರಡು ರೀತಿಯಿಂದಲೂ ಅರ್ಥವನ್ನು ಕಲ್ಪಿಸಬಹುದು. ಅವು ಎಷ್ಟು ಎಂದು ಪ್ರಶ್ನಿಸುತ್ತಾರೆ.

**ಅಯಂ ಲೋಕಃ, ಪ್ರಾತಃಸವನಂ, ವಸಂತೋ, ಗಾಯತ್ರೀ ತ್ರಿವೃತ್ ಸ್ತೋಮೋ, ರಥಂತರಂ ಸಾಮ ||**

ಪೃಥಿವೀ, ಯಾಗದಲ್ಲಿ ಮಾಡುವ ಪ್ರಾತಃಸವನ, ವಸಂತಮಾಸ, ಗಾಯತ್ರೀ ಛಂದಸ್ಸು, ತ್ರಿವೃತ್‌ಸ್ತೋಮ, ರಥಂತರವೆಂಬ ಸಾಮ ಇವು ಅಗ್ನಿಭಕ್ತಿಗಳು ಅಗ್ನಿಯನ್ನು ಹೊಂದಿರುವವುಗಳು ಅಥವಾ ಅಗ್ನಿಯು ಇವುಗಳನ್ನಾಶ್ರಯಿಸಿರುತ್ತದೆಯೆಂದರ್ಥ.

**ಯೇ ಚ ದೇವಗಣಾಃ ಸಮಾಮ್ನಾತಾಃ ಪ್ರಥಮೇ ಸ್ಥಾನೇ ||**

ಭೂಲೋಕದಲ್ಲಿ ಹಿಂದೆ ಯಾವುದು ದೇವಗಣವೆಂದು ಹೇಳಿದೆಯೋ ಅವೂ ಅಗ್ನಿಭಕ್ತಿಗಳ ನಾಮಗಳಾಗುತ್ತವೆ. ಆಪ್ರೀ ಅಕ್ಷಾಃ, ಗ್ರಾವಾಣಃ, ಅಭೀಶವಃ ಎಂದು ದೇವಗಣವನ್ನು ವಿವರಿಸಿರುತ್ತಾರೆ.

**ಅಗ್ನಾಯೀ, ಪೃಥಿವೀ, ಇಲಾ ಇತಿ ಸ್ತ್ರಿಯಃ ||**

ಅಗ್ನಾಯೀ, ಪೃಥಿವೀ, ಇಲಾ ಎಂದು ಅಗ್ನಿಯ ಸ್ತ್ರೀಯರು ಮೂವರು.

**ಅಥಾಸ್ಯ ಕರ್ಮ—ವಹನಂ ಚ ಹವಿಷಾಂ, ಆವಾಹನಂ ಚ ದೇವತಾನಾಂ, ಯಚ್ಚ ಕಿಂಚಿದ್ದಾರ್ಷ್ಟಿವಿಷಯಿಕಮಗ್ನಿಕರ್ಮೈವ ತತ್ ||**

ಅಗ್ನಿಸಂಬಂಧಿಯಾದ ಕಾರ್ಯವನ್ನು ವಿವರಿಸುತ್ತಾರೆ. ಹವಿಸ್ಸನ್ನು ದೇವತೆಗಳಿಗೋಸ್ಕರ ಒಯ್ಯುವುದು, ದೇವತೆಗಳನ್ನು ಕರೆಯುವುದು, ಮತ್ತು ಕೆಲವು ದೃಷ್ಟಿಗೆ ಅನುಗ್ರಾಹಕಗಳಾದ ಪ್ರಕಾಶಾದಿಕರ್ಮ ಇವು ಅಗ್ನಿಯ ಸಾಧಾರಣ ಕಾರ್ಯಗಳು ಈ ಕಾರ್ಯದಿಂದ ಅಗ್ನಿಯ ನಾಮ ಮಂತ್ರದಲ್ಲಿ ಹೇಳದಿದ್ದರೂ ಅದು ಅಗ್ನಿದೇವತಾಕ ಮಂತ್ರವೆಂದು ತಿಳಿಯಬಹುದು. ಆದರಾತಿಶಯವನ್ನು ತಿಳಿಸಲು ಪುನಃ ಅಗ್ನಿಕರ್ಮೈವ ತತ್ ಎಂದು ಹೇಳಿದೆ.

**ಅಥಾಸ್ಯಸಂಸ್ತವಿಕಾ ದೇವಾಃ ||**

ಇನ್ನು ಮುಂದೆ ಅಗ್ನಿಯೊಡನೆ ಸ್ತುತಿಸುವ ದೇವತೆಗಳನ್ನು ಹೇಳುತ್ತಾರೆ. ಇದು ಸಾಹಚರ್ಯವಾಗುತ್ತದೆ. ಸಮ್ ಉಪಸರ್ಗ ಸಹಾರ್ಥವನ್ನು ತಿಳಿಸುತ್ತದೆ. ಸಹಸ್ತವಃ ಸಂಸ್ತವಃ ಪರಿಚಯವೆಂದರ್ಥ. ಅದು ಉಳ್ಳವರು ಎಂಬ ಮತ್ವರ್ಥದಲ್ಲಿ ಇನ್ ಪ್ರತ್ಯಯ ಅದರಮೇಲೆ ಸ್ವಾರ್ಥದಲ್ಲಿ ಕನ್ ಬಂದಿದೆ.

**ಇಂದ್ರಃ ಸೋಮೋ ವರುಣಃ ಪರ್ಜನ್ಯಃ ಋತವಃ ||**

ಇಂದ್ರಾದಿಗಳನ್ನು ಅಗ್ನಿಯೊಡನೆ ಸ್ತುತಿಸುತ್ತಾರೆ. ಅಗ್ನಿಗೆ ಪೂರ್ವನಿಪಾತವಿರುವುದರಿಂದ (ಅಗ್ನ ಇಂದ್ರ, ಅಗ್ನೀಷೋಮೌ ಅಗ್ನೇವರುಣಸ್ಯ ಇತ್ಯಾದಿ.) ದೇವತಾದ್ವಂದ್ವಕ್ಕೆ ಪ್ರಾಧಾನ್ಯವಿರುತ್ತದೆ. ಇಂದ್ರನೊಡನೆ ಸಂಸ್ತವಕ್ಕೆ ಉದಾಹರಣೆ.

**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ ಸುತಾವತೋ ಯಜ್ಞಮಿಹೋಪಯಾತಂ | ಅಮರ್ಧಂತಾ ಸೋಮಪೇಯಾಯ ದೇವಾಃ||**

(ಋ. ಸಂ. ೩-೧-೨೫)

ಅಗ್ನಿಗೆ ಸೋಮನೊಡನೆ ಸಂಸ್ತವಕ್ಕೆ ಉದಾಹರಣೆ.

ಅಗ್ನೀಷೋಮಾವಿಮಂ ಸು ಮೇ ಶೃಣುತಂ ವೃಷಣಾ ಹವಮ್। ಪ್ರತಿ-
ಸೂಕ್ತಾನಿ ಹರ್ಯತಂ ಭವತಂ ದಾಶುಷೇ ಮಯಃ ॥

(ಋ. ಸಂ. ೧-೯-೨೮)

ವರುಣನೊಡನೆ ಸಂಸ್ತವಕ್ಕೆ ಉದಾಹರಣೆ.

ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ ಹೇಳೋಽವಯಾಸಿ-
ಸೀಷ್ಠಾಃ । ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ-
ದ್ವೇಷಾಂಸಿ ಪ್ರಮುಮುಗ್ಧ್ಯಸ್ಮತ್ ॥

(ಋ. ಸಂ. ೩-೮-೧೨)

ಪರ್ಜನ್ಯನೊಡನೆ ಅಗ್ನಿಯ ಸಾಹಚರ್ಯಕ್ಕೆ ಉದಾಹರಣೆ.

ಅಗ್ನೀಪರ್ಜನ್ಯಾವವತಂ ಧಿಯಂ ಮೇಽಸ್ಮಿನ್ಹವೇ ಸುಹವಾ ಸುಷ್ಟುತಿಂ ನಃ ।
ಇಳಾಮನ್ಯೋಽಜನಯದ್‌ಗರ್ಭಮನ್ಯಃ ಪ್ರಜಾವತೀರಿಷ ಆಧತ್ತಮಸ್ಮೇ ॥

(ಋ. ಸಂ. ೪-೮-೧೬)

ಋತುಗಳೊಡನೆ ಸಂಸ್ತವಕ್ಕೆ ಉದಾಹರಣೆ

ಅಗ್ನೇ ದೇವಾँ ಇಹಾವಹ ಸಾದಯಾ ಯೋನಿಷು ತ್ರಿಷು ।
ಪರಿಭೂಷ ಪಿಬ ಋತುನಾ ॥

( ಋ. ಸಂ. ೧-೧-೨೮)

ಆಗ್ನಾವೈಷ್ಣವಂ ಚ ಹವಿಃ ॥

ಹವಿಃ ಸಂಪ್ರದಾನದಲ್ಲಿ ಅಗ್ನಿಗೆ ವಿಷ್ಣುವಿನೊಡನೆ ಸಾಹಚರ್ಯವೂ ಪ್ರಸಿದ್ಧವಾಗಿದೆ. ಅಗ್ನಿಶ್ಚ ವಿಷ್ಣುಶ್ಚ. ಅಗ್ನಾವಿಷ್ಣೂ ದೇವತಾದ್ವಂದ್ವೇ ಚ ’ ಸೂತ್ರದಿಂದ ಪೂರ್ವಪದಕ್ಕೆ ಆನಙ್. ಅಗ್ನಾವಿಷ್ಣೂ ದೇವತೇ ಅಸ್ಯ. ಎಂಬರ್ಥದಲ್ಲಿ ಅಣ್, ಪ್ರತ್ಯಯ-ಉಭಯಪದವೃದ್ಧಿ ಬಂದು ಆಗ್ನಾವೈಷ್ಣವಂ ಎಂದಾಗಿದೆ. ವಿಷ್ಣು ಸಾಹಚರ್ಯಕ್ಕೆ ಉದಾಹರಣೆ.

ಅಗ್ನಾವಿಷ್ಣೂ ಸಜೋಷಸೇ ಮಾ ವರ್ಧಂತು ವಾಂ ಗಿರಃ ॥
ದ್ಯುಮ್ನೈರ್ವಾಜೇಭಿರಾಗತಮ್ ॥

ನ ತೃಕ್‌ಸಂಸ್ತವಿಕೀ ದಶತಯೀಷು ವಿದ್ಯತೇ ॥

ದಶಮಂಡಲರೂಪ ಅವಯವವಿಭಾಗಗಳಿಂದ ವಿಸ್ತರಹೊಂದಿರುವುದು ದಶತಯೀ. ಋಗ್ವೇದವೆಂದರ್ಥ. ಋಗ್ವೇದಶಾಖೆಗಳಿಗೆ ದಾಶತಯೀ ಎಂದು ಹೆಸರು. ಋಗ್ವೇದಕ್ಕೆ ಇಪ್ಪತ್ತೊಂದುಶಾಖೆಗಳಿವೆಯೆಂದು ಮಹಾಭಾಷ್ಯಕಾರರು ಹೇಳಿರುತ್ತಾರೆ.

ಹವಿಸ್ಸಿನಲ್ಲಿ ವಿನಿಯೋಗಹೊಂದಿರುವ ಅಗ್ನಾವಿಷ್ಣು ಸಂಸ್ತವವನ್ನು ತಿಳಿಸುವ ಒಂದು ಋಕ್ ಕೂಡಾ ಋಕ್‌ಶಾಖೆಯಲ್ಲಿ ದೃಷ್ಟವಾಗಿಲ್ಲ. ಅಂದರೆ ಹವಿರ್ವಿನಿಯೋಗದಲ್ಲಿ ಯಾವಾಗಲೂ ಅಗ್ನಾವಿಷ್ಣುಸಂಸ್ತವವೇ ಇರುವುದಲ್ಲದೆ ಬೇರೆಯಾಗಿರುದಿಲ್ಲವೆಂದು ತಾತ್ಪರ್ಯ. ಋಕ್ಶಾಖೆಯನ್ನು ಬಿಟ್ಟು ಬೇರೆ ಶಾಖೆಗಳಲ್ಲಿ ಹವಿರ್ವಿನಿಯೋಗವಿಲ್ಲದ ಅಗ್ನಾವಿಷ್ಣುಸಂಸ್ತವಿರಬಹುದು.

**ಅಥಾಪ್ಯಾಗ್ನಾಪೌಷ್ಣಂ ಹವಿರ್ನ ತು ಸಂಸ್ತವಃ**
**ತತ್ರೈ ತಾಂ ವಿಭಕ್ತಸ್ತುತಿಮೃಚಮುದಾಹರಂತಿ ||**

ಹವಿರ್ವಿನಿಯೋಗದಲ್ಲಿ ಮಾತ್ರ ಅಗ್ನಿಗೆ ಪೂಷ (ನ್) ದೇವತೆಯೊಡನೆ ಸಂಸರ್ಗದೃಷ್ಟವಾಗಿದೆ. ಆದರೆ ಅಲ್ಲಿ ಸಹಭಾವದಿಂದ ಸ್ತುತಿಮಾತ್ರ ಹೇಳಿರುವುದಿಲ್ಲ. ಅಂದರೆ ಅಗ್ನಿಪೂಷಾದೇವತೆಗಳಿಗೆ ಹವಿಸ್ಸು ಒಂದಾಗಿದ್ದರೂ ಅವರಿಬ್ಬರನ್ನು ಒಟ್ಟಿಗೆ ಸ್ತುತಿಸುವ ಮಂತ್ರವಿಲ್ಲವೆಂದು ತಾತ್ಪರ್ಯ. ಬೇರೆಬೇರೆಯಾಗಿಯೇ ಒಂದೇ ಮಂತ್ರದಲ್ಲಿ ಅಗ್ನಿಯನ್ನೂ ಪೂಷಾದೇವತೆಯನ್ನೂ ಸ್ತುತಿಸಿರುತ್ತಾರೆ. ಸಂಸ್ತವವಿಷಯದಲ್ಲಿ ಬೇರೆಬೇರೆಯಾಗಿಯೇ ಸ್ತುತಿಸಿರುವ ಋಕ್ಕನ್ನು ನಿರುಕ್ತಕಾರರು ಮುಂದೆ ಉದಹರಿಸುತ್ತಾರೆ. ಅಗ್ನಿಯಕಾರ್ಯವೇ ಭಿನ್ನವಾಗಿ, ಪೂಷನ್ದೇವತೆಯ ಕಾರ್ಯವೇ ಭಿನ್ನವಾಗಿ ಸ್ತುತಿಸಿರುವ ಮಂತ್ರೋದಾಹರಣೆಯನ್ನು ಮುಂದಿನ ಖಂಡದಲ್ಲಿ ಉದಾಹರಿಸುತ್ತಾರೆ. ಆದುದರಿಂದ ಹವಿಸ್ಸು ಒಂದಾದರೂ ಒಟ್ಟಿಗೆ ಸ್ತುತಿಸಿರುವ ಋಕ್ಕು ಋಕ್‌ಶಾಖೆಯಲ್ಲಿ ಎಲ್ಲಿಯೂ ಸಿಗುವುದಿಲ್ಲ.

**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ ಸುತಾವತೋ ಯಜ್ಞ-**
**ಮಿಹೋಪ ಯಾತಂ | ಅಮರ್ಧಂತಾ ಸೋಮಪೇಯಾಯ ದೇವಾಃ ||**

ಇದರ ಅರ್ಥವು—ಎಲೈ ಅಗ್ನಿಯೇ ದೇವತಾತ್ಮರಾದ ನೀನೂ ಇಂದ್ರನೂ ಸಹ ಯಜ್ಞಕರ್ತನ ವಿಷಯದಲ್ಲಿ ಅಹಿಂಸಿತರಾಗಿ ಸೋಮರಸವನ್ನು ಹಿಂಡತಕ್ಕವನೂ ಹವಿಸ್ಸನ್ನೂ ಅರ್ಪಿಸುವವನೂ ಆದ ಯಜಮಾದನ ಈ ಯಜ್ಞಗೃಹದಲ್ಲಿ ನೆರವೇರಿಸಲ್ಪಡುವ ಯಜ್ಞವನ್ನುದ್ದೇಶಿಸಿ ಸೋಮರಸದ ಪಾನಕ್ಕಾಗಿ ಬನ್ನಿರಿ.

**ಅಮರ್ಧಂತಾ—ಅನಾಗಮನೇನ ಯಜ್ಞಹಿಂಸಾಮಕುರ್ವಂತೌ** | ಇಂದ್ರನೂ ಮತ್ತು ಅಗ್ನಿಯೂ, ಯಜ್ಞದಲ್ಲಿ ತಮ್ಮ ಆಗಮನದಿಂದ ಯಜ್ಞವು ನೆರವೇರುವಂತೆ ಮಾಡಿ **ಸುತವತಃ ದಾಶುಷಃ** ಸೋಮರಸವನ್ನು ಸಿದ್ಧಮಾಡಿ, ಹವಿಸ್ಸನ್ನು ಅರ್ಪಿಸಿ, ಇರುವ ಯಜಮಾನನ ಯಜ್ಞಗೃಹದಲ್ಲಿ ಆಚರಿಸಲ್ಪಡುವ ಯಜ್ಞದಲ್ಲಿ ಸೋಮಪಾನಕ್ಕಾಗಿ ಆಗಮಿಸಲಿ ಎಂದು ಯಜಮಾನನ ಆಶಂಸನೆಯು ಇಲ್ಲಿ ವರ್ಣಿತವಾಗಿದೆ.

**ದಾಶುಷಃ—ಹವಿರ್ದತ್ತವತಃ ಯಜಮಾನಸ್ಯ** ನಿರುಕ್ತಕಾರರು—

**ಓಮಾಸಶ್ಚರ್ಷಣೀಧೃತಃ** ( ಋ. ಸಂ. ೧-೩-೭ ) ಎಂಬಲ್ಲಿ ದಾಶುಷಃ ಎಂಬ ಪದಕ್ಕೆ ದತ್ತವಂತಃ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಇಲ್ಲಿ ಈ ಪದವು ಹವಿಸ್ಸನ್ನು ಅರ್ಪಿಸಿರುವ ಯಜಮಾನನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ

**ದುರೋಣೇ—ಗೃಹೇ** | ದುರೋಣಶಬ್ದವು ಗೃಹನಾಮಗಳಲ್ಲಿ ( ನಿ. ೩-೧೩ ) ಉಕ್ತವಾಗಿದೆ. **ದುರೋಣ ಇತಿ ಗೃಹನಾಮ ದುರವಾ ಭವಂತಿ ದುಸ್ತರ್ಪಾಃ** ( ನಿ. ೪-೪ ) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಇಲ್ಲಿ ಯಜಮಾನರು ಯಜ್ಞವನ್ನು ಆಚರಿಸುವ ಯಾಗಶಾಲೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಯಜ್ಞಶಬ್ದಾರ್ಥವು ಮತಾಂತರ ಪ್ರದರ್ಶನಪೂರ್ವಕವಾಗಿ ವಿವೃತವಾಗಿದೆ.

**ಅಗ್ನೀಷೋಮಾವಿಮಂ ಸು ಮೇ ಶೃಣುತಂ ವೃಷಣಾ ಹವಂ।**
**ಪ್ರತಿ ಸೂಕ್ತಾನಿ ಹರ್ಯತಂ ಭವತಂ ದಾಶುಷೇ ಮಯಃ ॥**

(ಋ. ಸಂ. ೧-೯೩-೧)

ಇದರ ಅರ್ಥವು—ಎಲೈ ಅಗ್ನೀಷೋಮದೇವತೆಗಳೇ, ನೀವು ಭಕ್ತರಿಗೆಲ್ಲಾ ಇಷ್ಟಾರ್ಥಗಳನ್ನು ತುಂಬಿಕೊಡುವವರು. ಅದೇ ಅಭಿಮಾನದಿಂದ ಈ ನನ್ನ ಆಹ್ವಾನವನ್ನು ಲಾಲಿಸಿ ಕೇಳಿರಿ. ನಿಮ್ಮಿಂದ ಪಠಿತವಾದ ಸ್ತೋತ್ರವಾಕ್ಯಗಳನ್ನು ಪ್ರತ್ಯೇಕವಾಗಿ ಸ್ವೀಕರಿಸಿ ಅನಂತರ ಚರುಪುರೋಡಾಶಾದಿಗಳನ್ನು ಅರ್ಪಿಸುವ ಯಜಮಾನರಿಗೆ ಸುಖದಾತರಾಗಿರಿ.

**ವೃಷಣಾ**—ಈ ವಿಶೇಷಣವು ಇತರ ದೇವತೆಗಳ ವಿಷಯದಲ್ಲೂ ಅನೇಕ ಸಲ ಉಪಯೋಗಿಸಿದ್ದರೂ ಸಹ ಅಗ್ನೀಸೋಮಗಳನ್ನು ವೃಷಣಾ ಎನ್ನುವುದರಲ್ಲಿ ವಿಶೇಷವಾದ ಅರ್ಥವಿದೆ. **ದಧದ್ರತ್ನಾನಿ ದಾಶುಷೇ ; ಪರ್ಷಿರಾಧೋ ಮಘೋನಾಂ** ಇತ್ಯಾದಿ ಒಂದೇ ಆನುಪೂರ್ವಿಯುಳ್ಳ ಪ್ರಾರ್ಥನೆಯು ಅನೇಕ ಸಂದರ್ಭಗಳಲ್ಲಿರುತ್ತವೆ. ಋ. ಸಂ. ೪-೧೫-೩ ೮-೧೦೩-೭ ಮುಂತಾದ ಋಕ್ಕುಗಳಲ್ಲಿ ಅಗ್ನಿಗೂ ೯-೩-೬ ; ೯-೧-೩ ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಗೂ ಸೋಮನಿಗೂ ಲಕ್ಷಿಸಿರುವ ಕ್ರಮವು ಒಂದೇ ವಿಧವಾಗಿರುತ್ತದೆ. ವಿಶೇಷವಾದ ಧನಗಳ ದಾತರೆಂದರ್ಥವು.

**ಹರ್ಯತಂ**—**ವಶ್ಮಿ, ಉಶ್ಮಸಿ** ಇತ್ಯಾದಿ ಕಾಂತಿಕರ್ಮಗಳಲ್ಲಿ ಹರ್ಯತಿ ಎಂಬುದು ಪಠಿತವಾಗಿರುವುದರಿಂದಲೂ (ನಿ. ೩-೯) **ಹರ್ಯತಿಃ ಪ್ರೇಪ್ಸಾಕರ್ಮಾ** ಎಂಬ ನಿರ್ವಚನವಿರುವುದರಿಂದಲೂ ಸಹ (ನಿ. ೭-೧೭) ಹರ್ಯತಂ ಎಂದರೆ ಇಚ್ಛಿಸಿರಿ, ಅಪೇಕ್ಷಿಸಿ ಎಂದರ್ಥವು. ಈ ಋಕ್ಕಿನಲ್ಲಿ ಇಬ್ಬರಿಗೂ ಒಟ್ಟಿಗೆ ಸೇರಿಸಿ **ಇಮಂ ಹವಂ ಶೃಣುತಂ ಸೂಕ್ತಾನಿ ಪ್ರತಿ ಹರ್ಯತಂ** ಎಂದು ಮಾಡಿರುವ ಪ್ರಾರ್ಥನೆಯಂತೆಯೇ ಪ್ರತ್ಯೇಕವಾಗಿಯೂ ಸಹ ಒಂದೇ ಆನುಪೂರ್ವಿವುಳ್ಳ ಪ್ರಾರ್ಥನೆಯು ಬೇರೆ ಬೇರೆ ಸ್ಥಳಗಳಲ್ಲಿವೆ. ಉದಾಹರಣೆಗೆ—

**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**

( ಋ. ಸಂ. ೧-೦೧೫-೦೨ )

**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**

( ಋ. ಸಂ. ೧-೯೧-೧೦ )

ಎಂದು ಅಗ್ನಿಗೆ ಮಾಡಿರುವ ಪ್ರಾರ್ಥನೆಯಂತೆಯೇ ಸ್ವಲ್ಪವೂ ವ್ಯತ್ಯಾಸವಿಲ್ಲದೇ ಋ. ಸಂ. ೧-೯೧-೧೦ ನೇಯ ಋಕ್ಕಿನಲ್ಲಿ ಸೋಮವನ್ನು ಕುರಿತು ಪ್ರಾರ್ಥನೆಯಿದೆ. ಈ ಋಕ್ಕಿನಲ್ಲಿ ಇಬ್ಬರನ್ನೂ ಸೇರಿಸಿದೆ. ನಮ್ಮ ಯಜ್ಞವನ್ನು ನಮ್ಮ ಪ್ರಾರ್ಥನೆಯನ್ನೂ ಅತ್ಯಂತ ಅಭಿಮಾನದಿಂದ ಇಚ್ಛಿಸಿರಿ ಎಂದರ್ಥವು.

**ಮಯಃ**—**ಶರ್ಮ, ಸ್ಯೂಮಕಂ** ಇತ್ಯಾದಿ ಸುಖನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಮಯಃ ಎಂದರೆ ಸುಖವೆಂದರ್ಥವು. ಇಲ್ಲಿ ಸುಖದಾತೃವೆಂದಾಗುತ್ತದೆ. ಇದರಿಂದ ಲಭಿಸತಕ್ಕ ಸುಖದ ಸ್ವರೂಪವೇನೆಂಬುದನ್ನು ಋ. ಸಂ. ೧-೯೧-೯ನೆಯ ಋಕ್ಕಿನ ವಿವರಣೆಯಲ್ಲಿ ವಿಶದವಾಗಿ ತಿಳಿಸಿದೆ.

ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಲೋಽವ ಯಾಸಿಸೀಷ್ಠಾಃ । ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಂಸಿ ಪ್ರಮುಮುಗ್ಧ್ಯಸ್ಮತ್ ॥

(ಋ. ಸಂ. ೪–೧–೪)

ಇದರ ಅರ್ಥವು—

ಎಲೈ ಅಗ್ನಿಯೇ ಸರ್ವಜ್ಞನಾದ ನೀನು ದೇವತಾತ್ಮನಾದ ವರುಣನ ಕ್ರೋಧವನ್ನು ನಮ್ಮಿಂದ ತಪ್ಪಿಸಿ ದೂರಮಾಡು. ಪೂಜ್ಯತಮನೂ ಹವಿಸ್ಸಿನ ವಾಹಕನೂ ಪ್ರಕಾಶಮಾನನೂ ಆದ ನೀನು ಸಮಸ್ತವಾದ ಪಾಪಗಳನ್ನು ನಮ್ಮಿಂದ ಬಿಡಿಸಿ ನಾಶಮಾಡು.

ಅಗ್ನೀಪರ್ಜನ್ಯಾವವತಂ ಧಿಯಂ ಮೇಽಸ್ಮಿನ್ಹವೇ ಸುಹವಾ ಸುಷ್ಟುತಿಂ ನಃ ।
ಇಳಾಮನ್ಯೋ ಜನಯದ್ಗರ್ಭಮನ್ಯಃ ಪ್ರಜಾವತೀರಿಷ ಆ ಧತ್ತ-ಮಸ್ಮೇ ॥

(ಋ. ಸಂ. ೬–೫೨–೧೬)

ಇದರ ಅರ್ಥವು—ಎಲೈ ಅಗ್ನಿ ಮತ್ತು ಪರ್ಜನ್ಯದೇವತೆಗಳೇ, ನನ್ನ ಯಜ್ಞಕ್ರಿಯೆಯನ್ನು ರಕ್ಷಿಸಿರಿ ಉತ್ತಮವಾದ ಆಹ್ವಾನಕ್ಕೆ ಸುಲಭರಾದ ಎಲೈ ದೇವತೆಗಳೇ ನಮ್ಮ ಈ ಯಜ್ಞಾರ್ಥನಾದ ಆಹ್ವಾನದಲ್ಲಿ ನಮ್ಮ ಉತ್ತಮವಾದ ಸ್ತುತಿಯನ್ನು ರಕ್ಷಿಸಿರಿ. ನಮ್ಮಲ್ಲಿ ಒಬ್ಬನಾದ ಪರ್ಜನ್ಯನು ಅನ್ನವನ್ನು ಉತ್ಪನ್ನಮಾಡುತ್ತಾನೆ. ಎಲೈ ಅಗ್ನಿ ಮತ್ತು ಪರ್ಜನ್ಯ ದೇವತೆಗಳೇ ಪ್ರಜೆಗಳಿಂದ ಕೂಡಿದ ಅನ್ನವನ್ನು ನಮ್ಮಲ್ಲಿ ತುಂಬಿಡಿರಿ.

ಅಗ್ನೇ ದೇವಾ೯ ಇಹ ವಹ ಸಾದಯಾ ಯೋನಿಷು ತ್ರಿಷು ।
ಪರಿ ಭೂಷ ಪಿಬ ಋತುನಾ ॥

(ಋ. ಸಂ. ೧–೧೫–೪)

ಇದರ ಅರ್ಥವು—

ಎಲೈ ಅಗ್ನಿಯೇ ದೇವತೆಗಳನ್ನು ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ. ಅವರನ್ನು ಪ್ರಾತಸ್ಸವನ, ಮಾಧ್ಯಂದಿನಸವನ ತೃತೀಯ ಸವನಗಳೆಂಬ ಮೂರು ಸವನಗಳಲ್ಲಿಯೂ ಮೂರು ಪ್ರತ್ಯೇಕವಾದ ಸ್ಥಾನಗಳಲ್ಲಿ ಕುಳ್ಳಿರಿಸು. ಯೋಗ್ಯವಾದ ಅಲಂಕಾರಗಳನ್ನು ಮಾಡು ನೀನೂ ಸಹ ಋತುದೇವತೆಯೊಂದಿಗೆ ಸೋಮರಸವನ್ನು ಪಾನಮಾಡು.

ಅಗ್ನಾವಿಷ್ಣೂ ಸಜೋಷಸೇಮಾ ವರ್ಧಂತು ವಾಂ ಗಿರಃ ।
ದ್ಯುಮ್ನೈರ್ವಾಜೇಭಿರಾ ಗತಂ ॥

(ಮೈ. ಶಾ. ೪–೧೦–೧)

ಈ ರೀತಿ ಶ್ರೀಯಾಸ್ಕಮುನಿವಿರಚಿತ ನಿರುಕ್ತಭಾಷ್ಯದಲ್ಲಿ ಏಳನೇ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ನವಮಃ ಖಂಡಃ

## ಒಂಬತ್ತನೆಯ ಖಂಡವು

ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ | ಸ ತ್ವೈತೇಭ್ಯಃ ಪರಿದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ | (ಋ. ಸಂ. ೧೦-೧೭-೩) || ಪೂಷಾ ತ್ವೇತಃ ಪ್ರಚ್ಯಾವಯತು ವಿದ್ವಾನನಷ್ಟಪಶುರ್ಭುವನಸ್ಯ ಗೋಪಾ ಇತ್ಯೇಷ ಹಿ ಸರ್ವೇಷಾಂ ಭೂತಾನಾಂ ಗೋಪಾಯಿತಾದಿತ್ಯಃ ಸ ತ್ವೈತೇಭ್ಯಃ ಪರಿದದತ್ಪಿತೃಭ್ಯ ಇತಿ ಸಾಂಶಯಿಕಸ್ತೃತೀಯಃ ಪಾದಃ ಪೂಷಾ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಮಗ್ನಿರುಪರಿಷ್ಟಾತ್ತಸ್ಯ ಪ್ರಕೀರ್ತನೇತ್ಯಪರಮ್ | ಅಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ | ಸುವಿದತ್ರಂ ಧನಂ ಭವತಿ ವಿಂದತೇರ್ವೈಕೋಪಸರ್ಗಾದ್ದದಾತೇರ್ವಾ ಸ್ಯಾದ್ವ್ಯುಪಸರ್ಗಾತ್ || ೯ ||

ಪೂಷಾ ತ್ವೇತಶ್ಚ್ಯಾವಯತು ಪ್ರವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ |
ಸತ್ವೈತೇಭ್ಯಃ ಪರಿದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ||

(ಋ. ಸಂ. ೭-೬-೨೩)

ಪೂಷಾ ಮತ್ತು ಅಗ್ನಿಗಳಿಗೆ ಭಿನ್ನಭಿನ್ನವಾದ ಸ್ತುತಿಯನ್ನು ತಿಳಿಸುವ ಋಙ್ಮಂತ್ರವು ಇಲ್ಲಿ ಉದಾಹೃತವಾಗಿದೆ. ಈ ಮಂತ್ರಾರ್ಥದಲ್ಲಿ ಭಿನ್ನಾಭಿಪ್ರಾಯವಿರುವುದರಿಂದ ಇದಕ್ಕೊಂದು ಪ್ರತ್ಯೇಕ ಖಂಡವನ್ನು ಕಲ್ಪಿಸಿರುತ್ತಾರೆ.

ಪೂಷಾ ತ್ವೇತಃ ಪ್ರಚ್ಯಾವಯುವತು ವಿದ್ವಾನನಷ್ಟಪಶುರ್ಭುವನಸ್ಯ ಗೋಪಾ
ಇತ್ಯೇಷ ಹಿ ಸರ್ವೇಷಾಂ ಭೂತಾನಾಂ ಗೋಪಾಯಿತಾಽಽದಿತ್ಯಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಕಲಲೋಕವನ್ನು ಪೋಷಿಸುವವನು ಪೂಷಾ. ಪೂಜ್ಯನಾದ ಆದಿತ್ಯನೆಂದರ್ಥ ವಿದ್ವಾನ್, ಅನಿಷ್ಟಪಶು, ಭುವನಸ್ಯ ಗೋಪಾಃ ಈ ಮೂರು ಅವನಿಗೆ ವಿಶೇಷಣಗಳು. ವಿದ್ವಾನ್ ಅಂದರೆ ಸಕಲವನ್ನೂ ಯಾವತಡೆಯಿಲ್ಲದೆ ಪ್ರತ್ಯಕ್ಷವಾಗಿ ತಿಳಿದವನು ಆದುದರಿಂದಲೇ ನಾಶವಾಗದ ಪಶುಗಳುಳ್ಳವನು. ಸೂರ್ಯನಿದ್ದರೆ ಸಕಲ ಪ್ರಾಣಿಜಾತವೂ ಜೀವಿಸಿರುವುದರಿಂದ ಅವನು ಪಶುಸಂಪತ್ತುಳ್ಳವನೆಂದರ್ಥ. ಹೀಗೆ ಅಂತರಕ್ಷದಲ್ಲಿದ್ದು ಮಾರ್ಗಾಧಿಪತಿಯಾಗಿ ಸಕಲ ಭೂತರಕ್ಷಕನಾಗಿರುವ ಆದಿತ್ಯನ್ನು ಮರಣಹೊಂದಿದ ನಿನ್ನನ್ನು ಈ ಮನುಷ್ಯ ಲೋಕದಿಂದ ಒಯ್ದು ವಿಶಿಷ್ಟಮಾರ್ಗದಿಂದ ಉತ್ತಮಲೋಕಕಕ್ಕೆ ಸೇರಿಸಲಿ. ಎಂದು ಎರಡು ಪಾದಗಳಿಗೆ ಅರ್ಥವಾಗುತ್ತದೆ. ಈ ಅರ್ಥದಲ್ಲಿ ಯಾವ ಸಂಶಯವೂ ಇಲ್ಲ.

ಸತ್ವೈತೇಭ್ಯಃ ಪರಿದದತ್ಪಿತೃಭ್ಯ ಇತಿ ಸಾಂಶಯಿಕಸ್ತೃತೀಯಃ ಪಾದಃ ||

ಸಂಶಯವುಳ್ಳದ್ದು ಸಾಂಶಯಿಕ. ಸಂಶಯಕ್ಕೆ ವಿಷಯವಾದುದು ಎಂದರ್ಥ. ಸಂಶಯೆಮಾಪನ್ನಃ ಸೂತ್ರದಿಂದ ಸಂಶಯ ಶಬ್ದದಮೇಲೆ ಠಕ್‌ಪ್ರತ್ಯಯ. ಆದಕ್ಕೆ ಇಕಾದೇಶ. ಆದಿವೃದ್ಧಿ ಸಾಂಶಯಿಕ ಎಂದಾಗಿದೆ. ಮಂತ್ರದ ಮೂರನೆಯ ಪಾದದ ಅರ್ಥವು ಸಂಶಯಾಸ್ಪದವಾಗಿದೆ. ಸಃ (ಅವನು) ಎಂಬ ಸರ್ವನಾಮು ಪದವಿರುವುದರಿಂದ ಆದರಿಂದ ಯಾರನ್ನು ತೆಗೆದುಕೊಳ್ಳ ಬೇಕು ಎಂದು ಸಂಶಯಬರುತ್ತದೆ.

**ಪೂಷಾ ಪುರಸ್ತಾತ್ ||**

ಸಂಶಯಾಕಾರವನ್ನು ತೋರಿಸುತ್ತಾರೆ. ಪೂಷಾ ತ್ವೇತಶ್ಚ್ಯಾವಯತು ಎಂದು ಪೂರ್ವವಾಕ್ಯದಲ್ಲಿ ಪೂ ಷಾದೇವತೆಯನು ಹೇಳಿರುತ್ತಾರೆ.

**ತಸ್ಯಾನ್ವಾದೇಶಃ ಇತ್ಯೇಕಮ್ ||**

ಒಬ್ಬನಿಗೆ ಒಂದು ಕಾರ್ಯವನ್ನು ಹೇಳಿ ಪುನಃ ಇನ್ನೊಂದು ಕಾರ್ಯವನ್ನು ವಿಧಿಸಲು ಪುನಃ ಅವನನ್ನೇ ತೆಗೆದುಕೊಳ್ಳುವುದಾದರೆ ಆಗ ಅನ್ವಾದೇಶವೆಂದು ಹೇಳುತ್ತಾರೆ. ಆದಿತ್ಯನಿಗೆ ಪ್ರಚ್ಯಾವಯತು ಅಂದರೆ ವಿಶಿಷ್ಟಲೋಕವನ್ನು ಹೊಂದಿಸು ಎಂದು ಒಂದು ಕಾರ್ಯವನ್ನು ಹೇಳಿ ಪುನಃ ಅವನಿಗೇ ಪಿತೃಲೋಕಕ್ಕೆ ಸೇರಿಸು ಎಂದು ಇನ್ನೊಂದು ಕಾರ್ಯವನ್ನು ಹೇಳಲು ಪುನಃ ಹೇಳಬೇಕಾದು ದರಿಂದ ಸಃ ಎಂಬ ಸರ್ವನಾಮವು ಪೂಷದೇವತೆಯನ್ನೇ ಪರಾಮರ್ಶಮಾಡುತ್ತದೆಂದು ಕೆಲವರ ಮತ. ಏಕಂ ದರ್ಶನಂ ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ಆಗ ಪೂಷದೇವತೆಯನ್ನು ಮೂರುಪಾದಗಳಿಂದಲೂ, ಕೊನೆಯ ಒಂದು ಪಾದದಿಂದ ಅಗ್ನಿ ಯನ್ನೂ ಪೂರ್ವೋಕ್ತಮಂತ್ರವು ಸ್ತುತಿಸುತ್ತದೆಂದು ವ್ಯಕ್ತವಾಗುತ್ತದೆ. ಇನ್ನು ಕೆಲವರು ಪೂರ್ವದ ಎರಡು ಪಾದಗಳು ಪೂಷ ದೇವತೆಯನ್ನೂ ಮುಂದಿನ ಎರಡು ಪಾದಗಳು ಅಗ್ನಿಯನ್ನೂ ಸ್ತುತಿಸುತ್ತವೆಯೆಂದು ಸಮರ್ಥಿಸುತ್ತಾರೆ. ಆಗ ತಚ್ಛಬ್ದವು (ಸಃ) ಅಗ್ನಿಯನ್ನೇ ಪರಾಮರ್ಶಮಾಡುತ್ತದೆಂದು ಸಿದ್ಧವಾಗುತ್ತದೆ. ಪೂಷದೇವತೆಯಿಂದ ವಿಶಿಷ್ಟಮಾರ್ಗದಿಂದ ಉತ್ತಮ ಲೋಕಕ್ಕೆ ಒಯ್ದಮೇಲೆ ಮುಂದೆ ಹೇಳುವ ಅಗ್ನಿದೇವತೆಯು ಪಿತೃಲೋಕಕ್ಕೆ ಕೊಂಡಯ್ಯಲಿ. ಆ ಅಗ್ನಿಯು ವಿದ್ಯುನ್ಮಧ್ಯ ದಲ್ಲಿರುವ ವಿಶಿಷ್ಟಜ್ಞಾನವುಳ್ಳ ಅಥವಾ ಧನವುಳ್ಳ ದೇವತೆಗಳ ಮಧ್ಯದಲ್ಲಿ ಸೇರಿಸಲಿ ಎಂದು ವಾಕ್ಯಯೋಜನೆಯನ್ನು ಕಲ್ಪಿಸುತ್ತಾರೆ.

**ಅಗ್ನಿರುಪರಿಷ್ಟಾತ್ತಸ್ಯ ಪ್ರಕೀರ್ತನಾ-ಇತ್ಯಪರಮ್ ||**
**ಅಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ||**

ನಾಲ್ಕನೆಯ ಪಾದದಲ್ಲಿ ಅಗ್ನಿಯು ಉಪಾತ್ತವಾಗಿವುದರಿಂದ ತಚ್ಛಬ್ದವು ಮುಂದೆ ಹೇಳುವ ಅಗ್ನಿಯನ್ನೇ ಪರಾಮರ್ಶ ಮಾಡತ್ತದೆಂದು ಇನ್ನು ಕೆಲವರ ಅಭಿಪ್ರಾಯ ವಾಕ್ಯಯೋಜನೆ ಹಿಂದೆ ವಿವೃತವಾಗಿದೆ.

**ಸುವಿದತ್ರಂ ಧನಂ ಭವತಿ । ವಿಂದತೇ ರ್ವೈಕೋಪಸರ್ಗಾತ್ ।**
**ದದಾತೇರ್ವಾ ಸ್ಯಾದ್ ದ್ವ್ಯುಪಸರ್ಗಾತ್ ॥ ೯ ॥**

ಮಂತ್ರದಲ್ಲಿರುವ ಸುವಿದತ್ರಿಯಎಂಬ ಶಬ್ದದ ಅರ್ಥ ಮತ್ತು ವ್ಯುತ್ಪತ್ತಿಯನ್ನು ವಿವರಿಸುತ್ತಾರೆ. ಸುವಿದತ್ರಂ ಅಂದರೆ ಧನ, ಸಂಪತ್ತು. ಸುಎಂಬ. ಒಂದು ಉಪಸರ್ಗದಿಂದಕೂಡಿದ ಲಾಭಾರ್ಥಕವಾದ ವಿದ್‌ಧಾತುವಿನಿಂದ ಈ ಶಬ್ದವುಟಾಂಗಿದೆ. ಅತ್ರನ್ ಎಂಬ ಔಣಾದಿಕಪ್ರತ್ಯಯ ಬಂದಿದೆ. ಬಹುಲಗ್ರಹಣದಿಂದ ಧಾತುವಿನ ಇಕಾರಕ್ಕೆ ಗುಣಬಂದಿಲ್ಲ. ಸುಖವಾಗಿ ಇದನ್ನು ಹೊಂದು

ತ್ತಾರೆ ಎಂದರ್ಥ. ಅಥವಾ ಸು ವಿ ಎಂಬ ಎರಡು ಉಪಸರ್ಗಗಳಿಂದ ಕೂಡಿದ ದಾನಾರ್ಥಕದಾಧಾತುವಿನಿಂದ ನಿಷ್ಪನ್ನವಾಗಿದೆ, ಸುವಿದತ್ರಉಳ್ಳವರು ಸುವಿದತ್ರಿಯರು. ಛಾಂದಸವಾಗಿ ಸುವಿದತ್ರಶಬ್ದಕ್ಕೆ ಘೇನ್‌ಪ್ರತ್ಯಯ ಬಂದಿದೆ. ಇಯಾದೇಶ ವಿದ್ಯುನ್ಮಧ್ಯದಲ್ಲಿರುವ ದೇವತೆಗಳೆಂದರ್ಥ.

ಈರೀತಿಯಾಗಿ ಶ್ರೀಯಾಸ್ಕಮುನಿಪ್ರಣೀತ ನಿರುಕ್ತಭಾಷ್ಯದಲ್ಲಿ
ಏಳನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡ ಮುಗಿದಿದೆ.

## ಅಥಃ ದಶಮ ಖಂಡಃ

### ಹತ್ತನೆಯಖಂಡ

ಅಥೈತಾನೀಂದ್ರಭಕೀನ್ಯಂತರಿಕ್ಷಲೋಕೋ ಮಾಧ್ಯಂದಿನಂ ಸವನಂ ಗ್ರೀಷ್ಮಸ್ತ್ರಿಷ್ಟುಪ್‌ಪಂಚದಶಸ್ತೋಮೋ ಬೃಹತ್ಸಾಮ ಯೇ ಚ ದೇವಗಣಾಃ ಸಮಾಮ್ನಾತಾಃ ಮಧ್ಯಮೇ ಸ್ಥಾನೇ ಯಾಶ್ಚ ಸ್ತ್ರಿಯೋಽಥಾಸ್ಯ ಕರ್ಮ ರಸಾನುಪ್ರದಾನಂ ವೃತ್ರವಧೋ ಯಾ ಚ ಕಾ ಚ ಬಲಕೃತಿರಿಂದ್ರಕರ್ಮೈವ ತದಥಾಸ್ಯ ಸಂಸ್ತವಿಕಾ ದೇವಾ ಅಗ್ನಿಃ ಸೋಮೋ ವರುಣಃ ಪೂಷಾ ಬೃಹಸ್ಪತಿರ್ಬ್ರಹ್ಮಣಸ್ಪತಿಃ ಪರ್ವತಃ ಕುತ್ಸೋ- ವಿಷ್ಣು-ರ್ವಾಯುರಥಾಪಿ ಮಿತ್ರೋ ವರುಣೇನ ಸಂಸ್ತೂಯತೇ ಪೂಷ್ಣಾ ರುದ್ರೇಣ ಚ ಸೋಮೋಽಗ್ನಿನಾ ಚ ಪೂಷಾ ವಾತೇನ ಚ ಪರ್ಜನ್ಯಃ ॥ ೧೦ ॥

ಅಥ ಏತಾನೀಂದ್ರಭಕ್ತಾನಿ ॥

ಪೂರ್ವಖಂಡದಲ್ಲಿ ಅಗ್ನಿಭಕ್ತಿಗಳನ್ನು ವಿವರಿಸಿ ಈಲ್ಲಿ ಇಂದ್ರಭಕ್ತಿಗಳನ್ನು ವಿವರಿಸುತ್ತಾರೆ. ಇಲ್ಲಿಯೂ ಇಂದ್ರನ ಸಂಬಂಧವನ್ನು ಹೊಂದಿರುವವುಗಳು ಅಥವಾ ಇಂದ್ರನು ಯಾವುದನ್ನು ಹೊಂದಿರುತ್ತಾನೋ ಅದು ಇಂದ್ರಭಕ್ತಿಯೆಂದು ತಿಳಿಯಬೇಕು. ಮುಂದೆ ಹೇಳುವವುಗಳು ಇಂದ್ರಭಕ್ತಿಗಳೆಂದರ್ಥ.

ಅಂತರಿಕ್ಷಲೋಕೋ, ಮಾಧ್ಯಂದಿನಂ ಸವನಂ, ಗ್ರೀಷ್ಮಃ, ತ್ರಿಷ್ಟುಪ್, ಪಂಚದಶಸ್ತೋಮೋ, ಬೃಹತ್ಸಾಮ। ಯೇ ಚ ದೇವಗಣಾಃ ಸಮಾಮ್ನಾತಾಃ ಮಧ್ಯಮೇ ಸ್ಥಾನೇ ॥

ಅಂತರಿಕ್ಷಲೋಕ, ಯಾಗದ ಮಧ್ಯಾಹ್ನಕಾರ್ಯಕಲಾಪ, ಗ್ರೀಷ್ಮಕಾಲ, ತ್ರಿಷ್ಟುಪ್‌ಛಂದಸ್ಸು, ಪಂಚದಶಸ್ತೋಮ ಬೃಹತ್ಸಾಮಗಳು ಇಂದ್ರಭಕ್ತಿಗಳು. ಮಧ್ಯಮಸ್ಥಾನ ಅಂದರೆ ಅಂತರಿಕ್ಷದಲ್ಲಿ ಮರುದಾದಿಯಾವ ದೇವತಾಸಮುದಾಯ ಹೇಳಿದೆಯೋ ಅವೂ ಇಂದ್ರನಾಮಗಳಾಗುತ್ತವೆ.

ಯಾಶ್ಚ ಸ್ತ್ರಿಯಃ ||

ಅದಿತಿ ಮುಂತಾದ ಸ್ತ್ರೀಯರು ಇಂದ್ರಸಂಬಂಧಿಗಳೆಂದು ತಿಳಿಯಬೇಕು.

ಅಥಾಸ್ಯ ಕರ್ಮ-ರಸಾನುಪ್ರದಾನಂ, ವೃತ್ರವಧಃ, ಯಾ ಚ ಕಾ ಚ ಬಲಕೃತಿ-
ರಿಂದ್ರಕರ್ಮೈವ ತತ್ ||

ಇಂದ್ರದೇವನ ಕಾರ್ಯವನ್ನು ವಿವರಿಸುತ್ತಾರೆ. ರಸಪ್ರದಾನವೆಂದರೆ ಮಳೆಸುರಿಸುವುದು. ವೃತ್ರ ಅಂದರೆ ಮೇಘ. ಮಳೆ ಸುರಿಸದ ಮೇಘಗಳನ್ನು ಚೂರುಮಾಡಿ ನಾಶಮಾಡುವುದು. ಅಥವಾ ವೃತ್ರನೆಂಬ ಅಸುರನನ್ನು ನಾಶಮಾಡುವುದು ಹೀಗೆಯೇ ಇನ್ನೂ ಹೇಳದಿರುವ ಬಲಕಾರ್ಯಗಳು ಏನೇನಿವೆಯೋ ಅವೆಲ್ಲವೂ ಇಂದ್ರನ ಕಾರ್ಯಗಳೇ. ಆದರಾತಿಶಯವನ್ನು ತಿಳಿಸಲು ಪುನಃ ಇಂದ್ರಕರ್ಮೈವ ತತ್ ಎಂದು ಹೇಳಿದೆ. ಕೀಟ, ಇರುವೆ ಮುಂತಾದುವುಗಳಲ್ಲಿಯೂ ಬಲದಿಂದ ಯಾವ ಕಾರ್ಯವಾಗುವುದೋ ಅದು ಇಂದ್ರನ ಸಾಂನಿಧ್ಯದಿಂದಲೇ ಆದುವೆಂದು ತಿಳಿಯಬೇಕು.

ಅಥಾಸ್ಯ ಸಂಸ್ತವಿಕಾ ದೇವಾಃ ||

ಯಾವ ದೇವತೆಗಳೊಡನೆ ಈ ಇಂದ್ರನನ್ನು ಸೇರಿಸಿ ಸ್ತುತಿಸಿರುತ್ತಾರೋ ಆ ದೇವತೆಗಳನ್ನು ಮುಂದೆ ವಿವರಿಸುತ್ತಾರೆ.

ಅಗ್ನಿಃ ಸೋಮೋ ವರುಣಃ ಪೂಷಾ ಬೃಹಸ್ಪತಿಃ ಬ್ರಹ್ಮಣಸ್ಪತಿಃ
ಪರ್ವತಃ ಕುತ್ಸೋ ವಿಷ್ಣುಃ ವಾಯುಃ ||

ಅಗ್ನ್ಯಾದಿದೇವತೆಗಳೊಡನೆ ಇಂದ್ರನನ್ನು ಸ್ತುತಿಸಿರುವುದರಿಂದ ಅವರು ಇಂದ್ರನ ಸಂಸ್ತವಿಕ ದೇವತೆಗಳಾಗುತ್ತಾರೆ. ಅಗ್ನಿಯೊಡನೆ ಸಂಸ್ತವಕ್ಕೆ ಉದಾಹರಣೆ.

ಇಂದ್ರಾಗ್ನೀ ರೋಚನಾ ದಿವಃ ಪರಿ ವಾಜೇಷು ಭೂಷಥಃ |
ತದ್ವಾಂ ಚೇತಿ ಪ್ರವೀರ್ಯಮ್ ||

ಸೋಮನೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ಇಂದ್ರಾಸೋಮಾ ಸಮಘಶಂಸಮ್ ||

(ಋ. ಸಂ. ೫-೭-೭)

ವರುಣನೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ಇಂದ್ರಾವರುಣಾ ಯುವಮಧ್ವರಾಯ ನಃ ||

ಪೂಷನೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ಇಂದ್ರಾ ಪೂಷಣಾ ವಯಂ ಸಖ್ಯಾಯ ಸ್ವಸ್ತಯೇ ||
ಹುವೇಮ ವಾಜಸಾತಯೇ ||

(ಋ. ಸಂ. ೪-೮-೨೩)

ಬೃಹಸ್ಪತಿ ಸಂಸ್ತವಕ್ಕೆ ಉದಾಹರಣೆ.

ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾ ಬೃಹಸ್ಪತೀ ||
ಉಕ್ಥಂ ಮದಶ್ಚ ಶಸ್ಯತೇ ||

(ಋ. ಸಂ. ೩-೭-೨೫)

ಬ್ರಹ್ಮಣಸ್ಪತಿಯೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಂ। ಅಚ್ಛೇಂದ್ರಾಬ್ರಹ್ಮಣಸ್ಪತೀ ಹವಿರ್ನೋಽನ್ನಂ ಯುಜೇವ ವಾಜಿನಾ ಜಿಗಾತಮ್ ||

ಪರ್ವತದೊಡನೆ ಸಂಸ್ತವಕ್ಕೆ ಉದಾಹರಣೆ.

ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆವಹತಂ ಸುವೀರಾಃ। ವೀತಂ ಹವ್ಯಾನ್ಯಧ್ವರೇಷು ದೇವಾ ವರ್ಧೇಥಾಂ ಗೀರ್ಭಿರಿಳಯಾ ಮದಂತಾ ||

ಕುತ್ಸನೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ಇಂದ್ರಾಕುತ್ಸಾ ವಹಮಾನಾ ರಥೇನಾ ವಾಮತ್ಯಾ ಅಪಿ ಕರ್ಣೇ ವಹಂತು || ನಿಃಷಮದ್ಭ್ಯೋ ಧಮಥೋ ನಿಃಷಧಸ್ಥಾನ್ಮಘೋನೋ ಹೃದೋ ವರಥಸ್ತಮಾಂಸಿ ||

(ಋ. ಸಂ. ४-೧-३೦)

ವಿಷ್ಣುವಿನೊಡನೆ ಸ್ತುತಿಸಿರುವುದಕ್ಕೆ ಉದಾಹರಣೆ.

ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಮ್ || ಶತಂ ವರ್ಚಿನಃ ಸಹಸ್ರಂ ಚ ಸಾಕಂ ಹಥೋ ಅಪ್ರತ್ಯ-ಸುರಸ್ಯ ವೀರಾನ್ ||

ವಾಯುವಿನೊಡನೆ ಸಂಸ್ತವಕ್ಕೆ ಉದಾಹರಣೆ.

ಇಂದ್ರವಾಯೂ ಇಮೇ ಸುತಾ ಉಪ ಪ್ರಯೋಭಿರಾಗತಮ್ ।
ಇಂದವೋ ವಾಮುಶಂತಿ ಹಿ ||

(ಋ. ಸಂ. ೧-೧-೩)

ಅಥಾಪಿ ಮಿತ್ರೋ ವರುಣೇನ ಸಂಸ್ತೂಯತೇ ||

ಅಗ್ನ್ಯಾದಿಗಳೊಡನೆ ಇಂದ್ರನನ್ನು ಸ್ತುತಿಸುವುದರಿಂದ ಅವು ಇಂದ್ರ ಸಂಸ್ತವಿಕದೇವತೆಗಳೆಂದು ವಿವರಿಸಿದ್ದಾಯಿತು. ಈಗ ಪ್ರಕೃತ ಅಗ್ನಿ, ಇಂದ್ರ, ಆದಿತ್ಯರೊಡನೆ ಮಾತ್ರವಲ್ಲದೆ ಅವರಿಂದ ಬೇರೆಯಾದ ದೇವತೆಗಳೊಡನೆ ಮಿತ್ರಾದಿಗಳನ್ನು ಸ್ತುತಿಸಿರುತ್ತಾರೆಂದ್ರ ವಿವರಿಸುತ್ತಾರೆ. ಇಲ್ಲಿ ಪ್ರಥಮಾಂತನಿರ್ದಿಷ್ಟವಾದುದಕ್ಕೆ ಮುಖ್ಯಸ್ತುತಿಯೂ ತೃತೀಯಾಂತದಿಂದ ನಿರ್ದಿಷ್ಟವಾದುದಕ್ಕೆ ಅಮುಖ್ಯಸ್ತುತಿಯೆಂದೂ ತಿಳಿಯಬೇಕು. ವರುಣನೊಡನೆ ಮಿತ್ರನನ್ನು ಸ್ತುತಿಸಿರುವುದಕ್ಕೆ ಉದಾಹರಣೆ.

ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಮ್ ||
ಮಧ್ವಾ ರಜಾಂಸಿ ಸುಕ್ರತೂ ||

(ಋ. ಸಂ. ೩-೪-೧೧)

ಪೂಷ್ಣಾ ರುದ್ರೇಣ ಚ ಸೋಮಃ ||

ಪೂಷನೊಡನೆಯೂ, ರುದ್ರನೊಡನೆಯೂ ಸೋಮನನ್ನು ಸ್ತುತಿಸಿರುತ್ತಾರೆ. ಪೂಷನೊಡನೆ ಸೋಮಸಂಸ್ತವಕ್ಕೆ ಉದಾಹರಣೆ.

ಸೋಮಾಪೂಷಣಾ ಜನನಾ ರಯೀಣಾಂ ಜನನಾ ದಿವೋ ಜನನಾ
ಪೃಥಿವ್ಯಾಃ | ಜಾತೌ ವಿಶ್ವಸ್ಯ ಭುವನಸ್ಯ ಗೋಪೌ ದೇವಾ ಅಕೃಣ್ವನ್ನ-
ಮೃತಸ್ಯ ನಾಭಿಮ್ ||

ರುದ್ರನೊಡನೆ ಸೋಮಸಂಸ್ತವಕ್ಕೆ ಉದಾಹರಣೆ.

ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷಜಾನಿ
ಧತ್ತಮ್ | ಅವಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ
ಕೃತಮೇನೋ ಅಸ್ಮತ್ |

ಅಗ್ನಿನಾ ಚ ಪೂಷಾ

ಅಗ್ನಿಯೊಡನೆ ಪೂಷನನ್ನು ಸ್ತುತಿಸಿರುತ್ತಾರೆ. ಅಗ್ನಿ ಪಾರ್ಥಿವದೇವತೆ ದ್ಯುಸ್ಥಾನ, ಅಂತರಿಕ್ಷಸ್ಥಾನಗಳಿಗೆ ಸಂಸ್ತವವಿದ್ದರೂ ಅವುಗಳಿಗೆ ಪಾರ್ಥಿವದೊಡನೆ ನಿಷೇಧವಿರುವುದರಿಂದ ವ್ಯಾಖ್ಯಾನಕಾರರು ಇದಕ್ಕೆ ಉದಾಹರಣೆ ತೋರಿಸಿಲ್ಲ. ಉದಾಹರಣೆ ಹುಡುಕಬೇಕೆಂದು ಕೆಲವರ ಮತ.

ವಾತೇನ ಚ ಪರ್ಜನ್ಯಃ || ೧೦ ||

ವಾತದೇವತೆಯೊಡನೆ ಪರ್ಜನ್ಯನನ್ನು ಸ್ತುತಿಸುತ್ತಾರೆ. ಅದಕ್ಕೆ ಉದಾಹರಣೆ.

ಧರ್ತಾರೋ ದಿವ ಋಭವಃ ಸುಹಸ್ತಾ
ವಾತಾಪರ್ಜನ್ಯಾ ಮಹಿಷಸ್ಯ ತನ್ಯತೋಃ ||

ಆಪ ಔಷಧೀಃ ಪ್ರತಿರಂತು ನೋ ಗಿರೋ
ಭಗೋ ರಾತಿರ್ವಾಜಿನೋ ಯಂತು ಮೇ ಹವಮ್ ||

(ಋ. ಸಂ. ೮–೨–೧೩)

ಇಂದ್ರಾಗ್ನೀ ರೋಚನಾ ದಿವಃ ಪರಿ ವಾಜೇಷು ಭೂಷಥಃ |
ತದ್ವಾಂ ಚೇತಿ ಪ್ರವೀರ್ಯಂ ||

(ಋ. ಸಂ. ೩–೪೨–೯)

ಇದರ ಅರ್ಥವು—

ಎಲೈ ಇಂದ್ರಾಗ್ನಿಗಳೇ, ದೇವಲೋಕಕ್ಕೆ ಪ್ರಕಾಶದಾಯಕರಾದ ನೀವಿಬ್ಬರೂ ಯುದ್ಧಗಳಲ್ಲಿ ಜಯಶಾಲಿಗಳಾಗುತ್ತೀರಿ. ನಿಮ್ಮ ಸಾಮರ್ಥ್ಯವು ನೀವು ಜಯಶಾಲಿಗಳಾಗುತ್ತೀರೆಂಬುದನ್ನು ಪ್ರಸಿದ್ಧಿಪಡಿಸುತ್ತದೆ.

ದಿವಃ ರೋಚನಾ—ಸ್ವರ್ಗಸ್ಯ ಪ್ರಕಾಶಕೌ ! ಯಾಸ್ಕರು ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ| (ನಿ. ೧–೭) ಎಂದು ಹೇಳಿ ಅಹರ್ನಾಮಗಳಲ್ಲಿ (ನಿ. ೨–೨೧) ಪಾಠಮಾಡಿದ್ದಾರೆ.

ಮಿತ್ರೋ ಜನಾನ್ ಯಾತಯತಿಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ |
ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ |

(ಋ. ಸಂ. ೩–೫೯–೧)

ಮತ್ತು—

ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಂ|
ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು |

(ಋ. ಸಂ. ೧೦–೮೧–೬)

ಇಲ್ಲಿಯೂ ಸಹ ದ್ಯುಶಬ್ದಕ್ಕೆ ಅಂತರಿಕ್ಷ ಅಥವಾ ಸ್ವರ್ಗ ಎಂಬ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸ್ವರ್ಗವೆಂದು ಅರ್ಥಮಾಡಿ ಇಂದ್ರಾಗ್ನಿಗಳು ಸ್ವರ್ಗವನ್ನು ಪ್ರಕಾಶಗೊಳಿಸುವರು ಎಂದು ವರ್ಣಿಸಿದೆ.

ವಾಜೇಷು ಪರಿ ಭೂಷಿತಃ —ವಾಜ ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩–೯) ಉಕ್ತವಾಗಿದೆ. ಈ ಪದವು ಅನೇಕಾರ್ಥಕವಾಗಿದ್ದರೂ ಇಲ್ಲಿ ಸಂಗ್ರಾಮ—ಯುದ್ಧ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದೂ. ಯುವಾಂ ಪರಿಥಃ ಸರ್ವತಃ ಅಲಂಕೃತೌ ಭವತಃ, ಶತ್ರೂನ್ ಪರಾಜಿತ್ಯ ಸರ್ವತೋ ವಿಜಯಮಾನೌ ವರ್ತೇಥೇ | ಇಂದ್ರಾಗ್ನಿಗಳನ್ನು ಸಂಬೋಧಿಸಿ, ಅವರಿಬ್ಬರೂ ಯುದ್ಧಗಳಲ್ಲಿ ಅಲಂಕೃತರಾಗಿರುವರೆಂದೂ, ಶತ್ರುಗಳನ್ನು ಜಯಿಸಿ ಸರ್ವಪ್ರಕಾರಗಳಿಂದಲೂ ಜಯಶೀಲರಾಗಿರುವರೆಂದೂ ವರ್ಣಿಸಿದೆ. ಮತ್ತುಯದ್ವಾ ಯುವಾಂ ವಾಜೇಷು ಸಂಗ್ರಾಮೇಷು ಶತ್ರೂನ್ ಪರಿ ಭೂಪತಃ ಪರಿಭವತಃ—ಅಥವಾ ಶತ್ರುಗಳನ್ನು ಯಾವಾಗಲೂ ಜಯಿಸುವವರೆಂದೂ ಹೇಳಿದೆ,

ವಾಂ ವೀರ್ಯಂ ತತ್ ಪ್ರ ಚೇತಿಎಂಬ ವಾಕ್ಯದಿಂದ ನಿಮ್ಮಿಬ್ಬರ ಸಾಮರ್ಥ್ಯವು ನೀವು ಆಚರಿಸಿರುವ ನಿಮ್ಮ ಆಪ್ರಕಾರವಾದ ಯುದ್ಧದ ಜಯವನ್ನು ಎಲ್ಲರಿಗೂ ತಿಳಿಸುತ್ತದೆ ಎಂದು ವರ್ಣಿಸಿ ಇಂದ್ರಾಗ್ನಿಗಳ ಮಹತ್ತ್ವಪೂರ್ವವಾದ ವೀರ್ಯದ ಮಹಿಮೆಯನ್ನು ವಿವರಿಸಿದೆ.

ಇಂದ್ರಾನು ಪೂಷಣಾ ವಯಂ ಸಖ್ಯಾಯ ಸ್ವಸ್ತಯೇ ।
ಹುವೇಮ ವಾಜಸಾತಯೇ ॥

(ಋ. ಸಂ. ೬–೫೭–೧)

ಇದರ ಅರ್ಥವು—

ಈಗ ನಾವು ನಮ್ಮ ಕಲ್ಯಾಣಾರ್ಥವಾಗಿಯೂ ಅವರೊಡನೆ ಮಿತ್ರತ್ವದ ಸಂಪಾದನೆಗಾಗಿಯೂ ಅನ್ನಲಾಭಾರ್ಥವಾಗಿಯೂ ಇಂದ್ರ ಮತ್ತು ಪೂಷದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ.

ಇದಂ ವಾಮಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ ।
ಉಕ್ಥಂ ಮದಶ್ಚ ಶಸ್ಯತೇ ॥

(ಋ. ಸಂ. ೪–೪೯–೧)

ಇದರ ಅರ್ಥವು—

ಎಲೈ ಇಂದ್ರಾಬೃಹಸ್ಪತಿಗಳೇ, ಇಲ್ಲಿ ಪ್ರಸಿದ್ಧವಾಗಿರುವುದೂ ನಿಮಗೆ ಅತ್ಯಂತ ಪ್ರಿಯವಾದುದೂ ಆದ ಸೋಮರೂಪವಾದ ಹವಿಸ್ಸನ್ನು ನಿಮ್ಮ ಮುಖದಲ್ಲಿ ಅರ್ಪಿಸುತ್ತೇನೆ. ಮತ್ತು ಹರ್ಷಕಾರಕವಾದ ಶಸ್ತ್ರಮಂತ್ರವನ್ನೂ ಪಠಿಸಿ ನಿಮಗೆ ಅರ್ಪಿಸುತ್ತೇನೆ.

ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ
ವ್ರತಂ ವಾ ।
ಅಚ್ಛೇಂದ್ರಾ ಬ್ರಹ್ಮಣಸ್ಪತೀ ಹವಿರ್ನೋಽನ್ನಂ ಯುಜೇವ ವಾಜಿ-
ನಾಂ ಜಿಗತಂ ॥

ಇದರ ಅರ್ಥವು—

ಧನಾಧಿಪತಿಗಳಾದ ಎಲೈ ಇಂದ್ರ ಮತ್ತು ಬ್ರಹ್ಮಣಸ್ಪತಿ ದೇವತೆಗಳೇ, ಸಮಸ್ತ ಸ್ತೋತ್ರವೂ ಸತ್ಯಾತ್ಮಕವಾಗಿ ನಿಮ್ಮದೇ ಆಗಿದೆ. ಉದಕವನ್ನು ಆಶ್ರಯಿಸಿರುವ ಸಕಲ ಭೂತಗಳೂ ನಿಮ್ಮಿಬ್ಬರ ಕರ್ಮವನ್ನು ಮೀರುವುದಿಲ್ಲ. ರಥಕ್ಕೆ ಕಟ್ಟಿರುವ ಅಶ್ವಗಳು ಹುಲ್ಲಿನ ಅಭಿಮುಖವಾಗಿ ಹೋಗುವಂತೆ ನಮ್ಮ ಹವಿಸ್ಸಿಗೆ ಅಭಿಮುಖವಾಗಿ ನೀವು ಬನ್ನಿರಿ.

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದೆ. ಎಲೈ ಸೋಮ ಮತ್ತು ಪೂಷನ್ ಎಂಬ ದೇವತೆಗಳೇ ನೀವಿಬ್ಬರೂ ಧನಕ್ಕೆ ಅಧಿಪತಿಗಳಾಗಿರುವಿರಿ ಎಂದರೆ ಧನವನ್ನು ಪಶುಸಂಪತ್ತನ್ನು ಉತ್ಪನ್ನಮಾಡುವಿರಿ. ದ್ಯುಲೋಕ ಎಂದರೆ ಸ್ವರ್ಗವನ್ನೂ, ಭೂಮಿಯನ್ನೂ ನೀವೇ ಉತ್ಪನ್ನಮಾಡಿರುವಿರಿ ನಿಮ್ಮಿಂದಲೇ ಸ್ವರ್ಗವೂ ಭೂಮಿಯೂ ಉಂಟಾದುವು. ಇದಲ್ಲನೆ ಹುಟ್ಟಿದ ಕೂಡಲೇ ಎಂದರೆ ಜನ್ಮಾರಭ್ಯ ನೀವು ಸಮಸ್ತ ಜಗತ್ತಿಗೂ ಪಾಲಕರಾಗಿರುವಿರಿ. ಆದುದರಿಂದಲೇ ದೇವತೆಗಳು ನಿಮ್ಮನ್ನು ಮರಣರಹಿತವಾದ ಪದವಿಗೆ ಮುಖ್ಯಕಾರಣರನ್ನಾಗಿ ಮಾಡಿದರು ಅಥವಾ ಮರಣರಹಿತವಾದ ಪದವಿಗೆ ನೀವೇ ಕಾರಣರಾಗುವಂತೆ ಮಾಡಿದರು ಎಂದರೆ ನಿಮ್ಮಿಂದಲೇ ಎಲ್ಲರೂ ಅಮರ್ತ್ಯಪದವಿಯನ್ನು (ಮರಣವಿಲ್ಲದಿರುವಿಕೆಯನ್ನು) ಪಡೆಯುವಂತಾಯಿತು ಎಂದು ಮುಖ್ಯಾಭಿಪ್ರಾಯವು.

ಅಮೃತಸ್ಯ—ಮೃತವೆಂದರೆ ಸಾಯುವುದು, ಅಮೃತವೆಂದರೆ ಅದಿಲ್ಲದಿರುವ ಸ್ಥಿತಿ, ಚಿರಂಜೀವಿತ್ವ. ದೇವತೆಗಳು ಮರಣಕ್ಕೆ ಒಳಗಾಗದೆ ಸದಾಕಾಲದಲ್ಲಿಯೂ ಬದುಕುವರೆಂಬ ಪ್ರತೀತಿ ಇದೆ. ಅಮೃತವೆಂದರೆ ಸೋಮರಸವೆಂದೂ, ಉದಕವೆಂದೂ, ದೇವತೆಗಳ ಅತ್ಯುತ್ತಮ ಆಹಾರವೆಂದೂ, ನಾನಾವಿಧ ಅರ್ಥಗಳಾಗುವುವು.

> ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।
> ವೀತಂ ಹವ್ಯಾನ್ಯಧ್ವರೇಷು ದೇವಾ ವರ್ಧೇಥಾಂ ಗೀರ್ಭಿರಿಳಯಾ ಮದಂತಾ ॥

ಇದರ ಅರ್ಥವು—

ಎಲೈ ಇಂದ್ರ ಮತ್ತು ಪರ್ವತರೇ ಮಹತ್ಸ್ವರೂಪವುಳ್ಳ ನಿಮ್ಮ ರಥದಲ್ಲಿ ಶ್ಲಾಘ್ಯವಾದುದೂ ಶ್ರೇಷ್ಠರಾದ ಪುತ್ರರೊಡಗೂಡಿದುದೂ ಆದ ಅನ್ನವನ್ನು ತೆಗೆದುಕೊಂಡು ಬನ್ನಿ. ಪ್ರಕಾಶಮಾನರಾದ ನೀವು ಯಜ್ಞಗಳಲ್ಲಿ ಪೂಜಾಯೋಗವಾದ ಪುರೋಡಾಶಾದಿಗಳನ್ನು ಭಕ್ಷಿಸಿ ಹವಿಸ್ಸಿನಿಂದ ಸಂತುಷ್ಟರಾದ ನೀವು ನಮ್ಮ ಸ್ತುತಿರೂಪವಾದ ವಾಕ್ಕುಗಳಿಂದ ಸಮೃದ್ಧಿಯನ್ನು ಪಡೆಯಿರಿ.

ಇಂದ್ರಾಪರ್ವತಾ—ಈ ಶಬ್ದದಿಂದ ಇಂದ್ರನನ್ನೂ ಮೇಘ ಅಥವಾ ಮೇಘಾಧಿಮಾನಿದೇವತೆ ಎಂದರೆ ಪರ್ಜನ್ಯನನ್ನು ಸಂಬೋಧಿಸಲಾಗಿದೆ. ಈ ಶಬ್ದವು ಋಗ್ವೇದದಲ್ಲಿ ಪ್ರಕೃತ ಋಕ್ಕಿನಲ್ಲಿಯೂ, ಋ. ಸಂ. ೧–೧೨೨–೩ ಮತ್ತು ೧೧-೩೨-೬ ನೇ ಋಕ್ಕುಗಳಲ್ಲಿಯೂ ಮಾತ್ರ ಪಠಿತವಾಗಿರುವುದು. ಇನ್ನೆಲ್ಲಿಯೂ ಇರುವುದಿಲ್ಲ. ಈ ಋಕ್ಕುಗಳಲ್ಲಿ ಇಂದ್ರಾಪರ್ವತಾ ಎಂಬ ಶಬ್ದಾರ್ಥವನ್ನು ವಿವರಿಸುವಾಗ ಭಾಷ್ಯಕಾರರು—

> ಇಂದ್ರಾಪರ್ವತಾ । ಇಂದ್ರ ಪ್ರಸಿದ್ಧಃ । ಪರ್ವತಃ ಪರ್ವವಾನ್ ವೃಷ್ಟ್ಯಾದಿಪೂರಣವಾನ್ ಪರ್ಜನ್ಯಃ ॥

ಎಂದರೆ ಇಂದ್ರನು ಪ್ರಸಿದ್ಧನಾದ ದೇವತೆಯು ; ಪರ್ವತವೆಂದರೆ ವೃಷ್ಟ್ಯಾದಿಗಳಿಂದ ಭೂಮಿಯನ್ನು ತುಂಬುವ ವೃಷ್ಟ್ಯಭಿಮಾನಿ ದೇವತೆಯಾದ ಪರ್ಜನ್ಯನೆಂಬ ದೇವತೆ ಎಂದು ಹೇಳಿರುವರು. **ಪರ್ವತಃಸಂವತ್ಸರಃ**—ಪರ್ವತಶಬ್ದಕ್ಕೆ ಸಂವತ್ಸರವೆಂಬ ಅರ್ಥವೂ ಉಂಟೆಂದು ಭಟ್ಟಭಾಸ್ಕರರು ಹೇಳಿದ್ದಾರೆ ಪರ್ವತಶಬ್ದಕ್ಕೆ ಯಾವ ಅರ್ಥವನ್ನು ಹೇಳಿದರೂ ಇಲ್ಲಿ ಪರ್ವತ ಶಬ್ದವು ಒಂದು ಆರಾಧ್ಯದೇವತೆಯ ಪರ್ಯಾಯಪದವಾಗಿದೆಯೆಂಬುದು ಸ್ಪಷ್ಟವಾಗಿದೆ. ಈ ಪದವನ್ನು ಶತ್ರುಪರ್ಯಾಯವಾಗಿಯೂ ಉಪಯೋಗಿಸಿ ಪರ್ವತಚ್ಛೇದನದಿಂದ (ಪರ್ವತಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. ನಿ. ೨-೨೧) ಇಂದ್ರನು ವೃಷ್ಟಿಯನ್ನು ಸುರಿಸಿದನು. ಇತ್ಯಾದಿಯಾಗಿ ಅನೇಕಕಡೆಗಳಲ್ಲಿ ಹೇಳಿರುವುದರಿಂದ ಈ ಪದಪ್ರಯೋಗವಿಷಯದಲ್ಲಿ ವಿಮರ್ಶೆಯು ಉಚಿತವಾಗಿದೆ.

ಪರ್ವತ ಶಬ್ದದ ಪ್ರಯೋಗವು ಇಂದ್ರ ಮತ್ತು ಮರುತ್ತುಗಳ ಸೂಕ್ತದಲ್ಲಿಯೇ ಅಧಿಕವಾಗಿದೆ. ಇದರ ಸಾಧಾರಣವಾದ ಅರ್ಥವು ಪರ್ವತ ಬೆಟ್ಟ(ವೆಂದೇ) ಆದರೂ ಮೇಘ ಪರ್ಯಾಯವಾಗಿರುವುದು ವಾಡಿಕೆಯಾಗಿದೆ. ನಿರುಕ್ತಕಾರರು **ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ಮೇಘೋಽಪಿ ಗಿರಿರೇತಸ್ಮಾದೇವ!** (ನಿ.೧-೨೦) ತುಂಬು ಎಂಬರ್ಥವನ್ನು ಕೊಡುವ ಪೃಧಾತುವಿನಿಂದಾಗಲೀ ಅರಾಧಿಸು ಅಥವಾ ತೃಪ್ತಿಗೊಳಿಸು ಎಂಬರ್ಥವನ್ನು ಕೊಡುವ

ಪ್ರೀ ಧಾತುವಿನಿಂದಾಗಲೀ ನಿಷ್ಪನ್ನವಾದ ಪರ್ವ ಶಬ್ದದಿಂದ ಪರ್ವತವೆಂದಾಗಿದೆಯೆಂದು ತೋರಿಸಿ ಪರ್ವತ (ಬೆಟ್ಟ) ಅಥವಾ ಮೇಘ ಎಂದಾಗುತ್ತದೆಯೆಂದು ನಿರ್ವಚನವನ್ನು ಮಾಡಿದ್ದಾರೆ. ಈ ಶಬ್ದವ್ಯುತ್ಪತ್ತಿಯು ಬರಿದಾಗಿರುವ ಪ್ರದೇಶವನ್ನು ತುಂಬುವುದು ಎಂದಭಿಪ್ರಾಯಪನ್ನಾಗಲಿ ಅಥವಾ ಭೂತಗಳನ್ನು (ವೃಷ್ಟ್ಯಾದಿಗಳಿಂದ) ತೃಪ್ತಿಪಡಿಸುವುದು ಎಂದಭಿಪ್ರಾಯ ವನ್ನಾಗಲಿ ಕೊಡುತ್ತದೆ. ಇದರಲ್ಲಿ ನಿರೋಧಕವಾದ ಪರ್ವತವಾವುದು. ಉಪಕಾರವಾದ ಪರ್ವತವಾವುದು ಎಂಬು ದನ್ನು ಗಮನಿಸಬೇಕು.

ಸಾಧಾರಣವಾಗಿ ಅಸುರರೊಂದಿಗೂ, ಪರ್ವತಗಳೊಂದಿಗೂ ಇಂದ್ರನ ಹೋರಾಟವನ್ನು ತಮಸ್ತೇಜಸ್ಸುಗಳ ಹೋರಾಟ ವೆಂದು ಹೇಳಬಹುದು.

ವಿ ಚಿದ್ವೃತಸ್ಯ ದೋಧತೋ ವಜ್ರೇಣ ಶತಪರ್ವಣಾ | ಶಿರೋ ಬಿಭೇದ ವೃಷ್ಣಿನಾ ||

(ಋ. ಸಂ. ೮-೬-೬)

ಎಂಬ ಋಕ್ಕಿನಲ್ಲಿ ಶತಸಂಖ್ಯಾಕವಾದುದೂ ರಶ್ಮಿರೂಪವಾದುದೂ ಆದ ಪರ್ವಗಳುಳ್ಳ ವಜ್ರಾಯುಧದಿಂದ ತಮೋ ರೂಪನಾದವನೂ, ಆವರಕನಾದವನೂ ಆದ ಅಸುರನನ್ನು ನಾಶಮಾಡಿದನು. ಇತ್ಯಾದ್ಯುದಾಹರಣೆಗಳಿಂದ ವೃತ್ರಾದಿ ಪದ ಗಳೂ ಸಹ ಜಗತ್ತನ್ನು ಆವರಿಸುವ ತಮಸ್ಸಿನ ಭೂತಾಕಾರರವನ್ನು ತೋರಿಸುವಂತೆ ಪರ್ವತಶಬ್ದವೂ ಸಹ ಪರ್ವತಾಕಾರದ ತಮಸ್ಸನ್ನು ನಿರ್ದೇಶಿಸಿಸುತ್ತದೆಯೆಂದು ಹೇಳಬಹುದು. ಇದಲ್ಲದೆ ಕೇವಲ ಬೆಟ್ಟ ಅಥವಾ ಮೇಘವೆಂದು ಸಾಧಾರಣವಾದ ಅರ್ಥವನ್ನು ಮಾಡಿದರೆ ಆಗ ಸನ್ನಿವೇಶಗಳಿಗನುಗುಣವಾದ ಪೂರ್ಣಾರ್ಥವನ್ನು ಕೊಡುವುದಿಲ್ಲ. ಹೇಗೆಂದರೆ, ಪರ್ವತ ಹನನ ದಿಂದ ಮರೆಮಾಡಿ ಇರಿಸಿದ ಗೋವುಗಳನ್ನೂ ಉದಕಗಳನ್ನೂ ಬಿಡಿಸುವುದೂ ಮತ್ತು ಉಷಸ್ಸನ್ನೂ ಆವಿರ್ಭಾವವಾಗುವಂತೆ ಮಾಡುವುದೂ ಹೀಗೆ ನಾಲ್ಕುವಿಧವಾದ ಕಾರ್ಯಸಾಧನೆಯು ವರ್ಣಿತವಾಗಿದೆ ಆದುದರಿಂದ ಪರ್ವತಶಬ್ದಕ್ಕೆ ಕೇವಲ ಮೇಘ ವೆಂದೇ ಅರ್ಥಮಾಡಿದರೆ ಅದು ಸನ್ನಿವೇಶಗಳಿಗನುಗುಣವಾಗಿರುವುದಿಲ್ಲ.

ಆದರ್ದರುತ್ಸಮುಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾ ಅರಮ್ಣಾಃ |
ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ದಾನವಂ ಹನ್ |

(ಋ. ಸಂ. ೫-೩೨-೧)

ಎಂಬ ಋಕ್ಕಿನಲ್ಲಿಯೂ.

ಶಿಶುಂ ನದೀನಾಂ ಹರಿಮುತ್ರಿಬುಧ್ನಮಿತಿ ಗಿರಿರ್ವಾ ಅದ್ರಿರ್ಗಿರಿಬುಧ್ನಾ ||

(ಶ. ಬ್ರಾ. ೭-೫-೨-೧೮)

ಎಂಬ ಬ್ರಾಹ್ಮಣವಾಕ್ಯದಲ್ಲಿಯೂ ಸಹ ಪರ್ವತ, ಮೇಘ ಎಂಬ ಪದಗಳಿಗೆ ಒಂದು ಅತಿಶಯವಾದುದೂ ಅಲೌಕಿಕವಾದುದೂ ಆದ ಅರ್ಥವಿರುವುದಾಗಿ ತಿಳಿಯುತ್ತದೆ. ಇದು ಪರ್ವತಾಕಾರವಾದ ತಮೋರಾಶಿಯೆಂದೂ, ದ್ಯುಲೋಕಸ್ಥವೆಂದೂ, ಉದಕ ವನ್ನೂ ಗೋವನ್ನೂ ಮರೆಸಿಕೊಂಡಿರುವುದಾಗಿಯೂ ವರ್ಣಿತವಾಗಿದೆ. ಈ ತಮಸ್ಸನ್ನು ಭೇದಿಸಿ ಇಂದ್ರನೂ ಮರುತ್ತುಗಳೂ ಉದಕವನ್ನೂ, ತೇಜಸ್ಸನ್ನೂ ಪ್ರಸರಿಸುವಂತೆ ಮಾಡುತ್ತಾರೆ.

ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ |

(ಋ. ಸಂ. ೧-೩೨-೨)

ಇತ್ಯಾದಿ ಋಕ್ಕುಗಳಲ್ಲಿ ಅಹಿ, ಶಂಬರ, ವೃತ್ರ ಇತ್ಯಾದ್ಯಸುರರು ಈ ಪರ್ವತರೂಪವಾದ ತಮೋರಾಶಿಯಲ್ಲಿ ಅಡಗಿ ಪ್ರವಹಿಸುವ ನೀರನ್ನು ತಡೆಯುವುದರಿಂದ ಅವರನ್ನು ನಾಶಮಾಡುವ ಇಂದ್ರನು ಸ್ತುತ್ಯನು ಎಂದಿದೆ. ಹೀಗೆಯೇ ಅನೇಕಕಡೆ ಗಳಲ್ಲಿ ಪರ್ವತ ಪದವು ಶತ್ರುಪರ್ಯಾಯವಾಗಿಯೂ. ಅಥವಾ ಶತ್ರುಗಳಿಗೆ ಆಶ್ರಯವಾಗಿಯೂ ಇರುವ ವರ್ಣನೆಯಿದೆ. ಆದುದರಿಂದಲೇ, ಅರಸ್ತ್ರಂ ಪರ್ವತಶ್ಚಿತ್ಸರಿಷ್ಯನ್ (ಋ. ಸಂ. ೨–೧೧-೭) ; ರುಷ್ಮಾಚಿದಸ್ಯ ಪರ್ವತಾ ಭಯಂತೇ (ಋ. ಸಂ. ೨–೧೨–೧೩) ಇತ್ಯಾದಿ ಋಕ್ಕುಗಳಲ್ಲಿ ತೇಜೋರೂಪಿಯಾದ ಇಂದ್ರನು ಪ್ರತ್ಯಕ್ಷವಾದೊಡನೆಯೇ ಪರ್ವತ ರೂಪಿಗಳಾದ ತಮೋರಾಶಿಗಳು ಭಯದಿಂದ ನಡುಗಿದವೆಂದೂ, ಇಂದ್ರನು ಪಾತಾಳದಲ್ಲಿ ಅಡಗಿದನೆಂದೂ ಹೇಳಿದೆ—

ಈ ವರ್ಣನೆಗಳಿಗೆ ವಿರುದ್ಧವಾಗಿ ಪರ್ವತವು ತೇಜೋರೂಪಿಯಾದ ವಜ್ರಾಯುಧವೆಂದೂ, ವೃಷ್ಟ್ಯುದಕಾದಿಗಳಿಗೆ ಅಧಿದೇವತೆಯಾದ ಪರ್ಜನ್ಯನೆಂದೂ ಸಹ ಅನೇಕ ಕಡೆಗಳಲ್ಲಿ ಹೇಳಿವೆ.

ಪ್ರಾಕ್ತಾದಪಾಕ್ತಾದಧರಾದುದಕ್ತಾದಭಿ ಜಹಿ ರಕ್ಷಸಃ ಪರ್ವತೇನ ।
(ಋ. ಸಂ. ೭–೧೦೪–೧೯)

ಅಸ್ಮೇರುದ್ರಾ ಮೇಹನಾ ಪರ್ವತಾಸೋ ವೃತ್ರಹತ್ಯೇಭರಹೂತೌ ಸಜೋಷಾಃ ।
(ಋ.. ಸಂ. ೮–೬೩–೧೨)

ಇತ್ಯಾದಿ ಋಕ್ಕುಗಳಲ್ಲಿ ಪರ್ವತಗಳು ಶತ್ರುನಾಶಕಾರ್ಯದಲ್ಲಿ ಇಂದ್ರನಿಗೆ ಸಹಾಯಕಗಳಾದ ಸಾಧನಗಳಾಗಿವೆ.

ಪ್ರ ಪೂಷಣಂ ವಿಷ್ಣುಮಗ್ನಿಂ ಪುರಂಧಿಂ ಸವಿತಾರಮೋಷಧೀಃ ಪರ್ವತಾಂಶ್ಚ ।
(ಋ. ಸಂ. ೬-೨–೧೯)

ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸನ್ತ್ವಾಪಃ ।
(ಋ. ಸಂ. ೭–೩೫–೮)

ಇತ್ಯಾದಿ ಋಕ್ಕುಗಳಲ್ಲಿ ಪರ್ವತಕ್ಕೆ ಮಿತ್ರ, ವರುಣ, ಪೂಷ ಮುಂತಾದ ದೇವತೆಗಳೊಡನೆ ಆಹ್ವಾನವಿದೆ

ಯುವಂ ತಮಿಂದ್ರಾಪರ್ವತಾ ಪುರೋಯುಧಾ ಯೋ ನಃ ಪೃತನ್ಯಾದಪ ತಂತಮಿದ್ಧತಂ ವಜ್ರೇಣ ತಂತಮಿದ್ಧತೇ ।
(ಋ. ಸಂ. ೧–೧೩೨–೬)

ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।
(ಋ. ಸಂ. ೩–೫೩–೧)

ಎಂಬ ಕಡೆಗಳಲ್ಲಿಯೂ, ಪ್ರಕೃತವಾದ ಋಕ್ಕಿನಲ್ಲಿಯೂ ಇಂದ್ರನಿಗೂ, ಪರ್ವತಕ್ಕೂ ಜೊತೆಯಲ್ಲಿ ಆಹ್ವಾನವೂ ಸ್ತುತಿಯೂ ಇದೆ. ಇಲ್ಲಿ ಪರ್ವತವೆಂದರೆ ಪರ್ಜನ್ಯ ನೆಂಬರ್ಥವೆಂದು ಸಾಯಣರು ಹೇಳಿದ್ದಾರೆ. ಇಲ್ಲಿ ಪರ್ವತವು ಆರಾಧ್ಯ ದೇವತೆ.

**ಪಾಮಿಃ ಸುವೀರಾಃ ಇಷಃ**—ಇಷಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ· ೩–೬) ಇಲ್ಲಿ ವಾಮೀಃ **ಸವೀರಾಃ** ಎಂಬ ಶಬ್ದಗಳು **ಇಷಃ** ಎಂಬ ಪದಕ್ಕೆ ವಿಶೇಷಣವಾಗಿವೆ. ಹೊಂದಲ್ಪಡಬೇಕಾದ ಮತ್ತು ವೀರರಾದ ಪುತ್ರರೊಡಗೂಡಿದ ಅನ್ನವನ್ನು ಎಂದರೆ, ನಾವು ನಿನ್ನ ಅನುಗ್ರಹದಿಂದ ನಮಗೆ ದೊರೆಯಬಹುದಾದ ವೀರರಾದ ಪುತ್ರರನ್ನೂ ಅನ್ನವನ್ನೂ ತೆಗೆದುಕೊಂಡು ಬನ್ನಿ ಎಂದಭಿಪ್ರಾಯವು.

**ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಂ ।**
**ಮಧ್ವಾ ರಜಾಂಸಿ ಸುಕ್ರತೂ ॥**

ಇದರ ಅರ್ಥವು—

ಶ್ರೇಷ್ಠವಾದ ಕರ್ಮಕರ್ತರಾದ ಎಲೈ ಮಿತ್ರಾವರುಣರೇ ನಮ್ಮ ಗೋವುಗಳ ನಿವಾಸಸ್ಥಾನವನ್ನು ಕ್ಷೀರಾದಿಗಳಿಂದ ಪೂರ್ಣವಾಗಿತುಂಬಿರಿ. ಲೋಕಗಳನ್ನೆಲ್ಲಾ ಮಧುರವಾದ ರಸದಿಂದ ತುಂಬಿರಿ.

ಅಗ್ನಿಷ್ಟೋಮಯಾಗದ ಪ್ರಾತಃಸವನದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಶಸ್ತ್ರಮಂತ್ರಗಳನ್ನು ಪಠಿಸುವಾಗ—**ಆ ನೋ ಮಿತ್ರಾವರುಣ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೧೮–೧೬ ಋಕ್ಕುಗಳನ್ನು) ಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ನೋ ವರುಣಾ ನೋ ಗಂತಂ ರಿಷಾದಸಾ** ಎಂಬ ಸೂತ್ರದಿಂದ (ಆ. ೫-೧೦): ವಿವೃತವಾಗಿರುವುದು; ಇಪ್ಪತ್ತನಾಲ್ಕನೆಯ ದಿವಸದಲ್ಲಿ ಪ್ರಾತಃಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವಾಗ **ಆ ನೋ ಮಿತ್ರಾವರುಣಾ** ಎಂಬ ಈ ಮೂರು ಋಕ್ಕುಗಳನ್ನು ಷಡಹಸ್ತೋತ್ರಿಯಸಂಜ್ಞಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆ ನೋ ಮಿತ್ರಾವರುಣೋ ಮಿತ್ರಂ ವಯಂ ಹವಾಮಹೇ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು: ಸ್ತೋಮವೃದ್ಧಿಗಾಗಿ ಪಠಿಸಬೇಕಾದ ಆವಾಪಮಂತ್ರಗಳಿಗಾಗಿಯೂ ಈ ತೃಚದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಆ ನೋ ವರುಣೋ ತ್ರಿಚೌ** ಎಂಬ ಸೂತ್ರದಿಂದ (ಆ. ೭–೫) ವಿವೃತವಾಗಿರುವುದು; ದಾಕ್ಷಾಯಣವೆಂಬ ಯಜ್ಞವು ಎರಡು ಅಮಾವಾಸ್ಯೆಗಳಲ್ಲಿ ಮಾಡಲ್ಪಡಬೇಕು. ಆ ಸಂದರ್ಭದಲ್ಲಿ ಎರಡನೆಯ ಅಮಾವಾಸ್ಯೆಯ ದಿವಸ **ಆ ನೋ ಮಿತ್ರಾವರುಣಾ** ಎಂಬ ಈ ಋಕ್ಕನ್ನೂ ಎರಡನೆಯ ದಿವಸ ಮಿತ್ರಾವರುಣಾತ್ಮಕವಾದ ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆ ನೋ ಮಿತ್ರಾವರುಣಾ ಯದ್ವಷಷ್ಠಂ**

**ಸೋಮಾಪೂಷಣಾ ಜನನಾ ರಯೀಣಾಂ ಜನನಾ ದಿವೋ ಜನನಾ**
**ಪೃಥಿವ್ಯಾಃ ।**
**ಜಾತೌ ವಿಶ್ವಸ್ಯ ಭುವನಸ್ಯ ಗೋಪೌ ದೇವಾ ಅಕೃಣ್ವನ್ನಮೃತಸ್ಯ**
**ನಾಭಿಂ ॥**

ಇದರ ಅರ್ಥವು—ಎಲೈ ಸೋಮ ಮತ್ತು ಪೂಷದೇವತೆಗಳೆ, ನೀವಿಬ್ಬರೂ ಸಹ ಧನಕ್ಕೂ ದ್ಯುಲೋಕಕ್ಕೂ, ಪೃಥ್ವಿಗೂ ನಿರ್ಮಾತೃಗಳಾಗಿದ್ದೀರಿ. ಉತ್ಪನ್ನರಾದೊಡನೆಯೇ ಸಕಲಲೋಕಕ್ಕೂ ರಕ್ಷಕರಾದ ನಿಮ್ಮನ್ನು ದೇವತೆಗಳು ಅಮೃತತ್ವಕ್ಕೆ ಹೇತುವನ್ನಾಗಿ ಮಾಡಿದರು.

ಈ ಋಕ್ಕಿನಲ್ಲಿ ಅರ್ಥವು ಸ್ಪಷ್ಟವಾಗಿದೆ. ಎಲೈ ಸೋಮ ಮತ್ತು ಪೂಷನ್ ಎಂಬ ದೇವತೆಗಳೇ ನೀವಿಬ್ಬರೂ ಧನಕ್ಕೆ ಅಧಿಪತಿಗಳಾಗಿರುವಿರಿ ಎಂದರೆ ಧನವನ್ನು (ಪಶುಸಂಪತ್ತನ್ನು) ಉತ್ಪನ್ನಮಾಡುವಿರಿ. ದ್ಯುಲೋಕ ಎಂದರೆ ಸ್ವರ್ಗವನ್ನೂ, ಭೂಮಿಯನ್ನೂ ನೀವೇ ಉತ್ಪನ್ನಮಾಡುವಿರಿ. ನಿಮ್ಮಿಂದಲೇ ಸ್ವರ್ಗವೂ ಭೂಮಿಯೂ ಉಂಟಾದವು. ಇದಲ್ಲದೆ ಹುಟ್ಟಿದ ಕೂಡಲೇ ಎಂದರೆ ಜನ್ಮಾರಭ್ಯ ನೀವು ಸಮಸ್ತ ಜಗತ್ತಿಗೂ ಪಾಲಕರಾಗಿರುವಿರಿ. ಆದುದರಿಂದಲೇ ದೇವತೆಗಳು ನಿಮ್ಮನ್ನು ಮರಣರಹಿತವಾದ ಪದವಿಗೆ ಮುಖ್ಯಕಾರಣರನ್ನಾಗಿ ಮಾಡಿದರು ಅಥವಾ ಮರಣರಹಿತವಾದ ಪದವಿಗೆ ನೀವೇ ಕಾರಣರಾಗುವಂತೆ ಮಾಡಿದರು ಎಂದರೆ ನಿಮ್ಮಿಂದಲೇ ಎಲ್ಲರೂ ಅಮರ್ತ್ಯಪದವಿಯನ್ನು (ಮರಣವಿಲ್ಲದಿರುವಿಕೆಯನ್ನು) ಪಡೆಯುವಂತಾಯಿತು ಎಂದು ಮುಖ್ಯಾಭಿಪ್ರಾಯವು.

ಅಮೃತಸ್ಯ—ಮೃತವೆಂದರೆ ಸಾಯುವುದು. ಅಮೃತವೆಂದರೆ ಅದಿಲ್ಲದಿರುವ ಸ್ಥಿತಿ, ಚಿರಂಜೀವಿತ್ವ. ದೇವತೆಗಳು ಮರಣಕ್ಕೆ ಒಳಗಾಗದೆ ಸದಾಕಾಲದಲ್ಲಿಯೂ ಬದುಕುವರೆಂಬ ಪ್ರತೀತಿ ಇದೆ. ಅಮೃತವೆಂದರೆ ಸೋಮರಸವೆಂದೂ, ಉದಕವೆಂದೂ, ದೇವತೆಗಳ ಅತ್ಯುತ್ತಮ ಆಹಾರವೆಂದೂ, ನಾನಾವಿಧ ಅರ್ಥಗಳಾಗುವುವು.

ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷ-
ಜಾನಿ ಧತ್ತಂ ।
ಅವ ಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ ಕೃತಮೇ
ನೋ ಅಸ್ಮತ್ ॥

(ಋ. ಸಂ. ೬—೭೪—೩)

ಇದರ ಅರ್ಥವು—ಎಲೈ ಸೋಮ ಮತ್ತು ರುದ್ರದೇವತೆಗಳೇ, ನಿವಿಬ್ಬರೂ ಸಹ ನಮ್ಮ ಶರೀರಗಳಲ್ಲಿ ಸಕಲ ಪ್ರಸಿದ್ಧವಾದ ರೋಗನಿವಾರಕ ಸಾಮಗ್ರಿಗಳನ್ನು ತುಂಬಿಡಿರಿ. ನಮ್ಮ ಅಂಗಗಳಲ್ಲಿ ಸ್ವಯಂ ಸಂಪಾದಿತವೂ ಹೊರಗಡೆಯ ಸಂಪರ್ಕದಿಂದ ಅಂಟಿಕೊಂಡಿರುವುದೂ ಆದ, ಯಾವ ಯಾವ ಪಾಪವಿರುವುದೋ ಅವೆಲ್ಲವನ್ನೂ ಪೂರ್ಣವಾಗಿ ನಾಶಮಾಡಿರಿ. ಅದನ್ನು ನಮ್ಮಿಂದ ಪೂರ್ಣವಾಗಿ ಬಿಡಿಸಿರಿ.

ಧರ್ತಾರೋ ದಿವ ಋಭವಃ ಸುಹಸ್ತಾ ವಾತಾಪರ್ಜನ್ಯಾ ಮಹಿಷಸ್ಯ
ತನ್ಯತೋಃ ।
ಆಪ ಓಷಧೀಃ ಪ್ರ ತಿರಂತು ನೋ ಗಿರೋ ಭಗೋ ರಾತಿರ್ವಾಜಿ-
ನೋ ಯಂತು ಮೇ ಹವಂ ॥

(ಋ. ೮—೩—೧೩)

ಇದರ ಅರ್ಥವು—

ದ್ಯುಲೋಕಕ್ಕೆ ಧಾರಕರೂ ಸತ್ಯಸ್ವರೂಪರೂ ಪ್ರಕಾಶಿಸುವರೂ ಉತ್ತಮವಾದ ಹಸ್ತಗಳುಳ್ಳವರೂ ಮಹತ್ತಾದ ಶಬ್ದಕ್ಕೆ

ನಿರ್ಮಾಪಕರೂ ಆದ ವಾಯು ಮತ್ತು ಪರ್ಜನ್ಯರುಗಳು ಉದಕಗಳನ್ನೂ ಓಷದಿಗಳನ್ನೂ ನಮ್ಮ ಸ್ತುತಿಗಳನ್ನೂ ವೃದ್ಧಿಯಾಗು ವಂತೆ ಮಾಡಲಿ ಉದಾರಿಯಾದ ಭಗದೇವನೂ ಅಗ್ನಿ, ವಾಯು ಮತ್ತು ಸೂರ್ಯರೂ ನನ್ನ ಆಹ್ವಾನವನ್ನು ಲಕ್ಷಿಸಿ ಬರಲಿ.

ಈ ರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದಲ್ಲಿ
ಏಳನೇ ಅಧ್ಯಾಯದಲ್ಲಿ ಹತ್ತನೇಖಂಡ ಸಮಾಪ್ತವಾಗಿದೆ.

---

## ಅಥ ಏಕಾದಶಃಖಂಡಃ

## ಹನ್ನೊಂದನೆಯ ಖಂಡವು

ಅಥೈತಾನ್ಯಾದಿತ್ಯಭಕ್ತೀನ್ಯಸೌ ಲೋಕಸ್ತೃತೀಯಸವನಂ ವರ್ಷಾ ಜಗತೀ ಸಪ್ತದಶಸ್ತೋಮೋ ವೈರೂಪಂ ಸಾಮ ಯೇ ಚ ದೇವಗಣಾಃ ಸಮಾಮ್ನಾತಾ ಉತ್ತಮೇ ಸ್ಥಾನೇ ಯಾಶ್ಚ ಸ್ತ್ರಿಯೋಥಾಸ್ಯ ಕರ್ಮ ರಸಾದಾನಂ ರಶ್ಮಿಭಿಶ್ಚ ರಸಧಾರಣಂ ಯಚ್ಚ ಕಿಂಚಿತ್ಪ್ರವಹ್ಲಿತಮಾದಿತ್ಯಕರ್ಮೈವ ತಚ್ಚಂದ್ರಮಸಾ ವಾಯುನಾ ಸಂವತ್ಸರೇಣೇತಿ ಸಂಸ್ತವಂ ಏತೇಷ್ವೇವ ಸ್ಥಾನವ್ಯೂಹೇಷ್ವೃತುಚ್ಛಂದಃ ಸ್ತೋಮಪೃಷ್ಠಸ್ಯ ಭಕ್ತಿಶೇಷಮನು- ಕಲ್ಪಯೀತ ಶರದನುಷ್ಟುಬೇಕವಿಂಶಃ ಸ್ತೋಮೋ ವೈರಾಜಂ ಸಾಮೇತಿ ಪೃಥಿವ್ಯಾಯತ- ನಾನಿ ಹೇಮಂತಃ ಪಂಕ್ತಿಸ್ತ್ರಿಣವಃ ಸ್ತೋಮಃ ಶಾಕ್ವರಂ ಸಾಮೇತ್ಯಂತರಿಕ್ಷಾಯತನಾನಿ ಶಿಶಿರೋsತಿಚ್ಛಂದಾಸ್ತ್ರಯಸ್ತ್ರಿಂಶಃ ಸ್ತೋಮೋ ರೈವತಂ ಸಾಮೇತಿ ದ್ಯುಭಕ್ತೀನಿ ॥ ೧೧ ॥

ಅಥೈತಾನ್ಯಾದಿತ್ಯಭಕ್ತೀನಿ ॥

ದ್ಯುಸ್ಥಾನದೇವತೆಯಾದ ಆದಿತ್ಯಸಂಬಂಧಿಗಳನ್ನು ಇಲ್ಲಿ ವಿವರಿಸುತ್ತಾರೆ. ಮುಂದೆ ಹೇಳುವವುಗಳು ಆದಿತ್ಯಭಕ್ತಿಗಳಾಗುತ್ತವೆ,

ಅಸೌ ಲೋಕಸ್ತೃತೀಯಸವನಂ ವರ್ಷಾ ಜಗತೀ ಸಪ್ತದಶಃ- ಸ್ತೋಮೋ ವೈರೂಪಂ ಸಾಮ ॥ ಯೇ ಚ ದೇವಗಣಾಃ ಸಮಾ- ಮ್ನಾತಾ ಉತ್ತಮೇ ಸ್ಥಾನೇ ॥

ದ್ಯುಲೋಕ, ಯಾಗದ ಸಾಯಂಸಂಧ್ಯಾಸವನ, ವರ್ಷಾಕಾಲ (ಮಳೆಗಾಲ) ಜಗತೀಛಂದಸ್ಸು, ಸಪ್ತದಶಸ್ತೋಮ, ವೈರೂಪವೆಂಬ ಸಾಮ ಇವು ಆದಿತ್ಯಸಂಬಂಧಿಯಾಗಿರುತ್ತವೆ. ದ್ಯುಲೋಕದಲ್ಲಿ ಹೇಳಿರುವ ದೇವತೆಗಳೆಲ್ಲವೂ ಆದಿತ್ಯನಾಮಗಳಾಗುತ್ತವೆ.

ಯಾಶ್ಚ ಸ್ತ್ರಿಯಃ ||

ಉಷಾಃ, ಸೂರ್ಯಾ, ವೃಷಾಕಪಾಯೀ, ಶರಣ್ಯೂ ದೇವಪತ್ನ್ಯಃ ಇವೆಲ್ಲವೂ ಆದಿತ್ಯಸಂಬಂಧಿ ಸ್ತ್ರೀಯರು..

ಅಥಾಸ್ಯ ಕರ್ಮ-ರಸಾದಾನಂ, ರಶ್ಮಿಭಿಶ್ಚ ರಸಧಾರಣಂ, ಯಚ್ಚ-ಕಿಂಚಿತ್ಪ್ರವಹ್ಲಿತಮಾದಿತ್ಯಕರ್ಮೈವ ತತ್ ||

ಆದಿತ್ಯನ ಕಾರ್ಯವನ್ನು ವಿವರಿಸುತ್ತಾರೆ. ನೀರನ್ನು ಎಳೆದುಕೊಳ್ಳುವುದು, ಕಿರಣಗಳಿಂದ ಆ ನೀರನ್ನು ಅಂತರಿಕ್ಷದಲ್ಲಿ ನಿಯತ ಕಾಲದವರೆಗೆ ಧರಿಸಿರುವುದು. ಪ್ರವಹ್ಲಿತಂ ಅಂದರೆ ಗೂಢಾಭಿಸಂಧಿಯಿಂದ ಪ್ರಕಟವಾಗದಿರುವ ಎಂದರ್ಥ. ಯಾವುದೂ ತಿಳಿಯದ ಅಥವ ಹೇಳದಿರುವ ಕರ್ತೃಕರ್ಮಜಾತವೆಲ್ಲವೂ ಆದಿತ್ಯನಕರ್ಮವೇ ಆಗಿರುತ್ತದೆ. ಏಕೆಂದರೆ ಸಕಲ ಕರ್ಮಗಳಿಗೂ ಆದಿತ್ಯನೇ ಪ್ರೇರಕನಾಗಿರುತ್ತಾನೆ.

ಚಂದ್ರಮಸಾ ವಾಯುನಾ ಸಂವತ್ಸರೇಣ-ಇತಿ ಸಂಸ್ತವಃ ||

ಆದಿತ್ಯನ ಸಹಚಾರಿಗಳು ಕಡಿಮೆಯಾದುದರಿಂದ ಅಥಾಸ್ಯ—ಎಂದು ಅಧಿಕಾರನಿರ್ದೇಶಮಾಡಿ ದೇವತೆಗಳನ್ನು ಹೇಳಲಿಲ್ಲ ಚಂದ್ರಾದಿಮೂರುದೇವತೆಗಳೊಡನೆ ಆದಿತ್ಯನನ್ನು ಸ್ತುತಿಸಿರುತ್ತಾರೆ. ಚಂದ್ರನೊಡನೆ ಸೂರ್ಯನ ಸ್ತುತಿಗೆ ಉದಾಹರಣೆ.

ಪೂರ್ವಾಪರಂ ಚರತೋ ಮಾಯಯೈತೌ ಶಿಶೂ ಕ್ರೀಳಂತೌ
ಪರಿಯಾತೋ ಅಧ್ವರಮ್ || ವಿಶ್ವಾನ್ಯನ್ಯೋ ಭುವನಾಭಿಚಷ್ಟ
ಋತೂರನ್ಯೋ ವಿದಧಜ್ಜಾಯತೇ ಪುನಃ ||

(ಋ. ಸಂ. ೮–೩–೨೩)

ವಾಯುವಿನೊಡನೆ ಸೂರ್ಯಸ್ತುತಿಗೆ ಉದಾಹರಣೆ.

ಸಪ್ತ ಋಷಯಃ ಪ್ರತಿಹಿತಾಃ ||

(ಯ. ವಾ. ಸಂ. ೩೪–೫೫)

ಇಲ್ಲಿ ವಾಯ್ವಾದಿತ್ಯರೆಂದು ನಿರುಕ್ತದಲ್ಲಿ (ನಿ. ೧೨–೪–೩) ಹೇಳುತ್ತಾರೆ. ಸಂವತ್ಸರದೊಡನೆ ಸಂಸ್ತವಕ್ಕೆ ಉದಾಹರಣೆ.

ಪಂಚಪಾದಂ ಪಿತರಮ್[5] ||

(ಋ. ಸಂ. ೨–೩೧–೬)

ಪೃಥಿವೀ, ಅಂತರಿಕ್ಷ , ದ್ಯುಲೋಕ ಈ ಮೂರು ಸ್ಥಾನವಿಸ್ತಾರದಲ್ಲಿ ಹೇಳದಿರುವ ಆದರೆ ಆಯಾಯಸ್ಥಾನಕ್ಕೆ ಸಂಬಂಧಿಸಿರುವ ಋತು, ಛಂದಸ್ಸು, ಸ್ತೋಮ, ಸಾಮಗಳನ್ನೂ ಆಗ್ನ್ಯಾದಿಸಂಬಂಧಿಗಳೆಂದು ಕಲ್ಪಿಸಬೇಕು. ಋತುಛಂದಸ್ತೋಮಪೃಷ್ಠಸ್ಯ ಎಂಬುದು ಸಮಾಹಾರದ್ವಂದ್ವಪದ. ಇದರ ಕೊನೆಯಲ್ಲಿ ಭಕ್ತಿಶೇಷಪದವನ್ನು ಹೇಳಿರುವುದರಿಂದ ಪ್ರತ್ಯೇಕವಾಗಿ ಅವುಗಳಿಗೆ ಇದರಸಂಬಂಧ ಹೇಳಬೇಕು. ಋತುಭಕ್ತಿಶೇಷ, ಛಂದೋಭಕ್ತಿಶೇಷ ಹೀಗೆ ಕಲ್ಪಿಸಬೇಕು.

ಶರದ್, ಅನುಷ್ಟುಪ್, ಏಕವಿಂಶಸ್ತೋಮೋ, ವೈರಾಜಂ ಸಾಮ, ಇತಿ
ಪೃಥಿವ್ಯಾಯತಾನಿ ||

ಶರದಾದಿ ನಾಲ್ಕು ಅಗ್ನಿಸಂಬಂಧಿಯಾಗಿ ಪೃಥಿವೀಲೋಕವೇ ಆಶ್ರಯವಾಗಿರುವವುಗಳೆಂದು ತಿಳಿಯಬೇಕು. ಮಂತ್ರಗಳಲ್ಲಿ ಅಗ್ನಿದೇವತಾಸೂಚಕಲಿಂಗವಿಲ್ಲದಿದ್ದರೂ ಶರದಾದಿಗಳಲ್ಲಿ ಬಂದಿದ್ದರೆ ಆಗ ಅದು ಅಗ್ನಿದೇವತಾಕವಾದ ಮಂತ್ರವೆಂದು ತಿಳಿಯಬೇಕು. ಹೀಗೆಯೇ ಮುಂದೆಯೂ ತಿಳಿಯಬೇಕು.

ಹೇಮಂತಃ, ಪಂಕ್ತಿಃ, ತ್ರಿಣವಸ್ತೋಮಃ, ಶಾಕ್ವರಂ ಸಾಮ, ಇತಿ
ಅಂತರಿಕ್ಷಾಯತನಾನಿ ||

ಹೇಮಂತಋತು, ಪಂಕ್ತಿಛಂದಸ್ಸು, ತ್ರಿಣವವೆಂಬಸ್ತೋಮ. ಶಾಕ್ವರವೆಂಬ ಸಾಮ ಇವು ಅಂತರಿಕ್ಷಲೋಕಾಶ್ರಯಗಳಾಗಿ ಇಂದ್ರಸಂಬಂಧಿಗಳೆಂದು ತಿಳಿಯಬೇಕು.

ಶಿಶಿರಃ, ಅತಿಚ್ಛಂದಃ, ತ್ರಯಸ್ತ್ರಿಂಶಸ್ತೋಮಃ, ರೈವತಂ ಸಾಮ, ಇತಿ
ದ್ಯುಭಕ್ತೀನಿ || ೧೧ ||

ಶಿಶಿರಋತು, ಅತಿಚ್ಛಂದವೆಂಬ ಛಂದಸ್ಸು, ತ್ರಯಸ್ತ್ರಿಂಶಸ್ತೋಮ, ರೈವತವೆಂಬಸಾಮ ಇವು ಸೂರ್ಯಸಂಬಂಧಿಗಳಾಗಿ ದ್ಯುಲೋಕವನ್ನಾಶ್ರಯಿಸಿರುತ್ತವೆ. ದ್ಯುಲೋಕವನ್ನು ಹೊಂದಿರುವವುಗಳು ದ್ಯುಭಕ್ತಿಗಳು ಅಥವಾ ಆದಿತ್ಯನನ್ನು ಹೊಂದಿರುವವುಗಳೆಂದರ್ಥ. ಇವುಗಳಲ್ಲಿ ಯಾವುದನ್ನು ಸ್ತುತಿಸಿದರೂ ಅದು ಆದಿತ್ಯನ ಸ್ತುತಿಯೆಂದೇ ತಿಳಿಯಬೇಕು. ಹಿಂದೆ ಹೇಳಿದವುಗಳ ವಿಷಯದಲ್ಲಿಯೂ ಹೀಗೆಯೇ ತಿಳಿಯಬೇಕು.

ಪೂರ್ವಾಪರಂ ಚರತೋ ಮಾಯಯೈತೋ ಶಿಶೂ ಕ್ರೀಳಂತೌ ಪರಿ
ಯಾತ್ಯೋ ಅಧ್ವರಂ |
ವಿಶ್ವಾನ್ಯನ್ಯೋ ಭುವನಾಭಿಚಷ್ಟ ಋತೂರನ್ಯೋ ವಿದಧಾಜ್ಜಾಯ-
ತೇ ಪುನಃ ||

(ಋ. ಸಂ. ೧೦—೮೫—೧೮)

ಇದರ ಅರ್ಥವು—

ಶಿಶುರೂಪರಾದ ಈ ಸೂರ್ಯ ಮತ್ತು ಚಂದ್ರರು ತಮ್ಮ ಅಸಾಧಾರಣವಾದ ಜ್ಞಾನದಿಂದ ಕೂಡಿ ಪರ್ಯಾಯರೂಪದಲ್ಲಿ ಸಂಚರಿಸುತ್ತಾರೆ. ಅಂತರಿಕ್ಷದಲ್ಲಿ ವಿಹರಿಸುತ್ತ ಯಜ್ಞಾಭಿಮುಖವಾಗಿ ಬರುತ್ತಾರೆ. ಇವರಲ್ಲಿ ಒಬ್ಬನಾದ ಆದಿತ್ಯನು ಸಕಲ ಲೋಕಗಳನ್ನು ನೋಡುತ್ತಾನೆ. ಇನ್ನೊಬ್ಬನಾದ ಚಂದ್ರನು ವಸಂತಾದಿ ಋತುಗಳನ್ನೂ ನಿಯಮಿಸುತ್ತ ಪುನಃ ಪುನಃ ಉತ್ಪನ್ನನಾಗುತ್ತಾನೆ.

ಈ ರೀತಿ ಶ್ರೀಯಾಸ್ಕಮುನಿವಿರಚಿತ ನಿರುಕ್ತಭಾಷ್ಯದಲ್ಲಿ ಏಳನೇ ಅಧ್ಯಾಯದಲ್ಲಿ
ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾದಶಃ ಖಂಡಃ

## ಹನ್ನೆರಡನೆಯ ಖಂಡವು

ಮಂತ್ರಾ ಮನನಾಚ್ಛಂದಾಂಸಿ ಛಾದನಾತ್ಸ್ತೋಮಃ ಸ್ತವನಾದ್ಯಜುರ್ಯಜತೇಃ ಸಾಮ ಸಂಮಿತಮೃಚಾಸ್ಯತೇರ್ವರ್ಚಾ ಸಮಂ ಮೇನ ಇತಿ ನೈದಾನಾ ಗಾಯತ್ರೀ ಗಾಯತೇಃ ಸ್ತುತಿಕರ್ಮಣಸ್ತ್ರಿಗಮನಾ ವಾ ವಿಪರೀತಾ ಗಾಯತೋ ಮುಖಾದುದಪತದಿತಿ ಚ ಬ್ರಾಹ್ಮಣಮುಷ್ಣಿಗುತ್ಸ್ನಾತಾ ಭವತಿ ಸ್ನಿಹ್ಯತೇರ್ವಾ ಸ್ಯಾತ್ಕಾಂತಿಕರ್ಮಣಃ ಉಷ್ಣೀಷಿಣೀ ವೇತ್ಯೌಪಮಿಕಮುಷ್ಣೀಷಂ ಸ್ನಾಯತೇಃ ಕಕುಪ್ ಕಕುಭಿನೀ ಭವತಿ ಕಕುಪ್ ಚ ಕುಬ್ಜಶ್ಚ ಕೂಜತೇರ್ವೋಬ್ಜತೇರ್ವಾನುಷ್ಟುಬನುಷ್ಟೋಭನಾದ್ಗಾಯತ್ರೀಮೇವ ತ್ರಿಪದಾಂ ಸತೀಂ ಚತುರ್ಥೇನ ಪಾದೇನಾನುಷ್ಟೋಭತೀತಿ ಚ ಬ್ರಾಹ್ಮಣಂ ಬೃಹತೀ ಪರಿಬರ್ಹಣಾತ್ಪಂಕ್ತಿಃ ಪಂಚಪದಾ ತ್ರಿಷ್ಟುಪ್ ಸ್ತೋಭತ್ಯುತ್ತರಪದಾ ಕಾತು ತ್ರಿತಾ ಸ್ಯಾತ್ತೀರ್ಣತಮಂ ಛಂದಸ್ತ್ರಿವೃದ್ವಜ್ರಸ್ತಸ್ಯ ಸ್ತೋಭನೀತಿ ವಾ ಯತ್ತ್ರಿರಸ್ತೋಭತ್ತತ್ತ್ರಿಷ್ಟುಪ್ತ್ವಮಿತಿ ವಿಜ್ಞಾಯತೇ ॥ ೧೨ ॥

### ಮಂತ್ರಾ ಮನನಾತ್ ॥

ಪೂರ್ವಕಾಂಡದಲ್ಲಿ ವಿವೃತವಾದವುಗಳೆಲ್ಲವೂ ಮಂತ್ರವನ್ನಾಶ್ರಯಿಸಿರುತ್ತವೆಯೆಂದು ಹೇಳಿದಾಯಿತು. ಮಂತ್ರವೆಂಬ ಹೆಸರು ಬಂದದು ಹೇಗೆ ? ಎಂದು ವಿವರಿಸುತ್ತಾರೆ, ಯಾವುವರಿಂದ ತಿಳಿಯುತ್ತಾರೋ ಅದು ಮಂತ್ರ. ಇವುಗಳಿಂದ ಅಧ್ಯಾತ್ಮ ಅಧಿದೇವ ಅಧಿಯಜ್ಞಾದಿಗಳನ್ನು ತಿಳಿದ ವಿದ್ವಾಂಸರು ತಿಳಿಯುವುದರಿಂದ ಇವುಗಳಿಗೆ ಮಂತ್ರವೆಂದು ಹೆಸರು ಬಂದಿದೆ.

### ಛಂದಾಂಸಿ ಛಾದನಾತ್ । (ಸ್ತೋಮಃ ಸ್ತವನಾತ್)

ಮಂತ್ರಗಳೆಲ್ಲವೂ ಛಂದೋಮಯವಾಗಿರುತ್ತವೆ. ಛಂದಸ್ಸಿಲ್ಲದೆ. ಯಾವಮಂತ್ರವಾಕ್ಯವೂ ಉಚ್ಚರಿತವಾಗಿಲ್ಲ. ಆದುದರಿಂದ ಛಂದಸ್ಸಿನ ಲಕ್ಷಣ ವಿವಿಸುತ್ತಾರೆ. ಮೃತ್ಯುವಿನಿಂದ ಭೀತರಾದ ದೇವತೆಗಳು ಇವುಗಳಿಂದ ತಮ್ಮ ಸ್ವರೂಪವನ್ನು ಮುಚ್ಚಿಕೊಂಡಿರುವುದರಿಂದ ಆಚ್ಛಾದಕವಾದುದರಿಂದ ಛಂದಸ್ಸೆಂದು ಹೆಸರು ಬಂದಿದೆ. ಸ್ತೋಮಲಕ್ಷಣ ಕೆಲವುಕಡೆ ಹೇಳಿಲ್ಲ. ಇದರಿಂದ ದೇವತೆಗಳನ್ನು ಸ್ತುತಿಸುವುದರಿಂದ ಸ್ತೋಮವೆಂಬ ಹೆಸರು ಬಂದಿದೆ.

### ಯಜುರ್ಯಜತೇಃ ॥

ಯಜುಶಬ್ದ ನಿರ್ವಚನವನ್ನು ತೋರಿಸುತ್ತಾರೆ. ಯಜಧಾತುವಿನಿಂದ ಯಜುಃ ಶಬ್ದವುಂಟಾಗಿದೆ, ಔಣಾದಿಕ ಉಸಿಪ್ರತ್ಯಯಬಂದು ಯಜುಃ ಎಂದಾಗಿದೆ. ಇದರಿಂದ ವಿಶೇಷವಾಗಿ ಹೋಮಿಸುತ್ತಾರೆ. ಎಲ್ಲಾಕಡೆಯಲ್ಲಿಯೂ ಯಾಜ್ಯದಕೊನೆಯಲ್ಲಿ ವಷಟ್ಕಾರವನ್ನು ವಿಧಿಸುವುದರಿಂದ ವಿಶೇಷಸಿದ್ಧವಾಗುತ್ತದೆ

## ಸಾಮ ಸಂಮಿತಮೃಚಾ ||

ಸಾಮಪದದ ನಿರ್ವಚನವನ್ನು ತೋರಿಸುತ್ತಾರೆ. ಸಂಮಾನವೆಂಬುದು ಸಾಮವೆಂದು ನಿಪಾತಿತವಾಗಿದೆ. ಋಙ್ಮಂತ್ರವು ಯಾವ ಪರಿಮಾಣದಿಂದ ಕೂಡಿರುತ್ತದೆಯೋ ಅದಕ್ಕೆ ಅನ್ಯೂನಾಧಿಕ್ಯವಿಲ್ಲದ ಪರಿಮಾಣದಿಂದ ಕೂಡಿರುವುದರಿಂದ ಸಾಮವೆಂದು ಹೆಸರು ಬಂದಿದೆ. ಋಕ್ಕೇ ಗಾನವಿಷಯವಾದರೆ ಸಾಮವಾಗುತ್ತದೆ.

## ಅಸ್ಯತೇರ್ವಾ ||

ಸಾಮವು ಋಕ್ಕುಗಳಲ್ಲಿ ಪ್ರಕ್ಷಿಪ್ತವಾದಂತಿರುವುದರಿಂದ ಕ್ಷೇಪಣಾರ್ಥಕ ಅಸುಧಾತುವಿನಿಂದ ಸಾಮಪದವು ನಿಷ್ಪನ್ನವಾಗಿದೆ. ತಸ್ಯಾದ್ವಸ್ಯಧ್ಯೂಢಂ ಸಾಮಗೀಯತೇ ಎಂದು ಬ್ರಾಹ್ಮಣದಲ್ಲಿ ಹೇಳಿದೆ. ಅಥವಾ ಅಂತಕರ್ಮಾರ್ಥಕವಾದ ಸೋಧಾತುವಿನಿಂದ ಇನು ನಿಷ್ಪನ್ನವಾಗಿದೆ. ಸಾಮದ ಕಾರ್ಯ ಕೊನೆಯಲ್ಲಿರುತ್ತದೆ. ಮೊದಲು ಸಂಹಿತಾ, ಆಮೇಲೆ ಪದಪಾಠ ಕೊನೆಯಲ್ಲಿ ಸಾಮವೆಂದು ಪ್ರಸಿದ್ಧವಾಗಿದೆ.

## ಋಚಾ ಸಮಂ ಮೇನ ಇತಿ ನೈದಾನಾಃ ||

ಋಕ್ಕಿನಿಂದ ಸಮವಾಗಿ ಬ್ರಹ್ಮನು ಇದನ್ನು ತಿಳಿದಿರುವುದರಿಂದ ಸಾಮವೆಂದಾಗಿದೆ ಅಥವಾ ತನ್ನನ್ನೇ ಋಕ್ಕನಿಂದ ಸಮವಾಗಿ ತಿಳಿದಿರುತ್ತಾನೆ ಎಂದರ್ಥ. ಹೀಗೆ ನೈದಾನರು ತಿಳಿಯುತ್ತಾರೆ. ನಿದಾನವೆಂದರೆ ಕಾರಣ ಮಂತ್ರಗಳ ನಿದಾನವನ್ನು ತಿಳಿದವರು ಋಷಿಗಳೆಂದರ್ಥ. ಅಥವಾ ನಿದಾನವೆಂದರೆ ಒಂದು ಗ್ರಂಥವಿಶೇಷ ಅದನ್ನು ತಿಳಿದವರು ನೈದಾನರು.

## ಗಾಯತ್ರೀ ಗಾಯತೇಃ ಸ್ತುತಿಕರ್ಮಣಃ ||

ಆಚ್ಛಾದಕವಾದದ್ದು ಛಂದಸ್ಸೆಂದು ಹಿಂದೆ ಹೇಳಿದೆ. ಅದು ಗಾಯತ್ರೀ ಮುಂತಾದ ಭೇದಗಳಿಂದ ನಾನಾರೀತಿಯಾಗಿರುತ್ತದೆ. ಮೊದಲು ಗಾಯತ್ರೀಪದದ ನಿರ್ವಚನವನ್ನು ತೋರಿಸುತ್ತಾರೆ. ಗಾಯತ್ರೀ ಛಂದಸ್ಸಿನಿಂದ ದೇವತೆಗಳನ್ನು ಸ್ತುತಿಸುತ್ತಾರೆ. ಸ್ತುತ್ಯರ್ಥಕವಾದ ಗೈಧಾತುವಿಗೆ ಅತ್ರಿನ್‌ಪ್ರತ್ಯಯ. ಐಕಾರಕ್ಕೆ ಆಯಾದೇಶ ಇಕಾರಾಂತಕೃದಂತವಾದುದರಿಂದ ಜೀಷ್ ಬಂದಿದೆ.

## ತ್ರಿಗಮನಾ ವಾ ವಿಪರೀತಾ ||

ಇನ್ನೊಂದು ರೀತಿಯಿಂದ ವ್ಯುತ್ಪತ್ತಿ ತೋರಿಸುತ್ತಾರೆ. ತ್ರಿಷು ಗಮನಂ ಯಸ್ಯಾಃ ಸಾ ಗಾಯತ್ರೀ. ಋಕ್‌ಯಜುಸ್ಸಸಾಮ ಈ ಮೂರರಲ್ಲಿಯೂ ಪಾದಪಾದರೂಪದಿಂದ ಗಮನವುಳ್ಳದ್ದು ಒಂದೊಂದು ವೇದದಿಂದ ಒಂದೊಂದುಪಾದ ಸಿದ್ಧವಾಗಿದೆ ಯೆಂದರ್ಥ. ತ್ರಿಭಗಾಯತ್ ಎಂದಿರುವಾಗ ವರ್ಣವ್ಯತ್ಯಾಸದಿಂದ ಗಾಯತ್ರೀ ಎಂದಾಗಿದೆ ಇದನ್ನು ಮನುವೂ ವಿವರಿಸಿರುತ್ತಾನೆ.

**ತ್ರಿಭ್ಯ ಏವ ತು ದೇವೇಭ್ಯಃ ಪಾದಂ ಪಾದಮುದೂದುಹತ್ |**
**ತದಿತ್ಯೃಚೋಽಸ್ಯಾಃ ಸಾವಿತ್ರ್ಯಾಃ ಪರಮೇಷ್ಠೀ ಪ್ರಜಾಪತಿಃ ||**

ಗಾಯತ್ರೀಪ್ರಮುಖಂ ಛಂದಃ ಎಂದು ಅಮರಕಾರನು ಗಾಯತ್ರಿಯನ್ನೇ ಮುಖ್ಯವಾಗಿ ಉದಾಹರಿಸಿರುತ್ತಾನೆ. ಪಿಂಗಳಾ ಚಾರ್ಯರೂ ಛಂದಃ ಎಂದು ಅಧಿಕರಿಸಿ ಗಾಯತ್ರೀ ಎಂದು ಮೊದಲು ಹೇಳಿರುತ್ತಾರೆ.

## ಗಾಯತೋ ಮುಖಾದುದಪತತ್- ಇತಿ ಚ ಬ್ರಾಹ್ಮಣಮ್ ||

ಮನುವಿನ ಅಭಿಪ್ರಾಯವನ್ನೇ ಇಲ್ಲಿ ವಿವರಿಸುತ್ತಾರೆ. ಗಾನಮಾಡುತ್ತಿರುವ ಬ್ರಹ್ಮನ ಮುಖದಿಂದ ಮೂರುವೇದಗಳಿಂದ ಇದು ಪಾದರೂಪದಿಂದ ಹೊರಟುಬಂದಿರುವುದರಿಂದ ಗಾಯತ್ರೀ ಎಂದು ಹೆಸರುಪಡೆದಿದೆ. ಗಾಯತ್ರೀ ಛಂದಸ್ಸಿಗೆ ಮೂರುಪಾದ ಗಳಿರುವುದರಿಂದ ಇದು ಸಂಗತವಾಗಿದೆ. ಒಂದೊಂದು ಪಾದದಲ್ಲಿ ಆರು ಅಕ್ಷರಗಳಿರುತ್ತವೆ.

## ಉಷ್ಣಿಗ್—ಉತ್‌ಸ್ನಾತಾ ಭವತಿ ||

ಪಾದದಲ್ಲಿ ಗಾಯತ್ರೀಛಂದಸ್ಸಿಗಿಂತ ಒಂದೊಂದು ಅಕ್ಷರದಿಂದ ಅಭಿವೃದ್ಧವಾದ ಛಂದಸ್ಸಿನ ನಿರ್ವಚನವನ್ನು ಕ್ರಮವಾಗಿ ತೋರಿಸುತ್ತಾರೆ. ಗಾಯತ್ರೀಛಂದಸ್ಸಿಗಿಂತ ನಾಲ್ಕು ಅಕ್ಷರಗಳಿಂದ ಹೆಚ್ಚಾಗಿ ಸುತ್ತಿದಂತಿರುವುದು, ಒಂದೊಂದು ಪಾದದಲ್ಲಿ ಏಳು ಅಕ್ಷರಗಳಿದ್ದು ನಾಲ್ಕು ಪಾದಗಳಿಂದ ಕೂಡಿರುತ್ತದೆ.

## ಸ್ನಿಹ್ಯತೇರ್ವಾ ಸ್ಯಾತ್ಕಾಂತಿಕರ್ಮಣಃ ||

ಕಾಂತಿ ಅಂದರೆ ಇಚ್ಛಾ ದೇವತೆಗಳಿಗೆ ಈ ಛಂದಸ್ಸು ಅಧಿಕಪ್ರೀತಿದಾಯಕವಾಗಿರುವುದರಿಂದ ಷ್ಣಿಹಧಾತುವಿನಿಂದ ನಿಷ್ಪನ್ನ ವಾಗಿದೆ. ಉತ್ ಅಧಿಕಾರ್ಥವನ್ನು ಕೊಡುತ್ತದೆ. ಉದಿನ ದಕಾರಕ್ಕೆ ಲೋಪಬಂದಿದೆ.

## ಉಷ್ಣೀಷಿಣೀ ವಾ ಇತ್ಯೌಪಮಿಕಮ್ ||

ಅಥವಾ ಉಷ್ಣೀಷದಿಂದ (ಪೇಟ, ರುಮಾಲು) ಕೂಡಿರುವಂತಿದೆ ಎಂದು ಉಪಮಾರ್ಥವನ್ನು ಇದು ತಿಳಿಸುತ್ತದೆ. ಗಾಯತ್ರೀ ಛಂದಸ್ಸಿಗಿಂತ ನಾಲ್ಕು ಅಕ್ಷರಗಳು ಅಧಿಕವಾಗಿರುವುದರಿಂದ ಆ ನಾಲ್ಕು ಅಕ್ಷರಗಳು ಈ ಛಂದಸ್ಸಿಗೆ ರುಮಾಲು ಇದ್ದಂತೆ ಇರುವುದರಿಂದ ಉಷ್ಣಿಕ್ ಎಂದು ಹೆಸರು ಬಂದಿದೆ.

## ಉಷ್ಣೀಷಂ ಸ್ನಾಯತೇಃ ||

ಉಷ್ಣೀಷವುಳ್ಳದ್ದು ಎಂದು ಪ್ರಕ್ರಾಂತವಾದುದರಿಂದ ಉಷ್ಣೀಷಶಬ್ದದ ನಿರ್ವಚನವನ್ನು ತೋರಿಸಿರುತ್ತಾರೆ. ಶೌಚಾರ್ಥಕವಾದ ಸ್ನಾಧಾತುವಿಗೆ ಕರ್ಮಣಿಯಲ್ಲಿ ಇಷತ್‌ಪ್ರತ್ಯಯ. ಅಧಿಕಂ ಸ್ನಾಯತೇ ಇತಿ ಉಷ್ಣಿಕ್. ಅತ್ಯಧಿಕಶುಭ್ರವಾದ ಬಟ್ಟೆಯಿಂದ ನಿರ್ಮಿಸಿರುವುದರಿಂದ ಪೇಟಕ್ಕೆ ಉಷ್ಣೀಷವೆಂದು ಹೆಸರು,

## ಕಕುಪ್ ಕಕುಭಿನೀ ಭವತಿ ||

ಕಕುಪ್‌ಛಂದಸ್ಸಿನ ನಿರ್ವಚನವನ್ನು ತೋರಿಸುತ್ತಾರೆ. ಕಕುಪಿನಂತಿರುವುದು ಕಕುಪ್. ಕಕುಪ್ ಅಂದರೆ ಭುಜ. ಎತ್ತು ಮುಂತಾದುವುಗಳ ಪೃಷ್ಠಭಾಗದಲ್ಲಿ ಭುಜವು ಎತ್ತರವಾಗಿರುತ್ತದೆ. ಉಷ್ಣಿಕ್‌ಛಂದಸ್ಸೇ ಜಾಗತಪಾದದಿಂದ ಕಡಿಮೆಯಾಗಿ ಮಧ್ಯದಲ್ಲಿರುವುದರಿಂದ ಕಕುಪಿನಂತಿರುತ್ತದೆ. ವ್ರೀಹ್ಯಾದಿಗಣಪಠಿತವಾದುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ ಬಂದಾಗ

ಕಕುಭಿನೀ ಎಂದಾಗುತ್ತದೆ. ಕಕುಪಿನಿಂದ ಕೂಡಿರುವುದರಿಂದ ಛಂದಸ್ಸೂ ಕಕುಪ್ ಆಗುತ್ತದೆ. ಕುಬ್ಜ ಅಂದರೆ ಗೂನು ಬೆನ್ನುವುಳ್ಳವನು. ಅದರಂತೆ ಈ ಛಂದಸ್ಸು ಇರುತ್ತದೆ.

**ಕಕುಪ್ ಕುಬ್ಜಶ್ಚ ಕುಜತೇರ್ವಾ ಉಬ್ಜತೇರ್ವಾ ||**

ಕಕುಪ್ ಪದವು ಪ್ರಕ್ರಾಂತವಾದುದರಿಂದ ಅದರ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಕೌಟಿಲ್ಯಾರ್ಥವನ್ನು ಕೊಡುವ ಕುಜ ಧಾತುವಿಗೆ ಕ್ವಿಪ್‌ಪ್ರತ್ಯಯ. ದ್ವಿತ್ವಾದಿಗಳು ಬಂದು ಕಕುಪ್ ಎಂದಾಗಿದೆ. ಧಾತುಗಳಿಗೆ ನಾನಾರ್ಥಗಳಿರುವುದರಿಂದ ಧಾತು ಪಾಠದಲ್ಲಿ ಕುಜಧಾತುವಿಗೆ ಪ್ರೇರಣಾರ್ಥ ಹೇಳಿದ್ದರೂ ಕೌಟಿಲ್ಯಾರ್ಥದಲ್ಲಿ ಇಲ್ಲಿ ಪ್ರಯೋಗಿಸಿರುತ್ತಾರೆ. ಅಥವಾ ಆರ್ಜವ ಅಂದರೆ ಬಗ್ಗಿರುವುದು ಎಂದು ಅರ್ಥಕೊಡುವ ಉಬ್ಜಧಾತುವಿನಿಂದ ಕಕುಪ್‌ಶಬ್ದ ನಿಷ್ಪನ್ನವಾಗಿದೆ. ಪೃಷೋದರಾದಿಗಣ ಪಠಿತವಾದುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ. ಕುಬ್ಜಪದವೂ ಹೀಗೆಯೇ ಉಬ್ಜಧಾತುವಿನಿಂದ ಉಂಟಾಗಿದೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಧಾತುವಿಗೆ ಕುಡಾಗಮ. ಕುಬ್ಜ ಎಂದಾಗುತ್ತದೆ. ಕ್ಷೀರಸ್ವಾಮಿಯು ವಿಸ್ತಾರಾರ್ಥದಲ್ಲಿ ಕಕುಪ್‌ಪದದ ನಿರ್ವಚನವನ್ನು ತೋರಿಸುತ್ತಾನೆ. ಉಚ್ಛ್ರಾಯಾರ್ಥಕ ಕುಭಧಾತುವಿನಿಂದ ಕಕುಪ್‌ಪದ ವಾಗಿದೆಯೆಂದು ಮಾಧವಾಚಾರ್ಯರಮತ.

**ಅನುಷ್ಟುಬನುಷ್ಟೋಭನಾತ್ ||**

ಅನುಷ್ಟುಪ್ ಛಂದಸ್ಸಿನ ನಿರ್ವಚನವನ್ನು ತೋರಿಸಿರುತ್ತಾರೆ. ಅನುಸರಿಸಿ ಸ್ತುತಿಸುವುದರಿಂದ ಅನುಷ್ಟುಪ್ ಎಂದಾಗಿದೆ. ಅನುಷ್ಟೋಭನವುಳ್ಳದ್ದು ಅನುಷ್ಟುಪ್.

**ಗಾಯತ್ರೀಮೇವ ತ್ರಿಪದಾಂ ಸತೀಂ ಚತುರ್ಥೇನ ಪಾದೇನಾನುಷ್ಟೋಭತಿ-ಇತಿ ಚ ಬ್ರಾಹ್ಮಣಮ್ ||**

ಎಂಟು ಅಕ್ಷರಗಳುಳ್ಳ ತ್ರಿಪದವಾದ ಗಾಯತ್ರೀಛಂದಸ್ಸನ್ನೇ ಅನುಸರಿಸಿ ನಾಲ್ಕನೇ ಪಾದದಿಂದ ಕೂಡಿದ್ದು ಸ್ತುತಿಸುವುದರಿಂದ. ಅನುಷ್ಟುಪ್ ಎಂದಾಗಿದೆಯೆಂದು ಬ್ರಾಹ್ಮಣಾಭಿಪ್ರಾಯ. ಚಕಾರದಿಂದ ಸ್ವಾಭಿಪ್ರಾಯವನ್ನೂ ತೋರಿಸಿರುತ್ತಾರೆ. ಒಂದು ಪಾದಮಾತ್ರ ಅಧಿಕವಾಗಿ ಬೇರೆ ಅಂಶದಲ್ಲಿ ಅಂದರೆ ಒಂದೊಂದು ಪಾದದಲ್ಲಿ ಎಂಟು ಅಕ್ಷರಗಳಿಂದ ಕೂಡಿರುವುದರಿಂದ ಗಾಯತ್ರಿಯ ಅನುಸರಣೆಯಿರುತ್ತದೆ. ಮೂವತ್ತೆರಡು ಅಕ್ಷರಗಳುಳ್ಳದ್ದು ಅನುಷ್ಟುಪ್.

**ಬೃಹತೀ ಪರಿಬರ್ಹಣಾತ್ ||**

ಬೃಹತೀ ಶಬ್ದದ ನಿರ್ವಚನ ತೋರಿಸುತ್ತಾರೆ. ಅಧಿಕವೃದ್ಧಿಯನ್ನು ಹೊಂದಿರುವುದು ಬೃಹತೀ ಆಗುತ್ತದೆ. ಅನುಷ್ಟುಪ್ ಛಂದಸ್ಸಿಗಿಂತ ನಾಲ್ಕು ಅಕ್ಷರಗಳು ಇದರಲ್ಲಿ ಅಧಿಕವಾಗಿರುತ್ತವೆ. ಒಟ್ಟಿಗೆ ಮೂವತ್ತಾರು ಅಕ್ಷರಗಳಿಂದ ಕೂಡಿರುವುದು ಬೃಹತೀ.

**ಪಂಕ್ತಿಃ ಪಂಚಪದಾ ||**

ಪಂಕ್ತಿಪದದ ವಿವರವನ್ನು ತೋರಿಸುತ್ತಾರೆ. ಐದು ಪಾದಗಳಿಂದ ಕೂಡಿರುವುದು ಪಂಕ್ತಿಯಾಗುತ್ತದೆ. ಪಂಚಪದಪರಿ

ಮಾಣವುಳ್ಳದ್ದು ಪಂಕ್ತಿಯೆಂದು ಕಾಶಿಕಾಕಾರರು ಹೇಳಿರುತ್ತಾರೆ. ಪದವೆಂದರೆ ಪಾದವೆಂದರ್ಥ. ಪಂಚನ್‌ಶಬ್ದದಮೇಲೆ ಪರಿಮಾಣವುಳ್ಳದ್ದು ಎಂಬರ್ಥದಲ್ಲಿ ತಿಪ್ರತ್ಯಯ. ಟಿಗೆ (ಅನ್) ಲೋಪ. ಚಕಾರಕ್ಕೆ ಕುತ್ವ ಬಂದು ಪಂಕ್ತಿ ಎಂದಾಗಿದೆ

ತ್ರಿಷ್ಟುಪ್ ಸ್ತೋಭತ್ಯುತ್ತರಪದಾ ||

ತ್ರಿಷ್ಟುಪ್‌ಛಂದಸ್ಸಿನ ನಿರ್ವಚನವನ್ನು ತೋರಿಸುತ್ತಾರೆ. ಯದ್ಯಪಿ ಇದನ್ನು ವಿರಾಟ್ ಶಬ್ದನಿರ್ವಚನ ತೋರಿಸಿದಮೇಲೆ ಹೇಳಬೇಕಾಗಿದೆ. ಛಂದಸ್ಸಿನ ಕ್ರಮದಲ್ಲಿ ವಿರಾಟ್ ಆದಮೇಲೆ ತ್ರಿಷ್ಟುಪ್ ಹೇಳಿರುತ್ತಾರೆ. ಆದರೆ ಅಧಿಯಜ್ಞದಲ್ಲಿ ಇದರ ಪ್ರಯೋಗವೇ ಅಧಿಕವಾಗಿರುವುದರಿಂದ ವಿರಾಟ್‌ಛಂದಸ್ಸಿಗಿಂತ ಪೂರ್ವದಲ್ಲಿಯೇ ಇದನ್ನು ಹೇಳಿರುತ್ತಾರೆ. ಆದರಾತಿಶಯ ದಿಂದಲೂ ಮೊದಲು ಹೇಳಿದೆ. ಸ್ತುಭಧಾತುವೇ ಉತ್ತರಪದವಾಗಿರುವುದು ತ್ರಿಷ್ಟುಪ್. ಸ್ತೋಭತಿ ಎಂಬಲ್ಲಿ ತ್ರಿಪ್‌ನಿಂದ ಧಾತುನಿರ್ದೇಶವಮಾಡಿರುತ್ತಾರೆ.

ಕಾ ತು ತ್ರಿತಾ ಸ್ಯಾತ್?

ತ್ರಿ ಸ್ತುಭ್ ಎಂಬಲ್ಲಿ ಉತ್ತರಪದಾರ್ಥನಿರ್ಣಯ ತೋರಿಸಿ ಪೂರ್ವಪದದ ನಿರ್ಣಯವನ್ನು ತೋರಿಸಿರುತ್ತಾರೆ. ತುಶಬ್ದ ಉತ್ತರಪಧಾರ್ಥಕ್ಕಿಂತ ವೈಲಕ್ಷಣ್ಯವನ್ನು ಸೂಚಿಸುತ್ತದೆ. ಪೂರ್ವಪದದ ತ್ರಿತ್ವವು ಯಾವುದು ? ಎಂದು ವಿಚಾರಿಸುತ್ತಾರೆ ಯಾವುದರತ್ರಿತ್ವ ಇಲ್ಲಿ ತೋರುತ್ತದೆ ಎಂದು ತಾತ್ಪರ್ಯ.

ತೀರ್ಣತಮಂ ಛಂದಃ ||

ತ್ರಿತ್ವನಿರ್ಣಯವನ್ನು ತೋರಿಸುತ್ತಾರೆ. ತ್ರಿತ್ವಸಂಖ್ಯೆ ಬಹುವಚನವನ್ನು ತಿಳಿರುತ್ತದೆ. ಗಾಯತ್ರ್ಯಾದಿ ಛಂದಸ್ಸುಗಳಿಗಿಂತ ಇದು ಅಧಿಕವಾಗಿ ಸ್ತುತವಾಗುತ್ತದೆಂದರ್ಥ. ಯಜ್ಞಾದಿಗಳಲ್ಲಿ ಅಧಿಕಪ್ರಯೋಗವಿರುವ ಛಂದಸ್ಸಿಗೆ ತ್ರಿಷ್ಟುಪ್ ಎಂದ ಹೆಸರು.

ತ್ರಿವೃದ್ವಜ್ರಸ್ತಸ್ಯ ಸ್ತೋಭತೀತಿ ವಾ ||

ಬೇರೆರೀತಿಯಿಂದ ನಿರ್ವಚನ ತೋರಿಸುತ್ತಾರೆ. ತ್ರಿವೃತ್ ಅಂದರೆ ವಜ್ರಾಯುಧ ಅದು ಮೂರುಭಾಗದಿಂದ ಕೂಡಿರುತ್ತದೆ. ಈ ವಜ್ರಾಯುಧವನ್ನು ಇದರಿಂದ (ಛಂದಸ್ಸಿನಿಂದ) ಋಷಿಯು ಸ್ತುತಿಸುವುದರಿಂದ ತ್ರಿಷ್ಟುಪ್ ಎಂದಾಗಿದೆ. ಸ್ತುಭಧಾತುವು ಅರ್ಚನ, ಸ್ತುತ್ಯರ್ಥವನ್ನು ತಿಳಿಸುತ್ತದೆ.

ಯತ್ತ್ರಿರಸ್ತೋಭತ್ ತತ್ತ್ರಿಷ್ಟುಭಸ್ತ್ರಿಷ್ಟುಪ್ತ್ವಂ—ಇತಿ ವಿಜ್ಞಾಯತೇ ||

ಅಥವಾ ವಜ್ರಾಯುಧವು ಇಂದ್ರಸಂಬಂಧಿಯಾದುದರಿಂದ ಈ ಶಬ್ದವು ಇಂದ್ರನನ್ನೇ ತಿಳಿಸುತ್ತದೆ. ಈ ಛಂದಸ್ಸಿನಿಂದ ಇಂದ್ರನನ್ನು ಮೂರುಸಾರಿ ಸ್ತುತಿಸಿರುವುದರಿಂದ ಇದಕ್ಕೆ ತ್ರಿಷ್ಟುಪ್ ಎಂಬ ಹೆಸರು ಬಂದಿದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತವಾದ ನಿರುಕ್ತಭಾಷ್ಯದ ಏಳನೇ ಅಧ್ಯಾಯದಲ್ಲಿ
ಹನ್ನೆರಡನೆಯ ಖಂಡವು ಮುಗಿದಿದೆ.

## ಅಥ ತ್ರಯೋದಶಃ ಖಂಡಃ

## ಹದಿಮೂರನೆಯ ಖಂಡವು

ಜಗತೀ ಗತತಮಂ ಛಂದೋ ಜಲಚರಗತಿರ್ವಾ ಜಲ್ಗಲ್ಯಮಾನೋಽಸೃಜದಿತಿ ಚ ಬ್ರಾಹ್ಮಣಂ ವಿರಾಡ್ವಿರಾಜನಾದ್ವಾ ವಿರಾಧನಾದ್ವಾ ವಿಪ್ರಾಪಣಾದ್ವಾ ವಿರಾಜನಾತ್ಸಂಪೂರ್ಣಾಕ್ಷರಾ ವಿರಾಧನಾದೂನಾಕ್ಷರಾ ವಿಪ್ರಾಪಣಾದಧಿಕಾಕ್ಷರಾ ಪಿಪೀಲಿಕಾಮಧ್ಯೇತ್ಯೌಪಮಿಕಂ ಪಿಪೀಲಿಕಾ ಪೇಲತೇರ್ಗತಿಕರ್ಮಣ ಇತೀಮಾ ದೇವತಾ ಅನುಕ್ರಾಂತಾಃ ಸೂಕ್ತ-ಭಾಜೋ ಹವಿರ್ಭಾಜ ಋಗ್ಭಾಜಶ್ಚ ಭೂಯಿಷ್ಠಾಃ ಕಾಶ್ಚಿನ್ನಿಪಾತಭಾಜೋಽಥೋತಾಭಿ-ಧಾನೈಃ ಸಂಯುಜ್ಯ ಹವಿಶ್ಚೋದಯತೀಂದ್ರಾಯ ವೃತ್ರಘ್ನೇ ಇಂದ್ರಾಯ ವೃತ್ರತುರ ಇಂದ್ರಾಯಾಂಹೋಮುಚ ಇತಿ ತಾನ್ಯಪ್ಯೇಕೇ ಸಮಾಮನಂತಿ ಭೂಯಾಂಸಿ ತು ಸಮಾಮ್ನಾನಾದ್ಯತ್ತು ಸಂವಿಜ್ಞಾನಭೂತಂ ಸ್ಯಾತ್ಪ್ರಾಧಾನ್ಯಸ್ತುತಿ ತತ್ಸಮಾಮನೇಽಥೋತ ಕರ್ಮಭಿರ್ಋಷಿರ್ದೇವತಾಃ ಸ್ತೌತಿ ವೃತ್ರಹಾ ಪುರಂದರ ಇತಿ ತಾನ್ಯಪ್ಯೇಕೇ ಸಮಾ-ಮನಂತಿ ಭೂಯಾಂಸಿ ತು ಸಮಾಮ್ನಾನಾದ್ ವ್ಯಂಜನಮಾತ್ರಂ ತು ತತ್ತಸ್ಯಾಭಿಧಾನಸ್ಯ ಭವತಿ ಯಥಾ ಬ್ರಾಹ್ಮಣಾಯ ಬುಭುಕ್ಷಿತಾಯೌದನಂ ದೇಹಿ ಸ್ನಾತಾಯಾನುಲೇಪನಂ ಪಿಪಾಸತೇ ಪಾನೀಯಮಿತಿ || ೧೩ ||

### ಜಗತೀ ಗತತಮಂ ಛಂದಃ ||

ಜಗತೀ ಎಂಬುದೂ ಗತತಮ ಅಂದರೆ ಅಂತ್ಯವಾದ ಛಂದಸ್ಸು. ಇದಕ್ಕಿಂತ ಮುಂದಿರುವವುಗಳು ಅತಿಛಂದಸ್ಸುಗಳು ಅಂದರೆ ಛಂದೋತಿಸುಮವನ್ನು ಮೀರಿರುತ್ತವೆಯೆಂದರ್ಥ. ಛಂದಸ್ಸುಗಳಲ್ಲಿ ಜಗತೀಛಂದಸ್ಸೇ ಕೊನೆಯ ಛಂದಸ್ಸಾಗಿರುತ್ತದೆ.

### ಜಲಚರಗತಿರ್ವಾ ||

ನ್ನೊಂದು ರೀತಿಯಿಂದ ವ್ಯುತ್ಪತ್ತಿ ತೋರಿಸುತ್ತಾರೆ ನೀರಿನ ಅಲೆಗಳಂತೆ ಗಮನವುಳ್ಳದ್ದು ಎಂದರ್ಥ. ಈ ಜಗತೀ ಛಂದಸ್ಸಿನ ಪ್ರಸ್ತಾರವು ನೀರಿನ ಅಲೆಗಳಂತೆ ವಿಸ್ತಾರಹೊಂದುತ್ತವೆ. ಪೃಷೋದರಾದಿಗಣಪಠಿತವಾದುದರಿಂದ ಜಗತಿ ಎಂಬಲ್ಲಿ ಲಲೋಪವಾಗಿ ಜ್ ಬಂದಿದೆ.

### ಜಲ್ಗಲ್ಯಮಾನೋಽಸೃಜದಿತಿ ಚ ಬ್ರಾಹ್ಮಣಮ್ ||

ಬ್ರಾಹ್ಮಣದಲ್ಲಿ ನಿರ್ವಚನಮಾಡಿದ ರೀತಿಯನ್ನು ವಿವರಿಸುತ್ತಾರೆ. ಗ್ಲೈ–ಹರ್ಷಕ್ಷಯೇ. ಧಾತು. ಬ್ರಹ್ಮನು ಕ್ಷೀಣವಾದ ಹರ್ಷವುಳ್ಳವನೋ ಎಂಬಂತೆ ಇದನ್ನು ಕಂಡುಹಿಡಿದುದರಿಂದ ಜಗತೀ ಎಂಬ ನಾಮ ಬಂದಿದೆ; ಛಂದಸ್ಸು ನಿತ್ಯವಾದುದರಿಂದ

ಮಾಡಿರುವುದಲ್ಲ. ದಿವ್ಯಜ್ಞಾನದಿಂದ ನೋಡಿರುವುದೆಂದರ್ಥ. ಗ್ಲೈಧಾತುವಿನಿಂದ ಈ ಶಬ್ದವುಂಟಾಗಿದೆಯೆಂದು ಬ್ರಾಹ್ಮಣದ ಅಭಿಪ್ರಾಯ.

## ವಿರಾಟ್—ವಿರಾಜನಾದ್ ವಾ—ವಿರಾಧನಾದ್ವಾ—ವಿಪ್ರಾಪಣಾದ್ವಾ ||

ತ್ರಿಷ್ಟುಪಿನ ಹಿಂದೆಯೇ ಹೇಳಬೇಕಾಗಿರುವಾಗ ಇಲ್ಲಿ ಹೇಳಿರುವುದಕ್ಕೆ ಕಾರಣ ಹಿಂದೆಯೇ ವಿವರಿಸಿದೆ. ಮೂರುರೀತಿಯಾದ ವ್ಯುತ್ಪತ್ತಿಯಿಂದ ಈ ಶಬ್ದ ನಿಷ್ಪತ್ತಿಯಾಗಿದೆ. ಅದನ್ನು ಕ್ರಮವಾಗಿ ಮುಂದೆ ವಿವರಿಸುತ್ತಾರೆ.

## ವಿರಾಜನಾತ್ಸಂಪೂರ್ಣಾಕ್ಷರಾ ||

ಸಾಕಲ್ಯಾದ್ವಿರಾಜತೇ ಇತಿ ವಿರಾಟ್. ಅಕ್ಷರಸಂಪತ್ತಿಯಿಂದ ಶೋಭಿಸುವುದರಿಂದ ವಿರಾಟ್ ಎಂದಾಗಿದೆ. ವಿ ಉಪಸರ್ಗ. ರಾಜೃ-ದೀಪ್ತೌ ಧಾತುವಿಗೆ ಕ್ವಿಪ್ ಪ್ರತ್ಯಯ. ವಿರಾಟ್

## ವಿರಾಧನಾದೂನಾಕ್ಷರಾ ||

ವಿರಾಧನ ಅಂದರೆ ವೈಕಲ್ಯ. ವಿರಾಧ್ಯಂತೀವ ಇತಿ ವಿರಾಟ್ ಕೆಲವು ಪಾದಗಳಲ್ಲಿ ಅಕ್ಷರನ್ಯೂನತೆಯಿಂದ ವೈಕಲ್ಯಹೊಂದಿರುವುದೆಂದರ್ಥ. ಆರ್ಷವಾಗಿ ಧಕಾರಕ್ಕೆ ಟಕಾರರೂಪ ವರ್ಣವ್ಯತ್ಯಯ ಬಂದಿದೆ.

## ವಿಪ್ರಾಪಣಾದಧಿಕಾಕ್ಷರಾ ||

ವಿಪ್ರಾಣನ ಅಂದರೆ ಆಧಿಕ್ಯಹೊಂದುವುದು. ಕೆಲವು ಪಾದಗಳಲ್ಲಿ ಅಧಿಕಾಕ್ಷರ ಹೊಂದಿರುವುದರಿಂದ ವಿರಾಟ್ ಎಂದಾಗಿದೆ ಇಲ್ಲಿಯೂ ಆರ್ಷವಾದುದರಿಂದ ವರ್ಣವತ್ಯಾಸ, ಲೋಪಗಳು ಬಂದಿವೆ. ಈ ಮೂರು ರೀತಿಯಾದ ನಿರ್ವನದಿಂದ ವಿರಾಟ್ ಛಂದಸ್ಸು ಮೂರುರೀತಿಯಾಗಿರುತ್ತದೆಂಮ ವ್ಯಕ್ತವಾಗುತ್ತದೆ. ಕೆಲವು ಪಾದಗಳಲ್ಲಿ ಸಂಪೂರ್ಣಾಕ್ಷರಗಳೂ, ಕೆಲವು ಪಾದಗಳಲ್ಲಿ ನ್ಯೂನಾಕ್ಷರಗಳೂ, ಕೆಲವು ಪಾದಗಳಲ್ಲಿ ಅಧಿಕಾಕ್ಷರಗಳೂ ಇರುತ್ತವೆ. ವಿಷಮುಪಾದವುಳ್ಳದ್ದೆಂದು ತಾತ್ಪರ್ಯ.

## ಪಿಪೀಲಿಕಮಧ್ಯಾ ಇತ್ಯೌಪಮಿಕಮ್ ||

ಒಂದು ಉಪಮೆಯಿಂದ ಇದಕ್ಕೆ ನಾಮನಿರ್ವಚನಮಾಡುವುದಾದರೆ ಪಿಪೀಲಿಕಮಧ್ಯಾ ಎಂದು ಕರೆಯಬಹುದು. ಪಿಪೀಲಿಕಾ ಅಂದರೆ ಇರುವೆ. ಇರುವೆಯ ಮಧ್ಯದೇಹವು ಕೃಶವಾಗಿರುವಂತೆ ಈ ವಿರಾಟ್ ಛಂದಸ್ಸಿನ ಮಧ್ಯಪಾದವು ಅಲ್ಪಾಕ್ಷರಗಳಿಂದ ಕೂಡಿರುತ್ತದೆ, ಹೀಗೆ ಇರುವೆಯ ಸ್ವರೂಪವಿರುವುದರಿಂದ ಇದಕ್ಕೆ ಪಿಪೀಲಿಕ ಮಧ್ಯಾ ಎಂಬ ಹೆಸರು ಯುಕ್ತವಾಗಿದೆ.

## ಪಿಪೀಲಿಕಾ ಪೇಲತೇರ್ಗತಿಕರ್ಮಣಃ ||

ಉಪಮಾನಕ್ಕೋಸ್ಕರ ಉಪಾತ್ತವಾದ ಪೀಪೀಲಿಕಾಪದದ ನಿರ್ವಚನ ತೋರಿಸುತ್ತಾರೆ. ಗತ್ಯರ್ಥಕವಾದ ಪೇಲಧಾತುವಿಗೆ ಕಿ ಪ್ರತ್ಯಯ ಅದಕ್ಕೆ ಲಿಪ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವಾದಿ ಉಪಧೆಯಾದ ಏಕಾರಕ್ಕೆ ಈಕಾರಾದೇಶ ಸ್ವಾರ್ಥ

ದಲ್ಲಿ ಕ ಪ್ರತ್ಯಯ ಅವರಮೇಲೆ ಟಾಪ್. ಪುನಃ ಪುನಃ ಅತ್ತಿತ್ತ ಸಂಚರಿಸುವುದು ಪೀಪೀಲಿಕಾ ಯಾವಾಗಲೂ ತಿರುಗುತ್ತಿರುವುದು ಇರುವೆಗಳ ಸ್ವಭಾವ.

## ಇತೀಮಾ ದೇವತಾ ಅನುಕ್ರಾಂತಾಃ ||

ಇತಿ ಶಬ್ದವು ಪ್ರಕರಣಸಮಾಪ್ತಿಯನ್ನು ತಿಳಿಸುತ್ತದೆ. ಈರೀತಿಯಾಗಿ **ಯತ್ಕಾಮ ಋಷಿಃ** ಎಂದು ಪ್ರಾರಂಭಿಸಿ, ಅಗ್ನಿ ಜಾತವೇದಾ: ವೈಶ್ವಾನರ: ಇತ್ಯಾದಿ ದೇವತೆಗಳನ್ನು ಸಮಾಸದಿಂದ ನಿರ್ಣಯಿಸಿದಾಯಿತು. ಪ್ರತ್ಯೇಕವಾಗಿ ಮುಂದೆ ವಿವರಿಸುತ್ತಾರೆ.

## ಸೂಕ್ತಭಾಜೋ ಹವಿರ್ಭಾಜಃ ||

ಪೂರ್ವೋಕ್ತವಾದ ದೇವತೆಗಳಲ್ಲಿ ಕೆಲವರು ಕೇವಲ ಸೂಕ್ತವನ್ನು ಹೊಂದಿರುತ್ತಾರೆ. ಸೂಕ್ತದಲ್ಲಿಮಾತ್ರ ಅವರನ್ನು ಸ್ತುತಿಸುತ್ತಾರೆ. ಅವರು ಹವಿಸ್ಸನ್ನು ಹೊಂದುವುದಿಲ್ಲ. ಇನ್ನು ಕೆಲವರು ಹವಿಸ್ಸನ್ನುಮಾತ್ರ ಹೊಂದುವವರಲ್ಲದೆ ಸೂಕ್ತದಲ್ಲಿ ಪ್ರಸ್ತುತರಾಗಿ ಸ್ತುತಿಸಲ್ಪಡುವುದಿಲ್ಲ. ಇದನ್ನೇ ಮುಂದೆ—ಇತೀಮಾನಿ ಸಪ್ತವಿಂಶತಿರ್ದೇವತಾನಾಮಧೇಯಾನಿ ಅನುಕ್ರಾಂತಾನಿ ಸೂಕ್ತ ಭಾಂಜಿ. ತೇಷಾಮೇತಾನ್ಯಹವಿರ್ಭಾಂಜಿ ||

## ಋಗ್ಭಾಜಶ್ಚ ಭೂಯಿಷ್ಠಾಃ ||

ಸಾಮಾನ್ಯವಾಗಿ ದೇವತೆಗಳಲ್ಲಿ ಅಧಿಕವಾಗಿ ಋಗ್ಭಾಗಿಗಳಾಗಿರುತ್ತಾರೆ. ಋಕ್ಕುಗಳಲ್ಲಿ ಸ್ತುತ್ಯರಾಗಿರುತ್ತಾರೆ ಎಂದರ್ಥ. ಲಕ್ಷಣ ಭೇದಾದಿಗಳಿಂದ ಆಪ್ರೀಸೂಕ್ತದಲ್ಲಿ ಒಂದೊಂದು ಋಕ್ಕನ್ನು ಹೊಂದಿರುವುದನ್ನು ಉದಾಹರಣೆಗಾಗಿ ತಿಳಿಯಬೇಕು. ಅರ್ಧರ್ಚ ವನ್ನು ಹೊಂದಿರುವವರೂ ಕೆಲವು ದೇವತೆಗಳಿರುತ್ತಾರೆ. ಯತ್ರಾ ಚಕ್ರು :—(ಋ. ಸಂ. ೫—೫—೫) ಈ ಋಕ್ಕಿನ ಪೂರ್ವದ ಅರ್ಧರ್ಚವು ಶೌನಕಸಂಬಂಧಿಯೂ, ಉತ್ತರದ ಅರ್ಧರ್ಚವು ಮೈತ್ರಾವರುಣಸಂಬಂಧಿಯಾಗಿರುತ್ತದೆ. ಇನ್ನು ಕೆಲವರು ಕೇವಲ ಪಾದಮಾತ್ರ ಸಂಬಂಧ ಹೊಂದಿರುತ್ತಾರೆ. ನವೋ ನವೋ ಭವತಿ ಜಾಯಮಾನ ( ಋ. ಸಂ. ೮—೩—೨೩) ಎಂಬಲ್ಲಿ ಎರಡನೆಯಪಾದ ಆದಿತ್ಯಸಂಬಂಧಿಯಾಗಿರುತ್ತದೆ. ಭೂಯಿಷ್ಠ ಪದದಿಂದ ಕೆಲವು ದೇವತೆಗಳನ್ನು ಮಂತ್ರದಲ್ಲಿ ಹೇಳದೇ ಇರುವುದೂ ಇದೆಯೆಂದು ಸೂಚಿತವಾಗುತ್ತದೆ. ಪರಮೇಷ್ಠಿ, ಗ್ರಹ, ನಕ್ಷತ್ರ, ಸರ್ಪ, ಲಾಂಗಲ, ಕುಸುಂಭಕ, ಮುಂತಾದ ನಾಮಧೇಯಗಳನ್ನು ಹೇಳಿಲ್ಲವಾದರೂ ಲಕ್ಷಣವನ್ನು ನೋಡಿ ಪೃಥಿವೀಸ್ಥಾನ, ಅಂತರಿಕ್ಷಸ್ಥಾನ, ದ್ಯುಸ್ಥಾನ ದೇವತೆಗಳಲ್ಲಿ ಸೇರಿಸಿಕೊಳ್ಳಬೇಕು.

## ಕಾಶ್ಚಿನ್ನಿಪಾತಭಾಜಃ ||

ನಿಪಾತವೆಂದರೆ ಅಪ್ರಾಧಾನ್ಯ. ಕೆಲವು ದೇವತೆಗಳು ಅಪ್ರಾಧಾನ್ಯವನ್ನು ಹೊಂದಿರುತ್ತವೆ. ಅಪ್ರಾಧಾನ್ಯ ಎರಡುರೀತಿ ಯಾಗಿರುತ್ತದೆ. ಇತರ ದೇವತೆಗಳೊಡನೆ ಸಾಧಾರಣವಾಗಿ ಸ್ತುತಿಸಿರುವುದು. ಇನ್ನೊಂದು ನೈಘಂಟುಕವಾಗಿ ಹೇಳಿರುವುದು. ಸಾಧಾರಣಸ್ತುತಿಗೆ ಉದಾಹರಣೆ. ವಿಧಾತೃ ಧಾತೃವಿನೊಡನೆ ಹೇಳಿರುವುದು **ಸೋಮಸ್ಯ ರಾಜ್ಞಃ** (ಋ. ಸಂ. ೮—೮—೨೫) ಬಹುದೇವತಾಕವಾದ ಈ ಋಕ್ಕಿನಲ್ಲಿ ಸೋಮ ಮುಂತಾದವರೊಡನೆ ಅಪ್ರಧಾನವಾಗಿ ಹೇಳಿದೆ. ನೈಘಂಟುಕಕ್ಕೆ—**ಪೃಥಿವೀ ವ್ಯಾಖ್ಯಾತಾ** ಎಂದು ಹಿಂದೆ ಹೇಳಿದೆ. ಐಂದ್ರಾಗ್ನೀದೇವತಾಕವಾದ ಈ ಋಕ್ಕಿನಲ್ಲಿ ಪೃಥಿವಿಯನ್ನು ಅಪ್ರಧಾನವಾಗಿ

ಹೇಳಿರುತ್ತಾರೆ. **ಯದಿಂದ್ರಾಗ್ನೀ ಪರಮಸ್ಯಾಂ ಪೃಥಿವ್ಯಾಂ** (ಋ. ಸಂ. ೧-೭-೨೭) ಇಲ್ಲಿ ಇಂದ್ರಾಗ್ನಿಗಳೊಡನೆ ಪೃಥಿವಿಗೆ ಸಾಧಾರಣವಾದ ಸ್ತುತಿಯಿಲ್ಲ. ಅದು ಲಕ್ಷಣದಿಂದ ಇಂದ್ರಾಗ್ನಿಗಳ ಸ್ತುತಿಯೆಂದು ನಿರ್ಣೀತವಾಗಿರುತ್ತದೆ. ಇನ್ನೊಂದು ರೀತಿಯಿಂದ ಅಪ್ರಾಧಾನ್ಯ ತಿಳಿಯಬೇಕು. ಅತ್ಯಂತ ನೈಘಂಟುಕ, ಅನತ್ಯಂತನೈಘಂಟುಕವೆಂದು ಎರಡು ರೀತಿಯಾದ ದೇವತಾಭಿಧಾನವಿರುತ್ತದೆ. ಆದಿತ್ಯನಿಗೆ ತನ್ನ ಕಿರಣಾದಿಗಳಿಂದ ಸ್ತುತಿಯಿದ್ದರೆ ಅದು ಅತ್ಯಂತ ನೈಘಂಟುಕವಾಗಿರುತ್ತದೆ. ಅತ್ಯಂತವಾಗಿ ಅದೃಷ್ಟವಾದ ಸ್ವಪ್ರಧಾನಸ್ತುತಿಯೆಂದರ್ಥ. ಅನತ್ಯಂತನೈಘಂಟುಕವೆಂದರೆ ಪ್ರಧಾನಸ್ತುತಿಯುಳ್ಳ ದೇವತಾಪದವು ಎಲ್ಲಿ ವಾಕ್ಯಾರ್ಥಪರಿಶೀಲನೆಯಿಂದ ಅಪ್ರಧಾನವಾಗಿ ಉಪಮಾನರೂಪವಾದುದರಿಂದ ತನ್ನ ಅರ್ಥವನ್ನು ಅನ್ಯದೇವತಾಪದದಲ್ಲಿ ಸಮರ್ಪಿಸುವುದೆಂದರ್ಥ **ಅಗ್ನಿರಿವ ಮನ್ಯೋ**-(ಋ. ಸಂ. ೮-೩-೧೯) ಎಂಬಲ್ಲಿ ಅಗ್ನಿರಿವ ಎಂಬುದು ಉಪಮಾನಬೋಧಕವಾಗಿ ಅಪ್ರಧಾನವಾಗಿ ತನ್ನ ಸಾದೃಶ್ಯವನ್ನು ಮನ್ಯುದೇವತೆಯಲ್ಲಿ ತಂದುಕೊಡುತ್ತದೆ.

## ಅಥೋತಾಭಿಧಾನೈಃ ಸಂಯುಜ್ಯ ಹವಿಶ್ಚೋದಯತಿ ॥

ಅಥ ಶಬ್ದವು ವಿಶೇಷಾಧಿಕಾರವನ್ನು ತಿಳಿಸುತ್ತದೆ. ಅಭಿಧಾನವೆಂದರೆ ವಿಶೇಷಣ. ಒಂದೊಂದು ವಿಶೇಷಣವನ್ನೂ ಅಪೇಕ್ಷಿಸಿ ಕಲ್ಪಿಸುವುದು. ಅಂದರೆ ಒಂದು ವಿಶೇಷ್ಯಾರ್ಥವನ್ನೇ ಅನೇಕ ವಿಶೇಷಣಗಳೊಡನೆ ಪುನಃಪುನಃ ಹೇಳಿ ಹವಿಸ್ಸನ್ನು ವಿಧಿಸುತ್ತಾರೆ.

**ಇಂದ್ರಾಯ ವೃತ್ರಘ್ನೇ । ಇಂದ್ರಾಯ ವೃತ್ರತುರೇ ।**
**ಇಂದ್ರಾಯಾಂಹೋಮುಚೇ । ಇತಿ ॥**

ಪುನಃ ಪುನ ವಿಶೇಷಣಗಳಿಂದ ಹೇಳಿರುವುದಕ್ಕೆ ಉದಾಹರಣೆ ತೋರಿಸುತ್ತಾರೆ. ಇಲ್ಲಿ ಪ್ರತ್ಯೇಕವಾಗಿ ಏಕಾದಶಕಪಾಲಂ ನಿರ್ವಪೇತ್' ಎಂದು ವಾಕ್ಯಶೇಷವನ್ನು ಕಲ್ಪಿಸಿ ಹವಿರ್ವಿಧಾನವೆಂದು ತಿಳಿಯಬೇಕು.

## ತಾನ್ಯಪ್ಯೇಕೇ ಸಮಾಮನಂತಿ ॥

ಏಕೇ ಅಂದರೆ ಕೆಲವು ನಿರುಕ್ತಕಾರರು ವೃತ್ರ, ಅಂಹೋಮುಕ್ ಮುಂತಾದ ವಿಶೇಷಣ ಪದಗಳನ್ನು ಅಗ್ನ್ಯಾದಿ ದೇವತಾಪದಗಳಲ್ಲಿ ಬೇರೆಬೇರೆಯಾಗಿ ಸಂಬಂಧವನ್ನು ಕಲ್ಪಿಸಿ ಹೇಳುತ್ತಾರೆ. ನಾನಾದೇವತೆಗಳಿಗೆ ನಾನಾವಿಶೇಷಣಗಳೆಂದು ಅವರ ಅಭಿಪ್ರಾಯ. ಭಾಷ್ಯಕಾರರಿಗೆ ಈ ಅಭಿಪ್ರಾಯವಿಲ್ಲ. ಅವರು ಒಂದೇ ದೇವತೆಗೆ ನಾನಾ ವಿಶೇಷಣತಳೆಂದು ಅಭಿಪ್ರಾಯಪಡುತ್ತಾರೆ. ಮುಂದೆ ಇದನ್ನೇ ವಿವರಿಸುತ್ತಾರೆ,

## ಭೂಯಾಂಸಿ ತು ಸಮಾಮ್ನಾತ್ ॥

ಒಬ್ಬ ದೇವತೆಗೇ ನಾನಾ ವಿಶೇಷಣಗಳು ಸಂಭವಿಸುವುದಿಲ್ಲವೆಂತಿಲ್ಲ. ಸಂಭವಿಸುವುದಿಲ್ಲವೆಂಬ ಅಭಿಪ್ರಾಯದಿಂದಲೇ ಆಯಾಯ ದೇವತೆಗಳ ವಿಶೇಷಣಗಳೆಂದು ಹಿಂದೆ ಕೆಲವರು ಹೇಳಿರುವುದು ಇದು ಸರಿಯಲ್ಲ. ಏಕೆಂದರೆ, ಸಮಾಮ್ನಾಯದಲ್ಲಿ (ವೇದ) ಹೇಳಿರುವ ವಿಶೇಷಣಗಳಲ್ಲದೇ ಹೇಳದಿರುವವುಗಳೂ ಅಧಿಕವಾಗಿರುತ್ತವೆ. ಮಹಾಭಾಗ್ಯದಿಂದ ಒಂದು ದೇವತೆಗೆ ಎಷ್ಟು ವಿಶೇಷಣಗಳೆಂದು ನಿರ್ಣಯಿಸುವುದೇ ಅಸಾಧ್ಯ. ಎಲ್ಲಾ ವಿಶೇಷಣಗಳೂ ವೇದದಲ್ಲಿ ಹೇಳಿವೆಯೆಂದರೆ ಅದು ಅಸಮಾಪ್ತವೆಂದೇ ಹೇಳಬೇಕಾಗುತ್ತದೆ. ಆದುದರಿಂದ ನಾನಾ ವಿಶೇಷಣಗಳು ಸಂಭವಿಸುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ.

**ಯತ್ತು ಸಂವಿಜ್ಞಾನಭೂತಂ ಸ್ಯಾತ್ ಪ್ರಾಧಾನ್ಯಸ್ತುತಿ, ತತ್ಸಮಾಮನೇ ॥**

ರೂಢವಾಗಿ, ಗೌಣವಾಗದಿರುವ, ವಿಶೇಷಣರಹಿತವಾದ, ಪ್ರಧಾನಸ್ತುತಿಯಿಂದ ಕೂಡಿರುವ ಅಗ್ನ್ಯಾದಿ ದೇವತಾಪದವಿರುವುದಾದರೆ ಆಗ ಅದನ್ನು ವೃತ್ರಭೃತ್ ಮುಂತಾದ ಗೌಣಪದಗಳು ಹೇಳುವುದಿಲ್ಲ.

**ಅಥೋತ ಕರ್ಮಭಿರ್ದೇವತಾಃ ಸ್ತೌತಿ । ವೃತ್ರಹಾ ಪುರಂದರ ಇತಿ ॥**

ನಾನಾ ವಿಶೇಷಣಗಳಿಂದ ಒಂದು ದೇವತೆಯನ್ನು ಹೇಳುವುದಲ್ಲದೆ, ಅವರ ಕಾರ್ಯಗಳಿಂದಲೂ ಆ ದೇವತೆಗಳನ್ನು ಸ್ತುತಿಸುತ್ತಾರೆ. ವೃತ್ರಹಾ, ವೃತ್ರಾಸುರನನ್ನು ಕೊಂದವನು, ಗೋತ್ರಭಿತ್— ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದವನು ಎಂದು ಹೀಗೆಯೇ ಇಂದ್ರನ ಕಾರ್ಯವನ್ನು ತಿಳಿಸುವ ಗೋತ್ರಭೃತ್, ಪುರಂದರ, ವಜ್ರಬಾಹು ಮುಂತಾದ ಪದಗಳಿಂದ ಇಂದ್ರನನ್ನು ಸ್ತುತಿಸುತ್ತಾರೆ. ಇತರ ದೇವತೆಗಳ ಸ್ತುತಿಯನ್ನೂ ಹೀಗೆಯೇ ತಿಳಿಯಬೇಕು.

**ತಾನ್ಯಪ್ಯೇಕೇ ಸಮಾಮನಂತಿ ॥**

ಈ ಕರ್ಮನಾಮಗಳೂ ಅಗ್ನ್ಯಾದಿ ನಾನಾ ದೇವತೆಗಳನ್ನು ಸ್ತುತಿಸುತ್ತದೆಂದು ಕೆಲವು ನಿರುಕ್ತಕಾರರ ಅಭಿಪ್ರಾಯ. ಇದೂ ಭಾಷ್ಯಕಾರರಿಗೆ ಸಂಮತವಲ್ಲವೆಂದು ಮುಂದೆ ತಿಳಿಸುತ್ತಾರೆ,

**ಭೂಯಾಂಸಿ ತು ಸಮಾಮ್ನಾತ್ ॥**

ಪೂರ್ವೋಕ್ತದೋಷವೇ ಇಲ್ಲಿ ಪ್ರಾಪ್ತವಾಗುತ್ತದೆಂದು ತಿಳಿಯಬೇಕು- ಮಹದೈಶ್ವರ್ಯಸಂಪನ್ನರಾದ ದೇವತೆಗಳಿಗೆ ಅಸಾಧ್ಯವಾದುದು ಯಾವುದೂ ಇಲ್ಲವಾದುದರಿಂದ ಹೇಳದಿರುವ ಕರ್ಮನಾಮಗಳೆಲ್ಲವೂ ಸಂಗತವಾಗುತ್ತಡೆ.

**ವ್ಯಂಜನಮಾತ್ರಂ ತು ತತ್ತಸ್ಯಾಭಿಧಾನಸ್ಯ ಭವತಿ ॥**

ಪೂರ್ವೋಕ್ತವಾದ ವೃತ್ರಹಾ, ಪುರಂದರ ಮುಂತಾದ ಇಂದ್ರನ ಕರ್ಮನಾಮಧೇಯಗಳು ಇಂದ್ರಾದಿ ಪ್ರಧಾನದೇವತೆಯ ವಿಶೇಷಣಗಳಾಗುತ್ತವೆ. ಅವುಗಳಿಗೊಂದು ವಿಶೇಷ ಪ್ರಾಧಾನ್ಯವಿರುವುದಿಲ್ಲ. ಕೇವಲ ಸ್ತುತಿಸಂಬಂಧದಿಂದ ಪೃಥಕ್ ಪ್ರಾಧಾನವಿಲ್ಲವೆಂದು ತಾತ್ಪರ್ಯ.

**ಯಥಾ—ಬ್ರಾಹ್ಮಣಾಯ ಬುಭುಕ್ಷಿತಾಯಾನ್ನಂ ದೇಹಿ,**
**ಸ್ನಾತಾಯಾನುಲೇಪನಂ, ಪಿಪಾಸತೇ ಪಾನೀಯಮಿತಿ ॥ ೧೩ ॥**

ಕರ್ಮನಾಮಧೇಯಗಳಿಗೆ ಪ್ರಾಧಾನ್ಯವಿಲ್ಲವೆಂಬುದರಲ್ಲಿ ದೃಷ್ಟಾಂತ ತೋರಿಸುತ್ತಾರೆ. ಲೋಕದಲ್ಲಿ ಹಸಿದ ಬ್ರಾಹ್ಮಣನಿಗೆ ಅನ್ನವನ್ನು ಕೊಡು, ಸ್ನಾನಮಾಡಿದವನಿಗೆ ಗಂಧಾದಿಗಳನ್ನೂ, ಬಾಯಾರಿಕೆಗೊಂಡವನಿಗೆ ನೀರನ್ನೂ ಕೊಡು ಎಂದರೆ ಅಲ್ಲಿ ಹಸಿದವ ಮುಂತಾದ ಕರ್ಮನಾಮಗಳಿಗೆ ಸ್ವತಃಪ್ರಾಧಾನ್ಯವಿರುವುದಿಲ್ಲ. ಆಯಾಯ ವಿಶೇಷ್ಯ ಸಂಬಂಧದಿಂದಲೇ ಕಾರ್ಯಾ

ನ್ವಯ ಹೇಳಬೇಕು. ಹೀಗೆ ಹೇಳದಿದ್ದರೆ ಅನವಸ್ಥಾ ಬರುತ್ತದೆ. ಆದುದರಿಂದ ಕರ್ಮನಾಮಧೇಯಗಳಿಗೆ ಸ್ವತಃ ಪ್ರಾಧಾನ್ಯ ವಿರುವುದಿಲ್ಲ. ಇವು ಮಹಾಭಾಗ್ಯಗುಣದಿಂದ ಒಬ್ಬನಿಗೇ ಸಂಭವಿಸಬಹುದೆಂದು ತಾತ್ಪರ್ಯ.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಏಳನೆಯ ಆಧ್ಯಾಯದಲ್ಲಿ
ಹದಿಮೂರನೆಯಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ದಶಃ ಖಂಡಃ

## ಹದಿನಾಲ್ಕನೆಯ ಖಂಡವು

ಅಥಾತೋಽನುಕ್ರಮಿಷ್ಯಾಮೋಽಗ್ನಿಃ ಪೃಥಿವೀಸ್ಥಾನಸ್ತಂ ಪ್ರಥಮಂ ವ್ಯಾಖ್ಯಾಸ್ಯಾಮೋಽಗ್ನಿಃ ಕಸ್ಮಾದಗ್ರಣೀರ್ಭವತ್ಯಗ್ರಂ ಯಜ್ಞೇಷು ಪ್ರಣೀಯತೇಂಗಂ ನಯತಿ ಸಂನಮಮಾನೋಽಕ್ನೋಪನೋ ಭವತೀತಿ ಷ್ಠೌಲಾಷ್ಠೀವಿರ್ನ ಕ್ನೋಪಯತಿ ನ ಸ್ನೇಹಯತಿ ತ್ರಿಭ್ಯ ಆಖ್ಯಾತೇಭ್ಯೋ ಜಾಯತ ಇತಿ ಶಾಕಪೂಣಿರಿತಾದಕ್ತಾದ್ದಗ್ಧಾದ್ವಾ ನೀತಾತ್ಸ ಖಲ್ವೇತೇರಕಾರಮಾದತ್ತೇ ಗಕಾರಮನಕ್ತೇರ್ವಾ ದಹತೇರ್ವಾ ನೀಃ ಪರಸ್ತಸ್ಯೈಷಾ ಭವತಿ ॥ ೧೪ ॥

---

### ಅಥಾತೋಽನುಕ್ರಮಿಷ್ಯಾಮಃ ॥

ಅಗ್ನ್ಯಾದಿ ದೇದಪತ್ನ್ಯಂತದವರೆಗೆ ದೇವತಾಕಾಂಡವೆಂದು ಹಿಂದೆ ಪ್ರತಿಜ್ಞಾತವಾಗಿದೆ. ಪೂರ್ವಕಾಂಡಗಳಲ್ಲಿ ಅಗ್ನ್ಯಾದಿ ದೇವಪತ್ನಿಯವರೆಗೆ ಇರುವ ದೇವತಾವಾಚಕಪದಗಳು ಸಾಮಾನ್ಯರೀತಿಯಿಂದ ವ್ಯಾಖ್ಯಾತಗಳಾಗಿ ಈಗ ವಿಶೇಷ ರೂಪದಿಂದ ವ್ಯಾಖ್ಯಾನಮಾಡಲು ಉಪಕ್ರಮಿಸುತ್ತೇವೆಯೆಂದು ಅಧಿಕಾರಾಂತರವನ್ನು ತಿಳಿಸಲು ಅಥ ಶಬ್ದ ಹೇಳಿಸುತ್ತಾರೆ ಅತಃ ಎಂಬುದು ಆನಂತರ್ಯವನ್ನು ಬೋಧಿಸುತ್ತದೆ. ಸಾಮಾನ್ಯರೂಪದಿಂದ ಹೇಳಿದಮೇಲೆ ಈಗ ಪ್ರತಿಪದವನ್ನು ಆನುಪೂರ್ವಿಯಿಂದ ತೆಗೆದುಕೊಂಡು ವಿಶೇಷವಾಗಿ ವರ್ಣಿಸುತ್ತೇವೆ. ವ್ಯಾಖ್ಯಾನರೀತಿ ಈರೀತಿಯಾಗಿ ತಿಳಿಯಬೇಕು. ಮೊದಲು ನಾಮಧೇಯವನ್ನು ಹೇಳುವುದು. ಆಮೇಲೆ ಅದರಿಂದ ತೋರುವ ಅರ್ಥ ಅಂದರೆ ಅಭಿಧೇಯ ಹೇಳುವುದು. ಆಮೇಲೆ ಆ ಅಭಿಧಾನದ ವ್ಯುತ್ಪತ್ತಿ. ಅಂದರೆ ಆ ಹೆಸರು ಬಂದುದು ಹೇಗೆ ಎಂಬ ವಿಚಾರ ಆಮೇಲೆ ಪ್ರಾಧಾನ್ಯಸ್ತುತಿಗೆ ಉದಾಹರಣೆ' ಆಮೇಲೆ ಅದರ ನಿರ್ವಚನ, ಅಮೇಲೆ ಅದರ ವಿಚಾರ, ಆಮೇಲೆ ಅದಕ್ಕೆ ಉಪಪತ್ತಿ (ಯುಕ್ತಿ). ಆಮೇಲೆ ಅದರಿಂದಾಗುವ ಅವಧಾರಣ ಅಂದರೆ ನಿಶ್ಚಯ. ಈರೀತಿಯಾದ ಕ್ರಮದಿಂದ ಪ್ರತಿಯೊಂದು ದೇವತೆಯನ್ನೂ ಇನ್ನುಮುಂದೆ ವರ್ಣಿಸುತ್ತಾರೆ. ಇದಕ್ಕೆ ಉದಾಹರಣೆ. 1) ಅಗ್ನಿ ಎಂದು ನಾಮನಿರ್ದೇಶ. 2) ಇದು ಪಾರ್ಥಿವವೆಂದು ಅಭಿಧೇಯಕಥನ. 3) ಅಗ್ರಣೀರ್ಭವತಿ. ಮುಂದಾಳಾಗುವನು ಎಂದ ಅಭಿಧಾನವ್ಯುತ್ಪತ್ತಿ. 4) ಅಗ್ನಿಮೀಳೇ—ಎಂದು ಪ್ರಾಧಾನ್ಯಸ್ತುತಿಗೆ ಉದಾಹರಣೆ

5) ಅಗ್ನಿಮೀಳೇ–ಅಗ್ನಿಯನ್ನು ಪ್ರಾರ್ಥಿಸುತ್ತೇನೆ ಎಂದು ಆ ಮಂತ್ರಾರ್ಥವಿವರಣೆ. 6) ಸ ನ ಮನ್ಯೇತಾಯಮಗ್ನಿಃ. (ಇವನೇ ಅಗ್ನಿ ಏಕೆ ಆಗಬೇಕು) ಎಂದು ವಿಚಾರ, 7) ಯಸ್ತು ಸೂಕ್ತಂ ಭಜತೇ, ಯಸ್ಮೈ ಹವಿರ್ನಿರೂಪ್ಯತೇ. ಯಾರು ಸೂಕ್ತದಿಂದ ಪ್ರತಿಪಾದ್ಯನೋ, ಯಾರಿಗೋಸ್ಕರ ಹವಿಸ್ಸನ್ನು ಕೊಡುತ್ತಾರೋ ಎಂದು ಉಪಪತ್ತಿ. 8) ಅಯಮೇವ ಸೋಽಗ್ನಿಃ ಇವನೇ ಆ ಅಗ್ನಿಯು ಎಂದು ನಿರ್ಣಯ. ಈ ರೀತಿಯಾಗಿ ಪ್ರತಿಪದವನ್ನೂ ವಿಚಾರಿಸುತ್ತಾರೆ. ಅಗ್ನಿಯೆಂದರೆ ಯಾಸು? ಒಬ್ಬನಿಗೇ ಹಲವು ನಾಮುಗಳಿರುವುದರಿಂದ ಆತ್ಮನೇ ಅಗ್ನಿಯೆಂದು ವೇದಾಂತಿಗಳ ಮತ. ಸ್ಥಾನವಿಶೇಷನೈಯತ್ಯವಿಲ್ಲದಿರುವ, ಲೋಕವೇದ ಪ್ರಸಿದ್ಧವಾದ, ಕರ್ಮಾಂಗವಾದ ದೇವತಾವಿಶೇಷವೆಂದು ಯಾಜ್ಞಿಕರಮತ. ವಿವಕ್ಷಿತಸ್ಥಾನ ಮತ್ತು ಕರ್ಮಗಳುಳ್ಳ ಮಧ್ಯಮೋತ್ತಮಸ್ಥಾನದೇವತೆಗಿಂತ ಭಿನ್ನವಾದ ಪಾರ್ಥಿವನು ಅಗ್ನಿಯೆಂದು ನೈರುಕ್ತಸಿದ್ಧಾಂತ. ಸಾಯಣಾಚಾರ್ಯರು ಇದಕ್ಕೆ ಹೀಗೆ ವ್ಯಾಖ್ಯಾನಮಾಡಿರುತ್ತಾರೆ. ಸಾಮಾನ್ಯರೀತಿಯಿಂದ ಸಕಲ ದೇವತೆಗಳ ಲಕ್ಷಣವನ್ನು ಹೇಳಿದ್ದಾಯಿತು. ಈಗ ಪ್ರತಿಪದದಿಂದ ವ್ಯಾಖ್ಯಾನಮಾಡಬೇಕಾಗಿದೆ. ಆದದರಿಂದ ಕ್ರಮವಾಗಿ ವ್ಯಾಖ್ಯಾನಮಾಡುತ್ತೇವೆ. ಪೃಥಿವೀಲೋಕದಲ್ಲಿರುವ ಅಗ್ನಿಯ ವ್ಯಾಖ್ಯಾನವನ್ನು ತೋರಿಸುತ್ತೇವೆ- ಯಾವ ಪ್ರವೃತ್ತಿನಿಮಿತ್ತದಿಂದ ಅಗ್ನಿ ಶಬ್ದವು ದೇವತಾವಿಶೇಷವನ್ನು ತಿಳಿಸುತ್ತದೆಯೆಂದು ಪ್ರಶ್ನಿಸಿದರೆ. ಆಗ ಅಗ್ರಣೀಃ ಇತ್ಯಾದಿ ಅದಕ್ಕೆ ಉತ್ತರವಾಗುತ್ತದೆ. ದೇವಸೇನೆಯ ಮುಂದೆ ಇವನು ಹೋಗುವುದರಿಂದ ಅಗ್ನಿ ಎಂದು ಹೆಸರು ಬಂದಿದೆ. ಅಗ್ನಿರ್ದೇವಾನಾಂ ಸೇನಾನೀಃ ಎಂದು ಬ್ರಾಹ್ಮಣವಾಕ್ಯ. ದೇವತೆಗಳಿಗೆ ಮುಖರೂಪನಾದವನು ಎಂಬು ಬಹ್ವೃಚ ಬ್ರಾಹ್ಮಣದಲ್ಲಿ ಹೇಳಿದೆ. ದೇವತೆಗಳಲ್ಲಿ ಮೊದಲು ಹುಟ್ಟಿದವನು, ಪೂರ್ವದಿಕ್ಕಿನಲ್ಲಿರುವ ಆಹವನೀಯಪ್ರದೇಶವನ್ನು ಹೊಂದುವವನು, ಎಂದು ಅಗ್ನಿಶಬ್ದಕ್ಕೆ ನಾನಾಪ್ರವೃತ್ತಿನಿಮಿತ್ತವನ್ನು ಹೇಳುತ್ತಾರೆ. ನಕ್ನೋಪಯತಿ ಇತಿ ಅಗ್ನಿಃ. ಪದಾರ್ಥವನ್ನು ಜಿಡ್ಡಾಗಿ ಮಾಡುವುದಿಲ್ಲ ಸುಟ್ಟುಹಾಕುವವನೆಂದರ್ಥ. ಇದನ್ನು ಸ್ಥೂಲಾಧಿಷ್ಠೀವಿಪುತ್ರನು ಹೇಳಿರುತ್ತಾನೆ. ಶಾಕಪೂಣಿಯೆಂಬ ನಿರುಕ್ತಕಾರರು ಅಗ್ನಿಶಬ್ದವು ಮೂರುಧಾತುಗಳಿಂದ ಉಂಟಾಗಿದೆಯೆಂದು ವರ್ಣಿಸುತ್ತಾರೆ, ಇಙ್ ಧಾತುವಿನಿಂದ ಅಕಾರವನ್ನೂ, ಅಂಜೂ ಧಾತುವಿನಿಂದ ಅಥವಾ ದಹಧಾತುವಿನಿಂದ ಗಕಾರವನ್ನೂ, ಣೀಙ್ ಧಾತುವಿನಿಂದ ನಿಪದವನ್ನೂ ಹೊಂದಿ ಅಗ್ನಿ ಎಂದಾಗಿದೆ. ಯಜ್ಞಭೂಮಿಯನ್ನು ಹೊಂದಿ ತನ್ನ ಅಂಗವನ್ನು ಒಯ್ಯುತ್ತಾನೆ. ಕಾಷ್ಠವನ್ನು ಸುಡುವುದು, ಹವಿಸ್ಸನ್ನು ಹುತಮಾಡುವುದು ಅವನ ಕಾರ್ಯ, ಹೀಗೆ ಈ ಅಗ್ನಿಶಬ್ದಾರ್ಥವಾದ ದೇವತಾವಿಶೇಷದ ಪ್ರಧಾನಸ್ತುತಿಗೋಸ್ಕರ ಅಗ್ನಿಮೀಳೇ ಇತ್ಯಾದಿ ಋಕ್ಕುಗಳು ಆರಬ್ಧವಾಗಿರುತ್ತವೆ.

**ಅಗ್ನಿಃ ಪೃಥಿವೀಸ್ಥಾನಃ । ಇತಿ ಪ್ರಥಮಂ ವ್ಯಾಖ್ಯಾಸ್ಯಾಮಃ ॥**

ಪೃಥಿವಿಯೇ ವಿಶೇಷವಾದ ಸ್ಥಾನವುಳ್ಳವನು ಅಗ್ನಿಯು. ಇವನಿಗೆ ಅಂತರಿಕ್ಷಸ್ಥಾನವೂ, ದ್ಯುಸ್ಥಾನವೂ ಇರುವುದಿಲ್ಲ. ಅಗ್ನಿಯ ಕಾರ್ಯವೆಲ್ಲವೂ ಪೃಥಮಿಯಲ್ಲಿಯೇ ಪ್ರಸಿದ್ಧವಾಗಿರುತ್ತವೆ. ಕಾರಣವಿಶೇಷವಿಲ್ಲದೆ ಮೊದಲನೆಯದನ್ನು ತ್ಯಜಿಸುವುದರಲ್ಲಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಪ್ರಥಮವಾದ ಅಗ್ನಿಪದದ ನಿರ್ವಚನವನ್ನು ತೋರಿಸುತ್ತಾರೆ.

**ಅಗ್ನಿಃ ಕಸ್ಮಾತ್ ? ॥**

ನಾನಾರೀತಿಯಿಂದ ನಿರ್ವಚನಮಾಡಲು ಸಾಧ್ಯವಾದುದರಿಂದ ಪ್ರಶ್ನಿಸುತ್ತಾರೆ. ಅಗ್ನಿಶಬ್ದವು ಹೇಗಾಗಿದೆ ? ಯಾವ ವ್ಯುತ್ಪತ್ತಿಯಿಂದ ಅಗ್ನಿ ಎಂದಾಗಿದೆಯೆಂದು ತಾತ್ಪರ್ಯ.

**ಅಗ್ರಣೀರ್ಭವತಿ—ಅಗ್ರಂ ಯಜ್ಞೇಷು ಪ್ರಣೀಯತೇ ॥**

ಅಗ್ನಿ ಎಂಬುದು ನಾನಾಪದವರ್ಣಗಳಿಂದ ನಿಷ್ಪನ್ನವಾದುದರಿಂದ ವಿಂಗಡಿಸಿ ಉತ್ತರ ತೋರಿಸುತ್ತಾರೆ. ಅಗ್ರಂ ನಯತಿ. ಅಗ್ರಣೀಃ–ಸರ್ವಾರ್ಥಗಳಲ್ಲಿಯೂ ತನ್ನನ್ನು ಮೊಧಲು ಒಯ್ಯುತ್ತಾನೆ. ಅಥವಾ ಕರ್ಮಾಧಿಪತ್ಯದಲ್ಲಿದ್ದು ಕರ್ಮಫಲವನ್ನು ಮೊದಲು ಕೊಡುವವನು. ಸೇನಾಧಿಪತ್ಯದಲ್ಲಿದ್ದು ಸೇನೆಯನ್ನು ಕೊಂಡೊಯ್ಯುವವನಾದುದರಿಂದ ಸೇನಾನಿಯಾಗಿರುತ್ತಾನೆ. ಅಥವಾ ಯಜ್ಞಗಳಲ್ಲಿ ಇವನು ಪ್ರಥಮನಾಗಿದ್ದು ಸೇವಿಸಲ್ಪಡುತ್ತಾನೆ. ಮೊದಲು ಅಗ್ನಿಪ್ರತಿಷ್ಠಾಪನೆಮಾಡದೆ ಯಾವ ಕಾರ್ಯ ವನ್ನೂ ಮಾಡುವುದಿಲ್ಲ. ಇವನು ಮೊದಲು ಇದ್ದರೇ ವ್ರತಾದಿಗಳಲ್ಲಿ ಇತರ ಕಾರ್ಯವನ್ನು ಮಾಡುತ್ತಾರೆ. ಅಗ್ರ ಎಂಬ ಉಪ ಪದವಿರುವಾಗ ನೀಧಾತುವಿಗೆ ಕ್ವಿಪ್. ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ಅಗ್ರ ಎಂಬಲ್ಲಿ ರೇಫಾಕಾರಗಳು ಲೋಪಹೊಂದಿವೆ.

## ಅಂಗಂ ನಯತಿ ಸನ್ನಮಮಾನಃ ||

ಬೇರೊಂದು ರೀತಿಯಿಂದ ವ್ಯುತ್ಪತ್ತಿತೋರಿಸುತ್ತಾರೆ. ಸಕಲ ವೈದಿಕ ಲೌಕಿಕಕಾರ್ಯಗಳಲ್ಲಿ ಇವನು ಸಾಧನರೂಪದಿಂದ ಉಪಯೋಗಿಸಲ್ಪಡುವವನಾಗಿ ಆಮೇಲೆ ತನ್ನನ್ನೇ ಪ್ರಧಾನವನ್ನಾಗಿ ಮಾಡಿಕೊಂಡು ಉಳಿದವುಗಳನ್ನು ತನಗೆ ಅಂಗವನ್ನಾಗಿ ಮಾಡಿಕೊಳ್ಳುತ್ತಾನೆ. ಅಂಗಂ ನಯತಿ ಇತಿ ಅಂಗನೀಃ. ಅಥವಾ ಹುಲ್ಲು ಕಟ್ಟಿಗೆ ಮುಂತಾದವುಗಳನ್ನಾಶ್ರಯವನ್ನಾಗಿ ಮಾಡಿಕೊಂಡು ಆಮೇಲೆ ಸಕಲವನ್ನೂ ತನ್ನಧೀನವನ್ನಾಗಿಮಾಡಿಕೊಳ್ಳುತ್ತಾನೆ. ಭಸ್ಮವನ್ನಾಗಿ ಮಾಡುತ್ತಾನೆ ಎಂದರ್ಥ. ಹಿಂದಿನಂತೆಯೇ ಪ್ರಕ್ರಿಯೆ ತಿಳಿಯಬೇಕು.

## ಅಕ್ನೋಪನೋ ಭವತೀತಿ ಸ್ಥೌಲಾಷ್ಠೀವಿಃ ||

ಸ್ಥೂಲಾಷ್ಠೀವಾನ್ ಎಂಬ ಋಷಿಯ ಪುತ್ರನಿಗೆ ಸ್ಥೌಲಾಷ್ಠೀವಿಯೆಂದು ಹೆಸರು. ಅಪತ್ಯಾರ್ಥದಲ್ಲಿ ಇಞಪ್ರತ್ಯಯ. ಪೃಷೋ ದರಾದಿಪಠಿತವಾದುದರಿಂದ ಟಿಲೋಪಾದಿಗಳು ಬಂದಿವೆ. ಅಕ್ನೋಪನನಾದುದರಿಂದ ಅಗ್ನಿ ಎಂದಾಗಿದೆಯೆಂದು ಸ್ಥೌಲಾಷ್ಠೀವಿ ಯೆಂಬ ನಿರುಕ್ತಕಾರರ ಮತ.

## ನ ಕ್ನೋಪಯತಿ ನ ಸ್ನೇಹಯತಿ ||

ಅಕ್ನೋಪನ ಪದಾರ್ಥವನ್ನು ವಿವರಿಸುತ್ತಾರೆ. ಅಗ್ನಿಯು ಪದಾರ್ಥಗಳನ್ನು ಒದ್ದೆಯಾಗಿ ಮಾಡುವುದಿಲ್ಲ. ಸ್ನೇಹವಿಶಿಷ್ಟವಾದ ಪದಾರ್ಥವನ್ನೂ ಬಿರುಸಾಗಿ ಮಾಡುತ್ತಾನೆ. ಅನ್ನವನ್ನೂ ಭಸ್ಮವಾಗಿ ಮಾಡುವುದು ಅವನ ಸ್ವಭಾವ. ಕ್ನೂಯೀ ಶಬ್ದೇ ಉಂದೇ ಚ ಧಾತು. ನಞಪೂರ್ವದಲ್ಲಿರುವಾಗ ಈ ಧಾತುವಿಗೆ ಕ್ವಿನ್‌ಪ್ರತ್ಯಯ. ಕಕಾರನಕಾರ ಉಳಿದು ಎಲ್ಲವೂ ಲೋಪ ವಾಗುತ್ತವೆ. ಕಕಾರಕ್ಕೆ ಗಕಾರಾದೇಶ ಸುಡುವ ಎಲ್ಲಾ ವಸ್ತುಗಳನ್ನು ಒಣಗಿಸಿ ಭಸ್ಮವನ್ನಾಗಿ ಮಾಡುವವನು ಅಗ್ನಿ ಎಂದು ತಾತ್ಪರ್ಯ.

## ತ್ರಿಭ್ಯ ಆಖ್ಯಾತೇಭ್ಯೋ ಜಾಯತ ಇತಿ ಶಾಕಪೂಣಿಃ ||

ಆಯಾಯ ಕ್ರಿಯೆಗಳಿಂದ ಉಪಲಕ್ಷಿತವಾದ ಮೂರುಧಾತುಗಳಿಂದ ಅಗ್ನಿಶಬ್ದ ಆಗಿದೆಯೆಂದು ಶಾಕಪೂಣಿಯೆಂಬ ನಿರುಕ್ತಕಾರರು ಹೇಳುತ್ತಾರೆ. ಆ ಮೂರುಧಾತುಗಳನ್ನು ಮುಂದೆ ವಿವರಿಸುತ್ತಾರೆ.

ಇತಾತ್-ಅಕ್ತಾದ್ದಗ್ಧಾದ್ವಾ-ನೀತಾತ್ ||

ಇಣ್-ಗತೌ ಎಂದು ಒಂದುಧಾತು. ಅಂಜೂ ಅಥವಾ ದಹಧಾತು ಎರಡನೆಯ ಧಾತು. ಣೀಞ-ಪ್ರಾಪಣೇ ಮೂರನೆಯ ಧಾತು. ಹೀಗೆ ಈ ಮೂರುಧಾತುಗಳಿಂದ ಅಗ್ನಿ ಶಬ್ದವುಂಟಾಗಿರುತ್ತದೆ.

ಸ ಖಲ್ವೇತೇ-ರಕಾರಮಾದತ್ತೇ, ಗಕಾರಮನಕ್ತೇರ್ವಾ ದಹತೇರ್ವಾ, ನೀಃ ಪರಸ್ತಸ್ಯೈಷಾ ಭವತಿ || ೧೪ ||

ಆಯಾಯಧಾತುವಿಕಾರದಿಂದ ಉಂಟಾದ ಶಬ್ದದಿಂದ ಯಾವ ಯಾವ ಅಕ್ಷರಗಳನ್ನು ತೆಗೆದುಕೊಂಡಿರುವರೆಂದು ವಿವರಿಸುತ್ತಾರೆ. ಇಣ್‌ಧಾತುವಿಗೆ ಅಚ್‌ಪ್ರತ್ಯಯ ಬಂದಾಗ ಅಯ ಎಂದು ರೂಪವಾಗುತ್ತದೆ. ಅಯ ಎಂಬ ಇಣ್‌ಧಾತುವಿನ ರೂಪದಿಂದ ಅಕಾರಮಾತ್ರ ಉಪಾತ್ತವಾಗಿದೆ. ಅಂಜ್‌ಧಾತುವಿಗೆ ಕ್ವಿಪ್‌ಬಂದಾಗ ನ ಲೋಪ. ಕುತ್ವ ಜಶ್ತ್ವ ಬಂದರೆ ಅಗ್ ಎಂದಾಗುತ್ತದೆ ಅಥವಾ ದಹಧಾತುವಿಗೆ ಘತ್ವಾದಿಗಳು ಬಂದಾಗ ಧಗ್ ಎಂದಾಗುತ್ತದೆ. ಇವೆರಡರಲ್ಲಿ ಯಾವ ಧಾತುವಿನದ್ದಾದರೂ ಗ ಕಾರ ಉಪಾತ್ತವಾಗುತ್ತದೆ. ನೀ ಧಾತು ಪರವಾಗಿ ಪೂರ್ಣವಾಗಿ ಸ್ವೀಕೃತವಾದರೂ ಹ್ರಸ್ವ ಬಂದಿರುತ್ತದೆ. ಏತಿ, ವ್ಯನಕ್ತಿರೂಪಾಣಿ, ಅಥವಾ ದಹತಿ, ಹವಿಃ ನಯತಿ ದೇವೇಭ್ಯಃ ಎಂಬ ವ್ಯುತ್ಪತ್ತಿಯಿಂದ ಅಗ್ನಿ ಎಂದಾಗುತ್ತದೆ. ದೇಶದಿಂದ ದೇಶಕ್ಕೆ ಹೋಗುತ್ತದೆ. ಪದಾರ್ಥಗಳನ್ನು ಪ್ರಕಾಶಪಡಿಸುತ್ತದೆ ಅಥವಾ ಸುಡುತ್ತದೆ ಹವಿಸ್ಸನ್ನು ಆಯಾಯ ದೇವತೆಗಳಿಗೆ ಒಯ್ಯುತ್ತದೆ ಅಥವಾ ಆಯಾಯಕರ್ಮಫಲವನ್ನು ಯಜಮಾನನಿಗೆ ಕೊಡುತ್ತದೆ. ಹೀಗೆ ಅಗ್ನಿ ಶಬ್ದದಿಂದ ತೋರುವ ಅರ್ಥತ್ರಯವೂ ಅಗ್ನಿದೇವತೆಯಲ್ಲಿ ಸಮಂಜಸವಾಗುತ್ತದೆ. ಈ ಅಗ್ನಿ ಎಂಬ ಅಭಿಧಾನ (ನಾಮ)ವನ್ನು ಹೊಂದಿರುವ, ದೇವತಾಸಮೂಹದಲ್ಲಿ ಹೇಳಿದ ಅಗ್ನಿದೇವತೆಯ ಪ್ರಧಾನಸ್ತುತಿಯನ್ನು ಅಗ್ನಿಮೀಳೇ ಮುಂತಾದ ಋಕ್ಕುಗಳು ತಿಳಿಸುತ್ತವೆ.

ಈರೀತಿ ಶ್ರೀ ಯಾಸ್ಕಋಷಿಪ್ರಣೀತವಾದ ಏಳನೆಯ ಅಧ್ಯಾಯದಲ್ಲಿ
ಹದಿನಾಲ್ಕನೆಯ ಖಂಡವು ಸಮಾಪ್ತವಾಗಿದೆ.

—o—

## ಅಥ ಪಂಚದಶಃ ಖಂಡಃ

## ಹದಿನೈದನೆಯ ಖಂಡವು

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ || ಹೋತಾರಂ ರತ್ನಧಾತಮಮ್ || (ಋ. ಸಂ. ೧-೧-೧) || ಅಗ್ನಿಮೀಳೇಽಗ್ನಿಂ ಯಾಚಾಮೀಳಿರಧ್ಯೇಷಣಾಕರ್ಮಾ ಪೂಜಾಕರ್ಮಾ ವಾ ಪುರೋಹಿತೋ ವ್ಯಾಖ್ಯಾತೋ ಯಜ್ಞಶ್ಚ ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ ಯೋ ದೇವಃ

ಸಾ ದೇವತಾ ಹೋತಾರಂ ಹ್ವಾತಾರಂ ಜುಹೋತೇರ್ಹೋತೇತ್ಯೌರ್ಣವಾಭೋ ರತ್ನ-ಧಾತಮಂ ರಮಣೀಯಾನಾಂ ಧನಾನಾಂ ದಾತೃತಮಂ ತಸ್ಯೈಷಾಪರಾ ಭವತಿ ॥ ೧೫ ॥

---

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ ॥
ಹೋತಾರಂ ರತ್ನಧಾತಮಮ್ ॥

(ಋ. ಸಂ. ೧-೧-೧)

ಅಗ್ನಿಶಬ್ದದ ವ್ಯುತ್ಪತ್ತಿಯನ್ನು ಪೂರ್ವಕಾಂಡದಲ್ಲಿ ವಿವರಿಸಿ ಇಲ್ಲಿ ಅದರ ಪ್ರಾಧಾನ್ಯಸ್ತುತಿಗೆ ಉದಾಹರಣೆ ತೋರಿಸಿರುತ್ತಾರೆ. ಇದರ ಅರ್ಥವಿವರಣೆಯನ್ನು ನಿರುಕ್ತಕಾರರೇ ಮುಂದೆ ನಿರೂಪಿಸುತ್ತಾರೆ.

ಅಗ್ನಿಮೀಳೇಽಗ್ನಿಂ ಯಾಚಾಮಿ, ಈಳಿರಧ್ಯೇಷಣಾಕರ್ಮಾ, ಪೂಜಾಕರ್ಮಾ ವಾ । ಪುರೋಹಿತೋ ವ್ಯಾಖ್ಯಾತಃ । ಯಜ್ಞಶ್ಚ । ದೇವೋ ದಾನಾದ್ವಾ—ದೀಪನಾದ್ವಾ—ದ್ಯುಸ್ಥಾನೋ ಭವತೀತಿ ವಾ । ಯೋ ದೇವಃ ಸಾ ದೇವತಾ ಹೋತಾರಂ ಹ್ವಾತಾರಂ, ಜುಹೋತೇರ್ಹೋತೇತ್ಯೌರ್ಣವಾಭಃ, ರತ್ನಧಾತಮಂ ರಮಣೀಯಾನಾಂ ಧನಾನಾಂ ದಾತೃತಮಂ ತಸ್ಯೈಷಾಪರಾ ಭವತಿ॥

ಅಗ್ನಿಮೀಳೇ. ಅಗ್ನಿದೇವತೆಯನ್ನು ಯಾಚಿಸುತ್ತೇನೆ ಎಂದರ್ಥ. ಸಾಯಣಾಚಾರ್ಯರು ಸ್ತುತಿಸುತ್ತೇನೆ ಎಂದು ಅರ್ಥವಿವರಣೆ ಮಾಡಿರುತ್ತಾರೆ. ಆದರೆ ನಿರುಕ್ತಕಾರರು ಈಳಧಾತುವಿಗೆ ಸ್ತುತ್ಯರ್ಥವನ್ನು ಹೇಳದೆ ಯಾಚನಾರ್ಥವನ್ನು ಹೇಳಿರುತ್ತಾರೆ. ಧಾತುವನ್ನು ಇಕ್ ಅಥವಾ ಶ್ತಿಪ್‌ಪ್ರತ್ಯಯದಿಂದ ನಿರ್ದೇಶಿಸಬೇಕೆಂದಿರುವುದರಿಂದ ಈಳಿ ಎಂದು ಈಳ ಧಾತುವನ್ನು ಇಕ್ ಪ್ರತ್ಯಯದಿಂದ ನಿರ್ದೇಶಿಸಿರುತ್ತಾರೆ. ಈಳ ಧಾತುವು ಅಧ್ಯೇಷಣಾಕರ್ಮ ಅಂದರೆ ಯಾಚನಾರ್ಥವುಳ್ಳದ್ದೆಂದರ್ಥ. 'ಸನಿಸ್ತ್ವಧ್ಯೇಷಣಾ ಯಾಚ್ಞಾ' ಎಂದು ಅಮರಕಾರನು ಯಾಚ್ಞಾಪರ್ಯಾಯದಲ್ಲಿ ಅಧ್ಯೇಷಣಾಪದವನ್ನು ಸೇರಿಸಿರುತ್ತಾರೆ. ಅಥವಾ ಅಗ್ನಿಯನ್ನು ಪೂಜಿಸುತ್ತೇನೆ ಎಂದು ಅರ್ಥವಿರುವುದರಿಂದ ಈಳಧಾತುವಿಗೆ ಪೂಜಾರ್ಥ ಹೇಳಬೇಕು. ಪುರೋಹಿತ ಶಬ್ದವು ಹಿಂದೆ (ನಿರು. ೧-೨೨) ವ್ಯಾಖ್ಯಾತವಾಗಿದೆ. ಯಜ್ಞಶಬ್ದವೂ (ನಿರು. ೩-೧೯) ಪ್ರಖ್ಯಾತಂ ಯಜತಿಕರ್ಮ ಎಂದು ವ್ಯಾಖ್ಯಾತವಾಗಿದೆ. ದೇವಶಬ್ದಕ್ಕೆ ನಾನಾರ್ಥಗಳನ್ನು ವಿವರಿಸುತ್ತಾರೆ. ದಾನಮಾಡುವುದರಿಂದ ದೇವ ಎಂದಾಗಿದೆ. ಸ್ತುತಿಸಿದವರಿಗೆ ಇವನು ಸಂಪತ್ತನ್ನು ಕೊಡುತ್ತಾನೆ. ದೀಪನವ್ಯಾಪಾರವಿರುವುದರಿಂದ ದೇವನಾಗಿರುತ್ತಾನೆ. ತೇಜೋಮಯನಾದುದರಿಂದ ಸಕಲ ಪದಾರ್ಥಗಳನ್ನೂ ಬೆಳಗಿಸುತ್ತಾನೆ ಅಥವಾ ದ್ಯೋತನಕರ್ಮವಿರುವುದರಿಂದ ದೇವನು ತೇಜೋರೂಪಿಯಾದುದರಿಂದ ತಾನು ಉಜ್ಜ್ವಲನಾದುದಲ್ಲದೆ ಎಲ್ಲವನ್ನೂ ಪ್ರಕಾಶಪಡಿಸುತ್ತಾನೆ. ಅಥವಾ ದ್ಯುಲೋಕಸ್ಥಾನವಿಶಿಷ್ಟನಾದುದರಿಂದ ದೇವನೆಂದಾಗಿದೆ. ಇತರ ಪಕ್ಷವನಾಶ್ರಯಿಸಿ ಹೇಳಿದೆ. ನಿರುಕ್ತಕಾರರು ಪೃಥಿವೀಸ್ಥಾನವೆಂದು ಹೇಳಿರುವುದರಿಂದ ದ್ಯುಸ್ಥಾನವೆಂದರೆ ವಿರುದ್ಧವಾಗುತ್ತದೆ. ಅಥವಾ ಇಂದ್ರ ಅಗ್ನಿ ಇವರಿಬ್ಬರಿಗೂ ದ್ಯುಲೋಕವೇ ಸ್ಥಾನ. ಏಕೆಂದರೆ ದೇವತಾಸಾಮಾನ್ಯಕ್ಕೂ ದ್ಯುಸ್ಥಾನವೆಂದುದರಿಂದ ವಿರುದ್ಧವಾಗುವುದಿಲ್ಲ. ಆದರೆ ಅವರವರ ಕರ್ಮಾಧಿಕಾರದಿಂದ ಆಯಾಯಸ್ಥಾನವು ನಿಯತವಾಗಿದೆ. ಅಗ್ನಿಗೆ ದೇವತಾಸಾಮಾನ್ಯದಿಂದ ದ್ಯುಸ್ಥಾನವೂ, ಕರ್ಮಾಧಿಕಾರದಿಂದ ಪೃಥಿವೀಸ್ಥಾನವೂ ಹೇಳಿರುವುದರಿಂದ ಯಾವ ವಿರೋಧಕ್ಕೂ ಅವಕಾಶವಿಲ್ಲ. ಹೋತಾರಂ ಎಂಬುದರ ವ್ಯಾಖ್ಯಾನ ಹ್ವಾತಾರಂ. ದೇವತೆಗಳನ್ನು ಕರೆಯುವವನೆಂದರ್ಥ.

ಔರ್ಣವಾಭವೆಂಬ ಮಹರ್ಷಿಗಳು ಈ ಹೋತೃಶಬ್ದವು ಹು-ದಾದದನಯೋಃ ಎಂಬ ಧಾತುವಿನಿಂದ ಉಂಟಾಗಿದೆಯೆಂದು ಹೇಳುತ್ತಾರೆ. ದೇವತೆಗಳಿಗೆ ಹವಸ್ಸನ್ನು ಕೊಡುವವನೆಂದರ್ಥವಾಗುತ್ತದೆ. ರತ್ನಧಾತಮಂ. ರಮಣೀಯವಾದ ಧನವನು ಹೇರಳವಾಗಿ ಕೊಡುವವನೆಂದರ್ಥ. ಹೀಗೆಯೇ ಆ ಅಗ್ನಿಯನ್ನೇ ಸ್ತುತಿಸುವ ಇನ್ನೊಂದು ಋಕ್ಕು ಸಮಾನಸಂಹಿತೆಯಿಂದ ಇದೆಯೆಂದು ತಿಳಿಯಬೇಕು. ಈ ವಾಕ್ಯದಿಂದ ಇನ್ನುಮುಂದೆ ಒಂದೇ ದೇವತೆಯ ಕಾರ್ಯಗಳನ್ನು ವರ್ಣಿಸುವುದಾದರೆ ಅದು ಆ ದೇವತೆಯ ಪ್ರಧಾನಸ್ತುತಿಗೆ ಉದಾಹರಣೆಯೆಂದು ತಿಳಿಯಬೇಕು.

ಈರೀತಿ ಶ್ರೀ ಸಾಯಣಭಾಷ್ಯದ ನಿರುಕ್ತಭಾಷ್ಯದಲ್ಲಿ ಏಳನೆಯ ಅಧ್ಯಾಯದಲ್ಲಿ

ಹದಿನೈದನೆಯಖಂಡ ಸಮಾಪ್ತವಾಗಿದೆ.

## ಅಥ ಷೋಡಶಃ ಖಂಡಃ

## ಹದಿನಾರನೆಯ ಖಂಡವು

ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ । ಸ ದೇವಾ ಏಹ ವಕ್ಷತಿ ॥ (ಋ. ಸಂ-೧-೧-೨) ॥ ಅಗ್ನಿರ್ಯಃ ಪೂರ್ವೈರ್ಋಷಿಭಿರೀಳಿತವ್ಯೋ ವಂದಿತವ್ಯೋಽಸ್ಮಾಭಿಶ್ಚ ನವತರೈಃ ಸ ದೇವಾನಿಹಾವಹತ್ವಿತಿ ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಅಗ್ನೀ ಉಚ್ಯೇತೇ ತತೋ ನು ಮಧ್ಯಮಃ ॥ ೧೬ ॥

---

ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ ।
ಸ ದೇವಾ ಏಹ ವಕ್ಷತಿ ॥

(ಋ. ಸಂ. ೧—೧—೨)

ಅಗ್ನಿದೇವತೆಯ ಪ್ರಧಾನಸ್ತುತಿಯನ್ನು ತಿಳಿಸುವ ಎರಡನೆಯ ಋಕ್ಕನ್ನು ಉದಾಹರಿಸುತ್ತಾರೆ.

ಅಗ್ನಿರ್ಯಃ ಪೂರ್ವೈರ್ಋಷಿಭಿರೀಡಿತವ್ಯೋ ವಂದಿತವ್ಯೋಽಭಿಶ್ಚ
ನವತರೈಃ ಸ ದೇವಾನಿಹಾವಹತ್ವಿತಿ ॥

ಯಾವ ಅಗ್ನಿಯು ಪ್ರಾಚೀನ ಭೃಗು ಮುಂತಾದ ಋಷಿಗಳಿಂದ ನಮಸ್ಕರಿಸಲ್ಪಡುವನೋ, ಪೂಜಿಸಲ್ಪಡುವನೋ, ಅಲ್ಲದೆ ಈಗಿನಕಾಲದ ನಮ್ಮಿಂದಲೂ ಪೂಜಿಸಲ್ಪಡುತ್ತಾನೆ. ಇಂತಹ ಅಗ್ನಿಯು ನಮ್ಮ ಯಜ್ಞಕ್ಕೆ ಇತರ ದೇವತೆಗಳನ್ನು ಕರತರಲಿ. ಮುಂದೆ ತಚ್ಛಬ್ದವಿರುವುದರಿಂದ ಯಚ್ಛಬ್ದವನ್ನು ಅಧ್ಯಾಹಾರಮಾಡಿಕೊಂಡಿರುತ್ತಾರೆ. ಯತ್ತಚ್ಛಬ್ದಗಳಿಗೆ ಯಾವಾಗಲೂ ನಿತ್ಯಸಂಬಂಧವಿರುತ್ತದೆ.

ಸ ನ ಮನ್ಯೇತಾಯಮೇವಾಗ್ನಿರಿತಿ ।
ಅಪ್ಯೇತೇ ಉತ್ತರೇ ಜ್ಯೋತಿಷೀ ಅಗ್ನೀ ಉಚ್ಯೇತೇ ತತೋ ನು
ಮಧ್ಯಮಃ ॥

ಪೂರ್ವೋಕ್ತಗಳಾದ ಎರಡು ಋಕ್ಕುಗಳಿಂದ ಪಾರ್ಥಿವಜ್ಯೋತಿಯಾದ ಅಗ್ನಿಯನ್ನು ಹೇಳಿ, ಮಧ್ಯಮ, ಉತ್ತಮಸ್ಥಾನದ ಜ್ಯೋತಿಸ್ಸನ್ನೂ ಅಗ್ನಿಶಬ್ದದಿಂದ ಹೇಳಬೇಕೆಂದು ಅಗ್ನಿಯು ಪೃಥಿವೀಸ್ಥಾನವೆಂಬುದನ್ನು ಆಕ್ಷೇಪಿಸುತ್ತಾರೆ. ಸಃ ಅಂದರೆ ಶಿಷ್ಯನು. ಅವನು ಅಗ್ನಿಯೆಂದರೆ ಪೃಥಿವೀಸ್ಥಾನವೆಂದೇ ತಿಳಿಯಬಾರದು. ಪಾರ್ಥಿವ ಜ್ಯೋತಿಯೊಂದೇ ಅಗ್ನಿಶಬ್ದವಾಚ್ಯವಲ್ಲ. ಅಂತರಿಕ್ಷ, ದ್ಯುಲೋಕದಲ್ಲಿರುವ ಜ್ಯೋತಿಗಳೂ ಅಗ್ನಿಶಬ್ದವಾಚ್ಯವಾಗುತ್ತವೆ. ಹೇಗೆ ಪಾರ್ಥಿವಜ್ಯೋತಿಗೆ ಅಗ್ನಿಯೆಂದೂ ಹೆಸರೋ ಹಾಗೇ ಮಧ್ಯತ್ತಮಸ್ಥಾನದಲ್ಲಿರುವ ಜ್ಯೋತಿಗೂ ಅಗ್ನಿಯೆಂದು ಹೆಸರಿದೆ. ಹೀಗೆ ಹೇಳಿದರೆ ಸಾಂಕರ್ಯವುಂಟಾಗುವುದಿಲ್ಲವೇ ಎಂದು ಶಂಕಿಸಬಹುದು. ಆದರೆ ಶಂಕೆಗೆ ಇಲ್ಲಿ ಅವಕಾಶವಿಲ್ಲ. ಗೌಣ, ಮುಖ್ಯವೆಂದು ಅಭಿಧಾನಶಕ್ತಿ ಎರಡು ವಿಧವಾಗಿರುತ್ತದೆ. ಗೌಣೀ ಅಂದರೆ ಗುಣಸಾಮಾನ್ಯದಿಂದ ಒಂದು ಶಬ್ದ ತನ್ನ ಅರ್ಥದಲ್ಲಿ ಅಲ್ಲದೆ ಇತರ ಪದಾರ್ಥದಲ್ಲಿಯೂ ಇರಬಹುದು. ಸಿಂಹ: ಮಾಣವಕ: ಅಂದರೆ ಕ್ರೌರ್ಯಾದಿಗುಣಗಳಿಂದ ಸಿಂಹಶಬ್ದವು ಹುಡುಗನನ್ನು ತಿಳಿಸುತ್ತದೆ, ಹಾಗೆ ಇಲ್ಲಿ ಅಗ್ನಿಶಬ್ದವು ಮುಖ್ಯವಾಗಿ ಪೃಥಿವೀಸ್ಥಾನ ಜೋತಿಸ್ಸನ್ನು ಹೇಳಿದರೂ ಗೌಣದಿಂದ ಮಧ್ಯಮೋತ್ತಮ ಜೋತಿಸ್ಸನ್ನು ಹೇಳಬಹುದು.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತವಾದ ನಿರುಕ್ತಭಾಷ್ಯದ ಏಳನೇ ಅಧ್ಯಾಯದಲ್ಲಿ
ಹದಿನಾರನೆಯ ಖಂಡವು ಮುಗಿದಿದೆ.

---

## ಅಥ ಸಪ್ತದಶಃ ಖಂಡಃ

### ಹದಿನೇಳನೆಯ ಖಂಡವು

ಅಭಿ ಪ್ರವನ್ತ ಸಮನೇವ ಯೋಷಾಃ ಕಲ್ಯಾಣ್ಯಃ ೧ ಸ್ಮಯಮಾನಾಸೋ ಅಗ್ನಿಮ್ । ಘೃತಸ್ಯ ಧಾರಾಃ ಸಮಿಧೋ ನಸಂತ ತಾ ಜುಷಾಣೋ ಹರ್ಯತಿ ಜಾತವೇದಾಃ ॥ (ಋ-ಸು-೪-೫೮-೮) ॥ ಅಭಿನಮಂತ ಸಮನಸ ಇವ ಯೋಷಾಃ ಸಮನಂ ಸಮನನಾದ್ವಾ ಸಂಮಾನನಾದ್ವಾ ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಮಿತ್ಯಾಪನಿಕಂ ಘೃತಸ್ಯ ಧಾರಾ ಉದಕಸ್ಯ ಧಾರಾಃ ಸಮಿಧೋ ನಸಂತ ನಸತಿರಾಪ್ನೋತಿಕರ್ಮಾ ವಾ ನಸತಿಕರ್ಮಾ ವಾ । ತಾ ಜುಷಾಣೋ ಹರ್ಯತಿ ಜಾತವೇದಾಃ । ಹರ್ಯತಿಃ ಪ್ರೇಪ್ಸಾಕರ್ಮಾ ವಿಹರ್ಯತೀತಿ । ಸಮುದ್ರಾದೂರ್ಮಿರ್ಮಧುಮಾ ಉದಾರದಿತ್ಯಾದಿತ್ಯ ಮುಕ್ತಂ

ಮನ್ಯಂತೇ ಸಮುದ್ರಾದ್ಧ್ಯೇಷೋಽಧ್ಯ ಉದೇತೀತಿ ಚ ಬ್ರಾಹ್ಮಣಮಥಾಪಿ ಬ್ರಾಹ್ಮಣಂ ಭವತ್ಯಗ್ನಿಃ ಸರ್ವಾ ದೇವತಾ ಇತಿ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೧೭ ॥

ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯಃ೧ ಸ್ಮಯಮಾನಾಸೋ ಅಗ್ನಿಮ್ ॥
ಘೃತಸ್ಯ ಧಾರಾಃ ಸಮಿಧೋ ನಸಂತ ತಾ ಜುಷಾಣೋ ಹರ್ಯತಿ ಜಾತವೇದಾಃ ॥

(ಋ. ಸಂ ೩-೮-೧೧)

ಆಖ್ಯಾಯಕರ್ಮಯೋಗದಿಂದ ಅಗ್ನಿಯೇ ಮಧ್ಯಮಸ್ಥಾನ, ಉತ್ತಮಸ್ಥಾನ ಜ್ಯೋತಿಸ್ಸು ಎಂಬುದಕ್ಕೆ ಉದಾಹರಣೆ ತೋರಿಸುತ್ತಾರೆ.

ಅಭಿನಮಂತ ಸಮನಸ ಇವ ಯೋಷಾಃ। ಸಮನನಾದ್ವಾ, ಸಂಮಾನನಾದ್ವಾ। ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಮಿತ್ಯೌಪಮಿಕಮ್। ಘೃತಸ್ಯ ಧಾರಾಃ। ಉದಕಸ್ಯ ಧಾರಾಃ। ಸಮಿಧೋ ನಸಂತ। ನಸತಿರಾಪ್ನೋತಿಕರ್ಮಾ ವಾ ನಮತಿಕರ್ಮಾ ವಾ। ತಾ ಜುಷಾಣೋ-ಹರ್ಯತಿ ಜಾತವೇದಾಃ। ಹರ್ಯತಿಃ ಪ್ರೇಪ್ಸಾಕರ್ಮಾ, ವಿಹಯತೀತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ನೀರಿನಧಾರೆಗಳು ಒಬ್ಬ ಪತಿಯಲ್ಲಿ ಸಮಾನಮನಸ್ಸುಳ್ಳ ಸ್ತ್ರೀಯರು ರೂಪಯೌವನಾದಿ ಗುಣಸಂಪನ್ನರಾತ ಮಂದಹಾಸದಿಂದ ಪತಿಯ ಆಲಿಂಗನೆಗೋಸ್ಕರ ಹತ್ತಿರಬಂದು ನಮನಾದಿಗಳಿಂದ ಸೂಚಿಸುವಂತೆ ಮಧ್ಯಮ ಸ್ಥಾನನಾದ ವೈದ್ಯುತಾಗ್ನಿಗೆ ನಾಭಿಮುಖವಾಗಿ ಬಗ್ಗುತ್ತವೆ. ಮತ್ತು ಆ ಅಗ್ನಿಯನ್ನು ನೀರಿನ ಧಾರೆಗಳು ಪ್ರಕಾಶಪಡಿಸುತ್ತಾ ಸುತ್ತಲೂ ವ್ಯಾಪಿಸುತ್ತವೆ. ಆ ಮಧ್ಯಮಸ್ಥಾನದ ವೈದ್ಯುತಾಗ್ನಿಯೂ ಕೂಡಾ ಸಂತುಷ್ಟನಾಗಿ ಪುನಃ ಪುನಃ ಅವುಗಳನ್ನು ಬಯಸುತ್ತಾನೆ. ಸಮನಸಃ ಎಂಬಲ್ಲಿ ಎರಡು ರೀತಿಯಾಗಿ ಅರ್ಥಮಾಡಬಹುದೆಂದು ತೋರಿಸುತ್ತಾರೆ. ಸಮನನಾತ್ ಪ್ರಾಣನಾರ್ಥಕ ಅನಧಾತುವಿನಿಂದ ನಿಷ್ಪನ್ನವಾದ ಶಬ್ದಃ ಸಂಮಾನನಾತ್. ಅವಬೋಧನಾರ್ತಕ ಮನುಧಾತುವಿನಿಂದ ಇದು ನಿಷ್ಪನ್ನವಾಗಿದೆಯೆಂದು ತಾತ್ಪರ್ಯ ಉಪಮಾನವನ್ನು ತಿಳಿಸಲು ಕಲ್ಯಾಣ್ಯಃ ಸ್ಮಯಮಾನಾಸಃ ಯೋಷಾಃ ಎಂದು ಹೇಳಿದೆ ಇಲ್ಲಿ ಪಾರ್ಥಿವಸ್ಥಾನಾಗ್ನಿಯನ್ನು ಹೇಳುವುದಾದರೆ ಉಪಮಾನೋಪಮೇಯ ಭಾವ ಸಮಂಜಸವಾಗಲಾರದು. ಆದುದರಿಂದ ಘೃತಪದಕ್ಕೆ ನೀರೆಂದೇ ಅರ್ಥಮಾಡಬೇಕು. ಘೃತಂ ಮಧು (ನಿಘ. ೧-೧೨) ಎಂದು ಉದಕನಾಮಗಳಲ್ಲಿ ಹೇಳುತ್ತಾರೆ. ನಸಧಾತುವಿಗೆ ಹೊಂದುವುದು, ಅಥವಾ ಬಗ್ಗುವುದು ಅರ್ಥ. ಹರ್ಯಧಾತುವಿಗೆ ಪ್ರೇಪ್ಸಾ ಅಂದರೆ ಹೊಂದುವ ಇಚ್ಛೆ ಅರ್ಥ. ಇಲ್ಲಿ ಅಗ್ನಿಶಬ್ದವು ಸಾಮರ್ಥ್ಯದಿಂದ ಮಧ್ಯಮಸ್ಥಾನದ ವೈದ್ಯುತಾಗ್ನಿಯನ್ನೇ ಬೋಧಿಸುವುದರಿಂದ ಅಗ್ನಿ ಪೃಥಿವೀಸ್ಥಾನಮಾತ್ರವೆಂದು ತಿಳಿಯಬಾರದು.

ಸಮುದ್ರಾದೂರ್ಮಿರ್ಮಧುಮಾँ ಉದಾರತ್ ||

(ಋ. ಸಂ. ೩-೮-೧೦)

ಇತ್ಯಾದಿತ್ಯಮುಕ್ತಂ ಮನ್ಯಂತೇ, ಸಮುದ್ರಾದ್ಧ್ಯೇಷೋಽದ್ಭ್ಯ
ಉದೇತಿ ಇತಿ ಚ ಬ್ರಾಹ್ಮಣಮ್ ||

ಉತ್ತಮಸ್ಥಾನದ (ದ್ಯುಲೋಕ) ಜ್ಯೋತಿಸ್ಸೂ ಅಗ್ನಿಶಬ್ದದಿಂದ ಅಭಿಹಿತವಾಗಿದೆಯೆಂದು ತೋರಿಸಲು ಉದಾಹರಿಸುತ್ತಾರೆ.

ಉಪಾಂಶುನಾ ಸಮಮೃತತ್ವಮಾನಟ್ || ಘೃತಸ್ಯ ನಾಮ ಗುಹ್ಯಂ
ಯದಸ್ತಿ ಜಿಹ್ವಾ ದೇವಾನಾಮಮೃತ್ಯಸ್ಯ ನಾಭಿಃ ||

ಭಾಗ ಯದ್ಯಪಿ ಇಲ್ಲಿ ಅಗ್ನಿಶಬ್ದವಿಲ್ಲದಿರುವುದರಿಂದ ಉದಾಹರಣೆ ಆಗಲಾರದು ಅಗ್ನಿಶಬ್ದದೃಷ್ಟವಾಗಿದ್ದರೆ ಆದು ಆದಿತ್ಯಜೋತಿಯನ್ನು ಹೇಳುತ್ತದೆಂದು ಹೇಳಬಹುದಿತ್ತು. ಆದರೂ ಇದು ಆದಿತ್ಯನನ್ನೇ ಅಗ್ನಿರೂಪದಿಂದ ಹೇಳುತ್ತದೆಂದು ನಿರುಕ್ತಕಾರರು ಸಮರ್ಪಿಸುತ್ತಾರೆ. ಇದಕ್ಕೆ ಸಮರ್ಕವಾಗಿ ಬ್ರಾಹ್ಮಣವಾಕ್ಯವನ್ನು ಉದಾಹರಿಸುತ್ತಾರೆ. ಈ ಆದಿತ್ಯರೂಪಾಗ್ನಿಯು ಸಮುದ್ರದಿಂದ ನೀರಿನಿಂದ ಹುಟ್ಟಿ ಎದ್ದುಬರುತ್ತಿದ್ದಾನೆ ಎಂದರ್ಥ. ಪಾರ್ಥಿವಾಗ್ನಿಯು ವಿರುದ್ಧವಾದುದರಿಂದ ಸಮುದ್ರದಿಂದ ಹುಟ್ಟಿ ಬರುವುದು ಅಸಂಗತವಾದುದರಿಂದ ಆದಿತ್ಯನೇ ಅಗ್ನಿಯೆಂದು ಹೇಳಬೇಕು.

ಅಥಾಪಿ ಬ್ರಾಹ್ಮಣಂ ಭವತಿ ಅಗ್ನಿಃ ಸರ್ವಾ ದೇವತಾಃ ಇತಿ |
ತಸ್ಯ ಉತ್ತರಾ ಭೂಯಸೇ ನಿರ್ವಚನಾಯ ||

ಆದಿತ್ಯನೇ ಅಗ್ನಿಯೆಂಬುದಕ್ಕೆ ದಾರ್ಢ್ಯಪ್ರತಿಪತ್ತಿಗೋಸ್ಕರ ಬ್ರಾಹ್ಮಣವಾಕ್ಯ ಪ್ರಮಾಣವನ್ನು ತೋರಿಸುತ್ತಾರೆ. ಸಕಲ ದೇವತೆಗಳೂ ಅಗ್ನಿಶಬ್ದದಿಂದ ಅಭಿಹಿತರಾಗುತ್ತಾರೆಂದು ಬ್ರಾಹ್ಮಣತಾತ್ಪರ್ಯ. ಮುಂದೆ ಹೇಳುವ ಋಙ್ಮಂತ್ರವು ಈ ಬ್ರಾಹ್ಮಣೋಕ್ತವಾದ ಅರ್ಥಕ್ಕೆ ಪುಷ್ಟಿದಾಯಕವಾಗುತ್ತದೆ.

ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯಃ ಸ್ಮಯಮಾನೋ
　ಅಗ್ನಿಂ |
ಘೃತಸ್ಯ ಧಾರಾಃ ಸಮಿಧೋ ನಸಂತ ತಾ ಜುಷಾಣೋಹರ್ಯತಿ
　ಜಾತವೇದಾಃ ||

(ಋ. ಸಂ ೪—೫೮—೮)

ಇದರ ಅರ್ಥವು—

ಮಂಗಳಸ್ವರೂಪವುಳ್ಳವರೂ ಹಸನ್ಮುಖಿಗಳೂ ಅನುರೂಪವಾದ ಮನಸ್ಸುಳ್ಳವರೂ ಆದ ಪತ್ನಿಯರು ತಮ್ಮ ಪತಿಗಳನ್ನು ಆಲಂಗಿಸುವಂತೆ ಘೃತದ ಧಾರೆಗಳು ಅಗ್ನಿಯನ್ನು ಆಲಂಗಿಸುವಂತೆ ಸೇರಿಕೊಳ್ಳುತ್ತವೆ. ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾ ವ್ಯಾಪಿಸುತ್ತವೆ. ಜಾತವೇದೋರೂಪನಾದ ಅಗ್ನಿಯು ಧಾರೆಗಳನ್ನು ಸೇವಿಸುತ್ತಾ ಅವನ್ನು ಸ್ವೀಕರಿಸುತ್ತಾನೆ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದೆ—

**ಅಭಿನಮಂತ ಸಮನಸ ಇವ ಯೋಷಾ । ಸಮನಂ ಸಮನನಾದ್ವಾ ಸಂಮಾನನಾದ್ವಾ । ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಮಿತ್ಯೌಪಮಿಕಂ । ಘೃತಸ್ಯ ಧಾರಾ ಉದಕಸ್ಯ ಧಾರಾಃ ಸಮಿಧೋ ನಸಂತ । ನಸತಿರಾಪ್ನೋತಿಕರ್ಮಾ ವಾ ನಮತಿಕರ್ಮಾ ವಾ । ತಾ ಜುಷಾಣೋ ಹರ್ಯತಿ ಜಾತವೇದಾಃ । ಹರ್ಯತಿಃ ಪ್ರೇಪ್ಸಾಕರ್ಮಾ ವಿಹರ್ಯತೀತಿ ॥**

(ನಿ. ೭–೧೭)

ಒಬ್ಬ ಪುರುಷನಿಗೆ ಅನೇಕ ಪತ್ನಿಯರಿದ್ದರೆ ಅವರೆಲ್ಲರೂ ತಮ್ಮ ಒಬ್ಬನೇ ಆದ ಪತಿಯಲ್ಲಿ ಸಮನಾದ ಮನಸ್ಸನ್ನು (ಪ್ರೀತಿಯನ್ನ) ವ್ಯಕ್ತಪಡಿಸುವರು. **ಸಮನಂ** ಎಂಬ ಶಬ್ದಕ್ಕೆ ಒಂದೇ ವಿಧವಾದ ಮನಸ್ಸುಳ್ಳವರು. ಏಕೆಂದರೆ ಎಲ್ಲರೂ ಒಂದೆಡೆಯಲ್ಲಿ ವಾಸಿಸುತ್ತಾ (ಉಚ್ಛ್ವಾಸನಿಃಶ್ವಾಸಗಳ ಮೂಲಕ) ಒಂದೇ ಸ್ಥಳದಲ್ಲಿರುವ ವಾಯುವನ್ನು ಸೇವಿಸುತ್ತಾ ಇರುವರೆಂದೂ ಅಥವಾ ಎಲ್ಲರೂ ಒಂದೇ ವಿಧವಾಗಿ (ಒಬ್ಬನೇ ಆದ ತಮ್ಮ ಪತಿಯ ವಿಷಯದಲ್ಲಿ) ಆಲೋಚಿಸುತ್ತಾ ಇರುವರೆಂದೂ ಅರ್ಥವಾಗುವುದು. ಎಂದರೆ ಒಬ್ಬನಲ್ಲಿಯೇ ನೆಟ್ಟ ಮನಸ್ಸುಳ್ಳ ಅನೇಕ ಸ್ತ್ರೀಯರು ಯಾವರೀತಿ ವರ್ತಿಸುವರೋ ಅದರಂತೆ. **ಕಲ್ಯಾಣ್ಯಃ** ಎಂದರೆ ರೂಪಯೌವನಸಂಪನ್ನರಾದ, ಒಳ್ಳೆಯ ಗುಣಗಳುಳ್ಳ ಎಂದರ್ಥವು; **ಸ್ಮಯಮಾನಾಸಃ** ಎಂದರೆ ಮಂದಹಾಸಯುಕ್ತರಾದ ಎಂದರ್ಥವು. ಇಲ್ಲಿ ಅಗ್ನಿವಿಷಯದಲ್ಲಿ ಒಂದು ಉಪಮಾನವನ್ನು ಸೂಚಿಸಲಾಗಿದೆ. ಒಬ್ಬ ಪುರುಷನ ಅನೇಕ ಪತ್ನಿಯರು ತಮ್ಮ ಪತಿಯ ವಿಷಯದಲ್ಲಿ ಯಾವರೀತಿ ಒಂದೇ ಮನಸುಳ್ಳವರಾಗಿರುವರೋ ಮತ್ತು ರೂಪಯೌವನಸಂಪನ್ನರೂ, ಒಳ್ಳೆಯ ಗುಣಗಳುಳ್ಳವರೂ, ಮಂದಹಾಸಯುಕ್ತರೂ (ಮುಗುಳುನಗೆಯಿಂದ ಕೂಡಿದವರೂ) ಆಗಿ ಯಾವ ರೀತಿ ತಮ್ಮ ಸ್ವಾಮಿಯಾದ ಪತಿಯನ್ನು ನಮ್ರರಾಗಿ ಸಮೀಪಿಸುವರೋ ಅದರಂತೆ ಅಂತರಿಕ್ಷದಲ್ಲಿರುವ ಉದಕಧಾರೆಗಳು ವೈದ್ಯುತಾಗ್ನಿಯನ್ನು (ಅಥವಾ ಘೃತ ಎಂದರೆ ಆಜ್ಯಧಾರೆಗಳು ಹೋಮಕಾಲದಲ್ಲಿ ಪಾರ್ಥಿವಾಗ್ನಿ ಅಥವಾ ಯಜ್ಞಾಗ್ನಿಯನ್ನು) ಕೆಳಗಿಳಿದುಬಂದು ಸಮೀಪಿಸುತ್ತವೆ ಮತ್ತು ಆ ಅಗ್ನಿಯಲ್ಲಿ ಐಕ್ಯವಾಗುತ್ತವೆ. **ನಸತಿ** ಧಾತುವಿಗೆ ಹೊಂದುವುದು ಅಥವಾ ಬಗ್ಗುವುದು ಎಂದರ್ಥವಿರುವುದು. ಈ ಉದಕಧಾರೆ ಅಥವಾ ಘೃತಧಾರೆಯಿಂದ ಸೇವಿಸಲ್ಪಟ್ಟ ಅಗ್ನಿಯು (ಮಧ್ಯಮಸ್ಥಾನನಾದ ವೈದ್ಯುತಾಗ್ನಿ ಅಥವಾ ಪಾರ್ಥಿವಾಗ್ನಿಯೂ) ಸಂತೋಷವನ್ನು (ತೃಪ್ತಿಯನ್ನು) ಪಡೆಯುತ್ತಾನೆ. **ಹರ್ಯತಿ** ಧಾತುವಿಗೆ ಪುನಃಪುನಃ ಹೊಂದಬೇಕೆಂದು ಅಪೇಕ್ಷಿಸುವುದು ಎಂದರ್ಥವು. ಅಗ್ನಿಯು ಘೃತಧಾರೆಗಳನ್ನು ಮತ್ತೆ ಮತ್ತೆ ಬಯಸುವನೆಂದಭಿಪ್ರಾಯವು.

**ಸಮುದ್ರಾದೂರ್ಮಿರ್ಮಧುಮಾ ಉದಾರದುಪಾಂಶುನಾ ಸಮಮೃತತ್ವ ಮಾನಟ್॥**
**ಘೃತಸ್ಯ ನಾಮ ಗುಹ್ಯಂ ಯದಸ್ತಿ ಜಿಹ್ವಾ ದೇವಾನಾಮಮೃತಸ್ಯ ನಾಭಿಃ ॥**

ಇದರ ಅರ್ಥವು—

ಅಂತರಿಕ್ಷಾಗ್ನಿಯಿಂದ ಮಾಧುರ್ಯೋಪೇತವಾದ ಫಲಸಮೂಹಗಳು (ಉದಕಗಳು) ಅಲೆಗಳಂತೆ ಒಂದಾದಮೇಲೊಂದು ಉದ್ಭವಿಸುತ್ತವೆ. ಮಾನವನು ಆದಿತ್ಯಕಿರಣದಿಂದ ಮರಣರಾಹಿತ್ಯವನ್ನು ಪಡೆಯುತ್ತಾನೆ. ಪ್ರಕಾಶಮಾನವಾದ ಘೃತತತ್ವಕ್ಕೆ ಯಾವ ರಹಸ್ಯವಾದ ಹೆಸರಿದೆಯೋ ಅದೇ ದೇವತೆಗಳ ಜಿಹ್ವಾರೂಪವಾಗಿಯೂ ಅಮೃತಕ್ಕೆ ನಾಭಿರೂಪವಾಗಿಯೂ ಇದೆ.

(೧) **ಸಮುದ್ರಾತ್ ಊರ್ಮಿಃ ಮಧುಮಾನ್ ಉದಾರಾತ್—ಸಂಮೋದಂತೇಽಸ್ಮಿನ್ಯಜಮಾನಾ ಇತಿ ವಾ ಸಮುದ್ರೋಽಗ್ನಿಃ ಪಾರ್ಥಿವಃ ।** ಈ ಯಜ್ಞಾಗ್ನಿಯ ವಿಷಯದಲ್ಲಿ ಯಜ್ಞಮಾಡುವ ಯಜಮಾನರು ಸಂತೋಷ ಪಡುತ್ತಾರಾದ್ದರಿಂದ ಸಮುದ್ರ ಎಂದರೆ ಪಾರ್ಥಿವಾಗ್ನಿಯು.

(೨) **ಅಥವಾ ಸಮುದ್ದ್ರವಂತ್ಯಾಪೋಽಸ್ಮಾದಿತಿ ವ್ಯುತ್ಪತ್ತ್ಯಾ ವೈದ್ಯುತೋಽಗ್ನಿಃ ।** ಸಮುದ್ರವೆಂದರೆ ಅಂತರಿಕ್ಷವು (ನಿ ೨–೧೦) ಅಂತರಿಕ್ಷದಲ್ಲಿ ಇರುವ ಅಗ್ನಿಯಿಂದ (ಮಿಂಚು) ಉದಕಗಳು ವೃಷ್ಟಿರೂಪದಲ್ಲಿ ಸುರಿಯುವುದರಿಂದ ಸಮುದ್ರವೆಂದರೆ ವೈದ್ಯುತಾಗ್ನಿ (ಮಿಂಚು) ಎಂದೂ ಹೆಸರು. ಇಂತಹ ವೈದ್ಯುತಾಗ್ನಿಯಿಂದ (ಊರ್ಮಿಃ ಅಲೆಗಳಂತೆ ಒಂದರಮೇಲೊಂದಂರಂತೆ) ಮಾಧುರ್ಯೋಪೇತವಾದ ಫಲಸಮೂಹ ಅಥವಾ ಉದಕಗಳು ಉದ್ಭವಿಸುತ್ತವೆ. ಇಲ್ಲಿ ಪಾರ್ಥಿವಾಗ್ನಿಯಿಂದ ಯಜ್ಞಮಾಡುವ ಯಜಮಾನನಿಗೆ ಅಭೀಷ್ಟಫಲಗಳು ಅಲೆಗಳಂತೆ ಎಂದರೆ ಒಂದಾಗುತ್ತಲೊಂದು ಉಂಟಾಗುತ್ತವೆ ಎಂದರ್ಥವು ; ವೈದ್ಯುತಾಗ್ನಿಪಕ್ಷದಲ್ಲಿ ಮಧುರವಾದ ವೃಷ್ಟ್ಯುದಕಗಳು ಅಲೆಅಲೆಯಾಗಿ ಎಂದರೆ ಧಾರಾಕಾರವಾಗಿ ಸುರಿಯುತ್ತವೆ ಎಂದಭಿಪ್ರಾಯವು.

(೩) **ಅಥವಾ ಸಮುದ್ರಾತ್ ಸಮುದ್ದ್ರವಣಸಾಧನಾತ್ ಆದಿತ್ಯಾದೂರ್ಮಿ ರಸ ಉದಕಲಕ್ಷಣ ಉದಾರತ್ । ಆದಿತ್ಯಾಜ್ಜಾಯತೆ ವೃಷ್ಟಿರಿತಿ ಶ್ರುತೇಃ ।** ಅಥವಾ ರಸವನ್ನು ಆಕರ್ಷಿಸುವ ಅಥವಾ ಹೀರುವ ಸ್ವಭಾವವುಳ್ಳ ಆದಿತ್ಯನಿಗೂ ಸಮುದ್ರನೆಂದು ಹೆಸರು. ಇಲ್ಲಿ ರಸವೆಂದರೆ ಉದಕ ಅಥವಾ ದ್ರವರೂಪದಲ್ಲಿರುವ ಯಾವ ವಸ್ತುವಾದರೂ ಆಗಬಹುದು. ಜಲಾಶಯಗಳಿಂದ ಉದಕವನ್ನು ರಶ್ಮಿಗಳ ಮೂಲಕ ಆಕರ್ಷಿಸುವುದರಿಂದ ಆದಿತ್ಯನಿಗೆ ಸಮುದ್ರನೆಂದು ಹೆಸರು. ಇಂತಹ ಆದಿತ್ಯನಿಂದ ಉದಕರೂಪವಾದ ವೃಷ್ಟಿಯು ಉಂಟಾಯಿತು.

(೪) **ಯದ್ವಾ ಸಮುದ್ರಾದುಕ್ತವ್ಯುತ್ಪತ್ತೇಃ ಅಂತರಿಕ್ಷಾದೂರ್ಮಿರುದಕಮುದಾರತ್** ಅಥವಾ ಸಮುದ್ರ ಶಬ್ದಕ್ಕೆ ಅಂತರಿಕ್ಷವೆಂದು ಹೆಸರಿರುವುದರಿಂದ ಉದಕವು (ವೃಷ್ಟಿರೂಪದಲ್ಲಿ) ಸುರಿಯಿತು ಎಂದೂ ಅರ್ಥವನ್ನೂ ಹೇಳಬಹುದು.

(೫) **ಅಥವಾ ಸಮುದ್ರಾದುಕ್ತಲಕ್ಷಣಾತ್ ಗವಾಮೂಧಸಃ ಸಕಾಶಾತ್ ಊರ್ಮಿರುಜ್ಜ್ವಲಃ ಕ್ಷೀರರಸಃ ।** ಅಥವಾ ಸಮುದ್ರಶಬ್ದದ ನಿರ್ವಚನದಂತೆ **ಸಮುದ್ರಾತ್** ಎಂದರೆ ಗೋವಿನ ಕೆಚ್ಚಲಿನಿಂದ ಎಂದೂ ಅರ್ಥವಾಗಬಹುದು. ಗೋವಿನ ಕೆಚ್ಚಲಿನಿಂದ ಪ್ರಕಾಶಮಾನವಾದ ಎಂದರೆ ಉತ್ಕೃಷ್ಟವಾದ ಕ್ಷೀರವು ಹೊರಡುವುದೂ ಎಂದೂ ಅರ್ಥವಾಗಬಹುದು. ಮತ್ತು ಹಾಲಿನಿಂದ ಘೃತವು (ತುಪ್ಪ) ಉತ್ಪತ್ತಿಯಾಗುವುದರಿಂದ ಹಸುವಿನ ಕೆಚ್ಚಲಿನಿಂದ ಘೃತವೂ ಉತ್ಪನ್ನವಾಗುತ್ತದೆ ಎಂದು ಹೇಳಬಹುದು. ಮುಖ್ಯಸಾರಾಂಶವೇನೆಂದರೆ ಈ ಸೂಕ್ತದಲ್ಲಿ ಪ್ರತಿಪಾದಿತರಾಗಿರುವ ದೇವತೆಗಳು **ಅಗ್ನಿ, ಸೂರ್ಯ, ಆಪಃ, ಗಾವಃ (ಗವ್ಯಂ), ಘೃತ** ಎಂದು ಐದು ಮಂದಿಗಳಲ್ಲಿ ಯಾರಾದರೂ ಆಗಬಹುದು. ಎಂದರೆ ಈ ಸೂಕ್ತದಲ್ಲಿರುವ ವಿಷಯಗಳನ್ನು ಈ ಐದುಮಂದಿ ದೇವತೆಗಳಲ್ಲಿ ಯಾರ ಪರವಾಗಿಬೇಕಾದರೂ ಅನ್ವಯಿಸಿ ಅರ್ಥಮಾಡಬಹುದು. ಆದ್ದರಿಂದ ಮೇಲೆ ಐದು ವಿಧವಾದ ಅರ್ಥಗಳನ್ನು ವಿವರಿಸಲಾಗಿದೆ. ಮುಂದಿನ ವಾಕ್ಯಗಳಿಗೆ ಅಥವಾ ಋಕ್ಕುಗಳಿಗೆ ಎಲ್ಲರಿಗೂ ಹೊಂದಬಹುದಾದ ಸಮಾನಾರ್ಥವಿರುವುದರಿಂದ ಮುಖ್ಯಾರ್ಥವನ್ನು ಮಾತ್ರ ವಿವರಿಸಿದರೆ ಸಾಕಾಗಿರುತ್ತೆ.

ಈ ಋಕ್ಕಿನ ಮೊದಲನೆಯ ವಾಕ್ಯಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

**ಸಮುದ್ರಾದೂರ್ಮಿರ್ಮಧುಮಾँ ಉದಾರತ್ । ಇತ್ಯಾದಿತ್ಯಮುಕ್ತಂ ಮನ್ಯಂತೇ । ಸಮುದ್ರಾದ್ಧ್ಯೇಷೋಽದ್ಭ್ಯ ಉದೇತಿ ಚ ಬ್ರಾಹ್ಮಣಂ ॥**

(ನಿ. ೭–೧೮)

**ಸಮುದ್ರಾದೂರ್ಮಿಃ** ಎಂಬ ಈ ಋಕ್ಕಿನಲ್ಲಿರುವ ಸಮುದ್ರಶಬ್ದಕ್ಕೆ ಆದಿತ್ಯನೆಂದು ಕೆಲವರ ಅಭಿಮತವಿದೆ. ಆದಿತ್ಯನು ಪೂರ್ವ ಸಮುದ್ರದಿಂದ ಉದಯಿಸುತ್ತಾನೆ (ಏಳುತ್ತಾನೆ) ಎಂಬ ಬ್ರಾಹ್ಮಣವಾಕ್ಯವನ್ನು ಈ ವಿಷಯ ಸಮರ್ಥನೆಗಾಗಿ ಹೇಳುವರು. ಇದಲ್ಲದೆ ಅಗ್ನಿ ಪರ್ಯಾಯವಾಗಿ ಅರ್ಥಮಾಡುವುದಾದರೆ ಆ ವಿಷಯದಲ್ಲಿಯೂ ಒಂದು ಬ್ರಾಹ್ಮಣ ವಾಕ್ಯವಿದೆ—

**ಅಥಾಪಿ ಬ್ರಾಹ್ಮಣಂ ಭವತಿ । ಅಗ್ನಿಃ ಸರ್ವಾ ದೇವತಾ ಇತಿ ।**
**ತಸ್ಯೋತ್ತರಾ ಭೂಯಸೇ ನಿರ್ವಚನಾಯ ।**
**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

(ಋ. ಸಂ. ೧–೧೬೪–೪೬)

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತೀಂದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂ ಚ ಗರುತ್ಮಂತಂ ದಿವ್ಯೋ ದಿವಿಜೋ ಗರುತ್ಮಾನ್ ಗರಣವಾನ್ ಗುರ್ವಾತ್ಮಾ ಮಹಾತ್ಮೇತಿ ವಾ । ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿಃ । ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ**

(ನಿ. ೭–೧೮)

ಅಗ್ನಿಯೇ ಸರ್ವದೇವತೆಗಳ ರೂಪದಿಂದ ಇದಾನೆ ಎಂದು ಮೇಲಿನ ಶ್ರುತಿವಾಕ್ಯದ ಅರ್ಥವು. ಇಂದ್ರಂ ಮಿತ್ರಂ ಎಂಬ ಋಕ್ಕಿನಲ್ಲಿ ಅಗ್ನಿಯನ್ನು ಇಂದ್ರ, ಮಿತ್ರ ವರುಣ ಸುಪರ್ಣ, ಗುರುತ್ಮಂತ, ಯಮ, ಮಾತರಿಶ್ವ ಎಂಬ ದೇವತೆಗಳೆಂದು ಮೇಧಾವಿಗಳಾದ ಪುರುಷರು ಹೇಳುವರು ಎಂಬರ್ಥವಿದೆ. ಆದರೆ ಇಲ್ಲಿ ಅಗ್ನಿಯೇ ಈ ದೇವತೆಗಳು, ಈ ದೇವತೆಗಳೇ ಅಗ್ನಿಯು, ಇವರಲ್ಲಿ ಯಾರಿಗೂ ಭೇದವಿಲ್ಲ, ಅಗ್ನಿಗೂ ಈ ದೇವತೆಗಳಿಗೂ ತಾದಾತ್ಮ್ಯವನ್ನು ಹೇಳಿದೆ ಎಂದು ಭಾವಿಸಬಾರದು. **ಅಗ್ನಿಃ ಸರ್ವಾಃ ದೇವತಾಃ** ಎಂದರೆ ದೇವತೆಗಳಲ್ಲಿರುವ ಗುಣಗಳೂ ಅಗ್ನಿಯಲ್ಲಿರುವವು ಆದುದರಿಂದ ಅಗ್ನಿಯು ಸರ್ವದೇವತಾಸ್ವರೂಪನು ಎಂಬರ್ಥದಲ್ಲಿ ಈ ವಾಕ್ಯದ ಪ್ರಯೋಗವಿರುವುದು. ಅಗ್ನಿಯಲ್ಲಿ ಒಂದು ವೈಶಿಷ್ಟ್ಯದಿದೆ. ಅದು ಇತರ ದೇವತೆಗಳಲ್ಲಿಲ್ಲ. ಯಾವ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿರುವುದೋ ಆ ಸೂಕ್ತವು ಅಗ್ನಿದೇವತಾಕವು. ಎಂದರೆ ಅಗ್ನಿಯನ್ನು ಸ್ತುತಿವಾಕ್ಯಗಳಿಂದ ಸ್ತುತಿಸುವುದೂ ಅಲ್ಲದೆ ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುವರು. ಆದ್ದರಿಂದ ಹೋಮನಿಷ್ಪಾದಕನಾದವನೇ ಅಗ್ನಿಯು, ಈ ಗುಣವೈಶಿಷ್ಟ್ಯವು ಇತರ ದೇವತೆಗಳಲ್ಲಿಲ್ಲ. ಇಲ್ಲಿ ಅಗ್ನಿಯು ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ, ಅಂತರಿಕ್ಷದಲ್ಲಿ ವೈದ್ಯುತಾಗ್ನಿ (ಮಿಂಚು) ರೂಪದಿಂದಲೂ, ಭೂಮಿಯಲ್ಲಿ ಪಾರ್ಥಿವಾಗ್ನಿರೂಪದಿಂದಲೂ ಇರುವನೆಂದು ಹೇಳುವುದು ರೂಢಿಯಷ್ಟೆ. ಸ್ವರ್ಗದಲ್ಲಿರುವ ಆದಿತ್ಯನನ್ನೂ ಅಂತರಿಕ್ಷದಲ್ಲಿರುವ ವೈದ್ಯುತಾಗ್ನಿಯನ್ನೂ ಕೇವಲ ಹೆಸರಿಗೆ ಮಾತ್ರ ಅಗ್ನಿಯೆಂದು ವ್ಯವಹರಿಸುವರು. ಪಾರ್ಥಿವಾಗ್ನಿಯೇ ನಿಜವಾದ ಅಗ್ನಿಯು ಎಂದರೆ ಅಗ್ನಿಯ ಮುಖ್ಯ (ನೈಜ) ಸ್ವರೂಪ ಎಂದು ತಿಳಿಯಬೇಕು ಎಂದು ಅರ್ಥ ವಿವರಣೆಮಾಡಿರುವರು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡವು ಸಮಾಪ್ತವಾಗಿದೆ.

## ಅಥ ಅಷ್ಟಾದಶಃ ಖಂಡಃ

## ಹದಿನೆಂಟನೆಯ ಖಂಡವು

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ (ಋ. ಸಂ. ೧-೧೬೪-೬) ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತೀಂದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂ ಚ ಗರುತ್ಮಂತಂ ದಿವ್ಯೋ ದಿವಿಜೋ ಗರುತ್ಮಾನ್ ಗರಣವಾನ್ ಗುರ್ವಾತ್ಮಾ ಮಹಾತ್ಮೇತಿ ವಾ ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥ ೧೮ ॥

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ
ಸಸುಪರ್ಣೋ ಗರುತ್ಮಾನ್ ॥
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥

(ಋ. ಸಂ. ೨-೩-೨೨)

ಒಬ್ಬ ದೇವತೆಗೇ ನಾನಾನಾಮಗಳಿರುತ್ತವೆಯೆಂಬುದಕ್ಕೆ ಉದಾಹರಣೆ ಋಕ್ ತೋರಿಸುತ್ತಾರೆ.

ಇಮಮೇವಾಗ್ನಿಂ ಮಹಾಂತಮಾತ್ಮಾನಂ ಬಹುಧಾ ಮೇಧಾವಿನೋ
ವದಂತೀಂದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂ ಚ ಗುರುತ್ಮಂತಂ ದಿವ್ಯೋ ದಿವಿಜೋ ಗುರುತ್ಮಾನ್ ಗರಣವಾನ್ ಗುರ್ವಾತ್ಮಾ ಮಹಾತ್ಮೇತಿ ವಾ ॥

ಮಹಾತ್ಮನಾದ ಈ ಅಗ್ನಿಯನ್ನು ಏಕಾತ್ಮನಾಗಿದ್ದರೂ ದೇವತಾತತ್ವವನ್ನು ತಿಳಿದ ವಿದ್ವಾಂಸರು ಇಂದ್ರ, ಮಿತ್ರ, ವರುಣ, ದ್ಯುಲೋಕದಲ್ಲಿ ಸಂಚರಿಸುವ ಸ್ತುತಿಯನ್ನು ಹೊಂದುವ ಅಥವಾ ಭೂಮಿಯಿಂದ ರಸವನ್ನು ಸೆಳೆಯುವ ಆದಿತ್ಯನೆಂದು ನಾನಾ ನಾಮಗಳಿಂದ ಕರೆಯುತ್ತಾರೆ. "ಏಕೈವ-ವಾ ಊಹಾನಾತ್ಮಾ ದೇವತಾ ಸ ಸೂರ್ಯ ಇತ್ಯಾಚಕ್ಷತೇ" ಎಂದು ಹೇಳಿರುವುದರಿಂದ ದ್ಯುಲೋಕದಲ್ಲಿರುವ ಆದಿತ್ಯನೂ ಬ್ರಹ್ಮನೂ ಒಂದು ಎಂದು ಹೇಳಿರುವುದರಿಂದ ಸೂರ್ಯನಿಗೆ ಸರ್ವಾತ್ಮತ್ವವು ಸಿದ್ಧವಾಗುತ್ತದೆ. ಈ ಋಙ್ಮಂತ್ರವು ಆದಿತ್ಯನನ್ನು ಹೇಳುತ್ತಿದ್ದರೂ ಅಗ್ನಿಯನ್ನೇ ಪ್ರತಿಪಾದಿಸುತ್ತವೆಯೆಂದು ಪೂರ್ವಪಕ್ಷಿಗಳು ಹೇಳುತ್ತಾರೆ.

ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇ ವ ಸೋಽಗ್ನಿಃ ||

ಹಿಂದೆ ಹೇಳಿದ ಪೂರ್ವಪಕ್ಷಕ್ಕೆ ಸಮಾಧಾನ ತೋರಿಸುತ್ತಾರೆ. ಇಂದ್ರಾದಿಗಳೆಲ್ಲರೂ ಅಗ್ನಿಶಬ್ದದಿಂದಲೇ ಸ್ತುತಿಸಲ್ಪಡುತ್ತಾರೆ. ಆದರೆ ಪ್ರಾಧಾನ್ಯದಿಂದ ಸ್ತುತಿಸಲ್ಪಡುವುದಿಲ್ಲ. ಅದು ಗೌಣಸ್ತುತಿ. ಇದಕ್ಕೆ ಕಾರಣ ವಿವರಿಸುತ್ತಾರೆ. ತು ಶಬ್ದವು ಪೂರ್ವ ಪಕ್ಷವನ್ನು ವ್ಯಾವೃತ್ತಿಪಡಿಸುತ್ತದೆ. ಯಾರು ಪ್ರಧಾನಸ್ತುತಿಯಿಂದ ಸೂಕ್ತವನ್ನು ಹೊಂದಿರುತ್ತಾರೋ, 'ಆಗ್ನೇಯಮಷ್ಟಾಕಪಾಲಂ ನಿರ್ವಪೇತ್' ಇತ್ಯಾದಿ ಬೋಧನಾಸಾಮರ್ಥ್ಯದಿಂದ ಯಾರಿಗೋಸ್ಕರ ಹವಿಸ್ಸು ಅರ್ಪಿಸಲ್ಪಡುವುದೋ ಅವನ್ನೇ ಅಗ್ನಿಯೆಂದು ತಿಳಿಯಬೇಕು. ಅಗ್ನಿಶಬ್ದಕ್ಕೆ ವಿಶೇಷವಾಗಿ ಈ ಲೋಕದಲ್ಲಿಯೇ ಪ್ರಸಿದ್ಧಿ ಇರತ್ತದೆ. ಅಗ್ನಿಂ ಆನಯ, ಅಗ್ನಿಂ ಪ್ರಣಯ ಎಂದು ಹೇಳಿದರೆ ಈ ಪೃಥಿವೀಸ್ಥಾನ ಅಗ್ನಿಯನ್ನೇ ಜನರು ತಿಳಿಯುವುದಲ್ಲದೆ ಮಧ್ಯಮೋತ್ತಮಸ್ಥಾನದ ಜ್ಯೋತಿಸ್ಸೆಂದು ತಿಳಿಯುವುದಿಲ್ಲ. ಪ್ರಸಿದ್ಧಾರ್ಥಕ್ಕೆ ಬಾಧವನ್ನು ಹೇಳಿ ಅಪ್ರಸಿದ್ಧಾರ್ಥವನ್ನು ಸ್ವೀಕರಿಸುವುದರಲ್ಲಿ ಯಾವ ನ್ಯಾಯವೂ ಇಲ್ಲ. ಶಾಸ್ತ್ರವಿಹಿತವಾದ ಖದಿರಪಲಾಶಾದಿಗಳನ್ನು ಲೋಕಪ್ರಸಿದ್ಧಿಯಿಂದ ತಿಳಿದಮೇಲೆ ಅಗ್ನಿಶಬ್ದದಿಂದ ಪಾರ್ಥಿವಜ್ಯೋತಿಸ್ಸನ್ನೇ ಹೇಳಬೇಕು. ಮಧ್ಯಮೋತ್ತಮ ಜ್ಯೋತಿಸ್ಸಂಬಂಧ ಹೇಳುವುದಾದರೆ ಗೌಣವಾಗಿ ಹೇಳಬೇಕು. ಅವುಗಳಿಗೆ ಮುಖ್ಯಸಂಬಂಧ ಎಂದೂ ಬರುವುದಿಲ್ಲ. ಅಗ್ನಿಶಬ್ದದಿಂದ ಮಧ್ಯಮೋತ್ತಮ ಜ್ಯೋತಿಸ್ಸಿಗೆ ಮುಖ್ಯಸಂಬಂಧ ಹೇಗೆ ಇರುವುದಿಲ್ಲವೋ ಅದರಂತೆ ಮಧ್ಯಮೋತ್ತಮಸ್ಥಾನಗಳಾದ ವಿದ್ಯುತ್ಸೂರ್ಯಪದಗಳಿಗೆ ಲೋಕಪ್ರಸಿದ್ಧಿಯಿಂದ ಅಗ್ನಿಯೊಡನೆ ಮುಖ್ಯಸಂಬಂಧವಿರುವುದಿಲ್ಲ. ಮಾತರಿಶ್ವಾ ಅಂದರೆ ವಾಯು. ಮಾತಾ ಅಂದರೆ ಅಂತರಿಕ್ಷ. ಅಲ್ಲಿ ಉಂಟಾಗುವುದರಿಂದ ವಾಯುವಿಗೆ ಮಾತರಿಶ್ವಾ ಎಂದು ಹೆಸರು. ಅಗ್ನಿ ಶಬ್ದಕ್ಕೆ ಇಲ್ಲಿಯೂ ಗೌಣಸಂಬಂಧ ಹೇಳಬೇಕು.

ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಅನೇನ ನಾಮಧೇಯೇನ ಭಜತೇ ||

ಪೂರ್ವದಲ್ಲಿ ಮಧ್ಯಮೋತ್ತಮ ಜ್ಯೋತಿಸ್ಸುಗಳಿಗೂ ಅಗ್ನಿಶಬ್ದದಿಂದ ಕರೆದುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾರೆ. ನಿಪಾತವೆಂದು ಅಪ್ರಾಧಾನ್ಯವೆಂದು ಹಿಂದೆ ಹೇಳಿದೆ. ಇದಕ್ಕೆ ಭಕ್ತಿ ಅಥವಾ ಲಕ್ಷಣಾ ಎಂದು ಹೇಳುತ್ತಾರೆ. ಲಕ್ಷಣಾ ಅಂದರೆ ಗುಣಯೋಗದಿಂದ ಆರೋಪಿಸಿ ಹೇಳುವುದು. ಗೌರ್ವಾಹೀಕ. ಅಂದರೆ ಪಶುವಿನಲ್ಲಿರುವ ಜಾಡ್ಯಮಾಂದ್ಯಾದಿಗುಣಗಳೂ ಸೇವಕನಲ್ಲಿರುವುದರಿಂದ ಸೇವಕನು ಪಶುವೆಂದು ಹೇಳುವುದು. ಹಾಗೆ ಜೋತಿಸ್ಸಿನಲ್ಲಿರುವ ಗುಣಗಳಿಂದ ಮಧ್ಯಮೋತ್ತಮಸ್ಥಾನದ ಜ್ಯೋತಿಸ್ಸನ್ನು ಅಗ್ನಿಯೆಂದು ವ್ಯವಹರಿಸುತ್ತಾರೆ. ಮುಖ್ಯಾರ್ಥಸಂಬಂಧದಿಂದ ಹಾಗೆ ಹೇಳುವುದಿಲ್ಲ. ಆದುದರಿಂದ ಅಪ್ರಾಧಾನ್ಯದಿಂದ ಅಗ್ನಿಯು ಮಧ್ಯಮೋತ್ತಮ ಜ್ಯೋತಿಯಾಗುತ್ತದೆಂದು ಹಿಂದೆ ಹೇಳಿರುವುದು ವಿರುದ್ಧವಾಗುವುದಿಲ್ಲ. ಹೀಗೆ ಸೂಕ್ತಗಳಲ್ಲಿ ಯಾರನ್ನು ಪ್ರಧಾನವಾಗಿ ಸ್ತುತಿಸುತ್ತಾರೋ ಯಾರನ್ನು ಉದ್ದೇಶಿಸಿ ಅವಸನ್ನು ಗೂಡುತ್ತಾರೇ ಅವನೇ ಲೋಕ ಪ್ರಸಿದ್ಧವಾದ ಪಾರ್ಥಿವಸ್ಥಾನದ ಅಗ್ನಿಯೆಂದು ತಿಳಿಯಬೇಕು.

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ||

( ಋ. ಸಂ. ೧-೧೬೪-೪೬)

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಹದಿನೆಂಟನೆಯ ಖಂಡವು ಸಮಾಪ್ತವಾದುದು.

## ಅಥ ಏಕೋನವಿಂಶಃ ಖಂಡಃ

## ಹತ್ತೊಂಬತ್ತನೆಯ ಖಂಡವು

**ಜಾತಾವೇದಾಃ ಕಸ್ಮಾಜ್ಜಾತಾನಿ ವೇದ ಜಾತಾನಿ ವೈನಂ ವಿದುರ್ಜಾತೇ ಜಾತೇ ವಿದ್ಯತ ಇತಿ ವಾ ಜಾತವಿತ್ತೋ ವಾ ಜಾತಧನೋ ಜಾತವಿದ್ಯೋ ವಾ ಜಾತಪ್ರಜ್ಞಾನೋ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಮ್ (ಮೈತ್ರಾ-ಸಂ-೧-೮-೨) ತಸ್ಮಾತ್ಸರ್ವಾನೃತೂನ್ ಪಶವೋಽಗ್ನಿಮಭಿಸರ್ಪಂತೀತಿ (ಮೈತ್ರಾ-ಸಂ-೧-೮-೨) ಚ ತಸ್ಯೈಷಾ ಭವತಿ ॥ ೧೯ ॥**

### ಜಾತವೇದಾಃ ಕಸ್ಮಾತ್ ? ಜಾತಾನಿ ವೇದ ॥

ಮೊದಲು ಅಗ್ನಿ. ಜಾತವೇದಾಃ, ವೈಶ್ವಾನರ ಎಂದು ಮೂರು ಶಬ್ದಗಳನ್ನು ಹೇಳಿರುತ್ತಾರೆ. (ನಿರು. ೭–೧) ಅವುಗಳಲ್ಲಿ ಮೊದಲು ಹೇಳಿದ ಅಗ್ನಿಶಬ್ದದ ನಿರ್ವಚನವನ್ನು ತೋರಿಸಿ ಅದರಿಂದ ತೋರುವ ದೇವತಾತತ್ವವನ್ನೂ ವಿವರಿಸಿ ಈಗ ಎರಡನೆಯ ಜಾತವೇದಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಜಾತವೇದಾಃ ಎಂಬುದು ಮಹಾಭಾಗ್ಯದಿಂದಲೂ, ಕರ್ಮಭೇದದಿಂದಲೂ ಪೂರ್ವೋಕ್ತವಾದ ಅಗ್ನಿಯೇ ಆಗಲಿ, ಅಥವಾ ಬೇರೆಯಾಗಿ ಹೇಳಿದ ಸ್ತುತಿಸಂಬಂಧದಿಂದ ಅಗ್ನಿಗಿಂತ ಬೇರೊಂದು ದೇವತೆಯು ಆಗಲಿ ಆದರೆ ಈ ಶಬ್ದ ನಿಷ್ಪನ್ನವಾದುದು ಹೇಗೆ ? ಎಂದು ಪ್ರಶ್ನೆತಾತ್ಪರ್ಯ. ಜಾತಾನಿ ವೇದ. ಎಂಬುದು ಉತ್ತರ. ಈ ಅಗ್ನಿಯು ಲೋಕದಲ್ಲಿ ಹುಟ್ಟಿರುವ ಸಕಲ ಭೂತಗಳನ್ನೂ ತಿಳಿಯುತ್ತಾನೆ. ಈ ಲೋಕದಲ್ಲಿ ಅವನು ತಿಳಿಯದಿರುವ ಯಾವ ವಸ್ತುವೂ ಇಲ್ಲ. ಇದರಿಂದ ಸರ್ವಜ್ಞನೆಂದು ಸಿದ್ಧವಾಗುತ್ತದೆ. ಜಾತ ಎಂಬ ಶಬ್ದವು ಉಪಪದವಾಗಿರುವಾಗ ವಿದ್‌ಧಾತುವಿಗೆ ಅಸುನ್‌ಪ್ರತ್ಯಯ ಬಂದರೆ ಜಾಜವೇದಾಃ ಎಂದಾಗುತ್ತವೆ.

### ಜಾತಾನಿ ವೈನಂ ವಿದುಃ ॥

ಅಥವಾ ಜಾತವಾದ ಸಕಲಲೋಕವೂ ಈ ಅಗ್ನಿಯನ್ನು ತಿಳಿಯುತ್ತಾರೆ. ಪೂರ್ವೋಕ್ತಧಾತುವಿನಿಂದಲೇ ಈ ರೂಪವಾಗಿರುತ್ತದೆ. ಆದರೆ ಕಾರಕಮಾತ್ರ ವ್ಯತ್ಯಾಸವಾಗುತ್ತದೆ. ಅಂದರೆ ಪೂರ್ವದಲ್ಲಿ ಕರ್ತರಿಯಲ್ಲಿ ಅಸುನ್. ಅಗ್ನಿಯು ಸಕಲವನ್ನೂ ತಿಳಿಯುತ್ತಾನೆ ಎಂದರ್ಥ. ಇಲ್ಲಿ ಕರ್ಮಣಿಯಲ್ಲಿ ಅಸುನ್. ಜನ್ಮಹೊಂದಿದ ಸಕಲ ಪ್ರಾಣಿ ಸಂಘದಿಂದಲೂ ಇವನು ತಿಳಿಯಲ್ಪಡುತ್ತಾನೆ ಎಂದರ್ಥ.

**ಜಾತೇ ಜಾತೇ ವಿದ್ಯತ ಇತಿ ವಾ ||**

ಬೇರೊಂದು ರೀತಿಯಿಂದ ವ್ಯುತ್ಪತ್ತಿ ತೋರಿಸುತ್ತಾರೆ. ಸಕಲಭೂತಜಾತದಲ್ಲಿ ಇರುವವನು ಎಂದರ್ಥ. ಈಗ ವಿದಧಾತುವಿಗೆ ಸತ್ತಾರ್ಥ (ಇರುವುದು ಎಂದರ್ಥ) ಹೇಳಬೇಕು. ಹಿಂದೆ ಜ್ಞಾನಾರ್ಥ ಹೇಳಿದೆ. ಈ ಅಗ್ನಿ ಇನದಿರುವ ಪದಾರ್ಥವೇ ಇಲ್ಲ. ಎಲ್ಲಾ ವಸ್ತುಗಳಲ್ಲಿಯೂ ಸೂಕ್ಷ್ಮರೂಪದಿಂದ ಇರುತ್ತಾನೆ ಎಂದರ್ಥ.

**ಜಾತವಿತ್ತೋ ವಾ ಜಾತಧನಃ ||**

ಅಥವಾ ಜಾತಂ ಅಸ್ಯ ವಿತ್ತಂ. ಜಾತವೆಂಬುದು ಪೂರ್ವಪದ. ವಿತ್ತವೆಂಬುದು ಉತ್ತರಪದ. ಯಾವುದು ಜಾತವಾಗಿದೆಯೋ ಅದು ಇವನ ದ್ರವ್ಯವೆಂದರ್ಥ. ಅಥವಾ ಜಾತಂ ಧನಂ ಯಸ್ಯ ಸಃ. ಜಾತವೇದಾಃ || ಧನವೆಂದರೆ ಹವಿಸ್ಸು ಮುಂತಾದವುಗಳು ಅಥವಾ ಐಶ್ವರ್ಯಾದಿಗಳು. ಇವು ಉಳ್ಳವನು ಎಂದರ್ಥ. ಅತ್ವಸಂತಸ್ಯ ಚಾ ಧಾತೋಃ—ಸೂತ್ರದಿಂದ ಉಪಧಾದೀರ್ಘ ಬಂದಿರುತ್ತದೆ.

**ಜಾತವಿದ್ಯೋ ವಾ ಜಾತಪ್ರಜ್ಞಾನಃ ||**

ಹುಟ್ಟಿದೊಡನೆಯೇ ಪ್ರಜ್ಞಾನ ಸ್ವಭಾವನಾದುದರಿಂದ ಪ್ರಕಾಶಿಸುವವನೆಂದರ್ಥ. ಪೃಷೋದರಾದಿಗಣಪಠಿತವಾದುದರಿಂದ ಜಾತವಿದ್ಯ ಎಂಬುದು ಜಾತವೇದಾಃ ಎಂದಾಗಿದೆ. ಅಥವಾ ಜಾತ ಉಂಟಾದ ವೇದ-ಪ್ರಜ್ಞಾನವುಳ್ಳವನು. ಅಥವಾ ಜಾತ ಉಂಟಾದ ವಿಚಾರವುಳ್ಳವನು ಹುಟ್ಟಿದೊಡನೆಯೇ ಅಧಿಕಜ್ಞಾನವನ್ನೂ ವಿಚಾರವನ್ನೂ ಪಡೆದವನೆಂದರ್ಥ.

**ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಂ ಇತಿ ಬ್ರಾಹ್ಮಣಮ್.**

ವಿದಧಾತುವಿತ ಜ್ಞಾನಾರ್ಥವನ್ನಾಶ್ರಯಿಸಿ ಹಿಂದೆ ನಾನಾವಿಧ ವ್ಯುತ್ಪತ್ತಿಯನ್ನು ತೋರಿಸಿದುದಾಯಿತು. ಈ ಪ್ರಾಪ್ತ್ಯರ್ಥವೂ ಇದೆಯೆಂದು ಆದರಿಂದುಂಟಾಗುವ ವ್ಯುತ್ಪತ್ತಿಯನ್ನು ಬ್ರಾಹ್ಮಣದಲ್ಲಿ ಹೇಳಿರುವುದನ್ನು ವಿವರಿಸುತ್ತಾರೆ. ಇವನು ಹುಟ್ಟಿದೊಡನೆಯೇ ಸ್ವಭಾವದಿಂದಲೇ ಹೇರಳವಾದ ಪಶುಗಳನ್ನು ಹೊಂದಿದನು. ಆದುದರಿಂದ ಜಾತವೇದಾಃ ಎಂಬ ಹೆಸರು ಬಂದಿದೆ.

**ತಸ್ಮಾತ್ಸರ್ವಾನೃತೂನ್ಪಶವೋಽಗ್ನಿಮಭಿಸರ್ಪಂತಿ ಇತಿ ಚ | ತಸ್ಯೈಷಾಭವತಿ ||**

ಅಗ್ನಿಯು ಪಶುಸ್ವಾಮಿಯಾದುದರಿಂದಲೇ ಪಶುಗಳೆಲ್ಲವೂ ಅವನನ್ನು ತಮ್ಮ ಸ್ವಾಮಿಯೆಂದೂ ತಿಳಿದು ಆವನ ಸಂಬಂಧವಾದ ವಸಂತದಲ್ಲಿ ಅತಿ ಸಂತೋಷದಿಂದ ಪರಿಪುಷ್ಟವಾದ ಅವಯವಗಳಿಂದ ಶೋಭಿಸುತ್ತವೆ. ಗ್ರೀಷ್ಮಕಾಲದಲ್ಲಿ ಪರಿತಪಿಸುತ್ತಿದ್ದರೂ ಅಭಿವೃದ್ಧಿಯನ್ನು ಹೊಂದಿರುತ್ತವೆ. ಅಂದರೆ ಶಿಶಿರಋತುವಿನಲ್ಲಿ ಹುಲ್ಲು ಮುಂತಾದವುಗಳಿಲ್ಲದೆ ಗಳಿ ಪಡೆದು ಪರಿಪುಷ್ಟವಾಗಿ ಬೆಳೆದುದರಿಂದ ಗ್ರೀಷ್ಮಕಾಲ ಸಂತಾಪಕವಾಗಿದ್ದರೂ ಶರೀರದಾರ್ಢ್ಯವನ್ನು ಪಡೆದಿರುತ್ತವೆ. ಎಂದು ತಾತ್ಪರ್ಯ. ಆದುದರಿಂದ

ಬ್ರಾಹ್ಮಣದಲ್ಲಿ ಅಗ್ನಿಗೆ ಪಶುಸ್ವಾಮಿತ್ವ ಹೇಳಿರುವುದು ಸಂಗತವಾಗಿರುತ್ತದೆ. ಮುಂದೆ ಹೇಳುವ ಋಕ್ ಜಾತವೇದಸ್ಸಿನಸ್ತುತಿಗೆ ಉದಾಹರಣೆಯಾಗುತ್ತದೆ.

ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಹತ್ತೊಂಬತ್ತನೆಯ ಖಂಡ ಸಮಾಪ್ತವಾಗಿದೆ.

---

## ಅಥ ವಿಂಶತಿಃ ಖಂಡಃ

### ಇಪ್ಪತ್ತನೆಯ ಖಂಡವು

ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಮ್ । ಇದಂ ನೋ ಬರ್ಹಿರಾಸದೇ (ಋ-ಸಂ-೧೦-೧೮೮-೧) ಪ್ರಹಿಣುತ ಜಾತವೇದಸಂ ಕರ್ಮಭಿಃ ಸಮಶ್ನುವಾನಮಪಿ ವೋಪಮಾರ್ಥೇ ಸ್ಯಾದಶ್ವಮಿವ ಜಾತವೇದಸಮಿತೀದಂ ನೋ ಬರ್ಹಿರಾಸೀದತ್ವಿತಿ ತದೇತದೇಕಮೇವ ಜಾತವೇದಸಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋನು ಮಧ್ಯಮಃ । ಅಭಿ ಪ್ರವಂತ ಸಮನೇವ ಯೋಷಾ ಇತಿ ತತ್ಪುರಸ್ತಾದ್ವ್ಯಾಖ್ಯಾತಮ್ । (ನಿರು-೭-೧೭) ಅಥಾಸಾವಾದಿತ್ಯ ಉದು ತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮೋ ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಚ್ಯತೇಽಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥ ೨೦ ॥

ಜಾತವೇದಸ್ಪದದ ನಿರ್ವಚನವನ್ನು ಪೂರ್ವಖಂಡದಲ್ಲಿ ವಿವರಿಸಿ ಇಲ್ಲಿ ಅದರ ಸ್ತುತಿಗೆ ಉದಾಹರಣೆಯನ್ನು ತೋರಿಸುತ್ತಾರೆ.

ಜಾತವೇದಸ ಇತಿ ಜಾತವೇದಸ್ಯಾಂ ನೈವಂ ಜಾತವೇದಸೇಽರ್ಚಾಯ ಸುನವಾಮ ಸೋಮಮಿತಿ ಪ್ರಸವಾಯ ಅಭಿಷವಾಯ ಸೋಮಂ ರಾಜಾನಮಮೃತಮರಾತೀಯತೋ ಯಜ್ಞಾರ್ಥಮನಿಸ್ಮೋ-ನಿದಹಾತಿ ನಿಶ್ಚಯೇನ ದಹತಿ ಭಸ್ಮೀಕರೋತಿ । ಸೋಮೋ ದದದಿತ್ಯರ್ಥಃ । ಸನಃ ಪರ್ಷದತಿ-ದುರ್ಗಾಣಿ ವಿಶ್ವಾನಿ ದುರ್ಗಮಾಣಿ ಸ್ಥಾನಾನಿ ನಾವೇವ ಸಿಂಧುಂ ನಾವಾ ಸಿಂಧುಂ ಸಿಂಧುಂ ನಾವಾ ನದೀಂ ಜಲದುರ್ಗಾಂ ಮಹಾಕೂಲಾಂ ತಾರಯತಿ ದುರಿತಾತ್ಯಗ್ನಿರಿತಿ ದುರಿತಾನಿ ತಾರಯತಿ । ತಸ್ಮೈಷಾಽಪರಾ ಭವತಿ ॥

ಈ ಭಾಷ್ಯಭಾಗವು ದುರ್ಗಾಚಾರ್ಯರಿಂದ ಸ್ವೀಕೃತವಾಗಿಲ್ಲ. ಉಪಸಂಹಾರದಲ್ಲಿಯೂ ಹೇಳಿಲ್ಲ. ಇಲ್ಲಿ ಕೆಲವುಕಡೆ ಅಸಮಂಜಸವಾದ ಅರ್ಥವನ್ನೇ ತಿಳಿಸುತ್ತದೆ. ಈ ಮಂತ್ರವು ಉದಾಹರಣೆಯಾಗುವುದಾದರೆ ಮುಂದೆ ತದೇಕಮೇವ—ಎಂಬ ನಿರುಕ್ತ ವಾಕ್ಯವು ಸಂಗತವಾಗಲಾರದು. ಆದರೂ ಅನೇಕ ಪ್ರಾಚೀನಪುಸ್ತಕಗಳಲ್ಲಿರುವುದರಿಂದ ಅದನ್ನು ಇಲ್ಲಿ ಹೇಳಿದೆ. ಮುಂದೆ ಹೇಳುವ ಋಕ್ಕು ಜಾತವೇದಸ್ಸಿನ ಸ್ತುತಿಗೆ ಮುಖ್ಯವಾದ ಉದಾಹರಣೆಯೆಂದು ತಿಳಿಯಬೇಕು.

ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಮ್ ||
ಇದಂ ನೋ ಬರ್ಹಿರಾಸದೇ ||

(ಋ. ಸಂ. ೮-೮-೪೬-೧)

ಜಾತವೇದೋ ದೇವತೆಯ ಸ್ತುತಿಗೆ ಇದು ಉದಾಹರಣೆ. ಅಗ್ನಿಯೇ ಜಾತವೇದಸ್ಪದದಿಂದ ಇಲ್ಲಿ ಹೇಳಿದೆ.

ಪ್ರಹಿಣುತ ಜಾತವೇದಸಂ ಕರ್ಮಭಿಃ ಸಮಶ್ನುವಾನಮಪಿ ವೋಪ-
ಮಾರ್ಥೇ ಸ್ಯಾತ್ ಅಶ್ವಮಿವ ಜಾತವೇದಸಮಿತೀದಂನೋ
ಬರ್ಹಿರಾಸೀದತ್ವಿತಿ ||

ಜಾತವೇದನನ್ನು ಸ್ತುತಿಗಳಿಂದ ಪ್ರೇರೇಪಿಸಿರಿ. ಅಶ್ವಂ ಎಂಬುದು ಅದಕ್ಕೆ ವಿಶೇಷಣ. ಇದಕ್ಕೆ ಎರಡು ಅರ್ಥವನ್ನು ವಿವರಿಸುತ್ತಾರೆ. ಅಶೂ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಅಂಗೀಕರಿಸಿ ಕರ್ಮಭಿಃ ಸಮಶ್ನುವಾನಂ ಎಂದು ಒಂದರ್ಥ. ಆಯಾಯ ಕ್ರಿಯೆಯಿಂದ ಸಕಲಜಗತ್ತನ್ನು ವ್ಯಾಪಿಸಿರುವನೆಂದರ್ಥ. ಅಥವಾ ಅಶ್ವಂ ಎಂಬುದೇ ಲುಪ್ತೋಪಮಪದ. ಇವ ಎಂಬುದು ಲುಪ್ತವಾಗಿದೆ. ಹಿಂದೆ ಹೇಳಿರುವುದು ಯೌಗಿಕವಾದ ಅರ್ಥ. ಯೋಗಾರ್ಥಕ್ಕಿಂತಲೂ ರೂಢ್ಯರ್ಥಕ್ಕೇ ಪ್ರಾಬಲ್ಯವಿರುವುದರಿಂದ ಅಶ್ವಶಬ್ದವು ಕುದುರೆಯೆಂಬ ಅರ್ಥವನ್ನೇ ರೂಢಿಯಿಂದ ಬೋಧಿಸುತ್ತದೆ. ಕುದುರೆಯಂತೆ ವೇಗವುಳ್ಳವನೆಂದರ್ಥ. ನಮ್ಮ ಇಷ್ಟಾರ್ಥವನ್ನು ಸಾರ್ಥಕಗೊಳಿಸಲು ಅಭಿಮುಖವಾಗಿ ಹೇಗೆ ಬಂದು ಸೇರುವನೋ ಅದಕ್ಕಾಗಿ ಸ್ತುತಿಯಿಂದ ಚೆನ್ನಾಗಿ ಅಭಿವೃದ್ಧಿಗೊಳಿಸಿರಿ ಎಂದರ್ಥ.

ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದ(ದಾ)
ಶತಯೀಷು ವಿದ್ಯತೇ ||

ದಶಮಂಡಲದಿಂದ ವಿಸ್ತರಹೊಂದಿರುವುದು ಋಗ್ವೇದವೆಂದು ಹಿಂದೆ ಹೇಳಿದೆ. ಅದರಲ್ಲಿ ಹುಡುಕಿ ತಿಳಿಯಬೇಕಾದುದರಿಂದ ತತ್ ಎಂದು ಪರೋಕ್ಷನಿರ್ದೇಶಮಾಡಿದೆ. ಏತತ್ ಎಂದು ಈಗತಾನೇ ಉದಾಹೃತವಾದುದರಿಂದ ಸಾಂನಿಧ್ಯವನ್ನು ತಿಳಿಸುತ್ತದೆ. ಋಗ್ವೇದದಲ್ಲಿ ಇದೊಂದೇ ಮಂತ್ರವು ಜಾತವೇದ ಅಂದರೆ ಅಗ್ನಿದೇವತಾಕವಾಗಿ ಗಾಯತ್ರೀ ಛಂದಸ್ಸಿನಿಂದ ಕೂಡಿದ್ದು ಮೂರು ಋಕ್ಕುಗಳಿಂದ ಕೂಡಿರುತ್ತದೆ ಎಂದರ್ಥ. ತೃಚಂ ಎಂದು ಸೂಕ್ತದ ಸಂಖ್ಯಾ ನಿಯಮವನ್ನು ತಿಳಿಸುತ್ತದೆ. ತ್ರಿ+ಋಕ್ ಎಂದಿರುವಾಗ ಋಚಿ ತ್ರೇರುತ್ತರಪದಾದಿಲೋಪಶ್ಚ ಛಂದಸಿ ಎಂಬ ಸೂತ್ರದಿಂದ ಸಂಪ್ರಸಾರಣ (ಋಕಾರ) ಪೂರ್ವರೂಪ, ಋಕ್ಕಿನ ಋಕಾರಕ್ಕೆ ಲೋಪ, ಸಮಾಸದಲ್ಲಿ ಅಚ್ ಬಂದು ತೃಚ ಎಂದಾಗಿದೆ.

**ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ॥**

ಗಾಯತ್ರೀ ಛಂದಸ್ಸಿನಲ್ಲಿರುವ ಅಗ್ನಿದೇವತಾಕವಾದ ಮಂತ್ರಗಳು ಜಾತವೇದೋಲಿಂಗಗಳಿಲ್ಲದಿದ್ದರೂ ಜಾತವೇದಸಂಬಂಧವಾದ ಮಂತ್ರಸ್ಥಾನಗಳಲ್ಲಿ ಶಾಸ್ತ್ರದಿಂದಲೇ ವಿನಿಯೋಗಿಸಲ್ಪಡುತ್ತವೆ. ಅಧಿಯಜ್ಞದಲ್ಲಿ ಅನೇಕ ಗಾಯತ್ರೀಛಂದೋಯುಕ್ತವಾದ ಜಾತವೇದೋದೇವತಾಕವಾದ ಮಂತ್ರಗಳಿಂದ ಪ್ರಯೋಜನವಿರುತ್ತದೆ. ಆದರೆ ಸಂಪೂರ್ಣವಾದ ಋಗ್ವೇದದಲ್ಲಿ ಪೂರ್ವೋಕ್ತವಾದ ಒಂದು ತೃಚ ಸೂಕ್ತವನ್ನು ಬಿಟ್ಟರೆ ಬೇರೆ ಯಾವ ಋಕ್ಕುಗಳು ಇಲ್ಲವೇ ಇಲ್ಲ. ಇದರಿಂದ ಹಿಂದೆ ಹೇಳಿದಂತೆ ಕರ್ಮ ಬೇರೆಯಾದುದರಿಂದಲೂ, ಮಹಾಭಾಗ್ಯದಿಂದಲೂ ಅಗ್ನಿಯೇ ಜಾತವೇದಸ್ಸಾಗುತ್ತದೆಂದು ತಿಳಿಯಬೇಕು ಆಗ ಅಗ್ನಿಯ ಋಕ್ಕುಗಳನ್ನು ಅಲ್ಲಿ ಹೇಳುವುದರಿಂದ ಬಹುತ್ವಸಂಗತವಾಗುತ್ತದೆ. ಇಲ್ಲವಾದರೆ ಒಂದು ದೇವತೆಯನ್ನು ಇನ್ನೊಂದು ದೇವತೆಯ ಸ್ಥಾನದಲ್ಲಿ ಪ್ರಯೋಗಿಸಿದರೆ ಕರ್ಮವೈಕಲ್ಯವುಂಟಾಗುತ್ತದೆ. ಹೀಗೆಯೇ ವೈಶ್ವಾನರಾದಿಪದವಿದ್ದಲ್ಲಿಯೂ ತಿಳಿಯಬೇಕು.

**ಸ ನ ಮನ್ಯೇತಾಯುಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ**

**ಜಾತವೇದಸೀ ಉಚ್ಯೇತೇ ತತೋ ನು ಮಧ್ಯಮಃ ।**

**ಅಭಿಪ್ರವಂತ ಸಮನೇವ ಯೋಷಾಃ ॥**

**ತತ್ಪುರಸ್ತಾದ್ವ್ಯಾಖ್ಯಾತಮ್ ॥**

ಹಿಂದಿನಂತೆ ಜಾತವೇದ ಅಂದರೆ ಅಗ್ನಿ ಒಂದೇ ಎಂದು ತಿಳಿಯಬಾರದು ಎಂದು ಪೂರ್ವಪಕ್ಷಸಿದ್ಧಾಂತವನ್ನು ತೋರಿಸುತ್ತಾರೆ. ಆದರೆ ಹಿಂದೆ ಅಗ್ನಿವಿಶೇಷ್ಯವಾಗಿ ಇತರ ಪದಗಳು ಗುಣವಾಗಿದ್ದವು. ಇಲ್ಲಿ ಜಾತವೇದಪದದ ವಿಚಾರವಾದುದರಿಂದ ಜಾತವೇದಾಃ ಎಂಬುದು ವಿಶೇಷ್ಯವಾಗಿ ಅಗ್ನ್ಯಾದಿಗಳು 'ಗುಣಗಳೆಂದು ತಿಳಿಯಬೇಕು. ಜಾತವೇದದಿಂದ ಮಧ್ಯಮೋತ್ತಮ ಜ್ಯೋತಿಸ್ಸುಗಳನ್ನೂ ತೆಗೆದುಕೊಳ್ಳಬೇಕು. ಅಭಿಪ್ರವಂತ ಎಂದು ಅಂದೆ ಹೇಳಿರುವುದನ್ನೇ ಇಲ್ಲಿ ಉದಾಹರಿಸಿರುವುದರಿಂದ ವ್ಯಾಖ್ಯಾನ ಹಿಂದಿನಂತೆಯೇ ತಿಳಿಯಬೇಕು.

**ಅಥಾಸಾವಾದಿತ್ಯಃ ॥**

**ಉದು ತ್ಯಂ ಜಾತವೇದಸಮ್ ॥**

(ಋ. ಸಂ. ೧-೪-೬)

**ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥**

ಮಧ್ಯಮೋತ್ತಮ ಜ್ಯೋತಿಗಳು ಜಾತವೇದಪದದಿಂದ ಹೇಳಿರುವುದಕ್ಕೆ ಉದಾಹರಣೆ ತೋರಿಸುತ್ತಾರೆ. ಉದುತ್ಯಂ ಆದಿತ್ಯನೇ ಜಾತವೇದಪದದಿಂದ ಅಭಿಹಿತನಾದುದರಿಂದ ಜಾತವೇದ ಅಂದರೆ ಅಗ್ನಿಯೊಂದೇ ಎಂದು ತಿಳಿಯಬಾರದು. ಮಂತ್ರದ ಪ್ರತಿಪದದ ವ್ಯಾಖ್ಯಾನವನ್ನೂ ಮುಂದೆ ತಿಳಿಸುತ್ತೇವೆಂದು ಪ್ರತಿಜ್ಞೆಮಾಡುತ್ತಾರೆ. ವಿಶೇಷಣವಿಶೇಷ್ಯಗಳಿಗೆ ಸಾಮಾನಾಧಿಕರಣ್ಯ ಪ್ರಸಿದ್ಧವಾದುದರಿಂದ ಇಲ್ಲಿಯೇ ಜಾತವೇದಾಃ ಅಂದರೆ ಸೂರ್ಯನೇ ಆಗುತ್ತಾನೆ.

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ಜಾತವೇದಾಃ । ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥ ೨೦ ॥**

ಪೂರ್ವಪಕ್ಷಕ್ಕೆ ಸಮಾಧಾನ ಹಿಂದಿನಂತೆಯೇ ವಿವರಿಸುತ್ತಾರೆ. ಪ್ರಸಿದ್ಧಿಯೇ ವಿಶೇಷ ವ್ಯವಹಾರಕ್ಕೆ ಕಾರಣವಾದುದರಿಂದ ಮಂತ್ರದರ್ಶನವು ಮೂರು ಜ್ಯೋತಿಗಳಿಗೆ ಸಮಾನವಾದರೂ ಪ್ರಸಿದ್ಧಿಯಿಂದ ವಿಶೇಷಾರ್ಥವನ್ನು ನಿರ್ಣಯಿಸಬೇಕು. ಜಾತವೇದ ಎಂಬುದು ಪ್ರಸಿದ್ಧಿಯಿಂದ ಅಗ್ನಿಯನ್ನು ಬೋಧಿಸಿದಂತೆ ಇದರ ಜ್ಯೋತಿಗಳನ್ನು ತಿಳಿಸುವುದಿಲ್ಲ. ಹಾಗಾದರೆ ಸೂರ್ಯನನ್ನು ಹೇಳುತ್ತದೆಂದ ಹಿಂದೆ ಹೇಳಿದುದು ಹೇಗೆ ಎಂದು ಶಂಕಿಸಿದರೆ ನಿಪಾತಮೇವೈತೆ—ಎಂದು ಹಿಂದಿನಂತೆಯೇ ಸಮಾಧಾನ ತೋರಿಸುತ್ತಾರೆ. ವೈದ್ಯುತ ಅಥವಾ ಸೂರ್ಯನನ್ನು ಹೇಳುವುದಾದರೆ ಅದು ಗೌಣವೆಂದು ತಿಳಿಯಬೇಕು ಮುಖ್ಯವಾಗಿ ಇದು ಪಾರ್ಥಿವಾಗ್ನಿಯನ್ನೇ ಹೇಳುತ್ತದೆಂದು ತಾತ್ಪರ್ಯ.

**ಪ್ರ ನೂನಂ ಜಾತವೇದಸಷುಸ್ವಂ ಹಿನೋತ ವಾಜಿನಂ ।**
**ಇದಂ ನೋ ಬರ್ಹಿರಾಸದೇ ॥**

(ಋ. ಸಂ. ೬೦–೩೮೮–೧)

ಇದರ ಅರ್ಥವು—

ಎಲೈ ಋತ್ವಿಗ್ಯಜಮಾನರೇ, ಸಮಸ್ತ ಯಜ್ಞಾದಿ ಕರ್ಮಗಳಲ್ಲಿ ಮುಖ್ಯ ಪಾತ್ರ ವಹಿಸಿ ವ್ಯಾಪಿಸಿರುವವನೂ ಅನ್ನವಂತ ಅನ್ನವಂತನೂ ಆದ ಆ ಜಾತವೇದಾಖ್ಯ ಅಗ್ನಿಯನ್ನು ನಮ್ಮ ಈ ದರ್ಭಾಸನದ ಮೇಲೆ ಬಂದು ಕುಳಿತುಕೊಳು ವುದಕ್ಕಾಗಿ (ಅಶ್ವವನ್ನು ಪ್ರೇರಿಸುವಂತೆ ಸ್ತುತಿಗಳಿಂದ) ಅವಶ್ಯಕವಾಗಿ ಪ್ರೇರಿಸಿರಿ.

ಜಾತವೇದಾಖ್ಯ ಅಗ್ನಿಯನ್ನು ವಿವರಿಸುವ ಋಕ್ಕಿನ ಉದಾಹರಣೆಗಾಗಿ ಯಾಸ್ಕರು **ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧–೯೯–೧) ಎಂಬ ಋಕ್ಕನ್ನು ಪ್ರಕೃತ **ಪ್ರ ನೂನಂ** ಎಂಬ ಋಕ್ಕನ್ನು ತೆಗೆದುಕೊಂಡು ಈ ಋಕ್ಕು ಗಳಿಗೆ ನಿರುಕ್ತವನ್ನು ಹೇಳಿದ್ದಾರೆ—

**ಜಾತವೇದಾಃ । ಜಾತವೇದಾಃ ಕಸ್ಮಾತ್ । ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾ ಜಾತಧನಃ । ಜಾತವಿದ್ಯೋ ವಾ ಜಾತಪ್ರಜ್ಞಾನಂ । ಯತ್ತ ಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾ ನೃತೂನ್ ಪಶವೋಽಗ್ನಿಮಗ್ನಿಮಭಿಸರ್ಪಂತೀತಿ ಚ ॥** (ನಿ. ೭–೧೯)

ಅಗ್ನಿಗೆ ಜಾತವೇದಾಃ ಎಂಬ ಹೆಸರು ಏತಕ್ಕೆ ಬಂದಿತು ಎಂದರೆ ಈ ಅಗ್ನಿಯು **ಜಾತಾನಿ ವೇದ**—ಉತ್ಪನ್ನವಾದ ಸಮಸ್ತ ವಸ್ತುಗಳನ್ನೂ ತಿಳಿದಿರುವವನು; **ಜಾತಾನಿ ವೈನಂ ವಿದುಃ**—ಉತ್ಪನ್ನವಾದ ಸಮಸ್ತ ಪ್ರಾಣಿಗಳೂ ಈ ಅಗ್ನಿಯನ್ನು ತಿಳಿದಿರುವವು; **ಜಾತೇ ಜಾತೇ ವಿದ್ಯತ ಇತಿ ವಾ**—ಉತ್ಪನ್ನವಾದ ಸಕಲ ಪ್ರಾಣಿಗಳಲ್ಲಿಯೂ ವ್ಯಾಪಿಸಿರುವನು; **ಜಾತವಿತ್ತೋ ವಾ ಜಾತಧನೋ ವಾ**—ಉತ್ಪನ್ನವಾದ ಸಮಸ್ತ ಧನವೂ ಇವನಬಳಿ ಇರುವುದು; **ಜಾತವಿದ್ಯೋ ವಾ ಜಾತಪ್ರಜ್ಞಾನಃ**—ಈ ಅಗ್ನಿಯು ಉತ್ಪನ್ನವಾಗುವಾಗಲೇ ಸಮಸ್ತ ವಿದ್ಯೆಗಳನ್ನು ಅಥವಾ ಜ್ಞಾನವನ್ನು ಹೊಂದಿರುವನೆಂದು ಅರ್ಥವು. ಇದಲ್ಲದೆ,

ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನ್ನೃತೂನ್ ಪಶವೋಽಗ್ನಿಮಭಿಸರ್ಪಂತೀತಿ— ಈ ಅಗ್ನಿಯು ಉತ್ಪನ್ನವಾದಕೂಡಲೆ ಇವನು ಪಶುಗಳನ್ನು ಪಡೆದನು ಎಂದರೆ ಅಗ್ನಿಯಲ್ಲಿ ಪಶುಗಳನ್ನು ಹೋಮಮಾಡುವರು. ಆದ್ದರಿಂದ ಈ ಕಾರಣಗಳಿಗಾಗಿ ಅಗ್ನಿಗೆ ಜಾತವೇದಾಃ ಎಂಬ ಹೆಸರು ಬಂದಿದೆ. ಈ ವಿಷಯದಲ್ಲಿ ಮೇಲಿನ ಬ್ರಾಹ್ಮಣ ವಾಕ್ಯವು ಇದನ್ನು ಸಮರ್ಥಿಸುವುದು. ಆದ್ದರಿಂದ ಸಮಸ್ತ ಋತುಗಳಲ್ಲಿಯೂ ಪಶುಗಳನ್ನು ಅಗ್ನಿಯಲ್ಲಿ ಹೋಮ ಮಾಡುವರು. ಈ ಜಾತವೇದಾಗ್ನಿಯನ್ನು ಸ್ತುತಿಸುವ ಋಕ್ಕು ಈ ರೀತಿ ಇದೆ—

> ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ಜಾತವೇದಸ ಇತಿ ಜಾತವೇದಸ್ಯಾಂ ವೈವಂ ಜಾತವೇದಸೇಽರ್ಚಾಯ ಸುನವಾಮ ಸೋಮಮಿತಿ ಪ್ರಸವಾಯಾಭಿಷವಾಯ ಸೋಮಂ ರಾಜಾನಮಮೃತಮರಾತೀಯತೋ ಯಜ್ಞಾರ್ಥಮನಿಸ್ಮೋ ನಿದಹಾತಿ ನಿಶ್ಚಯೇನ ದಹತಿ ಭಸ್ಮೀ ಕರೋತಿ ಸೋಮೋ ದದದಿತ್ಯರ್ಥಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾನಿ ದುರ್ಗಮಾನಿ ಸ್ಥಾನಾನಿ ನಾವೇವ ಸಿಂಧುಂ ಸಿಂಧುಂ ನಾನಾ ನದೀಂ ಜಲದುರ್ಗಾಂ ಮಹಾಕೂಲಾಂ ತಾರಯತಿ ದುರಿತಾತ್ಯಗ್ನಿರಿತಿ ದುರಿತಾನಿ ತಾರಯತಿ ॥ (ನಿ. ೭-೨೦)

ಜಾತವೇದಾಗ್ನಿಗಾಗಿ ನಾವು ಸೋಮರಸವನ್ನು ಹಿಂಡುತ್ತೇವೆ. ಅಥವಾ ಈ ಜಾತವೇದಾಗ್ನಿಯು ಪೂಜಾರ್ಹನಾಗಿರುವುದರಿಂದ ಈ ಅಗ್ನಿಯ ಪ್ರೀತ್ಯರ್ಥವಾಗಿ ನಾವು ಸೋಮರಸವನ್ನು ಹಿಂಡುತ್ತೇವೆ. ನಾವು ಹಿಂಡಿ ಸಿದ್ಧಪಡಿಸುವ ಸೋಮರಸವನ್ನು ಅಥವಾ ರಾಜನಾದ ಈ ಸೋಮನನ್ನು ಈ ಅಗ್ನಿಯು ಯಜ್ಞಾರ್ಥನಾಗಿ ದಹಿಸುತ್ತಾನೆ ಎಂದರೆ ಸುಟ್ಟು ಭಸ್ಮಮಾಡುತ್ತಾನೆ. ಎಂದರೆ ಅಗ್ನಿಯು ಸೋಮಾಹುತಿಯನ್ನರ್ಪಿಸುವಂತೆ ಮಾಡುತ್ತಾನೆ. ನಾವೆಯು ಅಥವಾ ದೋಣಿಯು ನಮ್ಮನ್ನು ದಾಟಲಸಾಧ್ಯವಾದುದೂ, ಆಳವಾದುದೂ, ಅಗಲವಾದುದೂ, ಪ್ರವಾಹಗಳಿಂದ ಕೂಡಿರುವುದೂ ಆದ ನದಿಯನ್ನು ದಾಟಿಸುವಂತೆ ಈ ಜಾತವೇದಾಗ್ನಿಯು ನಮ್ಮನ್ನು ಅನೇಕ ಸಂಕಟಗಳಿಂದಲೂ ಪಾಪಗಳಿಂದಲೂ ದಾಟಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು. ಈ ಜಾತವೇದಾಗ್ನಿಯನ್ನು ಪ್ರಶಂಸಿಸುವ ಇನ್ನೂ ಒಂದು ಋಕ್ಕನ್ನು ವಿವರಿಸಲಾಗುವುದು—

> ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ । ಇದಂ ನೋ ಬರ್ಹಿರಾಸದೇ ॥ ಪ್ರಹಿಣುತ ಜಾತವೇದಸಂ ಕರ್ಮಭಿಃ ಸಮಶ್ನುವಾನಮಪಿ ವೋಪಮಾರ್ಥೇ ಸ್ಯಾದಶ್ವಮಿವ ಜಾತವೇದಸಮಿತೀದಂ ನೋ ಬರ್ಹಿರಾಸೀದತ್ವಿತಿ ॥

ಎಲೈ ಋತ್ವಿಕ್ಕುಗಳೇ, ಸರ್ವವ್ಯಾಪ್ತನಾದ ಈ ಜಾತವೇದಾಗ್ನಿಯನ್ನು ನಮ್ಮ ಯಜ್ಞಾದಿ ಕರ್ಮಗಳಿಂದ ಸ್ತುತಿಸಿ ಪ್ರೇರಿಸಿರಿ ಅಥವಾ ಇಲ್ಲಿರುವ ಅಶ್ವ ಶಬ್ದವು ಉಪಮಾರ್ಥವಾಗಿಯೂ ಉಪಯೋಗಿಸಲ್ಪಟ್ಟಿರಬಹುದು. ಎಲೈ ಋತ್ವಿಕ್ಕುಗಳೇ, ಅಶ್ವವನ್ನು ಪ್ರೇರಿಸುವಂತೆ ಈ ಅಗ್ನಿಯನ್ನು ಸ್ತುತಿಗಳಿಂದ ಪ್ರೇರಿಸಿರಿ ಎಂದು ಇಲ್ಲಿ ಅರ್ಥವು. ಈ ಅಗ್ನಿಯು ನಾವು ಹರಡಿರುವ ಈ ದರ್ಭಾಸನದಮೇಲೆ ಕುಳಿತುಕೊಳ್ಳಲಿ ಎಂದಭಿಪ್ರಾಯವು.

> ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನಂ ಯುಜ್ಯತೇ ॥ (ನಿ. ೭-೨೦)

ಋಗ್ವೇದದ ಹತ್ತುಮಂಡಲಗಳಲ್ಲಿಯೂ ಜಾತವೇದಸ್ಸನ್ನು ಪ್ರತ್ಯಕ್ಷವಾಗಿ ಸ್ತುತಿಸುವ ಸೂಕ್ತವು ಇದೊಂದೇ, ಬೇರೆ ಇಲ್ಲ. ಇದು ಗಾಯತ್ರೀಛಂದಸ್ಕವಾಗಿರುವುದು. ಅಗ್ನಿಯಲ್ಲಿರುವ ಗುಣಗಳು ಜಾತವೇದಾಗ್ನಿಯಲ್ಲಿಯೂ ಇರುವುದರಿಂದ ಪಾರ್ಥಿವಾಗ್ನಿಯನ್ನೇ ಅನೇಕ ಸಂದರ್ಭಗಳಲ್ಲಿ ಜಾತವೇದಾಗ್ನಿಯೆಂದು ಸ್ತುತಿಸಲಾಗಿದೆ.

ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋ ನು ಮಧ್ಯಮಃ । ಅಭಿ ಪ್ರವಂತ ಸಮನೇವ ಯೋಷಾ ಇತಿ ತತ್ ಪುರಸ್ತಾದ್ವ್ಯಾಖ್ಯಾತಮಥಾಸಾವಾದಿತ್ಯ ಉದುತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ " (ನಿ. ೭-೨೦)

ಆದರೆ ಜಾತವೇದಾಗ್ನಿಯ ಗುಣಗಳೆಲ್ಲವೂ ಪಾರ್ಥಿವಾಗ್ನಿಗೆ ಮಾತ್ರ ಅನ್ವಯಿಸುವುದೆಂದು ತಿಳಿಯಬಾರದು. ಮೇಲಿರುವ ಎರಡು ಜ್ಯೋತಿಗಳೂ ಎಂದರೆ ವಿದ್ಯುದಗ್ನಿ ಮತ್ತು ಸೂರ್ಯ ಎಂಬ ಎರಡು ಜ್ಯೋತಿಗಳೂ ಜಾತವೇದಾಃ ಎಂದೇ ವ್ಯವಹರಿಸಲ್ಪಡುವವು. ಅಭಿ ಪ್ರವಂತ ಸಮನೇವ ಯೋಷಾ ಎಂಬ ಶ್ರುತಿವಾಕ್ಯವು ಈ ವಿಷಯದಲ್ಲಿ ಮಧ್ಯಮಾಗ್ನಿ (ವೈದ್ಯುತಾಗ್ನಿ) ಯನ್ನು ಸೂಚಿಸುವುದಾಗಿದೆ. ಈ ವಾಕ್ಯವನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಈ ಜಾತವೇದಾಗ್ನಿಯು ಸೂರ್ಯನು ಎಂಬ ವಿಷಯದಲ್ಲಿ ಉದುತ್ಯಂ ಜಾತವೇದಸಂ ಎಂಬ (ಋ. ಸಂ. ೧-೫೦-೧) ಋಕ್ಕನ್ನು ಮುಂದೆ ವಿವರಿಸುತ್ತೇವೆ.

ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥ (ನಿ. ೭-೨೦)

ಅಗ್ನಿಯು ಮೂರು ಸ್ಥಾನಗಳಲ್ಲಿ ಪಾರ್ಥಿವಾಗ್ನಿ ವೈದ್ಯುತಾಗ್ನಿ ಸೂರ್ಯ ಎಂಬ ಹೆಸರುಗಳಿಂದ ಇದ್ದರೂ ಈ ಪಾರ್ಥಿವಾಗ್ನಿಯಲ್ಲಿಯೇ ಹವಿರಾದಿಗಳನ್ನು ಹೋಮ ಮಾಡುವರು. ಈ ಅಗ್ನಿಯೇ ಜಾತವೇದಾಃ ಎಂದು ಕರೆಯಲ್ಪಡುವುದು. ಉಳಿದ ಎರಡು ವಿಧ ಅಗ್ನಿಗಳು ಎಂದರೆ ವೈದ್ಯುತಾಗ್ನಿ ಮತ್ತು ಸೂರ್ಯ ಇವರುಗಳಮೂಲಕ ಹೋಮ ಮಾಡುವುದಿಲ್ಲ. ಅವರನ್ನೂ ಪ್ರಸಂಗವಶದಿಂದ ಜಾತವೇದಶ್ಶಬ್ದದಿಂದ ಸ್ತುತಿಸಲಾಗಿರುವುದು. ಆದ್ದರಿಂದ ಜಾತವೇದಾಗ್ನಿಯಲ್ಲಿ ಹವಿರಾದಿಗಳನ್ನು ಹೋಮ ಮಾಡುವುದು ಎಂದು ಹೇಳಿರುವ ಕಡೆಗಳಲ್ಲೆಲ್ಲಾ ಪಾರ್ಥಿವಾಗ್ನಿಯನ್ನೇ ನಿರ್ದೇಶಿಸಿರುವುದೆಂದು ತಿಳಿಯಬೇಕು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಇಪ್ಪತ್ತನೆಯ ಖಂಡ ಸಮಾಪ್ತವಾಗಿದೆ.

## ಅಥ ಏಕವಿಂಶತಿಃ ಖಂಡಃ

## ಇಪ್ಪತ್ತೊಂದನೆಯ ಖಂಡವು

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ವಿಶ್ವ ಏನಂ ನರಾ ನಯಂತೀತಿ ವಾಪಿ ವಾ ವಿಶ್ವಾನರ ಏವ ಸ್ಯಾತ್ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಸ್ತಸ್ಯೈಷಾ ಭವತಿ ॥ ೨೧ ॥**

## ವೈಶ್ವಾನರಃ ಕಸ್ಮಾತ್ ? ವಿಶ್ವಾನ್ನಯತಿ ||

ಕ್ರಮಪ್ರಾಪ್ತವಾದ ವೈಶ್ವಾನರಪದದಲ್ಲಿ ದೇವತಾತತ್ವವನ್ನು ವಿವರಿಸಲು ಮೊದಲು ಶಬ್ದವ್ಯುತ್ಪತ್ತಿಯನ್ನು ತೋರಿಸುತ್ತಾರೆ. ವೈಶ್ವಾನರ ಎಂಬ ಶಬ್ದವು ಹೇಗೆ ಉಂಟಾಗಿದೆ ? ಎಂದು ಪ್ರಶ್ನೆ. ವಿಶ್ವನರರನ್ನು ಈ ಲೋಕದಿಂದ ಇನ್ನೊಂದು ಲೋಕಕ್ಕೆ ಒಯ್ಯುವ ಪ್ರಯೋಜನಕರ್ತೃವಾದವನು ವೈಶ್ವಾನರ ಎಂದು ಉತ್ತರ. ಜನರ ಸಕಲಪ್ರವೃತ್ತಿಯಲ್ಲಿಯೂ ಇವನೇ ಪ್ರೇರಕನಾಗಿರುತ್ತಾನೆ. ಪಂಚಾಗ್ನಿವಿದ್ಯೆಯಲ್ಲಿಯೂ ಇವನೇ ಪ್ರೇರಕನಾಗಿರುತ್ತಾನೆ. ಪಂಚಾಗ್ನಿವಿದ್ಯೆಯಲ್ಲಿ ಇದನ್ನೇ ಸ್ಪಷ್ಟಪಡಿಸಿರುತ್ತಾರೆ— “ಅಪಿ ವಾ ಸತಿ ತಸ್ಮಿನ್ಸರ್ವಾಃ ಪ್ರವೃತ್ತಯಃ ಫಲವತ್ಯೋನರಾಣಾಂ ಭವಂತೀತಿ ಹೇತುಕರ್ತೃತ್ವೇನ ಸರ್ವಾಸು ಪ್ರವೃತ್ತಿಷು ಅಯಮೇವ ನರಾನ್ನಯತಿ ಪ್ರವರ್ತಯತೀತಿ ವೈಶ್ವಾನರಃ.” ಸ್ವತಂತ್ರಕರ್ತೃ, ಪ್ರಯೋಜಕ (ಹೇತು) ಕರ್ತೃ ಎಂದು ಕರ್ತೃ ಎರಡುವಿಧವಾಗಿದೆ ಲೋಕಪ್ರಸಿದ್ಧವಾಗಿದೆ. ವೈಶ್ವಾನರ ಪದವಾಚ್ಯನಾದ ಅಗ್ನಿಯು ಪ್ರೇರೇಪಿಸುವುದರಿಂದ ಪ್ರಯೋಜಕಕರ್ತೃ ಆಗುತ್ತಾನೆ. ನಯತಿ ಎಂಬುದು ಅರ್ಥನಿರ್ದೇಶ. ಣ್ವ-ನಯೇ ಧಾತು ನರತಿ ಇತಿ ನರಃ. ಕೊಂಡೊಯ್ಯುವನೆಂದರ್ಥ. ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ನರಃ ಎಂದಾಗುತ್ತದೆ. ವಿಶ್ವೇಷಾಂ ನರಃ ವೈಶ್ವಾನರಃ. ನರೇ ಸಂಜ್ಞಾಯಾಂ ಎಂಬ ಸೂತ್ರದಿಂದ ನರಶಬ್ದ ಪರದಲ್ಲಿರುವಾಗ ಪೂರ್ವಪದಕ್ಕೆ ದೀರ್ಘ ಬರುತ್ತದೆ. ಕರ್ಮ ಉಪಪದವೆಂದರೂ ಬಹುಲಗ್ರಹಣದಿಂದ ಅಚ್ ಹೇಳಬಹುದು.

## ವಿಶ್ವೇ ಏನಂ ನರಾ ನಯಂತೀತಿವಾ ||

ಇವನೇ ಸಕಲ ಜನರನ್ನು ಲೋಕದಿಂದ ಲೋಕಾಂತರಕ್ಕೆ ಒಯ್ಯುವವನೆಂದು ಹಿಂದೆ ವರ್ಣಿಸಿದರೆ ಇನ್ನು ಕೆಲವರು ಜನರೇ ಇವನನ್ನು ಒಯ್ಯುತ್ತಾರೆ ಎಂದು ವ್ಯುತ್ಪತ್ತಿಯನ್ನು ಕಲ್ಪಿಸುತ್ತಾರೆ. ಆಯಾಯ ಕ್ರಿಯೆಯಲ್ಲಿ ಜನರು ಇವನನ್ನು ಅಂಗವನ್ನಾಗಿ ಕಲ್ಪಿಸಿ ಕರ್ಮವನ್ನು ಸಾಂಗವಾಗಿ ಸಮಾಪ್ತಿಗೊಳಿಸುತ್ತಾರೆ. ನೀಯತೇ ಇತಿ ನರಃ ನೃ ಧಾತುವಿಗೆ ‘ಋತೋರಪ್’ ಸೂತ್ರದಿಂದ ಕರ್ಮಣಿಯಲ್ಲಿ ಅಪ್ ಪ್ರತ್ಯಯ ಗುಣ.

## ಅಪಿ ವಾ ವಿಶ್ವಾನರ ಏವ ಸ್ಯಾತ್ | ಪ್ರತ್ಯೃತಃ ಸರ್ವಾಣಿ ಭೂತಾನಿ, ತಸ್ಯ ವೈಶ್ವಾನರಃ | ತಸ್ಯೈಷಾ ಭವತಿ || ೨೧ ||

ಬೇರೊಂದುರೀತಿಯಿಂದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ವಿಶ್ವಾನರ ಎಂಬ ಒಬ್ಬ ಪ್ರಸಿದ್ಧಪುರುಷನು ಇರುತ್ತಾನೆ. ವಿಶ್ವಾನಿ ಪ್ರತಿ ಋತಃ ವಿಶ್ವಾನರಃ ಸಕಲಭೂತಗಳ ಹೃದಯವನ್ನು ಪ್ರವೇಶಿಸಿದವನು ಎಂದರ್ಥ. ಸಕಲಪ್ರಾಣಿಗಳನ್ನು ಹೊಂದಿರುವವನು ಪ್ರಾಣನೆಂದರ್ಥ. ಪ್ರಾಣನಪ್ರವೇಶವಿಲ್ಲದೇ ಹೋದರೆ ಯಾವ ಜಂತುವೂ ಬದುಕಿರಲಾರದು. ವಿಶ್ವಾನ್ ಅರಃ, ವಿಶ್ವಾನರಃ ಛಾಂದಸವಾದುದರಿಂದ ದ್ವಿತೀಯಾವಿಭಕ್ತಿಗೆ ಲೋಪಬಂದಿಲ್ಲ. ಋ-ಗತೌ ಧಾತುವಿಗೆ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಬಂದರೆ ಅರಃ ಎಂದಾಗುತ್ತದೆ. ವಿಶ್ವಾನರನ ಪುತ್ರನೇ ವೈಶ್ವಾನರನು. ಪ್ರಾಣಪುತ್ರನು ಅಗ್ನಿಯೆಂದು ಪ್ರಸಿದ್ಧವಾಗಿದೆ. “ಪ್ರಾಣಾದ್ಧಿ ಬಲಾನ್ಮಥ್ಯಮಾನೋ ಹಿ ಜಾಯತೇ” ಎಂದು ಬ್ರಾಹ್ಮಣ. ಶಕ್ತಿಯುಕ್ತರಾಗಿ ಅರಣಿಯಲ್ಲಿ ಕಡೆದರೆ ಅಗ್ನ್ಯುತ್ಪತ್ತಿಯಾಗುತ್ತದೆ. ಈ ವೈಶ್ವಾನರನನ್ನು ಪ್ರಧಾನವಾಗಿ ಸ್ತುತಿಸಲು ಮುಂದೆ ಹೇಳುವ ಋಕ್ ಉದಾಹರಣವಾಗುತ್ತದೆ.

ಈರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ ಇಪ್ಪತ್ತೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾವಿಂಶತಿಃ ಖಂಡಃ

### ಇಪ್ಪತ್ತೆರಡನೆಯ ಖಂಡವು

ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ | ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ || (ಋ ಸಂ-೧-೯೮-೧) ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯುತತೇ ಸೂರ್ಯೇಣ ರಾಜಾಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ತತ್ಕೋ ವೈಶ್ವಾನರೋ ಮಧ್ಯಮ ಇತ್ಯಾಚಾರ್ಯಾ ವರ್ಷಕರ್ಮಣಾ ಹ್ಯೇನಂ ಸ್ತೌತಿ || ೨೨ ||

> ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾ-
> ಮಭಿಶ್ರೀಃ || ಇತೋ ಜಾತೋ ವಿಶ್ವಮಿದಂ ವಿಚಷ್ಟೇ ವೈಶ್ವಾನರೋ
> ಯತತೇ ಸೂರ್ಯೇಣ ||
>
> (ಋ. ಸಂ, ೧-೭-೬)

ಪ್ರಪಂಚದ ಸಕಲಜನರನ್ನು ಲೋಕಾಂತರಕ್ಕೆ ಒಯ್ಯುವುದರಲ್ಲಿ ಪ್ರಯೋಜಕನಾದ ಸ್ವಾಮಿಯಾದ ಅಗ್ನಿಯ ಶೋಭನವಾದ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ ನಾವು ಅನುಗ್ರಾಹ್ಯರಾಗೋಣ. ಕಂ ಎಂಬುದು ಪಾದಪೂರಣೆಗೋಸ್ಕರ ಹೇಳಿದೆ. ಆ ಅಗ್ನಿಯು ಅಭಿಮುಖವಾಗಿ ಸೇವಿಸಲ್ಪಡುತ್ತಾ ಸಕಲಭೂತಜಾತಗಳಿಗೆ ಸ್ವಾಮಿಯಾಗಿರುತ್ತಾನೆ. ಯಾವ ವೈಶ್ವಾನರನು ಈ ಎರಡು ಅರಣಿಗಳಿಂದ ಹುಟ್ಟಿದೊಡನೆಯೇ ಸರ್ವಪ್ರಪಂಚವನ್ನೂ ವಿಶೇಷವಾಗಿ ನೋಡಿ ತಿಳಿದಿರುವನೋ, ಮತ್ತು ಯಾವನು ಪ್ರಾತಃಕಾಲದಲ್ಲಿ ಉದಯಿಸುವ ಸೂರ್ಯನೊಡನೆ ಸೇರಿಹೋಗುವನೋ ಅವನ ಅನುಗ್ರಹಕ್ಕೆ ನಾವು ಪಾತ್ರರಾಗೋಣ. ಪ್ರಾತಃಕಾಲವಾದೊಡನೆ ಅಗ್ನಿಯ ತೇಜಸ್ಸು ಮೇಲಕ್ಕೂ, ಸೂರ್ಯಕಿರಣಗಳು ಕೆಳಗೂ ಹೋಗುವುದರಿಂದ ಪರಸ್ಪರ ಸಂಗಮನವನ್ನು ಹೇಳಿರುತ್ತಾರೆ.

> ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯುತತೇ
> ಸೂರ್ಯೇಣ | ರಾಜಾಯಃ ಸರ್ವೇಷಾಂ ಭೂತಾನಾಮಭಿಶ್ರಯ-
> ಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಮತೌ ಎಂಬುದಕ್ಕೆ ಕಲ್ಯಾಣ್ಯಾಂ ಎಂದು ಅರ್ಥವಿವರಣೆ. ಯಾವಾಗಲೂ ಉಪಕಾರ ಮಾಡುತ್ತಿರುವ, ಅಥವಾ ನಮ್ಮ ಇಷ್ಟಾರ್ಥವನ್ನು ಸಾಧಿಸುವ ಎಂದರ್ಥ. ಲೋಕನ್ಯಾಯವನ್ನನುಸರಿಸಿ ಆಚಾರ್ಯರು ಮಂತ ಪದಕ್ರಮವನ್ನು ವ್ಯತ್ಯಾಸಮಾಡಿ ವ್ಯಾಖ್ಯಾನಮಾಡಿರುತ್ತಾರೆ. ಮಹಾಮಹಿಮನಾದ ಅಗ್ನಿಯು ಹೀಗಿರುವನೆಂದು ತಿಳಿಸಿ ಅವನ

ಬುದ್ಧಿಯಲ್ಲಿ ನಾವು ಅನುಗ್ರಾಹ್ಯರಾಗೋಣ ಎಂದು ಆಶೀರ್ವಾದದಲ್ಲಿ ಸಮಾಪ್ತಿಗೊಳಿಸಿರುತ್ತಾರೆ. ಅನೇಕಕ್ರಿಯಾಪದಗಳು ಈ ಮಂತ್ರದಲ್ಲಿ ತೋರುವುದರಿಂದ ವಾಕ್ಯಭೇದವು ಪ್ರಾಪ್ತವಾದು ರಾಜಾಯಃ ಎಂದು ಕಲ್ಪಿಸಿ ಏಕವಾಕ್ಯವನ್ನು ತೋರಿಸಿರುತ್ತಾರೆ. ಇನ್ನು ಕೆಲವರು ಯಾರಿಂದ ಕಲ್ಯಾಣಮತಿಯು ಅಪೇಕ್ಷಿಸಲ್ಪಡುವುದೋ ಅಂತಹ ವೈಶ್ವಾನರನನ್ನು ಈ ಶಬ್ದಗಳಿಂದ ಸ್ತುತಿಸುತ್ತಾರೆ ಎಂದು ಅರ್ಥವಿವರಣೆ ಮಾಡುತ್ತಾರೆ.

ತತ್ಕೋ ವೈಶ್ವಾನರಃ ? ಮಧ್ಯಮ ಇತ್ಯಾಚಾರ್ಯಾಃ । ವರ್ಷಕರ್ಮಣಾ
ಹ್ಯೇನಂ ಸ್ತೌತಿ ॥ ೨೨ ॥

ವೈಶ್ವಾನರಪದವ್ಯುತ್ಪತ್ತಿಯನ್ನು ತಿಳಿಸಿದುದಾಯಿತು. ಆದರೆ ಇದರಿಂದ ಪ್ರತಿಪಾದ್ಯವಾದ ದೇವತಾತತ್ವದಲ್ಲಿ ವಿಚಾರವುಂಟಾಗುತ್ತದೆ. ಇದನ್ನೇ ವೈಶ್ವಾನರನೆಂದರೆ ಯಾವ ದೇವತೆ ? ಎಂದು ವಿಚಾರಿಸುತ್ತಾರೆ. ಆಗಮದಲ್ಲಿ ವಿಪ್ರತಿಪತ್ತಿ ಇರುವುದರಿಂದ ಅರ್ಥದಲ್ಲಿ ಸಂಶಯವುಂಟಾಗುತ್ತದೆ. ವೈಶ್ವಾನರ ವಿದ್ಯೆಯಲ್ಲಿ ವೇದಾಂತಿಗಳು ವೈಶ್ವಾನರನೆಂದರೆ ಆತ್ಮನೆಂದು ಹೇಳುತ್ತಾರೆ. ಶ್ರುತಿಪರಿಶೀಲನೆಮಾಡಿದರೆ ಇಂದ್ರ, ಆದಿತ್ಯ, ವಾಯು, ಆಕಾಶ, ಉದಕ ಪೃಥಿವೀ ಮುಂತಾದುವುಗಳೆಲ್ಲವೂ ಬೇರೆಬೇರೆಯಾಗಿ ವೈಶ್ವಾನರ ಪದದಿಂದ ಸ್ತುತಿಸಲ್ಪಟ್ಟಿವೆ. ಕೆಲವು ನಿರುಕ್ತಕಾರರಾದ ಆಚಾರ್ಯರು ವೈಶ್ವಾನರ ಅಂದರೆ ಮಧ್ಯಮಸ್ಥಾನನಾದ ವೈದ್ಯುತಾಗ್ನಿ ಅಥವಾ ವಾಯು, ಅಥವಾ ಇಂದ್ರನಾಗುತ್ತಾನೆ ಎಂದು ತಿಳಿದಿರುತ್ತಾರೆ. ಇದಕ್ಕೆ ಕಾರಣವೂ ಇದೆ. ಹಿ ಶಬ್ದ ಕಾರಣದ್ಯೋತಕವಾಗಿದೆ. ಮಂತ್ರದೃಷ್ಟ್ಯಗಳೂ ಕೂಡಾ ಮಳೆಸುರಿಸುವ ಕಾರ್ಯದಿಂದ ಈ ವೈಶ್ವಾನರನನ್ನು ಸ್ತುತಿಸುತ್ತಾರೆ. ಮಳೆಸುರಿಸುವ ಕಾರ್ಯವು ಮಧ್ಯಮಸ್ಥಾನನಾದ ವೈದ್ಯುತಾಗ್ನಿಯ ಕಾರ್ಯವಾಗುವುದಲ್ಲದೆ ಪಾರ್ಥಿವಸ್ಥಾನ ಅಗ್ನಿಯ ಕಾರ್ಯ ಎಂದೂ ಆಗಲಾರದು. ಆದುದರಿಂದ ವೈದ್ಯುತಾಗ್ನಿಯೇ ವೈಶ್ವಾನರನೆಂದು ಅವರ ಅಭಿಪ್ರಾಯ.

ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ ।
ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ
ಸೂರ್ಯೇಣ ॥

(ಋ. ಸಂ. ೧-೯೮-೧)

ಇದರ ಅರ್ಥವು—

ಸಕಲ ಮಾನವರಿಗೂ ಒಡೆಯನಾದ ಅಗ್ನಿಯನ್ನು ಪೂಜಿಸಿ ಯಾವಾಗಲೂ ಅವನ ಬುದ್ಧಿಯು ಅನುಗ್ರಹಾತ್ಮಕವಾಗಿರುವಂತೆಯೂ ನಾವು ಆ ಅನುಗ್ರಹಕ್ಕೆ ಯೋಗ್ಯರಾಗಿರುವಂತೆಯೂ ವರ್ತಿಸೋಣ. ಆ ಅಗ್ನಿಯು ಪ್ರತ್ಯಕ್ಷನಾಗಿ ಸಕಲಭೂತ ಜಾತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆ. ಅಗ್ನಿಯು ಅರಣಿಗಳಿಂದ ಉತ್ಪನ್ನನಾದ ಒಡನೆಯೇ ಸಕಲ ಜಗತ್ತನ್ನೂ ಸಹ ವಿಶೇಷ ದೃಷ್ಟಿಯಿಂದ ಅವಲೋಕಿಸುತ್ತಾನೆ ಮತ್ತು ತನ್ನ ಜ್ವಾಲೆಯ ಪ್ರಸರಣದಿಂದ ಸೂರ್ಯನ ಕಿರಣಗಳೊಂದಿಗೆ ಸೇರಿಕೊಳ್ಳುತ್ತಾನೆ.

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥

(ಋ. ಸಂ. ೧-೧೬೪-೪೬)

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತಿ । ಅಗ್ನಿಃ ಸರ್ವಾ ದೇವತಾಃ ಇತಿ ಬ್ರಾಹ್ಮಣಮಪಿ ಭವತಿ.** (ನಿ. ೭–೧೮) ಮಹಾತ್ಮನೂ ವಿಶ್ವಾತ್ಮನೂ ಆದ ಈ ಅಗ್ನಿಯನ್ನೇ ಇಂದ್ರಾದಿ ಬೇರೆ ಬೇರೆ ಹೆಸರುಗಳಿಂದ ಉದ್ದೇಶಿಸಿ ಎಲ್ಲರೂ ಪೂಜಿಸುತ್ತಾರೆ. ಮತ್ತು ಬೇರೆ ಬೇರೆ ಸನ್ನಿವೇಶಗಳಲ್ಲಿ ರೂಪಾಂತರಗಳಿಂದ ಆವಿರ್ಭವಿಸುವ ಎಲ್ಲಾ ಅಗ್ನ್ಯಂಶಗಳಿಗೂ ಈ ವೈಶ್ವಾನರಾಗ್ನಿಯೇ ಮೂಲ, ಉಳಿದ ರೂಪಗಳೆಲ್ಲಾ ಈ ವೈಶ್ವಾನರಾಗ್ನಿಯ ಶಾಖೆಗಳು ಎಂದೂ ಸಹ ಶ್ರುತಿವಾಕ್ಯಗಳಿವೆ.

**ವಯಾ ಇದಗ್ನೇ ಅಗ್ನಯಸ್ತೇ ಅನ್ಯೇ ತ್ವೇ ವಿಶ್ವೇ ಅಮೃತಾ ಮಾದಯಂತೇ ।**
**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾ ಉಪಮಿದ್ಯಯಂಥ ॥**

ವೈಶ್ವಾನರಾಗ್ನಿಯೇ ದೇವಮಾನವಾದಿ ಸಕಲ ಜಗತ್ತಿನ ಸ್ಥಿತಿಗತಿಗಳಿಗೂ ಹೇತುಭೂತನಾಗಿ ವಿಶ್ವದ ವ್ಯವಹಾರಗಳಿಗೆಲ್ಲಾ ನೇತೃವಾಗಿರುತ್ತಾನೆ ಆದುದರಿಂದ ಆತ್ಮಕಲ್ಯಾಣವನ್ನೂ ಜಗತ್ಕಲ್ಯಾಣವನ್ನೂ ಅಪೇಕ್ಷಿಸುವ ಸಕಲ ಭೂತಗಳೂ ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ಅರಿತು ಉಪಾಸನೆಯನ್ನು ಮಾಡಬೇಕು ಎಂಬುದಾಗಿ ಕರ್ಮಾನುಷ್ಠಾನಗಳನ್ನು ಬೋಧಿಸತಕ್ಕ ಶ್ರುತಿಗಳೂ ಆಧ್ಯಾತ್ಮಿಕವಾದ ಜ್ಞಾನವನ್ನುಪದೇಶಿಸತಕ್ಕ ಶ್ರುತಿಗಳೂ ಒಂದೇ ವಿಧವಾಗಿ ವೈಶ್ವಾನರಾಗ್ನಿಯ ಉಪಾಸನೆಯ ಆವಶ್ಯಕತೆಯನ್ನು ತಿಳಿಸುತ್ತವೆ, **ವೈಶ್ವಾನರಸ್ಯ ಸುಮತೌ ಸ್ಯಾಮ** (ಋ. ಸಂ. ೧–೯೮–೧) ಎಂದು ಋಗಾದಿ ಸಂಹಿತೆಗಳೂ, **ಸ ಯೋ ಹ್ಯೇತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ।** ಪುರುಷಾಂತರ್ಹಿತನೂ ಪುರುಷರೂಪನೂ ಆಗಿರುವ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯುವ ಸಕಲರೂ ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯಸ್ಸನ್ನು ಪಡೆಯುತ್ತಾರೆ ( ಶ. ಬ್ರಾ. ೧೦–೬–೧–೧೧) ಎಂದು ಶತಪಥಾದಿ ಬ್ರಾಹ್ಮಣಗಳೂ, **ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।** ಹೀಗೆ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿದು ಯಾವ ಪುರುಷನು ಅಗ್ನಿಹೋತ್ರವನ್ನು ನೆರವೇರಿಸುತ್ತಾನೆಯೋ ಅವನು ಸಕಲ ಭೂತಗಳಲ್ಲಿಯೂ ಸಕಲಲೋಕಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹುತಮಾಡಿದಂತೆಯೇ ( ಛಾ. ಉ. ೧–೨೪–೨ ) ಎಂಬುದಾಗಿ ಛಾಂದೋಗ್ಯಾದಿ ಉಪನಿಷತ್ತುಗಳೂ ವೈಶ್ವಾನರಾಗ್ನಿಯ ಉಪಾಸನೆಯ ಮಹತ್ತ್ವವನ್ನು ಹೇಳಿವೆ. ಆದುದರಿಂದ ಈ ದೇವತೆಯ ಸ್ವರೂಪವೇನು, ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಈ ದೇವತೆಗೂ ಇರತಕ್ಕ ಸಂಬಂಧವೇನು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯಬೇಕಾದುದು ಅತ್ಯವಶ್ಯವಾಗಿರುತ್ತದೆ. ಪ್ರಕೃತವಾದ ಈ ಋಕ್ಕಿನಲ್ಲಿ **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ವೈಶ್ವಾನರನು ಸಕಲಭೂತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆಂದು ವರ್ಣಿಸಿದೆ. ಆದರೆ ಆ ವೈಶ್ವಾನರನು ಯಾರು ಎಂಬ ಪ್ರಶ್ನೆಯೂ ಜೊತೆಯಲ್ಲಿಯೇ ಹುಟ್ಟಿ ನಿರುಕ್ತಕಾರರು ಈ ಋಕ್ಕನ್ನೇ ವಿವರಿಸುವಾಗ ಅನೇಕ ಉದಾಹರಣೆಗಳನ್ನು ತೆಗೆದುಕೊಂಡು ವೈಶ್ವಾನರನು ಪಾರ್ಥಿವಾಗ್ನಿಯೆಂದು ನಿಷ್ಕರ್ಷೆಮಾಡಿರುತ್ತಾರೆ. ಅವರ ವಿವರಣೆಯು ಈ ರೀತಿಯಿದೆ

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ।**
**ವಿಶ್ವ ಏನಂ ನರಾ ನಯಂತೀತಿ ವಾ ।**
**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।**
(ನಿ. ೭–೨೧).

ಇವನು ಎಲ್ಲರಿಗೂ ನೇತೃವಾಗಿ ಮಾರ್ಗದರ್ಶಕನಾದುದರಿಂದಲೂ, ಅಥವಾ ಇವನನ್ನು ಎಲ್ಲರೂ ಯಜ್ಞದಲ್ಲಿ ಪ್ರಧಾನದೇವತೆಯಾಗಿ ಕರೆದೊಯ್ಯುವುದರಿಂದಲೂ ಅಥವಾ ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಪ್ರವೇಶಿಸಿರುವುದರಿಂದಲೂ

**ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬ ಪ್ರಕೃತವಾದ ಋಕ್ಕನ್ನು ವಿವರಿಸಿ ಈ ದೇವತೆಯ ಸ್ವರೂಪವನ್ನು ತಿಳಿಸಿದ್ದಾರೆ. **ಇತೋ ಜಾತಃ ಸರ್ವಮಿದಮಭಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ।** ಸಕಲರಿಗೂ ಪ್ರಭು ವಾಗಿರುವುದರಿಂದಲೂ, ಸರ್ವರಿಗೂ ಆಶ್ರಯನಾಗಿರುವುದರಿಂದಲೂ ನಾವೆಲ್ಲರೂ ಈ ವೈಶ್ವಾನರನ ಅನುಗ್ರಹಾತ್ಮಕವಾದ ದೃಷ್ಟಿಗೆ ಯೋಗ್ಯರಾಗಿರೋಣ. ಪಾರ್ಥಿವಾಗ್ನಿಯ ರೂಪದಲ್ಲಿ ಉತ್ಪನ್ನನಾಗಿ ಅವನು ವಿಶ್ವವನ್ನೆಲ್ಲಾ ವೀಕ್ಷಿಸುತ್ತಾನೆ ಮತ್ತು ಸೂರ್ಯನೊಡನೆ ಒಂದಾಗುತ್ತಾನೆ ಎಂದು ಋಕ್ಕಿನ ಅರ್ಥವನ್ನು ವಿವರಿಸಿ,

**ತತ್ಕೋ ವೈಶ್ವಾನರಃ ।** ಈ ವೈಶ್ವಾನರನು ಯಾರು (ನಿ. ೬–೨೨)ಎಂಬ ಪ್ರಶ್ನೆಯನ್ನುಹಾಕಿ ಆಗಮಗಳ ವಿಪ್ರತಿಪತ್ತಿ ಯನ್ನು ಚರ್ಚಿಸಿ, ತಾವು ಕೊನೆಯಲ್ಲಿ ನಿಷ್ಕರ್ಷವಾದ ಅಭಿಪ್ರಾಯವನ್ನು ತಿಳಿಸುತ್ತಾರೆ. ತಮ್ಮ ಚರ್ಚೆಯಲ್ಲಿ ಮೊದಲನೆಯದಾಗಿ ವೈಶ್ವಾನರನು ಅಂತರಿಕ್ಷಸ್ಥವಾದ ದೇವತೆಯೆಂದು ನಿರ್ದೇಶಿಸುವ ಅಭಿಪ್ರಾಯಗಳಲ್ಲಿರುವ ದೋಷವನ್ನು ತಿಳಿಸುತ್ತಾರೆ.

**ಮಧ್ಯಮ ಇತ್ಯಾಚಾರ್ಯಾಃ । ವರ್ಷಕರ್ಮಣಾ ಹ್ಯೇನಂ ಸ್ತೌತಿ । ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ।** ( ಋ. ಸಂ. ೧–೫೯–೬ ) ಎಂಬ ಋಕ್ಕಿನಲ್ಲಿ ವರ್ಣಿಸುವಂತೆ ವೃಷ್ಟಿಕರ್ಮಕ್ಕೆ ಹೇತುಭೂತನೆಂದು ಪ್ರಶಂಸಿಸಿರು ವುದರಿಂದ ಅಂತರಿಕ್ಷಸ್ಥವಾದ ದೇವತೆಯೆಂದು ಆಚಾರ್ಯರು ಅಭಿಪ್ರಾಯಪಡುವರು. ಅಲ್ಲದೇ,

**ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ ಪ್ರತ್ಯವರೋಹಶ್ಚಿ- ಕೀರ್ಷಿತಸ್ತಾಮನುಕೃತಿಂ ಹೋತಾಗ್ನಿಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ।**

**ಸೂರ್ಯಪ್ರಸೂತಾವಗ್ನಿಃ ತು ದೃಷ್ಟ್ವಾ ಪಾರ್ಥಿವಮಧ್ಯಮೌ ।**
**ಏತೇಷಾಮೇವ ಲೋಕಾನಾಂ ತ್ರಯಾಣಾಮಧ್ವರೇಽಧ್ವರೇ ॥**
**ರೋಹಾತ್ಪ್ರತ್ಯವರೋಹೇಣ ಚಿಕೀರ್ಷನ್ನಗ್ನಿಮಾರುತಂ ।**
**ಶಸ್ತ್ರಂ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥**

(ಬೃ. ದೇ. ೧–೧೦೧; ೧–೧೦೨)

ಆಹುತಿಗಳ ಆಧಿಕ್ಯವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಆರೋಹಣಕ್ರಮವನ್ನನುಸರಿಸಬೇಕೆಂಬ ವಿಧಿವಾಕ್ಯವಿದೆ. ಆರೋಹಣಕ್ರಮವಾದಮೇಲೆ ಅವರೋಹಣ ಕ್ರಮವನ್ನು ನಿರ್ವಹಿಸಬೇಕು. ಈ ಸರಣಿಯನ್ನನುಸರಿಸಿ ಯಜ್ಞಕರ್ತನು ಅಗ್ನಿಯನ್ನೂ ಮರುತ್ತುಗಳನ್ನೂ ಉದ್ದೇಶಿಸಿ ಪಠಿಸಿರುವ ವೈಶ್ವಾನರೀಯಸೂಕ್ತದಲ್ಲಿ ಅವರೋಹಣಕ್ರಮದಿಂದ ಮೊದಲು ವೈಶ್ವಾ ನರನನ್ನು ಸ್ತುತಿಸಿದ್ದಾನೆ. ಈ ಅಭಿಪ್ರಾಯದಿಂದಲೇ ಇಲ್ಲಿ ನಿರ್ದೇಶಿಸಿರುವ ವೈಶ್ವಾನರನನ್ನು **ಅಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾಃ ।** ಆದಿತ್ಯನೆಂದು ಪ್ರಾಚೀನರಾದ ಯಜ್ಞಕರ್ತರು ಅಭಿಪ್ರಾಯಪಡುತ್ತಾರೆ ಎಂದು ಪೂರ್ವಪಕ್ಷವನ್ನು ವಿವರಿಸಿ ನಂತರ,

**ಸೋಽಪಿ ನ ಸ್ತೋತ್ರಿಯಮಾದ್ರಿಯತಾಗ್ನೇಯೋ ಹಿ ಭವತಿ । ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ ತತೋಽಗ್ನಿಮಿಹಸ್ಥಾನಮತ್ರ ವೈ ಸ್ತೋತ್ರಿಯಂ ಶಂಸತಿ ॥**

ಈ ಸೂಕ್ತವು ಮುಖ್ಯವಾಗಿ ಅಗ್ನಿಯನ್ನೇ ಉದ್ದೇಶಿಸಿರುವುದರಿಂದಲೂ, ಅನಂತರ ರುದ್ರನನ್ನೂ ಮರುತ್ತುಗಳನ್ನೂ ನಿರ್ದೇಶಿಸಿ ಪುನಃ ಯಜ್ಞಕರ್ತನು ಯಾವ ಪಾರ್ಥಿವವಾದ ಯಜ್ಞಶಾಲೆಯಲ್ಲಿ ಈ ಸೂಕ್ತವನ್ನು ಪಠಿಸುತ್ತಾನೆಯೋ ಆ ಪಾರ್ಥಿವಲೋಕಕ್ಕೇ ಸೇರಿದ ಅಗ್ನಿಯನ್ನೇ ಪುನಃ ಉದ್ದೇಶಿಸಿ ಸ್ತುತಿಸಿರುತ್ತಾನೆ. ಅದುದರಿಂದ ಇಲ್ಲಿ ನಿರ್ದೇಶಿಸಿರುವ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆಯೇ ಹೊರತು ಅಂತರಿಕ್ಷಸ್ಥವಾದುದಲ್ಲ ಎಂದು ಮೇಲಿನ ಅಭಿಪ್ರಾಯವನ್ನು ನಿರಾಕರಿಸಿರುವರು ಮತ್ತು ಈ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆ ಎಂದು ತಮ್ಮ ವಾದವನ್ನು ಸಮರ್ಥಿಸುತ್ತಾ ಅದಕ್ಕೆ ತಕ್ಕ ಶ್ರುತಿ ವಾಕ್ಯಗಳನ್ನೂ ಉದಹರಿಸಿದ್ದಾರೆ.

ಅಥಾಸ್ಯಾಹ—ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ।

(ಋ. ಸಂ. ೧-೯೮-೧). ಇತಿ

ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯುಜ್ಯತ ಇತ ಇಮಮಾದಧಾತ್ಯಮುಂ ತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ॥

ವೈಶ್ವಾನರನು ತಾನು ವಿಸ್ತಾರವಾಗಿ ಪ್ರಸರಿಸಿ ಸೂರ್ಯನೊಡನೆ ಸೇರಿಕೊಳ್ಳುತ್ತಾನೆ ಎಂದು ಸಂಹಿತಾವಾಕ್ಯವಿರುವುದೂ ಈ ಸಮರ್ಥನೆಗೆ ಸಹಾಯಮಾಡುತ್ತದೆ, ವೈಶ್ವಾನರನೂ ಸೂರ್ಯನೇ ಆದರೇ ತಾನೇ ಪ್ರಸರಿಸಿ ತನ್ನಲ್ಲೇ ಸೇರಿಕೊಳ್ಳುವನೆಂಬದು ಅಸಂಭವ. ಒಂದು ವಸ್ತುವು ತಾನು ವಿಸ್ತರಿಸಿಕೊಂಡು ಇನ್ನೊಂದರೊಂದಿಗೆ ಸೇರಿಕೊಳ್ಳುತ್ತದೆ ಎಂದು ಹೇಳುವುದು ಸಹಜ ವಾಗಿದೆ. ಯಜ್ಞಕರ್ತನು ಪೃಥ್ವಿಯಲ್ಲಿ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದಮೇಲೆ ಅದರ ಕಿರಣಗಳು ಮೇಲಿನ ಲೋಕಕ್ಕೆ ಹರಡಿ ಅಲ್ಲೂ ಆವಿರ್ಭವಿಸುತ್ತವೆ. ಅಂತರಿಕ್ಷಲೋಕದಲ್ಲಿ ವ್ಯಾಪಿಸಿರುವ ಆದಿತ್ಯನ ಕಿರಣಗಳೊಂದಿಗೆ ಸೇರಿಕೊಂಡು ಎರಡೂ ಒಂದಾಗುವುದನ್ನು ನೋಡಿ ಯತತೇ ಸೂರ್ಯೇಣ ಎಂದು ವರ್ಣಿಸಲ್ಪಟ್ಟದೆ. ಅದೂ ಅಲ್ಲದೆ,

ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವದಾ ಅಭವಿಷ್ಯನ್ನಾದಿತ್ಯ-ಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ।

ವೈಶ್ವಾನರನು ಸೂರ್ಯನೇ ಆಗಿದ್ದರೆ ಆಗ ಸವಿತೃ, ಪೂಷ, ವಿಷ್ಣು, ವಿಶ್ವೇದೇವ ಇತ್ಯಾದಿ ಅಂತರಿಕ್ಷಸ್ಥವಾದ ದೇವತೆಗಳ ಸ್ವರೂಪವೂ, ಕ್ರಿಯೆಯೂ ಇವನಲ್ಲಿ ಅಧ್ಯಾಹೃತವಾಗಿ ವರ್ಣಿಸಲ್ಪಡಬೇಕಾಗಿದ್ದಿತು, ಮತ್ತು ಉದಯಿಸುತ್ತಾನೆ, ಅಸ್ತಮಿಸು ತ್ತಾನೆ, ಪರಿಭ್ರಮಣವನ್ನು ಹೊಂದುತ್ತಾನೆ ಇತ್ಯಾದಿ ವರ್ಣನೆಗಳೂ ಇರಬೇಕಾಗಿದ್ದಿತು. ಆದರೆ ಇಲ್ಲಿ ಅಗ್ನಿದೇವತಾಕವಾದ ವರ್ಣನೆಗಳು ಮಾತ್ರವಿರುವುದರಿಂದ ಪಾರ್ಥಿವವಾದ ಅಗ್ನಿಪರ್ಯಾಯವೆಂಬುದು ದೃಢವಾಗಿ ಗೊತ್ತಾಗುತ್ತದೆ. ಇವೇ ಮೊದಲಾದ ಆಧಾರಗಳಿಂದ,

ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।

ಸೂಕ್ತದಲ್ಲಿ ಪಠಿತವಾದ ಸ್ತೋತ್ರವೂ, ಹವಿಸ್ಸಿನ ಅರ್ಪಣೆಯೂ ವೈಶ್ವಾನರರೂಪದ ಅಗ್ನಿಯನ್ನೇ ಉದ್ದೇಶಿಸಿ ಅರ್ಪಿಸಲ್ಪಟ್ಟವೆ ಯೆಂದು ಖಚಿತವಾಗಿ ಹೇಳಬಹುದು. (ನಿ. ೭-೨೨ ರಿಂದ ೭-೩೧) ಈ ವೈಶ್ವಾನರಾಗ್ನಿಯ ಆವಿರ್ಭಾವವು ಪೃಥ್ವಿಯಲ್ಲಾದರೂ

ಸಹ ಇವನೇ, ರಾಜಾ ಹಿ ಕಂ ಭುವನಾನಾಮಭಿಶ್ರೀಃ । ಸಕಲಭೂತಜಾಗಳಿಗೂ ಪ್ರಭುವಾಗಿಯೂ ಆಶ್ರಯನಾಗಿಯೂ ಇದ್ದಾನೆ. ಆದುದರಿಂದಲೇ ದೇವಮಾನವಾದಿಸಕಲರೂ ಇವನ ಉಪಾಸನೆಯಿಂದಲೇ ಶ್ರೇಯಸ್ಸನ್ನು ಹೊಂದಲು ಸಾಧ್ಯವೆಂದು ಸ್ಪಷ್ಟವಾಗಿ ಅನೇಕಕಡೆ ತಿಳಿಸಿದ್ದಾರೆ. ಕರ್ಮಾನುಷ್ಠಾನಗಳಿಂದ ಇವನ ಪಾರ್ಥಿವಸ್ವರೂಪವನ್ನರಿತು ಉಪಾಸನೆಯನ್ನು ಮಾಡುವುದು ಒಂದು ಕ್ರಮವಾದರೆ, ಇವನು ವಿಶ್ವವ್ಯಾಪಿಯಾದುದೂ, ಸರ್ವಜಗತ್ತಿನ ಚೇತನಾಚೇತನಗಳಲ್ಲಿಯೂ ಅಂತರ್ಗತವಾಗಿರುವುದೂ ಆದ ಮಾಹಾತ್ಮ್ಯವನ್ನರಿಯುವ ಅಧ್ಯಾತ್ಮರೂಪವಾದ ಜ್ಞಾನದಿಂದ ಮಾಡತಕ್ಕ ಉಪಾಸನೆಯು ಇನ್ನೊಂದು ವಿಧವಾಗಿರುವುದು. ಕರ್ಮಾನುಷ್ಠಾನಕ್ಕೂ ಜ್ಞಾನೋಪಾಸನೆಗೂ ಇರುವ ಸಂಬಂಧವನ್ನು ತಿಳಿಸಿ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಮಹಿಮೆಯನ್ನು ಶತಪಥಾದಿಬ್ರಾಹ್ಮಣಗಳಲ್ಲಿಯೂ ಛಾಂದೋಗ್ಯಾದಿ ಉಪನಿಷತ್ತುಗಳತಯೂ ವಿವರಿಸಿದೆ. ಇವನ ನಿಜವಾದ ಸ್ವರೂಪವನ್ನರಿಯಲು ಉತ್ತಮವಾದ ಗುರುವನ್ನು ಆರಿಸಿಕೊಂಡು ಹೋದ ಋಷಿಗಳ ಕಥೆಯನ್ನು ಶತಪಥ ಬ್ರಾಹ್ಮಣದಲ್ಲಿ ವಿವರಿಸಿದೆ. (೧೦-೬-೧-೧ರಿಂದ೧೧)

ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ । (ನಿ. ೭-೨೧) ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಅಂತರ್ಗತನಾಗಿರುವವನು ಎಂಬ ನಿರುಕ್ತಕಾರರ ನಿರ್ವಚನದಂತೆ ಸರ್ವಾಂತರ್ಯಾಮಿಯಾದ ವಿಶ್ವಾನರನ ಸ್ವರೂಪವನ್ನು ಈ ಕಥೆಯು ತಿಳಿಸುತ್ತದೆ—

ಸತ್ಯಯಜ್ಞಪೌಲೂಷಿಯೂ, ಮಹಾಶಾಲಜಾಬಾಲನೂ, ಬುಡಿಲ, ಅಶ್ವತರ, ಅಶ್ವಿ, ಇಂದ್ರದ್ಯುಮ್ನ, ಭಾಲ್ಲವೇಯನೂ, ಜನಶಾರ್ಕರಾಕ್ಷ್ಯನೂ ಒಟ್ಟಿಗೆ ಅರುಣಔಪವೇಶಿಯ ಗೃಹದಲ್ಲಿ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯಲು ಎಲ್ಲರೂ ಕಲೆತು ಚರ್ಚಿಸಿದರೂ ಸಹ ಅವರಿಗೆ ನಿಷ್ಕರ್ಷವಾದ ತಿಳಿವಳಿಕೆಯುಂಟಾಗದೆ ಪರಸ್ಪರ ಅಭಿಪ್ರಾಯದಲ್ಲಿ ಭೇದವುಂಟಾಯಿತು. ವಿಪ್ರತಿಪತ್ತಿಯುಂಟಾಯಿತು. ॥ ೧ ॥ ಆಗ ಅವರೆಲ್ಲರೂ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವ ಅಶ್ವಪತಿಕೈಕೆಯನಲ್ಲಿಗೆ ಹೋದರು. ಅವನು ತನ್ನಲ್ಲಿಗೆ ಬಂದ ಈ ಅತಿಥಿಗಳಿಗೆಲ್ಲಾ ಪ್ರತ್ಯೇಕವಾದ ವಾಸಸ್ಥಾನಗಳನ್ನೂ, ವೈಯುಕ್ತಿಕವಾದ ಗೌರವಗಳನ್ನೂ, ಸಹಸ್ರಾರು ಪಾನಗಳನ್ನೂ ಅರ್ಪಿಸಿ ಅವರನ್ನು ಸತ್ಕರಿಸಿದನು. ಮರುದಿನ ಪ್ರಾತಃಕಾಲ ಅವರೆಲ್ಲರೂ ತಮ್ಮ ಅಭಿಪ್ರಾಯಭೇದಗಳನ್ನೇ ಇಟ್ಟುಕೊಂಡು ತಮ್ಮ ಕೈಯಲ್ಲಿ ಸಮಿತ್ತುಗಳನ್ನು ಹಿಡಿದು ' ನಾವು ನಿಮ್ಮ ಶಿಷ್ಯರಾಗಬೇಕೆಂದಿದ್ದೇವೆ. ' ಎಂದು ವಿಜ್ಞಾಪಿಸಿಕೊಂಡರು ॥ ೨ ॥ ಆಗ ಅವನು ನೀವೆಲ್ಲರೂ ಸಕಲಶಾಸ್ತ್ರಪಾರಂಗತರಾದವರ ಪುತ್ರರಾಗಿಯೂ ನೀವೂ ಅಧ್ಯಯನವನ್ನು ಮಾಡಿದವರಾಗಿಯೂ ಇದ್ದುಕೊಂಡು ನನ್ನಲ್ಲಿಗೆ ಶಿಷ್ಯವೃತ್ತಿಗೆ ಬಂದಿರುವುದೇನು ? ಎಂದು ಆಶ್ಚರ್ಯಪಟ್ಟು ಅವರನ್ನು ಪ್ರಶ್ನಿಸಿದನು. ಆಗ ಅವರು ನೀವು ವೈಶ್ವಾನರಾಗ್ನಿಯ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದೀರಿ ನಮಗೂ ಅದರ ರಹಸ್ಯವನ್ನು ಉಪದೇಶಿಸಿ ' ಎಂದು ವಿಜ್ಞಾಪಿಸಿಕೊಂಡಾಗ ಅವನು 'ನನಗೆ ಆ ರಹಸ್ಯವು ಗೊತ್ತಿದೆ. ನಿಮಗೂ ಅದನ್ನು ತಿಳಿಸುತ್ತೇನೆ. ಅಗ್ನಿಗೆ ಸಮಿತ್ತುಗಳನ್ನು ಅರ್ಪಿಸಿ ಇಂದಿನಿಂದ ನೀವು ನನ್ನ ಶಿಷ್ಯರಾಗಿದ್ದೀರಿ ' ಎಂದನು. ॥ ೩ ॥ ಅನಂತರ ಅರುಣಔಪವೇಶಿಯನ್ನು ಕುರಿತು 'ಗೌತಮನೇ, ನಿನಗೆ ಗೊತ್ತಿರುವಂತೆ ವೈಶ್ವಾನರನಾರು ?' ಎಂದು ಪ್ರಶ್ನಿಸಿದಾಗ 'ಪೃಥ್ವಿಯೇ ವೈಶ್ವಾನರನೆಂದು' ಅವನು ಹೇಳಿದನು. ಆಗ ದೊರೆಯು 'ಹೌದು, ಸರ್ವಾಧಾರನಾದ ವೈಶ್ವಾನರನೇ ಅದು. ನೀನು ಈ ರಹಸ್ಯವನ್ನು ತಿಳಿದಿರುವುದರಿಂದ ಪಶುಪುತ್ರಾದಿಗಳೊಂದಿಗೆ ಸ್ಥಿರನಾಗಿ ಪ್ರತಿಷ್ಠಿತನಾಗಿದ್ದೀಯೆ! ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಸತ್ಯವಾಗಿಯೂ ಇವು ವೈಶ್ವಾನರನ ಪಾದಗಳು ಮಾತ್ರ. ನೀನು (ವೈಶ್ವಾನರನ ಪೂರ್ಣವಾದ ಸ್ವರೂಪವನ್ನು ತಿಳಿಯಲು) ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಪಾದಗಳು ಸಡಿಲವಾಗಿ ಕ್ಷೀಣಿಸಿಬಿಡುತ್ತಿದ್ದವು ಅಥವಾ ನಿನ್ನ ಗೋಚರಕ್ಕೇ ಬೀಳುತ್ತಿರಲಿಲ್ಲ' ಎಂದನು. ॥ ೪ ॥ ಆಮೇಲೆ ಸತ್ಯಜ್ಞಪೌಲೂಷಿಯನ್ನು ಕುರಿತು ಎಲೈ ಪ್ರಾಚೀನಯೋಗ್ಯನೇ, ವೈಶ್ವಾನರನಾರೆಂಬುದಾಗಿ ನೀನು

ತಿಳಿದಿದ್ದೀಯೇ ಎಂದು ಪ್ರಶ್ನಿಸಲು ಅವನು ಅಪ್ಪೇ (ಉದಕ) ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ದೊರೆಯು ಅದು ವೈಶ್ವಾನರೀಯವಾದ ಧನವು. ನೀನು ಆ ಧನದ ಸ್ವರೂಪವನ್ನು ತಿಳಿದುದರಿಂದ ನೀನು ಧನಿಕನಾಗಿಯೂ ಉಚ್ಛ್ರಾಯಸ್ಥಿತಿಯನ್ನು ಹೊಂದಿದವನಾಗಿಯೂ ಇದ್ದೀಯೇ. ಅದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಅಂತಃಕೋಶಮಾತ್ರವಾಗಿದೆ. ನೀನು ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಕೋಶವೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನ್ನ ಗೋಚರಕ್ಕೆ ಅದು ಬೀಳುತ್ತಲೇ ಇರಲಿಲ್ಲ ಎಂದನು ॥ ೫ ॥ ಅನಂತರ ಮಹಾಶಾಲಜಾಬಾಲನನ್ನು ಕುರಿತು ಎಲೈ ಔಪಮನ್ಯವನೇ- ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದನು. ಆಕಾಶವೆಂದು ಅವನು ಉತ್ತರವನ್ನು ಕೊಡಲು ಅದನ್ನೂ ಒಪ್ಪಿ ಅದು ವೈಶ್ವಾನರಬಹುಲ (ಸಮೃದ್ಧ) ವೆಂದೂ ಇದನ್ನು ತಿಳಿದುಕೊಂಡಿರುವುದರಿಂದಲೇ ನೀನು ಪಶುಪುತ್ರಾದಿಗಳ ಬಾಹುಳ್ಯವನ್ನು ಹೊಂದಿರುವೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಪ್ರಧಾನ ಕಾಂಡಮಾತ್ರವಾಗಿರುವುದು ನೀನು ಇಲ್ಲಿಗೆ ಬರದಿದ್ದರೆ ನಿನ್ನ ದೇಹದ ಮುಖ್ಯತತ್ತ್ವವೇ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದು ತಿಳಿಯುತ್ತಲೇ ಇರಲಿಲ್ಲ ಎಂದನು. ॥ ೬ ॥ ಪುನಃ ಬುಡಿಲ ಅಶ್ವತರಾಶ್ವಿಯನ್ನು ಕುರಿತು ಎಲೈ ವೈಯಾಘ್ರಪದ್ಯನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎನ್ನಲು ಅವನು ವಾಯುವೇ ವೈಶ್ವಾನರನೆಂದನು. ಅದನ್ನೂ ಒಪ್ಪಿಕೊಂಡು ಆ ರಾಜರ್ಷಿಯು ವಾಯುವು ವೈಶ್ವಾನರನ ಮಾರ್ಗವೈವಿಧ್ಯವು. ನೀನು ಇದನ್ನು ತಿಳಿದುದರಿಂದಲೇ ನಾನಾಮಾರ್ಗಗಳಲ್ಲಿ ಸಂಚರಿಸತಕ್ಕ ರಥಗಳು ನಿನ್ನನ್ನು ಹಿಂಬಾಲಿಸುತ್ತವೆ. ಇದನ್ನು ತಿಳಿದವನು ಖಂಡಿತವಾಗಿಯೂ ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಉಸಿರು ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನಗೆ ನಿನ್ನ ಉಸಿರೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು. ॥ ೭ ॥ ಅನಂತರ ಇಂದ್ರದ್ಯುಮ್ನ ಭಾಲ್ಲವೇಯನನ್ನು ಕುರಿತು ವೈಶ್ವಾನರನಾರೆಂದು ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲಾಗಿ ಅವನು ಆದಿತ್ಯನೇ ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ನಿಜವಾಗಿಯೂ, ಸೋಮನ ತೇಜಸ್ಸೇ ವೈಶ್ವಾನರನು. ನೀನು ಇದನ್ನು ತಿಳಿದಿರುವುದರಿಂದಲೇ ನಿನ್ನ ಗೃಹದಲ್ಲಿ ಯಾವಾಗಲೂ ಸೋಮರಸವೂ ಅದರ ಪಾಕವೂ ಇಲ್ಲದೇ ಇರುವುದೇ ಇಲ್ಲ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ನೇತ್ರವಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ನೇತ್ರವೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು ॥ ೮ ॥ ಆಮೇಲೆ, ಜನಶರ್ಕರಾಕ್ಷ್ಯನನ್ನು ಕುರಿತು ಎಲೈ ಸಾಯವಸನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲು ಅವನು ಅಂತರಿಕ್ಷವೆಂದು ಹೇಳಿದನು. ಅದನ್ನೂ ಅನುಮೋದಿಸುತ್ತ ಅಂತರಿಕ್ಷವೇ ವೈಶ್ವಾನರನ ಸರ್ವೋತ್ಕೃಷ್ಟವಾದ ಅಂಶ. ನೀನು ಇದನ್ನು ತಿಳಿದಿರುವುದರಿಂದಲೇ ನೀನು ನಿನ್ನ ಸಮಾನರಾದವರಲ್ಲೆಲ್ಲಾ ಅತ್ಯುತ್ಕೃಷ್ಟನಾಗಿದ್ದೀಯೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರ ಶಿರೋಭಾಗ ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ಶಿರಸ್ಸೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ತಿಳವಳಿಕೆಯೇ ಇರುತ್ತಿರಲಿಲ್ಲ ಎಂದನು. ॥ ೯ ॥ ಕೊನೆಯಲ್ಲಿ ಅವರೆಲ್ಲರನ್ನೂ ಒಟ್ಟಿಗೆ ಉದ್ದೇಶಿಸಿ ನಿಮ್ಮಲ್ಲಿ ಪ್ರತಿಯೊಬ್ಬರೂ ವೈಶ್ವಾನರನ ಬೇರೆ ಬೇರೆ ಅಂಶಗಳನ್ನು ಗ್ರಹಿಸಿದ್ದೀರಿ. ಆದುದರಿಂದಲೇ ಬೇರೆ ಬೇರೆ ಅನ್ನವನ್ನು ಭುಜಿಸುತ್ತಿದ್ದೀರಿ. ಸುವಿದಿತರಾದ ಈ ದೇವತೆಗಳು ಪ್ರಾದೇಶವರ್ತಿಗಳಾಗಿ (Measure of a span) ಮಾತ್ರವಿರುವುದರಿಂದ ನಿಮಗೆ ಆಯಾ ದೇವತೆಗಳು ಪ್ರಾದೇಶವರ್ತಿಗಳಾಗಿ ಮಾತ್ರವಿರುವಂತೆ ನಿಮಗೆ ವಿವರಿಸುತ್ತೇನೆ ಎಂದನು. ॥ ೧೦ ॥ ಕೊನೆಯಲ್ಲಿ ತಲೆಯನ್ನು ನಿರ್ದೇಶಿಸಿ ಇದು ವೈಶ್ವಾನರನ ಅಂಶವಾದ ಸೋಮ ತೇಜಸ್ಸೆಂದೂ, ನಾಸಿಕದ ಕಡೆ ತೋರಿಸಿ ಅದು ವೈಶ್ವಾನರನ ಮಾರ್ಗಗಳ ವೈವಿಧ್ಯವೆಂದೂ, ಆಕಾಶವನ್ನು ನಿರ್ದೇಶಿಸಿ ಅದು ಸಮೃದ್ಧವೈಶ್ವಾನರನೆಂದೂ. ಮುಖ್ಯೋದಕದ ಕಡೆ ತೋರಿಸಿ ಅದು ವೈಶ್ವಾನರಧನವೆಂದೂ

ಗಡ್ಡವನ್ನು ತೋರಿಸಿ, ಅದು ವೈಶ್ವಾನರನ ಆಧಾರವೆಂದೂ ಹೇಳಿದನು. ಈ ವೈಶ್ವಾನರಾಗ್ನಿಯು ಪುರುಷಶ್ರೇಷ್ಠನಲ್ಲದೆ ಬೇರೆ ಯಾರೂ ಅಲ್ಲವೆಂದೂ, ಮತ್ತು ಪುರುಷರೂಪನೂ, ಪುರುಷನ ಅಂತಸ್ಥನಾಗಿ ಪ್ರತಿಷ್ಠಿತನಾಗಿರುವವನೂ ಆದ ಈ ವೈಶ್ವಾನರಾಗ್ನಿಯನ್ನು ತಿಳಿದವನು ಮರಣವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುವನೆಂದೂ, ಇವನ ಪ್ರಶಂಸೆಯನ್ನು ಯಾವಾಗಲೂ ಮಾಡುವವನಿಗೆ ಯಾವ ತೊಂದರೆಯೂ ಆಗಲಾರದೆಂದೂ ವಿವರಿಸಿದನು. ॥ ೧೧ ॥

(ಶ. ಬ್ರಾ, ೧೦, ೬-೧-೧ರಿಂದ ೧೧)

ಹೀಗೆ ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಇರತಕ್ಕ ಸಂಬಂಧವನ್ನು ತೋರಿಸಿ ವೈಶ್ವಾನರಾಗ್ನಿಯ ಸ್ವರೂಪವನ್ನು ವಿವರಿಸುವ ಕ್ರಮವನ್ನು ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ನೋಡಬಹುದು. ಛಾಂದೋಗ್ಯೋಪನಿಷತ್ತಿನಲ್ಲಿಯೂ (೫-೧೧ ರಿಂದ ೫-೧೮ ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆಯೇ ವೈಶ್ವಾನರಾಗ್ನಿ ಸಂಬಂಧವಾದ ಕಥೆಯನ್ನೂ ವಿವರಿಸಿದೆ. ಆದರೆ ಹೆಸರುಗಳಲ್ಲಿಯೂ, ವಿವರಣೆಯಲ್ಲಿಯೂ ಅಲ್ಲಲ್ಲಿ ಕೊಂಚ ವ್ಯತ್ಯಾಸಗಳಿರುತ್ತವೆ. ಆದರೂ ಸಹ ಅಶ್ವಪತಿ ಕೈಕೇಯನು ತನ್ನಲ್ಲಿ ಉಪದೇಶಕ್ಕಾಗಿ ಬಂದ ಎಲ್ಲಾ ಋಷಿಗಳ ಅಭಿಪ್ರಾಯಗಳನ್ನೂ ತಿಳಿದು ಅವುಗಳನ್ನೆಲ್ಲಾ ಅನುಮೋದಿಸಿ ಕೊನೆಯಲ್ಲಿ ಅವೆಲ್ಲವೂ ವೈಶ್ವಾನರಾಗ್ನಿಯ ಬೇರೆಬೇರೆ ಅಂಶಗಳೆಂದೂ ಪೂರ್ಣವಾದ ವೈಶ್ವಾನರಲ್ಲಿ ಆ ಎಲ್ಲಾ ಅಂಶಗಳ ಸಾಮರಸ್ಯವೂ ಒಟ್ಟಾಗಿದೆಯೆಂದೂ ವೈಶ್ವಾನರನ ಸರ್ವತೋಮುಖವಾದ ಸ್ವರೂಪವನ್ನು ಶತಪಥ ಬ್ರಾಹ್ಮಣದಲ್ಲಿರುವಂತೆಯೇ ವಿವರಿಸಿದ್ದಾನೆ.

> ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ ಪಚನ ಆಸ್ಯಮಾಹವನೀಯಃ ॥

(ಛಾಂದೋಗ್ಯೋಪನಿಷತ್ ೫-೧೮-೨)

ಅತ್ಯಧಿಕವಾಗಿ ಬೆಳಗುತ್ತಿರುವ ಈ ಅಂತರಿಕ್ಷವೇ ವಿಶ್ವಾತ್ಮನಾದ ಈ ವೈಶ್ವಾನರನ ಶಿರಸ್ಸು, ವಿಶ್ವರೂಪನಾದ ಈ ಆದಿತ್ಯನೇ ಅವನ ನೇತ್ರವು, ಮಾರ್ಗವೈವಿಧ್ಯವನ್ನು ಹೊಂದಿರುವ ವಾಯುವೇ ಉಸಿರು; ವಿಸ್ತೃತವಾಗಿರುವ ದಿಕ್ಕೇ ಅವನ ದೇಹ, ಅಬ್ರೂಪದ ಧನವೇ ಅವನ ಅಂತಃಕೋಶ; ಸರ್ವಾಧಾರಳಾಗಿರುವ ಪೃಥ್ವಿಯೇ ಅವನ ಪಾದ; ಯಜ್ಞವೇದಿಕೆಯೇ ಅವನ ಎದೆ. ದರ್ಭೆಗಳೇ ಅವನ ರೋಮಗಳು, ಗಾರ್ಹಪತ್ಯಾಗ್ನಿಯೇ ಅವನ ಹೃದಯ, ಅನ್ವಾಹಾರ್ಯಪಚನಾಗ್ನಿಯೇ ಅವನ ಮನಸ್ಸು, ಆಹವನೀಯಾಗ್ನಿಯೇ ಅವನ ಮುಖ.

> ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಂಗಾರಾನಪೋಹ್ಯ ಭಸ್ಮನಿ ಜುಹುಯಾತ್ತಾದೃಕ್ತತ್ಸ್ಯಾತ್ ।

(ಛಾ. ಉ. ೫-೨೪-೧)

ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯದೇ ಅಗ್ನಿಹೋತ್ರವನ್ನು ನೆರವೇರಿಸುವವನು ಬೆಂಕಿಯಿಲ್ಲದ ಭಸ್ಮದಲ್ಲಿ ಹೋಮ ಮಾಡಿದಂತಾಗುತ್ತದೆಂದು ಜ್ಞಾನದ ಅವಶ್ಯಕತೆಯನ್ನು ತೋರಿಸಿದೆ.

ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।

(ಛಾ. ಉ. ೫-೨೪-೨)

ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಮಹಿಮೆಯನ್ನು ತಿಳಿದುಕೊಂಡು ಅಗ್ನಿಹೋತ್ರವನ್ನು ನೆರವೇರಿಸುವವನು ಸಕಲ ಲೋಕಗಳಲ್ಲಿಯೂ ಸಕಲ ಭೂತಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹೋಮಮಾಡಿದಂತಾಗುತ್ತದೆ. ಎಂದು ವೈಶ್ವಾನರಾಗ್ನಿಯ ವ್ಯಾಪಕತ್ವವನ್ನು ತೋರಿಸಿದೆ.

ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।

(ನಿ. ೭-೨೧)

ಎಂದು ಮೇಲೆ ಉದಹರಿಸಿರುವ ನಿರುಕ್ತಕಾರರ ನಿರ್ವಚನವೂ ಸಹ ಈ ಎಲ್ಲಾ ಶ್ರುತಿವಾಕ್ಯಗಳನ್ನೇ ಆಧಾರವಾಗಿಟ್ಟು ಕೊಂಡಿರುತ್ತದೆ. ಈ ನಿರ್ವಚನವನ್ನೇ ಅನುಸರಿಸಿ ಶಂಕರಾಚಾರ್ಯರೂ ಸಹ,

ವಿಶ್ವಾನ್ನರಾನ್ನಯತಿ ಪುಣ್ಯಪಾಪಾನುರೂಪಾಂ ಗತಿಂ ಸರ್ವಾತ್ಮೈಷ ಈಶ್ವರೋ ವೈಶ್ವಾನರೋ ಮಿಾಶ್ವೇ ನರ ಏವ ವಾ ಸರ್ವಾತ್ಮತ್ವಾತ್ ! ವಿಶ್ವೈರ್ವಾ ನರೈಃ ಪ್ರತ್ಯಗಾತ್ಮತಯಾ ಪ್ರವಿಭಜ್ಯ ನೀಯತ ಇತಿ ವೈಶ್ವಾನರಸ್ತಮೇವಮುಪಾಸ್ತೇ । .... .... .... .... .... ವೈಶ್ವಾನರವಿತ್ಸರ್ವಾತ್ಮಾ ಸನನ್ನಮತ್ತಿ ।

(ಛಾಂದೋಗ್ಯೋಪನಿಷದ್ಭಾಷ್ಯ ೫-೧೮-೧)

ಎಂಬುದಾಗಿ ನಿರುಕ್ತಕಾರರ ನಿರ್ವಚನದಂತೆಯೇ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಸ್ವರೂಪವನ್ನು ವಿವರಿಸಿದ್ದಾರೆ.

ಅಭಿಶ್ರೀಃ—ಅಭಿಶ್ರಯಣೀಯಃ (ನಿ. ೭—೨೨) ಪೂಜ್ಯನೂ, ಆಶ್ರಯನೂ ಆದವನು, ಮೇಲೆ ವಿವರಿಸಿರುವ ಕಾರಣಗಳಿಂದ ವೈಶ್ವಾನನು ಸರ್ವಲೋಕಕ್ಕೂ ಆಶ್ರಯನು ಪೂಜ್ಯವಾದ ಆಧಾರ ಅಥವಾ ಆಶ್ರಯ, ಎನ್ನುವ ಅರ್ಥದಲ್ಲಿ ಈ ವಿಶೇಷಣವು ಮುಖ್ಯವಾಗಿ ಉಪಯೋಗಿಸಲ್ಪಟ್ಟಿದೆ. ಸರ್ವಲೋಕಕ್ಕೂ ಆಧಾರವಾಗಿರುವ ಮಹತ್ತುಳ್ಳ ಎಂದರ್ಥ.

ಏನೀ ತ ಏತೇ ಬೃಹತೀ ಅಭಿಶ್ರಿಯಾ ಹಿರಣ್ಮಯೀ ವಕ್ವರೀ ಬರ್ಹಿರಾಶಾತೇ ।

(ಋ. ಸಂ. ೧-೧೪೪-೬)

ಘೃತವತೀ ಭುವನಾನಾಮಭಿಶ್ರಿಯೋರ್ವೀ ಪೃಥ್ವೀ ಮಧುದುಘೇ ಸುಪೇಶಸಾ ।

(ಋ. ಸಂ. ೬-೭೦-೧)

ಪ್ರತ್ನಂ ಹೋತಾರಮೀಡ್ಯಂ ಜುಷ್ಟಮಗ್ನಿಂ ಕವಿಕ್ರತುಂ । ಅಧ್ವರಾಣಾಮಭಿಶ್ರಿಯಂ ।

(ಋ. ಸಂ. ೮-೪೪-೭)

ವಿರಾಣ್ಮಿತ್ರಾವರುಣಯೋರಭಿಶ್ರೀರಿಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ ।

(ಋ. ಸಂ. ೧೦-೧೩೦-೫)

ಇತ್ಯಾದಿ ಸನ್ನಿವೇಶಗಳೆಲ್ಲೆಲ್ಲಾ ಅಭಿಶ್ರೀ ಎಂಬ ವಿಶೇಷಣಕ್ಕೆ ಪಂಪ್ಯವಾದ, ಸ್ತುತ್ಯವಾದ ಎಂದರ್ಥವಾಗುವಂತೆ ಇಲ್ಲಿಯೂ ಸಹ ಪೂಜ್ಯನಾದ ಆಶ್ರಯನು ಎಂದು ವೈಶ್ವಾನರನ ಮಹತ್ತ್ವವನ್ನು ತಿಳಿಸಿದೆ.

ವಿಚಷ್ಟೇ—ಚಿಕ್ಯತ್, ಚಾಕನತ್, ಅಚಕ್ಷ್ಮ ಇತ್ಯಾದಿ ಪಶ್ಯತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೧೩) ವಿಚಷ್ಟೇ ಎಂದರೆ ನೋಡುತ್ತಾನೆ ಎಂದರ್ಥವು. ಪೃಥ್ವಿಯಲ್ಲಿ ಉತ್ಪನ್ನವಾದರೂ ಸಹ,

ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ।

(ಋ. ಸ. ೩–೩–೧೦)

ಎಂದು ವರ್ಣಿಸಿರುವಂತೆ ದ್ಯಾವಾಪೃಥಿವ್ಯಾದಿ ಸಕಲ ಲೋಕಗಳನ್ನೂ ವ್ಯಾಪಿಸಿರುವುದರಿಂದ ಸಕಲ ವಸ್ತುವೂ ಇವನ ಗೋಚಾರಕ್ಕೆ ಬೀಳುತ್ತದೆಯೆಂದರ್ಥ. ಸಕಲ ಭುವನಗಳಿಗೂ ಪ್ರಭುವಾಗಿರುವುದರಿಂದಲೂ, ಇವನ ಅನುಗ್ರಹದಿಂದಲೇ ಜಗತ್ಕಲ್ಯಾಣವೂ ಆಗಬೇಕಾಗಿರುವುದರಿಂದಲೂ ಇಂತಹ ವೈಶಾನರಸ್ಯ ಸುಮತೌ ಸ್ಯಾಮ—ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮ (ನಿ. ೭–೨೨) ಇವನ ಕಲ್ಯಾಣಾತ್ಮಕವಾದ ಅನುಗ್ರಹವನ್ನು ಕಾಪಾಡುವುದಕ್ಕೆ ಯೋಗ್ಯರಾಗಿರೋಣ ಎಂದು ಮುಖ್ಯಾಭಿಪ್ರಾಯವು.

ಈ ರೀತಿ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಇಪ್ಪತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯೋವಿಂಶತಿಃ ಖಂಡಃ

### ಇಪ್ಪತ್ತಮೂರನೆಯ ಖಂಡವು

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ॥ ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ (ಋ. ಸಂ. ೧-೫೯-೬) ಪ್ರಬ್ರವೀಮಿ ತನ್ಮಹಿತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಂಚತೇ ಸೇವಂತೇ ವರ್ಷಕಾಮಾ ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯನ್ತ್ಯಸ್ಮಿನ್ರಸಾ ಉಪದಾಸಯತಿ ಕರ್ಮಾಣಿ ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿವಚ್ಛಂಬರಂ ಮೇಘಮಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾ ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ಪ್ರತ್ಯವರೋಹಶ್ಚಿಕೀರ್ಷಿತಸ್ತಮನುಕೃತಿಂ ಹೋತಾಗ್ನಿಮಾರುತೇ ಶಸ್ತ್ರೇ ವೈಶ್ವಾನರೀಯೇಣ

ಸೂಕ್ತೇನ ಪ್ರತಿಪದ್ಯತೇ (ಐ. ಬ್ರಾ. ೧೨-೩) ಸೋಽಪಿ ನ ಸ್ತೋತ್ರಿಯಮಾದ್ರಿಯೇತಾ-
ಗ್ನೇಯೋ ಹಿ ಭವತಿ ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ
ತತೋಽಗ್ನಿಮಿಹಸ್ಥಾನಮತ್ರೈವ ಸ್ತೋತ್ರಿಯಂ ಶಂಸತ್ಯಥಾಪಿ ವೈಶ್ವಾನರೀಯೋ
ದ್ವಾದಶಕಪಾಲೋ ಭವತ್ಯೇತಸ್ಯ ಹಿ ದ್ವಾದಶವಿಧಂ ಕರ್ಮಾಥಾಪಿ ಬ್ರಾಹ್ಮಣಂ ಭವತ್ಯಸೌ
ವಾ ಆದಿತ್ಯೋಽಗ್ನಿರ್ವೈಶ್ವಾನರ ಇತ್ಯಥಾಪಿ ನಿವಿತ್ಸೌರ್ಯವೈಶ್ವಾನರೀ ಭವತ್ಯಾ ಯೋ ದ್ಯಾಂ
ಭಾತ್ಯಾ ಪೃಥಿವೀಮಿತ್ಯೇಷ ಹಿ ದ್ಯಾವಾಪೃಥಿವ್ಯಾವಾಭಾಸಯತ್ಯಥಾಪಿ ಛಾಂದೋಮಿಕಂ
ಸೂಕ್ತಂ ಸೌರ್ಯವೈಶ್ವಾನರಂ ಭವತಿ ದಿವಿ ಪೃಷ್ಟೋ ಅರೋಚತೇತ್ಯೇಷ ಹಿ ದಿವಿ
ಪೃಷ್ಟೋ ಅರೋಚತೇತ್ಯಥಾಪಿ ಹವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ
ಭವತ್ಯಯಮೇವಾಗ್ನಿರ್ವೈಶ್ವಾನರ ಇತಿ ಶಾಕಪೂಣಿರ್ವಿಶ್ವಾನರಾವೇತೇ ಉತ್ತರೇ
ಜ್ಯೋತಿಷೀ ವೈಶ್ವಾನರೋಽಯಂ ಯತ್ತಾಭ್ಯಾಂ ಜಾಯತೇ ಕಥಂ ತ್ವಯಮೇತಾಭ್ಯಾಂ
ಜಾಯತ ಇತಿ ಯತ್ರ ವೈದ್ಯುತಃ ಶರಣಮಭಿಪಂತಿ ಯಾವದನುಪಾತ್ತೋ ಭವತಿ
ಮಧ್ಯಮಧರ್ಮೈವ ತಾವದ್ಭವತ್ಯುದಕೇಂಧನಃ ಶರೀರೋಪಶಮನ ಉಪಾದೀಯಮಾನ
ಏವಾಯಂ ಸಂಪದ್ಯತ ಉದಕೋಪಶಮನಃ ಶರೀರದೀಪ್ತಿರಥಾದಿತ್ಯಾದುದೀಚಿ ಪ್ರಥಮ-
ಸಮಾವೃತ್ತ ಆದಿತ್ಯೇ ಕಂಸಂ ವಾ ಮಣಿಂ ವಾ ಪರಿಮೃಜ್ಯ ಪ್ರತಿಸ್ವರೇ ಯತ್ರ ಶುಷ್ಕಗೋ-
ಮಯಮಸಂಸ್ಪರ್ಶಯನ್ಧಾರಯತಿ ತತ್ಪ್ರದೀಪ್ಯತೇ ಸೋಽಯಮೇವ ಸಂಪದ್ಯತೇಽಥಾ-
ಪ್ಯಾಹ । ವೈಶ್ವಾನರೋ ಯತತೇ ಸೂರ್ಯೇಣೇತಿ । ನ ಚ ಪುನರಾತ್ಮನಾತ್ಮಾ ಸಂಯತ-
ತೇಽನ್ಯೇನೈವಾನ್ಯಃ ಸಂಯತತ ಇತಿ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ
ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯ-
ದಥ ಯಾನ್ಯೇತಾನ್ಯೌತ್ತಮಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಪೌಷ್ಣಾನಿ
ವಾ ವೈಷ್ಣವಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ
ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೇತಿ ವಿಪರ್ಯೇಷೀತ್ಯಾಗ್ನೇಯೇಷ್ವೇವ ಹಿ
ಸೂಕ್ತೇಷು ವೈಶ್ವಾನರೀಯಾಃ ಪ್ರವಾದಾ ಭವಂತ್ಯಗ್ನಿಕರ್ಮಣಾ ಚೈನಂ ಸ್ತೌತೀತಿ
ದಹಸೀತಿ ವಹಸೀತಿ ಪಚಸೀತಿ ಯಥೋ ಏತದ್ವರ್ಷಕರ್ಮಣಾ ಹ್ಯೇನಂ ಸ್ತೌತೀತ್ಯಸ್ಮಿನ್ನ-
ಪ್ಯೇತದುಪಪದ್ಯತೇ । ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ । ಭೂಮಿಂ
ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥ (ಋ. ಸಂ. ೧—೧೬೪—೫೧) ಇತಿ ॥
ಸಾ ನಿಗದವ್ಯಾಖ್ಯಾತಾ ॥ ೨೩ ॥

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರ-
ಹಣಂ ಸಚಂತೇ । ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾನಧೂ-
ನೋತ್ಕಾಷ್ಠಾ ಅವ ಶಂಬರಂ ಭೇತ್ ॥

(ಋ. ಸಂ. ೧-೪-೨೩)

ವೈಶ್ವಾನರ ಶಬ್ದದಿಂದ ಮಧ್ಯಮಸ್ಥಾನದ ವೈದ್ಯುತಾಗ್ನಿಯೇ ಸ್ತುತಿಸಲ್ಪಡುತ್ತದೆ ಎಂಬುದಕ್ಕೆ ಉದಾಹರಣೆಯನ್ನು ತೋರಿಸುತ್ತಾರೆ. ಈ ಮಂತ್ರದಲ್ಲಿ ವೈಶ್ವಾನರ ದೇವತೆಗೆ ವೃಷ್ಟಿಕರ್ಮದಿಂದ ಏಕವಾಕ್ಯತಾಸಂಬಂಧವಿರುವುದರಿಂದ ಮಧ್ಯಮಸ್ಥಾನದ ದೇವತೆಯೇ ವೈಶ್ವಾನರಲ್ಲದೆ ಬೇರೆ ಯಾರೂ ವೈಶ್ವಾನರನಲ್ಲನೆಂದು ಆಚಾರ್ಯರ ಅಭಿಪ್ರಾಯ.

ಬ್ರವೀಮಿ ತನ್ಮಹಿತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿತವ್ಯಾ ಮನುಷ್ಯಾಃ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾಃ । ದಸ್ಯುರ್ದಸ್ಯತೇಃ ಕ್ಷಯಾರ್ಥಾತ್, ಉಪದಸ್ಯಂತ್ಯಸ್ಮಿನ್ರಸಾಃ, ಉಪದಾಸಯತಿ ಕರ್ಮಾಣಿ, ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನವಚ್ಛಂಬರಂ ಮೇಘಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವೈಶ್ವಾನರನ ಮಹಾಭಾಗ್ಯವನ್ನು ಚನ್ನಾಗಿ ತಿಳಿಸಿ ಹೇಳುತ್ತೇನೆ. ಮಳೆಯನ್ನು ಬಯಸುವ ಮನುಷ್ಯರು ವೃಷ್ಟಿಪ್ರತಿಬಂಧಕಗಳಾದ ಮೇಘಗಳನ್ನು ನಾಶಮಾಡುವ, ವಿಘ್ನವನ್ನು ಹೋಗಲಾಡಿಸಿ ಮಳೆ ಸುರಿಯುವಂತೆ ಮಾಡುವ ಈ ವೈಶ್ವಾನರನ್ನು ಸೇವಿಸುತ್ತಾರೆ. ಇವರು ದಸ್ಯು ಎಂದರೆ ರಸಶೋಷಕರನ್ನು ಕೊಂದಿರುತ್ತಾನೆ. ದಸು—ಉಪಕ್ಷಯೇ ಧಾತುವಿನಿಂದ ದಸ್ಯುಶಬ್ದವುಂಟಾಗಿವೆ. ಅಥವಾ ಶುಭಕಾರ್ಯವನ್ನು ಕೆಡಿಸುವಂತೆ ಮಾಡುವವರು ದಸ್ಯುಗಳು, ಕಾಷ್ಠಾಃ ಅಂದರೆ ಮಳೆ ನೀರನ್ನು ಕೆಳಮುಖವಾಗಿ ಬೀಳುವಂತೆ ಮಾಡಿದನು. ನೀರು ಸುರಿಸದ ಮೇಘವನ್ನು ಹೊಡೆದು ನೀರು ಸುರಿಯುವಂತೆ ಈ ವೈಶ್ವಾನರನು ಮಾಡುತ್ತಾನೆ. ಈ ವಿವರಣೆಯಿಂದ ಮಧ್ಯಮಸ್ಥಾನದೇವತೆಯೇ ವೈಶ್ವಾನರನೆಂದು ವ್ಯಕ್ತವಾಗುತ್ತದೆ.

ಅಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾಃ ॥

ಮತಾಂತರವನ್ನು ಹೇಳಲು ಉಪಕ್ರಮಿಸುತ್ತಾರೆ. ಪೂರ್ವಯಾಜ್ಞಿಕರು ಈ ವೈಶ್ವಾನರನು ಆದಿತ್ಯನೆಂದೇ ಹೇಳುತ್ತಾರೆ ವಿಧಿಮಂತ್ರಅರ್ಥವಾದಾತ್ಮಕವಾದ ವೇದದಿಂದ ಯಜ್ಞದ ಸ್ವರೂಪವನ್ನು ನಿಶ್ಚಯಿಸಿ, ಆ ಯಜ್ಞವನ್ನು ವಿಧಿವತ್ತಾಗಿ ಮೊದಲು ಮಾಡಿದವರು ಪೂರ್ವಯಾಜ್ಞಿಕರು.

ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತಃ ॥

ಯಾವ ಉಪಪತ್ತಿಯಿಂದ ಆದಿತ್ಯನೇ ವೈಶ್ವಾರನೆಂದು ಪೂರ್ವಯಾಜ್ಞಿಕರು ಹೇಳಿರುತ್ತಾರೆಂಬುದನ್ನು ವಿವರಿಸುತ್ತಾರೆ.

ಪೃಥಿವೀ, ಅಂತರಿಕ್ಷ, ದ್ಯುಲೋಕಗಳೆಂದು ಲೋಕಗಳ ಆರೋಹಣಕ್ರಮ ಯಾವರೀತಿಯಾಗಿದೆಯೋ ಅದರಂತೆ ಸವನಗಳ ಕ್ರಮವೂ ಹೇಳಿದೆ. ಪ್ರಾತಃಸವನ, ಮಾಧ್ಯಂದಿನಸವನ, ಸಾಯಂಸವನವೆಂದು ಕ್ರಮವಾಗಿ ಶ್ರುತಿಯಲ್ಲಿ ಹೇಳಿದೆ.

**ರೋಹಾತ್ಪ್ರತ್ಯವರೋಹಶ್ಚಿಕೀರ್ಷಿತಸ್ತಾಮನುಕೃತಿಂ ಹೋತಾಽಽಗ್ನೀ ಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥**

ಹೋತೃ ಸ್ತುತಿಸುವವನಾದುದರಿಂದ ಪೃಥಿವೀಲೋಕಸಂಬಂಧಿಯಾದ ಅಗ್ನ್ಯಾದಿ ದೇವತೆಗಳಿಂದ ಕೂಡಿದ ಪ್ರಾತಃಸವನವನ್ನು ಸ್ತುತಿಸುತ್ತಾನೆ. ಮಾಧ್ಯಂದಿನಸವನದಲ್ಲಿ ಅಂತರಿಕ್ಷಲೋಕಸಂಬಂಧಿಯನ್ನು ಸ್ತುತಿಸುತ್ತಾನೆ. ತೃತೀಯಸವನದಲ್ಲಿ ದ್ಯುಲೋಕ ಭಕ್ತಿಯನ್ನು ಸ್ತುತಿಸುತ್ತಾನೆ. ಹೀಗೆ ಆಯಾಯ ಭಕ್ತಿಯನ್ನು ಸ್ತುತಿಸುತ್ತಾ ಪೃಥಿವಿಯಿಂದ ಅಂತರಿಕ್ಷವನ್ನೂ, ಅಂತರಿಕ್ಷದಿಂದ ದ್ಯುಲೋಕವನ್ನೂ ಏರುತ್ತಾನೆ. ತೃತೀಯಸವನವನ್ನು ಹೊಂದಿದ ಯಜಮಾನನು ಸ್ವರ್ಗವನ್ನು ಪಡೆದು ಪೃಥಿವಿಗೆ ಬೀಳಬಹುದು ಇದನ್ನು ಪರಿಹರಿಸಲು ಆಗ್ನಿಮಾರುತ ಅಂತಿಮಶಸ್ತ್ರದಲ್ಲಿ ಹೋತೃವು ಪ್ರತ್ಯವರೋಹವನ್ನು ಬಯಸುತ್ತಾನೆ. ಅಂದರೆ ಸ್ವರ್ಗದಿಂದ ಭೂಮಿಗೆ ಇಳಿಯುತ್ತಾನೆ. ಇದು ಹೇಗೆಂದರೆ—ಇತರ ಶಸ್ತ್ರದಂತೆ ಸ್ತೋತ್ರಿಯತೃಚದಿಂದ ಪ್ರಾರಂಭವಮಾಡದೆ ದ್ಯುಸ್ಥಾನಸಂಬಂಧಿ ವೈಶ್ವಾನರೀಯಸೂಕ್ತದಿಂದ ಶಸ್ತ್ರವನ್ನು ಪ್ರಾರಂಭಿಸುತ್ತಾನೆ. 'ವೈಶ್ವಾನರಾಯ ಪೃಥುಪಾಜಸೇ— (ಯ. ಸಂ. ೩-೧-೩) ಎಂದು ಮೊದಲು ಪ್ರಾರಂಭಿಸುತ್ತಾರೆ. ಇಲ್ಲಿ ವೈಶ್ವಾನರ ಎಂದರೆ ಸೂರ್ಯನನ್ನು ತೆಗೆದುಕೊಳ್ಳದಿದ್ದರೆ ಆಗ ಅವರೋಹವು ಅನುಪಪನ್ನವಾಗುತ್ತವೆ.

**ಸೋಽಪಿ ನ ಸ್ತೋತ್ರಿಯಮಾದ್ರಿಯೇತಾಗ್ನೇಯೋ ಹಿ ಭವತಿ ॥**

ಸ್ತೋತ್ರಿಯತೃಚವು ಆಗ್ನೇಯವಾಗಿರುತ್ತದೆ. ಅಂದರೆ ಅಗ್ನಿಸ್ತುತಿಪ್ರತಿಪಾದಕವಾಗಿರುತ್ತದೆ. ಅಗ್ನಿಯು ಪೃಥಿವೀಸ್ಥಾನವೆಂದು ಪ್ರಸಿದ್ಧವಾಗಿದೆ. ಇಲ್ಲಿ ಪ್ರತ್ಯವರೋಹಕಾಲದಲ್ಲಿಯೂ ಇವನ್ನೇ ಅಂಗೀಕರಿಸುವುದಾದರೆ ಅಂದರೆ ಸ್ತೋತ್ರಿಯತೃಚದಿಂದಲೇ ಆರಂಭಿಸುವುದಾದರೆ ಆಗ ಪ್ರತ್ಯವರೋಹಾನುಕೃತಿಯಾಗಲಾರದು. ಮೇಲೇರುವಾಗ ಅನ್ಯಶಸ್ತ್ರವಿಷಯದಲ್ಲಿ ಸ್ತೋತ್ರಿಯದಿಂದ ಆರಂಭ ಯುಕ್ತವಾಗಿದೆ. ಇಲ್ಲಿ ಅವರೋಹವನ್ನು ಬಯಸುವವನಾದುದರಿಂದ ಮೊದಲು ದ್ಯುಸ್ಥಾನದೇವತೆಯನ್ನೇ ಸ್ತುತಿಸುವು ದರಿಂದ ವೈಶ್ವಾನರೀಯಸೂಕ್ತದಿಂದ ಮೊದಲು ಪ್ರಾರಂಭಿಸುತ್ತಾನೆ. ಇದರಿಂದ ಆದಿತ್ಯನೇ ವೈಶ್ವಾನರನೆಂದು ಸಿದ್ಧವಾಗುತ್ತದೆ.

**ತತ ಆಗಚ್ಛತಿ ಮಧ್ಯಮಸ್ಥಾನಾ ದೇವತಾ ರುದ್ರಂಚ ಮರುತಶ್ಚ ॥**

ನಿಶ್ಚಯವಾಗಿಯೂ ಇದು ಪ್ರತ್ಯವರೋಹಾನುಕರಣವೆಂದು ದೃಢಪಡಿಸುತ್ತಾರೆ. ವೈಶ್ವಾನರೀಯಸೂಕ್ತದಿಂದ ಪ್ರತ್ಯವರೋಹಣ ಕ್ಕಾಗಿ ಸ್ತುತಿಸಿದಮೇಲೆ ಕೆಳಗೆ ಇಳಿದು ಮಧ್ಯಮಸ್ಥಾನದಲ್ಲಿ ರುದ್ರ ಮತ್ತು ಮರುದ್ದೇವತೆಗಳನ್ನು ಸ್ತುತಿಸಲು ಪ್ರಾರಂಭಿಸುತ್ತಾನೆ. 'ಆತೇ ಪಿತರ್ಮರುತಾಂ ಸುಮ್ನಮೇತು'-(ಋ. ಸಂ. ೨.೪-೧೧) ಎಂದು ಮಧ್ಯಮಸ್ಥಾನ ದೇವತೆಯನ್ನು ಸ್ತುತಿಸಲು ಪ್ರಾರಂಭಿ ಸುವ ಮಂತ್ರ.

**ತತೋಽಗ್ನಿಮಿಹಸ್ಥಾನಮತ್ರೈವ ಸ್ತೋತ್ರಿಯಂ ಶಂಸತಿ ॥**

ಮಧ್ಯಮಸ್ಥಾನ ದೇವತಾಸ್ತುತಿಯಾದಮೇಲೆ ಪೃಥಿವೀಸ್ಥಾನವಾದ ಅಗ್ನಿಯನ್ನು ಹೊಂದಿದಮೇಲೆ ಸ್ತೋತ್ರಿಯತೃಚದಿಂದ

ಸ್ತುತಿಸುತ್ತಾನೆ. 'ಯಜ್ಞಾಯಜ್ಞಾವೋ ಅಗ್ನಯೇ' (ಋ. ಸಂ. ೬-೪-೫) ಎಂದು ಆ ಮಂತ್ರ ಪ್ರಾರಂಭವಾಗುತ್ತದೆ. ಹೀಗೆ ವಿಧ್ಯನುಕರಣವಿರುವುದರಿಂದ ಆದಿತ್ಯನೇ ವೈಶ್ವಾನರನೆಂದು ಸಿದ್ಧವಾಗುತ್ತದೆ.

**ಅಥಾಪಿ ವೈಶ್ವಾನರೀಯೋ ದ್ವಾದಶಕಪಾಲೋ ಭವತಿ। ಏತಸ್ಯ ಹಿ ದ್ವಾದಶವಿಧಂ ಕರ್ಮ ಅಥಾಪಿ ಬ್ರಾಹ್ಮಣಂ ಭವತಿ—"ಅಸೌ ವಾ ಆದಿತ್ಯೋಽಗ್ನಿರ್ವೈಶ್ವಾನರಃ" ॥ ಇತಿ ॥**

ಆದಿತ್ಯನೇ ವೈಶ್ವಾನರನೆಂಬುದಕ್ಕೆ ಪ್ರಮಾಣಾಂತರವನ್ನು ತೋರಿಸುತ್ತಾರೆ. ದೇವತಾಗುಣಸಾಮ್ಯದಿಂದ ಅಧಿಯಜ್ಞದಲ್ಲಿ ಗುಣ ವಿಧಿಗಳನ್ನು ಕಲ್ಪಿಸುತ್ತಾ.. ವೈಶ್ವಾನರಸಂಬಂಧಿ ಪುರೋಡಾಶಾದಿಗಳು ಯಾವಾಗಲೂ ದ್ವಾದಶಕಪಾಲಸಂಸ್ಕೃತವಾಗಿಯೇ ಇರುತ್ತದೆ. ಕರ್ಮವೂ ಕೂಡಾ ಹನ್ನೆರಡುರೀತಿಯಾಗಿ ಹನ್ನೆರಡು ತಿಂಗಳಲ್ಲಿ ಪ್ರವಿಭಕ್ತವಾಗಿರುತ್ತದೆ. ಹೀಗೆ ದೇವತಾಗುಣದಲ್ಲಿ ಕಪಾಲವಿಧ್ಯನುಕರಣವಿರುವುದರಿಂದ ಆದಿತ್ಯನೇ ವೈಶ್ವಾನರನೆಂದು ವ್ಯಕ್ತವಾಗುತ್ತದೆ.

**ಅಥಾಪಿ ನಿವಿತ್ ಸೌರ್ಯವೈಶ್ವಾನರೀ ಭವತಿ ॥**

ಪೂರ್ವೋಕ್ತಾರ್ಥದಲ್ಲಿ ಪ್ರಮಾಣಾಂತರವನ್ನು ತೋರಿಸುತ್ತಾರೆ. ಸೌರ್ಯವೈಶ್ವಾನರೀ ಎಂಬ ಹೆಸರುಳ್ಳ ನಿವತ್ ಪ್ರಸಿದ್ಧವಾಗಿದೆ ಆಕೃತಿವಿಶಿಷ್ಟವಾದ ಮಂತ್ರವಿಶೇಷಕ್ಕೆ ನಿವಿತ್ ಎಂದು ಹೆಸರು ಇದು ಶಸ್ತ್ರಮಧ್ಯದಲ್ಲಿರುತ್ತಾರೆ. ಈ ಹೆಸರಿನಿಂದ ವೈಶ್ವಾನರನೆಂದರೆ ಸೂರ್ಯನೇ. ಪಾರ್ಥಿವಾಗ್ನಿಯೂ ಅಲ್ಲ. ಮಧ್ಯಮಸ್ಥಾನನೂ ಅಲ್ಲವೆಂದು ಸ್ಪಷ್ಟವಾಗುತ್ತದೆ. ಸೂರ್ಯವೈಶ್ವಾನರ ಸಂಬಂಧ ವಾದುದು ಸೌರ್ಯವೈಶ್ವಾನರೀ 'ತಸ್ಯೇದಂ' ಸೂತ್ರದಿಂದ ಅಣ್‌ಪ್ರತ್ಯಯ ಬಂದಿದೆ. ಆ ನಿವಿತ್ತಿನಲ್ಲಿ ಮುಂದೆ ಹೇಳುವ ಪದಗಳು ವಿರುತ್ತದೆ.

**ಆ ಯೋ ದ್ಯಾಂ ಭಾತ್ಯಾ ಪೃಥಿವೀಮಿತಿ ॥**

ಯಾವನು ದ್ಯುಲೋಕವನ್ನು ಪ್ರಕಾಶಗೊಳಿಸುವನೋ, ಮತ್ತು ಪೃಥಿವಿಯನ್ನೂ ಸುತ್ತಲೂ ಬೆಳಗುವನೋ ಎಂದು ಸೌರ್ಯ ವೈಶ್ವಾನರೀ ನಿವಿನ್ಮಂತ್ರದಲ್ಲಿ ಹೇಳಿರುತ್ತಾರೆ. ಸೂರ್ಯನಿಗಿಂತ ಬೇರೆಯಾರೂ ದ್ಯಾವಾಪೃಥಿಯನ್ನು ಪ್ರಕಾಶಪಡಿಸುವುದಿಲ್ಲ.

**ಏಷ ಹಿ ದ್ಯಾವಾಪೃಥಿವ್ಯಾವಾಭಾಸಯುತಿ ॥**

ಪೂರ್ವೋಕ್ತವಾಕ್ಯಾರ್ಥ ನಿರ್ವಚನವನ್ನು ತೋರಿಸುತ್ತಾರೆ. ಈ ಸೂರ್ಯನೇ ದ್ಯಾವಾಪೃಥಿವಿಯನ್ನು ಪ್ರಕಾಶಪಡಿಸುವವನು. ಅದುದರಿಂದ ಸೂರ್ಯನೇ ವೈಶ್ವಾನರನೆಂದು ಸಿದ್ಧವಾಗುತ್ತದೆ.

**ಅಥಾಪಿ ಛಾಂದೋಮಿಕಂ ಸೂಕ್ತಂ ಸೌರ್ಯವೈಶ್ವಾನರಂ ಭವತಿ ॥**
**"ದಿವಿ ಪೃಷ್ಠೋ ಅರೋಚತ ॥" (ಯ. ವಾ. ಸಂ. ೩೩—೨—೨)**
**(ಋ. ಸಂ. ೧೧—೭—೬) (೫—೨—೭)**

ಸೌರ್ಯವೈಶ್ವಾನರೀ ಎಂಬ ನಿವಿತ್ತಲ್ಲದೆ ಸೂಕ್ತವೂ ಇದೆಯೆಂದು ವಿವರಿಸುತ್ತಾರೆ. ಛಾಂದೋಮಿಕವೆಂಬ ಹೆಸರುಳ್ಳ ಸೌರ್ಯ

ವೈಶ್ವಾನರವೆಂಬ ಸೂಕ್ತವೂ ಕೂಡಾ ಪ್ರಸಿದ್ಧವಾಗಿದೆ ಛಂದೋಮಯಜ್ಞದ ದಾಶರಾತ್ರಿಕಗಳಲ್ಲಿ ಇದು ವಿಹಿತವಾಗಿದೆಯೆಂದು ಮುಂದೆ ಹೇಳುತ್ತಾರೆ. ಆ ಮಂತ್ರ ಹೀಗಿದೆ.

ದಿವಿ ಪೃಷ್ಠೋ ಅರೋಚತಾಗ್ನಿರ್ವೈಶ್ವಾನರೋ ಬೃಹತ್ ||
ಕ್ಷ್ಮಯಾ ವೃಧಾನ ಓಜಸಾ ಚನೋ ಹಿತೋ ಜ್ಯೋತಿಷಾ ಬಾಧತೇ ತಮಃ ||

ಸೂರ್ಯನಿಗಿಂತ ಬೇರೆಯಾದ ದೇವತೆಯು ದ್ಯುಲೋಕದಲ್ಲಿದ್ದು ಬೆಳಗುವುದಿಲ್ಲ.

ಏಷ ಹಿ 'ದಿವಿ ಪೃಷ್ಠೋ ಅರೋಚತ' ಇತಿ ||

ಈ ಆದಿತ್ಯನೇ ದ್ಯುಲೋಕದಲ್ಲಿ ಇದ್ದು ಪ್ರಕಾಶಿಸುತ್ತಾನೆ. ಅಗ್ನಿ : ವೈಶ್ವಾನರ : ಎಂಬುದು ಆವನಿಗೆ ವಿಶೇಷಣ. ಇವನೇ ಮಹಾತ್ಮನು. ಅತಿಗುರುವಾದವನು. ತನ್ನ ಪ್ರಕಾಶದಿಂದ ರಾತ್ರಿಯಕತ್ತಲೆಯನ್ನು ಲೋಕಾನುಗ್ರಹಕ್ಕೋಸ್ಕರ ನಾಶ ಪಡಿಸುತ್ತಾನೆ. ಪೃಥಿವಿಯ ಕಾರಣದಿಂದಲೇ ಅಂದರೆ ಆದರಿಂದ ರಸವನ್ನು ಸೆಳೆದು ಅಭಿವೃದ್ಧಿಹೊಂದುವವನಾಗಿ ಬಲದಿಂದ ಅಥವಾ ತೇಜಸ್ಸಿನಿಂದ ಪುನಃ ಮಳೆಯನ್ನು ಸುರಿಸಿ ಅನ್ನಕ್ಕೆ ಹಿತನಾಗಿ ಅಂದರೆ ಸಹಾಯಕನಾಗಿರುತ್ತಾನೆ. ಚಂದ್ರನೂ ಇವನ ತೇಜಸ್ಸಿನಿಂದಲೇ ಓಷಧಿಗಳ ಪತಿಯೆಂದು ಪ್ರಸಿದ್ಧನಾಗಿರುತ್ತಾನೆ.

ಅಥಾಪಿ ಹವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತಿ ||

ಹವಿಷ್ಪಾಂತಪದದಿಂದ ಕೂಡಿರುವ ಸೂಕ್ತಕ್ಕೆ ಹವಿಷ್ಪಾಂತೀಯವೆಂದು ಹೆಸರು. 'ಹವಿಷ್ಪಾಂತಮಂಜರಂ.' (ಋ. ಸಂ. ೮–೪–೧೦) ಎಂದು ಈ ಸೂಕ್ತದಲ್ಲಿ ಆಪವವಿದೆ. "ಮತೌ ಛಃ ಸೂಕ್ತಸಾಮ್ನೋಃ"ಸೂತ್ರದಿಂದ ಮತ್ವರ್ಥದಲ್ಲಿ ಛಪ್ರತ್ಯಯ್ನ ಬಂದಿದೆ. ಈ ಸೂಕ್ತವೂ ಕೂಡಾ ಸೌರ್ಯವೈಶ್ವಾನರವಾಗುತ್ತದೆ. ಆದುದರಿಂದ ಈ ಮಂತ್ರವು ಸೂರ್ಯನೇ ವೈಶ್ವಾನರ ನೆಂದು ತಿಳಿಸಲು ಸಮರ್ಥವಾಗಿದೆ.

ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ||

(ಋ. ಸಂ. ೮–೪–೧೨) ಎಂದು ಇದರಲ್ಲಿ ವೈಶ್ವಾನರಪದವು ಸೂರ್ಯನನ್ನು ತಿಳಿಸುತ್ತವೆ. ಇಂದ್ರಾದಿದೇವತೆಗಳು ಸಕಲ ಲೋಕಕ್ಕೋಸ್ಕರ ಸಕಲಪ್ರಾಣಿಜಾತಕ್ಕೆ ಹಿತನಾದ ಅಗ್ನಿಯೆಂಬ ದೇವನನ್ನು ದಿವಸಕ್ಕೆ ಜ್ಞಾಪಕನನ್ನಾಗಿ ಮಾಡಿದರು. ಸೂರ್ಯನನ್ನು ಬಿಟ್ಟರೆ ಇತರದೇವತೆಗಳು ದಿವಸವನ್ನು ಮಾಡುವುದಿಲ್ಲ. ಪಾರ್ಥಿವಾಗ್ನಿಗೆ ಈಸಾಮರ್ಥ್ಯವಿಲ್ಲ. ಆದಿತ್ಯನೇ ತನ್ನ ಉದಯಾಸ್ತಮಯದಿಂದ ಹಗಲೂರಾತ್ರಿಗಳನ್ನು ಮಾಡುತ್ತಾ. ಈ ಎಲ್ಲಾಕಾರಣಗಳಿಂದ ಸೂರ್ಯನೇ ವೈಶ್ವಾನರನೆಂದು ನಾವು ನಿಶ್ಚಯಿಸುತ್ತೇವೆ.

ಅಯಮೇವಾಗ್ನಿರ್ವೈಶ್ವಾನರ ಇತಿ ಶಾಕಪೂಣಿಃ ||

ಪೂರ್ವೋಕ್ತಸಿದ್ಧಾಂತವನ್ನು ಇತರ ಮತಬಲದಿಂದ ದೃಢಪಡಿಸುತ್ತಾರೆ. ಯಾಜ್ಞಿಕರು ಸೂರ್ಯನೇ ವೈಶ್ವಾನರನೆಂದುದು ಸರಿಯಲ್ಲ. ಶಾಕಪೂಣಿಯೆಂಬ ನಿರುಕ್ತಕಾರರು ಈ ಪಾರ್ಥಿವಾಗ್ನಿಯೇ ವೈಶ್ವಾನರನೆಂದು ಹೇಳಿರುತ್ತಾರೆ. ಇದಕ್ಕೆ ಕಾರಣ ವನ್ನು ಮುಂದೆ ವಿವರಿಸುತ್ತಾರೆ.

ವಿಶ್ವಾನರಾವೇತೇ ಉತ್ತರೇ ಜ್ಯೋತಿಷೀ ।
ವೈಶ್ವಾನರೋಽಯಂ ಯತ್ತಾಭ್ಯಾಂ ಜಾಯತೇ ॥

ತದ್ಧಿತೋತ್ಪತ್ತಿಸಾಮರ್ಥ್ಯದಿಂದ ವೈಶ್ವಾನರ ಎಂದರೆ ಪಾರ್ಥಿವಾಗ್ನಿಯೆಂದೇ ಹೇಳಬೇಕು. ವಿಶ್ವಾನರರೆಂದರೆ ಮಧ್ಯಮೋತ್ತಮ ಸ್ಥಾನದ ದೇವತೆಗಳಾಗುತ್ತಾರೆ. ಅವರಿಂದ ಹುಟ್ಟಿದವನು ವೈಶ್ವಾನರ. ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯ ಬಂದಿದೆ. ಇದರಿಂದ ಪಾರ್ಥಿವಾಗ್ನಿಯು ವೈಶ್ವಾನರನೆಂದು ಸಿದ್ಧವಾಗುತ್ತದೆ. ಇವನ್ನು ' ಅಪಿ ವಾ ವಿಶ್ವಾನರ ಏವ ಕಶ್ಚಿತ್ ಸ್ಯಾತ್ತಸ್ಯಾಪಂತ್ಯಂ ವೈಶ್ವಾನರಃ ಎಂದು ಹಿಂದೆ ಹೇಳಿದೆ.

ಕಥಂ ತ್ವಯಮೇತಾಭ್ಯಾಂ ಜಾಯತೇ ? ಇತಿ । ಯತ್ರ ವೈದ್ಯುತಃ ಶರಣಮ-ಭಿಹಂತಿ । ಯಾವದನುಪಾತ್ತೋ ಭವತಿ ಮಧ್ಯಮಧರ್ಮೈವ ತಾವತ್ ಭವತಿ, ಉದಕೇಂಧನಃ ಶರೀರೋಪಶಮನಃ । ಉಪಾದೀಯಮಾನ ಏವಾಯಂ ಸಂಪದ್ಯತ ಉದಕೋಪಶಮನಃ ಶರೀರದೀಪ್ತಿಃ ॥

ಇವನು ಮಧ್ಯಮೋತ್ತಮಸ್ಥಾನದೇವತೆಯಿಂದ ಹುಟ್ಟಿರುವನೆಂಬುದನ್ನು ಶಂಕಾಸಮಾಧಾನಗಳಿಂದ ದೃಢಪಡಿಸುತ್ತಾರೆ. ಎರಡು ಜ್ಯೋತಿಗಳಿಂದ ಇವನು ಹುಟ್ಟುವುದು ಹೇಗೆ ? ಎಂದು ಪ್ರಶ್ನೆಮಾಡಿ ಅದಕ್ಕೆ ಸಮಾಧಾನ ತೋರಿಸುತ್ತಾರೆ. ವೈದ್ಯುತಾಗ್ನಿಯು ಯಾವಾಗಲೂ ತನಗೆ ಆಶ್ರಯವಾದ ನೀರನ್ನು ಅಥವಾ ಬೇರೆ ದಾಹ್ಯಪದಾರ್ಥವನ್ನಾಶ್ರಯಿಸಿರುತ್ತದೆ. ಎಲ್ಲಿಯವರೆಗೆ ಈ ವೈದ್ಯುತಾಗ್ನಿಯು ಮನುಷ್ಯರಿಂದ ಸ್ವೀಕರಿಸಲ್ಪಡುವುದಿಲ್ಲವೋ ಅಲ್ಲಿಯವರೆಗೆ ಮಧ್ಯಮಲೋಕ ಧರ್ಮದಿಂದ ಕೂಡಿರುತ್ತದೆ. ' ಧರ್ಮಾದನಿಚ್ ಕೇವಲಾತ್ ' ಸೂತ್ರದಿಂದ ಧರ್ಮಶಬ್ದದಮೇಲೆ ಸಮಾಸಾಂತವಾದ ಅನಿಚ್ ಪ್ರತ್ಯಯ ಬರುತ್ತದೆ. ಮಧ್ಯಮಸ್ಥಾನದ ಧರ್ಮಗಳನ್ನು ವಿವರಿಸುತ್ತಾರೆ. ಆಗ ಅವನು ಉದಕೇಂಧನನಾಗಿರುತ್ತಾನೆ. ಅಂದರೆ ನೀರಿನಿಂದಲೇ ಪ್ರಕಾಶಿಸುತ್ತಾನೆ. ಶರೀರೋಪಶಮನನಾಗುತ್ತಾನೆ. ಅಗ್ನಿಗೆ ಕಾಷ್ಠಾದಿಗಳೇ ಶರೀರ. ಪಾರ್ಥಿವಧಾತುವಿಶಿಷ್ಟವಾದ ಕಾಷ್ಠಾದಿಗಳಿಂದ ತನ್ನ ನಿಜವಾದ ಸ್ವರೂಪವನ್ನು ಕಳೆದುಕೊಳ್ಳುತ್ತಾನೆ. ಆದುದರಿಂದ ಒಣಗಿದ ಮರದಮೇಲೆ ನಿಂತು ವಿದ್ಯುತ್ತನ್ನು ಪರಿಮಾಡುತ್ತಾರೆ. ಇವೆಲ್ಲಾ ವೈದ್ಯುತಾಗ್ನಿಯ ಸ್ವಭಾವವಾದರೆ ಪ್ರಥಮಸ್ಥಾನದ ಅಗ್ನಿಗೆ ಇದಕ್ಕಿಂತ ವಿಪರೀತವಾದ ಧರ್ಮವಿರುತ್ತದೆ. ಪಾರ್ಥಿವಾಗ್ನಿಯು ಯಾವಾಗಲೂ ಮನುಷ್ಯ ಪರಿಗ್ರಹೀತವಾಗಿರುತ್ತದೆ. ಮನುಷ್ಯಪರಿಗ್ರಹೀತವಾದುದರಿಂದ ಜಾತಿಧರ್ಮವನ್ನು ಬಿಟ್ಟು ಪಾರ್ಥಿವಧರ್ಮವನ್ನು ಸ್ವೀಕರಿಸುತ್ತದೆ. ಆದುದರಿಂದ ಪೂರ್ವೋಕ್ತಧರ್ಮಕ್ಕೆ ಇದು ವಿರುದ್ಧವಾಗುತ್ತದೆ. ಹಿಂದೆ ನೀರಿನಿಂದ ಪ್ರಕಾಶಹೊಂದಿದರೆ ಇಲ್ಲಿ ನೀರಿನಿಂದ ನಾಶಹೊಂದುತ್ತಾನೆ. ನೀರಿನಿಂದ ಬೆಂಕಿ ಆರಿಸುವುದು ಪ್ರಸಿದ್ಧವಾಗಿದೆ. ಪಾರ್ಥವಾಗಿ ಜ್ವಲಿಸಬೇಕಾದರೆ ಕಾಷ್ಠಾದಿ ಆಶ್ರಯವಿದ್ದೇ ಇರಬೇಕು. ಆದುದರಿಂದ ಇವನು ವೈದ್ಯುತಾಗ್ನಿಯಿಂದ ಹುಟ್ಟುವುದರಿಂದ ಅವನ ಅಪತ್ಯವೆಂದುದು ಸಮಂಜಸವಾಗಿದೆ. ಹೀಗೆ ತದ್ಧಿತೋತ್ಪತ್ತಿಯಿಂದ ವೈಶ್ವಾನರ ಅಂದರೆ ಪಾರ್ಥಿವಾಗ್ನಿಯೆಂದೇ ಸಿದ್ಧವಾಗುತ್ತದೆ.

ಅಥಾದಿತ್ಯಾತ್ ॥

ವೈದ್ಯುತಾಗ್ನಿಯಿಂದ ಪಾರ್ಥಿವಾಗ್ನಿಯ ಉತ್ಪತ್ತಿಯನ್ನು ತೋರಿಸಿ ಈಗ ಆದಿತ್ಯನಿಂದ ಹುಟ್ಟಿರುವುದನ್ನು ವಿವರಿಸಲು ಉಪಕ್ರಮಿಸುತ್ತಾರೆ. ಅಥಶಬ್ದ ಅರ್ಥಾಂತರವನ್ನು ತಿಳಿಸುತ್ತದೆ. ಇನ್ನುಮುಂದೆ ಸೂರ್ಯನಿಂದ ಉತ್ಪತ್ತಿಯನ್ನು ಹೇಳುತ್ತೇವೆ ಎಂದರ್ಥ.

**ಉದೀಚಿ ಪ್ರಥಮಸಮಾವೃತ್ತ ಆದಿತ್ಯೇ, ಕಂಸಂ ವಾ ಮಣಿಂ ವಾ ಪರಿಮೃಜ್ಯ ಪ್ರತಿಸ್ವರೇ, ಯತ್ರ ಶುಷ್ಕಗೋಮಯಮಸಂಸ್ಪರ್ಶಯನ್ಧಾರಯತಿ ತತ್ಪ್ರ-ದೀಪ್ಯತೇ । ಸೋಽಯಮೇವ ಸಂಪದ್ಯತೇ ॥**

ಸೂರ್ಯನು ಯಾವಾಗ ಭೂಗೋಳದ ಉತ್ತರ ದಿಗ್ಭಾಗವನ್ನು ಮೊದಲು ಹೊಂದುತ್ತಾನೋ ಆಗ ಅಧಿಕ ಕಠೋರವಾದ ಕಿರಣ ಉಳ್ಳವನಾಗುತ್ತಾನೆ. ಆಗ ಪಾರ್ಥಿವಾಗ್ನಿಯು ಹುಟ್ಟುತ್ತದೆ. ಉತ್ತರಾಯಣದಲ್ಲಿಯೇ ಲೋಕದಲ್ಲಿ ಅಗ್ನಿವಾಹಾಧಿಕ್ಯ ಅಧಿಕವಾಗಿರುತ್ತದೆ. ರಂಗರಜತದಿಂದಾದ ಧಾತುವಿಶೇಷಕ್ಕೆ ಕಂಸವೆಂದು ಕರೆಯುತ್ತಾರೆ, ತವರ. ಅಥವಾ ಸೂರ್ಯಕಾಂತಮಣಿ ಇವುಗಳನ್ನು ಚನ್ನಾಗಿ ಉಜ್ಜಿ ಬಿಸಿಯಾಗುವಂತೆ ಮಾಡಿದರೆ ಆಗ ಅಗ್ನಿಯುಂಟಾಗುತ್ತದೆ. ಎಲ್ಲಿಯಾದರೂ ಶುದ್ಧಪ್ರದೇಶದಲ್ಲಿ ಶುಷ್ಕಗೋಮಯವಿದ್ದರೆ ಅಂದರೆ ಚನ್ನಾಗಿ ಒಣಗಿದ ಬೆರಣಿ ಇದ್ದರೆ ಅದಕ್ಕೆ ಯಾವ ಸಂಸ್ಪರ್ಶವಿಲ್ಲದಿದ್ದರೂ ಅಧಿಕ ಸೂರ್ಯರಶ್ಮಿ ಸಂಸರ್ಗದಿಂದ ಅಲ್ಲಿ ಬೆಂಕಿಯುಂಟಾಗುತ್ತದೆ. ಈ ಬೆರಣಿಯಿಂದುಂಟಾದ ಅಗ್ನಿಯು ಪಾರ್ಥಿವವಾಗಿರುತ್ತದೆ. ಹೀಗೆ ಸೂರ್ಯನಿಂದ ಅಥವಾ ಕಂಸ, ಮಣಿ, ಬೆರಣಿ ಮುಂತಾದುವುಗಳಿಂದುಂಟಾದ ಅಗ್ನಿಗೆ ವೈಶ್ವಾನರ ಎಂದೇ ಹೆಸರು. ಆದುದರಿಂದ ಸೂರ್ಯನಿಂದ ಹುಟ್ಟಿರುತ್ತಾನೆಂಬುದೇ ಸಮಂಜಸವಾಗಿದೆ.

**ಅಥಾಪ್ಯಾಹ "ವೈಶ್ವಾನರೋ ಯತತೇ ಸೂರ್ಯೇಣ" ಇತಿ ॥**

(ಋ. ಸಂ. ೧-೭-೬)

ಸೂರ್ಯನು ವೈಶ್ವಾನರನಲ್ಲವೆಂಬುದಕ್ಕೆ ಕಾರಣಾಂತರವನ್ನು ತೋರಿಸುತ್ತಾರೆ. ಈರೀತಿಯಾಗಿ ಮಂತ್ರದ್ರಷ್ಟೃವು ಹೇಳಿರುತ್ತಾನೆ. ಇಲ್ಲಿ ವೈಶ್ವಾನರವೆಂಬ ಪ್ರಥಮಾಂತಶಬ್ದಕ್ಕೆ ಸೂರ್ಯೇಣ ಎಂಬ ತೃತೀಯಾಂತಪದವೊಡನೆ ವಿಭಕ್ತಿಭೇದವಿರುವುದರಿಂದ ವಿಶೇಷಣವಿಶೇಷ್ಯಭಾವರೂಪ ಸಾಮಾನಾಧಿಕರಣ್ಯ ತೋರುವುದಿಲ್ಲ, ಇದರಿಂದ ಸೂರ್ಯನೇ ಬೇರೆ ವೈಶ್ವಾನರನೇ ಬೇರೆಯೆಂದು ವ್ಯಕ್ತವಾಗುತ್ತದೆ. ವಿಶೇಷ್ಯವಿಶೇಷಭಾವವಿರಬೇಕಾದರೆ ಎರಡುಪದಗಳಿಗೂ ಒಂದೇ ವಿಭಕ್ತಿ ಇರಬೇಕು. ನೀಲಃ ಘಟಃ ಎಂದರೆ ಇಲ್ಲಿ ಸಮಾನವಿಭಕ್ತಿ ಇರುವುದರಿಂದ ನೀಲವಾದ ಘಟವೊಂದೇ ಎಂದು ತಿಳಿಯುತ್ತದೆ. ಮಂತ್ರದಲ್ಲಿ ಹಾಗೆ ಹೇಳಿಲ್ಲ.

**ನ ಚ ಪುನರಾತ್ಮನಾಽಽತ್ಮಾ ಸಂಯತತೇ ॥ ಅನ್ಯೇನೈವಾನ್ಯಃ ಸಂಯತತೇ ॥**

ಪೂರ್ವೋಕ್ತ ಮಂತ್ರದಲ್ಲಿ ಸೂರ್ಯನಿಂದ ವೈಶ್ವಾನರನು ಸೆಳೆಯಲ್ಪಡುತ್ತಾನೆ ಎಂದು ಹೇಳಿದೆ. ಅರ್ಥಾಪತ್ತಿಯಿಂದಲೂ ಅವರು ಒಂದಾಗುವುದಿಲ್ಲವೆಂದು ವಿವರಿಸುತ್ತಾರೆ. ಲೋಕದಲ್ಲಿ ತನ್ನನ್ನೇ ತಾನು ಯಾರೂ ಎಳೆಯುವುದಿಲ್ಲ. ದೇವದತ್ತನು ಯಜ್ಞದತ್ತನನ್ನು ಎಳೆಯುತ್ತಾನೆ ಎಂದರೆ ಸ್ವಾಭಾವದಿಂದ ಭಿನ್ನವ್ಯಕ್ತಿಗಳೆಂದೇ ಸಿದ್ಧವಾಗುತ್ತದೆ ಇದರಿಂದ ಸೂರ್ಯವೈಶ್ವಾನರರು ಭಿನ ಭಿನ್ನವ್ಯಕ್ತಿಗಳೆಂದು ಹೇಳಿದರೇ ಪೂರ್ವೋಕ್ತಮಂತ್ರಾರ್ಥವು ಸಂಗತವಾಗುವುದೆಂದು ಸಿದ್ಧವಾಗುತ್ತದೆ.

**ಇತ ಇಮಮಾದಧಾತಿ ॥**

ಸೂರ್ಯನು ಪಾರ್ಥಿವಾಗ್ನಿಯಾದ ವೈಶ್ವಾನರನನ್ನು ಸೆಳೆಯುವುದು ಹೇಗೆಂದು ವಿವರಿಸುತ್ತಾರೆ. ಸೂರ್ಯನು ಈ ಲೋಕದ ಔಷಧಿ

ಗಳಿಂದಲೂ, ಹುಲ್ಲು ಮುಂತಾದವುಗಳಿಂದಲೂ, ವನಸ್ಪತಿಗಳಿಂದಲೂ ಕಡೆದು ಪಾರ್ಥಿವಾಗ್ನಿಯನ್ನು ಸಂಪಾದಿಸುತ್ತಾನೆ. ಇದು ಪ್ರತ್ಯಕ್ಷ ಸಿದ್ಧವಾಗಿದೆ.

**ಅಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತಿ । ಇತೋಽಸ್ಯಾ ರ್ಚಿಷಃ ತಯೋರ್ಭಾಸೋಃ ಸಂಗಮಂ ದೃಷ್ಟ್ವೈವಮವಕ್ಷ್ಯತ್ ॥**

ಪೂರ್ವೋಕ್ತಾರ್ಥದ ಅಭಿಪ್ರಾಯವನ್ನು ವಿವರಿಸುತ್ತಾರೆ. ಸೂರ್ಯಮಂಡಲದಲ್ಲಿ ಅಧಿಷ್ಠಾತನಾದ ಹಿರಣ್ಯಗರ್ಭನ ಸಂಬಂಧಿಯಾದ ಕಿರಣಗಳು ಈ ಸೂರ್ಯಮಂಡಲದಿಂದ ಹೊರಗೆ ಪ್ರಸರಿಸುತ್ತವೆ. ಈ ಭೂಮಿಯಲ್ಲಿರುವ ಅಗ್ನಿಯಿಂದಲೂ ಅದರ ಅಧಿಷ್ಠಾತೃದೇವತಾ ಸಂಬಂಧಿಯಾದ ತೇಜಸ್ಸುಗಳೂ ಹೊರಗೆ ಪ್ರಸರಿಸುತ್ತವೆ. ಈ ಎರಡು ತೇಜಸ್ಸುಗಳ ಸಂಗಮವನ್ನು ನೋಡಿ ಪೂರ್ವೋಕ್ತಮಂತ್ರವನ್ನು ಹೇಳಿರಬಹುದು. ಭೂತಾರ್ಥದಲ್ಲಿ ಲೃಙ್ ಬಂದಿದೆ ಇದರಿಂದ ಪ್ರತ್ಯಕ್ಷಸಿದ್ಧವಾಗಿದೆ ಎಂಬುದನ್ನು ಸಮರ್ಥಿಸಿದಂತಾಗುತ್ತದೆ.

**ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ ॥**

ಅನ್ವಯವ್ಯತಿರೇಕ ಪ್ರಮಾಣಗಳಿಂದ ಸೂರ್ಯನು ವೈಶ್ವಾನರನಲ್ಲವೆಂದು ವಿವರಿಸುತ್ತಾನೆ. ಅಥಶಬ್ದ ಅಧಿಕಾರಾಂತರವನ್ನು ತಿಳಿಸುತ್ತದೆ. ಸ್ಯೂರ್ಯನೇ ವೈಶ್ವಾನರನೆಂದು ಹೇಳುವುದಾದರೆ ಆಗ ಎಲ್ಲಾ ಸೂರ್ಯಸಂಬಂಧಿ ಸೂಕ್ತಾದಿಗಳಲ್ಲಿ ವೈಶ್ವಾನರ ಪದವನ್ನು ವಿಶೇಷಣವಾಗಿ ಹೇಳಬೇಕಾಗಿತ್ತು. ಉತ್ತಮಸ್ಥಾನದೇವತಾವಿಶೇಷವನ್ನು ಸ್ತುತಿಸುವ ನಾನಾ ಸೂಕ್ತಗಳಿರುತ್ತವೆ. ಹಾಗೆಯೇ ಸೂರ್ಯಪರ್ಯಾಯವಾಚಕ ಭಗ, ಸವಿತೃ, ಸೂರ್ಯ, ಪೂಷಾ, ವಿಷ್ಣು, ವಿಶ್ವದೇವ ಮುಂತಾದ ಪದಘಟಿತ ಸೂಕ್ತಗಳಿರುತ್ತವೆ. ಅಲ್ಲಿ ಎಲ್ಲಿಯಾದರೂ ವೈಶ್ವಾನರ ಪದವನ್ನು ವಿಶೇಷಣವನ್ನಾಗಿ ಹೇಳಿದ್ದರೆ ಸೂರ್ಯನೆಂದು ಹೇಳಬಹುದಿತ್ತು. ಹೇ ಭಗ, ವೈಶ್ವಾನರ, ಹೇ ಸವಿತ; ವೈಶ್ವಾನರ, ಎಂದು ಇವೇ ಮುಂತಾಗಿ ಎಲ್ಲಿಯೂ ವಿಶೇಷಣವಾಗಿ ಹೇಳಿಲ್ಲ. ಆದುದರಿಂದ ವೈಶ್ವಾನರನೆಂದರೆ ಉತ್ತಮಸ್ಥಾನದೇವತೆ ಸೂರ್ಯನಾಗುವುದಿಲ್ಲ.

**ಆದಿತ್ಯಕರ್ಮಣಾ ಚ, ಏನಮಸ್ತೋಷ್ಯನ್ ಇತಿ ॥**

ಸೂರ್ಯನ ಅಸಾಧಾರಣಕಾರ್ಯದಿಂದಲೂ ವೈಶ್ವಾನರನನ್ನು ಸ್ತುತಿಸಿಲ್ಲವೆಂದು ವಿವರಿಸುತ್ತಾರೆ. ಸೂರ್ಯನೇ ವೈಶ್ವಾನರನಾಗಿದ್ದರೆ ಇತಿ-ಮುಂದೆ ಹೇಳುವ ರೀತಿಯಿಂದ ಈ ವೈಶ್ವಾನರನನ್ನು ವೈಶ್ವಾನರೀಯ ಸೂಕ್ತಗಳಲ್ಲಿ ಆದಿತ್ಯನ ವಿಶೇಷ ಕರ್ಮಗಳಿಂದ ಮಂತ್ರದ್ರಷ್ಟೃ ಮಹರ್ಷಿಗಳು ಸ್ತುತಿಸುತ್ತಿದ್ದರು.

**ಉದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ॥**

ಇತಿ ಶಬ್ದವು ಇಲ್ಲಿ ಏವಂ-ಈರೀತಿಯಾಗಿ ಎಂಬರ್ಥವನ್ನು ತಿಳಿಸುತ್ತದೆ. ವೈಶ್ವಾನರನೇ ನೀನು ಈರೀತಿಯಾಗಿ ಉದಯಿಸುವಿ. ಈರೀತಿಯಾಗಿ ಅಸ್ತವನ್ನು ಹೊಂದುವಿ. ಈರೀತಿಯಾಗಿ ತಿರುಗಿವಿ ಎಂದು ಸೂರ್ಯನ ಕಾರ್ಯವನ್ನು ವರ್ಣಿಸುತ್ತಿದ್ದರು. ಆದರೆ ವೈಶ್ವಾನರೀಯ ಸೂಕ್ತಗಳಲ್ಲಿ ಇವು ಯಾದೂ ಇಲ್ಲದಿರುವುದರಿಂದ ಸೂರ್ಯನು ವೈಶ್ವಾನರನಾಗುವುದಿಲ್ಲವೆಂದು ತಾತ್ಪರ್ಯ.

**ಆಗ್ನೇಯೇಷ್ವೇವ ಹಿ ಸೂಕ್ತೇಷು ವೈಶ್ವಾನರೀಯಾಃ ಪ್ರವಾದಾಃ ಭವಂತಿ ॥**

ಅಗ್ನಿಯೇ ವೈಶ್ವಾನರನೆಂಬುದರಲ್ಲಿ ವಿಶೇಷಕಾರಣ ತೋರಿಸುತ್ತಾರೆ. ಅಗ್ನಿದೇವತಾಕವಾದ ಸೂಕ್ತಗಳಲ್ಲಿಯೇ ಹೆಚ್ಚಾಗಿ ಅಗ್ನಿಗೆ ವೈಶ್ವಾನರ ವಿಶೇಷಣವನ್ನು ಹೇಳಿರುತ್ತಾರೆ. 'ವೈಶ್ವಾನರಮೃತ ಆಜಾತಮಗ್ನಿಂ' (ಋ ಸಂ. ೪-೫-೯) ಇತ್ಯಾದಿ ಆಗ್ನೇಯ ಸೂಕ್ತಗಳಲ್ಲಿ ಈ ವಿಶೇಷಗಳನ್ನು ನೋಡಬಹುದಾದುದರಿಂದ ಅಗ್ನಿಯೇ ವೈಶ್ವಾನರನೆಂದು ಸಿದ್ಧವಾಗುತ್ತದೆ.

**ಅಗ್ನಿಕರ್ಮಣಾ ಚೈನಂ ಸ್ತೌತೀತಿ ॥**

ವಿಶೇಷಣವಾಗಿ ಹೇಳಿರುವುದಲ್ಲದೆ, ವೈಶ್ವಾನರೀಯಸೂಕ್ತಗಳಲ್ಲಿ ಈ ವೈಶ್ವಾನರನನ್ನು ಸಾಮಾನ್ಯವಾಗಿ ಮುಂದೆ ಹೇಳುವ ರೀತಿಯಿಂದ ಅಗ್ನಿಯ ಕಾರ್ಯದಿಂದಲೇ ಸ್ತುತಿಸುತ್ತಾರೆ.

**ವಹಸೀತಿ ಪಚಸೀತಿ ದಹಸೀತಿ ॥**

ಅಗ್ನಿಕಾರ್ಯಗಳನ್ನು ವಿವರಿಸುತ್ತಾರೆ. ವೈಶ್ವಾನರನೇ ನೀನು ಈರೀತಿಯಾಗಿ ಹವಿಸ್ಸನ್ನು ಧರಿಸಿ ದೇವತೆಗಳಿಗೆ ಕೊಂಡೊಯ್ಯುವಿ. ಪಾಕಮಾಡಬೇಕಾದವುಗಳನ್ನು ಪಕ್ವವಾಗಿ ಮಾಡುವಿ. ಸುಡಬೇಕಾದವುಗಳನ್ನು ಚನ್ನಾಗಿ ಸುಡುವಿ. ಹೀಗೆ ವೈಶ್ವಾನರನನ್ನು ಸ್ತುತಿಸುವುದರಿಂದ ಅಗ್ನಿಯೇ ವೈಶ್ವಾನರನೆಂದು ಸಿದ್ಧವಾಗುತ್ತದೆ. ಈ ವಿಚಾರಗಳಿಂದ ಸೂರ್ಯನು ವೈಶ್ವಾನರನಲ್ಲವೆಂಬುದರಲ್ಲಿ ಆರು ಕಾರಣಗಳು ಹೇಳಿದಂತಾಯಿತು. 1) ತದ್ಧಿತಪ್ರತ್ಯಯದಿಂದ ಉತ್ಪತ್ತಿಯನ್ನಂಗೀಕರಿಸಿ ಶರೀರ ಧರಿಸಿರುವುದು 2) ಒಂದೇ ವಾಕ್ಯದಲ್ಲಿ ಭಿನ್ನಭಿನ್ನ ವಿಭಕ್ತಿ ಹೇಳಿರುವುದು. 3) ಉತ್ತಮಸ್ಥಾನ ದೇವತಾ ಸ್ತುತಿಗಳಲ್ಲಿ ವೈಶ್ವಾನರವೆಂಬ ವಿಶೇಷಣ ಹೇಳಿರುವುದು. 4) ಸೂರ್ಯನ ಕಾರ್ಯಗಳಿಂದ ವೈಶ್ವಾನರನನ್ನು ಸ್ತುತಿಸದಿರುವುದು. 5) ಅಗ್ನಿಯ ಸೂಕ್ತಗಳಲ್ಲಿ ವೈಶ್ವಾನರ ವೆಂಬ ವಿಶೇಷಣ ಹೇಳಿರುವುದು. 6) ಅಗ್ನಿಯಕಾರ್ಯಗಳಿಂದ ವೈಶ್ವಾನರನನ್ನು ಸ್ತುತಿಸಿರುವುದು ಇವುಗಳಿಂದ ಅಗ್ನಿಯೇ ವೈಶ್ವಾನರನೆಂದು ಸಿದ್ಧವಾಗುತ್ತದೆ.

**ಯಥೋ ಏತದ್ವರ್ಷಕರ್ಮಣಾ ಹ್ಯೇನಂ ಸ್ತೌತೀತಿ ಅಸ್ಮಿನ್ನಪ್ಯೇತದುಪಪದ್ಯತೇ ॥**

ಪೂರ್ವಪಕ್ಷವನ್ನು ಖಂಡಿಸದೆ ತನ್ನ ಸಿದ್ಧಾಂತವನ್ನು ಹೇಳಿದರೆ ಅದು ಸರ್ವಗ್ರಾಹ್ಯವಾಗಲಾರದು. ಯಾಜ್ಞಿಕರು ವೃಷ್ಟಿಕಾರ್ಯ ದಿಂದ ವೈಶ್ವಾನರನನ್ನು ಸ್ತುತಿಸಿರುವುದರಿಂದ ವೈಶ್ವಾನರನು ಮಧ್ಯಮಸ್ಥಾನದೇವತೆಯೆಂದು ಹೇಳಿರುತ್ತಾರೆ. ಅದನ್ನು ನಿರಾಕರಣೆ ಮಾಡಲು ಉಪಕ್ರಮಿಸುತ್ತಾರೆ. ವೃಷ್ಟಿಕರ್ಮದಿಂದ ಸ್ತುತಿಸಿರುವದು ಯುಕ್ತವೇ ಆದರೆ ವೃಷ್ಟಿಯು ಮಧ್ಯಮಸ್ಥಾನ ದೇವತೆಯ ಅಸಾಧಾರಣ ಕಾರ್ಯವಲ್ಲ. ಇದು ಯಾರ ಕಾರ್ಯವೂ ಆಗದೆ ಮಧ್ಯಸ್ಥಾನ ದೇವತೆಯ ಕಾರ್ಯವೊಂದೇ ಆಗಿದ್ದರೆ ಹಾಗೆ ಹೇಳಬಹುದಿತ್ತು. ಆದರೆ ಪಾರ್ಥಿವಾಗ್ನಿಯಲ್ಲಿಯೂ ಈ ವೃಷ್ಟಿಕರ್ಮ ಉಪಪನ್ನವಾಗುತ್ತದೆ.

**ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ॥**
**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥**

(ಋ. ಸಂ ೨-೩-೨೩)

**ಸಾ ನಿಗದವ್ಯಾಖ್ಯಾತಾ ॥ ೨೩ ॥**

ವೃಷ್ಟಿಯು ಪಾರ್ಥಿವಾಗ್ನಿಯ ಕಾರ್ಯವೂ ಆಗಿದೆಯೆಂಬುದಕ್ಕೆ ಉದಾಹರಣೆ ತೋರಿಸುತ್ತಾರೆ. ಪ್ರಸಿದ್ಧವಾದ ನೀರು ಉಭಯ ಸಮಾನವಾಗಿರುತ್ತದೆ. ಇದು ಕೆಲವುಕಾಲದಿಂದ ಅಂದರೆ ಗ್ರೀಷ್ಮಕಾಲದ ದಿವಸಗಳಲ್ಲಿ ರಶ್ಮಿನಾಡಿಯಿಂದ ಅಂತರಿಕ್ಷಕ್ಕೆ ಹೋಗುತ್ತದೆ. ವರ್ಷಾಕಾಲದ ದಿವಸಗಳಲ್ಲಿ ರಶ್ಮಿನಾಡಿಯಿಂದ ಪುನಃ ಭೂಮಿಗೆ ಇಳಿಯುತ್ತದೆ. ಪರ್ಜನ್ಯದೇವತೆಗಳು, ಇವರು ಭೂಮಿಯಿಂದ ರಸವನ್ನು ಆಕರ್ಷಿಸಿ ಪುನಃ ಮಳೆ ಸುರಿಸುವುದರಿಂದ ಔಷಧ್ಯಾದಿಗಳನ್ನು ಸಂತೋಷಪಡಿಸುತ್ತಾರೆ. ಇವರು ಮಾಧ್ಯಮಿಕ ದೇವಗಣಗಳು ಹೀಗೆಯೇ ಆಹವನೀಯಾದಿ ಅಗ್ನಿಗಳೂ ಆಹುತಿಯಿಂದುಂಟಾದ ವೃಷ್ಟಿಯಿಂದ ಆದಿತ್ಯಾದಿ ದ್ಯುಲೋಕದಲ್ಲಿರುವ ದೇವತೆಗಳನ್ನು ಸಂತೋಷಪಡಿಸುತ್ತಾರೆ. ಅಹುತಿಗಳು ಅಗ್ನಿಯಲ್ಲಿ ಹುತವಾಗಿ ಅಗ್ನಿಯ ತೇಜಸ್ಸಿನಿಂಡ ಉದಕಭಾವಹೊಂದಿ ಸೂಕ್ಷ್ಮರೀತಿಯಿಂದ ಆಯಾಯು ದೇವತಾಭೋಗ್ಯಗಳಾಗಿ ಅವರವರ ತೃಪ್ತಿಗೋಸ್ಕರ ವೃಷ್ಟಿಯಾಗುತ್ತವೆ. ಆ ದೇವತೆಗಳು ಆದರಿಂದ ತೃಪ್ತರಾಗಿ ತಿರುಗಿ ಭೂಮಿಗೆ ಮಳೆಯನ್ನು ಕಲ್ಪಿಸುತ್ತಾರೆ. "ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯ ಮುಪತಿಷ್ಠತಿ ! ಆದಿತ್ಯಾಜ್ಜಾಯತೇ ವೃಷ್ಟಿಃ." ಎಂದು ಈ ವಿಷಯ ಸ್ಮೃತಿಯಲ್ಲಿಯೂ ಹೇಳಿದೆ. ಹೀಗೆ ಅಗ್ನಿಕಾರ್ಯವೂ ವೃಷ್ಟಿಯಾಗುವುದರಿಂದ ವೈಶ್ವಾನರ ಅಂದರೆ ವೃಷ್ಟಿಕರ್ಮದಿಂದ ಮಧ್ಯಮಸ್ಥಾನದೇವತೆಯೆಂದು ನಿರ್ಣಯಿಸಿರುವುದು ಸರಿಯಲ್ಲ. ಹಿಂದೆ ಹೇಳಿದ ಪ್ರಮಾಣದಿಂದ ಅಗ್ನಿಯೇ ವೈಶ್ವಾನರನೆಂದು ತಿಳಿಯಬೇಕು.

ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ।
ಆ ಯಸ್ತತಾನೋಷಸೋ ವಿಭಾತೀರಪೋ ಊರ್ಣೋತಿ ತಮೋ ಅರ್ಚಿಷಾ ಯನ್ ॥

(ಋ. ಸಂ. ೧೦–೮೮–೧೨)

ಇದರ ಅರ್ಥವು—

ಪ್ರಕಾಶಮಾನಗಳಾದ ಉಷಸ್ಸುಗಳನ್ನು ತನ್ನ ಕಾಂತಿಯಿಂದ ವಿಸ್ತೃತವಾಗುವಂತೆ ಮಾಡಿದ ಈ ವೈಶ್ವಾನರರೂಪಿ ಯಾದ ಅಗ್ನಿಯನ್ನು ಇಂದ್ರಾದಿ ದೇವತೆಗಳು ಸಕಲಲೋಕಗಳ ಹಿತಕ್ಕಾಗಿಯೂ ಸಹ ಅಹಸ್ಸುಗಳಿಗೆ ಪ್ರಜ್ಞಾಪಕವಾಗುವಂತೆ ಮಾಡಿದರು. ಇದೇ ಅಗ್ನಿಯು ಸರ್ವತ್ರ ಸಂಚರಿಸುತ್ತ ತನ್ನ ತೇಜಸ್ಸಿನಿಂದ ಅಂಧಕಾರವನ್ನು ನಾಶಮಾಡುತ್ತಾನೆ.

ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಇಪ್ಪತ್ತಮೂರನೆಯ ಖಂಡ ಸಮಾಪ್ತವಾಗಿದೆ.

---

## ಅಥ ಚತುರ್ವಿಂಶತಿಃ ಖಂಡಃ

## ಇಪ್ಪತ್ತನಾಲ್ಕನೆಯ ಖಂಡವು

ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ । ತ ಆವವೃತ್ರನ್ತ್ಸದನಾದೃತಸ್ಯಾದಿದ್ ಘೃತೇನ ಪೃಥಿವೀ ವ್ಯುದ್ಯತೇ । (ಋ. ಸಂ. ೧-೧೬೪-೪೭) ॥ ಕೃಷ್ಣಂ ನಿರಯಣಂ ರಾತ್ರಿರಾದಿತ್ಯಸ್ಯ ಹರಯಃ ಸುಪರ್ಣಾ ಹರಣಾ

ಆದಿತ್ಯರಶ್ಮಯಸ್ತೇ ಯದಾಮುತೋಽರ್ವಾಂಚಃ ಪರ್ಯಾವರ್ತಂತೇ ಸಹಸ್ಥಾನಾದುದ-ಕಸ್ಯಾದಿತ್ಯಾದಥ ಘೃತೇನೋದಕೇನ ಪೃಥಿವೀ ವ್ಯುದ್ಯತೇ ಘೃತಮಿತ್ಯುದಕನಾಮ ಜಿಘರ್ತೇಃ ಸಿಂಚತಿಕರ್ಮಣೋಽಥಾಪಿ ಬ್ರಾಹ್ಮಣಂ ಭವತ್ಯಗ್ನಿರ್ವಾ ಇತೋ ವೃಷ್ಟಿಂ ಸಮೀರಯತಿ ಧಾಮಚ್ಛದ್ಧಿವ ಭೂತ್ವಾ ವರ್ಷತಿ ಮರುತಃ ಸೃಷ್ಟಾಂ ವೃಷ್ಟಿಂ ನಯಂತಿ ಯದಾಸಾವಾದಿತ್ಯೋಽಗ್ನಿಂ ರಶ್ಮಿಭಿಃ ಪರ್ಯಾವರ್ತತೇಽಥ ವರ್ಷತೀತಿ ಯಥೋ ಏತ-ದ್ವೈಶ್ವಾನರೀಯೋ ದ್ವಾದಶಕಪಾಲೋ ಭವತೀತ್ಯನಿರ್ವಚನಂ ಕಪಾಲಾನಿ ಭವಂತ್ಯಸ್ತಿ ಹಿ ಸೌರ್ಯ ಏಕಕಪಾಲಃ ಪಂಚಕಪಾಲಶ್ಚ ಯಥೋ ಏತದ್ಬ್ರಾಹ್ಮಣಂ ಭವತೀತಿ ಬಹುಭಕ್ತಿ ವಾದೀನಿ ಹಿ ಬ್ರಾಹ್ಮಣಾನಿ ಭವಂತಿ ಪೃಥಿವೀ ವೈಶ್ವಾನರಃ ಸಂವತ್ಸರೋ ವೈಶ್ವಾನರೋ ಬ್ರಾಹ್ಮಣೋ ವೈಶ್ವಾನರ ಇತಿ ಯಥೋ ಏತನ್ನಿವಿತ್ಸೌರ್ಯವೈಶ್ವಾನರೀ ಭವತೀತ್ಯಸ್ಯೈವ ಸಾ ಭವತಿ ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇದಿತ್ಯೇಷ ಹಿ ವಿಡ್ಭ್ಯೋ ಮಾನು-ಷೀಭ್ಯೋ ದೀಪ್ಯತೇ ಯಥೋ ಏತಚ್ಛಾಂದೋಮಿಕಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತ್ಯಸ್ಯೈವ ತದ್ಭವತಿ ಜಮದಗ್ನಿಭಿರಾಹುತ ಇತಿ ಜಮದಗ್ನಯಃ ಪ್ರಜಮಿತಾ-ಗ್ನಯೋ ವಾ ಪ್ರಜ್ವಲಿತಾಗ್ನಯೋ ವಾ ತೈರಭಿಹುತೋ ಭವತಿ ಯಥೋ ಏತದ್ಧವಿ-ಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತ್ಯಸ್ಯೈವ ತದ್ಭವತಿ || ೨೪ ||

> ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮು-ತ್ಪತಂತಿ || ತ ಆವವೃತ್ರನ್ತ್ಸದನಾದೃತಸ್ಯಾದಿದ್ ಘೃತೇನ ಪೃಥಿ-ವೀ ವ್ಯುದ್ಯತೇ ||

ವೃಷ್ಟಿಕರ್ಮದಿಂದ ವೈಶ್ವಾನರ ಅಂದರೆ ವೈದ್ಯುತಾಗ್ನಿಯೆಂದು ಯಾಜ್ಞಿಕರು ಹೇಳಿರುವುದಕ್ಕೆ ಹಿಂದಿನ ಖಂಡದಲ್ಲಿ ವ್ಯಭಿಚಾರ ತೋರಿಸಿದಾಯಿತು. ವೃಷ್ಟಿಕರ್ಮ ಎಂದೂ ನಿರ್ಣಾಯಕವಾಗಲಾರದೆಂದು ತಿಳಿಸಲು ಅದು ಆದಿತ್ಯಾಗ್ನಿಯ ಕಾರ್ಯವೂ ಆಗುತ್ತದೆಂದು ಇಲ್ಲಿ ಉದಾಹರಣೆ ಮಂತ್ರದಿಂದ ವಿವರಿಸುತ್ತಾರೆ. ಈ ಮಂತ್ರದಲ್ಲಿ ಆದಿತ್ಯನು ಸ್ತುತಿಸಲ್ಪಡುತ್ತಾನೆ. ರಸಾಕರ್ಷಣಸಮರ್ಥಗಳಾದ ಸೂರ್ಯರಶ್ಮಿಗಳು ಕೃಷ್ಣವರ್ಣದ ರಾತ್ರಿಗಳಲ್ಲಿ ಅಂದರೆ ದಕ್ಷಿಣಾಯನದಲ್ಲಿ ನೀರನ್ನು ಸಕಲಲೋಕ ಗಳಿಂದ ತಮ್ಮಲ್ಲಿ ತಮ್ಮಲ್ಲಿ ಸೇರಿಸಿಕೊಳ್ಳುತ್ತಾ ಪ್ರಕಾಶಿಸುವ ಸೂರ್ಯನನ್ನು ಅಥವಾ ದ್ಯುಲೋಕವನ್ನು ಉದ್ದೇಶಿಸಿ ಮೇಲಕ್ಕೆ ಹೋಗುತ್ತವೆ. ಆ ನೀರನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಿರುವ ಆದಿತ್ಯನು ಯಾವಾಗ ಆರುತಿಂಗಳಿಂದ ಉತ್ತರಾಯಣವನ್ನು ಹೊಂದುವನೋ ಆಗ ಈ ರಶ್ಮಿಗಳು. ಉದಕವಿರುವ ಸ್ಥಾನದಿಂದ ಅಂದರೆ ಸೂರ್ಯಮಂಡಲದಿಂದ ಕೆಳಮುಖವಾಗುತ್ತವೆ. ಆಗಲೇ ಭೂಮಿಯು ನೀರಿನಿಂದ ಒದ್ದೆಯಾಗುತ್ತದೆ ಎಂದು ಈ ಮಂತ್ರಸ್ತುತಿಸುವುದರಿಂದ ವೃಷ್ಟಿಯು ದ್ಯುಸ್ಥಾನದೇವತೆಯ ಕಾರ್ಯವೆಂದು ವ್ಯಕ್ತವಾಗುತ್ತದೆ.

ಕೃಷ್ಣಂ ನಿರಯಣಂ ರಾತ್ರಿರಾದಿತ್ಯಸ್ಯ, ಹರಯಃ ಸುಪರ್ಣಾಃ ಹರಣಾ ಆದಿತ್ಯರಶ್ಮಯಃ ತೇ ಯದ್ಯಾಮುತೋऽರ್ವಾಂಚಃ ಪರ್ಯಾ-ವರ್ತಂತೇ ಸಹಸ್ಥಾನಾದುದಕಸ್ಯಾದಿತ್ಯಾತ್ । ಅಥ ಘೃತೇ ನೋದಕೇನ ಪೃಥಿವೀ ವ್ಯುದ್ಯತೇ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಕೃಷ್ಣವರ್ಣದ ಮಾರ್ಗವೆಂದರೆ ದಕ್ಷಿಣಾಯನ. ಇದು ಆದಿತ್ಯನಿಗೆ ರಾತ್ರಿಯಾಗುತ್ತದೆ. ಹರಯಃ-ರಸವನ್ನು ಭೂಮಿಯಿಂದ ಸೆಳೆಯುವವುಗಳು ಸುಪರ್ಣಾಃ-ವೇಗವಾಗಿ ಹೋಗುವ ಸ್ವಭಾವವುಳ್ಳ ರಶ್ಮಿಗಳು ಇತರ ಪದಗಳ ಅರ್ಥವು ಹಿಂದೆ ವಿವೃತವಾಗಿದೆ.

ಘೃತಮಿತ್ಯುದಕನಾಮ, ಜಿಘರ್ತೇಃ ಸಿಂಚತಿಕರ್ಮಣಃ ॥

ಮಂತ್ರದಲ್ಲಿರುವ ಕೆಲವು ಪದಗಳ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಪೃಥಿವಿಯು ಒದ್ದೆಯಾಗುತ್ತದೆಯೆಂದು ಹೇಳಿರುವುದರಿಂದ ಇಲ್ಲಿ ಘೃತವೆಂದರೆ ನೀರೆಂದೇ ಅರ್ಥ ಸ್ಪಷ್ಟವಾಗುತ್ತದೆ. ಘೃ-ಕ್ಷರಣದೀಪ್ತ್ಯೋಃ. ಧಾತು ಇದಕ್ಕೆ ಗತ್ಯರ್ಥಾಕರ್ಮಕ—ಸೂತ್ರ ದಿಂದ ಕರ್ತ್ರರ್ಥದಲ್ಲಿ ಕ್ತಪ್ರತ್ಯಯ ಬಂದು ಘೃತ ಎಂದು ರೂಪವಾಗಿದೆ.

ಅಥಾಪಿ ಬ್ರಾಹ್ಮಣಂ ಭವತಿ ॥

ಅಗ್ನಿರ್ವಾ ಇತೋ ವೃಷ್ಟಿಂ ಸಮೀರಯತಿ, ಧಾಮಚ್ಛದ್ದಿವಿ (ಖಲು) ಭೂತ್ವಾ ವರ್ಷತಿ । ಮರುತಃ ಸೃಷ್ಟಾಂ ವೃಷ್ಟಿಂ ನಯಂತಿ ॥

(ಋ. ಸಂ. ೨-೩-೨೩)

ಪೂರ್ವೋಕ್ತಾರ್ಥದಲ್ಲಿ ಬ್ರಾಹ್ಮಣವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾರೆ. ಅಗ್ನಿಯು ಈ ಲೋಕದಲ್ಲಿ ಎಲ್ಲಾಕಡೆ ಯಲ್ಲಿಯೂ ನೀರನ್ನು ಪ್ರೇರೇಪಿಸುತ್ತಾನೆ. ಅಂದರೆ ತನ್ನ ಧೂಮವನ್ನೇ ನೀರನ್ನಾಗಿ ಕಲ್ಪಿಸಿ ಓಷಧಿವನಸ್ಪತಿಗಳಿಗೆ ತಿರುಗಿ ಕೊಡುತ್ತಾನೆ. 'ಅಗ್ನಿರ್ವೈ ಧೂಮೋ ಜಾಯತೇ ಧೂಮಾದಭ್ರಮಭ್ರಾದ್ವೃಷ್ಟಿಃ ? ಎಂದು ಸ್ಮೃತಿಯಲ್ಲಿಯೂ ಇದನ್ನು ಹೇಳಿರುತ್ತಾರೆ. ಅಗ್ನಿಯಿಂದಲೇ ಧೂಮವುಂಟಾಗಿ ಧೂಮದಿಂದ ಮೇಘವೂ, ಮೇಘದಿಂದ ಮಳೆಯು ಆಗುತ್ತದೆಂದು ತಾತ್ಪರ್ಯ. ಇದೇ ದ್ಯುಲೋಕದಲ್ಲಿ ಹೋಗಿ ಆದಿತ್ಯನಾಗಿ ಅಂತರಿಕ್ಷದಲ್ಲಿ ಮಳೆ ಸುರಿಸುತ್ತದೆ. ಅವನಿಂದ ಸುರಿಸಿದ ನೀರನ್ನು ಅಂತರಿಕ್ಷದಲ್ಲಿ ಮರುತ್ತುಗಳು ಮೇಘಗರ್ಭದಿಂದ ಹೊರಗೆ ಹಾಕಿ ಭೂಲೋಕಕ್ಕೆ ಸುರಿಯುವಂತೆ ಮಾಡುತ್ತವೆ. ಇದರಿಂದ ವೃಷ್ಟಿಕರ್ಮವು ಆದಿತ್ಯನಿಗೂ ಇದೆಯೆಂದು ವ್ಯಕ್ತವಾಗುತ್ತದೆ.

"ಯದಾಸಾವಾದಿತ್ಯೋ ನ್ಯಗ್ರಶ್ಮಿಃ ಪರ್ಯಾವರ್ತತೇऽಥವರ್ಷತಿ" ಇತಿ ॥

ಪೂರ್ವೋಕ್ತಾರ್ಥದಲ್ಲಿ ಇನ್ನೊಂದು ಬ್ರಾಹ್ಮಣವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾರೆ. ಯಾವಾಗ ಈ ಸೂರ್ಯನು ಕೆಳಮುಖವಾದ ರಶ್ಮಿಯುಳ್ಳವನಾಗಿ ತಿರುಗುತ್ತಾನೋ ಆಗ ಮಳೆಯನ್ನು ಸುರಿಸುತ್ತಾನೆ. ಹೀಗೆ ಮಳೆ ಸುರಿಸುವುದು ನಾನಾ ದೇವತೆಗಳ ಕಾರ್ಯವಾಗುವುದರಿಂದ, ಈ ಕಾರಣದಿಂದ ವೈಶ್ವಾನರನು ಮಧ್ಯಸ್ಥಾನದೇವತೆಯೆಂದು ನಿರ್ಣಯಿಸಲು ಸಾಧ್ಯವಾಗಲಾರದು.

**ಯಥೋ ಏತದ್ರೋಹಾತ್ಪ್ರತ್ಯವರೋಹಶ್ಚಿಕೀರ್ಷಿತ ಇತಿ । ಆಮ್ನಾಯ ವಚನಾದೇತದ್ಭವತಿ ॥**

ಪ್ರತ್ಯವರೋಹವನ್ನು ಬಯಸಿದಾಗ ವೈಶ್ವಾನರೀಯಸೂಕ್ತವನ್ನಾರಂಭಿಸುವುದರಿಂದ ಸೂರ್ಯನೇ ವೈಶ್ವಾನರನಾಗುತ್ತಾನೆ ಎಂಬ ಯಾಜ್ಞಿಕರಪೂರ್ವೋಕ್ತಿಗೆ ಸಮಾಧಾನ ತೋರಿಸುತ್ತಾರೆ. ಇದು ಸೂರ್ಯನೇ ವೈಶ್ವಾನರನೆಂದು ಸಾಧಿಸಲು ಸಾಧನವಾಗುವುದಿಲ್ಲ ಆಗಮವಚನದಿಂದಲೇ ಅದು ಸಿದ್ಧವಾಗುತ್ತದೆ. ಪ್ರತ್ಯವರೋಹವೂ ಕೂಡಾ ಅರ್ಥವಾದಮಾತ್ರವಲ್ಲದೆ ವಿಧಿಯಲ್ಲ.

**ಯಥೋ ಏತದ್ ॥ ವೈಶ್ವಾನರೀಯೋ ದ್ವಾದಶಕಪಾಲೋ ಭವತೀತಿ, ಅನಿರ್ವಚನಂ ಕಪಾಲಾನಿ ಭವಂತಿ ॥**

ದ್ವಾದಶಕಪಾಲಗಳಿಂದ ಸೂರ್ಯನೇ ವೈಶ್ವಾನರನೆಂದು ನಿರ್ಣಯಿಸಿರುವುದು ಸರಿಯಲ್ಲವೆಂದು ವಿವರಿಸುತ್ತಾರೆ. ಇದಕ್ಕೂ ವ್ಯಭಿಚಾರವಿದೆ. ಏಕೆಂದರೆ ಸೂರ್ಯನಿಗೆ ಬಹುವಿಧ ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶವನ್ನು ಹೇಳಿರುತ್ತಾರೆ.

**ಅಸ್ತಿ ಹಿ ಸೌರ್ಯ ಏಕಕಪಾಲಃ ಪಂಚಕಪಾಲಶ್ಚ ॥**

ದೇವತಾಗುಣಾಭಿಪ್ರಾಯದಿಂದ ದೇವತಾನಿರ್ಣಯ ಮಾಡುತ್ತೇವೆ. ಸೂರ್ಯನ ಕಾರ್ಯ ದ್ವಾದಶವಿಧವಾದುದರಿಂದ ಅವನ ಹವಿಸ್ಸಿನ ಸಂಸ್ಕಾರಕ್ಕೂ ದ್ವಾದಶಕಪಾಲ ಹೇಳಿದೆ. ಆದುದರಿಂದ ವೈಶ್ವಾನರವೆಂದರೆ ಸೂರ್ಯ ಎಂದು ಕಲ್ಪಿಸುತ್ತೇವೆ ಎಂಬ ಪೂರ್ವಪಕ್ಷಿಗಳ ಮತವು ಸಮಂಜಸವಲ್ಲ. ಸೂರ್ಯನು ಯಾವಾಗಲೂ ದ್ವಾದಶಕಪಾಲವುಳ್ಳವನೇ ಆಗಿದ್ದರೆ ಹೀಗೆ ನಿರ್ಣಯಿಸ ಬಹುದಿತ್ತು. ಆದರೆ ಅವನಿಗೆ ಅಲ್ಲಲ್ಲಿ ನಾನಾರೀತಿ ಕಪಾಲಗಳನ್ನು ವಿಧಿಸಿರುತ್ತಾರೆ. ಏಕಕಪಾಲ, ಪಂಚಕಪಾಲ, ದ್ವಾದಶ ಕಪಾಲ ಎಂದು ಬಹುವಿಧವಾಗಿ ಹೇಳಿರುವುದರಿಂದ ಆದು ಸಾಧಕವಾಗುವುದಿಲ್ಲ.

**ಯಥೋ ಏತದ್ಬ್ರಾಹ್ಮಣಂ ಭವತೀತಿ, ಬಹುಭಕ್ತಿವಾದೀನಿ ಹಿ ಬ್ರಾಹ್ಮಣಾನಿ ಭವಂತಿ । ಪೃಥಿವೀ ವೈಶ್ವಾನರಃ, ಸಂವತ್ಸರೋ ವೈಶ್ವಾನರೋ, ಬ್ರಾಹ್ಮಣೋ ವೈಶ್ವಾನರ ಇತಿ ॥**

ಸೂರ್ಯನಲ್ಲಿಯೇ ವೈಶ್ವಾನರಪ್ರವಾದವೆಂಬುದಕ್ಕೆ ಬ್ರಾಹ್ಮಣಪ್ರಮಾಣವನ್ನು ಕಾರಣವನ್ನಾಗಿ ಹೇಳಿರುವುದೂ ಯುಕ್ತವಲ್ಲ ಹಿ ಎಂಬುದು ಹೇತ್ವರ್ಥವನ್ನು ತಿಳಿಸುತ್ತದೆ. ಬ್ರಾಹ್ಮಣವು ನಾನಾಗುಣಕಲ್ಪನೆಯಿಂದ ಎಲ್ಲವನ್ನೂ ಹೇಳುತ್ತದೆ. ಭಕ್ತಿಯಿಂದ ಪೃಥಿವಿಯನ್ನೂ ವೈಶ್ವಾನರನೆಂದು ಹೇಳಿದೆ. ಯಾವುದೋ ಗುಣಸಂಬಂಧದಿಂದ ಸಂವತ್ಸರವೂ ವೈಶ್ವಾನರ, ಬ್ರಾಹ್ಮಣನೂ ವೈಶ್ವಾನರನೆಂದು ಹೇಳಿರುವುದು. ಆದುದರಿಂದ ಅದನ್ನು ಪ್ರಮಾಣವನ್ನಾಗಿ ಅಂಗೀಕರಿಸಿ ನಿಶ್ಚಯಿಸಲು ಸಾಧ್ಯವಾಗಲಾರದು.

**ಯಥೋ ಏತತ್—ನಿವಿತ್ಸೌರ್ಯವೈಶ್ವಾನರೀ ಭವತೀತಿ, ತಸ್ಯೈವ ಸಾ ಭವತಿ-ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇದಿತಿ । ಏಷ ಹಿ ವಿಡ್ಭ್ಯೋ ಮಾನುಷೀಭ್ಯೋ ದೀಪ್ಯತೇ ॥**

ಸೌರ್ಯವೈಶ್ವಾನರೀ ಎಂಬ ನಿವಿತ್ ಇರುವುದರಿಂದ ಅದು ಸಾಧಕವೆಂದು ಹಿಂದೆ ಹೇಳಿದೆ. ಅದೂ ಸಾಧಕವಲ್ಲವೆಂದು ವಿವರಿಸುತ್ತಾರೆ. ಸೌರ್ಯವೈಶ್ವಾನರೀನಿವಿತ್ ಪಾರ್ಥಿವಾಗ್ನಿಯ ಸ್ತುತಿಯೇ ಆಗಿರುತ್ತದೆ. ಅದು ಸೂರ್ಯಸ್ತುತಿಯನ್ನು ಮಾಡುವುದಿಲ್ಲ. ಪಾರ್ಥಿವಾಗ್ನಿಸ್ತುತಿಯನ್ನು ಮಾಡುತ್ತದೆ ಎಂಬುದಕ್ಕೆ ಪ್ರಮಾಣ ತೋರಿಸುತ್ತಾರೆ. ಆ ನಿವಿನ್ಮಂತ್ರದ ಮಧ್ಯದಲ್ಲಿ 'ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇತ್' ಎಂದು ಒಂದು ವಾಕ್ಯದಲ್ಲಿ ವಿಡ್ಭ್ಯಃ ಎಂಬ ಒಂದು ಪದದಿಂದ ಇದು ವ್ಯಕ್ತವಾಗುತ್ತದೆ. 'ವಿಟ್ ಸ್ಮೃತೋ ವೈಶ್ಯಮನುಜಪ್ರಜಾಸು ಚ ಮನೀಷಿಭಿಃ' ಎಂದು ವಿಟ್ ಶಬ್ದಕ್ಕೆ ಪ್ರಜೆಗಳೆಂದು ಅರ್ಥ ಹೇಳಿರುತ್ತಾರೆ. ಅವರಿಗೋಸ್ಕರ ಪ್ರಕಾಶಿಸುವುದೆಂದು ಹೇಳಿರುವುದರಿಂದ ಅದು ಪಾರ್ಥಿವಾಗ್ನಿಯ ಸ್ತುತಿಯೇ ಆಗುತ್ತದೆ. ನಿವಿನ್ಮಂತ್ರ ಈ ರೀತಿಯಾಗಿದೆ—

ಅಗ್ನಿರ್ವೈಶ್ವಾನರಃ ಸೋಮಸ್ಯ ಮತ್ಸತ್ । ವಿಶ್ವೇಷಾಂ ದೇವಾನಾಂ ಸಮಿತ್ । ಅಜಸ್ರಂ ದೈವ್ಯಂ ಜ್ಯೋತಿಃ । ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇತ್ । ವ್ಯುಷು ಪೂರ್ವಾಸು ದಿದ್ಯುತಾನಃ । ಅಜರ ಉಷಸಾಮನೀಕೇ । ಆ ಯೋ ದ್ಯಾಂ ಭಾತ್ಯಾಪೃಥಿವೀಮ್ । ಓರ್ವಂತರಿಕ್ಷಂ । ಜ್ಯೋತಿಷಾ ಯಜ್ಞಾಯ ಶರ್ಮ ಸಂಯತತ್ । ಅಗ್ನಿರ್ವೈಶ್ವಾನರ ಇಹ ಶ್ರವದಿಹ ಸೋಮಸ್ಯ ಮತ್ಸತ್ । ಪ್ರೇಮಾಂ ದೇವೋ ದೇವಹೂತಿಮವತು ದೇವ್ಯಾ ಧಿಯಾ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಂ ಪ್ರೇಮಂ ಸುನ್ವಂತಂ ಯಜಮಾನಮವತು । ಚಿತ್ರಶ್ಚಿತ್ರಾಭಿರೂತಿಭಿಃ ಶ್ರವದ್ಬ್ರಹ್ಮಾಣ್ಯವಸಾಗಮತ್ ॥

ಇದು ಅಗ್ನಿಮಾರುತದಲ್ಲಿ ಸ್ತುತಿಸಲ್ಪಡುತ್ತದೆ. ವೈಶ್ವಾನರಾಗ್ನಿಯು ಸೋಮರಸದಿಂದ ತೃಪ್ತಿಹೊಂದಲಿ. ಯಾವನು ಸಕಲ ದೇವತೆಗಳಿಗೂ ಅಭಿವರ್ಧಕನಾಗಿರುವನೋ, ಯಾರು ಯಾವಾಗಲೂ ಹಗಲಿನ ಪೂರ್ವಭಾಗದಲ್ಲಿ ಪ್ರಜ್ವಲಿಸುವನೋ, ಯಾರು ಮನುಷ್ಯರಿಗೋಸ್ಕರ ಪ್ರಕಾಶಪಡಿಸುವನೋ ಇವನು ಯಾವಾಗಲೂ ಮುಪ್ಪಿಲ್ಲದವನು. ಅಗ್ನಿಹೋತ್ರಾದಿಗಳಲ್ಲಿ ಪ್ರಜ್ವಲಿಸುವವನು. ಇವನು ಸೂರ್ಯರೂಪದಿಂದ ದ್ಯುಲೋಕವನ್ನು ಪ್ರಕಾಶಪಡಿಸುತ್ತಾನೆ. ಅಗ್ನಿರೂಪದಿಂದ ಭೂಲೋಕವನ್ನು ಬೆಳಗುತ್ತಾನೆ. ಮಧ್ಯಮದೇವತಾರೂಪದಿಂದ ಅಂತರಿಕ್ಷವನ್ನು ಪ್ರಕಾಶಪಡಿಸುತ್ತಾನೆ. ಇವನು ಜ್ಯೋತಿರೂಪದಿಂದ ಯಜ್ಞದಲ್ಲಿ ಸುಖವನ್ನು ಕೊಡುತ್ತಾನೆ. ಇವನೇ ವೈಶ್ವಾನರನಾದ ಅಗ್ನಿಯು. ಎಲ್ಲಾ ವಾಕ್ಯಗಳಲ್ಲಿಯೂ ಇದಕ್ಕೆ ಅನ್ವಯ ಹೇಳಬೇಕು. ಇವನು ಯಜ್ಞದಲ್ಲಿ ನಮ್ಮ ಸ್ತುತಿಯನ್ನು ಕೇಳಲಿ. ಆದರಾತಿಶಯವನ್ನು ವ್ಯಕ್ತಪಡಿಸಲು ಪುನಃ ಪುನಃ ಪ್ರಾರ್ಥಿಸುತ್ತಾರೆ. ಈ ವೈಶ್ವಾನರಾಗ್ನಿಯು ದೇವಯೋಗ್ಯ ಪ್ರಜ್ಞೆಯಿಂದ ದೇವತೆಗಳಿಗೆ ಹವಿಸ್ಸನ್ನು ಕೊಡುವ ನಮ್ಮ ಆಹ್ವಾನವನ್ನು ಕೇಳಿ ಬರಲಿ. ಸೋಮರಸವನ್ನು ರಕ್ಷಿಸಲಿ. ಪೂಜ್ಯನಾದ ಈ ವೈಶ್ವಾನರನು ಶೋಭನಗಮನಗಳಿಂದ ಪ್ರೀತಿಯಿಂದ ಈ ನಮ್ಮ ಸ್ತೋತ್ರಗಳನ್ನು ಕೇಳಲಿ. ನಮ್ಮನ್ನು ರಕ್ಷಿಸಲು ಬೇಗ ಬರಲಿ ಎಂದು ಈ ನಿವಿನ್ಮಂತ್ರದ ಅರ್ಥ. ಇದರಿಂದ ಪಾರ್ಥಿವಾಗ್ನಿಯೇ ವೈಶ್ವಾನರನೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**ಯಥೋ ಏತತ್—ಛಾಂದೋಮಿಕಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತಿ ಅಸ್ಯೈವ, ತದ್ಭವತಿ—"ಜಮದಗ್ನಿಭಿರಾಹುತ," ಇತಿ॥**

ಛಂದೋಮಯಜ್ಞದಲ್ಲಿ ದಾಶರಾತ್ರಿಕಗಳಲ್ಲಿರುವ ಒಂದು ಛಾಂದೋಮಿಕವೆಂಬ ಸೂಕ್ತವು ಸೌರ್ಯವೈಶ್ವಾನರವಾದುದರಿಂದ ಅದು ಸೂರ್ಯನೇ ವೈಶ್ವಾನರನೆಂಬುದಕ್ಕೆ ಸಾಧಕವೆಂದು ಹೇಳುವುದೂ ಸರಿಯಲ್ಲ. ಆ ಛಾಂದೋಮಿಕಸೂಕ್ತವು ಪಾರ್ಥಿವಾಗ್ನಿಯನ್ನೇ ಸ್ತುತಿಸುತ್ತದೆ. ಏಕೆಂದರೆ ಆ ಸೂಕ್ತದಲ್ಲಿ ವಿಶೇಷವಾಗಿ ಪಾರ್ಥಿವಾಗ್ನಿಸೂಚಕಲಿಂಗವಿರುತ್ತದೆ. ಜಮದಗ್ನಿಗಳು ಈ ಪಾರ್ಥಿವಾಗ್ನಿಯನ್ನೇ ಆಹುತಿಯಿಂದ ತೃಪ್ತಿಪಡಿಸುತ್ತಾರೆ ಎಂಬ ಅರ್ಥಕೊಡುವ ವಾಕ್ಯವೇ ಲಿಂಗವಾಗುತ್ತದೆ. ಆದಿತ್ಯನಲ್ಲಿ ಯಾರೂ ಆಹುತಿಯನ್ನು ಇಡುವುದಿಲ್ಲ. ಆದುದರಿಂದ ವೈಶ್ವಾನರಲಿಂಗವು ಪಾರ್ಥಿವಾಗ್ನಿಗೇ ಜ್ಞಾಪಕವಲ್ಲದೆ ಸೂರ್ಯನಿಗೆ ಜ್ಞಾಪಕವಾಗುವುದಿಲ್ಲ.

**ಜಮದಗ್ನಯಃ ಪ್ರಯಮಿತಾಗ್ನಯೋ ವಾ ಪ್ರಜ್ವಲಿತಾಗ್ನಯೋ ವಾ ತೈರಭಿಹುತೋ ಭವತಿ ॥**

ಜಮದಗ್ನಿ ಎಂಬ ಹೆಸರು ಹೇಗೆ ಉಂಟಾಯಿತೆಂದು ವಿವರಿಸುತ್ತಾರೆ. ನಿತ್ಯವೂ ಪ್ರಭೂತವಾದ ಅಗ್ನಿಯುಳ್ಳವರು ಅಥವಾ ಚೆನ್ನಾಗಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಮಹರ್ಷಿಗಳಿಗೆ ಜಮದಗ್ನಿಗಳೆಂದು ಹೆಸರು. ಅವರಿಂದ ಈ ಪಾರ್ಥಿವಾಗ್ನಿಯು ಹೋಮಿಸಲ್ಪಡುತ್ತಾನೆ.

**ಯಥೋ ಏತತ್—ಹವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತಿ, ಅಸ್ಯೈವ ತದ್ಭವತಿ ॥ ೨೪ ॥**

ಹವಿಷ್ಪಾಂತಪದವುಳ್ಳ ಸೂಕ್ತವು ಸಾಧಕವೆಂದು ಪೂರ್ವಪಕ್ಷಿಗಳು ಹೇಳಿರುವುದನ್ನು ಖಂಡಿಸುತ್ತಾರೆ. ಈ ಸೂಕ್ತವೂ ಕೂಡ ಪಾರ್ಥಿವಾಗ್ನಿಯನ್ನೇ ತಿಳಿಸುತ್ತದೆ. ಏಕೆಂದರೆ, ಈ ಸೂಕ್ತದ ಮೊದಲನೆಯ ಋಕ್ ಅಗ್ನಿದೇವತಾಕವಾಗಿ ಅಗ್ನಿಯನ್ನೇ ಸಾಕ್ಷಾತ್ತಾಗಿ ಸ್ತುತಿಸುತ್ತದೆ. ಆದುದರಿಂದ ವೈಶ್ವಾನರವೆಂದರೆ ಪಾರ್ಥಿವಾಗ್ನಿಯೆಂದೇ ನಿರುಕ್ತಕಾರರ ಅಭಿಪ್ರಾಯ ಸಮಂಜಸವಾಗಿದೆ.

**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ॥**
**ತ ಆವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥**

(ಋ. ಸಂ. ೧-೧೬೪-೪೭)

ಈರೀತಿ ಶ್ರೀ ಸಾಯಣಭಾಷ್ಯದ ನಿರುಕ್ತಭಾಷ್ಯದಲ್ಲಿ ಏಳನೆಯ ಅಧ್ಯಾಯದಲ್ಲಿ

ಇಪ್ಪತ್ತನಾಲ್ಕನೆಯಖಂಡ ಸಮಾಪ್ತವಾಗಿದೆ.

## ಅಥ ಪಂಚವಿಂಶತಿಃ ಖಂಡಃ
### ಇಪ್ಪತ್ತೈದನೆಯ ಖಂಡವು

ಹವಿಷ್ಪಾಂತಮಜರಂ ಸ್ವರ್ವಿದಿ ದಿವಿಸ್ಪೃಶ್ಯಾಹುತಂ ಜುಷ್ಟಮಗ್ನೌ । ತಸ್ಯ ಭರ್ಮಣೇ ಭುವನಾಯ ದೇವಾ ಧರ್ಮಣೇ ಕಂ ಸ್ವಧಯಾ ಪಪ್ರಥಂತ (ಋ ಸಂ, ೧೦-೮೮-೧) ॥ ಹವಿರ್ಯತ್ಪಾನೀಯಮಜರಂ ಸೂರ್ಯವಿದಿ ದಿವಿಸ್ಪೃಶ್ಯಭಿಹುತಂ ಜುಷ್ಟಮಗ್ನೌ ತಸ್ಯ ಭರಣಾಯ ಚ ಭಾವನಾಯ ಚ ಧಾರಣಾಯ ಚೈತೇಭ್ಯಃ ಸರ್ವೇಭ್ಯಃ ಕರ್ಮಭ್ಯ ಇಮಮಗ್ನಿಮನ್ನೇನಾಪಪ್ರಥಂತೇತ್ಯಥಾಪ್ಯಾಹ ॥ ೨೫ ॥

ಹವಿಷ್ಪಾಂತಮಜರಂ ಸ್ವರ್ವಿದಿ ದಿವಿಸ್ಪೃಶ್ಯಾಹುತಂ ಜುಷ್ಟಮಗ್ನೌ ।
ತಸ್ಯ ಭರ್ಮಣೇ ಭುವನಾಯ ದೇವಾ ಧರ್ಮಣೇ ಕಂ ಸ್ವಧಯಾ ಪಪ್ರಥಂತ ॥
(ಋ. ಸಂ. ೮-೪-೧೯

ಹವಿಷ್ಪಾಂತೀಯಸೂಕ್ತದಲ್ಲಿ ಮೊದಲನೆಯ ಋಕ್ಕು ಸಾಕ್ಷಾದಗ್ನಿಯನ್ನೇ ಸ್ತುತಿಸುತ್ತದೆ ಎಂಬುದಕ್ಕೆ ಉದಾಹರಣೆ ತೋರಿಸುತ್ತಾರೆ. ಇಲ್ಲಿ ಸೂರ್ಯಸಂಬಂಧ ಯಾವುದೂ ತೋರುವುದಿಲ್ಲ. ದೇವತೆಗಳಿಗೆ ಪಾನಾರ್ಹವಾಗಿರುವ, ಜರಾರಹಿತವಾದ, ದೇವತೆಗಳಿಗೆ ಇಷ್ಟವಾದ ಸೋಮರೂಪವಾದ ಹವಿಸ್ಸು, ಆದಿತ್ಯನನ್ನು ತಿಳಿದ, ದ್ಯುಲೋಕವನ್ನು ಪ್ರವೇಶಿಸುವ ಅಗ್ನಿಯಲ್ಲಿ ಹುತವಾಗಿದೆ. ಈ ಹವಿಸ್ಸನ್ನು ಅಧಿಕಗೊಳಿಸಲು, ದೇವತೆಗಳಿಗೆ ಒಯ್ಯಲು, ಧರಿಸಲು, ಸಮರ್ಥನಾದ ಎಲ್ಲರಿಗೂ ಸುಖಕರನಾದ ಈ ಅಗ್ನಿಯನ್ನು ಅನ್ನರೂಪಹವಿಸ್ಸಿನಿಂದ ದಾನಾದಿಗುಣಗಳಿಂದ ಕೂಡಿದ ಋತ್ವಿಜರು ಪ್ರಾರ್ಥಿಸುತ್ತಾರೆ. ವೃದ್ಧಿಹೊಂದುವಂತೆ ಮಾಡುತ್ತಾರೆ ಎಂದರ್ಥ. ಇಲ್ಲಿ ವೈಶ್ವಾನರ ಶಬ್ದವೇ ಇಲ್ಲ. ಮೊದಲನೆಯ ಮಂತ್ರವೇ ಸ್ಪಷ್ಟವಾಗಿ ಅಗ್ನಿಯನ್ನು ಹೇಳುತ್ತಿರುವುದರಿಂದ ಹವಿಷ್ಪಾಂತೀಯ ಸೂಕ್ತವು ವೈಶ್ವಾನರನು ಸೂರ್ಯನೆಂದು ತಿಳಿಸಲು ಅಸಮರ್ಥವಾಗಿದೆ.

ಹವಿರ್ಯತ್ಪಾನೀಯಮಜರಂ ಸೂರ್ಯವಿದಿ ದಿವಿಸ್ಪೃಶಿ ಅಭಿಹುತಂ
ಜುಷ್ಟಮಗ್ನೌ, ತಸ್ಯ ಭರಣಾಯ ಚ ಭಾವನಾಯಚ ಧಾರಣಾಯ
ಚೈತೇಭ್ಯಃ ಸರ್ವೇಭ್ಯಃ ಕರ್ಮಭ್ಯಃ ಇಮಮಗ್ನಿಮನ್ನೇನ ಅಪ
ಪ್ರಥಂತ, ಇತಿ ॥

ಪೂರ್ವೋಕ್ತಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ವರ್‌ಪದದಿಂದ ಸೂರ್ಯ ಎಂಬ ಅರ್ಥವಾಗುತ್ತದೆ. ಹವಿಸ್ಸಿನ ಧಾರಣಾದಿ ಸಕಲ ಪ್ರಯೋಜನಕ್ಕೋಸ್ಕರ ಅಗ್ನಿಯನ್ನು ಅಭಿವೃದ್ಧಿಹೊಂದುವಂತೆ ಮಾಡುತ್ತಾರೆ. ಇಲ್ಲಿ ಕೇವಲ ಅಗ್ನಿಯೇ ಸ್ತುತಿಸಲ್ಪಟ್ಟಿದೆ.

ಅಥಾಪ್ಯಾಹ ||

ತನ್ನ ಪಕ್ಷವನ್ನು ಸಾಧಿಸುವುದಕ್ಕೋಸ್ಕರ ಮಧ್ಯಮೋತ್ತಮ ಸ್ಥಾನದೇವತೆಗಳಲ್ಲಿ ಒಂದನ್ನು ಹೇಳುವ ವೈಶ್ವಾನರ ಶಬ್ದದಿಂದ ಕೂಡಿದ ಬೇರೊಂದು ಸೂಕ್ತದ ಒಂದು ಮಂತ್ರವಿದೆಯೆಂದು ತಿಳಿಸುತ್ತಾರೆ. ಆ ಮಂತ್ರವನ್ನು ಮುಂದೆ ತೋರಿಸುತ್ತಾರೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ

ಇಪ್ಪತ್ತೈದನೆಯ ಖಂಡ ಸಮಾಪ್ತವಾಗಿದೆ.

---

## ಅಥ ಷಟ್ವಿಂಶತಿಃ ಖಂಡಃ

## ಇಪ್ಪತ್ತಾರನೆಯ ಖಂಡವು

ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪತಸ್ಥುರ್ಋಗ್ಮಿಯಮ್ । ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ (ಋ. ಸಂ. ೬-೮-೪) ॥ ಅಪಾಮುಪಸ್ಥ ಉಪಸ್ಥಾನೇ ಮಹತ್ಯಂತರಿಕ್ಷಲೋಕ ಆಸೀನಾ ಮಹಾಂತ ಇತಿ ವಾಗೃಹ್ಣತ ಮಾಧ್ಯಮಿಕಾ ದೇವಗಣಾ ವಿಶ ಇವ ರಾಜಾನಮುಪತಸ್ಥುರ್ಋಗ್ಮಿಯಮೃಗ್ಮಂತಮಿತಿ ವಾರ್ಚನೀಯಮಿತಿ ವಾಹರದ್ಯಂ ದೂತೋ ದೇವಾನಾಂ ವಿವಸ್ವತ ಆದಿತ್ಯಾದ್ವಿವಸ್ವಾನ್ವಿವಾಸನವಾನ್ ಪ್ರೇರಿತವತಃ ಪರಾವತಾದ್ವಾಸ್ಯಾಗ್ನೇರ್ವೈಶ್ವಾನರಸ್ಯ ಮಾತರಿಶ್ವಾನಮಾಹರ್ತಾರಮಾಹ ಮಾತರಿಶಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾಥೈನಮೇತಾಭ್ಯಾಂ ಸರ್ವಾಣಿ ಸ್ಥಾನಾನ್ಯಭ್ಯಾಪಾದಂ ಸ್ತೌತಿ ॥ ೨೬ ॥

ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪತಸ್ಥು
ರ್ಋಗ್ಮಿಯಮ್ ॥ ಆ ದೂತೋ ಅಗ್ನಿಮಭರದ್ವಿವಸ್ವತೋ
ವೈಶ್ವಾನರಂ ಮಾತರಿಶ್ವಾ ಪರಾವತಃ ॥

(ಋ. ಸಂ. ೪-೫-೧೦

ವೈಶ್ವಾನರ ಶಬ್ದವೂ, ನಾನಾ ಜ್ಯೋತಿಗಳೂ ಸೇರಿರುವ ಸೂಕ್ತಾಂತರದ ಮಂತ್ರವನ್ನು ಉದಾಹರಿಸಿ, ವೈಶ್ವಾನರ ಶಬ್ದವು ಪಾರ್ಥಿವಾಗ್ನಿಯನ್ನೇ ಸ್ತುತಿಸುತ್ತದೆಂದು ತೋರಿಸುತ್ತಾರೆ. ನೀರು ಮೇಲಕ್ಕೆ ಹೋಗಿ ಎಲ್ಲಿ ನಿಂತಿರುವುದೋ ಅಂದರೆ

ಅಂತರಿಕ್ಷದಲ್ಲಿ ಇರುವ ಮಹತ್ತಾದ ಮರುದ್ದೇವತೆಗಳು ಅಗ್ನಿಯನ್ನು ಹಿಡಿದು ಮನುಷ್ಯರು ರಾಜನನ್ನು ಸ್ತುತಿಸುವಂತೆ ಇವನನ್ನು ಸ್ತುತಿಸಿದರು. ಋಗ್ಮಿಯಂ ಇತ್ಯಾದಿ ಅಗ್ನಿಗೆ ವಿಶೇಷಣ. ಅನೇಕ ಸ್ತುತಿಗಳಿಂದ ಕೂಡಿರುವವನು ಅಥವಾ ಸಕಲರಿಂದ ಪೂಜಿಸಲ್ಪಡುವವನು. ಇವನೇ ವೈಶ್ವಾನರನು. ಇವನನ್ನು ದೇವತಾದೂತನಾದ ವಾಯುವು, ದೂರದಲ್ಲಿರುವ, ಕತ್ತಲೆಯನ್ನು ಹೋಗಲಾಡಿಸುವ ಸೂರ್ಯನಿಂದ ಈ ಲೋಕಕ್ಕೆ ತಂದಿರುತ್ತಾನೆ. ಹೀಗೆ ಇಲ್ಲಿ ಮಧ್ಯಮೋತ್ತಮ ಸ್ಥಾನದ ದೇವತೆಗಳನ್ನೂ ಹೇಳಿ ವೈಶ್ವಾನರ ಶಬ್ದವನ್ನು ಅಗ್ನಿಗೆ ವಿಶೇಷಣವನ್ನಾಗಿ ಹೇಳಿರುತ್ತಾರೆ. ಆದಿತ್ಯನಿಂದ ಮಾತರಿಶ್ವಾ ಅಂದರೆ ವಾಯುವು ಅಗ್ನಿಯನ್ನು ತಂದಿರುತ್ತಾನೆಂದು ಬೇರೆ ಬೇರೆಯಾಗಿ ಮೂರು ಜ್ಯೋತಿಸ್ಸನ್ನು ಹೇಳಿ. ವೈಶ್ವಾನರ ಎಂದರೆ ಪಾರ್ಥಿವಾಗ್ನಿಯನ್ನೇ ಹೇಳಿರುತ್ತಾರೆ.

ಅಪಾಮುಪಸ್ಥ ಉಪಸ್ಥಾನೇ ಮಹತ್ಯಂತರಿಕ್ಷಲೋಕ ಆಸೀನಾ ಮಹಾಂತ ಇತಿ ವಾ, ಅಗೃಹ್ಣತ ಮಾಧ್ಯಮಿಕಾ ದೇವಗಣಾ ವಿಶ ಇವ ರಾಜಾನಮುಪತಸ್ಥುರ್ಋಗ್ಮಿಯಮೃಗ್ಮಂತಮಿತಿ ವಾ, ಅರ್ಚನೀಯಮಿತಿ ವಾ, ಪೂಜನೀಯಮಿತಿ ವಾ ಅಹರದ್ಯಂ ದೂತೋ ದೇವಾನಾಂ ವಿವಸ್ವತ ಆದಿತ್ಯಾತ್ | ವಿವಸ್ವಾನ್ ವಿವಾಸನಾತ್ | ಪ್ರೇರಿತವತಃ ಪರಾಗತಾದ್ವಾಸ್ಯಾಗ್ನೇರ್ವೈಶ್ವಾನರಸ್ಯ ಮಾತರಿಶ್ವಾನಮಾಹರ್ತಾರಮಾಹ | ಮಾತರಿಶ್ವಾ ವಾಯು-ರ್ಮಾತರ್ಯಂತರಿಕ್ಷೇ ಶ್ವಸಿತಿ, ಮಾತರ್ಯಾಶ್ವನಿತೀತಿ ವಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಹಿಷಾಪದವು ಮಹತ್ಪರ್ಯಾಯದಲ್ಲಿ ಹೇಳಿದೆ. ಇದು ಅಂತರಿಕ್ಷಕ್ಕೆ ಅಥವಾ ಮರುದ್ದೇವತೆಗಳಿಗೆ ವಿಶೇಷಣ. ಋಗ್ಮಿಯಂ ಅಗ್ನಿಗೆ ವಿಶೇಷಣ. ಋಕ್ ಸ್ತುತಿಯುಳ್ಳವ, ಅಥವಾ ಅರ್ಚಿಸಲು ಪೂಜಿಸಲು ಯೋಗ್ಯನಾದವನು ಎಂದರ್ಥ. ಮಾತರಿಶ್ವಾ ಅಂದರೆ ವಾಯು. ಮಾತಃ ಅಂದರೆ ಅಂತರಿಕ್ಷ. ಅದರಲ್ಲಿ ಪ್ರತಿಬಂಧವಿಲ್ಲದೆ ತಿರುಗುವವನು, ಅಥವಾ ವೇಗವಾಗಿ ತಿರುಗುವವನು ಎಂದರ್ಥ. ಹೀಗೆ ಪೂರ್ವಪಕ್ಷಿಗಳು ಸೂರ್ಯನೇ ವೈಶ್ವಾನರನೆಂದು ಸಾಧಿಸಲು ಯಾವ ಯಾವ ಮಂತ್ರಗಳನ್ನು ಉದಾಹರಿಸಿರುವರೋ ಅವೆಲ್ಲವೂ ಸೂರ್ಯಪ್ರತಿಪಾದಕವಲ್ಲವೆಂದೂ ಪಾರ್ಥಿವಾಗ್ನಿಯನ್ನೇ ಹೇಳುತ್ತದೆಂದು ಸಮರ್ಥಿಸಿದ್ದಾಯಿತು. ‹‹ ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತು ಮಹ್ನಾಮ ಕೃಣ್ವನ್ '' ಎಂಬ ಹವಿಷ್ಪಾಂತೀಯ ಸೂಕ್ತದ ಋಕ್ಕು ಅವರಿಗೆ ಪ್ರಮಾಣವಾಗಿದೆ. ಸೂರ್ಯನಲ್ಲದೆ ಬೇರೆ ಯಾರೂ ಹಗಲ ರಾತ್ರಿಗಳನ್ನು ಮಾಡುವುದಿಲ್ಲವೆಂದು ಸೂರ್ಯನೇ ವೈಶ್ವಾನರನೆಂದು ಅವರ ಅಭಿಪ್ರಾಯ. ಆದರೆ ಸೂಕ್ತದ ಆದಿಯಲ್ಲಿ ಸಾಕ್ಷಾದಗ್ನಿಯನ್ನೇ ಹೇಳಿರುವುದರಿಂದ ಮುಂದೆ ಇತರ ದೇವತಾಸೂಚಕ ಪದಗಳಿದ್ದರೂ ‹ ಅಗ್ನಿಃ ದೇವತಾಃ ' ಎಂದು ಹೇಳಿರುವುದರಿಂದ ಅಗ್ನಿಯೇ ಆಯಾಯ ದೇವತಾಸ್ವರೂಪದಿಂದ ವರ್ಣಿತನಾಗಿರುವನೆಂದು ತಿಳಿಯಬೇಕು. ಮಹಾಭಾಗ್ಯದಿಂದ ನಾನಾ ರೂಪಗಳು ಸಂಭವಿಸುತ್ತವೆ. ಆ ಸೂಕ್ತದಲ್ಲಿ ಪಾರ್ಥಿವ ಅಶ್ವಾದಿಗಳನ್ನೂ ವರ್ಣಿಸಿರುತ್ತಾರೆ. ಹೀಗಿರುವಾಗ ಇತರ ದೇವತೆಗಳನ್ನು ಹೇಳಿರುವುದು ವಿಶೇಷವಲ್ಲ. ಹೆಚ್ಚಾಗಿ ಅಗ್ನಿಯನ್ನೇ ಸ್ತುತಿಸಿರುವುದರಿಂದ ಹವಿಷ್ಪಾಂತೀಯ ಸೂಕ್ತವು ಪಾರ್ಥಿವಾಗ್ನಿ ಸಮರ್ಥಕವೇ ಆಗಿರುವುದರಿಂದ ಪೂರ್ವಪಕ್ಷಿಯ ಮತಕ್ಕೆ ಸಾಧಕವಾಗುವುದಿಲ್ಲ.

ಅಥೈನಮೇತಾಭ್ಯಾಂ ಸರ್ವಾಣಿ ಸ್ಥಾನಾನ್ಯಭ್ಯಾಪಾದಂ ಸ್ತೌತಿ ॥ ೨೬ ॥

ಪಾರ್ಥಿವಾಗ್ನಿಯೇ ಆಯಾಯ ದೇವತಾವಿಶೇಷದೀದ ಆಯಾಯ ಸ್ಥಾನವನ್ನು ಹೊಂದಿ ಸ್ತುತಿಸಲ್ಪಡುತ್ತಾನೆಂದು ಶಾಕಪೂಣಿ ಆಚಾರ್ಯರ ಮತವೆಂದು ಉಪಸಂಹಾರ ತೋರಿಸುತ್ತಾರೆ. ಮುಂದೆ ಹೇಳುವ ಸೂತ್ರಗಳಿಂದ ಮಂತ್ರದ್ರಷ್ಟೃಋಷಿಗಳು ಪಾರ್ಥಿವಾಗ್ನಿಯನ್ನೇ ಪೃಥಿವೀ ಅಂತರಿಕ್ಷ, ದ್ಯುಲೋಕವನ್ನು ಹೊಂದಿರುವನೆಂದು ಸ್ತುತಿಸುತ್ತಾರೆ. 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂದು ಒಬ್ಬ ದೇವನಿಗೆ ನಾಮ ಹಲವು ಎಂದು ಹೇಳಿದೆ. ಸ್ಥಾನಭೇದದಿಂದ ನಾಮಭೇದವುಂಟಾಗುತ್ತದೆ.

ಅಪಾ ಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥು-
ರ್ಋಗ್ಮಿಯಂ । ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ
ಮಾತರಿಶ್ವಾ ಪರಾವತಃ ॥

(ಋ. ಸಂ. ೬-೮-೪)

ಇದರ ಅರ್ಥವು—

ಅಂತರಿಕ್ಷದ ಮಧ್ಯಭಾಗದಲ್ಲಿರತಕ್ಕ ಮಹತ್ಸ್ವರೂಪವುಳ್ಳ ಮರುತ್ತುಗಳು ವಿದ್ಯುದ್ರೂಪದಲ್ಲಿರುವ ವೈಶ್ವಾನರನ ಸ್ವರೂಪವನ್ನು ಗ್ರಹಿಸಿದವು. ಪೂಜ್ಯನೂ ಪ್ರಭುವೂ ಆದ ಈ ಅಗ್ನಿಯನ್ನು ಸಕಲ ಪ್ರಜೆಗಳೂ ಸ್ತುತಿಸಿದರು. ವೈಶ್ವಾನರ ರೂಪಿಯಾದ ಅಗ್ನಿಯನ್ನು ದೇವದೂತನಾದ ವಾಯುವು ಅತ್ಯಂತ ದೂರದೇಶಸ್ಥನಾದ ಆದಿತ್ಯನಿಂದ ಸ್ವೀಕರಿಸಿ ಕರೆತಂದಿದ್ದಾನೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಆಧ್ಯಾಯದಲ್ಲಿ
ಇಪ್ಪತ್ತಾರನೆಯ ಖಂಡವು ಸಮಾಪ್ತವಾದುದು.

---

## ಅಥ ಸಪ್ತವಿಂಶತಿಃ ಖಂಡಃ

### ಇಪ್ಪತ್ತೇಳನೆಯಖಂಡವು

ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತ-ರುದ್ಯನ್ । ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥ (ಋ. ಸಂ. ೧೦-೮೮-೬) ಮೂರ್ಧಾ ಮೂರ್ತಮಸ್ಮಿನ್ಧೀಯತೇ ಮೂರ್ಧಾ ಯಃ ಸರ್ವೇಷಾಂ ಭೂತಾನಾಂ ಭವತಿ ನಕ್ತಮಗ್ನಿಸ್ತತಃ ಸೂರ್ಯೋ-ಜಾಯತೇ ಪ್ರಾತರುದ್ಯನ್ತ್ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ ಯಜ್ಞಿಯಾನಾಂ ದೇವಾನಾಂ ಯಜ್ಞಸಂಪಾದಿನಾಮಪೋ ಯತ್ಕರ್ಮ ಚರತಿ ಪ್ರಜಾನನ್ತ್ಸರ್ವಾಣಿ ಸ್ಥಾನಾ-ನ್ಯನುಸಂಚರತೇ ತ್ವರಮಾಣಸ್ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೨೭ ॥

ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ
ಪ್ರಾತರುದ್ಯನ್ ॥ ಮಾಯಾಮೂ ತು ಯಜ್ಞಿಯಾನಾಮೇತಾ-
ಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥

(ಋ. ಸಂ. ೮-೪-೧೧)

ಅಗ್ನಿಯೇ ಇತರ ಜ್ಯೋತಿರೂಪದಿಂದ ಆಯಾಯ ಸ್ಥಾನವನ್ನು ಹೊಂದುತ್ತಾನೆ ಎಂಬುದಕ್ಕೆ ಉದಾಹರಣೆ ತೋರಿಸುತ್ತಾರೆ ವೈಶ್ವಾನರ ಗುಣದಿಂದ ಕೂಡಿದ ಈ ಅಗ್ನಿಯು ರಾತ್ರಿಯಲ್ಲಿ ಭೂಲೋಕಕ್ಕೆ ಅಥವಾ ಪ್ರಾಣಿಜಾತಕ್ಕೆ ಶಿರಸ್ಸಿನಂತೆ ಪ್ರಧಾನ ನಾಗಿರುತ್ತಾನೆ. ಇವನಿಂದಲೇ ಬೆಳಕು ಆಹಾರವನ್ನು ಹೊಂದುವುದರಿಂದ ಪ್ರಧಾನವೆಂದರ್ಥ. ರಾತ್ರಿಯಾದಮೇಲೆ ಪ್ರಾತಃ ಕಾಲದಲ್ಲಿ ಉದಯಿಸಿ ಅವನೇ ಹಗಲಿನಲ್ಲಿ ಸೂರ್ಯನಾಗುತ್ತಾನೆ. ಯಜ್ಞನಿರ್ವಾಹಕರಾದ ದೇವತೆಗಳ ಈ ಪ್ರಜ್ಞೆಯನ್ನು ತತ್ವತಿಳಿದ ಕವಿಗಳೇ ತಿಳಿದಿರುತ್ತಾರೆ. ಈ ಅಗ್ನಿಯು ತನ್ನ ಕರ್ತವ್ಯವನ್ನು ಚನ್ನಾಗಿ ತಿಳಿದವನಾಗಿ ಕಾಲಮೀರದೆ ಆಯಾಯ ಕಾಲದಲ್ಲಿ ಆಯಾಯ ಸ್ಥಾನವನ್ನು ಹೊಂದುತ್ತಾನೆ ಎಂದರ್ಥ.

ಮೂರ್ಧಾ ಮೂರ್ತಮಸ್ಮಿನ್ಧೀಯತೇ, ಮೂರ್ಧಾ ಯಃ ಸರ್ವೇ-
ಷಾಂ ಭೂತಾನಾಂ ಭವತಿ ನಕ್ತಮಗ್ನಿಃ । ತತಃ ಸೂರ್ಯೋ
ಜಾಯತೇ ಪ್ರಾತರುದ್ಯನ್ ಸ ಏವ, ಪ್ರಜ್ಞಾಂ ತ್ವೇತಾಂ
ಮನ್ಯಂತೇ ಯಜ್ಞಿಯಾನಾಂ ದೇವಾನಾಂ ಯಜ್ಞಸಂಪಾದಿನಾಂ ।
ಅಪೋ ಯತ್ ಕರ್ಮ ಚರತಿ ಪ್ರಜಾನನ್ ಸರ್ವಾಣಿ ಸ್ಥಾನಾನಿ-
ಅನುಸಂಚರತೇ । ತ್ವರಮಾಣಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮೂರ್ತವಾದ ಸಕಲಸತ್ವಜಾತವೂ ಈ ಅಗ್ನಿಯಲ್ಲಿ ಕಟ್ಟಲ್ಪಟ್ಟಂತಿರುವುದರಿಂದ ಮೂರ್ಧಾ ಎಂದಾಗಿರುತ್ತಾನೆ. ಆರ್ಷವಾಗಿ ತಕಾರಲೋಪಬಂದಿದೆ. ಪ್ರಾಣಿಗೆ ಶಿರಸ್ಸಿಲ್ಲದೇ ಹೋದರೆ ಹೇಗೆ ಮರಣಸನ್ನಿಹಿತವೋ ಅದರಂತೆ ಅಗ್ನಿ ಇಲ್ಲದೇ ಹೋದರೆ ಪ್ರಪಂಚವೇ ಇರಲಾರದು ಎಂದರ್ಥ. ಇತರ ಪದಗಳ ಅರ್ಥ ಸ್ಪಷ್ಟವಾಗಿದೆ.

ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೨೭ ॥

ಪೂರ್ವದಲ್ಲಿ ಉದಾಹೃತವಾದ ಋಙ್ಮಂತ್ರವು ಅಗ್ನಿಯು ಪೃಥಿವೀ, ದ್ಯುಲೋಕಸಂಬಂಧ ಹೊಂದಿರುವುದನ್ನು ಮಾತ್ರ ತಿಳಿಸುತ್ತದೆ. ಆದರೆ ಮುಂದೆ ಹೇಳುವ ಮಂತ್ರವು ಅಗ್ನಿಗೆ ಸ್ಥಾನತ್ರಯಸಂಪತ್ತಿಯನ್ನು ತಿಳಿಸುವುದರ ಮೂಲಕ ಅಗ್ನಿಯ ಸಾಮರ್ಥ್ಯಾತಿಶಯ ವನ್ನೂ, ಅಧಿಕ ನಿರ್ವಚನವನ್ನೂ ತಿಳಿಯಲು ಸಾಧನವಾಗುತ್ತದೆ.

ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ
ಪ್ರಾತರುದ್ಯನ್, ಮಾಯಾಮೂ ತು ಯಜ್ಞಿಯಾನಾಮೇತಾಮಪೋ
ಯತ್ತೂರ್ಣಿಶ್ಚರತಿ ಪ್ರಜಾನನ್ ॥

(ಋ. ಸಂ. ೧೦-೮೮-೯)

ಇದರ ಅರ್ಥವು—

ಯಾವ ವೈಶ್ವಾನರಾಗ್ನಿಯು ತನ್ನ ಮಾಹಾತ್ಮ್ಯದಿಂದ ಎಲ್ಲರಿಗೂ ಗೋಚರನಾಗಿಯೂ ಪ್ರಜ್ವಲಿತನಾಗಿಯೂ ದ್ಯುಸ್ಥಾನದಲ್ಲಿರುವವನಾಗಿಯೂ ಪ್ರಭಾವಯುತನಾಗಿಯೂ ಪ್ರಕಾಶಿಸುವನೋ ಆದೇ ವೈಶ್ವಾನರಾಗ್ನಿಯಲ್ಲಿ ಶರೀರರಕ್ಷಕರಾದ ಸಕಲದೇವತೆಗಳೂ ಸ್ತುತಿವಾಕ್ಕುಗಳಿಂದ ಹವಿಸ್ಸನ್ನು ಆಹುತಿರೂಪದಲ್ಲಿ ಅರ್ಪಿಸಿದರು.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತವಾದ ನಿರುಕ್ತಭಾಷ್ಯದ ಏಳನೇ ಅಧ್ಯಾಯದಲ್ಲಿ

ಇಪ್ಪತ್ತಏಳನೆಯ ಖಂಡವು ಮುಗಿದಿದೆ.

## ಅಥ ಅಷ್ಟಾವಿಂಶತಿಃ ಖಂಡಃ

### ಇಪ್ಪತ್ತೆಂಟನೆಯ ಖಂಡವು

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಮ್ | ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ (೧೦-೮೮-೧೦) || ಸ್ತೋಮೇನ ಯಂ ಹಿ ದಿವಿ ದೇವಾಸೋ ಅಗ್ನಿಮಜನಯಞ್ಛಕ್ತಿಭಿಃ ಕರ್ಮಭಿರ್ದ್ಯಾವಾಪೃಥಿವ್ಯೋರಾಪೂರಣಂ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿರ್ಯದಸ್ಯ ದಿವಿ ತೃತೀಯಂ ತದಸಾವಾದಿತ್ಯ ಇತಿ ಬ್ರಾಹ್ಮಣಂ ತದಗ್ನೀಕೃತ್ಯ ಸ್ತೌತ್ಯಥೈನಮೇತಯಾದಿತ್ಯೀಕೃತ್ಯ ಸ್ತೌತಿ || ೨೮ ||

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನನ್ಛಕ್ತಿಭೀ<br>ರೋದಸಿಪ್ರಾಮ್ || ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ<br>ಓಷಧೀಃ ಪಚತಿ ವಿಶ್ವರೂಪಾಃ ||

(ಋ. ಸಂ. ೮-೪-೧೧)

ಅಗ್ನಿಗೆ ಸ್ಥಾನತ್ರಯ ಸಂಪತ್ತಿಯನ್ನು ಮಂತ್ರೋದಾಹರಣೆಯಿಂದ ವಿವರಿಸುತ್ತಾರೆ.

ಸ್ತೋಮೇನ ಹಿ ಯಂ ದಿವಿ ದೇವಾ ಅಗ್ನಿಮಜನಯನ್ ಶಕ್ತಿಭಿಃ<br>ಕರ್ಮಭಿಃ | ದ್ಯಾವಾಪೃಥಿವ್ಯೋಃ ಪೂರಣಂ ತಮಕುರ್ವನ್<br>ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ದೇವತೆಗಳು ಅಗ್ನಿಹೋತ್ರಾದಿ ಕರ್ಮಗಳಿಂದ ದ್ಯಾವಾಪೃಥಿವಿಯನ್ನು ತುಂಬಿಸುವ ಈ ಅಗ್ನಿಯನ್ನು ದ್ಯುಲೋಕದಲ್ಲಿ ಸೂರ್ಯರೂಪದಿಂದ, ತಮ್ಮ ಸ್ತುತಿಯಮೂಲಕ ಹುಟ್ಟಿಸಿದರು. ಅದೇ ಸುಖಕರನಾದ ಅಗ್ನಿಯನ್ನು ಮೂರುರೀತಿಯಾಗಿ ಪೃಥಿವೀ, ಅಂತರಿಕ್ಷ, ದ್ಯುಲೋಕಗಳಲ್ಲಿ ಮಾಡಿದರು ಅವನೇ ಸರ್ವಾವಸ್ಥೆಯಲ್ಲಿದ್ದು ಸಕಲ ಓಷಧ್ಯಾದಿಗಳನ್ನು ಪಕ್ವವಾಗುವಂತೆ ಮಾಡುತ್ತಾನೆ. ಶಾಕಪೂಣಿಯೆಂಬ ಆಚಾರ್ಯರಮತವನ್ನೇ ಹೇಳುತ್ತಿರುವಾಗ ಪುನಃ ಅವರ ಹೆಸರನ್ನು ಹೇಳಿರುವುದು ತಮ್ಮ ಪಕ್ಷವೂ ಇದೇ ಎಂದು ಸೂಚಿಸಲು ಹೇಳಿರುತ್ತಾರೆ.

**'ಯದಸ್ಯ ದಿವಿ ತೃತೀಯಂ ತದಸಾವಾದಿತ್ಯಃ' ಇತಿ ಬ್ರಾಹ್ಮಣಮ್ ||**

ಅಗ್ನಿಯೇ ಆದಿತ್ಯನಾಗುತ್ತಾನೆ. ಎಂದು ಮಂತ್ರದಲ್ಲಿ ಹೇಳಿರುವ ಅರ್ಥವನ್ನೇ ಬ್ರಾಹ್ಮಣವೂ ಹೇಳಿದೆಯೆಂದು ವಿವರಿಸುತ್ತಾರೆ. ಅಸ್ಯ ಎಂದು ಇದರ ಶಬ್ದದಿಂದ ನಿರ್ದೇಶಿಸಿರುವುದರಿಂದ ಪಾರ್ಥಿವಾಗ್ನಿಯ ಪ್ರಾಧಾನ್ಯವು ವ್ಯಕ್ತವಾಗುತ್ತದೆ. ವೇದಾಂತಿ ಮತ್ತು ಯಾಜ್ಞಿಕರ ಮತವನ್ನು ಖಂಡಿಸಿ ಸ್ವಮತವನ್ನು ಪುಷ್ಟೀಕರಿಸಲು ಬ್ರಾಹ್ಮಣವಾಕ್ಯವನ್ನು ತೋರಿಸುತ್ತಾರೆ. ಜ್ಯೋತಿಃ ಸಾಮಾನ್ಯದಿಂದ ಇರುವುದು ಒಂದೇ ಜ್ಯೋತಿಯು. ಜಗದ್ಯಾತ್ರಾಸಿದ್ಧಿಗೋಸ್ಕರ ಅದೇ ಮೂರು ರೀತಿಯಾಗಿ ಪೃಥಿವೀ, ಅಂತರಿಕ್ಷ, ದ್ಯುಲೋಕಸ್ಥಾನಭೇದದಿಂದ ಅಗ್ನಿ, ವಿದ್ಯುತ್, ಆದಿತ್ಯ ಎಂಬ ಮೂರು ನಾಮಧೇಯವನ್ನು ಹೊಂದುತ್ತದೆ. ಅದುದರಿಂದ ದ್ಯುಲೋಕದಲ್ಲಿ ಯಾವ ಈ ಜ್ಯೋತಿಯು ಬೆಳಗುವುದೋ ಅದು ಆದಿತ್ಯ ಎಂದು ತಾತ್ಪರ್ಯ, ಅಗ್ನಿಯ ಮೂರನೆಯ ವಿಭಾಗವೇ ಆದಿತ್ಯನೆಂದರ್ಥ.

**ತದಗ್ನೀಕೃತ್ಯ ಸ್ತೌತಿ |**

ಪೂರ್ವೋಕ್ತ ಹವಿಷ್ಪಾಂತೀಯ ಸೂಕ್ತದಲ್ಲಿ ಆದಿತ್ಯವೆಂಬ ಮೂರನೆಯ ಜ್ಯೋತಿಯನ್ನೇ ಅಗ್ನಿರೂಪದಿಂದ ಮಂತ್ರದೃಷ್ಟೃ ಮಹರ್ಷಿಗಳು ಸ್ತುತಿಸಿರುತ್ತಾರೆ.

**ಅಥೈನಮೇತಯಾ ಪುನರಾದಿತ್ಯೀಕೃತ್ಯ ಸ್ತೌತಿ || ೨೮ ||**

ಇದೇ ಅಗ್ನಿಯನ್ನು ಮುಂದೆ ಹೇಳುವ ಮಂತ್ರಋಕ್ಕಿನಿಂದ ಆದಿತ್ಯರೂಪದಿಂದ ಸ್ತುತಿಸುತ್ತಾರೆ. ಇದರಿಂದ ಅಗ್ನಿಯೇ ಜಗದ್ವ್ಯಾಪಾರಕ್ಕೋಸ್ಕರ ಮೂರು ಜ್ಯೋತಿಯ ರೂಪದಿಂದ ಆಯಾಯಸ್ಥಾನದಲ್ಲಿ ನಾಮಭೇದವನ್ನು ಹೊಂದಿರುತ್ತಾನೆ ಎಂದು ಸಿದ್ಧವಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿಪ್ರಣೀತವಾದ ಏಳನೆಯ ಅಧ್ಯಾಯದಲ್ಲಿ

ಇಪ್ಪತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕೋನತ್ರಿಂಶಃ ಖಂಡಃ

### ಇಪ್ಪತ್ತೊಂಭತ್ತನೆಯ ಖಂಡವು

ಯದೇದೇನಮುದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇ-ಯಮ್ । ಯದಾ ಚರಿಷ್ಣೂ ಮಿಥುನಾವಭೂತಾಮಾದಿತ್ಪ್ರಾಪಶ್ಯನ್ಭುವನಾನಿ ವಿಶ್ವಾ ॥ (ಋ. ಸಂ. ೧೦-೮೮-೧೧) ॥ ಯದೈನಮುದಧುರ್ಯಜ್ಞಿಯಾಃ ಸರ್ವೇ ದಿವಿ ದೇವಾಃ ಸೂರ್ಯಮಾದಿತೇಯಮದಿತೇಃ ಪುತ್ರಂ ಯದಾ ಚರಿಷ್ಣೂ ಮಿಥುನೌ ಪ್ರಾದುರ-ಭೂತಾಂ ಸರ್ವದಾ ಸಹಚಾರಿಣಾವುಷಾಶ್ಚಾದಿತ್ಯಶ್ಚ ಮಿಥುನೌ ಕಸ್ಮಾನ್ಮಿನೋತಿಃ ಶ್ರಯತಿಕರ್ಮಾ ಥು ಇತಿ ನಾಮಕರಣಸ್ಥಕಾರೋ ವಾ ನಯತಿಃ ಪರೋ ವನಿರ್ವಾ ಸಮಾಶ್ರಿತಾವನ್ಯೋನ್ಯಂ ನಯತೋ ವನುತೋ ವಾ । ಮನುಷ್ಯಮಿಥುನಾವಪ್ಯೇತ-ಸ್ಮಾದೇವ ಮೇಥಂತಾವನ್ಯೋನ್ಯಂ ವನುತ ಇತಿ ವಾಥೈನಮೇತಯಾಗ್ನೀಕೃತ್ಯ ಸ್ತೌತಿ ॥ ೨೯ ॥

ಯದೇದೇನಮುದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿ-
ತೇಯಮ್॥ ಯದಾ ಚರಿಷ್ಣೂ ಮಿಥುನಾವಭೂತಾ ಮಾದಿತ್ಪ್ರಾ-
ಪಶ್ಯನ್ ಭುವನಾನಿ ವಿಶ್ವಾ ॥

(ಋ. ಸಂ. ೮-೪-೧೨)

ಆದಿತ್ಯರೂಪದಿಂದ ಅಗ್ನಿಯನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ.

ಯದೈನಮುದಧುರ್ಯಜ್ಞಿಯಾಃ ಸರ್ವೇ ದಿವಿ ದೇವಾಃ ಸೂರ್ಯ
ಮಾದಿತೇಯಮದಿತೇಃ ಪುತ್ರಂ, ಯದಾ ಚರಿಷ್ಣೂ ಮಿಥುನೌ
ಪ್ರಾದರಭೂತಾಂ ಸರ್ವದಾ ಸಹಚಾರಿಣಾವುಷಾಶ್ಚಾದಿತ್ಯಶ್ಚ ।
ಮಿಥುನೌ ಕಸ್ಮಾತ್? ಮಿನೋತಿಃ ಶ್ರಯತಿಕರ್ಮಾ, ಥು ಇತಿ
ನಾಮಕರಣಃ, ಥಕಾರೋ ವಾ ನಯತಿಃ ಪರೋ ವನಿರ್ವಾ,
ಸಮಾಶ್ರಿತಾವನ್ಯೋನ್ಯಂ ನಯತೋ, ವನುತೋವಾ, ಮನುಷ್ಯ-
ಮಿಥುನಾವಪ್ಯೇತಸ್ಮಾದೇವ ಮೇಥಂತಾವನ್ಯೋನ್ಯಂ ವನುತ
ಇತಿ ವಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಜ್ಞಸಂಪಾದಕರಾದ ದೇವತೆಗಳೆಲ್ಲರೂ ಸೇರಿ ದ್ಯುಲೋಕದಲ್ಲಿ ಈ ಅಗ್ನಿಯನ್ನು ಅದಿತಿಯ ಮಗನಾದ ಸೂರ್ಯನನ್ನಾಗಿ ಮಾಡಿದರು. ಯಾವಾಗ ಈ ಅಗ್ನಿಸೂರ್ಯರು ಯಾವಾಗಲೂ ಒಟ್ಟಿಗೆ ತಿರುಗುತ್ತಾ ಮಿಥುನರಾದರೋ ಆಗ ಸಕಲ ಭೂತಜಾತಗಳನ್ನೂ ಚನ್ನಾಗಿ ನೋಡಿದರು. ಮಿಥುನಶಬ್ದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಮಿಥುನ ಎಂಬಲ್ಲಿ ಮಿ ಎಂಬುದು ಪೂರ್ವಪದ. ಆಶ್ರಯಿಸುವುದು ಎಂಬರ್ಥವನ್ನುಕೊಡುತ್ತದೆ. ಥು ಎಂಬುದ ನಾಮುಕರಣಾರ್ಥಕ ಪ್ರತ್ಯಯ ಅಥವಾ ಥಕಾರರೂಪಪ್ರತ್ಯಯ. ಉತ್ತರದಲ್ಲಿ ನೀಧಾತು ಅಥವಾ ವನಧಾತು. ವಿ+ನ+ಥು ಎಂದಾಗಬೇಕಿತ್ತು. ಆದರೆ ರೂಢ್ಯಾಶ್ರಯದಿಂದ ಮಧ್ಯ ಮತ್ತು ಅಂತ್ಯಗಳಿಗೆ ವ್ಯತ್ಯಾಸ ಹೇಳಿ ಮಿಥುನ ಎಂದಾಗಿದೆ. ಥ ಎಂಬುದು ನಾಮಕರಣಾರ್ಥದಲ್ಲಿ ಸ್ವೀಕರಿಸಿದರೆ ವನಿಧಾತು ಉತ್ತರಪದವೆಂದು ತಿಳಿಯಬೇಕು. ವಕಾರಕ್ಕೆ ಸಂಪ್ರಸಾರಣದಿಂದ ಉಪಾರ. ವಿಪರ್ಯಯದಿಂದ ಮಿಥುನ ಎಂದು ಆಗುತ್ತದೆ. ಥಕಾರದಮೇಲಿನ ಆಕಾರಕ್ಕೆ ಲೋಪ ಹೇಳಬೇಕು. ಅಥವಾ ಮನುಷ್ಯಮಿಥುನದಂತೆ ಪರಸ್ಪರವಾಗಿ ಕಾಮಿಸುವವರು ಎಂದರ್ಥ. ಆಗ ವನಧಾತು ಇಚ್ಛಾಕರ್ಮವಾಗುತ್ತದೆ. ಮಿಥೃ–ಮೇಧಾಹಿಂಸನಯೋಃ ಧಾತು. ಮೇಧಾ–ಸಂಗಮ. ಸಂಗತವಾಗಿ ಪರಸ್ಪರ ಕಾಮಿಸುವವರೆಂದರ್ಥ. ಅಥವಾ ಸಂಗತರಾದಂತೆ ಪರಸ್ಪರ ಕಾಲವವನ್ನು ಕಳೆಯುವರೆಂದರ್ಥ. ಹೀಗೆ ಆದಿತ್ಯರೂಪದಿಂದ ಸ್ತುತಿಸಿರುತ್ತಾರೆ

## ಅಥೈನ ಮೇತಯಾಗ್ನೀಕೃತ್ಯ ಸ್ತೌತಿ ॥ ೨೯ ॥

ಇದೇ ಹವಿಷ್ಪಾಂತೀಯ ಸೂಕ್ತದಲ್ಲಿ ಪೂರ್ವೋಕ್ತನಾದ ಆದಿತ್ಯನನ್ನು ಮುಂದೆ ಹೇಳುವ ಋಕ್ಕಿನಿಂದ ಅಗ್ನಿರೂಪದಿಂದ ಸ್ತುತಿಸುತ್ತಾರೆ. ಹೋತೃತ್ವವೆಂಬುದು ಅಗ್ನಿಯ ಕರ್ಮ. ಆದುದರಿಂದ ಹವಿಷ್ಪಾಂತೀಯ ಸೂಕ್ತವು ಅಗ್ನಿವೈಶ್ವಾನರೀಯ ಸೂಕ್ತವಾಗುವುದಲ್ಲದೆ ಎಂದೂ ಸೌರ್ಯವೈಶ್ವಾನರವಾಗುವುದಿಲ್ಲ.

ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯ-
ಮಾದಿತೇಯಂ। ಯದಾ ಚರಿಷ್ಣೂ ಮಿಥುನಾವಭೂತಾಮಾದಿತ್ಪ್ರಾ
ಪಶ್ಯನ್ಭುವನಾನಿ ವಿಶ್ವಾ ॥

(ಋ. ಸಂ. ೧೦–೮೮–೧೧)

ಇದರ ಅರ್ಥವು—

ಅದಿತಿಪುತ್ರನಾದ ಸೂರ್ಯನನ್ನೂ ಅಗ್ನಿಯನ್ನೂ ಯಜ್ಞಾರ್ಹರಾದ ದೇವತೆಗಳು ಯಾವಾಗ ದ್ಯುಲೋಕದಲ್ಲಿ ಸ್ಥಾಪಿಸಿದರೋ ಯಾವಾಗ ಸಂಚಾರಶೀಲ ಈ ಸೂರ್ಯಾಗ್ನಿಗಳು ಒಂದಾಗಿ ಸೇರಿದರೋ ಆ ಒಡನೆಯೇ ಸಕಲಲೋಹಗಳೂ ಅವರಿಬ್ಬರನ್ನೂ ನೋಡಿದವು.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ

ಇಪ್ಪತ್ತೊಂಭತ್ತನೆಯ ಖಂಡವು ಸಮಾಪ್ತವಾಗಿದೆ.

———

## ಅಥ ತ್ರಿಂಶಃ ಖಂಡಃ

### ಮೂವತ್ತನೆಯ ಖಂಡವು

ಯತ್ರಾ ವದೇತೇ ಅವರಃ ಪರಶ್ಚ ಯಜ್ಞನ್ಯೋಃ ಕತರೋ ನೌ ವಿ ವೇದ । ಆಶೇಕುರಿತ್ಸಧಮಾದಂ ಸಖಾಯೋ ನಕ್ಷಂತ ಯಜ್ಞಂ ಕ ಇದಂ ವಿ ವೋಚತ್ ॥ (ಋ. ಸಂ. ೧೦-೮೮-೧೭) ಯತ್ರ ವಿವದೇತೇ ದೈವ್ಯಾ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ಕತರೋ ನೌ ಯಜ್ಞೇ ಭೂಯೋ ವೇದೇತ್ಯಾಶಕ್ನುವಂತಿ ತತ್ಸಹಮದನಂ ಸಮಾನಖ್ಯಾನಾ ಋತ್ವಿಜಸ್ತೇಷಾಂ ಯಜ್ಞಂ ಸಮಶ್ನುವಾನಾನಾಂ ಕೋ ನ ಇದಂ ವಿವಕ್ಷ್ಯತೀತಿ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೩೦ ॥

ಯತ್ರಾ ವದೇತೇ ಅವರಃ ಪರಶ್ಚ ಯಜ್ಞನ್ಯೋಃ ಕತರೋ ನೌ ವಿ
ವೇದ । ಆಶೇಕುರಿತ್ಸಧಮಾದಂ ಸಖಾಯೋ ನಕ್ಷಂತ ಯಜ್ಞಂ ಕ
ಇದಂ ವಿವೋಚತ್ ॥

ಅಗ್ನಿ ಮತ್ತು ಮಧ್ಯಮಸ್ಥಾನದೇವತೆಯೂ ಒಂದೇ ಎಂಬ ಅಭಿಪ್ರಾಯದಿಂದ ಎರಡನ್ನೂ ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ.

ಯತ್ರ ವಿವದೇತೇ ದೇವ್ಯಾ ಹೋತಾರೌ-ಅಯಂ ಚಾಗ್ನಿರಸೌ ಚ
ಮಧ್ಯಮಃ ಕತರೋ ನೌ ಯಜ್ಞೇ ಭೂಯೋ ವೇದೇತಿ ಆಶಕ್ನು-
ವಂತಿ ಸತ್ಸಹಮದನಂ ಸಮಾನಾಖ್ಯಾನಾ ಋತ್ವಿಜಸ್ತೇಷಾಂ
ಯಜ್ಞಂ ಸಮಶ್ನುವಾನಾನಾಂ ಕೋನ ಇದಂ ವಿವಕ್ಷ್ಯತೀತಿ ॥

ಈ ಪಾರ್ಥಿವಾಗ್ನಿಯೂ, ಮಧ್ಯಮಸ್ಥಾನದ ವಾಯುವೂ ಹೀಗೆ ಇಬ್ಬರು ದೇವಹೋತೃಗಳು ಸೇರಿ ಪರಸ್ಪರವಿವಾದವನ್ನು ಮಾಡಿದರು. ಯಜ್ಞವನ್ನು ನಡೆಸುವ ನಮ್ಮಿಬ್ಬರಲ್ಲಿ ಯಾರು ಯಜ್ಞದಲ್ಲಿ ಚನ್ನಾಗಿ ತಿಳಿದವರು? ಎಂದು. ಆಗ ಅಲ್ಲಿ ಋತ್ವಿಜರು ವಿನಿಯುಕ್ತರಾಗಿ ದೇವತೆಗಳು ಒಟ್ಟಿಗೆ ಬಂದು ಸಂತೋಷಪಡುವ ಯಜ್ಞವನ್ನು ಮಾಡಲು ಸಮರ್ಥರಾದರು. ಹೀಗೆ ಚನ್ನಾಗಿ ಅನುಷ್ಠಾನಮಾಡುವವರಲ್ಲಿ ಯಾರು ಈ ವಿವಾದೆದ ನಿರ್ಣಯಾತ್ಮಕ ವಾಕ್ಯವನ್ನು ಹೆಳಲು ಸಮರ್ಥರಾದರು. ಹೀಗೆ ಚನ್ನಾಗಿ ಅನುಷ್ಠಾನಮಾಡುವವರಲ್ಲಿ ಯಾರು ಈ ವಿವಾದದ ನಿರ್ಣಯಾತ್ಮಕ ವಾಕ್ಯವನ್ನು ಹೇಳಲು ಸಮರ್ಥರಾಗುತ್ತಾರೆ? ಇಬ್ಬರೂ ಚನ್ನಾಗಿ ತಿಳಿದವರು ಎಂದು ಅಭಿಪ್ರಾಯ. ಸಹಮದನಂ ಯಜ್ಞಕ್ಕೆ ವಿಶೇಷಣ. ಇವರ ವಿವಾದವನ್ನು ಸಂತೋಷದಿಂದ ಕೇಳಿ ಯಜ್ಞಮಾಡಲು ಸಮರ್ಥರಾದರು. ಸಮರ್ಥರಾಗಿ ಯಾರು ಇದನ್ನು

ಹೇಳಲು ಸಮರ್ಥರಾಗುತ್ತಾರೆ. ? ಎಂದು ಹೇಳಿದರು, ಹೀಗೆ ಅವರ ಉಕ್ತಿಭಂಗಿಯಿಂದ ಇಬ್ಬರೂ ಸಮಾನರೆಂದು ಸ್ತುತಿಸಲ್ಪಟ್ಟಿರುತ್ತಾರೆ.

ತಸ್ಯೋತ್ತರಾ ಭಯಸೇ ನಿರ್ವಚನಾಯ ॥ ೩೦ ॥

ಹೀಗೆ ಒಬ್ಬಿಬ್ಬರನ್ನು ಒಟ್ಟಿಗೆ ಸ್ತುತಿಸಿರುವ ಮಂತ್ರಗಳನ್ನು ಉದಾಹರಿಸಿ ಇನ್ನುಮುಂದೆ ಪ್ರತ್ಯೇಕವಾಗಿ ಅಗ್ನಿಯೊಂದನ್ನೇ ಸ್ತುತಿಸುವ ಮಂತ್ರವನ್ನು ತೋರಿಸುತ್ತಾರೆ. ಇದರಿಂದ ಪ್ರತಿಜ್ಞಾತವಾದ ಅರ್ಥವು ದೃಢವಾಗುತ್ತದೆ. ಹವಿಷ್ಪಾಂತೀಯ ಸೂಕ್ತವು ಅಗ್ನಿಪ್ರಧಾನವಾಗಿದೆ. ಏಕೆಂದರೆ “ ಅಗ್ನಿಮದ್ಯ ಹೋತಾರಮವೃಣೀತಾಯಂ ಯಜಮಾನಃ ” ಇತ್ಯಾದಿ ನಿಗಮ ವಾಕ್ಯಾನುಸಾರವಾಗಿ ಹೋತೃಕರ್ಮವೆಲ್ಲವೂ ಅಗ್ನಿಸಂಬಂಧವುಳ್ಳವುಗಳಾದುದರಿಂದ ಅಗ್ನಿಜ್ಞಾಪನದಲ್ಲಿ ಲಿಂಗವಾಗುತ್ತವೆ. ಇದರಿಂದ ಅಗ್ನಿಯೇ ಪ್ರಧಾನವಲ್ಲದೆ ಸೂರ್ಯನು ಪ್ರಧಾನವಲ್ಲವೆಂದು ಸ್ಪಷ್ಟವಾಗುತ್ತದೆ, ಆದುದರಿಂದ ಮುಂದೆ ಉದಾಹರಿಸುವ ಋಕ್-ಆಧಿಕನಿರ್ವಚನಕ್ಕೆ ಸಹಾಯಕವಾಗುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಏಳನೆಯ ಅಧ್ಯಾಯದಲ್ಲಿ
ಮೂವತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕತ್ರಿಂಶಃ ಖಂಡಃ

## ಮೂವತ್ತೊಂದನೆಯ ಖಂಡವು

ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ । ತಾವದ್ದಧಾತ್ಯುಪ ಯಜ್ಞಮಾಯನ್ ಬ್ರಾಹ್ಮಣೋ ಹೋತುರವರೋ ನಿ ಷೀದನ್ । (ಋ. ಸಂ. ೧೦-೮೮-೧೯) ॥ ಯಾವನ್ಮಾತ್ರಮುಷಸಃ ಪ್ರತ್ಯಕ್ತಂ ಭವತಿ ಪ್ರತಿದರ್ಶನಮಿತಿ ವಾಸ್ತ್ಯುಪ್ಯಮಾನಸ್ಯ ಸಂಪ್ರತ್ಯರ್ಥೇ ಪ್ರಯೋಗ ಇಹೇವ ನಿಧೇಹೀತಿ ಯಥಾ ಸುಪರ್ಣ್ಯಾಃ ಸುಪತನಾ ಏತಾ ರಾತ್ರಯೋ ವಸತೇ ಮಾತರಿಶ್ವನ್ ಜ್ಯೋತಿರ್ವರ್ಣಸ್ಯ ತಾವದುಪದ-ಧಾತಿ ಯಜ್ಞಮಾಗಚ್ಛನ್ ಬ್ರಾಹ್ಮಣೋ ಹೋತಾಸ್ಯಾಗ್ನೇರ್ಹೋತುರವರೋ ನಿಷೀದನ್ ಹೋತೃಜಪಸ್ತ್ವನಗ್ನಿರ್ವೈಶ್ವಾನರೀಯೋ ಭವತಿ ದೇವ ಸವಿತರೇತಂ ತ್ವಾ ವೃಣತೇಽಗ್ನಿಂ ಹೋತ್ರಾಯ ಸಹ ಪಿತ್ರಾವೈಶ್ವಾನರೇಣೇತೀಮಮೇವಾಗ್ನಿಂ ಸವಿತಾರಮಾಹ ಸರ್ವಸ್ಯ ಪ್ರಸವಿತಾರಂ ಮಧ್ಯಮಂ ವೋತ್ತಮಂ ವಾ ಪಿತರಂ ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರೋ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ಭಜೇತೇ ॥ ೩೧ ॥

ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ | ತಾವದ್ದಧಾತ್ಯುಪ ಯಜ್ಞಮಾಯನ್ ಬ್ರಾಹ್ಮಣೋ ಹೋತುರವರೋ ನಿಷೀದನ್ ||

ಕೇವಲ ಪಾರ್ಥಿವಾಗ್ನಿಯನ್ನೇ ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಇದರಿಂದ ಹವಿಷ್ಪಾಂತೀಯಸೂಕ್ತವು ಆಗ್ನೇಯವೆಂದು ವ್ಯಕ್ತವಾಗುತ್ತದೆ.

ಯಾವನ್ಮಾತ್ರಮುಷಸಃ ಪ್ರತ್ಯಕ್ತಂ ಭವತಿ ಪ್ರತಿದರ್ಶನಮಿತಿವಾಽ-ಸ್ತ್ಯುಪಮಾನಸ್ಯ ಸಂಪ್ರತ್ಯರ್ಥೇ ಪ್ರಯೋಗಃ| ಇಹೇವ ನಿಧೇಹೀತಿ ಯಥಾ | ಸುಪರ್ಣ್ಯಃ ಸುಪತನಾ ಏತಾ ರಾತ್ರಯೋ ವಸತೇ | ಮಾತರಿಶ್ವನ್ ಜ್ಯೋತಿರ್ವರ್ಣಸ್ಯ ತಾವದುಪದಧಾತಿ | ಯಜ್ಞ-ಮಾಗಚ್ಛನ್ | ಬ್ರಾಹ್ಮಣೋ ಹೋತಾಸ್ಯಾಗ್ನೇರ್ಹೋತುರವರೋ ನಿಷೀದನ್||

ಮಂತ್ರಾರ್ಥವನ್ನು ವಿವರಿಸುತ್ತಾರೆ- ದೈವ್ಯಹೋತೃವಾದ ಅಗ್ನಿಯ ವಿಜ್ಞಾನವನ್ನು ಬ್ರಾಹ್ಮಣ ಮನುಷ್ಯಹೋತೃವು ಯಜ್ಞಕ್ಕೆ ಬರುವವನಾಗಿ ತಿಳಿಯುತ್ತಾನೆಯೇ ? ಎಂದು ವಾಯುದೇವನು ಒಬ್ಬನನ್ನು ಕೇಳಿದಾಗ ಅವನು ಹೇಳುವ ಉತ್ತರವೆಂದು ತಿಳಿಯಬೇಕು-ಎಲೇ ಮಾಧ್ಯಮಿಕ ವಾಯುವೇ ಎಲ್ಲಿಯವರೆಗೆ ಈ ರಾತ್ರಿಗಳು ಉಷಸ್ಸನ್ನು ತಮ್ಮಲ್ಲಿ ಮುಚ್ಚಿಕೊಳ್ಳುವವೋ ಅಲ್ಲಿಯವರೆಗೆ ಬ್ರಾಹ್ಮಣಹೋತೃವು ಸ್ವಲ್ಪವಿಜ್ಞಾನನಾಗಿರುತ್ತಾನೆ. ಯಾವಾಗ ಅವನು ಹೋತೃರೂಪದಿಂದ ಆರಿಸ್ಪಟ್ಟ ಹೋತ್ರಕರ್ಮವನ್ನು ಮಾಡಲು ಕುಳಿತುಕೊಳ್ಳುವನೋ, ಯಜ್ಞಕ್ಕೆ ಬರುವನೋ ಆಗ ದೈವ್ಯಹೋತೃವಾದ ಈ ಅಗ್ನಿಯ ವಿಜ್ಞಾನವನ್ನು ಅಗ್ನಿಯ ಅನುಗ್ರಹದಿಂದಲೇ ತಿಳಿಯುತ್ತಾನೆ. ಅಲ್ಪಜ್ಞನಾದರೂ ಹೌತ್ರಕಾರ್ಯವನ್ನೆಲ್ಲಾ ಮಾಡುತ್ತಾನೆ. ಜ್ಯೋತಿರ್ವರ್ಣಸ್ಯ ಎಂಬುದು ಅಗ್ನಿಗೆ ವಿಶೇಷಣ. ಜ್ಯೋತಿ ಎಂದರೆ ಜ್ಞಾನ. ಎರಡೂ ಪ್ರಕಾಶಮಯವಾಗಿರುತ್ತವೆ. ಈ ದೈವ್ಯಹೋತೃವು ಅಂದರೆ ಅಗ್ನಿಯು ಜ್ಞಾನಪ್ರಧಾನನಾಗಿರುತ್ತಾನೆ.

ಹೋತೃ ಜಪಸ್ತ್ವನಗ್ನಿರ್ವೈಶ್ವಾನರೀಯೋ ಭವತಿ ||

ಅಗ್ನಿಪ್ರಧಾನಕರ್ಮವಾದುದರಿಂದ ಪೂರ್ವೋಕ್ತಸೂಕ್ತವು ವೈಶ್ವಾನರೀಯವಾಗಿರುತ್ತದೆ. ಅಲ್ಲಿ ಬರುವ ವೈಶ್ವಾನರ ಪದವು ಪಾರ್ಥಿವಾಗ್ನಿಯನ್ನೇ ಹೇಳುತ್ತದೆಂದು ಇದುವರೆಗೆ ಸಮರ್ಥನೆ ಮಾಡಿದ್ದಾಯಿತು. ಆದರೂ ಪ್ರಕೃತಾಗ್ನಿ ಭಿನ್ನವಿಷಯವಾಗಿ ವೈಶ್ವಾನರೀಯವಾದ ಹೋತೃಜಪವಿದೆ. ಅದು ಸೌರಾಗ್ನಿಯನ್ನೇ ಹೇಳುವುದಲ್ಲದೆ ಪಾರ್ಥಿವಾಗ್ನಿಯನ್ನು ಹೇಳುವುದಿಲ್ಲ. ಎಂದು ತುಶಬ್ದದಿಂದ ಪೂರ್ವಪಕ್ಷವನ್ನು ತೋರಿಸುತ್ತಾರೆ.

ದೇವ ಸವಿತರೇತಂ ತ್ವಾ ವೃಣತೇಽಗ್ನಿಂ ಹೋತ್ರಾಯ ಸಹ ಪಿತ್ರಾ ವೈಶ್ವಾನರೇಣ ||

ಹೋತೃಜಪದಲ್ಲಿ ಸೌರಾಗ್ನಿಯನ್ನು ವಿವರಿಸುವ ವಾಕ್ಯವನ್ನು ಉದಾಹರಿಸುತ್ತಾರೆ. ಸವಿತೃದೇವನೇ ಪಿತ್ರಾದಿವೈಶ್ವಾನರರೊಡನೆ ನಿನ್ನನ್ನು ಅಗ್ನಿಯನ್ನು ಯಾಚಿಸುತ್ತಾರೆ. ಇಲ್ಲಿ ಪಿತೃಪುತ್ರವ್ಯಪದೇಶದಿಂದ ವೈಶ್ವಾನರನಿಗಿಂತ ಅಗ್ನಿಯು ಬೇರೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**ಇಮಮೇವಾಗ್ನಿಂ ಸವಿತಾರಮಾಹ—ಸರ್ವಸ್ಯ ಪ್ರಸವಿತಾರಂ ||**

ಪೂರ್ವಪಕ್ಷಿಯ ವಾದವು ಸ್ವಪಕ್ಷವನ್ನೇ ಸಮರ್ಥಿಸುತ್ತದೆಂದು ಭಾಷ್ಯಕಾರರು ಉತ್ತರಿಸುತ್ತಾರೆ. ಈ ಪಾರ್ಥಿವಾಗ್ನಿಯನ್ನೇ ಸವಿತೃದೇವನೆಂದು ಸಂಬೋಧನ ಮಾಡಿರುವುದರಿಂದ ಅದು ಸೌರ್ಯಾಗ್ನಿಯಲ್ಲ ·ಸರ್ವವನ್ನೂ ಪ್ರಸವಿಸುವವನಿಗೆ ಸವಿತೃ ಎಂದು ಹೆಸರು· ಯಜ್ಞಮೂಲಕವಾಗಿ ಪಾರ್ಥಿವಾಗ್ನಿಯು ಸರ್ವಭೂತಜಾಲಕ್ಕೆ ಪಿತೃ ಅಂದರೆ ಪಾಲಕನಾಗಿರುತ್ತದೆ. ಅಗ್ನಿಯಲ್ಲಿ ಹೋಮಿಸಿದ ಆಹುತಿಯಿಂದ ಧೂಮವೃಷ್ಟಿ ಮಂತಾದವುಗಳು ಆಗಿ ಜಗತ್ತನ್ನು ಧರಿಸುವುದೇ ಅಗ್ನಿಯೆಂದು ಹಿಂದೆ ವಿವರಿಸಿದೆ.

**ಮಧ್ಯಮಂ ವೋತ್ತಮಂ ವಾ ಪಿತರಮ್ ||**

ಪೂರ್ವಪಕ್ಷಿಯು ಪುನಃ ವೈಶ್ವಾನರನನ್ನೇ ಹೇಳುತ್ತದೆಂದು ತಮ್ಮವಾದವನ್ನು ಸಮರ್ಥಿಸುತ್ತಾರೆ. ವೈಶ್ವಾನರನಾದ ಪಿತೃವಿನೊಡನೆ ಎಂದು ಹೋತೃಜಪದಲ್ಲಿ ಹೇಳಿರುವುದರಿಂದ ವೈಶ್ವಾನರ ಅಂದರೆ ಮಧ್ಯಮಸ್ಥಾನದ ಅಥವಾ ಉತ್ತಮಸ್ಥಾನದ ದೇವತೆಯೇ ಆಗಬೇಕು· ಆದುದರಿಂದ ಹೋತೃಜಪದಲ್ಲಿ ವೈಶ್ವಾನರನೆಂದರೆ ಅಗ್ನಿಯಾಗುವುದಿಲ್ಲವೆಂದು ಅವರ ಅಭಿಪ್ರಾಯ·

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ**
**ಸೋಽಗ್ನಿರ್ವೈಶ್ವಾನರಃ ||**

ಪೂರ್ವಪಕ್ಷಿಯ ವಾದಕ್ಕೆ ಸಮಾಧಾನ ತೋರಿಸುತ್ತಾರೆ· ಹೋತೃಜಪದಲ್ಲಿ ವೈಶ್ವಾನರ ಅಗ್ನಿಯೆಂದು ಹೇಳಿದರೂ ಇತರ ಕಾರಣಗಳಿಂದ ಅಗ್ನಿಯೇ ವೈಶ್ವಾನರನೆಂದು ನಿಶ್ಚಯಿಸಬಹುದೆಂದು ಯಾಜ್ಞಿಕರ ಮತ· ಪ್ರಕೃತ ಆಚಾರ್ಯರು ಅಲ್ಲಿ ಒಂದುಕಡೆ ಹಾಗೆ ಹೇಳಿದರೂ ಸೂಕ್ತಗಳಲ್ಲಿ ಮತ್ತು ಹವಿರ್ದಾನದಲ್ಲಿ ಅಗ್ನಿಯೇ ವೈಶ್ವಾನರನೆಂದು ದೃಢವಾಗಿ ಹೇಳುವುದರಿಂದ, ಇದನ್ನೇ "ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ" ಇತ್ಯಾದಿ ಪ್ರಮಾಣಗಳಿಂದ ಶಾಕಪೂಣಿ ಆಚಾರ್ಯರೂ ಸಮರ್ಥಿಸಿರುವುದರಿಂದ ಅದೇ ತಮ್ಮ ಮತವೆಂದು ವಿಚಾರಿಸುತ್ತಾರೆ· ತದ್ಧಿತಪ್ರತ್ಯಯದಿಂದ ಶರೀರವುಳ್ಳವನೇ ವೈಶ್ವಾನರ ಇತ್ಯಾದಿ. ಅಗ್ನಿಗೆ ವೈಶ್ವಾನರತ್ವ ಸಾಧಕಹೇತು ಆರುರೀತಿಯಾಗಿ ಹಿಂದೆ ಹೇಳಿದೆ· ಅವಿಶೇಷಹೇತುಗಳಿಂದ ಪಾರ್ಥಿವಾಗ್ನಿಯೇ ಆದ ವೈಶ್ವಾನರನು ಸೂಕ್ತದಲ್ಲಿ ಸ್ತುತಿಸಲ್ಪಡುವವನೂ, ಹವಿಸ್ಸನ್ನು ಹೊಂದುವವನೂ ಎಂದು ಸಿದ್ಧವಾಗುತ್ತದೆ.

**ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ**
**ಭಜೇತೇ ಭಜೇತೇ || ೩೧ ||**

ವೈಶ್ವಾನರ ಪದದಿಂದ ಎಲ್ಲಿಯಾದರೂ ಮಧ್ಯಮಸ್ಥಾನದ ಅಥವಾ ಉತ್ತಮಸ್ಥಾನದ ದೇವತೆಗಳನ್ನು ಹೇಳಿದ್ದರೆ ಅದು ಭಾಕ ಗೌಣವಾಗಿ ಹೇಳಿರುವುದು ಎಂದು ಈ ವಿಷಯ ಹಿಂದೆ ವಿವೃತವಾಗಿದೆ· ಭಜೇತೇ ಎಂದು ಎರಡು ಸಲ ಹೇಳಿರುವುದು ಅಧ್ಯಾಯ ಸಮಾಪ್ತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಸಾಯಣಭಾಷ್ಯದ ನಿರುಕ್ತಭಾಷ್ಯದಲ್ಲಿ ಏಳನೆಯ ಅಧ್ಯಾಯದಲ್ಲಿ
ಇಲ್ಲಿಗೆ ಮೂವತ್ತ ಒಂದನೆಯ ಖಂಡವು ಸಮಾಪ್ತವು.

ಅಥಾತೋದ್ದೈವತಮಿಂದ್ರೋದಿವಃ ಪರೋಕ್ಷಕೃತಾಸ್ತದ್ಯೇತಿಸ್ರೋಽಥಾಕಾರ-ಚಿಂತನಮುಪುರುಷವಿಧಂತತ್ತಿಸ್ರ ಏವ ತೇನತಾ ಇತ್ಯುಕ್ತಂ ಪೂಷಾತ್ವಾಥೈತಾನೀಂದ್ರ ಭಕ್ತೀನ್ಯಥೈತಾನ್ಯಾದಿತ್ಯ ಭಕ್ತೀನಿಮುಂತ್ರಾ ಮನನಾ ಜ್ಜಗತೀ ಗತತನುಮಥಾತೋಽನು-ಕ್ರಮಿಷ್ಯಾಮೋಽಗ್ನಮೀಳೇಽಗ್ನಿಃ ಪೂರ್ವೇಭಿರಭಿಪ್ರವಂತೇಂದ್ರಂ ಮಿತ್ರಂ ಜಾತವೇದಾಃ ಕಸ್ಮಾತ್ಪ್ರನೂನಂ ಜಾತವೇದಸಂ ವೈಶ್ವಾನರಃ ಕಸ್ಮಾದ್ವೈಶ್ವಾನರಸ್ಯಪ್ರನೂಮಹಿತ್ವಂ ಕೃಷ್ಣಂ ನಿಯಾನಂ ಹವಿಷ್ಪಾಂತ ಮಪಾಮುಪಸ್ಥೇ ಮೂರ್ಧಾಭುವಸ್ತೋವೇನಹಿಯು ದೇದೇನಂ ಯತ್ರಾವದೇತೇಯಾವನ್ಮಾತ್ರಮೇಕತ್ರಿಂಶತ್ ॥

ಇತಿ ನಿರುಕ್ತೇ ಉತ್ತರಷಟ್ಕೇ ಪ್ರಥಮೋಽಧ್ಯಾಯಃ

# ನಿರುಕ್ತ

## ಎಂಟನೆಯ ಅಧ್ಯಾಯ

### ಮೊದಲನೆಯ ಖಂಡವು

ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ ಯದೇನದಭಿದ್ರವಂತಿ ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ ತಸ್ಯ ದಾತಾ ದ್ರವಿಣೋದಾಸ್ತಸ್ಯೈಷಾ ಭವತಿ ॥ ೧ ॥

ದ್ರವಿಣೋದಾಃ ಕಸ್ಮಾತ್ । ಧನಂ ದ್ರವಿಣಮುಚ್ಯತೇ—ಯದೇನ-ದಭಿದ್ರವಂತಿ ॥ ಬಲಂ ವಾ ದ್ರವಿಣಂ—ಯದೇನೇನಾಭಿ-ದ್ರವಂತಿ ।

ದ್ರವಿಣೋದಾಃ ಎಂಬ ಪದದ ಅರ್ಥವನ್ನು ಪ್ರಶ್ನೋತ್ತರಗಳಿಂದ ವಿವರಿಸುತ್ತಾರೆ. ಇಲ್ಲಿ ಎರಡು ಪದಗಳಿವೆ. ದ್ರವಿಣ, ದಾ. ಎಂದಿರುವಾಗ ಮೊದಲು ಪೂರ್ವಪದದ ಅರ್ಥವನ್ನು ತೋರಿಸುತ್ತಾರೆ. ದ್ರವಿಣವೆಂದರೆ ಧನ (ಹಣ). ಲೋಕದಲ್ಲಿ ಧನವನ್ನು ಉದ್ದೇಶಿಸಿ ಜನರು ಓಡುವುದರಿಂದ ಧನಕ್ಕೆ ದ್ರವಿಣವೆಂದು ಹೆಸರು. ದ್ರು-ಗತೌ ಎಂಬ ಧಾತುವಿಗೆ ಇನನ್‌ಪ್ರತ್ಯಯ. ದ್ರು+ಇನ ಎಂದಿರುವಾಗ ಗುಣಣತ್ವಗಳು ಬಂದು ದ್ರವಿಣ ಎಂದಾಗಿದೆ. ಅಥವಾ ದ್ರವಿಣವೆಂದರೆ ಬಲ. ಏಕೆಂದರೆ ಈ ಬಲದಿಂದ ಕೂಡಿದವರು ಇತರ ದುರ್ಬಲರನ್ನು ತಿರಸ್ಕರಿಸುತ್ತಾರೆ. ಆಗ ಪೂರ್ವೋಕ್ತವಾದ ಧಾತುವಿಗೆ ಕರಣಾರ್ಥದಲ್ಲಿ ಇನನ್‌ಪ್ರತ್ಯಯ.

ತಸ್ಯ ದಾತಾ ದ್ರವಿಣೋದಾಃ ತಸ್ಯೈಷಾ ಭವತಿ ‖ ೧ ‖

ಉತ್ತರಪಾದಾರ್ಥವನ್ನು ವಿವರಿಸುತ್ತಾರೆ. ದ್ರವಿಣವನ್ನು ಅಂದರೆ ಧನವನ್ನು ಅಥವಾ ಬಲವನ್ನು ಕೊಡುವವರು. ಭೂಸ್ಥಾನ ದೇವತೆಗೆ ದ್ರವಿಣೋದಾಃ ಎಂದು ಹೆಸರು. ದಾನಾರ್ಥಕ ದಾಧಾತುವಿಗೆ ಅಸುನ್‌ಪ್ರತ್ಯಯ ಬಂದು ದಾಃ ಎಂದಾಗಿದೆ. ಮುಂದೆ ಹೇಳುವ ಋಙ್ಮಂತ್ರವು ಈ ಭೂಸ್ಥಾನದೇವತಾಸ್ತುತಿಯಿಂದ ಕೂಡಿದೆ.

ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ
ಮೊದಲನೆಯ ಖಂಡ ಸಮಾಪ್ತವಾಗಿದೆ.

---

## ಎರಡನೆಯ ಖಂಡವು.

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇಷು ದೇವಮೀಳತೇ ‖ (ಋ. ಸಂ ೧-೧೫-೭) ದ್ರವಿಣೋದಾ ಯಸ್ತ್ವಂ ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ಪಿಬತ್ವಿತಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿರೋಜಸೋ ಜಾತಮುತಮನ್ಯ ಏನಮಿತಿ ಚಾಹಾಯಮಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ । ಯೋ ಅಶ್ಮನೋರಂತರಗ್ನಿಂ ಜಜಾನೇತ್ಯಪಿ ನಿಗಮೋ ಭವತ್ಯಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತ್ಯಥಾಪ್ಯೇನಂ ಸೋಮಪಾನೇನ ಸ್ತೌತ್ಯಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋ. ದಸ ಇತ್ಯಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿರಾಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ದೇವಾ ಅಗ್ನಿಂ ಧಾರಯನ್ ದ್ರವಿಣೋದಾಮಿತ್ಯಪಿ ನಿಗಮೋ ಭವತಿ ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ಯಥೋ ಏತದಗ್ನಿಂ ದ್ರವಿಣೋದಸಮಾಹೇತ್ಯೃತ್ವಿಜೋತ್ರ ದ್ರವಿಣೋದಸ ಉಚ್ಯಂತೇ ಹವಿಷೋ ದಾತಾರಸ್ತೇ ಚೈನಂ ಜನಯಂತಿ ಋಷೀಣಾಂ

ಪುತ್ರೋ ಅಧಿಣಾಜ ಏಷ ಇತ್ಯಪಿ ನಿಗಮೋ ಭವತಿ ಯಥೋ ಏತತ್ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತೀತಿ ಭಕ್ತಿಮಾತ್ರಂ ತದ್ಭವತಿ ಯಥಾ ವಾಯವ್ಯಾನೀತಿ ಸರ್ವೇಷಾಂ ಸೋಮಪಾತ್ರಾಣಾಂ ಯಥೋ ಏತತ್ಸೋಮಪಾನೇನೈನಂ ಸ್ತೌತೀತ್ಯಸ್ಮಿನ್ನ-ಪ್ಯೇತದುಪಪದ್ಯತೇ । ಸೋಮಂ ಪಿಬ ಮಂದಸಾನೋ ಗಣಾತ್ರಿಭಿರಿತಿ ಯಥೋ ಏತದ್ದ್ರವಿಣೋದಾಃ ಪಿಬತು ದ್ರವಿಣೋದಸ ಇತ್ಯಸ್ಯೈವ ತದ್ಭವತಿ ॥ ೨ ॥

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇ-
ಷು ದೇವಮೀಳತೇ ॥

(ಋ. ಸಂ. ೧-೧-೨೮)

ಧನವನ್ನು ಬಯಸುವ ಋತ್ವಿಜರು ಸೋಮಲತೆಯನ್ನು ಕುಟ್ಟುವ ಕಲ್ಲನ್ನು ಹಿಡಿದುಕೊಂಡುಅಗ್ನಿಷ್ಟೋಮಾದಿ ಯಾಗಗಳಲ್ಲಿಯೂ ಉಕ್ಥಾದಿಗಳಲ್ಲಿಯೂ ಧನವನ್ನು ಕೊಡುವ ದೇವತೆಯನ್ನು ಸ್ತುತಿಸುತ್ತಾರೆ.

ದ್ರವಿಣೋದಾ ಯಸ್ತನ್ । ದ್ರವಿಣಸ ಇತಿ—ದ್ರವಿಣಸಾದಿನ ಇತಿ ವಾ, ದ್ರವಿಣಸಸ್ತಸ್ಮಾತ್ಪಿಬತ್ವಿತಿ ವಾ। ಯಜ್ಞೇಷು ದೇವ ಮೀಳತೇ। ಯಾಚಂತಿ—ಸ್ತುವಂತಿ—ವರ್ಧಯಂತಿ—ಪೂಜಯಂತೀತಿವಾ ॥

ಮಂತ್ರದಲ್ಲಿ ಪ್ರಥಮಾಂತವಾಗಿದ್ದರೂ ದ್ರವಿಣೋದಾಃ ಎಂಬುದನ್ನು ದ್ವಿತೀಯಾಂತವಾಗಿ ಕರ್ಮವಾಚಕವೆಂದು ತಿಳಿಯಬೇಕು. ಹಣವನ್ನು ಕೊಡುವವನು ಯಾರೋ ಅವನನ್ನು ಎಂದರ್ಥ. ದ್ರವಿಣಸ ಪದಕ್ಕೆ ಎರಡುರೀತಿಯಿಂದ ಅರ್ಥಮಾಡಬಹುದು. ವಾ ಶಬ್ದವು ಪ್ರಕಾರಭೇದವನ್ನೇ ತಿಳಿಸುತ್ತದೆ. ದ್ರವಿಣಾಯ ಸೀದಂತಿ. ಧನಕ್ಕೋಸ್ಕರ ಕಾರ್ಯದಲ್ಲಿ ಆಸಕ್ತರಾಗುವವರು. ತಾಚ್ಛೀಲ್ಯಾರ್ಥದಲ್ಲಿ ಸದ್‌ಧಾತುವಿಗೆ ಕ್ವಿಪ್‌ಪ್ರತ್ಯಯ. ಡಿತ್ತಾದುದರಿಂದ ಟಲೋಪ ಬಂದಿದೆ ಅಥವಾ ದ್ರವಿಣಸ್ಯ ಸಾನಿನಃ ಧನಕ್ಕೋಸ್ಕರ ದೇವತೆಗಳಿಗೆ ಹವಿಸ್ಸುಮುಂತಾದುವುಗಳನ್ನು ಕೊಡುವವರು. ಆಗ ಎರಡು ವಾಕ್ಯಗಳನ್ನು ಕಲ್ಪಿಸಬೇಕು. ಧನವನ್ನು ಕೊಡುವ ದೇವತೆಯು ಈ ದ್ರವಿಣಸರಿಂದ ಸೋಮವನ್ನು ಪಾನಮಾಡಲಿ. ಯಾವ ಈ ಧನದಾತೃದೇವನನ್ನು ಧನಾರ್ಥಿಗಳಾದ ಋತ್ವಿಜರು ಪಾಷಾಣಹಸ್ತರಾಗಿ ಯಜ್ಞಗಳನ್ನು ಬೇಡುತ್ತಾರೋ, ಸ್ತುತಿಸುತ್ತಾರೆ, ಸಂತೋಷಪಡಿಸುತ್ತಾರೆ, ಪೂಜಿಸುತ್ತಾರೆ ಎಂದರ್ಥ.

ತತ್ಕೋ ದ್ರವಿಣೋದಾಃ । ಇಂದ್ರ ಇತಿ ಕ್ರೌಷ್ಟುಕಿಃ । ಸ ಬಲಧನ ಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥

ದ್ರವಿಣೋದಪದದಿಂದ ತೋರುವ ದೇವತೆ ಯಾವುದೆಂದು ವಿಚಾರಿಸುತ್ತಾರೆ. ದ್ರವಿಣೋದಾಃ ಅಂದರೆ ಯಾರು ? ಇಂದ್ರನೆಂದು ಕ್ರೌಷ್ಟುಕಿ ಎಂಬ ಋಷಿಗಳು ಹೇಳುತ್ತಾರೆ. ಏಕೆಂದರೆ ಇಂದ್ರನೇ ಬಲ ಮತ್ತು ಧನವನ್ನು ಅಧಿಕವಾಗಿ ಕೊಡುವವನು. ಬಲಕಾರ್ಯವೆಲ್ಲವೂ ಇಂದ್ರಸಂಬಂಧಿಯೇ ಆಗಿರುತ್ತದೆ. ಈ ವಿಷಯದಲ್ಲಿ ಮಂತ್ರಪ್ರಮಾಣವನ್ನು ತೋರಿಸುತ್ತಾರೆ.

## ಅಥಾನ್ಯೇನಂ ಸೋಮಪಾನೇನ ಸ್ತೌತಿ ||

ಪೂರ್ವೋಕ್ತಾರ್ಥದಲ್ಲಿ ಇನ್ನೊಂದು ಹೇತುವನ್ನು ತೋರಿಸುತ್ತಾರೆ. ದ್ರವಿಣೋದಃ ಶಬ್ದದಿಂದ ಕೂಡಿದ ಋತುಯಾಜ ಮಂತ್ರದಿಂದ ಈ ಇಂದ್ರನನ್ನು ಸೋಮಪಾನದಿಂದ ಸ್ತುತಿಸುತ್ತಾರೆ.

**ಹೋತ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ||**

(ಋ. ಸಂ. ೨—೮—೧—೧)

ಇಂದ್ರನನ್ನಲ್ಲದೆ ಇತರದೇವತೆಗಳನ್ನು ಸೋಮಪಾನದಿಂದ ಸ್ತುತಿಸುವುದಿನ. ಇಂದ್ರನಿಗೋಸ್ಕರವೇ ಸೋಮವನ್ನು ಸಂಸ್ಕರಿಸುತ್ತಾರೆ. ಆದುದರಿಂದ ಎಲ್ಲೆಲ್ಲಿ ಸೋಮಪಾನಸ್ತುತಿ ಇದೆಯೋ ಅಲ್ಲಲ್ಲಿ ಇಂದ್ರನೇ ದೇವತೆಯೆಂದು ಸಿದ್ಧವಾಗುತ್ತದೆ. ಯಾರಿಗೋಸ್ಕರ ಹವಿಸ್ಸನ್ನು ಸಂಸ್ಕರಿಸುವರೋ ಅವರಿಗೇ ಅದನ್ನು ಕೊಡುವುದು ನ್ಯಾಯ.

## ಅಥಾಪ್ಯಾಹದ್ರವಿಣೋದಾಃ ಪಿಬತು ದ್ರಾವಿಣೋದಸಃ ||

(ಋ. ಸಂ. ೨-೮-೧-೪)

ಪೂರ್ವೋಕ್ತಾರ್ಥದಲ್ಲಿ ಹೇತ್ವಂತರವನ್ನು ತೋರಿಸುತ್ತಾರೆ. ಯಾವ ದ್ರವಿಣೋದಸ್ಸಿನ ಪುತ್ರನು ಅಗ್ನಿಯೋ ಆ ದ್ರವಿಣೋದಸ್ಸಾದ ಇಂದ್ರನು ಈ ಸೋಮಾಂಶವನ್ನು ಕುಡಿಯಲಿ ಎಂದು ಸ್ಪಷ್ಟವಾಗಿ ಮಂತ್ರ ಹೇಳುವುದರಿಂದ ದ್ರವಿಣೋದಾಃ ಎಂದರೇ ಇಂದ್ರನೇ ಎಂದು ಕ್ರೌಷ್ಟುಕಿಯ ಮತ. ಅದಕ್ಕೋಸ್ಕರ ಬೇಕಾದ ಹೇತುಗಳನ್ನು ಹೇಳಿದ್ದಾಯಿತು.

## ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ||

ಕ್ರೌಷ್ಟುಕಿಯರ ಮತದಂತೆ ದ್ರವಿಣೋದಾ ಅಂದರೆ ಇಂದ್ರನೇ ಎಂದು ಕೇಳಿದರೆ ಅಲ್ಲವೆಂದು ತಮ್ಮ ಅಭಿಪ್ರಾಯವನ್ನು ವಿವರಿಸುತ್ತಾರೆ. ಶಾಕಪೂಣಿ ಆಚಾರ್ಯರು ಹೀಗೆ ತಿಳಿಯುತ್ತಾರೆ. ಪೃಥಿವೀಸ್ಥಾನದಲ್ಲಿ ಹೇಳಿದ ಅಗ್ನಿಯೇ ದ್ರವಿಣೋದಾಃ ಆಗುತ್ತಾನೆ. ಇವನು ಮಧ್ಯಮಸ್ಥಾನದೇವತೆಯಾಗುವುದಾವರೆ ಆಗ ಮಾಧ್ಯಮಿಕ ಐಂದ್ರ ವಿಷಯದಲ್ಲಿ ಅಥವಾ ಇತರ ಪಾರ್ಜನ್ಯ ವಿಷಯದಲ್ಲಿ ದ್ರವಿಣೋದಸ್ಸಿನ ಪ್ರವಾದ ಬರಬೇಕಿತ್ತು ಅಥವಾ ಮಧ್ಯಮನ ಕಾರ್ಯದಿಂದ ದ್ರವಿಣೋದನನ್ನು ಸ್ತುತಿಸಬೇಕಿತ್ತು. ಇವೆರಡೂ ಇಲ್ಲವಾದುದರಿಂದೆ ಇಂದ್ರನು ದ್ರವಿಣೋದನಾಗುವುದಿಲ್ಲ.

## ಆಗ್ನೇಯೇಷ್ವೇವ ಸೂಕ್ತೇಷು ದ್ರಾವಿಣದೋದಸಾಃ ಪ್ರವಾದಾಃ ಭವಂತಿ ||

ಹಿ ಶಬ್ದವು ಹೇತ್ವರ್ಥವನ್ನು ತಿಳಿಸುತ್ತದೆ. ಆಗ್ನೇಯಸೂಕ್ತಗಳಲ್ಲಿಯೇ ದ್ರವಿಣೋದಸ್ಸಂಬಂಧಿ ಪ್ರವಾದಿಗಳಿರುವುದರಿಂದ ಅವು ಅಗ್ನಿಗೇ ವಿಶೇಷಣಗಳಾಗುತ್ತವೆ. ಅಗ್ನಿಕರ್ಮದಿಂದಲೇ ದ್ರವಿಣೋದಸನನ್ನು ಸ್ತುತಿಸುತ್ತಾರೆ. ಇಂದ್ರ ಕರ್ಮದಿಂದ ಎಲ್ಲಿಯೂ ಸ್ತುತಿಸುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಪಾರ್ಥಿವಾಗ್ನಿಯೇ ದ್ರವಿಣೋದಸನಾಗುತ್ತಾನೆ.

**" ದೇವಾ ಅಗ್ನಿಂ ಧಾರಯನ್ದ್ರವಿಣೋದಾಮ್ "**

(ಋ. ಸಂ. ೧-೭-೩-೧)

ಇತ್ಯಪಿ ನಿಗಮೋ ಭವತಿ ||

ದ್ರವಿಣೋದಪದವು ಅಗ್ನಿಯನ್ನೇ ಪ್ರತಿಪಾದಿಸುತ್ತದೆಯೆಂಬುದಕ್ಕೆ ಪ್ರಮಾಣವಾಗಿ ಋಗ್ಮಂತ್ರವನ್ನು ಉದಾಹರಿಸುತ್ತಾರೆ. ಅಪಿಪದದಿಂದ ಅನೇಕಮಂತ್ರಗಳು ಹೀಗೆಯೇ ಇರುತ್ತವೆಯೆಂದು ತಿಳಿಯಬೇಕು. ಈ ಮಂತ್ರ ಪೂರ್ಣವಾಗಿ ಹೀಗೆ ಹೇಳಿದೆ.

ಸ ಪ್ರತ್ನಥಾ ಸಹಸಾ ಜಾಯಮಾನಃ ಸದ್ಯಃ ಕಾವ್ಯಾನಿ ಬಳದತ್ತ ವಿಶ್ವಾ |
ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಮ್ ||

ಇದು ಅಗ್ನಿದೇವತಾಕವಾದ ಋಕ್ಕು. ಬಲದಿಂದ ಅರಣಿಯಲ್ಲಿ ಕಡೆದು ಹುಟ್ಟಿರುವ ಅಗ್ನಿಯು ಹುಟ್ಟಿದೊಡನೆಯೇ ಅತಿಪುರಾಣದಂತೆ ಸಕಲ ಕಾರ್ಯಗಳನ್ನೂ ಪಿತೃದೈವತ ಹವಿಸ್ಸು ಮುಂತಾದುವುಗಳನ್ನು ಸತ್ಯವಾಗಿಯೂ ಧರಿಸಿದನು. ಆಗ ಹುಟ್ಟಿದರೂ ಹಿಂದೆ ತಿಳಿದವನಂತೆ ವಿವೇಕದಿಂದ ಆಯಾಯ ಕಾರ್ಯಗಳನ್ನು ಹೊಂದಿದನು. ಯಾವ ವಿದ್ಯುತ್‌ರೂಪದಿಂದ ಮೇಘದಲ್ಲಿರುವ ಈ ಅಗ್ನಿಯನ್ನು ದಾನಾದಿಗುಣದಿಂದ ಕೂಡಿದ ಋತ್ವಿಜರು ಗಾರ್ಹಪತ್ಯಾದಿರೂಪದಿಂದ ಧರಿಸುತ್ತಾರೆ. ಅಥವಾ ಇಂದ್ರಾದಿದೇವತೆಗಳು ದೇವತೆಗಳಿಗೆ ಹವಿಸನ್ನು ಒಯ್ದುಕೊಡುವವನನ್ನಾಗಿ ಕಲ್ಪಿಸುತ್ತಾರೆ ಎಂದರ್ಥ. ಇದರಿಂದ ದ್ರವಿಣೋದ ಅಂದರೆ ಅಗ್ನಿಯೆಂದು ವ್ಯಕ್ತವಾಗುತ್ತದೆ.

ಯಥೋ ಏತತ್ ಸಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವರ್ತತೇ ||

ದ್ರವಿಣಪದಕ್ಕೆ ಧನಬಲ ಎರಡು ಅರ್ಥವಿರುವುದರಿಂದ ಅವೆರಡನ್ನು ಕೊಡುವವನು ಇಂದ್ರನಾದುದರಿಂದ ದ್ರವಿಣೋದ ಅಂದರೆ ಇಂದ್ರನೇ ಎಂದು ಪೂರ್ವಪಕ್ಷಿಯು ಮತವು ಯುಕ್ತವಲ್ಲ. ಏಕೆಂದರೆ ಸಕಲದೇವತೆಗಳಲ್ಲಿಯೂ ಮಹಾಭಾಗ್ಯ, ಮಹದೈಶ್ವರ್ಯವಿರುವುದರಿಂದ ಧನಬಲಗಳನ್ನು ಕೊಡುವ ಸಾಮರ್ಥ್ಯ ಇದ್ದೇ ಇರುತ್ತದೆ. ಆದುದರಿಂದ ಅದು ವಿಶೇಷ ಹೇತುವಾಗಲಾರದು.

ಯಥೋ ಏತತ್ ಓಜಸೋ ಜಾತಮುತ ಮನ್ಯ ಏನಂ ಇತಿ ಚಾಹೇತಿ, ಅಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಮ್ ||

ಬಲದ ಕಾರ್ಯವೆಲ್ಲಾ ಇಂದ್ರಸಂಬಂಧಿಯಾದುದರಿಂದ ಇಂದ್ರನು ಬಲದಿಂದಲೇ ಹುಟ್ಟಿರುವನೆಂದು ನಾನು ತಿಳಿಯುತ್ತೇನೆ ಎಂದು ಮಂತ್ರದೃಕ್ ಹೇಳಿರುವುದರಿಂದ ದ್ರವಿಣೋದ ಅಂದರೆ ಇಂದ್ರನು ಎಂದು ಎರಡನೆಯ ಹೇತುವಿನಿಂದ ಪೂರ್ವಪಕ್ಷಿಯು ಸಾಧಿಸಿರುವುದನ್ನು ನಿರಾಕರಿಸುತ್ತಾರೆ. ಇದೊಂದು ವಿಶೇಷಹೇತುವಾಗಲಾರದು. ಏಕೆಂದರೆ ಈ ಅಗ್ನಿಯೂ ಕೂಡಾ ಬಲಪೂರ್ವಕವಾಗಿ ಅರಣಿಯಲ್ಲಿ ಕಡೆಯಲ್ಪಡುವುದರಿಂದ ಉತ್ಪನ್ನನಾಗುತ್ತಾನೆ. ಆದುದರಿಂದಲೇ ಇವನನ್ನು ಸಹಸಸ್ಪುತ್ರ, ಸಹಸಃ ಸೂನು, ಸಹಸೋಯಹು ಎಂದು ಅಲ್ಲಲ್ಲಿ ಮಂತ್ರಗಳಲ್ಲಿ ನಿರ್ದೇಶಿಸಿದೆ. ಸಹಃ ಅಂದರೆ ಬಲ. ಯಹು ಅಪತ್ಯನಾಮದಲ್ಲಿ ಹೇಳಿದೆ. (ನಿಘ. ೨–೨–೧೧) ಇವುಗಳಿಗೆ ಕ್ರಮವಾಗಿ ಉದಾಹರಣೆ.

ಅಥಾತೋದೈವತಮಿಂದ್ರೋದಿವಃ ಪರೋಕ್ಷಕೃತಾಸ್ತದ್ಯೇತಿಸ್ರೋಽಥಾಕಾರ-ಚಿಂತನಮಪುರುಷವಿಧಂತತ್ತಿಸ್ರ ಏವ ತೇವತಾ ಇತ್ಯುಕ್ತಂ ಪೂಷಾತ್ವಾಥೈತಾನೀಂದ್ರ ಭಕ್ತೀನ್ಯಥೈತಾನ್ಯಾದಿತ್ಯ ಭಕ್ತೀನಿಮಂತ್ರಾ ಮನನಾ ಜ್ಜಗತೀ ಗತತಮಮಥಾತೋಽನು-ಕ್ರಮಿಷ್ಯಾಮೋಽಗ್ನಮೀಳೇಽಗ್ನಿಃ ಪೂರ್ವೇಭಿರಭಿಪ್ರವಂತೇಂದ್ರಂ ಮಿತ್ರಂ ಜಾತವೇದಾಃ ಕಸ್ಮಾತ್ಪ್ರನೂನಂ ಜಾತವೇದಸಂ ವೈಶ್ವಾನರಃ ಕಸ್ಮಾದ್ವೈಶ್ವಾನರಸ್ಯಪ್ರನೂಮಹಿತ್ವಂ ಕೃಷ್ಣಂ ನಿಯಾನಂ ಹವಿಷ್ಪಾಂತ ಮಪಾಮುಪಸ್ಥೇ ಮೂರ್ಧಾಭುವಸ್ತೋಮೋನಹಿಯು ದೇದೇನಂ ಯತ್ರಾವದೇತೇಯಾವನ್ಮಾತ್ರಮೋಕತ್ರಿಂಶತ್ ||

ಇತಿ ನಿರುಕ್ತೇ ಉತ್ತರಷಟ್ಕೇ ಪ್ರಥಮೋಽಧ್ಯಾಯಃ

# ನಿರುಕ್ತ

## ಎಂಟನೆಯ ಅಧ್ಯಾಯ

### ಮೊದಲನೆಯ ಖಂಡವು

ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ ಯದೇನದಭಿದ್ರವಂತಿ ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ ತಸ್ಯ ದಾತಾ ದ್ರವಿಣೋದಾಸ್ತಸ್ಯೈಷಾ ಭವತಿ || ೧ ||

ದ್ರವಿಣೋದಾಃ ಕಸ್ಮಾತ್ । ಧನಂ ದ್ರವಿಣಮುಚ್ಯತೇ—ಯದೇನ-ದಭಿದ್ರವಂತಿ || ಬಲಂ ವಾ ದ್ರವಿಣಂ—ಯದೇನೇನಾಭಿ-ದ್ರವಂತಿ ।

ದ್ರವಿಣೋದಾಃ ಎಂಬ ಪದದ ಅರ್ಥವನ್ನು ಪ್ರಶ್ನೋತ್ತರಗಳಿಂದ ವಿವರಿಸುತ್ತಾರೆ. ಇಲ್ಲಿ ಎರಡು ಪದಗಳಿವೆ. ದ್ರವಿಣ, ದಾ. ಎಂದಿರುವಾಗ ಮೊದಲು ಪೂರ್ವಪದದ ಅರ್ಥವನ್ನು ತೋರಿಸುತ್ತಾರೆ. ದ್ರವಿಣವೆಂದರೆ ಧನ (ಹಣ). ಲೋಕದಲ್ಲಿ ಧನವನ್ನು ಉದ್ದೇಶಿಸಿ ಜನರು ಓಡುವುದರಿಂದ ಧನಕ್ಕೆ ದ್ರವಿಣವೆಂದು ಹೆಸರು. ದ್ರು-ಗತೌ ಎಂಬ ಧಾತುವಿಗೆ ಇನನ್‌ಪ್ರತ್ಯಯ. ದ್ರು+ಇನ ಎಂದಿರುವಾಗ ಗುಣಣತ್ವಗಳು ಬಂದು ದ್ರವಿಣ ಎಂದಾಗಿದೆ. ಅಥವಾ ದ್ರವಿಣವೆಂದರೆ ಬಲ. ಏಕೆಂದರೆ ಈ ಬಲದಿಂದ ಕೂಡಿದವರು ಇತರ ದುರ್ಬಲರನ್ನು ತಿರಸ್ಕರಿಸುತ್ತಾರೆ. ಆಗ ಪೂರ್ವೋಕ್ತವಾದ ಧಾತುವಿಗೆ ಕರಣಾರ್ಥದಲ್ಲಿ ಇನನ್‌ಪ್ರತ್ಯಯ.

**ತಸ್ಯ ದಾತಾ ದ್ರವಿಣೋದಾಃ ತಸ್ಯೈಷಾ ಭವತಿ ॥ ೧ ॥**

ಉತ್ತರಪಾದಾರ್ಥವನ್ನು ವಿವರಿಸುತ್ತಾರೆ. ದ್ರವಿಣವನ್ನು ಅಂದರೆ ಧನವನ್ನು ಅಥವಾ ಬಲವನ್ನು ಕೊಡುವವರು. ಭೂಸ್ಥಾನ ದೇವತೆಗೆ ದ್ರವಿಣೋದಾಃ ಎಂದು ಹೆಸರು. ದಾನಾರ್ಥಕ ದಾಧಾತುವಿಗೆ ಅಸುನ್‌ಪ್ರತ್ಯಯ ಬಂದು ದಾಃ ಎಂದಾಗಿದೆ. ಮುಂದೆ ಹೇಳುವ ಋಙ್ಮಂತ್ರವು ಈ ಭೂಸ್ಥಾನದೇವತಾಸ್ತುತಿಯಿಂದ ಕೂಡಿದೆ.

ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ

ಮೊದಲನೆಯ ಖಂಡ ಸಮಾಪ್ತವಾಗಿದೆ.

---

## ಎರಡನೆಯ ಖಂಡವು.

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇಷು ದೇವಮೀಳತೇ ॥ (ಋ. ಸಂ ೧-೧೫-೭) ದ್ರವಿಣೋದಾ ಯಸ್ತ್ವಂ ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ಪಿಬತ್ವಿತಿ ವಾ। ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿರೋಜಸೋ ಜಾತಮುತಮನ್ಯ ಏನಮಿತಿ ಚಾಹಾಯಮಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ । ಯೋ ಅಶ್ಮನೋರಂತರಗ್ನಿಂ ಜಜಾನೇತ್ಯಪಿ ನಿಗಮೋ ಭವತ್ಯಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತ್ಯಥಾಪ್ಯೇನಂ ಸೋಮಪಾನೇನ ಸ್ತೌತ್ಯಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋ. ದಸ ಇತ್ಯಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿರಾಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ದೇವಾ ಅಗ್ನಿಂ ಧಾರಯನ್ ದ್ರವಿಣೋದಾಮಿತ್ಯಪಿ ನಿಗಮೋ ಭವತಿ ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ಯಥೋ ಏತದಗ್ನಿಂ ದ್ರವಿಣೋದಸಮಾಹೇತ್ಯೃತ್ವಿಜೋತ್ರ ದ್ರವಿಣೋದಸ ಉಚ್ಯಂತೇ ಹವಿಷೋ ದಾತಾರಸ್ತೇ ಚೈನಂ ಜನಯಂತಿ ಋಷೀಣಾಂ

ಪುತ್ರೋ ಅಧಿಣಾಜ ಏಷ ಇತ್ಯಪಿ ನಿಗಮೋ ಭವತಿ ಯಥೋ ಏತತ್ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತೀತಿ ಭಕ್ತಿಮಾತ್ರಂ ತದ್ಭವತಿ ಯಥಾ ವಾಯವ್ಯಾನೀತಿ ಸರ್ವೇಷಾಂ ಸೋಮಪಾತ್ರಾಣಾಂ ಯಥೋ ಏತತ್ಸೋಮಪಾನೇನೈನಂ ಸ್ತೌತೀತ್ಯಸ್ಮಿನ್ನ-ಪ್ಯೇತದುಪಪದ್ಯತೇ । ಸೋಮಂ ಪಿಬ ಮಂದಸಾನೋ ಗಣಾತ್ರಿಭಿರಿತಿ ಯಥೋ ಏತದ್ರವಿಣೋದಾಃ ಪಿಬತು ದ್ರವಿಣೋದಸ ಇತ್ಯಸ್ಯೈವ ತದ್ಭವತಿ ॥ ೨ ॥

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇ-
ಷು ದೇವಮೀಳತೇ ॥

(ಋ. ಸಂ. ೧-೧-೨೮)

ಧನವನ್ನು ಬಯಸುವ ಋತ್ವಿಜರು ಸೋಮಲತೆಯನ್ನು ಕುಟ್ಟುವ ಕಲ್ಲನ್ನು ಹಿಡಿದುಕೊಂಡುಅಗ್ನಿಷ್ಟೋಮಾದಿ ಯಾಗಗಳಲ್ಲಿಯೂ ಉಕ್ಥಾದಿಗಳಲ್ಲಿಯೂ ಧನವನ್ನು ಕೊಡುವ ದೇವತೆಯನ್ನು ಸ್ತುತಿಸುತ್ತಾರೆ.

ದ್ರವಿಣೋದಾ ಯಸ್ತವ್ । ದ್ರವಿಣಸ ಇತಿ—ದ್ರವಿಣಸಾದಿನ ಇತಿ
ವಾ, ದ್ರವಿಣಸಸ್ತಸ್ಮಾತ್ಪಿಬತ್ವಿತಿ ವಾ। ಯಜ್ಞೇಷು ದೇವ ಮೀಳತೇ।
ಯಾಚಂತಿ—ಸ್ತುವಂತಿ—ವರ್ಧಯಂತಿ—ಪೂಜಯಂತೀತಿವಾ ॥

ಮಂತ್ರದಲ್ಲಿ ಪ್ರಥಮಾಂತವಾಗಿದ್ದರೂ ದ್ರವಿಣೋದಾಃ ಎಂಬುದನ್ನು ದ್ವಿತೀಯಾಂತವಾಗಿ ಕರ್ಮವಾಚಕವೆಂದು ತಿಳಿಯಬೇಕು. ಹಣವನ್ನು ಕೊಡುವವನು ಯಾರೋ ಅವನನ್ನು ಎಂದರ್ಥ. ದ್ರವಿಣಸ ಪದಕ್ಕೆ ಎರಡುರೀತಿಯಿಂದ ಅರ್ಥಮಾಡಬಹುದು. ವಾ ಶಬ್ದವು ಪ್ರಕಾರಭೇದವನ್ನೇ ತಿಳಿಸುತ್ತದೆ. ದ್ರವಿಣಾಯ ಸೀದಂತಿ. ಧನಕ್ಕೋಸ್ಕರ ಕಾರ್ಯದಲ್ಲಿ ಆಸಕ್ತರಾಗುವವರು. ತಾಚ್ಛೀಲ್ಯಾರ್ಥದಲ್ಲಿ ಸದ್‌ಧಾತುವಿಗೆ ಕ್ವಿಪ್‌ಪ್ರತ್ಯಯ. ಡಿತ್ತ್ವಾದುದರಿಂದ ಟಿಲೋಪ ಬಂದಿದೆ ಅಥವಾ ದ್ರವಿಣಸ್ಯ ಸಾನಿನಃ ಧನಕ್ಕೋಸ್ಕರ ದೇವತೆಗಳಿಗೆ ಹವಿಸ್ಸುಮುಂತಾದುವುಗಳನ್ನು ಕೊಡುವವರು. ಆಗ ಎರಡು ವಾಕ್ಯಗಳನ್ನು ಕಲ್ಪಿಸಬೇಕು. ಧನವನ್ನು ಕೊಡುವ ದೇವತೆಯು ಈ ದ್ರವಿಣಸರಿಂದ ಸೋಮವನ್ನು ಪಾನಮಾಡಲಿ. ಯಾವ ಈ ಧನದಾತೃದೇವನನ್ನು ಧನಾರ್ಥಿಗಳಾದ ಋತ್ವಿಜರು ಪಾಷಾಣಹಸ್ತರಾಗಿ ಯಜ್ಞಗಳನ್ನು ಬೇಡುತ್ತಾರೋ, ಸ್ತುತಿಸುತ್ತಾರೆ, ಸಂತೋಷಪಡಿಸುತ್ತಾರೆ, ಪೂಜಿಸುತ್ತಾರೆ ಎಂದರ್ಥ.

ತತ್ಕೋ ದ್ರವಿಣೋದಾಃ । ಇಂದ್ರ ಇತಿ ಕ್ರೌಷ್ಟುಕಿಃ । ಸ ಬಲಧನ
ಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥

ದ್ರವಿಣೋದಪದದಿಂದ ತೋರುವ ದೇವತೆ ಯಾವುದೆಂದು ವಿಚಾರಿಸುತ್ತಾರೆ. ದ್ರವಿಣೋದಾಃ ಅಂದರೆ ಯಾರು ? ಇಂದ್ರನೆಂದು ಕ್ರೌಷ್ಟುಕಿ ಎಂಬ ಋಷಿಗಳು ಹೇಳುತ್ತಾರೆ. ಏಕೆಂದರೆ ಇಂದ್ರನೇ ಬಲ ಮತ್ತು ಧನವನ್ನು ಅಧಿಕವಾಗಿ ಕೊಡುವವನು. ಬಲಕಾರ್ಯವೆಲ್ಲವೂ ಇಂದ್ರಸಂಬಂಧಿಯೇ ಆಗಿರುತ್ತದೆ. ಈ ವಿಷಯದಲ್ಲಿ ಮಂತ್ರಪ್ರಮಾಣವನ್ನು ತೋರಿಸುತ್ತಾರೆ.

**ಓಜಸೋ ಜಾತಮುತಮನ್ಯ ಏನಮಿತಿ ಚಾಹ ॥**

(ಋ. ಸಂ. ೮–೩–೪–೫)

ನಾನು ಈ ಇಂದ್ರನನ್ನು ಅತಿಮಹತ್ತಾದ ಬಲದಿಂದಲೇ ಹುಟ್ಟಿರುವನೆಂದು ತಿಳಿಯುತ್ತೇನೆ ಎಂದು ಮಂತ್ರದೃಷ್ಟೃವಾದ ಗೌರವೀತಿಋಷಿಯು ಹೇಳುತ್ತಾನೆ.

**ಅಥಾಪ್ಯಗ್ನಿಂ ದ್ರಾವಿಣೋದಸಮಾಹ ।**

ಅಗ್ನಿಯನ್ನು ದ್ರಾವಿಣೋದಸನೆಂದು ಕರೆಯುವುದರಿಂದ ಇಂದ್ರನು ದ್ರವಿಣೋದನೆಂಬುದರಲ್ಲಿ ಇನ್ನೊಂದು ಕಾರಣವಿದ್ದಂತಾಗುತ್ತದೆ. ಇದಕ್ಕೆ–ದ್ರವಿಣೋದಾಃ ಪಿಬತು ದ್ರಾವಿಣೋದಸಃ (ಋ. ಸಂ. ೨–೮–೧) ಎಂಬ ಮಂತ್ರವೇ ಪ್ರಮಾಣ.

**ಏಷ ಪುನರೇತಸ್ಮಾಜ್ಜಾಯತೇ ।**

ಈ ಅಗ್ನಿಯು ಇಂದ್ರನಿಂದ ಹುಟ್ಟುತ್ತಾನೆ. ದ್ರಾವಿಣೋದಸನು ಇವನ ಮಗನಾದುದರಿಂದ ದ್ರವಿಣೋದಾಃ ಎಂದರೆ ಇಂದ್ರನೆಂದು ಸಿದ್ಧವಾಗುತ್ತದೆ.

**ಯೋ ಅಶ್ಮನೋರಂತರಗ್ನಿಂ ಜಜಾನ ॥ (ಋ. ಸಂ. ೨-೬-೭-೩)**
**ಇತ್ಯಪಿ ನಿಗಮೋ ಭವತಿ ॥**

ಯಾವನು ದ್ಯಾವಾಪೃಥಿವಿಗಳ ಮಧ್ಯದಲ್ಲಿ ಅಗ್ನಿಯನ್ನು ಹುಟ್ಟಿಸುತ್ತಾನೋ ಅವನು ಇಂದ್ರನು ಎಂದರ್ಥ. ಈ ವೇದವೂ ಪೂರ್ವೋಕ್ತವಿಷಯದಲ್ಲಿ ಪ್ರಮಾಣವಾಗುತ್ತದೆ.

**ಅಥಾಪ್ಯೃತುಯಾಜೇಷು ದ್ರಾವಿಣೋದಸಾಃ ಪ್ರವಾದಾ ಭವಂತಿ ।**
**ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತಿ ॥**

ದ್ರವಿಣೋದಾಃ ಅಂದರೆ ಇಂದ್ರ ಎಂಬುದರಲ್ಲಿ ಇನ್ನೊಂದು ಹೇತುವಿದೆಯೆಂದು ವಿವರಿಸುತ್ತಾರೆ. ಋತುಗಳು ಯಾವ ಮಂತ್ರಗಳಿಂದ ಪೂಜಿಸಲ್ಪಡುತ್ತವೆಯೋ ಆ ಮಂತ್ರಗಳಿಗೆ ಋತುಯಾಜ ಎಂದು ಹೆಸರು. ಈ ಋತುಯಾಜ ಮಂತ್ರಗಳಲ್ಲಿ ದ್ರವಿಣೋದಃ ಶಬ್ದಪ್ರಯುಕ್ತವಾದ ಪ್ರವಾದಗಳಿರುತ್ತವೆ. ಋತುಯಾಜಗಳ ಯಾವ ಪಾತ್ರವಿದೆಯೋ ಅಂದರೆ ಯಾವುದರಿಂದ ಅವು ಕರೆಯಲ್ಪಡುತ್ತವೆಯೋ ಅದಕ್ಕೆ ಇಂದ್ರಪಾನವೆಂದು ಹೆಸರಿದೆ. ಇಂದ್ರನು ಕುಡಿಯಲು ಅನುಕೂಲವಾದ ಪಾತ್ರಕ್ಕೆ ಇಂದ್ರಪಾನವೆಂದು ಹೆಸರು. ಇದಕ್ಕೆ ಉದಾಹರಣೆ.

**ಅಪಾದ್ಧೋತ್ರಾದುತ ಪೋತ್ರಾದಮತ್ತೋತ ನೇಷ್ಟ್ರಾದಜುಷಾತ ಪ್ರಯೋ ಹಿತಂ ।**
**ತುರೀಯಂ ಪಾತ್ರಮಮೃಕ್ತಮಮರ್ತ್ಯಂ ದ್ರವಿಣೋದಾಃ ಪಿಬತು ದ್ರಾವಿಣೋದಸಃ ॥**

(ಋ. ಸಂ. ೨–೮–೧-೪)

## ಅಥಾನ್ಯೇನಂ ಸೋಮಪಾನೇನ ಸ್ತೌತಿ ||

ಪೂರ್ವೋಕ್ತಾರ್ಥದಲ್ಲಿ ಇನ್ನೊಂದು ಹೇತುವನ್ನು ತೋರಿಸುತ್ತಾರೆ. ದ್ರವಿಣೋದಃ ಶಬ್ದದಿಂದ ಕೂಡಿದ ಋತುಯಾಜ ಮಂತ್ರದಿಂದ ಈ ಇಂದ್ರನನ್ನು ಸೋಮಪಾನದಿಂದ ಸ್ತುತಿಸುತ್ತಾರೆ.

**ಹೋತ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ||**

(ಋ. ಸಂ. ೨—೮—೧—೧)

ಇಂದ್ರನನ್ನಲ್ಲದೆ ಇತರದೇವತೆಗಳನ್ನು ಸೋಮಪಾನದಿಂದ ಸ್ತುತಿಸುವುದಿನ. ಇಂದ್ರನಿಗೋಸ್ಕರವೇ ಸೋಮವನ್ನು ಸಂಸ್ಕರಿಸುತ್ತಾರೆ. ಆದುದರಿಂದ ಎಲ್ಲೆಲ್ಲಿ ಸೋಮಪಾನಸ್ತುತಿ ಇದೆಯೋ ಅಲ್ಲಲ್ಲಿ ಇಂದ್ರನೇ ದೇವತೆಯೆಂದು ಸಿದ್ಧವಾಗುತ್ತದೆ. ಯಾರಿಗೋಸ್ಕರ ಹವಿಸ್ಸನ್ನು ಸಂಸ್ಕರಿಸುವರೋ ಅವರಿಗೇ ಅದನ್ನು ಕೊಡುವುದು ನ್ಯಾಯ.

## ಅಥಾಪ್ಯಾಹದ್ರವಿಣೋದಾಃ ಪಿಬತು ದ್ರಾವಿಣೋದಸಃ ||

(ಋ. ಸಂ. ೨–೮–೧–೪)

ಪೂರ್ವೋಕ್ತಾರ್ಥದಲ್ಲಿ ಹೇತ್ವಂತರವನ್ನು ತೋರಿಸುತ್ತಾರೆ. ಯಾವ ದ್ರವಿಣೋದಸ್ಸಿನ ಪುತ್ರನು ಅಗ್ನಿಯೋ ಆ ದ್ರವಿಣೋದಸ್ಸಾದ ಇಂದ್ರನು ಈ ಸೋಮಾಂಶವನ್ನು ಕುಡಿಯಲಿ ಎಂದು ಸ್ಪಷ್ಟವಾಗಿ ಮಂತ್ರ ಹೇಳುವುದರಿಂದ ದ್ರವಿಣೋದಾಃ ಎಂದರೇ ಇಂದ್ರನೇ ಎಂದು ಕ್ರೌಷ್ಟುಕಿಯ ಮತ. ಅದಕ್ಕೋಸ್ಕರ ಬೇಕಾದ ಹೇತುಗಳನ್ನು ಹೇಳಿದ್ದಾಯಿತು.

## ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ||

ಕ್ರೌಷ್ಟುಕಿಯರ ಮತದಂತೆ ದ್ರವಿಣೋದಾ ಅಂದರೆ ಇಂದ್ರನೇ ಎಂದು ಕೇಳಿದರೆ ಅಲ್ಲವೆಂದು ತಮ್ಮ ಅಭಿಪ್ರಾಯವನ್ನು ವಿವರಿಸುತ್ತಾರೆ. ಶಾಕಪೂಣಿ ಆಚಾರ್ಯರು ಹೀಗೆ ತಿಳಿಯುತ್ತಾರೆ. ಪೃಥಿವೀಸ್ಥಾನದಲ್ಲಿ ಹೇಳಿದ ಅಗ್ನಿಯೇ ದ್ರವಿಣೋದಾಃ ಆಗುತ್ತಾನೆ. ಇವನು ಮಧ್ಯಮಸ್ಥಾನದೇವತೆಯಾಗುವುದಾವರೆ ಆಗ ಮಾಧ್ಯಮಿಕ ಐಂದ್ರ ವಿಷಯದಲ್ಲಿ ಅಥವಾ ಇತರ ಪಾರ್ಜನ್ಯ ವಿಷಯದಲ್ಲಿ ದ್ರವಿಣೋದಸ್ಸಿನ ಪ್ರವಾದ ಬರಬೇಕಿತ್ತು ಅಥವಾ ಮಧ್ಯಮನ ಕಾರ್ಯದಿಂದ ದ್ರವಿಣೋದನನ್ನು ಸ್ತುತಿಸಬೇಕಿತ್ತು. ಇವೆರಡೂ ಇಲ್ಲವಾದುದರಿಂದೆ ಇಂದ್ರನು ದ್ರವಿಣೋದನಾಗುವುದಿಲ್ಲ.

## ಆಗ್ನೇಯೇಷ್ವೇವ ಸೂಕ್ತೇಷು ದ್ರಾವಿಣದೋದಸಾಃ ಪ್ರವಾದಾಃ ಭವಂತಿ ||

ಹಿ ಶಬ್ದವು ಹೇತ್ವರ್ಥವನ್ನು ತಿಳಿಸುತ್ತದೆ. ಆಗ್ನೇಯಸೂಕ್ತಗಳಲ್ಲಿಯೇ ದ್ರವಿಣೋದಸ್ಸಂಬಂಧಿ ಪ್ರವಾದಿಗಳಿರುವುದರಿಂದ ಅವು ಅಗ್ನಿಗೇ ವಿಶೇಷಣಗಳಾಗುತ್ತವೆ. ಅಗ್ನಿಕರ್ಮದಿಂದಲೇ ದ್ರವಿಣೋದಸನನ್ನು ಸ್ತುತಿಸುತ್ತಾರೆ. ಇಂದ್ರ ಕರ್ಮದಿಂದ ಎಲ್ಲಿಯೂ ಸ್ತುತಿಸುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಪಾರ್ಥಿವಾಗ್ನಿಯೇ ದ್ರವಿಣೋದಸನಾಗುತ್ತಾನೆ.

**" ದೇವಾ ಅಗ್ನಿಂ ಧಾರಯನ್ದ್ರವಿಣೋದಾಮ್ "**

(ಋ. ಸಂ. ೧–೭–೩–೧)

ಇತ್ಯಪಿ ನಿಗಮೋ ಭವತಿ ||

ದ್ರವಿಣೋದಪದವು ಅಗ್ನಿಯನ್ನೇ ಪ್ರತಿಪಾದಿಸುತ್ತದೆಯೆಂಬುದಕ್ಕೆ ಪ್ರಮಾಣವಾಗಿ ಋಗ್ಮಂತ್ರವನ್ನು ಉದಾಹರಿಸುತ್ತಾರೆ. ಅಪಿಪದದಿಂದ ಅನೇಕಮಂತ್ರಗಳು ಹೀಗೆಯೇ ಇರುತ್ತವೆಯೆಂದು ತಿಳಿಯಬೇಕು. ಈ ಮಂತ್ರ ಪೂರ್ಣವಾಗಿ ಹೀಗೆ ಹೇಳಿದೆ.

ಸ ಪ್ರತ್ನಥಾ ಸಹಸಾ ಜಾಯಮಾನಃ ಸದ್ಯಃ ಕಾವ್ಯಾನಿ ಬಳದತ್ತ ವಿಶ್ವಾ |
ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಮ್ ||

ಇದು ಅಗ್ನಿದೇವತಾಕವಾದ ಋಕ್ಕು. ಬಲದಿಂದ ಅರಣಿಯಲ್ಲಿ ಕಡೆದು ಹುಟ್ಟಿರುವ ಅಗ್ನಿಯು ಹುಟ್ಟಿದೊಡನೆಯೇ ಅತಿಪುರಾಣ ದಂತೆ ಸಕಲ ಕಾರ್ಯಗಳನ್ನೂ ಪಿತೃದೈವತ ಹವಿಸ್ಸು ಮುಂತಾದುವುಗಳನ್ನು ಸತ್ಯವಾಗಿಯೂ ಧರಿಸಿದನು. ಆಗ ಹುಟ್ಟಿದರೂ ಹಿಂದೆ ತಿಳಿದವನಂತೆ ವಿವೇಕದಿಂದ ಆಯಾಯ ಕಾರ್ಯಗಳನ್ನು ಹೊಂದಿದನು. ಯಾವ ವಿದ್ಯುತ್‌ರೂಪದಿಂದ ಮೇಘದಲ್ಲಿರುವ ಈ ಅಗ್ನಿಯನ್ನು ದಾನಾದಿಗುಣದಿಂದ ಕೂಡಿದ ಋತ್ವಿಜರು ಗಾರ್ಹಪತ್ಯಾದಿರೂಪದಿಂದ ಧರಿಸುತ್ತಾರೆ. ಅಥವಾ ಇಂದ್ರಾದಿದೇವತೆ ಗಳು ದೇವತೆಗಳಿಗೆ ಹವಿಸನ್ನು ಒಯ್ದುಕೊಡುವವನನ್ನಾಗಿ ಕಲ್ಪಿಸುತ್ತಾರೆ ಎಂದರ್ಥ. ಇದರಿಂದ ದ್ರವಿಣೋದ ಅಂದರೆ ಅಗ್ನಿ ಯೆಂದು ವ್ಯಕ್ತವಾಗುತ್ತದೆ.

ಯಥೋ ಏತತ್ ಸಬಲಧನಯೋರ್ದಾತೃತಮ ಇತಿ ಸರ್ವಾಸು
ದೇವತಾಸ್ವೈಶ್ವರ್ಯಂ ವರ್ತತೇ ||

ದ್ರವಿಣಪದಕ್ಕೆ ಧನಬಲ ಎರಡು ಅರ್ಥವಿರುವುದರಿಂದ ಅವೆರಡನ್ನು ಕೊಡುವವನು ಇಂದ್ರನಾದುದರಿಂದ ದ್ರವಿಣೋದ ಅಂದರೆ ಇಂದ್ರನೇ ಎಂದು ಪೂರ್ವಪಕ್ಷಿಯ ಮತವು ಯುಕ್ತವಲ್ಲ. ಏಕೆಂದರೆ ಸಕಲದೇವತೆಗಳಲ್ಲಿಯೂ ಮಹಾಭಾಗ್ಯ, ಮಹದೈಶ್ವರ್ಯ ವಿರುವುದರಿಂದ ಧನಬಲಗಳನ್ನು ಕೊಡುವ ಸಾಮರ್ಥ್ಯ ಇದ್ದೇ ಇರುತ್ತದೆ. ಆದುದರಿಂದ ಅದು ವಿಶೇಷ ಹೇತುವಾಗಲಾರದು.

ಯಥೋ ಏತತ್ ಓಜಸೋ ಜಾತಮುತ ಮನ್ಯ ಏನಂ ಇತಿ
ಚಾಹೇತಿ, ಅಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ
ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ
ಸಹಸೋ ಯಹುಮ್ ||

ಬಲದ ಕಾರ್ಯವೆಲ್ಲಾ ಇಂದ್ರಸಂಬಂಧಿಯಾದುದರಿಂದ ಇಂದ್ರನು ಬಲದಿಂದಲೇ ಹುಟ್ಟಿರುವನೆಂದು ನಾನು ತಿಳಿಯುತ್ತೇನೆ ಎಂದು ಮಂತ್ರದೃಕ್ ಹೇಳಿರುವುದರಿಂದ ದ್ರವಿಣೋದ ಅಂದರೆ ಇಂದ್ರನು ಎಂದು ಎರಡನೆಯ ಹೇತುವಿನಿಂದ ಪೂರ್ವಪಕ್ಷಿಯು ಸಾಧಿಸಿರುವುದನ್ನು ನಿರಾಕರಿಸುತ್ತಾರೆ. ಇದೊಂದು ವಿಶೇಷಹೇತುವಾಗಲಾರದು. ಏಕೆಂದರೆ ಈ ಅಗ್ನಿಯೂ ಕೂಡಾ ಬಲಪೂರ್ವಕವಾಗಿ ಅರಣಿಯಲ್ಲಿ ಕಡೆಯಲ್ಪಡುವುದರಿಂದ ಉತ್ಪನ್ನನಾಗುತ್ತಾನೆ. ಆದುದರಿಂದಲೇ ಇವನನ್ನು ಸಹಸಸ್ಪುತ್ರ, ಸಹಸಃ ಸೂನು, ಸಹಸೋಯಹು ಎಂದು ಅಲ್ಲಲ್ಲಿ ಮಂತ್ರಗಳಲ್ಲಿ ನಿರ್ದೇಶಿಸಿದೆ. ಸಹಃ ಅಂದರೆ ಬಲ. ಯಹು ಅಪತ್ಯನಾಮದಲ್ಲಿ ಹೇಳಿದೆ. (ನಿಘ. ೨-೨-೧೧) ಇವುಗಳಿಗೆ ಕ್ರಮವಾಗಿ ಉದಾಹರಣೆ.

ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।
ಸಹಸಸ್ಪುತ್ರೋ ಅದ್ಭುತಃ ॥

(ಋ. ಸಂ. ೨....೫....೨೮)

ಕಟ್ಟಿಗೆಯೇ ಅನ್ನವಾಗಿರುವ, ತುಪ್ಪದ ಸೇಚನವುಳ್ಳ, ಪುರಾತನನಾದ, ಹೋಮನಿಷ್ಪಾದಕನಾದ, ಸೇವ್ಯನಾದ, ಬಲದಪುತ್ರನಾದ ಬಲದಿಂದ ಅರಣಿಯಲ್ಲಿ ಉತ್ಪನ್ನನಾದುದರಿಂದ ಬಲದಪುತ್ರನು) ಆಶ್ಚರ್ಯಭೂತನಾಗಿರುತ್ತಾನೆ. ಅಥವಾ ಅತಿ ಸುಂದರನಾಗಿರುತ್ತಾನೆ.

ತ್ವಂ ಹ್ಯಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।
ಋತಾವಾ ಯಜ್ಞಿಯೋ ಭುವಃ ॥

(ಋ. ಸಂ. ೬--೫--೨೪)

ಎಲೈ ಅಗ್ನಿಯೇ ನೀನು ಅತಿತರುಣನಾಗಿರುವಿ. ಬಲದಪುತ್ರನೇ ಯಾವಕಾರಣದಿಂದ ನೀನು ಹೋಮಿಸಲ್ಪಟ್ಟವನಾಗಿ ಸತ್ಯವಂತನಾಗಿ ಯಜ್ಞಾರ್ಹನಾಗಿರುವಿ. ಅಥವಾ ಯಜ್ಞಸಂಪಾದಕನಾಗಿರುವಿ.

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥

(ಋ. ಸಂ. ೧—೫—೨೭)

ಎಲೈ ಅಗ್ನಿಯೇ, ಬಲಪುತ್ರನೇ, ಹುಟ್ಟಿದೊಡನೆ ಎಲ್ಲವನ್ನೂ ತಿಳಿದವನೇ ನೀನು ಗೋಯುಕ್ತವಾದ ಅನ್ನಕ್ಕೆ ಈಶ್ವರನಾಗಿರುವಿ ಆದುದರಿಂದ ನಮ್ಮಲ್ಲಿಯೂ ಮಹತ್ತಾದ ಅನ್ನವನ್ನೂ ಗವಾದಿಧನವನ್ನೂ ಸ್ಥಿರವಾಗಿರುವಂತೆಮಾಡು. ನಮ್ಮ ಅಧೀನವಾಗಿಮಾಡು. ಹೀಗೆ ಬಲಪುತ್ರನೆಂದು ಅಗ್ನಿಯನ್ನು ಸ್ತುತಿಸುವುದರಿಂದ ಬಲವನ್ನು ಕೊಡುವವನು ಅಗ್ನಿಯೂ ಆಗುತ್ತಾನೆ.

ಯಥೋ ಏತತ್-ಅಗ್ನಿಂ ದ್ರಾವಿಣೋದಸಮಾಹೇತಿ, ಋತ್ವಿ-
ಜೋಽತ್ರ ದ್ರವಿಣೋದಸ ಉಚ್ಯಂತೇ ಹವಿಷೋ ದಾತಾರಸ್ತೇ
ಚೈನಂ ಜನಯಂತಿ ॥

ದ್ರವಿಣೋದ ಅಂದರೆ ಇಂದ್ರನು. ಇವನಿಂದ ಅಗ್ನಿಯು ಉತ್ಪನ್ನನಾದುದರಿಂದ ಇವನಿಗೆ ದ್ರಾವಿಣೋದಸನೆಂದು ಹೆಸರು ಬಂದಿದೆಯೆಂದು ಪೂರ್ವಪಕ್ಷಿಯ ಮೂರನೆಯ ಹೇತುವೂ ಯುಕ್ತವಲ್ಲ. 'ಯೋ ಅಶ್ಮನೋರಂತರಗ್ನಿಂ ಜಜಾನ' ಎಂಬ ಆಗಮವಾಕ್ಯದಲ್ಲಿ ಇಂದ್ರನೆಂದು ಹೇಳಿಲ್ಲ. ಋತ್ವಿಜರಿಂದಲೇ ಅವನು ಉತ್ಪನ್ನನಾಗಿ ದ್ರವಿಣೋದಸನಾಗಿರುತ್ತಾನೆ. ವೇವತೆಗಳ ಹವಿಸ್ಸಿಗೆ ದ್ರವಿಣವೆಂದು ಹೆಸರು. ಇದನ್ನು ಕೊಡುವವರಾದುರಿಂದ ಋತ್ವಿಜರು ದ್ರವಿಣೋದರಾಗುತ್ತಾರೆ. ಇವರು ಅರಣಿ ಮುಂತಾದವುಗಳಿಂದ ಅಗ್ನಿಯನ್ನು ಹುಟ್ಟಿಸುತ್ತಾರೆ.

ಋಷೀಣಾಂ ಪುತ್ರೋ ಅಧಿರಾಜ ಏಷಃ ।
ಇತ್ಯಪಿ ನಿಗಮೋ ಭವತಿ ॥

(ಯ. ವಾ. ಸಂ. ೫-೪)

ಪೂರ್ವೋಕ್ತಾರ್ಥದಲ್ಲಿ ಪ್ರಮಾಣ ತೋರಿಸುತ್ತಾ. "ಅಗ್ನಾವಗ್ನಿಶ್ಚರತಿ ಪ್ರವಿಷ್ಟಃ ಋಷೀಣಾಂ ಪುತ್ರೋ ಅಧಿರಾಜ ಏಷಃ ತಸ್ಮೈ ವಿಧೇಮ ಹವಿಷಾ ಘೃತೇನ ಮಾ ದೇವಾನಾಂ ಯೂಯುಜಾಮ ಭಾಗಧೇಯಮ್" ಎಂದು ಪೂರ್ಣ ಮಂತ್ರಭಾಗ. ಇದು ಅಗ್ನಿಯನ್ನು ಕರೆಯುವ ಮಂತ್ರ. ಯಾವ ಈ ಅಧಿಕಪ್ರಕಾಶವುಳ್ಳ ಅಗ್ನಿಯು ಆಹವನೀಯದಲ್ಲಿ ಜ್ವಲಿಸುವನೋ ಅವನು ಋತ್ವಿಜರ ಪುತ್ರನು. ಅವರಿಂದ ಕಡೆಯಲ್ಪಟ್ಟು ಉಂಟಾದವನೆಂದು ತಾತ್ಪರ್ಯ. ಅವನನ್ನು ಆಹವನೀಯ ಆಜ್ಯರೂಪ ಹವಿಸ್ಸಿನಿಂದ ಸೇವಿಸುತ್ತೇವೆ. ದೇವತೆಗಳ ಹವಿರ್ಭಾಗವು ಲುಪ್ತವಾಗಬಾರದೆಂದು ಸೇವಿಸುತ್ತೇವೆ ಎಂದರ್ಥ. ಇದರಿಂದ ಋತ್ವಿಜರಿಂದಲೇ ಉತ್ಪನ್ನನಾದವನೆಂದು ಸ್ಪಷ್ಟವಾಗುತ್ತದೆ.

ಯಥೋ ಏತದ್-(ಋತುಯಾಜೇಷು ದ್ರಾವಿಣೋದಸಾಃ ಪ್ರವಾದಾ ಭವಂತಿ) ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ(ಸಮಾಖ್ಯಾ) ಭವತೀತಿ-ಭಕ್ತಿಮಾತ್ರಂ ತದ್ಭವತಿ-ಯಥಾ ವಾಯುವ್ಯಾನೀತಿ ಸರ್ವೇಷಾಂ ಸೋಮಪಾತ್ರಾಣಾಮ್ ॥

ಪೂರ್ವಪಕ್ಷಿಯ ನಾಲ್ಕನೆಯ ಹೇತುವನ್ನೂ ಖಂಡಿಸುತ್ತಾರೆ. ಇಂದ್ರಪಾನವೆಂಬ ಸಮಾಖ್ಯಾದಿಂದ ನಿರ್ಣಯಿಸಲು ಸಾಧ್ಯವಿಲ್ಲ. ಸಮಾಖ್ಯಾ ಅತಿ ದುರ್ಬಲವಾದ ಪ್ರಮಾಣ. ಸಾಮರ್ಥ್ಯವಿಲ್ಲದಿರುವುದರಿಂದ ಅದು ಗುಣಾನುವಾದವೆಂದು ತಿಳಿಯಬೇಕು. ನಾನಾದೇವತಾಸಂಬಧಿಯಾಗಿದ್ದರೂ ಸೋಮಪಾತ್ರಗಳಿಗೆ ವಾಯವ್ಯಾನಿ ಎಂಬ ಸಮಾಖ್ಯಾ ಇರುತ್ತದೆ. ಇದರಿಂದ ವಾಯುದೇವತೆಯೊಂದೇ ಎಂದು ನಿರ್ಣಯಿಸುವುದಿಲ್ಲ.

ಯಥೋ ಏತತ್-ಸೋಮಪಾನೇನ (ಏನಂ) ಸ್ತೌತೀತಿ ।
ಅಸ್ಮಿನ್ನಪ್ಯೇತದುಪಪದ್ಯತೇ ॥

'ಹೋತ್ರಾತ್ಸೋಮಂ ದ್ರವಿಣೋದ: ಪಿಬ ಋತುಭಿ: ಇತ್ಯಾದಿ ಮಂತ್ರಪ್ರಮಾಣದಿಂದ ಪೂರ್ವಪಕ್ಷಿಯು ದ್ರವಿಣೋದ ಎಂದರೆ ಇಂದ್ರನೇ ಎಂದು ಹೇಳಿರುವುದೂ ಸಮಂಜಸವಲ್ಲ. ಸೋಮಪಾನವು ಇಂದ್ರನೊಬ್ಬನಿಗೇ ಅಸಾಧರಣವೆಂದು ತಿಳಿಯಬಾರದು. ಅಗ್ನಿಗೂ ಸೋಮಪಾನವು ಹೇಳಿರುವುದರಿಂದ ಪೂರ್ವಪಕ್ಷಿಯ ಹೇತುವು ಸಾಧಕವಾಗಲಾರದು,

ಸೋಮಂ ಪಿಬ ಮಂದಸಾನೋ ಗಣಶ್ರಿಭಿಃ ।
ಇತ್ಯಪಿ ನಿಗಮೋ ಭವತಿ ॥

[ಋ. ಸಂ. ೪—೩—೨೫]

ಸೋಮಪಾನವು ಇಂದ್ರನೊಬ್ಬನ ಕಾರ್ಯವಾಗಿದ್ದರೆ ಅದರಿಂದ ಇಂದ್ರನೆಂದೇ ಸಾಧಿಸಬಹುದು. ಆದರೆ ಈ ಮಂತ್ರವು ಅಗ್ನಿಗೂ ಸೋಮಪಾನವನ್ನು ಹೇಳುತ್ತದೆ. ಸಂಪೂರ್ಣಮಂತ್ರ ಹೀಗಿದೆ.

ಅಗ್ನೇ ಮರುದ್ಭಿಃ ಶುಭಯತ್ಭಿರ್ಯರ್ಕ್ವಭಿಃ ಸೋಮಂ ಪಿಬ ಮಂದಸಾನೋ ಗಣಶ್ರಿಭಿಃ ।
ಪಾವಕೇಭಿರ್ವಿಶ್ವಮಿನ್ವೇಭಿರಾಯುಭಿಃ ವೈಶ್ವಾನರ ಪ್ರದಿವಾ ಕೇತನಾ ಸಜೂಃ ।'

(೪-೩-೨೫-೮)

ಎಲೈ ವೈಶ್ವಾನರ ಅಗ್ನಿಯೇ, ನಿನ್ನನ್ನು ಬೆಳಗಿಸುವ ಇತರ ಸ್ತುತ್ಯರಾದ, ಗುಂಪಾಗಿ ನಿನ್ನನ್ನು ಹೊಂದಿರುವ, ಇತರರನ್ನು ಪವಿತ್ರರನ್ನಾಗಿ ಮಾಡುವ, ಪ್ರಪಂಚವನ್ನು ವೃಷ್ಟ್ಯಾದಿಗಳಿಂದ ಸಂತೋಷಪಡಿಸುವ, ಸದಾಗಮನಶೀಲಗಳಾದ ಈ ಜ್ವಾಲೆಗಳಿಂದ ಕೂಡಿಕೊಂಡು ನೀನು ಪುರಾಣವಾದ ಧ್ವಜದಿಂದಕೂಡಿ ಸಂತೋಷಪಡುತ್ತಾ ಸೋಮವನ್ನು ಕುಡಿ ಎಂದು ನಾವು ಪ್ರಾರ್ಥಿಸುತ್ತೇವೆ. ಇಲ್ಲಿ ಮರುತ್ ಅಂದರೆ ಅರ್ಚಿಃ (ತೇಜಸ್ಸು, ಜ್ವಾಲೆ) ಎಂದೇ ಅರ್ಥ ಹೇಳಬೇಕು. ಮರುಚ್ಛಬ್ದ ಅರ್ಚಿರ್ನಾಮಗಳಲ್ಲಿ ಪಠಿತವಾಗಿದೆ. ಮಧ್ಯಮಸ್ಥಾನದೇವತೆಯೆಂದರೆ ಆಗ ಸೋಮಪಾನವು ಅಗ್ನಿಯ ಅಸಾಧಾರಣ ಕಾರ್ಯವಾಗಲಾರದು ಹೀಗೆ ಸೋಮಪಾನವು ಅಗ್ನಿಗೆ ವಿಹಿತವಾದುದರಿಂದ ಅದು ಇಂದ್ರನೆಂದು ನಿರ್ಣಯಿಸಲು ಕಾರಣವಾಗಲಾರದು.

ಯಥೋ ಏತತ್-ದ್ರವಿಣೋದಾಃ ಪಿಬತು ದ್ರಾವಿಣೋದಸಃ ।
ಇತಿ, ಅಸ್ಯೈವ ತದ್ಭವತಿ ॥ ೨ ॥

ಪೂರ್ವಪಕ್ಷಿಯ ಕೊನೆಯ ಹೇತುವನ್ನು ಖಂಡಿಸುತ್ತಾರೆ. ಇಲ್ಲಿಯೂ ಅಂದರೆ ಋತುಯಾಜಗಳಲ್ಲಿ ಅಗ್ನಿಯೂ ಸೋಮಭಾಗಿಯಾದುದರಿಂದ ಅಗ್ನಿಗೆ ಸೋಮಪಾನ ಹೇಳಿರುವುದರಿಂದ ಇದು ಇಂದ್ರನೆಂದು ನಿರ್ಣಯಿಸಲು ಕಾರಣವಾಗಲಾರದು. ಹೀಗೆ ಪೂರ್ವಪಕ್ಷಿಯ ಸಕಲಹೇತುಗಳೂ ವ್ಯಭಿಚರಿತವಾದುದರಿಂದ ದ್ರವಿಣೋದ ಅಂದರೆ ಅಗ್ನಿಯೇ ಆಗುತ್ತಾನೆಂದು ಶಾಕಪೂಣಿಯರ ಅಭಿಪ್ರಾಯ.

ಈ ಖಂಡದಲ್ಲಿರುವ ಉದಾಹರಣೆಗಳ ಋಕ್ಕು

ದ್ರವಿಣೋದಾ ದವಿಣಸೋ ಗ್ರಾವಹಸ್ತೋ ಅಧ್ವರೇ ।
ಯಜ್ಞೇಷು ದೇವಮೀಳತೇ ॥ ೭ ॥

(ಋ. ಸಂ. ೧—೧೫—೭)

ಇದರ ಅರ್ಥವು—

ಧನಾರ್ಥಿಗಳಾದ ಋತ್ವಿಕ್ಕುಗಳು ಕೈಯಲ್ಲಿ ಸೋಮರಸವನ್ನು ಹಿಂಡಲು ಸಾಧನವಾದ ಕಲ್ಲನ್ನು ಹಿಡಿದುಕೊಂಡು ಪ್ರಕೃತಿಯಾದ ಅಗ್ನಿಷ್ಟೋಮ ಯಾಗದಲ್ಲೂ ವಿಕೃತಿಗಳಾದ ಉಕ್ಥ್ಯಾದಿಯಾಗಗಳಲ್ಲೂ ಸಹ ಸೋಮರಸವನ್ನು ಪಾನಮಾಡಲು ದ್ರವಿಣೋದಾ ಎಂಬ ಅಗ್ನಿಯನ್ನು ಆಹ್ವಾನಿಸಿ ಸ್ತೋತ್ರಮಾಡುತ್ತಾರೆ.

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನಮಭಿದ್ರವಂತಿ । ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ । (ನಿ. ೮—೧).

ಇಲ್ಲಿ ದ್ರವಿಣೋದಾಃ ದ್ರವಿಣಂ ದದಾತೀತಿ ದ್ರವಿಣೋದಾಃ. ದ್ರವಿಣಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ಪ್ರಸಕ್ತವಾದ ಈ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

> ದ್ರವಿಣೋದಾ ಯಸ್ತ್ವಂ । ದ್ರವಿಣಸ ಇಶಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ ಪಿಬ ತ್ವಿಶಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥

ಎಂದರೆ ಧನ, ಹವಿಸ್ಸು ಮುಂತಾದವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನಧಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. ದ್ರವಿಣಸಃ—ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ದೇವನನ್ನು ಪ್ರಾರ್ಥಿಸುವವರಾದುದರಿಂದ ದ್ರವಿಣಸಃ ಎಂಬ ಶಬ್ದಕ್ಕೆ ಋತ್ವಿಜರು ಎಂದರ್ಥವು. ಮತ್ತು ಈಳತೆ ಎಂದರೆ ಯಾಚಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸೆ ಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

> ತತ್ಕೋ ದ್ರವಿಣೋದಾ ಇಂದ್ರ ಇತಿ ಕೌಷ್ಟುಕಿಃ ।
> ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು ? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ, ಬಲ, ಧನ. ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬುದಾಗಿ ಹೇಬೇಕೆಂದು ಕೌಷ್ಟುಕಿ ಎಂಬುದರ ಅಭಿಪ್ರಾಯವು.

> ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।
> ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋ ದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ " ಅಶ್ಮನೋರಂತರಗ್ನಿಂ ಜಜಾನ " ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

> ಅಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ । ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥

ಋತುಗಳನ್ನುದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವ ನೆಂಮ ಹೇಳಿರುವುದರಿಂದಲೂ ಇಂದ್ರನನ್ನು ಸೋಮಪಾನಸಂಬಂಧವಾದ ಮಂತ್ರಗಳಿಂದ ಸ್ತೋತ್ರಮಾಡುವುದರಿಂದಲೂ ಋತ್ವಿಜರನ್ನು ದವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು.

**ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ.**

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂಣಿಯವರ ಮತವು, ಏಕೆಂದರೆ ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಋತ್ವಿಜರ ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪಯೋಗಿಸುವರು.

**ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ । ಯಥೋ "ಏತದೋಜಸೋ ಜಾತಮುತಮನ್ಯ ಏನಂ" ಇತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನಗಳನ್ನು ಕೊಡುವುದರಿಂದ ಅಗ್ನಿಯನ್ನು ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ. (ಸಹಸಃ—ಬಲದ, ಪುತ್ರಂ—ಪುತ್ರನಾದ ಅಗ್ನಿಯನ್ನು) ಸಹಸಃ ಸೂನೂಂ, ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು :—

**ಪ್ರ್ವನ್ನಿಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।
ಸಹಸಸ್ಪುತ್ರೋ ಅದ್ಭುತಃ ॥**

(ಋ. ಸಂ. ೨-೭-೬)

**ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।
ಋತಾವಾ ಯಜ್ಞಿಯೋ ಭುವಃ ॥**

(ಋ. ಸಂ. ೮-೭೫-೩)

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥**

(ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ, ಸಹಸಃಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವವು. ಆದುದರಿಂದ ಬಲಧನಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

ಗ್ರಾವಹಸ್ತಾಸಃ —ಸೋಮಲತೆಯನ್ನು ಜಜ್ಜುವುದಕ್ಕಾಗಿ ಕೈಯಲ್ಲಿ ಕಲ್ಲನ್ನು ಹಿಡಿದಿರುವವರು.

ಅಧ್ವರೇ, ಯಜ್ಞೇಷು—ಅಧ್ವರ ಯಜ್ಞ ಎಂಬ ಶಬ್ದಗಳು ಸಾಧಾರಣವಾಗಿ ಯಜ್ಞವೆಂಬ ಸಾಮಾನ್ಯಾರ್ಥವನ್ನು ಸೂಚಿಸುವುದಾದರೂ ಇಲ್ಲಿ ಭಾಷ್ಯಕಾರರು ದ್ವಿರುಕ್ತಿದೋಷ ಬರಬಹುದೆಂಬ ಶಂಕೆಯಿಂದ ಅಧ್ವರಶಬ್ದಕ್ಕೆ ಪ್ರಕೃತಿರೂಪವಾದ ಅಗ್ನಿಷ್ಟೋಮವೆಂದೂ, ಯಜ್ಞಶಬ್ದಕ್ಕೆ ವಿಕೃತಿರೂಪವಾದ ಉಕ್ಥ್ಯ ಮೊದಲಾದ ಯಾಗವಿಶೇಷಗಳೆಂದೂ ಅರ್ಥವಿವರಣೆ ಮಾಡಿರುವರು. ಪ್ರಕೃತಿಯೆಂದರೆ ಎಲ್ಲಾ ಯಜ್ಞಗಳಿಗೂ ಸಾಮಾನ್ಯವಾಗಿ ಅನ್ವಯಿಸುವ ಕಾರ್ಯಕ್ರಮಗಳನ್ನೊಳಗೊಂಡ ಮೂಲಭೂತವಾದ ಯಜ್ಞಕರ್ಮವು. ವಿಕೃತಿಯೆಂದರೆ ಪ್ರಕೃತಿಯಜ್ಞದಲ್ಲಿ ಸಂದರ್ಭೋಚಿತವಾಗಿ ಅಲ್ಲಲ್ಲಿ ಕೆಲವು ವ್ಯತ್ಯಾಸ ಗಳನ್ನು ಮಾಡಿ ನೆರವೇರಿಸುವ ಯಜ್ಞಕರ್ಮವು ಎಂದರೆ ವಿಕೃತಿಯಾಗದಲ್ಲಿ ನಡೆಯುವ ಕರ್ಮಗಳೆಲ್ಲವೂ ಪ್ರಕೃತಿ ಯಾಗದಂತೆಯೇ ಇದ್ದು ಕೆಲವು ವಿಷಯಗಳಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿರುವುದು. ಪ್ರಕೃತಿವಿಕೃತಿಯಾಗಗಳ ವಿಷಯವಾಗಿ ನಾವು ಹಿಂದೆಯೇ ವಿವರಣೆ ಮಾಡಿದೇವೆ.

ಉದಾಹರಣೆಯ ಋಕು—

**ಅಶ್ವಾದಿಯಾಯೇತಿ ಯದ್ವದಂತ್ಯೋಜಸೋ ಜಾತಮುತಮನ್ಯ ಏನಂ । ಮನ್ಯೋರಿಯಾಯ ಹರ್ಮ್ಯೇಷು ತಸ್ಥೌ ಯತಃ ಪ್ರಜಜ್ಞ ಇಂದ್ರೋ ಅಸ್ಯ ವೇದ ॥ ೧೦ ॥**

(ಋ. ಸಂ. ೧೦-೭೩-೧೦)

ಇದರ ಅರ್ಥವು—

ಈ ಇಂದ್ರನು ಆದಿತ್ಯನಿಂದ ಉತ್ಪನ್ನನಾಗಿದ್ದಾನೆಂದು ಜನರು ಹೇಳಿದರೂ ಸಹ ಇವನು ಶಕ್ತ್ಯುತ್ಪನ್ನನೆಂದು ಮಾತ್ರ ನಾನ ತಿಳಿಯುತ್ತೇನೆ. ಇವನು ಕ್ರೋಧದಿಂದ ಉತ್ಪನ್ನನಾಗಿದ್ದಾನೆ. ಮತ್ತು ಶತ್ರುಗಳ ಗೃಹದಲ್ಲಿ ನಿಂತಿದ್ದಾನೆ. ತಾನು ಎಲ್ಲಿಂದ ಬಂದನೆಂಬುದು ತನಗೆ ಮಾತ್ರ ತಿಳಿದ ವಿಷಯವಾಗಿದೆ. ಇವನ ಮಹಿಮೆಯನ್ನು ಇತರರಾರೂ ತಿಳಿಯಲಾರರು.
ಈ ಋಕ್ಕಿನಲ್ಲಿರುವ ಓಜಸೋ ಜಾತಂ ಎಂಬ ಶಬ್ದಗಳ ವಿಷಯವಾಗಿ ಯಾಸ್ಕರು ಈ ರೀತಿ ನಿರುಕ್ತವನ್ನು ಹೇಳಿದಾರೆ.

**ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಜಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇವಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಪ್ರಕೃತ ಋಕ್ಕಿನಲ್ಲಿ ಓಜಸೋ ಜಾತಂ ಇತ್ಯಾದಿ ವಿಶೇಷಣಗಳು ಇಂದ್ರನ ಪರವಾಗಿ ಪ್ರಯುಕ್ತವಾಗಿದ್ದರೂ ಸಾಧಾರಣವಾಗಿ ಓಜಸಾ ಜಾತಂ, ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ಎಂಬ ವಿಶೇಷಣಪದಗಳನ್ನು ಅಗ್ನಿಪರವಾಗಿ ಉಪಯೋಗಿಸುವುದೇ ವಿಶೇಷ ಬಳಕೆಯಲ್ಲಿದೆ. ಓಜಃ ಶಬ್ದಕ್ಕೆ ಬಲವೆಂದರ್ಥವು. ಅಗ್ನಿಯ ವಿಷಯದಲ್ಲಿ ಶಕ್ತಿಯಿಂದ ಉತ್ಪನ್ನನಾದವನು ಎಂದು ಹೇಳುವಾಗ ಋತ್ವಿಕ್ಕುಗಳು ಅರಣಿಗಳಲ್ಲಿ ಅಗ್ನಿಯನ್ನು ಕಡೆದು ಉತ್ಪತ್ತಿಮಾಡುವಾಗ ಕಡೆಯುವುದ ಕ್ಕಾಗಿ ಅವರು ಬಹಳವಾಗಿ ತಮ್ಮ ಶಕ್ತಿ ಅಥವಾ ಬಲವನ್ನು ಉಪಯೋಗಿಸಿ ಕಡೆಯಬೇಕಾಗುವುದು. ಈರೀತಿ ಬಲಪ್ರಯೋಗ ದಿಂದ ಕಡೆದು ಉತ್ಪನ್ನ ಮಾಡುವುದರಿಂದ ಅಗ್ನಿಯನ್ನು ಓಜಸೋ ಜಾತಂ—ಶಕ್ತಿಯಿಂದ ಉತ್ಪನ್ನನಾದವನು ಸಹಸಃ

ಪುತ್ರಂ—ಶಕ್ತಿಯ ಪುತ್ರನು ಸಾಹಸಃ ಸೂನುಂ, ಸಹಸೋ ಯಹುಂ—ಶಕ್ತಿಯ ಪುತ್ರನು ಎಂದು ಕರೆಯುವುದು ರೂಢಿಯಾಗಿದೆ. ಉದಾಹರಣೆಗಾಗಿ ಹೇಳುವುದಾದರೆ ಪ್ರಕೃತ ಋಕ್ಕನ್ನೇ ಓಜಸೋ ಜಾತಂ ಎಂಬ ಶಬ್ದಗಳ ಪ್ರಯೋಗವಿರುವ ಮಂತ್ರವೆಂದು ಹೇಳಬಹುದು. ಅದರಂತೆ—

ಧೃನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ । ಸಹಸಸ್ಪುತ್ರೋ ಅದ್ಭುತಃ ॥

(ಋ. ಸಂ. ೨-೭-೬)

ಎಂಬ ಋಕ್ಕನ್ನು ಸಹಸಸ್ಪುತ್ರಃ ಎಂಬ ಪದಗಳ ಪ್ರಯೋಗಕ್ಕಾಗಿಯೂ

ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।
ಋತಾವಾ ಯಜ್ಞಿಯೋ ಭುವಃ ॥

(ಋ. ಸಂ. ೮-೭೫-೩)

ಎಂಬ ಋಕ್ಕನ್ನು ಸಹಸಃ ಸೂನುಃ ಎಂಬ ಪದಗಳ ಪ್ರಯೋಗಕ್ಕಾಗಿಯೂ

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥

(ಋ. ಸಂ. ೧-೭೯-೪)

ಎಂಬ ಋಕ್ಕನ್ನು ಸಹಸೋ ಯಹುಃ ಎಂಬ ಪದಗಳ ಪ್ರಯೋಗಕ್ಕಾಗಿ ಉದಾಹರಣೆಯಾಗಿ ಕೊಡಬಹುದು.

ಉದಾಹರಣೆಯ ಋಕ್ಕು—

ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉಧಾಜದಪಧಾ
ವಲಸ್ಯ ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು
ಸಜನಾಸ ಇಂದ್ರಃ ॥ (೨-೧೨-೩)

ಇದರ ಅರ್ಥವು—

ಎಲೈ ಜನರೇ ಯಾವನು ಮೇಘವನ್ನು ಹನನಮಾಡಿ ಸಪ್ತಸಂಖ್ಯಾಕವೂ ಪ್ರವಹಿಸತಕ್ಕವೂ ಆದ ಗಂಗಾನದಿಗಳನ್ನು ಪ್ರವಹಿಸುವಂತೆ ಮಾಡಿದನೋ, ಯಾವನು ಮೇಘಗಳ ಮಧ್ಯಪ್ರತೀಶ್ಯದಲ್ಲಿ ವಿದ್ಯುದ್ರೂಪದ ಅಗ್ನಿಯನ್ನು ಸೃಷ್ಟಿಸಿದನೋ ಮತ್ತು ಯಾವನು ಸಂಗ್ರಾಮಗಳಲ್ಲಿ (ಯುದ್ಧಗಳಲ್ಲಿ) ಅಪ್ರತಿಹತನಾಗಿರುತ್ತಾನೆಯೋ ಅವನೇ ಇಂದ್ರನು.

ಈ ಋಕ್ಕಿನಲ್ಲಿಯೂ— ಇಂದ್ರನು ವೃತ್ರಾಸುರನನ್ನು ಅಥವಾ ಮೇಘವನ್ನು ಹಿಂಸಿಸಿ ವೃಷ್ಟಿಯನ್ನು ಸುರಿಸಿ ನೀರು ಹರಿಯುವಂತೆ ಮಾಡಿದನು; ವಲನು ಬಚ್ಚಿಟ್ಟದ್ದ ಗೋವುಗಳನ್ನು ಬಿಡಿಸಿದನು; ಅಂತರಿಕ್ಷದಲ್ಲಿರುವ ಮೇಘಗಳ ಮಧ್ಯದಲ್ಲಿ ವಿದ್ಯುದ್ರೂಪವಾದ ಅಗ್ನಿಯನ್ನು ಉತ್ಪಾದನೆ (ಸೃಷ್ಟಿ) ಮಾಡಿದನು; ಯುದ್ಧದಲ್ಲಿ ಇಂದ್ರನು ಶತ್ರುಗಳಿಂದ ಅಜೇಯನಾಗಿರುವನು; ಎಂಬ ಇಂದ್ರನ ನಾಲ್ಕು ಸಾಹಸಕೃತ್ಯಗಳ ವರ್ಣನೆ ಇದೆ.

ಯೋ ಹತ್ವಾ ಅಹಿಂ ಅರಿಣಾತ್ ಸಪ್ತ ಸಿಂಧೂನ್—ಯೋಽಹಿಂ ಮೇಘಂ ಹತ್ವಾ ಮೇಘ ಹನನಂ ಕೃತ್ವಾ ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾ ಅಪೋಽರಿಣಾತ್ । ಪ್ರೈರಯತ್ । ಯದ್ವಾ ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್ । ಎಂದರೆ ಇಂದ್ರನು ಮೇಘವನ್ನು ಹಿಂಸಿಸಿ (ವಜ್ರಾಯುಧದಿಂದ ಹೊಡೆದು) ತಡೆದಿದ್ದ ವೃಷ್ಟಿ (ಮಳೆ) ಯನ್ನು ಬೀಳುವಂತೆ ಮಾಡಿ ಬಿದ್ದ ನೀರು ಪ್ರವಾಹರೂಪದಲ್ಲಿ ಅಥವಾ ಗಂಗಾದಿಸಪ್ತನದಿಗಳ ರೂಪದಲ್ಲಿ ಹರಿಯುವಂತೆ ಮಾಡಿದನು ಎಂದರ್ಥವು.

ಅಹಿಂ—ಅಹಿಂ ಎಂಬ ಶಬ್ದವು ಮೇಘನಾಮುಗಳಲ್ಲಿಯೂ (ನಿ. ೨–೨೧) ಉದಕನಾಮುಗಳಲ್ಲಿಯೂ (ನಿ. ೨–೨೪) ಪಠಿತವಾಗಿದೆ. ಇದಲ್ಲದೆ ಅಹಿಶಬ್ದಕ್ಕೆ ಯಾಸ್ಕರು ಅಹಿರಯನಾತ್—(ಅಂತರಿಕ್ಷದಲ್ಲಿ) ಚಲಿಸುವುದರಿಂದ ಮೇಘಕ್ಕೆ ಅಹಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೨–೨೪)

(೧) ಇದಲ್ಲದೆ ಇಣ್–ಗತೌ (ಅದಾದಿ, ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಅಹಿಶಬ್ದಕ್ಕೆ ಏತ್ಯಂತರಿಕ್ಷೇ । ಅಯತೇರೇವ––ಅಂತರಿಕ್ಷದಲ್ಲಿ ಚಲಿಸುವುದರಿಂದ ಅಹಿ ಎಂದರೆ ಮೇಘವು ;

(೨) ಅಥವಾ ಆಹಿ–ಗತೌ (ಭ್ವಾದಿ, ಆತ್ಮನೇಪದಿ) ಎಬ ಧಾತುವಿನಿಂದ ಅಹಿಶಬ್ದವು ನಿಷ್ಪನ್ನವಾದರೆ ಆಗಲೂ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಅಹಿಶಬ್ದಕ್ಕೆ ಮೇಘವೆಂದೇ ಅರ್ಥವು ;

(೩) ಅಹ–ವ್ಯಾಪ್ತೌ (ಸ್ವಾದಿ, ಪರಸ್ಮೈಪದಿ) ವ್ಯಾಪಿಸು ಎಂಬರ್ಥವುಳ್ಳ ಅಹ ಎಂಬ ಧಾತುವಿನಿಂದ ನಿಷ್ಪನ್ನವಾದರೆ—ಅಹ್ನೋತಿ ವ್ಯಾಪ್ನೋತಿ ಆಕಾಶಂ ದಿಗಂತರಾಣಿ ವಾ—ಎಂದರೆ ಆಕಾಶದಲ್ಲಿ ಅಥವಾ ನಾನಾ ದಿಕ್ಕುಗಳಲ್ಲಿ ವ್ಯಾಪಿಸಿರುವುದರಿಂದ ಅಹಿ ಎಂದರೆ ಮೇಘವು ;

(೪) ಅಥವಾ ಅಙ್‌ಪೂರ್ವಾದ್ಧಂತೇಃ ಹಿಂಸಾರ್ಥಾತ್ ಗತ್ಯರ್ಥಾದ್ವಾ ಆ ಸಮಂತಾತ್ ಹಂತಿ ಭಿನತ್ತಿ ಉಷ್ಣಮಾಭಿಮುಖ್ಯೇನ । ಹಂತಿ ಗಚ್ಛತ್ಯಂತರಿಕ್ಷಂ—ಎಂದರೆ ಹನ ಹಿಂಸಾಗತ್ಯೋಃ ಎಂಬ ಧಾತುವಿನಿಂದ ಅಙ್ ಉಪಸರ್ಗಪೂರ್ವಕವಾಗಿ ನಿಷ್ಪನ್ನವಾಗುವುದಾದರೆ ಹಿಂಸಾರ್ಥದಲ್ಲಿ–ಶೀತಲವಾದ ನೀರಿನ ಸಂಯೋಗದಿಂದ ಸುತ್ತಲೂ ಇರುವ ಉಷ್ಣವನ್ನು ನಾಶಮಾಡುವುದರಿಂದ ಅಹಿಶಬ್ದಕ್ಕೆ ಮೇಘವೆಂದು ಅರ್ಥವು. ಅಥವಾ ಹನಧಾತುವಿಗೆ ಗತ್ಯರ್ಥವನ್ನು ಹೇಳುವುದಾದರೆ ಆಗ ಅಂತರಿಕ್ಷದಲ್ಲಿ ಸಂಚರಿಸುವ ಸ್ವಭಾವವುಳ್ಳದ್ದಾದ್ದರಿಂದ ಅಹಿಯೆಂದರೆ ಮೇಘವು ;

(೫) ಅಥವಾ ಹನಧಾತುವಿಗೆ ಹಿಂಸಾರ್ಥದಲ್ಲಿ ಇನ್ನೊಂದು ಅರ್ಥವೂ ಸಾಧ್ಯವಾಗುವುದು. ಹೇಗೆಂದರೆ ಹಿಃ ಹಂತಾ, ನ ಹಂತಾ ಅಹಂತಾ । ಅಹಿಃ ಅಹಿಂಸಕಃ ಇತ್ಯರ್ಥಃ । ಸರ್ವದಾ ಲೋಕಸ್ಯ ವರ್ಷಪ್ರದತ್ವಾತ್ । ಹಿಃ ಎಂದರೆ ಹಿಂಸೆಮಾಡುವುದು, ಅಹಿಃ ಎಂದರೆ ಹಿಂಸೆಮಾಡದಿರುವುದು ಮೇಘವು ; ಏಕೆಂದರೆ ಮೇಘವು ಲೋಕದ ಜನರಿಗೆ ಹಿತವನ್ನುಂಟುಮಾಡುವುದಕ್ಕಾಗಿ ಮಳೆಯನ್ನು ಸುರಿಸುವುದರಿಂದ ಅಹಿಂಸಕವಾಗಿರುವುದು. ಆದ್ದರಿಂದ ಅಹಿ ಎಂದರೆ ಮೇಘವು ಎಂದರ್ಥವು. ಈ ಅರ್ಥದ ಸಮರ್ಥನೆಗಾಗಿ ಶುಕ್ಲಯಜುರ್ವೇದದ—ಸೋಽಗ್ನೀಷೋಮಾವಭಿ ಸಂ ಬಭೂವ ಸರ್ವಾಂ ವಿದ್ಯಾಂ ಸರ್ವಂ ಯಶಃ ಸರ್ವಮನ್ನಾದ್ಯಂ ಸರ್ವಾಂ ಶ್ರಿಯಂ ಸ ಯತ್ಸರ್ವಮೇತತ್ಸಮಭವತ್ ತಸ್ಮಾದಹಿಃ । ಎಂದು ವಾಜಸನೇಯಸಂಹಿತಾವಾಕ್ಯವಿರುವುದು. ಪ್ರಕೃತ ಋಕ್ಕಿನಲ್ಲಿ ಅಹಿ ಎಂದರೆ ಮೇಘವೆಂದೇ ಅರ್ಥವು.

ಪುತ್ರಂ—ಶಕ್ತಿಯ ಪುತ್ರನು ಸಾಹಸಃ ಸೂನುಂ, ಸಹಸೋ ಯಹುಂ—ಶಕ್ತಿಯ ಪುತ್ರನು ಎಂದು ಕರೆಯುವುದು ರೂಢಿಯಾಗಿದೆ. ಉದಾಹರಣೆಗಾಗಿ ಹೇಳುವುದಾದರೆ ಪ್ರಕೃತ ಋಕ್ಕನ್ನೇ ಓಜಸೋ ಜಾತಂ ಎಂಬ ಶಬ್ದಗಳ ಪ್ರಯೋಗವಿರುವ ಮಂತ್ರವೆಂದು ಹೇಳಬಹುದು. ಅದರಂತೆ—

ದ್ರನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ । ಸಹಸಸ್ಪುತ್ರೋ ಅದ್ಭುತಃ ॥

(ಋ. ಸಂ. ೨-೭-೬)

ಎಂಬ ಋಕ್ಕನ್ನು ಸಹಸಸ್ಪುತ್ರಃ ಎಂಬ ಪದಗಳ ಪ್ರಯೋಗಕ್ಕಾಗಿಯೂ

ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।
ಋತಾವಾ ಯಜ್ಞಯೋ ಭುವಃ ॥

(ಋ. ಸಂ. ೮-೭೫-೩)

ಎಂಬ ಋಕ್ಕನ್ನು ಸಹಸಃ ಸೂನುಃ ಎಂಬ ಪದಗಳ ಪ್ರಯೋಗಕ್ಕಾಗಿಯೂ

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥

(ಋ. ಸಂ. ೧-೭೯-೪)

ಎಂಬ ಋಕ್ಕನ್ನು ಸಹಸೋ ಯಹುಃ ಎಂಬ ಪದಗಳ ಪ್ರಯೋಗಕ್ಕಾಗಿ ಉದಾಹರಣೆಯಾಗಿ ಕೊಡಬಹುದು.

ಉದಾಹರಣೆಯ ಋಕ್ಕು—

ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉಧಾಜದಪಧಾ
ವಲಸ್ಯ ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು
ಸಜನಾಸ ಇಂದ್ರಃ ॥ (೨-೧೨-೩)

ಇದರ ಅರ್ಥವು—

ಎಲೈ ಜನರೇ ಯಾವನು ಮೇಘವನ್ನು ಹನನಮಾಡಿ ಸಪ್ತಸಂಖ್ಯಾಕವೂ ಪ್ರವಹಿಸತಕ್ಕವೂ ಆದ ಗಂಗಾನದಿಗಳನ್ನು ಪ್ರವಹಿಸುವಂತೆ ಮಾಡಿದನೊ, ಯಾವನು ಮೇಘಗಳ ಮಧ್ಯಪ್ರತೀಕ್ಷ್ವದಲ್ಲಿ ವಿದ್ಯುದ್ರೂಪದ ಅಗ್ನಿಯನ್ನು ಸೃಷ್ಟಿಸಿದನೋ ಮತ್ತು ಯಾವನು ಸಂಗ್ರಾಮಗಳಲ್ಲಿ (ಯುದ್ಧಗಳಲ್ಲಿ) ಅಪ್ರತಿಹತನಾಗಿರುತ್ತಾನೆಯೋ ಅವನೇ ಇಂದ್ರನು.

ಈ ಋಕ್ಕಿನಲ್ಲಿಯೂ— ಇಂದ್ರನು ವೃತ್ರಾಸುರನನ್ನು ಅಥವಾ ಮೇಘವನ್ನು ಹಿಂಸಿಸಿ ವೃಷ್ಟಿಯನ್ನು ಸುರಿಸಿ ನೀರು ಹರಿಯುವಂತೆ ಮಾಡಿದನು; ವಲನು ಬಚ್ಚಿಟ್ಟದ್ದ ಗೋವುಗಳನ್ನು ಬಿಡಿಸಿದನು; ಅಂತರಿಕ್ಷದಲ್ಲಿರುವ ಮೇಘಗಳ ಮಧ್ಯದಲ್ಲಿ ವಿದ್ಯುದ್ರೂಪವಾದ ಅಗ್ನಿಯನ್ನು ಉತ್ಪಾದನೆ (ಸೃಷ್ಟಿ) ಮಾಡಿದನು; ಯುದ್ಧದಲ್ಲಿ ಇಂದ್ರನು ಶತ್ರುಗಳಿಂದ ಅಜೇಯನಾಗಿರುವನು; ಎಂಬ ಇಂದ್ರನ ನಾಲ್ಕು ಸಾಹಸಕೃತ್ಯಗಳ ವರ್ಣನೆ ಇದೆ.

ಯೋ ಹತ್ವಾ ಅಹಿಂ ಅರಿಣಾತ್ ಸಪ್ತ ಸಿಂಧೂನ್—ಯೋಽಹಿಂ ಮೇಘಂ ಹತ್ವಾ ಮೇಘ ಹನನಂ ಕೃತ್ವಾ ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾ ಅಪೋಽರಿಣಾತ್ । ಪ್ರೈರಯತ್ । ಯದ್ವಾ ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್ । ಎಂದರೆ ಇಂದ್ರನು ಮೇಘವನ್ನು ಹಿಂಸಿಸಿ (ವಜ್ರಾಯುಧದಿಂದ ಹೊಡೆದು) ತಡೆದಿದ್ದ ವೃಷ್ಟಿ (ಮಳೆ) ಯನ್ನು ಬೀಳುವಂತೆ ಮಾಡಿ ಬಿದ್ದ ನೀರು ಪ್ರವಾಹರೂಪದಲ್ಲಿ ಅಥವಾ ಗಂಗಾದಿಸಪ್ತನದಿಗಳ ರೂಪದಲ್ಲಿ ಹರಿಯುವಂತೆ ಮಾಡಿದನು ಎಂದರ್ಥವು.

ಅಹಿಂ—ಅಹಿಂ ಎಂಬ ಶಬ್ದವು ಮೇಘನಾಮಗಳಲ್ಲಿಯೂ (ನಿ. ೨–೨೧) ಉದಕನಾಮಗಳಲ್ಲಿಯೂ (ನಿ. ೨–೨೪) ಪಠಿತವಾಗಿದೆ. ಇದಲ್ಲದೆ ಅಹಿಶಬ್ದಕ್ಕೆ ಯಾಸ್ಕರು ಅಹಿರಯನಾತ್—(ಅಂತರಿಕ್ಷದಲ್ಲಿ) ಚಲಿಸುವುದರಿಂದ ಮೇಘಕ್ಕೆ ಅಹಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೨–೨೪)

(೧) ಇದಲ್ಲದೆ ಇಣ್-ಗತೌ (ಅದಾದಿ, ಪರಸ್ಮೈಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಅಹಿಶಬ್ದಕ್ಕೆ ಏತ್ಯಂತರಿಕ್ಷೇ । ಅಯತೇರೇವ—ಅಂತರಿಕ್ಷದಲ್ಲಿ ಚಲಿಸುವುದರಿಂದ ಅಹಿ ಎಂದರೆ ಮೇಘವು;

(೨) ಅಥವಾ ಆಹಿ-ಗತೌ (ಭ್ವಾದಿ, ಆತ್ಮನೇಪದಿ) ಎಬ ಧಾತುವಿನಿಂದ ಅಹಿಶಬ್ದವು ನಿಷ್ಪನ್ನವಾದರೆ ಆಗಲೂ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಅಹಿಶಬ್ದಕ್ಕೆ ಮೇಘವೆಂದೇ ಅರ್ಥವು;

(೩) ಅಹ–ವ್ಯಾಪ್ತೌ (ಸ್ವಾದಿ, ಪರಸ್ಮೈಪದಿ) ವ್ಯಾಪಿಸು ಎಂಬರ್ಥವುಳ್ಳ ಅಹ ಎಂಬ ಧಾತುವಿನಿಂದ ನಿಷ್ಪನ್ನವಾದರೆ—ಅಹ್ನೋತಿ ವ್ಯಾಪ್ನೋತಿ ಆಕಾಶಂ ದಿಗಂತರಾಣಿ ವಾ—ಎಂದರೆ ಆಕಾಶದಲ್ಲಿ ಅಥವಾ ನಾನಾ ದಿಕ್ಕುಗಳಲ್ಲಿ ವ್ಯಾಪಿಸಿರುವುದರಿಂದ ಅಹಿ ಎಂದರೆ ಮೇಘವು;

(೪) ಅಥವಾ ಅಙ್ಪೂರ್ವಾದ್ಧಂತೇಃ ಹಿಂಸಾರ್ಥಾತ್ ಗತ್ಯರ್ಥಾದ್ವಾ ಆ ಸಮಂತಾತ್ ಹಂತಿ ಭಿನತ್ತಿ ಉಷ್ಣಮಾಭಿಮುಖ್ಯೇನ । ಹಂತಿ ಗಚ್ಛತ್ಯಂತರಿಕ್ಷಂ—ಎಂದರೆ ಹನ ಹಿಂಸಾಗತ್ಯೋಃ ಎಂಬ ಧಾತುವಿನಿಂದ ಅಙ್ ಉಪಸರ್ಗಪೂರ್ವಕವಾಗಿ ನಿಷ್ಪನ್ನವಾಗುವುದಾದರೆ ಹಿಂಸಾರ್ಥದಲ್ಲಿ—ಶೀತಲವಾದ ನೀರಿನ ಸಂಯೋಗದಿಂದ ಸುತ್ತಲೂ ಇರುವ ಉಷ್ಣವನ್ನು ನಾಶಮಾಡುವುದರಿಂದ ಅಹಿಶಬ್ದಕ್ಕೆ ಮೇಘವೆಂದು ಅರ್ಥವು. ಅಥವಾ ಹನಧಾತುವಿಗೆ ಗತ್ಯರ್ಥವನ್ನು ಹೇಳುವುದಾದರೆ ಆಗ ಅಂತರಿಕ್ಷದಲ್ಲಿ ಸಂಚರಿಸುವ ಸ್ವಭಾವವುಳ್ಳದ್ದಾದ್ದರಿಂದ ಅಹಿಯೆಂದರೆ ಮೇಘವು;

(೫) ಅಥವಾ ಹನಧಾತುವಿಗೆ ಹಿಂಸಾರ್ಥದಲ್ಲಿ ಇನ್ನೊಂದು ಅರ್ಥವೂ ಸಾಧ್ಯವಾಗುವುದು. ಹೇಗೆಂದರೆ ಹಿಃ ಹಂತಾ, ನ ಹಂತಾ ಅಹಂತಾ । ಅಹಿಃ ಅಹಿಂಸಕಃ ಇತ್ಯರ್ಥಃ । ಸರ್ವದಾ ಲೋಕಸ್ಯ ವರ್ಷಪ್ರದತ್ವಾತ್ । ಹಿಃ ಎಂದರೆ ಹಿಂಸೆಮಾಡುವುದು, ಅಹಿಃ ಎಂದರೆ ಹಿಂಸೆಮಾಡದಿರುವುದು ಮೇಘವು; ಏಕೆಂದರೆ ಮೇಘವು ಲೋಕದ ಜನರಿಗೆ ಹಿತವನ್ನುಂಟುಮಾಡುವುದಕ್ಕಾಗಿ ಮಳೆಯನ್ನು ಸುರಿಸುವುದರಿಂದ ಅಹಿಂಸಕವಾಗಿರುವುದು. ಆದ್ದರಿಂದ ಅಹಿ ಎಂದರೆ ಮೇಘವು ಎಂದರ್ಥವು. ಈ ಅರ್ಥದ ಸಮರ್ಥನೆಗಾಗಿ ಶುಕ್ಲಯಜುರ್ವೇದದ—ಸೋಽಗ್ನೀಷೋಮಾವಭಿ ಸಂ ಬಭೂವ ಸರ್ವಾಂ ವಿದ್ಯಾಂ ಸರ್ವಂ ಯಶಃ ಸರ್ವಮನ್ನಾದ್ಯಂ ಸರ್ವಾಂ ಶ್ರಿಯಂ ಸ ಯತ್ಸರ್ವಮೇತತ್ಸಮಭವತ್ ತಸ್ಮಾದಹಿಃ । ಎಂದು ವಾಜಸನೇಯಸಂಹಿತಾವಾಕ್ಯವಿರುವುದು. ಪ್ರಕೃತ ಋಕ್ಕಿನಲ್ಲಿ ಅಹಿ ಎಂದರೆ ಮೇಘವೆಂದೇ ಅರ್ಥವು.

**ಸಪ್ತ ಸಿಂಧೂನ್**—ಈ ಶಬ್ದಗಳಿಗೆ ಸಾಯಣರು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು; **ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದನಶೀಲಾಃ ಅವೋರಿಣಾತ್ ಪ್ರೈರಯೆತ್** ಸಪ್ತಶಬ್ದಕ್ಕೆ ಒತ್ತರಿಸಿ ಸರಿಯುವ ಸ್ವಭಾವವುಳ್ಳದ್ದೂ ಆದ ವೃಷ್ಟ್ಯುದಕಗಳನ್ನು ಪ್ರೇರಿಸಿದನು ಎಂದರೆ ಮೇಘವನ್ನು ಮಳೆಸುರಿಯುವಂತೆ ಪ್ರೇರಿಸಿದನು ಎಂದು ಒಂದು ವಿಧವಾದ ಅರ್ಥವು; ಅಥವಾ **ಸಪ್ತ ಗಂಗಾಯಮುನಾದ್ಯಾ ಮುಖ್ಯಾ ನದೀರರಿಣಾತ್** । ಮೇಘವನ್ನು ವೃಷ್ಟಿಯನ್ನು ಸುರಿಯುವಂತೆ ಪ್ರೇರಿಸಿ ಆ ಉದಕಗಳು ಗಂಗಾ ಯುಮುನಾ ಮೊದಲಾದ ಏಳು ಮುಖ್ಯ ನದಿಗಳಲ್ಲಿ ಪ್ರವಹಿಸುವಂತೆ ಮಾಡಿದನು ಎಂದ ಇನ್ನೊಂದು ವಿಧವಾದ ಅರ್ಥವು.

**ಯೋ ಗಾ ಉದಾಜದಪಧಾ ವಲಸ್ಯ**—ವಲನೆಂಬ ಅಸುರನ ವಿಷಯವಾಗಿಯೂ ಅವನು ಬಚ್ಚಿಟ್ಟದ್ದ ಗೋವುಗಳ ವಿಷಯವಾಗಿಯೂ ನಾವು ಇದೇ ಭಾಗದ 634-637 ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಈ ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಗುಹೆಯಲ್ಲಿ ತಡೆದು ಇಟ್ಟದ್ದುದನ್ನು ಇಂದ್ರನು ಬಿಡಿಸಿದನು ಎಂದು ಇಲ್ಲಿಯೂ ಉಕ್ತವಾಗಿದೆ.

**ಯಃ ಅಶ್ಮನೋಃ ಅಂತಃ ಅಗ್ನಿಂ ಜಜಾನ— ಅಶೂ ವ್ಯಾಪ್ತೌ** । (ಸ್ವಾದಿ, ಆತ್ಮನೇಪದಿ) ಎಂಬ ಧಾತುವಿನಿಂದ ನಿಷ್ಪನ್ನವಾದ ಅಶ್ಮನ್ ಶಬ್ದಕ್ಕೆ **ಅಶ್ನುತೇ ವ್ಯಾಪ್ನೋತ್ಯಂತರಿಕ್ಷಮಿತ್ಯಶ್ಮಾ ಮೇಘಃ** । ಅಂತರಿಕ್ಷದಲ್ಲಿ ವ್ಯಾಪಿಸಿ ಇರುವುದರಿಂದ ಅಶ್ಮನೋಃ ಎಂದರೆ ಮೇಘಗಳ ಎಂದರ್ಥವು. ಅಶ್ಮ ಎಂಬ ಶಬ್ದವು ಮೇನಾಮುಗಳಲ್ಲಿಯೂ ಪಠಿತವಾಗಿರುವುದು (ನಿ. ೨–೫೦) **ಅತ್ಯಂತ ಮೃದುರೂಪಯೋರ್ಮೇಘಯೋರಂತರ್ಮಧ್ಯೇ ವೈದ್ಯುತಮಗ್ನಿಂ ಜಜಾನ ಉತ್ಪಾದಯಾಮಾಸ.** ಅತ್ಯಂತ ಮೃದುವಾಗಿರುವ (ಮೆತ್ತಗಿರುವ) ಜಲರಾಶಿಯಾದ ಮೇಘಗಳ ಮಧ್ಯದಲ್ಲಿ ಇಂದ್ರನು ವೈದ್ಯುತಾಗ್ನಿಯನ್ನು (ಮಿಂಚನ್ನು) ಉತ್ಪತ್ತಿ ಮಾಡಿದನು. ಬಹಳ ಘಟ್ಟಿಯಾಗಿರುವ ಕಲ್ಲು ಮೊದಲಾದ ಎರಡು ವಸ್ತುಗಳ ಘರ್ಷಣೆಯಿಂದ ಅಗ್ನಿಯನ್ನು ಉತ್ಪತ್ತಿಮಾಡುವುದು ಬಹುಸುಲಭ ಮತ್ತು ಆರೀತಿ ಮಾಡುವುದು ಲೋಕದಲ್ಲಿ ಪ್ರಸಿದ್ಧವಾಗಿರುವ ವಿಷಯ. ಆದರೆ ಬಹಳವಾಗಿ ಹತ್ತಿಯಂತೆ ಮೃದುವಾಗಿರುವ ಎರಡು ಮೇಘಗಳ ಮಧ್ಯೆ ವೈದ್ಯುತಾಗ್ನಿಯನ್ನು ಉತ್ಪಾದನೆಮಾಡುವುದು ಸಾಧಾರಣಮನುಷ್ಯರಿಂದ ಅಥವಾ ಧೇವತೆಗಳಿಂದ ಸಾಧ್ಯವಿಲ್ಲ. ಮಹಾಮಹಿಮನಾದ ಇಂದ್ರನಿಂದ ಮಾತ್ರವೇ ಸಾಧ್ಯವೆಂಬ ವಿಷಯವನ್ನು ಋಷಿಯು ವರ್ಣಿಸಿ ಇಂದ್ರನ ಸಾಮರ್ಥ್ಯಾತಿಶಯವನ್ನು ಸುತಿಸಿದ್ದಾನೆ. ಇಲ್ಲಿ ಅಶ್ಮನೋಃ ಎರಡು ಮೇಘಗಳ ಮಧ್ಯದಲ್ಲಿ ಎಂದು ದ್ವಿವಚನಪದಪ್ರಯೋಗವು ಗಮನಾರ್ಹವಾಗಿದೆ. ಏಕೆಂದರೆ ಬೇರೆಬೇರೆ ವಿಧವಾದ ವಿದ್ಯುತ್ಪ್ರವಾಹದಿಂದ ಸಂಯೋಜಿತವಾದ ಎರಡು ಮೇಘಗಳ ಘರ್ಷಣೆಯಿಂದ ವಿದ್ಯುಚ್ಛಕ್ತಿಯು ಉತ್ಪತ್ತಿಯಾಗುವುದೆಂದು ಆಧುನಿಕ ವಿಜ್ಞಾನಿಗಳ ಅಭಿಪ್ರಾಯವಿದೆ.

Even the modern scientists agree that clouds charged defferenty by positive and negetive electricitv coming together cause lightning).

**ಸಂವೃಕ್ ಸಮತ್ಸು**— ಈ ವಾಕ್ಯದಲ್ಲಿ ಯಃ ಎಂಬ ಶಬ್ದವನ್ನೂ, ಭವತಿ ಎಂಬ ಕ್ರಿಯಾಪದವನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕು. ಆರೀತಿ ಮಾಡಿದರೆ— **ಯಃ ಸಮತ್ಸು ಸಂವೃಕ್ ಭವತಿ**— ಯಾವ ಇಂದ್ರನು ಯುದ್ಧಗಳಲ್ಲಿ ಶತ್ರುಗಳನ್ನು ಹಿಂಸಿಸುವನೋ ಎಂದರೆ ಸಂಹಾರಮಾಡುವನೋ ಆ ಇಂದ್ರನೆಂದು ವಾಕ್ಯಾರ್ಥವು. **ಸಂವೃಕ್** । **ವೃಣಕ್ತೇ ರ್ಹಿಂಸಾರ್ಥಸ್ಯ ಕ್ವಿಪಿ ರೂಪಂ**—ಹಿಂಸಾರ್ಥವನ್ನು ಬೋಧಿಸುವ ವೃಣಕ್ತಿಧಾತುವಿನಿಂದ ಸಂ ಎಂಬ ಉಪಸರ್ಗಪೂರ್ವಕ

ನಿಷ್ಪನ್ನವಾದ ಸಂವೃಕ್ ಎಂಬ ಶಬ್ದನ್ನು (ಶತ್ರುಗಳನ್ನು) ಹಿಂಸಿಸುವವನು ಎಂದರ್ಥವು. ಮತ್ತು **ಸಮತ್ಸು। ಸಂಭಕ್ಷಯಂತಿ ಯೋದ್ಧ್ರೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ ತೇಷು**— ಯುದ್ಧಮಾಡುವ ಭಟಸ ಆಯುಷ್ಯವನ್ನು ಭಕ್ಷಿಸುವುದರಿಂದ (ನಾಶಮಾಡುವುದರಿಂದ) ಯುದ್ಧಗಳಿಗೆ ಸಮದಃ ಎಂದು ಹೆಸರು. ಅಂತಹ ಭಟರು ಮೃತರಾಗುವ ಯುದ್ಧಗಳಲ್ಲಿ ಇಂದ್ರನು ಶತ್ರುಗಳನ್ನು ಹಿಂಸಿಸಿ ಸಂಹಾರಮಾಡುವನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

ಅಗ್ನಿಚಿತಿಯನ್ನು ಮಾಡುವಾಗ **ದೀಕ್ಷಣೀಯಾ** ಎಂಬ ಕರ್ಮದಲ್ಲಿ ಆದಿತ್ಯಯಾಗದಲ್ಲಿ—**ಧಾರಯಂತ ಆದಿತ್ಯಾಸಃ** ಎಂಬ ಋಕ್ಕೂ ಅದರ ಮುಂದಿನ ಋಕ್ಕೂ ಸಹ ಯಾಜ್ಯಾ ಮತ್ತು ಪುರೋದುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸಲ್ಪಡಬೇಕೆಂದೂ ಮತ್ತು **ಭುವದ್ವತ್, ಭುವನಪತಿ** ಎಂಬ ವಿಶೇಷಣ ಸಹಿತರಾದ ಆದಿತ್ಯ ದೇವತೆಗಳ ಪರವಾಗಿಯೂ ಸಹ ಈಋಕ್ಕುಗಳ ವಿನಿಯೋಗವಿರುವುದೆಂದೂ ಆಶ್ವಲಾಯನಶ್ರೌತಸೂತ್ರದ—**ತಥಾ ಚ ದೀಕ್ಷಣೀಯಾಯಾಂ** ಎಂಬ ಖಂಡದ **ಧಾರಯಂತ ಆದಿತ್ಯಾಸೋ ಜಗತ್ಸ್ಥಾ ಇತಿ ದ್ವೇ ಏತೇ ಏವ ಭುವದ್ವದ್ಭ್ಯೋ ಭುವನಪತಿಭ್ಯೋ ವಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪–೨)

**ಜಗತ್ ಸ್ಥಾಃಧಾರಯಂತೆ**—**ಸ್ಥಾವರಂ ಜಂಗಮಂ ಚ ಉಭಯವಿಧಂ ಭೂತಜಾತಂ ಅವಸ್ಥಾಪಯಂತಃ।** ಸ್ಥಿರವಾದ ವೃಕ್ಷಲತಾದಿರೂಪದಿಂದ ಇರುವ, ಸಂಚರಿಸುವ ಪಶು ಮೃಗ ಪಕ್ಷಿ ಮನುಷ್ಯರೇ ಮೊದಲಾದ ರೂಪದಿಂದ ಇರುವ ಎರಡು ವಿಧವಾದ ಪ್ರಾಣಿಗಳನ್ನು ಅವರವರ ಅರ್ಹತೆಗೆ ಅನುಸಾರವಾಗಿರುವಂತೆ ಆದಿತ್ಯರು ಇರಿಸಿರುವರೆಂದು ನಿರ್ದೇಶಿಸಿ ಆದಿತ್ಯರು **ದೇವಾಃ—ದಾನಾದಿಗುಣಯುಕ್ತಾಃ** ದಾನವೇ ಮೊದಲಾದ ಗುಣಗಳಿಂದ ಕೂಡಿರುವವರೆಂದು ವಿವರಿಸಿದೆ.

**ದೀರ್ಘಾಧಿಯಃ— ಧೀರ್ಘಾಣಿ ಧಿಯಃ ಕರ್ಮಾಣಿ ಜ್ಞಾನಾನಿ ವಾ ಯೇಷಾಂ**— ಆದಿತ್ಯರು ಪ್ರಭೂತವಾದ ಕರ್ಮಗಳನ್ನು ಆಚರಿಸತಕ್ಕವರೂ, ಮತ್ತು ಪ್ರಬಲವಾದ ಜ್ಞಾನವಂತರಾಗಿರುವವರೂ ಆಗಿರುವರೆಂದು ವರ್ಣಿಸಿದೆ.

**ಅಸುರ್ಯಂ ರಕ್ಷಮಾಣಾಃ—ಅಸವಃ ಪ್ರಾಣಾಃ। ತೇನ ಚ ತದ್ಧೇತುಭೂತಾಃ ಆಪಃ ಲಕ್ಷ್ಯಂತೇ, ಅಸುಮುದಕಂ ದದಾತೀತ್ಯಸುರೋ ಮೇಘಃ। ತತ್ರ ಭವಂ ಮೇಘಾಂತರ್ವರ್ತಿನಮುದಕಂ ತತ್ತತ್ಕಾಲೇ ವೃಷ್ಟ್ಯುತ್ಪಾದನಾಯ ರಕ್ಷಂತಃ।** ಇಲ್ಲಿ ಅಸು ಶಬ್ದಕ್ಕೆ ಪ್ರಾಣವೆಂದು ಅರ್ಥ ವರ್ಣಿಸಿದೆ. ಇದರಿಂದ ಪ್ರಾಣವಾಯುವಿಗೆ ಕಾರಣವಾದ ಉದಕಗಳೆಂದು ಅರ್ಥವನ್ನು ವಿವರಿಸಿದೆ. ಮೇಘಗಳು ಉದಕವನ್ನು ಭೂಮಿಗೆ ಕೂಡುವಕಾರಣ ಅಸುರ ಶಬ್ಧದಿಂದ ವ್ಯವಹೃತವಾಗಿದೆ. ಆದಿತ್ಯರು ಮೇಘಗಳಲ್ಲಿರುವ ಉದಕವನ್ನು ಆಯಾಯ ಕಾಲಗಳಲ್ಲಿ ವೃಷ್ಟಿರೂಪದಿಂದ ಭೂಮಿಗೆ ಕೊಡುವುದಕ್ಕಾಗಿ ರಕ್ಷಿಸುತ್ತಿರುವರೆಂದು ವರ್ಣಿಸಿದೆ. ಮತ್ತು **ಅಪಾಂ ತದ್ಧೇತುತ್ವಂ ಚ ಆಪೋಮಯ ಪ್ರಾಣಃ** (ಛಾಂ. ಉ. ೬–೫–೪) ಉದಕಗಳು ವಾಯುವಿಗೆ ಕಾರಣವಾಗಿರುವುವು ಎಂದು ವ್ಯಾಖ್ಯಾನಮಾಡಿ, ಛಾಂದೋಗ್ಯೋಪನಿಷತ್ತಿನ ವಾಕ್ಯವೂ ಉದಾಹೃತವಾಗಿದೆ.

**ಋತಾವಾನಃ—ಸತ್ಯವಂತೋ ಯಜ್ಞವಂತೋ ವಾ**— ಆದಿತ್ಯರು ಸತ್ಯದಿಂದಲೇ ವರ್ತಿಸುವವರೂ, ಅಥವಾ ಯಜ್ಞವನ್ನು ಆಚರಿಸುವವರು ಎಂದೂ, **ಋಣಾನಿ ಚಾಯಮಾನಾಃ—ಸ್ತೋತೃಭಿಃ ಅನ್ಯೇಭ್ಯಃ ಪ್ರದೇಯಾನಿ ಅಪಗಮಯಂತಃ** ತಮ್ಮನ್ನು ಸ್ತುತಿಮಾಡುವ ಋತ್ವಿಜರು ಇತರರಿಗೆ ಕೊಡಬೇಕಾಗಿರುವ ಸಾಲಗಳನ್ನು ಪರಿಹರಿಸುವರೆಂದೂ ವರ್ಣಿಸಿದೆ.

ದ್ವೇ ವಿರೂಪೇ ಸೂಕ್ತಮೌಷಸಾಯಾಗ್ನಯೇ ಸ ಪ್ರತ್ನಥೇತಿ ದ್ರವಿಣೋದಸೇಽಗ್ನಯೇ ।
(ಬೃಹದ್ದೇವತಾ ೩-೧೨೫)

ಸ ಪ್ರತ್ನಥಾ ನವ ದ್ರವಿಣೋದಸೇ ।
(ಸರ್ವಾನುಕ್ರಮಣಿ)

ದ್ರವಿಣೋದಸ್ತ್ವಗುಣಯುಕ್ತಾಯಾಗ್ನಯ ಇದಂ ಸ್ತಾವಕಂ. (ವೇದಾರ್ಥದೀಪಿಕಾ) ದ್ರವಿಣೋದಾಃ ಎಂಬ ವಿಶೇಷಣದಿಂದ ಅಗ್ನಿಯನ್ನು ಉದ್ದೇಶಿಸಿ ಈ ಸೂಕ್ತವು ಪಠಿತವಾಗಿದೆ.

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ । ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ (ನಿ. ೮-೧)

ಇಲ್ಲಿ ದ್ರವಿಣೋದಾಃ ಎಂಬ ಶಬ್ದದ ನಿಷ್ಪತ್ತಿಯು, ದ್ರವಿಣಂ ದದಾತೀತಿ ದ್ರವಿಣೋದಾಃ. ದ್ರವಿಣಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವುವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ಪ್ರಸಕ್ತವಾದ ಈ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು.

ದ್ರವಿಣೋದಾ ಯಸ್ತ್ವಂ । ದ್ರವಿಣಸ ಇತಿ ವಾ ದ್ರವಿಣಸಾದಿನ ಇತಿ ವಾ ದ್ರವಿಣಸಸ್ತಸ್ಮಾತ್. ಪಿಬತ್ವಿತಿ ಪಿಬತ್ವಿತಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥

ಎಂದರೆ ಧನ, ಹವಿಸ್ಸು ಮುಂತಾದುವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬುದು ಪ್ರಥಮಾವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರಮಾಡಿಕೊಳ್ಳ ಬೇಕು. ದ್ರವಿಣಸಃ ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ದೇವನನ್ನು ಪ್ರಾರ್ಥಿಸುವವರಾದುದರಿಂದ ದ್ರವಿಣಸಃ ಎಂಬ ಶಬ್ದಕ್ಕೆ ಋತ್ವಿಜರು ಎಂದರ್ಥವು. ಮತ್ತು ಈಳತೆ ಎಂದರೆ ಯಾಚಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸೆ ಮಾಡುತ್ತಾರೆ, ಪೂಜಿಸುತ್ತಾರೆ. ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

ತತ್ಕೋದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ।
ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯ ಯಾರು? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವವನು, ಏಕೆಂದರೆ ದ್ರವಿಣಶಬ್ದವು ಸೂಚಿಸುವ ಬಲ,

ಧನ. ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬುದಾಗಿ ಹೇಳಬೇಕೆಂಬುದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।
ಯೋ ಅಸ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು ಈ ಅರ್ಥ ವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

ಅಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರ-ಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ । ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥

ಇಲ್ಲಿ ಬೃಹದ್ದೇವತಾವಾಕ್ಯಗಳನ್ನುದಹರಿಸಿ ಈ ವಿಶೇಷಣವು ಮುಖ್ಯವಾಗಿ ಯಾವ ದೇವತೆಗೆ ಸಂಬಂಧಿಸಿದುದು, ಇದರಿಂದ ಆ ದೇವತೆಯ ಯಾವ ಯಾವ ಗುಣಗಳು ತಿಳಿಯುವುವು ಎಂದು ನೋಡೋಣ.

ಬೃಹದ್ದೇವತೆಯಲ್ಲಿ ಮೊದಲು ಅಗ್ನಿಯೆಂಬ ಶಬ್ದದ ನಿರ್ವಚನವನ್ನು ತಿಳಿಸಿ ಅನಂತರ ದ್ರವಿಣೋದಾಃ ಎಂಬ ವಿಶೇಷಣವು ಅಗ್ನಿಗೆ ಏತಕ್ಕೆ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ವಿಮರ್ಶಿಸಿದೆ.

ಜಾತೋ ಯದಗ್ರೇ ಭೂತಾನಾಂ ಅಗ್ರಣೀರಧ್ವರೇ ಚ ಯತ್ ।
ನಾಮ್ನಾ ಸಂನಯತೇ ವಾಂಗಂ ಸ್ತುತೋಽಗ್ನಿರಿತಿ ಸೂರಿಭಿಃ ॥

(ಬೃ. ದೇ. ೨–೨೪)

ಸಕಲ ಭೂತಗಳಿಗೂ ಪ್ರಥಮದಲ್ಲಿ ಉತ್ಪನ್ನನಾಗಿರುವುದರಿಂದಲೂ ಯಜ್ಞಯಾಗಾದಿಗಳಲ್ಲಿ ನೇತೃವಾಗಿರುವುದರಿಂದಲೂ, ತಾನು ಯಾವ ವಸ್ತುಗಳಲ್ಲಿ ಪ್ರವೇಶಿಸಿದರೂ ಅದನ್ನು ತನ್ನಲ್ಲಿಯೇ ಲೀನವಾಗಿ ಮಾಡಿಕೊಳ್ಳುವುದರಿಂದಲೂ ಸಹ ಅಗ್ನಿಯೆಂದು ಋಷಿಗಳಿಂದ ಸ್ತುತನಾಗಿದ್ದಾನೆ. ಈ ನಿರ್ವಚನವು ನಿರುಕ್ತದಲ್ಲಿ ಹೇಳಿರುವ ಅಗ್ರಣೀರ್ಭವತಿ, ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ । (ನಿ. ೭–೧೪) ಎಂಬ ನಿರ್ವಚನಗಳಿಗೆ ಅನುರೂಪವಾಗಿದೆ. ಅಗ್ನಿ ಶಬ್ದವನ್ನು ವಿವರಿಸಿದನಂತರ, ದ್ರವಿಣೋದಾಃ ಎಂಬ ಶಬ್ದದ ನಿರ್ವಚನವನ್ನು ತಿಳಿಸುತ್ತಾ—

ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ ।
ತತ್ಕರ್ಮ ದೃಷ್ಟ್ವಾ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ ॥

(ಬೃ. ದೇ. ೨–೨೫)

ಉದಾರವಾಗಿ ಧನವನ್ನೂ ಬಲವನ್ನೂ ಕೊಡತಕ್ಕ ಅಗ್ನಿಯ ಕರ್ಮಗಳನ್ನು ಕುತ್ಸಋಷಿಯು ಗ್ರಹಿಸಿ ಅಗ್ನಿಯನ್ನು ಧನದ ಅಥವಾ ಬಲದ ದಾತನಾದ ದ್ರವಿಣೋದಾಃ ಎಂದು ಸ್ತುತಿಸಿರುವನು.

ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ ।
ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥

(ಋ. ಸಂ. ೧–೯೬–೮)

ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ ।
ಜಾಯತೇ ಚ ಬಲೇನಾಯಂ ಮಥ್ಯಮಾನ ಋಷಿಭಿರಧ್ವರೇ ॥
ದ್ರವಿಣೋದೋಽಗ್ನಿರೇವಾಯಂ ದ್ರವಿಣೋದಾಸ್ತದೋಚ್ಯತೇ ।
ಆಗ್ನೇಯೇಷ್ವೇವ ದೃಶ್ಯಂತೇ ಪ್ರವಾದಾ ದ್ರವಿಣೋದಸಃ ॥

(ಬೃ. ದೇ. ೩–೬೧ ; ೩–೬೪)

ಧನದಾತನೂ, ಬಲದಾತನೂ, ಬಲದಿಂದ ಉತ್ಪನ್ನನೂ ಆದುದರಿಂದಲೇ ಅಗ್ನಿಗೆ ದ್ರವಿಣೋದಾಃ ಎಂಬ ಪ್ರಶಂಸೆಯು ಸಲ್ಲುವುದು. ಆದುದರಿಂದ ಈ ವಿಶೇಷಣವು ಅಗ್ನಿ ದೇವತಾಕವೇ ಆಗಿರುವುದು ಎಂದು ಬೃಹದ್ದೇವತಾಕಾರರು ಸಮರ್ಥಿಸಿರುವರು

ಮೇಲಿನ ಶ್ಲೋಕದಲ್ಲಿ ಹೇಳಿರುವ ಜಾಯತೇ ಚ ಬಲೇನಾಯಂ ಎಂಬ ಸ್ವರೂಪದ ಪ್ರಶಂಸೆಯನ್ನು ಈ ಋಕ್ಕಿನ ಪ್ರಾರಂಭದಲ್ಲಿ ನೋಡಬಹುದು.

ಸಹಸಾ ಜಾಯಮಾನಃ—ಬಲೇನ, ನಿರ್ಮಥನೇನ ಉತ್ಪದ್ಯಮಾನಃ । ಮಥನ ಕ್ರಿಯೆಯಿಂದ ಉತ್ಪನ್ನನಾದವನು. ಅಗ್ನಿಗೆ ಸಹಸಸ್ಪುತ್ರಃ, ಸಹಸಃ ಸೂನುಃ ಎಂದು ಅನೇಕ ಕಡೆ ಪ್ರಶಂಸೆ ಇದೆ. ಮಥನಶಕ್ತಿಯಿಂದ ಉತ್ಪನ್ನನಾದುದರಿಂದ ಈ ಪ್ರಶಂಸೆಯಿದೆ. ಇದೇ ರೀತಿಯ ಸಂಬೋಧನೆಯು ಅಥವಾ ವರ್ಣನೆಯು,

ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ । ಸಹಸಸ್ಪುತ್ರೋ ಅದ್ಭುತಃ ।

(ಋ. ಸಂ. ೩–೭–೬)

ಅಗ್ನೇ ವೀಹಿ ಪುರೋಳಾಶಮಾಹುತಂ ತಿರೋ ಅಹ್ನ್ಯಂ । ಸಹಸಃ ಸೂನುರಸ್ಯಧ್ವರೇ ಹಿತಃ ।

(ಋ. ಸಂ. ೩–೨೮–೩)

ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ ।

(ಋ. ಸಂ. ೫–೪–೮)

ಯಸ್ತೇ ಅಗ್ನೇ ಸುಮತಿಂ ಮರ್ತೋ ಅಕ್ಷತ್ಸಹಸಃ ಸೂನೋ ಅತಿ ಸ ಪ್ರ ಶೃಣ್ವೇ ।

(ಋ. ಸಂ. ೧೦–೧೧–೭)

ಇತ್ಯಾದಿ ಋಕ್ಕುಗಳಲ್ಲಿ ಶಕ್ತಿಪುತ್ರನೆಂದೇ ಅಗ್ನಿಗೇ ಸಂಬೋಧನೆಯಿದೆ. ಅದರಂತೆ ಇಲ್ಲಿಯೂ ಸಹ ಸಹಸಾ ಜಾಯ ಮಾನಃ ಎಂದು ಹೇಳಿದೆ.

ಪ್ರತ್ನಥಾ–ಪ್ರತ್ನಂ, ಪ್ರದಿವಃ, ಪ್ರವಯಾಃ ಇತ್ಯಾದಿ ಆರು ಪುರಾಣನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೨೯) ಪ್ರತ್ನ ಶಬ್ದಕ್ಕೆ ಹಳೆಯದು ಅಥವಾ ಹಳಬನೆಂದು ಅರ್ಥ. ಇಲ್ಲಿ ಅಗ್ನಿಯು ಉತ್ಪನ್ನನಾದೊಡನೆಯೇ ಅತ್ಯಂತ ಹಳಬನಂತೆ ತನ್ನ ಶಕ್ತಿಯನ್ನೂ ಪರಿಚಯವನ್ನೂ ತೋರಿಸಿ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಾನೆಂದು ಆಶ್ಚರ್ಯವನ್ನು

ತದ್ವಾಮೃತಂ ರೋದಸೀ ಪ್ರ ಬ್ರವೀಮಿ ಜಾಯಮಾನೋ ಮಾತರಾ ಗರ್ಭೋ ಅತ್ತಿ ।
ನಾಹಂ ದೇವಸ್ಯ ಮರ್ತ್ಯಶ್ಚಿಕೇತಾಗ್ನಿರಂಗ ವಿಚೇತಾಃ ಸ ಪ್ರಚೇತಾಃ ॥

ಇತ್ಯಾದಿ ಸನ್ನಿವೇಶಗಳಲ್ಲಿ ಅಗ್ನಿಯ ಮಾಹಾತ್ಮ್ಯವನ್ನು ವರ್ಣಿಸುತ್ತಾ ಉತ್ಪನ್ನನಾದೊಡನೆಯೇ ಅಥವಾ ಗರ್ಭಪ್ರಾಯವಾಗಿರುವಾಗಲೇ ಅಗ್ನಿಯು ತನ್ನ ಜನನಿಯರನ್ನು ನುಂಗುವ ಶಕ್ತಿಯನ್ನು ಪಡೆಯುತ್ತಾನೆ. ಇದು ಮಾನವನ ದೃಷ್ಟಿಗೆ ಅಗೋಚರವಾದುದೂ ಅದ್ಭುತವಾದುದೂ ಆದ ಶಕ್ತಿಯಾಗಿದೆ ಎಂದು ವಿಸ್ಮಯವನ್ನು ಸೂಚಿಸಿದೆ.. ಅದರಂತೆಯೇ ಇಲ್ಲಿಯೂ ಸಹ ಅಗ್ನಿಯ ಅದ್ಭುತವಾದ ಶಕ್ತಿಯನ್ನು ಪ್ರಶಂಸಿಸಿದೆ., ಈ ಶಕ್ತಿಯಿಂದ ಅಗ್ನಿಯು ಸಕಲವಿಧವಾದ ಯಜ್ಞಕರ್ಮಗಳಿಗೂ ಅಧಿಪತಿಯಾಗಿ ಮೆರೆಯುತ್ತಾನೆ.

ಕಾವ್ಯಾನಿ—ಕವೇಃ ಕ್ರಾಂತದರ್ಶಿನಃ ಪ್ರಗಲ್ಭಸ್ಯ ಕರ್ಮಾಣಿ । ಮೇಧಾವಿಯೂ ಶಕ್ತಿಯುತನೂ ಆದ ತನ್ನ ಹವಿರ್ವಹನಾದಿಕಾರ್ಯಗಳನ್ನು.

ಬಟ್—ಬಟ್, ಶ್ರತ್, ಮತ್ರಾ ಇತ್ಯಾದಿ ಆರು ಸತ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩—೩) ಬಟ್ ಎಂದರೆ ಖಂಡಿತವಾಗಿಯೂ ಎಂದರ್ಥ.

ಕಾವ್ಯಾನಿ ಬಟ್ ಅಧತ್ತ—ಹವಿರ್ವಹಾನಾದಿ ಕಾರ್ಯಗಳಿಗೆ ಇತರಾರೂ ಸಮರ್ಥರಲ್ಲದೇ ಇರುವುರಿಂದಲೂ, ದೇವತೆಗಳಿಗೂ ಮಾನವರಿಗೂ ಪರಸ್ಪರವಾಗಿ ಸಂಬಂಧವನ್ನು ಕಲ್ಪಿಸಿ ದೇವಮಾನವಾದಿ ಸಕಲರಿಗೂ ಸೌಖ್ಯವನ್ನೂ ತೃಪ್ತಿಯನ್ನೂ ಒಟ್ಟಿಗೆ ಉಂಟುಮಾಡಲು ಅಗ್ನಿಯೊಬ್ಬನಿಗೆ ಮಾತ್ರ ಈ ಸಾಮರ್ಥ್ಯವಿರುವುದರಿಂದಲೂ ಅಗ್ನಿಯೇ ಹವಿರ್ವಹನಾದಿ ಕಾರ್ಯಗಳನ್ನು ನೆರವೇರಿಸಬೇಕೆಂದು ದೇವತೆಗಳು ಪ್ರಾರ್ಥಿಸಿದಾಗ ಅಗ್ನಿಯು (ಋ. ಸಂ. ೧೦—೫೧) ಈ ಮಹತ್ಕಾರ್ಯಕ್ಕೆ ಒಪ್ಪಿಗೆ ಈಯುತ್ತಾನೆ, ಆದರೆ ಉತ್ಪನ್ನನಾದೊಡನೆಯೇ ಈ ಮಹತ್ಕಾರ್ಯವನ್ನು ಸಾಧಿಸುವುದು ಅತ್ಯಾಶ್ಚರ್ಯಕರವಾದ ವಿಷಯ ಇತರ ಸಂದರ್ಭಗಳಲ್ಲೂ—

ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।
(ಋ. ಸಂ. ೧೦—೧೧೦—೧೧; ಅ. ವೇ. ೫—೧೨—೧೧; ವಾ. ಸಂ. ೨೯—೩೬)

ಎಂಬುದಾಗಿ ನಾನಾ ಶ್ರುತಿಗಳಲ್ಲಿ ಈ ಮಾಹಾತ್ಮ್ಯವು ವರ್ಣಿತವಾಗಿರುವಂತೆಯೇ ಇಲ್ಲೂ ಪ್ರಶಂಸಿತವಾಗಿದೆ.

ಧಿಷಣಾ—ಶ್ಲೋಕಃ, ಧಾರಾ, ಇಳಾ ಇತ್ಯಾದಿ ಐವತ್ತೇಳು ವಾಙ್ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨—೨೨) ಧಿಷಣಾ ಎಂದರೆ ವಾಕ್ಕು ಎಂದರ್ಥವಾಗುತ್ತದೆ. ಧಿಷಣಾ ವಾಕ್ ಧಿಷೇರ್ದಧಾತ್ಯರ್ಥೇ। ಧೀ ಸಾದಿನೀತಿ ವಾ। (ನಿ. ೮—೩) ಹಿಡಿದಿರುತ್ತದೆ ಎಂದಭಿಪ್ರಾಯವನ್ನು ಕೊಡುವ ಧಿಷ್ ಧಾತುವಿನಿಂದ ನಿಷ್ಪನ್ನವಾಗಬಹುದು. ಅಥವಾ ಬುದ್ಧಿಯನ್ನು ವಿಸ್ತರಿಸುತ್ತದೆ ಎಂದರೆ ಅರ್ಥವನ್ನು ವಿಶದವಾಗಿ ತಿಳಿಸುತ್ತದೆ ಎಂದಾದರೂ ಆಗಬಹುದೆಂದು ನಿರುಕ್ತಕಾರರ ನಿರ್ವಚನವು.

ಅಪಶ್ಚ ಧಿಷಣಾ ಚ ಮಿತ್ರಂ ಸಾಧನ್—ಇದು ವೈದ್ಯುತಾಗ್ನಿಯ ಪ್ರಶಂಸೆಯಾದುದರಿಂದ, ಮೇಘಸ್ಥವಾದ ಉದಕಗಳೂ ಗುಡುಗುರೂಪದ ವಾಕ್ಕೂ ಈ ಅಗ್ನಿಯನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತವೆ ಎಂಬುದಾಗಿ ಸಾಯಣರು ಅನ್ವಯವನ್ನು ಮಾಡುತ್ತಾರೆ. ಈ ರೀತಿಯ ಅರ್ಥಕ್ಕೆ ಬೇರೆಕಡೆಯ ಶ್ರುತಿವಾಕ್ಯವನ್ನೂ ಉದಹರಿಸಬಹುದು.

ತಸ್ಯೆ ದೇವಾಃ ಪೃಥಿವೀ ದ್ಯೌರುತಾಪೋಽರಣಯನ್ನೋಷಧೀಃ ಸಖ್ಯೇ ಅಸ್ಯ ।
(ಋ. ಸಂ. ೧೦—೮೮—೨)

ಎಂಬ ಸ್ಥಳಗಳಲ್ಲಿ ಉದಕಾದಿಗಳು ಅಗ್ನಿಯ ಮೈತ್ರಿಯನ್ನು ಸಂಪಾದಿಸಿ ರಮಿಸಿದವು ಎಂದು ಹೇಳಿರುವುದರಿಂದ ಇಲ್ಲಿಯೂ ಸಹ ಆ ಅರ್ಥವನ್ನು ಮಾಡಬಹುದು ಆದರೆ ಸ್ಕಂದಸ್ವಾಮಿಗಳು ಅಪ್ ಶಬ್ದೋಽತ್ರ ಆಪ್ನೋತೇರ್ವ್ಯಾಪ್ತಿ-ವಚನೋ ನೋದಕವಚನಃ । ಧಿಷಣೇತಿ ವಾಙ್ನಾಮ । ಸ್ತುತಿಲಕ್ಷಣಾ ವಾಕ್, ವ್ಯಾಪ್ತ್ಯಶ್ಚಾಹುತಯಃ ಅಗ್ನಿಂ ಮಿತ್ರಂ ಸಾಧನ್ ಸಾಧಯಂತಿ । ಕುರ್ವಂತೀತ್ಯರ್ಥಃ । ಅಪ್ ಶಬ್ದಕ್ಕೆ ಇಲ್ಲಿ ಉದಕವೆಂದು ಅರ್ಥವಲ್ಲ. ವ್ಯಾಪಿಸು ಎಂಬ ಅರ್ಥದಲ್ಲಿ ಉಪಯೋಗಿಸಿರುವುದರಿಂದ ವ್ಯಾಪ್ತವಾದ ಆಹುತಿಗಳೂ, ಸ್ತುತಿವಾಕ್ಕುಗಳೂ ಸಹ ಅಗ್ನಿಯನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತವೆ ಎಂದಭಿಪ್ರಾಯವೆಂದು ತಮ್ಮ ವ್ಯಾಖ್ಯಾನದಲ್ಲಿ ವಿವರಿಸಿರುತ್ತಾರೆ.

ದೇವಾ ಅಗ್ನಿಂ ಧಾರಯನ್ ದ್ರವಿಣೋದಾಂ—ಈ ವಾಕ್ಯಕ್ಕೆ ಎರಡುವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಮೊದಲನೆಯದಾಗಿ ದೇವಾಃ—ಋತ್ವಿಕ್ಕುಗಳು, ಅಗ್ನಿಂ—ಅಗ್ನಿಯನ್ನು, ದ್ರವಿಣೋದಾಂ—ಧನದ ದಾತನನ್ನಾಗಿ, ಧಾರಯನ್—ಗಾರ್ಹಪತ್ಯಾದಿ ರೂಪಗಳಿಂದ ಪೂಜಿಸಿ ಇಟ್ಟುಕೊಂಡರು. ಅಥವಾ, ಎರಡನೆಯದಾಗಿ, ದೇವಾಃ—ಇಂದ್ರಾದಿ ದೇವತೆಗಳು, ಅಗ್ನಿಂ—ಅಗ್ನಿಯನ್ನು, ದ್ರವಿಣೋದಾಂ—ಹವಿಸ್ಸಿನರೂಪದ ಧನದಾತನನ್ನಾಗಿ, ಧಾರಯನ್—ಇರಿಸಿಕೊಂಡರು. ದ್ರವಿಣ ಶಬ್ದಕ್ಕೆ ಹವಿಸ್ಸೆಂಬ ಅರ್ಥವೂ ಪ್ರಸಿದ್ಧವಾಗಿರುವುದರಿಂದ ಎರಡನೆಯ ಅರ್ಥವೂ ಸಾಧ್ಯವಾಗುತ್ತದೆ.

ಹವೀಂಷಿ ದ್ರವಿಣಂ ಪ್ರಾಹುರ್ಹವಿಷೋ ಯತ್ರಜಾಯತೇ ।
ದಾತಾರಾಶ್ಚರ್ತ್ವಿಜಸ್ತೇಷಾಂ ದ್ರವಿಣೋದಾಸ್ತತಃ ಸ್ವಯಂ ॥
(ಬೃಹದ್ದೇವತಾ ೩–೬೩).

ಹವಿಸ್ಸಿಗೆ ದ್ರವಿಣವೆಂಬ ಹೆಸರು ಪ್ರಸಿದ್ಧವಾಗಿರುವುದರಿಂದಲೂ ಋತ್ವಿಕ್ಕುಗಳು ಹವಿಸ್ಸಿನ ದಾತರಾದ್ದರಿಂದಲೂ ಇವರಿಗೆ ದ್ರವಿಣೋದಾಃ ಎಂಬ ಕೀರ್ತಿಯು ಇರುವುದು. ಅಗ್ನಿಯು ಸಕಲ ಯಜ್ಞಗಳಿಗೂ ಶ್ರೇಷ್ಠನಾದ ಋತ್ವಿಕ್ಕಾದುದರಿಂದಲೂ-ದೇವತೆಗಳಿಗೆಲ್ಲಾ ಹವಿಸ್ಸನ್ನು ಹಂಚುವವನಾದುದರಿಂದಲೂ, ದೇವಾಃ, ಇಂದ್ರಾದಯಃ ಅಗ್ನಿಂ ದ್ರವಿಣೋದಾಃ ಧಾರಯನ್ ಎಂಬ ಅನ್ವಯವೂ ಸಾಧುವಾಗಿರುವುದು. ಇದಕ್ಕೆ ಪ್ರಮಾಣವಾಗಿ,

ಅಹರಹರ್ಜಾಯತೇ ಮಾಸಿ ಮಾಸ್ಯಥಾ ದೇವಾ ದಧಿರೇ ಹವ್ಯವಾಹಂ ।
(ಋ. ಸಂ. ೧೦—೫೨—೩
ಮಾಂ ದೇವಾ ದಧಿರೇ ಹವ್ಯವಾಹಮಪಮ್ಲುಕ್ತಂ ಬಹು ಕೃಚ್ಛ್ರಾ ಚರಂತಂ ।
( ಋ. ಸಂ. ೧೦—೫೨—೪ )

ಎಂಬ ಇತರ ಶ್ರುತಿವಾಕ್ಯಗಳೂ ಪ್ರಮಾಣವಾಗಿವೆ.

ಮಹಾತ್ಮನಾದ ಅಗ್ನಿಯು ನಿರ್ಬಂಧವಿಲ್ಲದ್ದೂ, ವಿಸ್ತೃತವಾದುದೂ ಆದ ಅಂತರಿಕ್ಷದಲ್ಲಿ ವೃದ್ಧಿಯನ್ನು ಹೊಂದುತ್ತಾನೆ. ಹೇಗೆಂದರೆ, ಪ್ರಭೂತವಾದ ಅನ್ನವುಳ್ಳ ಉದಕಗಳು ಅಗ್ನಿಯನ್ನು ಪ್ರವೃದ್ಧನಾಗುವಂತೆ ಮಾಡುತ್ತವೆ. ಈ ರೀತಿ ಪ್ರವೃದ್ಧನಾದ

ಅಗ್ನಿಯು ಉದಕದ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿದ್ದು, ಪ್ರವಹಿಸುವ ಸ್ವಭಾವವುಳ್ಳವೂ, ಭಗಿನೀರೂಪದಲ್ಲಿರುವುವೂ ಆದ ನದಿಗಳಿಗೆ ಹೇತುಭೂತವಾದ ಉದಕದಲ್ಲಿ ಸುಪ್ತನಾಗಿ ಮಲಗಿರುತ್ತಾನೆ.

**ಮಹಾನ್ ಅನಿಬಾಧೇ ಉರೌ ವವರ್ಧ**—ಮಹಾತ್ಮನಾದ ಈ ಅಗ್ನಿಯು ವಿಸ್ತಾರವಾದುದೂ, ಯಾವ ವಿಧವಾದ ಬಾಧೆಗಳೂ (ತಡೆಯೂ) ಇಲ್ಲದಿರುವುದೂ ಆದ ಅಂತರಿಕ್ಷದಲ್ಲಿ ಬೆಳೆಯುತ್ತಾನೆ ಅಥವಾ ವೃದ್ಧಿಯನ್ನು ಹೊಂದುತ್ತಾನೆ. ಎಂದರೆ ವಿಸ್ತಾರವಾದ ಅಂತರಿಕ್ಷದಲ್ಲಿ ವಿದ್ಯುತ್ಪ್ರಕಾಶವು ಬಹಳವಾದ ಕಾಂತಿಯಿಂದ ಬೆಳಗುತ್ತದೆ.

**ಹಿ ಪೂರ್ವೀಃ ಯಶಸಃ ಆಪಃ ಅಗ್ನಿಂ ಸಂ (ವರ್ಧಯಂತಿ)**—ಓಷಧಿವನಸ್ಪತಿಗಳಿಗೂ ಅವುಗಳ ಮೂಲಕ ಅನ್ನಾದ್ಯಾಹಾರಗಳಿಗೂ ಕಾರಣಗಳಾದ ಪ್ರಭೂತವಾದ ಉದಕಗಳು ಅಗ್ನಿಯನ್ನು ಪ್ರವೃದ್ಧಿಯಾಗುವಂತೆ ಮಾಡುವವು. ಇಲ್ಲಿ ಓಷಧಿವನಸ್ಪತಿಗಳು ಉದಕದಿಂದಲೇ ಉತ್ಪನ್ನವಾಗಿ ವೃದ್ಧಿಯಾಗುವುವು. ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರಗಳು ಒದಗುವುವು. ಆದುದರಿಂದ ಇಲ್ಲಿ ಯಶಸಃ ಅನ್ನವುಳ್ಳ ಎಂಬ ಶಬ್ದವನ್ನು ಆಪಃ—ಉದಕಗಳು ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಉಪಯೋಗಿಸಿದೆ. ಇಂತಹ ಉದಕಗಳು ಮೇಘಗಳಲ್ಲಿ ಅತಿ ಹೆಚ್ಚಾದ ಪ್ರಮಾಣದಲ್ಲಿರುವುದರಿಂದ ಅಗ್ನಿಯು ವೃದ್ಧಿಯಾಗುವನು ಎಂದು ಹೇಳಿದೆ. ಸಾಧಾರಣವಾಗಿ ಅಲ್ಪಸ್ವಲ್ಪ ತೆಳುವಾದ ಮೇಘಗಳಿದ್ದರೆ ಹೆಚ್ಚಾಗಿ ವೃಷ್ಟಿಯಾಗುವ ಸಂಭವವಿರುವುದಿಲ್ಲ. ಅಂತಹ ಮೋಡದಲ್ಲಿ ಮಿಂಚೂ ಇರುವುದಿಲ್ಲ. ಆದರೆ ಬಹಳ ಹೆಚ್ಚಾಗಿ ನೀರಿನಿಂದ ಕೂಡಿದ ನೀಲವರ್ಣವುಳ್ಳ ಮೇಘಗಳು ಒಂದುಕಡೆ ಗುಂಪಾಗಿ ಸೇರುವಾಗ ಹೆಚ್ಚಾಗಿ ವೃಷ್ಟಿಯಾಗುವುದಲ್ಲದೆ ಮಿಂಚು, ಸಿಡಿಲು, ಗುಡುಗು ಎಲ್ಲವೂ ಇರುವುದು. ಕಪ್ಪಗಿರುವ ಮೇಘಗಳ ಮಧ್ಯದಲ್ಲಿ ಅತಿ ಪ್ರಕಾಶಮಾನವಾದ ಮಿಂಚು ಆಗಾಗ ಹೊಳೆದು ಕಣ್ಮರೆಯಾಗುತ್ತಿರುವುದರಿಂದ ಅಗ್ನಿಯು ಪ್ರಭೂತವಾದ ಉದಕಗಳಲ್ಲಿ ಪ್ರವೃದ್ಧಮಾನನಾಗುವನೆಂದು ಇಲ್ಲಿ ವರ್ಣಿಸಿದೆ.

**ಪೂರ್ವೀಃ**—ಪುರುಶಬ್ದವು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ.೩–೧೩) ಪೂರ್ವೀಃ ಎಂದರೆ ಬಹಳವಾದ ಎಂದರ್ಥವು.

**ಯಶಸಃ**—ಯಶಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩–೯) ಈ ಶಬ್ದವೂ ಪೂರ್ವೀಃ ಎಂಬ ಶಬ್ದವೂ ಆಪಃ ಎಂಬ ಶಬ್ದಕ್ಕೆ ವಿಶೇಷಣ ಪದಗಳಾಗಿವೆ.

**ಅಗ್ನಿಃ ಋತಸ್ಯ ಯೋನೌ ಸ್ವಸೄಣಾಂ ಜಾಮೀನಾಂ ಅಪಸಿ ದಮೂನಾಃ ಅಶಯೇತ್—ಅಯಮಗ್ನಿಃ ಉದಕಸ್ಯ ಸ್ಥಾನೇಽನ್ತರಿಕ್ಷೇ ಸ್ಥಿತಃ ಸ್ವತಃ ಸರಂತೀನಾಂ ಭಗಿನೀಸ್ಥಾನೀಯಾನಾಂ ಹೇತುಭೂತೇ ಅಪಸಿ ದಾಂತಮನಾಃ ಸನ್ ಶೇತೇ** ।ಈ ಅಗ್ನಿಯು ಉದಕಕ್ಕೆ ಸ್ಥಾನಭೂತವಾದ ಅಂತರಿಕ್ಷದಲ್ಲಿ (ಮೇಘರೂಪದಿಂದ) ಸಂಚರಿಸುತ್ತಿರುವ ತನಗೆ ಸಹೋದರಿಯರಾದ ಉದಕಗಳಲ್ಲಿ ಯಾವ ವಿಧವಾದ ಚಲನವಲನಗಳೂ ಇಲ್ಲದೆ ಶಾಂತನಾಗಿ ಮಲಗಿದಾನೆ. ಎಂದರೆ ಹಿಂದೆ ನೀಲವರ್ಣದಿಂದಿರುವ ಮೇಘಗಳ ನಡುವೆ ವೃಷ್ಟಿಕಾಲದಲ್ಲಿ ಮಿಂಚಿನ ರೂಪದಿಂದ ಗೋಚರನಾಗುತ್ತಿರುವ ಅಗ್ನಿಯು ಈಗ ಎಂದರೆ ಮಳೆಯಿಲ್ಲದೆ ಇರುವ ಕಾಲದಲ್ಲಿ ಮೇಘಗಳ ನಡುವೆ ಉದಕಗಳಲ್ಲಿ ಯಾವ ವಿಧವಾದ ಪ್ರಕಾಶವನ್ನು ವ್ಯಕ್ತಪಡಿಸದೆ ಅಂತರ್ಗತನಾಗಿ ಯಾರಿಗೂ ಗೋಚರನಾಗದೆ ಸುಮ್ಮನೆ ಇರುವನು. ಮಳೆ ಇಲ್ಲದೆ ಮೇಘಗಳು ಮಾತ್ರ ಇರುವಾಗ ಮಿಂಚುಗಳು ಇರುವುದಿಲ್ಲ. ಆದರೂ ಎಂದರೆ ನಮಗೆ ಮಿಂಚಿನ ರೂಪದಲ್ಲಿ ಕಾಣಿಸದಿದ್ದರೂ ಅಗ್ನಿಯು ಮೇಘಗಳ ಉದಕದಲ್ಲಿ ಕಣ್ಮರೆಯಾಗಿ ಇರುವನೆಂದು ಅಭಿಪ್ರಾಯವು.

**ಋತಸ್ಯ**—ಋತಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿದೆ. ಮತ್ತು **ಋತಸ್ಯ ಯೋನಿಃ** ಎಂಬ ಎರಡು ಶಬ್ದಗಳೂ ಸೇರಿ ಉದಕವೆಂಬ ಅರ್ಥದಲ್ಲಿ ಮೇಲೆ ಹೇಳಿದ ೧೦೧ ಉದಕನಾಮಗಳ ಮಧ್ಯದಲ್ಲಿಯೇ ಪಠಿತವಾಗಿದೆ. (ನಿ. ೨೧೪) ಋತಶಬ್ದಕ್ಕೆ ಯಜ್ಞ ಮೊದಲಾದ ಅನೇಕಾರ್ಥಗಳಿದ್ದರೂ ಇಲ್ಲಿ ಉದಕವೆಂದೇ ಅರ್ಥವು. ಈ ಋಕ್ಕಿನಲ್ಲಿ **ಋತಸ್ಯ ಯೋನೌ** ಎಂದರೆ ಉದಕಗಳಿಗೆ (ಮೇಘಗಳು ಗುಂಪಾಗಿ ಸೇರುವ ಸ್ಥಳ) ಮೂಲಸ್ಥಾನವಾದ ಅಂತರಿಕ್ಷವೆಂದು ಅರ್ಥವು.

**ಸ್ವಸೃಣಾಂ ಸರಣಶೀಲಾನಾಂ** । ಸ್ವಸೃಶಬ್ದಕ್ಕೂ ಜಾಮಿ ಭಗನೀ ಎಂದರ್ಥವಿರುವುದರಿಂದ ಜಾಮಿಶಬ್ದಕ್ಕೆ ಭಗಿನೀ ಎಂಬರ್ಥವನ್ನು ಹೇಳಿ ಸ್ವಸೃಶಬ್ದಕ್ಕೆ ಸರಣಶೀಲವಾದ ಎಂದರೆ ಅಂತರಿಕ್ಷದಲ್ಲಿ ಗಾಳಿಯ ಹೊಡೆತದಿಂದ (ಮೇಘಗಳು) ಇತ್ತಲಿಂದತ್ತ ಚಲಿಸುವ ಸ್ವಭಾವವುಳ್ಳ ಎಂದರ್ಥ ಮಾಡಿ ಜಾಮೀನಾಂ ಎಂಬ ಪದಕ್ಕೆ ವಿಶೇಷಣವನ್ನಾಗಿ ಉಪಯೋಗಿಸಿದೆ.

**ಜಾಮೀನಾಂ**— ಜಾಮಿಶಬ್ದವು ಉದಕನಾಮಗಳಲ್ಲಿಯೂ ಪಠಿತವಾಗಿದೆ (ನಿ. ೨-೨೪). ಆದರೆ ಇಲ್ಲಿ ಜಾಮೀನಾಂ ಎಂಬ ಶಬ್ದಕ್ಕೆ ಭಗಿನೀಸ್ಥಾನೀಯಾನಾಂ—ಸಹೋದರಿಯರಂತಿರುವ ಎಂದು ಅರ್ಥಮಾಡಿದಾರೆ. ಯಾಸ್ಕರು ತಮ್ಮ ನಿರುಕ್ತದಲ್ಲಿ—

> **ನ ಜಾಮಯೇ ಭಗಿನ್ಯೈ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮುಪತ್ಯಂ ಜಮತೇರ್ವಾ ಸ್ಯಾದ್ಗತಿ-**
> **ಕರ್ಮಣೋ ನಿರ್ಗಮನಪ್ರಾಯಾ ಭವತಿ ॥**
>
> (ನಿ. ೩-೬)

ಎಂದರೆ ಜಾಮಿಶಬ್ದಕ್ಕೆ ಭಗಿನೀ (ಸಹೋದರಿ) ಎಂದರ್ಥ. ಏಕೆಂದರೆ, ಈ ಸ್ತ್ರೀಯಲ್ಲಿ ಇತರರು (ಭರ್ತೃವು) ಪುತ್ರರನು ಉತ್ಪಾದನೆ ಮಾಡುವುದರಿಂದ ಜಾಮಿ ಎಂದು ಹೆಸರು. ಅಥವಾ ಜಾಮಿಶಬ್ದವು ಗಮನಾರ್ಥವುಳ್ಳ ಜಮತಿ ಧಾತುವಿನಿಂದ ನಿಷ್ಪನ್ನವಾಗಿರುವ ಕಾರಣ ಈ ಸ್ತ್ರೀಯು ತಾನು ವಿವಾಹಾನಂತರ ತಾನು ಹುಟ್ಟಿದ ಮನೆಯನ್ನು ಬಿಟ್ಟು ಭರ್ತೃವಿನ ಮನೆಗೆ ಹೋಗುವವಳಾದ್ದರಿಂದ ಸಹೋದರಿಗೆ ಜಾಮಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿರುವರು. ಈ ಋಕ್ಕಿನಲ್ಲಿ ಭಗಿನೀ ಅಥವಾ ಉದಕವೆಂಬ ಯಾವ ಅರ್ಥವನ್ನಾದರೂ ಹೇಳಬಹುದು. ಅಗ್ನಿಗೆ ಉದಕಗಳು ಹೇಗೆ ಭಗಿನಿಯರಾದವು ಎಂದರೆ ಅಗ್ನಿಗೂ ಉದಕಗಳಿಗೂ ಉತ್ಪತ್ತಿಸ್ಥಾನವು ಅಂತರಿಕ್ಷವಾಗಿರುವುದರಿಂದ ಅಗ್ನಿಗೆ ಉದಕಗಳು ಅಥವಾ ನದಿಗಳು ಭಗಿನಿಯರೆಂದು ಇಲ್ಲಿ ವರ್ಣಿಸಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ

ಎರಡನೆಯ ಖಂಡ ಸಮಾಪ್ತವಾಗಿದೆ.

# ಅಥ ತೃತೀಯ ಖಂಡಃ

## ಮೂರನೆಯ ಖಂಡವು

ಮೇದ್ಯಂತು ತೇ ವಹ್ನಯೋ ಯೋಭಿರೀಯಸೇಽರಿಷ್ಯಣ್ಯನ್ವೀಳಯಸ್ವಾ ವನಸ್ಪತೇ। ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ॥ (ಋ. ಸಂ. ೨-೩೭-೩) ಮೇದ್ಯಂತು ತೇ ವಹ್ನಯೋ ವೋಢಾರೋ ಯೈರ್ಯಾಸ್ಯರಿಷ್ಯನ್ ದೃಢೀಭವಾಯೂಯ ಧೃಷ್ಣೋ ಅಭಿಗೂರ್ಯ ತ್ವಂ ನೇಷ್ಟ್ರೀ-ಋಾದ್ಧಿಷ್ಯಾದ್ಧಿಷ್ಣ್ಯೋ ಧಿಷಣ್ಯೋ ಧಿಷಣಾಭವೋ ಧಿಷಣಾ ವಾಗ್ ಧಿಷೇರ್ದಧಾತ್ಯರ್ಥೇ ಧೀಸಾದಿನೀತಿ ದಾ ಧೀಸಾನಿನೀತಿ ವಾ ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ ವನಂ ವನೋತೇಃ ಪಿಬರ್ತುಭಿಃ ಕಾಲೈಃ ॥ ೩ ॥

ಮೇದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ವೀಳಯಸ್ವಾ
ವನಸ್ಪತೇ । ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ
ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ॥

[ಋ. ಸಂ. ೨—೧—೮]

ಅಗ್ನಿಗೂ ಸೋಮಪಾನವಿಹಿತವಾಗಿದೆಯೆಂದು ಹಿಂದಿನ ಖಂಡದಲ್ಲಿ ಹೇಳಿದೆ. ಅದಕ್ಕೆ ಈಗ ಉದಾಹರಣೆ ತೋರಿಸುತ್ತಾರೆ. ಇಲ್ಲಿ 'ವನಸ್ಪತೇ, ದ್ರವಿಣೋದಃ ಪಿಬ ಋತುಭಿಃ' ಎಂದು ವನಸ್ಪತಿ ಶಬ್ದದ ಸಾಮಾನಾಧಿಕರಣ್ಯ ದ್ರವಿಣೋದ ಶಬ್ದಕ್ಕೆ ಹೇಳಿರುವುದರಿಂದ ಅವುಗಳಿಗೆ ವಿಶೇಷಣ ವಿಶೇಷ್ಯಭಾವ ತೋರುತ್ತದೆ. ಸೋಮಪಾನಕ್ಕೋಸ್ಕರ ವನಸ್ಪತಿಯನ್ನು ಸಂಬೋಧಿಸಿರುತ್ತಾರೆ. ವನಸ್ಪತಿಯೆಂದರೆ ಅಗ್ನಿಯೆಂದು ನಿಶ್ಚಿತವಾದುದರಿಂದ ದ್ರವಿಣೋದಶಬ್ದವು ಅಗ್ನಿಯನ್ನೇ ಪ್ರತಿಪಾದಿಸುತ್ತದೆಂದು ವ್ಯಕ್ತವಾಗುತ್ತದೆ. ಆದುದರಿಂದ ದ್ರವಿಣೋದ ಅಂದರೆ ಇಂದ್ರನಾಗುವುದಿಲ್ಲ. ಪೂರ್ವಪಕ್ಷಿಯು ಸೋಮಪಾನದಿಂದ ಇಂದ್ರನನ್ನೇ ಸ್ತುತಿಸುವುದರಿಂದಲೂ. ಅವನಿಗೋಸ್ಕರವೇ ಸೋಮಸಂಸ್ಕಾರ ಮಾಡುವುದರಿಂದಲೂ, ಇಂದ್ರನೇ ಸೋಮಪಾನ ಮಾಡುವವನಾದುದರಿಂದಲೂ, ದ್ರವಿಣೋದ ಅಂದರೆ ಇಂದ್ರನೇ ಆಗುತ್ತಾನೆಂದುದೂ ಯುಕ್ತವಲ್ಲ. ಸೋಮವು ಇತರ ದೇವತೆಗೋಸ್ಕರ ಹಿಂಡಲ್ಪಡುತ್ತದೆ. ಇತರ ದೇವತೆಗಳಿಗೋಸ್ಕರ ಸಂಸ್ಕರಿಸುತ್ತಾರೆ. ಮತ್ತು ಇತರ ದೇವತೆಗಳಿಗೋಸ್ಕರ ತರುತ್ತಾರೆ ತಂದು ಹೋಮ ಮಾಡುತ್ತಾರೆ. 'ಅಭಿ ತ್ಯಂ ದೇವಂ (ಯ. ವಾ. ಸಂ. ೪–೫) ಎಂದು ಸಾವಿತ್ರ್ಯೇಷ್ಟಿಕ್ಕೋಸ್ಕರ ಹಿಂಡುತ್ತಾರೆ. 'ಅಂಶುರಂ ಶುಸ್ತೇ ದೇವ (ಯ. ವಾ. ಸಂ. ೫–೭) ಎಂದು ಇಂದ್ರನಿಗೋಸ್ಕರ ಸಂಸ್ಕರಿಸುತ್ತಾರೆ. ಮಿತ್ರಾವರುಣಾದಿ ನಾನಾ ದೇವತೆಗಳಿಗೆ ಹೋಮಿಸುತ್ತಾರೆ, ಹೀಗೆ ವಿಧಿಯನ್ನನುಸರಿಸಿ ಸೋಮತಂತ್ರಗತಿ ವಿಚಿತ್ರವಾಗಿರುತ್ತದೆ. ಆದುದರಿಂದ ಎಲ್ಲೆಲ್ಲಿ ಸೋಮವಿಚಾರವೋ ಅಲ್ಲಲ್ಲಿ ಇಂದ್ರನೆಂದು ವ್ಯಾಪ್ತಿ ಹೇಳಲು ಸಾಧ್ಯವಿಲ್ಲ. ಐಂದ್ರಾಗ್ನಗ್ರಹದಲ್ಲಿ (ಇಂದ್ರಾಗ್ನಿದೇವತಾಕವಾದ ಪಾತ್ರವಿಶೇಷ) ಪ್ರತ್ಯಕ್ಷವಾಗಿ 'ಇಂದ್ರಾಗ್ನೀ ಆಗತಂ ಸುತಂ' (ಋ. ಸಂ. ೩–೬–೧೧–೧) ಎಂದು ಅಗ್ನಿಯು ಇಂದ್ರನೊಡನೆ

ಸೋಮವನ್ನು ಸೇವಿಸುತ್ತಾನೆ. ಸೋಮವನ್ನು ಕೇವಲ ಅಗ್ನಿಗೋಸ್ಕರ 'ಅಗ್ನಯೇ ತ್ವಾ ರಾಯಸ್ಪೋಷಾಯ ತ್ವಾ' ಎಂದು ಹೇಳುವ ಯಜುರ್ವಾಕ್ಯವಿದೆ. ಆದುದರಿಂದ ಅಗ್ನಿಯೂ ಸೋಮಪಾನ ಮಾಡುತ್ತಾನೆ ಎಂದು ಸಿದ್ಧವಾಗುತ್ತದೆ.

ಮೇದ್ಯಂತು ತೇ ವಹ್ನಯೋ ಮೋಢಾರೋ ಯ್ಯೈರ್ಯಾಸ್ಯಾರಿಷನ್ ದೃಢೀಭವಾಯುಊಯಧೃಷ್ಣೋ । ಅಭಿಗೂರ್ಯ ತ್ವಂ ನೇಷ್ಟ್ರೀ-ಯಾದ್ಧಿಷ್ಣ್ಯಾತ್ । ಧಿಷ್ಣ್ಯೇ ಧಿಷಣ್ಯೇ ಧಿಷಣಾಭವಃ । ಧಿಷಣಾ ವಾಗ್ಧಿಷೇರ್ದಧಾತ್ಯರ್ಥೇ । ಧೀಸಾದಿನೀತಿ ವಾ । ಧೀಸಾನಿನೀತಿ ವಾ । ವನಸ್ಪತ ಇತ್ಯೇನ ಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ । ಪಿಬರ್ತುಭಿಃ ಕಾಲೈಃ ॥ ೩ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಾವ ಕುದುರೆಗಳಿಂದ ನೀನು ನಿತ್ಯವೂ ಸಂಚರಿಸುವೆಯೋ ಆ ನಿನ್ನ ಕುದುರೆಗಳು ತೃಪ್ತಿಹೊಂದಲಿ. ದ್ರವ್ಯವನ್ನು ದಾನಮಾಡುವ ಅಗ್ನಿಯೇ ನೀನು ಯಾರನ್ನೂ ಹಿಂಸೆಮಾಡದೆ ಈ ಕುದುರೆಗಳಿಂದ ಬಂದು ನಮ್ಮಿಂದ ಕೊಡಲ್ಪಡುವ ಸೋಮವನ್ನು ಕುಡಿಯಲು ದೃಢನಾಗು. ಸೋಮವನ್ನು ಬೆರಳಿನಿಂದ ಕೆದಕಿ ಎತ್ತಿಕೊಂಡು ನೇಷ್ಟ್ರೀಯ ಪ್ರದೇಶದಿಂದ ಋತುದೇವತೆಗಳೊಡನೆ ಪಾನಮಾಡು ಎಂದರ್ಥ. ಧಿಷ್ಣ್ಯ ಅಂದರೆ ಪ್ರದೇಶ. ಧಿಷ್ಣ್ಯ ಶಬ್ದವು ತ್ಪತ್ತಿಯನ್ನು ತೋರಿಸುತ್ತಾರೆ. ಧೀಸದ ಎಂಬುದು ಧಿಷ್ಣ್ಯ ಎಂದಾಗಿದೆ. ಧಿಷಣಾ ಎಂದರೆ ವಾಕ್. ಅದಕ್ಕೋಸ್ಕರ ಕುಳಿತಿರುವುದು ಯಾಗದ ಪ್ರದೇಶವಿಶೇಷ. ಅದರ ಹಿಂದೆ ಹೋತೃ ಕುಳಿತು ಸ್ತುತಿಸುತ್ತಾನೆ. ಧಿಷ ಧಾತು ದಧಾತ್ಯರ್ಥವನ್ನು ಕೊಡುತ್ತದೆ. ಶಬ್ದಾರ್ಥಗಳಿಗೆ ನಿತ್ಯಸಂಬಂಧವಿರುವುದರಿಂದ ವಾಕ್ ಅರ್ಥವನ್ನು ಧರಿಸಿರುತ್ತದೆ. ಅಥವಾ ಧೀಸಾದಿನೀ ಅಥವಾ ಧೀಸಾನಿನೀತಿ ಧಿಷಣಾ. ಧೀಃ ಅಂದರೆ ಪ್ರಜ್ಞಾ ಅಥವಾ ಕರ್ಮ. ಅದು ಇಲ್ಲಿ ಇರುತ್ತದೆ. ಅದನ್ನು ಇದು ಹೊಂದುತ್ತದೆ ಎಂಬ ಅರ್ಥವನ್ನಂಗೀಕರಿಸಿ ಧಿಷಣಾ ಎಂದಾಗಿದೆ. ಧೀ ಎಂಬುದು ಪೂರ್ವಪದ. ಸದ್ ಧಾತು ಅಥವಾ ಸನ ಧಾತು ಉತ್ತರಪದವೆಂದು ತಿಳಿಯಬೇಕು. ಈ ದ್ರವಿಣೋದವನ್ನು ವನಸ್ಪತೇ ಎಂಬ ಸಂಬೋಧನದಿಂದ ನಿರ್ದೇಶಿಸಿರುತ್ತಾರೆ ಆದುದರಿಂದ ಇದು ಅಗ್ನಿಗೆ ವಿಶೇಷಣವಾಗಿದೆಯೆಂದು ಸಿದ್ಧವಾಗುತ್ತದೆ. ವನಸ್ಪತಿ ಶಬ್ದವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಇವನು ಮರಗಳ ಮಧ್ಯದಲ್ಲಿದ್ದು ಅವುಗಳನ್ನು ಸುಡಲು ಸಮರ್ಥನಾಗಿದ್ದರೂ ಸುಡದಿರದಿರುವುದರಿಂದ ವೃಕ್ಷಾದಿಗಳನ್ನು ರಕ್ಷಿಸುವವನಾಗುತ್ತಾನೆ. ವನ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಸಂಭಜನ ಅಂದರೆ ಸೇವನಾರ್ಥ. ವನಧಾತುವಿಗೆ ಘಞ್ ಪ್ರತ್ಯಯ ಬಂದು ವನ ಎಂದಾಗಿದೆ. ಸಂಜ್ಞಾಪೂರ್ವಕವಿಧಿ ಅನಿತ್ಯವೆಂದುದರಿಂದ ವೃದ್ಧಿ ಬರಲಿಲ್ಲ. ಕಟ್ಟಿಗೆ, ಮರಮುಂತಾದುವುಗಳಿಗೋಸ್ಕರ ಸೇವಿಸಲ್ಪಡುವುದು ವನ ವೃಕ್ಷಾದಿಗಳು "ವನಂ ಪ್ರಸ್ರವಣೇ ಗೇಹೇ ಪ್ರವಾಸೇ ಮಾಸಿಕಾನನೇ" ಎಂದು ಹೈಮಕೋಶ. ಋತುಕಾಲವಾಚಕವಾದುದರಿಂದ ಕಾಲಾಭಿಮಾನ ದೇವತೆಗಳನ್ನು ತೆಗೆದುಕೊಳ್ಳಬೇಕು. ಹೀಗೆ ಸೂಕ್ತ, ಹವಿಸ್ಸನ್ನು ಹೊಂದುವುದರಿಂದ ಅಗ್ನಿಯೇ ದ್ರವಿಣೋದನಾಗುತ್ತಾನೆ. ಮಧ್ಯಮೋತ್ತಮಜ್ಯೋತಿಗೆ ದ್ರವಿಣೋದ ಎಂದು ಹೇಳಿದ್ದರೆ ಅದು ನಿಪಾತ ಅಂದರೆ ಗೌಣವೆಂದು ತಿಳಿಯಬೇಕು.

ಈರೀತಿ ಶ್ರೀ ನಿರುಕ್ತಭಾಷ್ಯದಲ್ಲಿ ಎಂಟನೆಯ ಅಧ್ಯಾಯದಲ್ಲಿ
ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು.

# ಅಥ ಚತುರ್ಥ ಖಂಡಃ

## ನಾಲ್ಕನೆಯ ಖಂಡವು

ಅಥಾತ ಆಪ್ರಿಯ ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾಪ್ರೀಭಿರಾ-ಪ್ರೀಣಾತೀತಿ ಚ ಬ್ರಾಹ್ಮಣಂ ತಾಸಾಮಿಧ್ಮಃ ಪ್ರಥಮಾಗಾಮೀ ಭವತೀಧ್ಮಃ ಸಮಿಂಧ-ನಾತ್ತಸ್ಯೈಷಾ ಭವತಿ || ೪ ||

ಅಥಾತ ಆಪ್ರಿಯಃ ||

ಅಥ ಶಬ್ದವು ವಿಶೇಷಾಧಿಕಾರವನ್ನು ತಿಳಿಸುತ್ತದೆ. ಅಥಃ ಶಬ್ದವು ಆನಂತರ್ಯವನ್ನು ತಿಳಿಸುತ್ತದೆ. ದ್ರವಿಣೋದ ಶಬ್ದದ ವಿಚಾರವಾದಮೇಲೆ ಆಪ್ರೀಸೂಕ್ತದಲ್ಲಿ ಹೇಳಿರುವ ಆಪ್ರೀ ಎಂಬ ನಾಮಧೇಯವಿರುವ ಇಧ್ಮಾದಿಗಳನ್ನು ಹೇಳುತ್ತಾರೆ ಎಂದರ್ಥ. ಯದ್ಯಪಿ ದೇವತಾನಾಮಧೇಯ ವಿಚಾರಮಾಡುತ್ತಿರುವಾಗ ತದ್ಭಿನ್ನವಾದ ಇಧ್ಮಾದಿಗಳ ವಿಚಾರಕ್ಕೆ ಪ್ರಸಕ್ತಿ ಇಲ್ಲ. ಆದರೂ ಪಾಠಕ್ರಮನಿಯಮದಿಂದ ವಿವಕ್ಷಿತ ಕ್ರಮವಿರುವುದರಿಂದ ದೇವತಾಪದ ಸಮಾಮ್ನಾಯದ ಮಧ್ಯದಲ್ಲಿ ಈ ಆಪ್ರಿಯಗಳನ್ನು ಅಂದರೆ ಇಧ್ಮಾದಿಗಳನ್ನು ವಿಚಾರಿಸಿರುತ್ತಾರೆ. ಪಾಠಕ್ರಮನಿಯಮವೇ ಪ್ರಬಲವೆಂದು ವಾರ್ತಿಕಕಾರರು ಹೇಳಿರುತ್ತಾರೆ.

ಕ್ರಮಪ್ರಯೋಜನಂ ನಾಮ್ನಾಂ ಶಾಕಪೂಣ್ಯುಪಲಕ್ಷಿತಮ್ ।
ಪ್ರಕಲ್ಪಯೇದನ್ಯದಪಿ ನ ಪ್ರಜ್ಞಾಮವಸಾದಯೇತ್ ॥

ಎಂದು ಅವರ ವಚನ. ಶಾಕಪೂಣಿನಿರುಕ್ತಕಾರರು ಪೃಥಿವೀನಾಮದಿಂದ ಆರಂಭಿಸಿ ತಾವಾಗಿ ಎಲ್ಲಾ ಸ್ಥಳದಲ್ಲಿಯೂ ಕ್ರಮ ಪ್ರಯೋಜನವನ್ನು ಹೇಳಿರುತ್ತಾರೆ. ಭೂಃ, ಭುವಃ, ಸ್ವಃ ಎಂಬ ಸ್ಥಾನಗಳು ಪಾಠಾನುಪೂರ್ವಿಯಿಂದ ನಿಯತವಾಗಿವೆ. ಅದರಂತೆ ಆಯಾಯ ಸ್ಥಾನವುಳ್ಳ ಅಗ್ನ್ಯಾದಿಗಳಿಗೂ ಆದೇ ಕ್ರಮವು ಅಂಗೀಕೃತವಾಗುತ್ತದೆ. ಕ್ರಮಪ್ರಯೋಜನವಿರುವುದ ರಿಂದಲೇ ಅಗ್ನಿಯು ಪೃಥಿವೀಸ್ಥಾನನಾದುದರಿಂದ ಮೊದಲು ವ್ಯಾಖ್ಯಾನಮಾಡುತ್ತೇವೆ ಎಂದು ಹಿಂದೆ ಪ್ರತಿಜ್ಞೆಮಾಡುವುದೂ ಉಪಪನ್ನವಾಗಿದೆ. ಮುಂದೆಯೂ " ತಾಸಾಂ ಇಧ್ಮಃ ಪ್ರಥಮಾಗಾಮೀ ಭವತಿ" ತೇಷಾಮಶ್ವಃ ಪ್ರಥಮಾಗಾಮೀ ಭವತಿ " " ತೇಷಾಂ ರಥಃ ಪ್ರಥಮಾಗಾಮೀ ಭವತಿ " ಎಂದು ಹೇಳಿರುವುದು ಯುಕ್ತವಾಗಿದೆ. ಆಯಾಯ ಪ್ರಾಧಾನ್ಯದಿಂದ ಮೊದಲು ಮೊದಲು ಹೇಳಿರುತ್ತಾರೆ. ಉದಾಹರಣೆಗೆ ಪೃಥಿವೀಸ್ಥಾನದಲ್ಲಿ ಕ್ರಮಪ್ರಯೋಜನ ಹೀಗೆ ಹೇಳಬಹುದು ಪಾರ್ಥಿವಜ್ಯೋತಿಸ್ಸಿಗೆ ಅಗ್ನಿಶಬ್ದದೊಡನೆ ಪ್ರಸಿದ್ಧವಾದ ಸಂಬಂಧವಿರುವಂತೆ ಜಾತವೇದ ಪದಕ್ಕಿರುವುದಿಲ್ಲ. ಜಾತವೇದ ಶಬ್ದಕ್ಕಿರುವಂತೆ ವೈಶ್ವಾನರ ಪದಕ್ಕಿರುವುದಿಲ್ಲ. ಗುಣಪ್ರಸಿದ್ಧ್ಯಾದಿಗಳಿಂದ ಅವು ವಿಪ್ರಕರ್ಷ ಹೊಂದುವುದರಿಂದ ಕ್ರಮವಾಗಿ ಗುಣಪ್ರಸಿದ್ಧ್ಯತಿಶಯವಿರುವವು ಗಳನ್ನೇ ಹೇಳಿರುತ್ತಾರೆ. ಇಧ್ಮಾದಿಗಳಿಗೆ ಅಗ್ನ್ಯಾದಿವ್ಯವಧಾನದಿಂದ ಅತಿವಿಪ್ರಕರ್ಷವಿರುವುದರಿಂದ ಆಮೇಲೆ ಹೇಳಿರುತ್ತಾರೆ. ಹೀಗೆ ಕ್ರಮಪ್ರಯೋಜನವನ್ನು ತಿಳಿಯಬೇಕು. ಪ್ರಕೃತ ಇಧ್ಮಾದಿಗಳಿಗೆ ಕೆಲವು ಗುಣಾಭಿಧಾನವಿರುವುದರಿಂದ ಅವುಗಳನ್ನು ನಿರ್ವಚನ ಮಾಡಲು ಆರಂಭಿಸಿರುತ್ತಾರೆ.

## ಆಪ್ರಿಯಃ ಕಸ್ಮಾತ್? ಆಪ್ನೋತೇಃ ಪ್ರೀಣಾತೇರ್ವಾ ||

ಅಭಿಧಾನ ನಿಯಮದಿಂದ ಅಭಿಧೇಯನಿಯಮ ವ್ಯಕ್ತವಾಗುವುದರಿಂದ ಮಾಡಲು ಆ ಪ್ರಿಯ ಶಬ್ದ ಆದುದು ಹೇಗೆಂದು ವಿಚಾರಿಸುತ್ತಾರೆ. ಆಪ (ಲೃ) ಧಾತುವಿಗೆ ರೀಜ್ ಪ್ರತ್ಯಯ ಬಂದು ಆಪ್ರೀ ಎಂದಾಗಿದೆ. ಪ್ರೀ ಧಾತುವಿಗೆ ಕ್ವಿಪ್‌ಪ್ರತ್ಯಯ ದಿಂದಲೂ ಈ ರೂಪವಾಗುತ್ತದೆ. ದೇವತಾರ್ಥವನ್ನು ತಿಳಿಸುವಾಗ ಕರ್ಮಣಿಯಲ್ಲಿ ಈ ಪ್ರತ್ಯಯಗಳು ಬಂದಿವೆಯೆಂದು ತಿಳಿಯಬೇಕು ಆಪ್ರಿಯ ಅಂದರೆ ಋಕ್ಕುಗಳು. ಋಕ್ಕಿನಲ್ಲಿ ಸ್ತುತಿಸಲ್ಪಡುವುದರಿಂದ ದೇವತೆಗಳೂ ಆಪ್ರಿಯಶಬ್ದವಾಚ್ಯ ಗಳಾಗುತ್ತವೆ.

## ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಮ್ ||

ಋಕ್ಸಂಬಧಿಯಾದುದರಿಂದ ದೇವತೆಗಳೂ ಆಪ್ರಿಯರಾಗುತ್ತಾರೆ ಎಂಬ ವಿಷಯದಲ್ಲಿ ಬ್ರಾಹ್ಮಣವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾರೆ. ಚಕಾರದಿಂದ ಇತೀಮಾ ಆಪ್ರೀದೇವತಾ ಎಂಬ ವಾಕ್ಯವನ್ನು ತೆಗೆದುಕೊಳ್ಳಬೇಕು. 'ಋಚಃ ಆಪ್ನುವಂತಿ, ಆಪ್ರೀಣಂತಿ ವಾ ದೇವತಾಃ ಇತಿ ಆಪ್ರಿಯಃ ಋಕ್ಕುಗಳು ದೇವತೆಗಳನ್ನು ಹೊಂದುತ್ತವೆ ಅಥವಾ ಸಂತೋಷಪಡಿಸುತ್ತವೆ ಎಂಬ ವ್ಯುತ್ಪತ್ತಿಯಿಂದ ಆಪ್ರಿಯ ಎಂದರೆ ದೇವತೆಗಳಾಗುತ್ತಾರೆ. ಆಪ್ಯಂತೇ, ಆಪ್ರೀಯಂತೇ ಇತಿ ಆಪ್ರಿಯಃ, ಎಂದು ನಿರ್ವಚನಮಾಡಿದರೆ ದೇವತೆಗಳನ್ನು ಹೊಂದಲು ಸಾಧನವಾದ ಇಧ್ಮಾದಿಗಳಾಗುತ್ತವೆ. ಹೀಗೆ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಆಪ್ರಿಯ ಪದವು ದೇವತೆಗಳನ್ನು ಪ್ರತಿಪಾದಿಸುತ್ತದೆ.

## ತಾಸಾಮಿಧ್ಮಃ ಪ್ರಥಮಗಾಮೀ ಭವತಿ | ಇಧ್ಮಃ ಸಮಿಂಧನಾತ್ | ತಸ್ಯೈಷಾ ಭವತಿ || ೪ ||

ಆಪ್ರೀಪದದಿಂದ ಸ್ವೀಕರಿಸಬೇಕಾದ ಅರ್ಥಗಳಲ್ಲಿ ಮೊದಲು ಇಧ್ಮ ಎಂಬುದು ಉಪಸ್ಥಿತವಾಗುತ್ತದೆ. ಇಧ್ಮಪೂರ್ವಕವಾಗಿ ಇಜ್ಯಾ ಪ್ರವೃತ್ತಿ ಇರುವುದರಿಂದ ಇಧ್ಮಕ್ಕೆ ಪ್ರಥಮಪ್ರವೃತ್ತಿ ಹೇಳಬೇಕು. ಇಧ್ಮಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಇಧ್ಯತೇಽ–ನೇನ ಅಗ್ನಿಃ ಇತಿ ಇಧ್ಮಃ. ಇದರಿಂದ ಅಗ್ನಿಯು ಪ್ರಜ್ವಲಿಸಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ ಇಧ್ಮ ಅಂದರೆ ಸಮಿಧಾದಿಗಳ ಆಗುತ್ತವೆ. ಯಜ್ಞವೇ ಇಧ್ಮ. ಜ್ವಲಿಸುವುದೂ ಇಧ್ಮವಾಗುತ್ತದೆ. ಸಮಿತ್ಕಲಾಪರೂಪ ಇಧ್ಮವನ್ನು ಹೇಲು ಮುಂದೆ ಹೇಳುವ ಪ್ರಧಾನಸ್ತುತಿಯು ಉದಾಹರಣೆಯಾಗುತ್ತದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ
ನಾಲ್ಕನೆಯ ಖಂಡವು ಸಮಾಪ್ತವಾದುದು.

## ಅಥ ಪಂಚಮ ಖಂಡಃ

### ಐದನೆಯ ಖಂಡವು

ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ಯಜಸಿ ಜಾತ-ವೇದಃ । ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ (ಋ. ಸಂ. ೧೦-೧೧೦-೧) ಸಮಿದ್ಧೋಽದ್ಯ ಮನುಷ್ಯಸ್ಯ ಗೃಹೇ ದೇವೋ ದೇವಾನ್ಯಜಸಿ ಜಾತವೇದ ಆ ಚ ವಹ ಮಿತ್ರಮಹಶ್ಚಿಕಿತ್ವಾಂಶ್ಚೇತನಾವಾಂಸ್ತ್ವಂ ದೂತಃ ಕವಿರಸಿ ಪ್ರಚೇತಾಃ ಪ್ರವೃದ್ಧಚೇತಾ ಯಜ್ಞೇಧ್ಮ ಇತಿ ಕಾತ್ಥಕ್ಯೋಽಗ್ನಿರಿತಿ ಶಾಕಪೂಣಿಸ್ತನೂನಪಾದಾಜ್ಯಂ ಭವತೀ ನಪಾದಿತ್ಯನನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ ಗೌರತ್ರ ತನೂರುಚ್ಯತೇ ತತಾ ಅಸ್ಯಾಂ ಭೋಗಸ್ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ಜಾಯತೇಽಗ್ನಿರಿತಿ ಶಾಕಪೂಣಿರಾಪೋಽತ್ರ ತನ್ವ ಉಚ್ಯಂತೇ ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ ತಸ್ಯೈಷಾ ಭವತಿ ॥ ೫ ॥

ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ಯಜಸಿ
ಜಾತವೇದಃ । ಆ ಚ ವಹ ಮಿತ್ರಮಹಶ್ಚಿಕಿತ್ವಾ ನ್ತ್ವಂ ದೂತಃ
ಕವಿರಸಿ ಪ್ರಚೇತಾಃ ॥ (ಋ. ಸಂ. ೮-೩-೮)

ಇಥ್ಮ ಪ್ರಾಧಾನ್ಯಸ್ತುತಿಗೆ ಇದು ಉದಾಹರಣೆ. ಇದು ಆಗ್ನೇಯಸೂಕ್ತವೆಂದು ಯಾಸ್ಕರ ಮತ. ಎಲೈ ಜಾತವೇದನೇ ನೀನು ಚನ್ನಾಗಿ ದೀಪ್ತನಾಗಿ ವಿಶಿಷ್ಟಯಾಗದ ಈ ಹಗಲಿನಲ್ಲಿ ಯಾಗಪ್ರವೃತ್ತರಾದ ತ್ರೈವರ್ಣಿಕರ ಯಜ್ಞಗೃಹದಲ್ಲಿ ಹವಿಸ್ಸನ್ನು ಕೊಡುವವನಾಗಿ ಹವಿಸ್ಸಿನಿಂದ ಪೂಜಿಸುವಿ. ಯಜ್ಞಾಂಗಭಾವವನ್ನು ಹೊಂದಿರುವಿ. ಆದುದರಿಂದ ಸ್ತುತ್ಯನೂ, ಚೇತನ ವಿಶಿಷ್ಟನೂ, ಆದ ನೀನು ನಮ್ಮ ಯಾಗದಲ್ಲಿಯೂ ದೇವತೆಗಳನ್ನು ಕರೆ. ನೀನು ಸಕಲಯಜವಯನರಿಗೆ ದೂತನಾಗಿರುವಿ. ಕ್ರಾಂತದರ್ಶಿಯೂ, ಪ್ರಕೃಷ್ಟಜ್ಞಾನವುಳ್ಳವನೂ ಆಗಿರುವಿ. ಋತ್ವಿಗ್ಯಜಮಾನರ ಸಾಯುಜ್ಯದಲ್ಲಿ ಕಾರಣನಾದುದರಿಂದ ನಮ್ಮ ಯಾಗದಲ್ಲಿಯೂ ದೇವತೆಗಳನ್ನು ಕರೆದು ಯಾಗಮಾಡಲು ಅರ್ಹನಾಗಿರುವಿ.

ಸಮಿದ್ಧೋ ಅದ್ಯ ಮನುಷ್ಯಸ್ಯ ಗೃಹೇ ದೇವೋ ದೇವಾನ್ಯಜಸಿ
ಜಾತವೇದ ಆ ಚ ವಹ ಮಿತ್ರಮಹಶ್ಚಿಕಿತ್ವಾನ್ ಚೇತನಾವಾನ್
ತ್ವಂ ದೂತಃ ಕವಿರಸಿ ಪ್ರಚೇತಾಃ ಪ್ರವೃದ್ಧಚೇತಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಚನ್ನಾಗಿ ದೀಪ್ತನಾಗಿ ಈಗ ಪ್ರತಿಮನುಷ್ಯರ ಯಜ್ಞಗೃಹದಲ್ಲಿ ಹವಿಸ್ಸನ್ನು ಕೊಡುವವನಾಗಿ ದೇವತೆಗಳನ್ನು ಪೂಜಿಸುವಿ. ಜಾತವೇದನೇ ನೀನು ದೇವತೆಗಳನ್ನು ಆಹ್ವಾನಮಾಡು. ಮಿತ್ರರನ್ನು ಗೌರವಿಸುವವನೂ ಚೇತನಾವಿಶಿಷ್ಟನೂ ಆದ ನೀನು ದೇವತೆಗಳ ದೂತನಾಗಿರುವಿ. ನೀನೇ ಕವಿಯಾಗಿ ಅಧಿಕಜ್ಞಾನವುಳ್ಳವನಾಗಿರುವಿ.

## ಯಜ್ಞೇಧ್ಮ ಇತಿ ಕಾತ್ಥಕ್ಯಃ ||

ಕತ್ಥಕನ ಪುತ್ರನಾದ ಕಾತ್ಥಕ್ಯ ಎಂಬ ಆಚಾರ್ಯರು ಯಜ್ಞದ ಇಧ್ಮವೆಂದು ತಿಳಿಯುತ್ತಾರೆ. ಯಾವ ಇಧ್ಮದ ಆಧಾನವು ಪ್ರತಿ ಪ್ರಣವದಲ್ಲಿಯೂ ಯಜ್ಞದಲ್ಲಿ ಹೇಳಿದೆಯೋ ಅದೇ ಈ ಮಂತ್ರದಲ್ಲಿ ಹೇಳಿದೆ. ಸಾಕ್ಷಾಲ್ಲಿಂಗಾದಿಗಳಿಂದ ಹೇಳದಿದ್ದರೂ ಪ್ರೈಷ ಬಲದಿಂದ ಇಧ್ಮವೇ ಆಗುತ್ತದೆ. 'ಸಮಿಧ್ಭ್ಯಃಪ್ರೇಷ್ಯಾ' ಎಂದು ಶ್ರುತವಾದುದರಿಂದ ಯಾವುದಕ್ಕೋಸ್ಕರ ಪ್ರೇಷ್ಯಾ ಹೇಳಿದೆಯೋ ಅದೇ ಹೋಮಿಸಬೇಕು. ಆದುದರಿಂದ ಇಧ್ಮಭಾವವನ್ನು ಹೊಂದಿದ ಅಗ್ನಿಯಿಂದ ಜ್ವಲಿಸಲ್ಪಟ್ಟ ಸಮಿತ್ತುಗಳ ಸಮುದಾಯವನ್ನೇ ವ್ಯವಹಿತವಾದರೂ 'ಸಮಿದ್ಧೋ ಅದ್ಯ' ಎಂಬ ಆಪ್ರೀಸೂಕ್ತವು ಹೇಳುತ್ತದೆ. ಐಷ್ಟಿಕಹೋತ್ರವಾಕ್ಯವೂ ಸಮಿತ್ತನ್ನೇ ಹೇಳುತ್ತದೆಂದು ಸ್ಪಷ್ಟಪಡಿಸುತ್ತದೆ. 'ಸಮಿಧೋಯಜ' ಎಂದು ಪ್ರೇಷಿತನಾದ ಹೋತೃವು "ಸಮಿಧಃ ಸಮಿಧೋ ಅಗ್ನ ಆಜ್ಯಸ್ಯ ವ್ಯಂತು" ಎಂದು ವಷಟ್ಕಾರಮಾಡ.ತ್ತಾನೆ. ಇದರಿಂದ ಯಜ್ಞೇಧ್ಮ ಎಂದು ಹೇಳಿರುವ ಕಾತ್ಥಕ್ಯವಚನವು ಯುಕ್ತವಾಗುತ್ತದೆ.

## ಅಗ್ನಿರಿತಿ ಶಾಕಪೂಣಿಃ ||

ದೇವತೆಗಳ ಮಧ್ಯದಲ್ಲಿ ಯಜ್ಞೇಧ್ಮ ಹೇಳುವುದು ನ್ಯಾಯವಲ್ಲ, ಆದುದರಿಂದ ಶಾಕಪೂಣಿ ಆಚಾರ್ಯರು ಅಗ್ನಿಯೆಂದೇ ತಿಳಿಯುತ್ತಾರೆ. ದ್ರವ್ಯಾದಿಗಳನ್ನು ಹೇಳಿದೆ ಕೇವಲ ವಿಧಿಸುವ ಕರ್ಮಕ್ಕೆ ಆರಾದುಪಕಾರಕವೆಂದು ಹೆಸರು. ಇದು ಅಗ್ನ್ಯರ್ಥವೆಂದರೆ ಆರಾದುಪಕಾರಕತ್ವ ಸಂಭವಿಸುತ್ತದೆ. ಪ್ರೈಷವೆಂದರೆ ಸಂನಿಪಾತ್ಯೋಪಕಾರಕವಾದುದರಿಂದ ಅದು ದುರ್ಬಲವಾಗುತ್ತದೆ. ಯಾಸ್ಕಾಚಾರ್ಯರಿಗೂ ಇದು ಸಂಮತವಾದುದರಿಂದ "ಆಗ್ನೇಯಾ ಇತಿ ತು ಸ್ಥಿತಿಃ" ಎಂದು ಮುಂದೆ ಹೇಳುತ್ತಾರೆ.

## ತನೂನಪಾದಾಜ್ಯಂ ಭವತಿ ||

ತನೂನಪಾತ್ ಎಂಬ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ತನೂನಪಾತ್ ಎಂದರೆ ಅಜ್ಯವೆಂದು ಕಾತ್ಥಕ್ಯರು ಹೇಳುತ್ತಾರೆ. ಮುಂದೆ ಮತಾಂತರವನ್ನು ಹೇಳುತ್ತಾರೆ.

## ನಪಾದಿತ್ಯನನಂತರಾಯಾಃ ಪ್ರಜಾಯಾ ನಾಮಧೇಯಮ್ ||

ತನೂನಪಾತ್ ಅಂದರೆ ಆಜ್ಯವೆಂದು ಹೇಗೆ ನಿರ್ಣಯಿಸಿದೆಯೆಂದು ವಿವರಿಸುತ್ತಾರೆ. ಪಿತೃವಿನ ಅನಂತರ ಪ್ರಜೆ ಅಂದರೆ ಪುತ್ರನು. ಅನನಂತರ ಪ್ರಜೆಗೆ ಅಂದರೆ ಪೌತ್ರನಿಗೆ ನಪಾತ್ ಎಂದು ನಾಮಧೇಯ. ನಾಮಪದಕ್ಕೇ ಸ್ವಾರ್ಥದಲ್ಲಿ ಧೇಯ ಪ್ರತ್ಯಯ ಬಂದು ನಾಮಧೇಯವೆಂದಾಗಿದೆ. ನ ಪಾತಯತಿ, ನಪತತಿ ವಾ ನಪಾತ್. ಇವನಿಂದ ಪಿತೃಗಳು ನರಕಕ್ಕೆ ಬೀಳುವುದಿಲ್ಲ. ಅಥವಾ ಇವನು ಪಿತೃಗಳನ್ನು ಬೀಳದಂತೆ ಮಾಡುತ್ತಾನೆ.

## ನಿರ್ಣತತಮಾ ಭವತಿ ||

ತಂದೆಗಿಂತ ಪುತ್ರನು ಅಲ್ಪನೂ ನಮ್ರನೂ ಆಗಿರುತ್ತಾನೆ. ಪೌತ್ರನು ಮತ್ತೂ ಅಲ್ಪನೂ, ನಮ್ರನೂ ಆಗಿರುತ್ತಾನೆ.

## ತನೂರತ್ರ ಗೌರುಚ್ಯತೇ । ತತಾ ಅಸ್ಯಾಂ ಭೋಗಾಃ ॥

ತನೂನಪಾತ್ ಎಂಬಿಲ್ಲಿ ನಪಾತ್‌ಪದದ ಅರ್ಥವನ್ನು ಹೇಳಿ ಈಗ ತನೂಪದದ ಅರ್ಥವನ್ನು ವಿವರಿಸುತ್ತಾರೆ. ತನೂಪದಕ್ಕೆ ಹಸು ಎಂದರ್ಥ. ತನು-ವಿಸ್ತಾರೆ ಧಾತುವಿಗೆ ಅಧಿಕರಣಾರ್ಥದಲ್ಲಿ ಊ ಪ್ರತ್ಯಯ ಬಂದಿದೆ. ಈ ಹಸುವಿನಲ್ಲಿ ಭೋಗಗಳು ಅಂದರೆ ಕ್ಷೀರದಧಿಮುಂತಾದ ಭೋಗ್ಯವಸ್ತುಗಳು ಅಧಿಕವಾಗಿ ಇರುತ್ತವೆ. ಆದುದರಿಂದ ಅದಕ್ಕೆ ತನೂಃ ಎಂದು ಹೆಸರು ಬಂದಿದೆ.

## ತಸ್ಯಾಃ ಪಯೋ ಜಾಯಂತೇ ॥

ಈ ಹಸುವಿನಿಂದ ಹಾಲು ಉಂಟಾಗುವುದರಿಂದ ಅದು ಹಸುವಿನ ಪುತ್ರನಾಗುತ್ತದೆ.

## ಪಯಸ ಆಜ್ಯಂ ಜಾಯತೇ ॥

ಕ್ಷೀರದಿಂದ ತುಪ್ಪವಾಗುವುದರಿಂದ ತುಪ್ಪವು ಹಸುವಿನ ಪೌತ್ರವಾಗುತ್ತದೆ. ಆದುದರಿಂದ ತನೂಶಬ್ದವಾಚ್ಯವಾದ ಗೋವಿನ ಆಜ್ಯವೇ ತನೂನಪಾತ್ ಆಗುತ್ತದೆ.

## ಅಗ್ನಿರಿತಿ ಶಾಕಪೂಣಿಃ । ಆಪೋಽತ್ರ ತನ್ವ ಉಚ್ಯಂತೇ ತತಾ ಅಂತರಿಕ್ಷೇ ॥

ಶಾಕಪೂಣಿ ಆಚಾರ್ಯರು ತನೂನಪಾತ್ ಏಂದರೆ ಅಗ್ನಿಯೆಂದೇ ಹೇಳುತ್ತಾರೆ. ಆಗ ನೀರು ತನೂ ಶಬ್ದವಾಚ್ಯವಾಗುತ್ತದೆ. ನೀರು ಅಂತರಿಕ್ಷದಲ್ಲಿ ವಿಸ್ತರಿಸಿರುತ್ತದೆ.

## ತಾಭ್ಯ ಓಷಧಿವನಸ್ಪತಯೋ ಜಾಯಂತೇ, ಓಷಧಿವನಸ್ಪತಿಭ್ಯ ಏಷ ಜಾಯತೇ ॥

ತನೂ ಜಲವೆಂದುದರಿಂದ ಅದರಿಂದ ಓಷದಿವನಸ್ಪತಿಗಳು ಹುಟ್ಟುವುದರಿಂದ ಅವುಗಳಿಗೆ ಪುತ್ರ ಎಂದು ಹೇಳಬಹುದು. ಈ ಓಷಧಿವನಸ್ಪತಿಗಳಿಂದ ಅಗ್ನಿಯು ಹುಟ್ಟುವುದರಿಂದ ಜಲದ ಪೌತ್ರ ಅಗ್ನಿಯಾಗುತ್ತದೆ. ಹೀಗೆ ತನೂನಪಾತ್‌ಶಬ್ದ ಅಗ್ನಿಯನ್ನು ಪ್ರತಿಪಾದಿಸುತ್ತದೆಂದು ಆಚಾರ್ಯರ ಮತ.

## ತಸ್ಯೈಷಾ ಭವತಿ ॥ ೫ ॥

ತನೂದಪಾತ್ ಶಬ್ದದಿಂದ ವಾಚ್ಯವಾದ ಆಜ್ಯ ಅಥವಾ ಅಗ್ನಿಯ ಪ್ರಧಾನಸ್ತುತಿಯು ಮುಂದೆ ಹೇಳುವ ಮಂತ್ರದಿಂದ ವ್ಯಕ್ತವಾಗುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಎಂಟನೆಯ ಅಧ್ಯಾಯದಲ್ಲಿ
ಐದನೆಯಖಂಡವು ಸಮಾಪ್ತವಾಗಿದೆ.

---

## ಅಥ ಸ್ರಷ್ಠಿ ಖಂಡಃ

## ಆರನೆಯ ಖಂಡವು

ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್‌ತ್ಸ್ವದಯಾ ಸುಜಿಹ್ವ | ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣೆಹ್ಯಧ್ವರಂ ನಃ (ಋ. ಸಂ. ೧೦-೧೧೦-೨) || ತನೂನಪಾತ್ಪಥ ಋತಸ್ಯ ಯಾನಾಸ್ಯಜ್ಞಿಸ್ಯ ಯಾನಾನ್ಮಧುನಾ ಸಮಂಜನ್ತ್ಸ್ವದಯ ಕಲ್ಯಾಣಜಿಹ್ವ ಮನನಾನಿ ಚ ನೋ ಧೀಭಿರ್ಯಜ್ಞಂ ಚಸಮರ್ಧಯ ದೇವಾನ್ನೊ ಯಜ್ಞಂ ಗಮಯ ನರಾಶಂಸೋ ಯಜ್ಞ ಇತಿ ಕಾತ್ಥಕ್ಯೋ ನರಾ ಆಸ್ಮಿನ್ನಾಸೀನಾಃ ಶಂಸಂತ್ಯಗ್ನಿರಿತಿ ಶಾಕಪೂಣಿರ್ನರೈಃ ಪ್ರಶಸ್ಯೋ ಭವತಿ ತಸ್ಯೈಷಾ ಭವತಿ || ೬ ||

ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಞ್ಜನ್ತ್ಸ್ವದಯಾ ಸುಜಿಹ್ವ |
ಮನ್ಮಾನಿ ಧೀಭಿರುತ ಯಜ್ಞಮೃನ್ಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ||

(ಋ. ಸಂ. ೮-೬-೮)

ತನೂನಪಾತ್ ಶಬ್ದದಿಂದ ಆಜ್ಯ ಅಥವಾ ಅಗ್ನಿಯನ್ನು ಸ್ತುತಿಸುವ ಮಂತ್ರ. ಎಲೈ ಆಜ್ಯವೇ, ಅಥವಾ ಅಗ್ನಿಯೇ ಯಜ್ಞದ ಫಲಪ್ರಾಪ್ತಿಗೆ ಕಾರಣಗಳಾದ ಮಾರ್ಗಗಳನ್ನು ಮಾಧುರ್ಯದಿಂದ ಸಂಗಮನಮಾಡುತ್ತಾ ಸ್ವಾದುವನ್ನಾಗಿ ಮಾಡು. ಶೋಬನ ಜಿಹ್ವಾಉಳ್ಳವನೇ, ಶೋಭನವಾದ ಜ್ವಾಲೆಯುಳ್ಳವನೇ, ಶೋಭನವಾದ ಜ್ವಾಲೆಯುಳ್ಳವನೇ ನಮಗೆ ಇಷ್ಟವಾದ ಅರ್ಥ್ಯವಸ್ತುಗಳನ್ನು ಸ್ವಕೀಯಕರ್ಮದಿಂದ ಸಮೃದ್ಧವಾಗಿ ಮಾಡುತ್ತಾ ಮತ್ತು ಯಜ್ಞವನ್ನೂ ಸಾಧಿಸುತ್ತಾ ನಮ್ಮ ಈ ಯಾಗವನ್ನು ದೇವತೆಗಳಿಗೆ ಮುಟ್ಟುವಂತೆ ಮಾಡು.

**ತನೂನಪಾತ್ ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ ||**

ಮಂತ್ರಾರ್ಥಹನ್ನು ವಿವರಿಸುತ್ತಾರೆ. ತನೂಸಪಾತ್ ಎಂದರೆ ಇವರ ಮತದಲ್ಲಿ ಅಗ್ನಿಯೇ ಎಂದು ಹಿಂದೆ ಹೇಳಿದೆ. ಅಗ್ನಿಪರವಾಗಿ ಅರ್ಥವು ಸ್ಪಷ್ಟವಾಗಿ ಹಿಂದೆಯೇ ವಿವರಿಸಿದೆ.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ ||**

ನರಶಂಸವೆಂಬ ಪದದ ನಿರ್ವಚನವನ್ನು ಹೇಳಲು ಉಪಕ್ರಮಿಸುತ್ತಾರೆ. ಹಿಂದಿನಂತೆ ಕಾತ್ಥಕ್ಯರು ನರಾಶಂಸ ಅಂದರೆ ಯಜ್ಞವೆಂದು ಪ್ರತಿಪಾದಿಸುತ್ತಾರೆ.

## ನರಾ ಅಸ್ಮಿನ್ನಾಸೀನಾಃ ಶಂಸಂತಿ ||

ನರಾಶಂಸವೆಂದರೆ ಯಜ್ಞವೆಂಬುದನ್ನು ಸಮರ್ಥನಮಾಡಿ ತೋರಿಸುತ್ತಾರೆ. ನರಾಃ ಅಂದರೆ ಮನುಷ್ಯರು ಈ ಯಜ್ಞದಲ್ಲಿ ಕುಳಿತು ಸ್ತುತಿಸುವುದರಿಂದ ಯಜ್ಞವೆಂದು ವ್ಯಕ್ತವಾತುತ್ತದೆ. ಶಂಸು-ಸ್ತುತೌ ಧಾತು ಅಧಿರರಣಾಥದಲ್ಲಿ ಘೆಙ್- ನರ+ಅಸೀನ+ಶಂಸ ಎಂದು ಮೂರುಪದಗಳಿರುತ್ತವೆ. ಆಸ ಉಪವೇಶನೇ ಧಾತು. ಅದಕ್ಕೆ ಕ್ತಪ್ರತ್ಯಯ ಬಂದು ಅಸೀನ ಎಂದಾಗಿದೆ. ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ಸಂಗ ಎಂಬುದಕ್ಕೆ ಲೋಪ ಬಂದು ನರಾಶಂಶ ಎಂದಾಗಿದೆ.

## ಅಗ್ನಿರಿತಿ ಶಾಕಪೂಣಿಃ | ನರೈಃ ಪ್ರಶಸ್ಯೋ ಭವತಿ | ತಸ್ಯೈಷಾ ಭವತಿ ||

ಶಾಕಪೂಣಿ ಆಚಾರ್ಯರು ಅಗ್ನಿಯೆಂದು ಹೇಳುತ್ತಾರೆ. ನರೈಃ ಪ್ರಶಸ್ಯಃ ನರಾಶಂಸಃ ಮನುಷ್ಯರಿಂದ ಸ್ತುತಿಸಲ್ಪಡುವವನು ನರಾಶಂಸ ಆಂದರೆ ಅಗ್ನಿ ಕರ್ಮಣಿಯಲ್ಲಿ ಘೆಙ್ ಪ್ರತ್ಯಯು ಮುಂದೆ ಹೇಳುವ ಶ್ರುತಿಯು ಯಜ್ಞಕ್ಕೆ ಅಥವಾ ಅಗ್ನಿಗೆ ಪ್ರಧಾನ ಸ್ತುತಿಯಾಗಿರುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ ಆರನೆಯಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತ ಖಂಡಃ

### ಏಳನೆಯ ಖಂಡವು.

ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ | ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ || (ಋ. ಸಂ. ೭-೨-೨) ಮಹಿಮಾನಮೇಷಾಮುಪಸ್ತುಮೋ ಯಜ್ಞಿಯಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಜಾವಾಪಿಕಾನಿ ಚೇತಿ ವೇಳಂ ಈಟ್ಟೇಸ್ತುತಿಕರ್ಮಣ ಇಂಧತೇರ್ವಾ ತಸ್ಯೈಷಾ ಭವತಿ || ೭ ||

(ಋ. ಸಂ. ೮-೬-೮)

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**

(ಋ. ಸಂ. ೫–೨–೧)

ನರಾಶಂಸಪದವಾಚ್ಯವಾದ ಅಗ್ನಿಯ ಪ್ರಧಾನಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಯಾವ ದೇವತೆಗಳು ಶೋಭನವಾದ ಕರ್ಮ ಅಥವಾ ಪ್ರಜ್ಞೆಯುಳ್ಳವರಾಗಿ, ಪಾಪವನ್ನು ಕಳೆದುಕೊಂಡು, ಸ್ವಾಧಿಕಾರದಿಂದ ಕೂಡಿದ ಕರ್ಮವನ್ನು ಧರಿಸುತ್ತಾ ಎರಡುರೀತಿಯಾದ ಹವಿಸ್ಸನ್ನು ಆಸ್ವಾದನ ಮಾಡುತ್ತಾರೆ. ಇವರ ಮಧ್ಯದಲ್ಲಿ ಹವಿಸ್ಸು ಅಥವಾ ಸ್ತೋತ್ರಗಳಿಂದ ಪೂಜಿರಲು ಯೋಗ್ಯನಾದ, ಮನುಷ್ಯರಿಂದ ಪ್ರಶಂಶಿಸಲ್ಪಡುವ ಅಗ್ನಿಯ ಮಹತ್ತ್ವವನ್ನ ನಾವು ಸ್ತುತಿಸೋಣ.

**ನರಾಶಂಸಸ್ಯ ಮಹಿಮಾನಮೇಷಾಮುಪಸ್ತುಮೋ ಯಜ್ಞಿಯಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಾಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ, ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇವರ ಮಧ್ಯದಲ್ಲಿ ನರರಿಂದ ಪ್ರಶಂಸಿಸಲ್ಪಡುವ ಅಗ್ನಿಯ ಮಹಿಮೆಯನ್ನು ನಾವು ಸ್ತುತಿಸೋಣ. ಅವನು ಯಾಗದಲ್ಲಿ ಸ್ತೋತ್ರಾದಿಗಳಿಂದ ಪೂಜಿಸಲ್ಪಡುವವನಾಗಿರುತ್ತಾನೆ. ಯಜ್ಞಿಯಸ್ಯ ಎಂಬುದಕ್ಕೆ ಯಜತಸ್ಯ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅರ್ಹಾರ್ಥದಲ್ಲಿ ಅತಚ್ ಪ್ರತ್ಯಯ ಬಂದು ಯಜತ ಎಂದಾಗಿದೆ. ಯಜನ ವನ್ನು ಸಂಪಾದಿಸುವವನು ಯಾಗನಿರ್ವಾಹಕನೆಂದರ್ಥ. ಯಜ್ಞವೆಂದರೆ ಕರ್ಮ. ಕರ್ಮಿಷ್ಠರಾದ ನಾವು ಸ್ತುತಿಸೋಣ ಎಂದರ್ಥ. ಸುಕ್ರತವಃ ಎಂಬುದಕ್ಕೆ ಸುಕರ್ಮಾಣಃ ಎಂಬ ವ್ಯಾಖ್ಯಾ ಕ್ರತುಪದ ಕರ್ಮಪರ್ಯಾಯದಲ್ಲಿ ಹೇಳಿದೆ. (ನಿಘ. ೨–೧–೧೦) ಜಗದನುಗ್ರಹದಲ್ಲಿ ಪ್ರವರ್ತಿಸುವವರು ಎಂದರ್ಥ. ಧಾರಯಿತಾರಃ ಧರಿಸಿದವರು. ಪ್ರಜ್ಞೆಯನ್ನು ಅಥವಾ ಯಜ್ಞವನ್ನು ಎಂದು ಕರ್ಮವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಈ ರೀತಿಯಾದ ಗುಣದಿಂದ ಕೂಡಿದ ದೇವತೆಗಳು ಆಸ್ವಾದನೆ ಮಾಡಲಿ. ಲೋಡರ್ಥದಲ್ಲಿ ಛಾಂದಸವಾಗಿ ಲಟ್ ಬಂದಿದೆ. ಹವ್ಯಾ ಎಂಬುದಕ್ಕೆ ಹವೀಂಷಿ— ಹವಸ್ಸುಗಳನ್ನು ಎಂದರ್ಥ. ಶಿಗೆ ಡಾ ಪ್ರತ್ಯಯ ಬಂದು ಹವ್ಯಾ ಎಂದಾಗಿದೆ. ಇದು ನಾನಾರೀತಿಯಾಗಿರುತ್ತದೆ. ಸೋಮಯಾಗ ಸಂಬಂಧಿ ಪಶುವಾದರೆ ಸೋಮವೇ ಹವಿಸ್ಸು. ಇತರ ಪಶುವಾದರೆ ಪುರೋಡಾಶಧಾನಾದಿಗಳಾಗುತ್ತವೆ. ತಂತ್ರೋಕ್ತವಾದ ಪ್ರಯಾ ಜಾಜ್ಯಭಾಗಸ್ವಿಷ್ಟಕೃತ್ ಮುಂತಾದುವುಗಳನ್ನು ತಿಳಿಯಬೇಕು.

**ಈಳ ಈಟ್ಟೇಃ ಸ್ತುತಿಕರ್ಮಣಃ ಇಂಧತೇರ್ವಾ ।**
**ತಸ್ಯೈಷಾ ಭವತಿ ॥ ೭ ॥**

ಈಳಪದದ ನಿರ್ವಚನವನ್ನು ತೋರಿಸುತ್ತಾರೆ. ಸ್ತುತ್ಯರ್ಥವನ್ನು ಕೊಡುವ ಈಡ—ಸ್ತುತೌ ಧಾತುವಿಗೆ ಕರ್ಮಣಿಯಲ್ಲಿ ಘೇಞ್ ಪ್ರತ್ಯಯ ಬಂದು ಈಡಃ ಎಂದಾಗಿದೆ. ಡಕಾರಕ್ಕೆ ಳಕಾರ ಬಂದಿರುವುದು ಹಿಂದೆ ವ್ಯಾಖ್ಯಾತವಾಗಿದೆ. ಸ್ತುತಿಸಲ್ಪಡುವವನು ಅಗ್ನಿ ಎಂದರ್ಥ. ಅಥವಾ ದೀಪನಾರ್ಥಂಕ ಇ–ಇನ್ಧೀ–ದೀಪ್ತೌ–ಧಾತುವಿನಿಂದ ಈಳಃ ಎಂದು ರೂಪವಾಗುತ್ತದೆ. ನಲೋಪ.

ಥಕಾರಕ್ಕೆ ಡಕಾರ, ಗುಣಾಭಾವ, ಈಕಾರಕ್ಕೆ ದೀರ್ಘ ಕಾರ್ಯಗಳು ನಿಪಾತದಿಂದ ಸಿದ್ಧವಾಗುತ್ತವೆ. ದೀಪನಕ್ರಿಯಾದಿಂದ ಕೂಡಿರುವವನು ಅಗ್ನಿ. ಈಳೆಪದವಾಚ್ಯವಾದ ಆ ಅಗ್ನಿಗೆ ಮುಂದೆ ಹೇಳುವ ಮಂತ್ರವು ಪ್ರಧಾನಸ್ತುತಿಯಾಗುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ಎಂಟನೆಯ ಅಧ್ಯಾಯದಲ್ಲಿ

ಏಳನೆಯಖಂಡವು ಸಮಾಪ್ತವಾಗಿದೆ.

---

## ಅಥಃ ಅಷ್ಟಮ ಖಂಡಃ

## ಎಂಟನೆಯ ಖಂಡವು

ಆಜುಹ್ವಾನ ಈಡ್ಯೋ ವಂದ್ಯಶ್ಚಾ ಯಾಹ್ಯಗ್ನೇ ವಸುಭಿಃ ಸಜೋಷಾಃ। ತ್ವಂ ದೇವಾನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ॥ (ಋ. ಸಂ. ೧೦-೧೧೦-೩) ಆಹೂಯಮಾನ ಈಳಿತವ್ಯೋ ವಂದಿತವ್ಯಶ್ಚಾಯಾಹ್ಯಗ್ನೇ ವಸುಭಿಃ ಸಹಜೋಷಣಸ್ತ್ವಂ ದೇವನಾಮಸಿ ಯಹ್ವ ಹೋತಾ ಯಹ್ವ ಇತಿ ಮಹತೋ ನಾಮಧೇಹಂ ಯಾತಶ್ಚ ಹೂತಶ್ಚ ಭವತಿ। ಸ ಏನಾನ್ಯಕ್ಷೀಷಿತೋ ಯಜೀಯಾನ್ ಇಷಿತಃ ಪ್ರೇಷಿತ ಇತಿ ವಾಧೀಷ್ಟ ಇತಿ ವಾ ಯಜೀಯಾನ್ಯಷ್ಟೃತರೊ ಬರ್ಹಿಃ ಪರಿಬರ್ಹಣಾತ್ತಸ್ಯೈಷಾ ಭವತಿ ॥ ೮ ॥

> ಆ ಜುಹ್ವಾನ ಈಡ್ಯೋ ವಂದ್ಯಶ್ಚಾಯಾಹ್ಯಗ್ನೇ ವಸುಭಿಃ ಸಜೋ-
> ಷಾಃ ॥ ತ್ವಂ ದೇದನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀ
> ಷಿತೋ ಯಜೀಯಾನ್ ॥

(ಋ. ಸಂ. ೫—೬—೫)

ಅಗ್ನಿಯನ್ನು ಈದ್ಯಪದದಿಂದ ಸ್ತುತಿಸುವ ಮಂತ್ರವನ್ನು ತೋರಿಸುತ್ತಾರೆ. ಎಲೈ ಅಗ್ನಿಯೇ ನೀವು ಈ ಕರ್ಮದಲ್ಲಿ ಬನ್ನಿರಿ. ಸಕಲರಿಂದ ಪ್ರಾರ್ಥಿಸಲ್ಪಡುವ ನೀನು ಸಕಲರಿಂದ ಸ್ತುತ್ಯನೂ ಆಗಿರುವಿ. ನಮ್ಮಿಂದ ಕರೆಯಲ್ಪಡುವವನಾಗಿ ದೇವತೆಗಳೊಡನೆ ಸಂತೋಷದಿಂದ ಬನ್ನಿರಿ. ಮಹಾತ್ಮನೇ ನೀನು ದೇವತೆಗಳ ದೂತನಾಗಿರುವಿ. ಆ ನೀನು ನಮ್ಮಿಂದ ಪ್ರೇರಿತನಾಗಿ ದೇವತೆಗಳನ್ನು ಪೂಜಿಸು. ಏಕೆಂದರೆ ನೀನೇ ಅತಿಶಯವಾಗಿ ಯಾಗವನ್ನು ತಿಳಿದು ಮಾಡುವವನಾಗಿರುವಿ.

ಆಹೂಯಮಾನ ಈಳಿತವ್ಯೋ ವಂದಿತವ್ಯಶ್ಚಾಯಾಹ್ಯಗ್ನೇ ವಸುಭಿಃ
ಸಹ ಜೋಷಣಸ್ತ್ವಂ ದೇವಾನಾಮಸಿ ಯಹ್ವ ಹೋತಾ || ಯಹ್ವ
ಇತಿ ಮಹತೋ ನಾಮಧೇಯಂ ಯಾತಶ್ಚ ಹೂತಶ್ಚ ಭವತಿ ||

ಮಂತ್ರಪದಗಳ ಅರ್ಥವನ್ನು ವಿವರಿಸುತ್ತಾರೆ. ಹೂತ, ಯಾತ ಎರಡು ಶಬ್ದಗಳಿಂದ ಯಹ್ವ ಎಂದಾಗಿದೆ. ಶರಣಾರ್ಥಿಗಳಿಂದ ಕರೆಯಲ್ಪಟ್ಟವನು. ಯಾಚಕರಿಂದ ಹೊಂದಲ್ಪಟ್ಟವನು (ಯಾತಃ'' ಯಾ, ಮತ್ತು ಹ್ವೇ ಧಾತುಗಳಿಗೆ ಕ ಪ್ರತ್ಯಯ ಭೂತಾರ್ಥದಲ್ಲಿ ಬಂದಿದೆ. ಬಹುಲಗ್ರಹಣದಿಂದ ಸಂಪ್ರಸಾರಣ ಬರಲಿಲ್ಲ. ಯಹ್ವ ಎಂಬುದು ಮಹತ್ತಿಗೆ ಹೆಸರಿದ್ದರೂ ಇಲ್ಲಿ ಯಹ್ವ ಎಂಬುದಕ್ಕೆ ಹಿಂದೆ ಹೇಳಿದ ಎರಡು ಅರ್ಥ ಇಲ್ಲಿ ವಿವಕ್ಷಿತವಾಗಿದೆ.

ಸ ಏತಾನ್ ಯಕ್ಷೀಷಿತೋ ಯಜೀಯಾನ್ ಇಷಿತಃ ಪ್ರೇಷಿತ ಇತಿ
ವಾ ಅಧೀಷ್ಟ ಇತಿ ವಾ ಯಜೀಯಾನ್ ಯಷ್ಟೃತರಃ ||

ಆ ನೀನು ದೇವತೆಗಳನ್ನು ಹವಿಸ್ಸಿನಿಂದ ಪೂಜಿಸು, ಇಷ್ಟಿತಃ ಎಂಬುದಕ್ಕೆ ಪ್ರೇರೇಪಿಸಲ್ಪಟ್ಟವನು, ಅಥವಾ ಪ್ರಾರ್ಥಿಸಲ್ಪಟ್ಟವನು ಎಂದರ್ಥ. ಅತಿಶಯವಾಗಿ ಪೂಜಿಸುವವನು ಯಜೀಯಾನ್.

ಬರ್ಹಿಃ ಪರಿಬರ್ಹಣಾತ್ | ತಸ್ಯೈಷಾ ಭವತಿ ||

ಬರ್ಹಿ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಆರವತ್ತನಾಲ್ಕು ದರ್ಭೆಗಳಿಂದ ಮಾಡಿದ ದರ್ಭೆಯ ಮುಷ್ಟಿಗೆ ಬರ್ಹಿ ಎಂದು ಹೆಸರು. ಪರಿಚ್ಛೇದನದಿಂದ ಈ ಹೆಸರು ಬಂದಿದೆ. 'ಬೃಂಹೇರ್ನಲೋಪಶ್ಚ' ಎಂಬ ಸೂತ್ರದಿಂದ ಬೃಂಹ್‌ಧಾತುವಿಗೆ ಇತಿಪ್ರತ್ಯಯ. ನಲೋಪ ಗುಣ ಕತ್ತರಿಸಲ್ಪಟ್ಟು ಅಭಿವೃದ್ಧವಾಗುತ್ತದೆ. ವೃದ್ಧ್ಯರ್ಥದಲ್ಲಿ ಪಠಿತವಾದರೂ ಛೇದನಾರ್ಥದಲ್ಲಿ ಪ್ರಯೋಗಿಸುತ್ತಾರೆ. ಆದುದರಿಂದಲೇ 'ಪ್ರಮಾಪಣಂ ನಿಬರ್ಹಣಂ ನಿಕಾರಣಂ ವಿಶಾರಣಂ' ಎಂದು ಅಮರಕಾರನು ಹಿಂಸಾರ್ಥದಲ್ಲಿ ಪ್ರಯೋಗಿಸಿರುತ್ತಾನೆ, ಉಪಸರ್ಗದಿಂದ ಅರ್ಥವಿಶೇಷ ಅಭಿವ್ಯಕ್ತವಾಗುತ್ತದೆ. ಈ ಬರ್ಹಿಶಬ್ದಕ್ಕೆ ಮುಂದೆ ಹೇಳುವ ಹೇಳುವ ಮಂತ್ರವು ಪ್ರಾಧಾನ್ಯಸ್ತುತಿಯಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯವಲ್ಲಿ
ಎಂಟನೆಯ ಖಂಡವು ಸಮಾಪ್ತವಾಗಿದೆ.

## ಅಥಃ ನವಮಃ ಖಂಡಃ

## ಒಂಬತ್ತನೆಯ ಖಂಡವು

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ
ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಮ್ ||

(ಋ. ೧೦-೧೧೦-೪) ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾ
ಪ್ರವೃಜ್ಯತೇಽಗ್ರೇಽಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿತೀರ್ಣತರ-
ಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾ-
ದಿತಯೇ ಚ ಸ್ಯೋನಂ ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ಸೇವಿತವ್ಯಂ
ಭವತೀತಿ ವಾ ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ ತಾಸಾಮೇಷಾ
ಭವತಿ ॥ ೯ ॥

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಮ್ ।
ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಆದಿತಯೇ ಸ್ಯೋನಮ್ ॥

(ಋ. ಸಂ. ೮-೬-೮)

ಬರ್ಹಿಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಾಙ್ಮುಖವಾದ ದರ್ಭೆಯ ಮುಷ್ಟಿಯು ಕತ್ತರಿಸಲ್ಪಡುತ್ತದೆ ಅಥವಾ ಪ್ರಸರಿಸಲ್ಪಡುತ್ತದೆ. ಅದೂ ಸ್ವೇಚ್ಛೆಯಿಂದಲ್ಲ, ಚನ್ನಾಗಿ ಉಚ್ಚರಿಸಲ್ಪಡುವ ಮಂತ್ರದಿಂದ. ಯಜ್ಞವೇದಿರೂಪ ಪೃಥಿವಿಯ ಆಚ್ಛಾದನೆಗೋಸ್ಕರ ಪೂರ್ವಾಹ್ಣದಲ್ಲಿ ಅದು ಪ್ರಸರಿಸಲ್ಪಡುತ್ತದೆ. ಇದು ಇತರ ಯಜ್ಞಾಂಗಗಳಿಂದ ಶ್ರೇಷ್ಠವಾಗಿದೆ. ಇದು ನಾನಾರೀತಿಯಿಂದ ಪ್ರಸರಿಸಲ್ಪಟ್ಟು ದೇವತೆಗಳಿಗೂ ವೇದಿರೂಪ ಪೃಥಿವಿಗೂ ಸುಖಕರವಾಗುತ್ತದೆ.

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾಃ ವಸನಾಯಸ್ಯಾಃ ಪ್ರವೃಜ್ಯತೇ । ಅಗ್ರೇ
ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ । ವಿತರಂ—ವಿಕೀರ್ಣತರಮಿ
ತಿ ವಾ ವಿಸ್ತೀರ್ಣತರಮಿತಿ ವಾ । ವರೀಯೋ— ವರತರಮುರುತರಂ ವಾ ।
ದೇವೇಭ್ಯಶ್ಚಾದಿತಯೇ ಚ ಸ್ಯೋನಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇಲ್ಲಿ ಯಜ್ಞಾಂಗವಾದ ಬರ್ಹಿ ಎಂದರೆ ದರ್ಭೆಯ ಹಿಡಿಯ ಸ್ತುತಿಯ ಮೂಲಕ ಅಗ್ನಿಯೇ ಸ್ತುತಿಸಲ್ಪಡುತ್ತದೆ. ಪೃಥಿವೀಸ್ಥಾನಸಂಬಂಧಿಯು ಪ್ರಕೃತವಾದುದೆಂದು ಹಿಂದೆ ಹೇಳಿವೆ. ಕೆಲವರು ಅಗ್ನಿಯೇ ಬರ್ಹಿಶಬ್ದದಿಂದ ಹೇಳಿದೆಯೆಂದು ವರ್ಣಿಸುತ್ತಾರೆ. ಅಂತರಿಕ್ಷನಾಮದಲ್ಲಿ ಈ ಬರ್ಹಿಶಬ್ದವು ಪಠಿತವಾದುದರಿಂದ (ನಿ. ಘ. ೧-೩-೪) ತತ್ಸ್ಥಾನಾಪನ್ನನಾದ ಅಗ್ನಿಯು ಹೇಳಿದೆಯೆಂದು ಇನ್ನು ಕೆಲವರ ಮತ. ಪ್ರಾಚೀನಂ ಬರ್ಹಿಃ ಅಂದರೆ ಪ್ರವೃದ್ಧವಾದ ಆಹವನೀಯಾಗ್ನಿಯ ಜ್ಯೋತಿ. 'ಪ್ರಾಂಚಮುದ್ಧರಂತಿ' ಇತ್ಯಾದಿ ಮಂತ್ರಗಳಿಂದ ಅದು ವೃದ್ಧಿಗೊಳಿಸಲ್ಪಡುತ್ತದೆ. ಅಗ್ನಿಯಿಂದಲೇ ವೇದಿರೂಪವೃಥಿವಿಯು ಆಚ್ಛಾದಿತವಾಗುತ್ತದೆ. ಸಾಮಿಧಾನೀ ಪ್ರಕ್ಷೇಪದಿಂದ ಆಜ್ಯಭಾಗಾದ್ಯಾಘಾರಾದಿಗಳಲ್ಲಿ ಪೂರ್ವಾಹ್ಣದಲ್ಲಿ ಅದು ನಾನಾರೀತಿ ಪ್ರಕೀರ್ಣವಾಗುತ್ತದೆ. ಇತರ ಜ್ಯೋತಿಗಳಿಗಿಂತ ಈ ಜ್ಯೋತಿಯೇ ಅತಿ ಪ್ರಶಸ್ತವಾಗಿಯೂ ಮಹತ್ತಾಗಿಯೂ ಇರುತ್ತದೆ. ಇದು ಯಜಮಾನರಿಗೂ ಇತರರಿಗೂ ಸುಖದಾಯಕವಾಗುತ್ತದೆ.

ಆಹೂಯಮಾನ ಈಳಿತವ್ಯೋ ವಂದಿತವ್ಯಶ್ಚಾಯಾಹ್ಯಗ್ನೇ ವಸುಭಿಃ
ಸಹ ಜೋಷಣಸ್ತ್ವಂ ದೇವಾನಾಮಸಿ ಯಹ್ವ: ಹೊತಾ ॥ ಯಹ್ವ
ಇತಿ ವಾಹತೋ ನಾಮಧೇಯಂ ಯಾತಶ್ಚ ಹೂತಶ್ಚ ಭವತಿ ॥

ಮಂತ್ರಪದಗಳ ಅರ್ಥವನ್ನು ವಿವರಿಸುತ್ತಾರೆ. ಹೂತ, ಯಾತ ಎರಡು ಶಬ್ದಗಳಿಂದ ಯಹ್ವ ಎಂದಾಗಿದೆ. ಶರಣಾರ್ಥಿಗಳಿಂದ ಕರೆಯಲ್ಪಟ್ಟವನು. ಯಾಚಕರಿಂದ ಹೊಂದಲ್ಪಟ್ಟವನು (ಯಾತಃ' ಯಾ, ಮತ್ತು ಹ್ವೇ ಧಾತುಗಳಿಗೆ ಕ ಪ್ರತ್ಯಯ ಭೂತಾರ್ಥದಲ್ಲಿ ಬಂದಿದೆ. ಬಹುಲಗ್ರಹಣದಿಂದ ಸಂಪ್ರಸಾರಣ ಬರಲಿಲ್ಲ. ಯಹ್ವ ಎಂಬುದು ಮಹತ್ತಿಗೆ ಹೆಸರಿದ್ದರೂ ಇಲ್ಲಿ ಯಹ್ವ ಎಂಬುದಕ್ಕೆ ಹಿಂದೆ ಹೇಳಿದ ಎರಡು ಅರ್ಥ ಇಲ್ಲಿ ವಿವಕ್ಷಿತವಾಗಿದೆ.

ಸ ಏತಾನ್ ಯಕ್ಷೀಷಿತೋ ಯಜೀಯಸೋನ್ ಇಷಿತಃ ಪ್ರೇಷಿತ ಇತಿ
ವಾ ಅಧೀಷ್ಯ ಇತಿ ವಾ ಯಜೀಯಸಾನ್ ಯಷ್ಟೃತರಃ ॥

ಆ ನೀನು ದೇವತೆಗಳನ್ನು ಹವಿಸ್ಸಿನಿಂದ ಪೂಜಿಸು, ಇಷ್ಟಿತಃ ಎಂಬುದಕ್ಕೆ ಪ್ರೇರೇಪಿಸಲ್ಪಟ್ಟವನು, ಅಥವಾ ಪ್ರಾರ್ಥಿಸಲ್ಪಟ್ಟವನು ಎಂದರ್ಥ. ಅತಿಶಯವಾಗಿ ಪೂಜಿಸುವವನು ಯಜೀಯಾನ್.

ಬರ್ಹಃ ಪರಿಬರ್ಹಣಾತ್ । ತಸ್ಯೈಷಾ ಭವತಿ ॥

ಬರ್ಹಿ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಆರವತ್ತನಾಲ್ಕು ದರ್ಭೆಗಳಿಂದ ಮಾಡಿದ ದರ್ಭೆಯ ಮುಷ್ಟಿಗೆ ಒರ್ಹಿ ಎಂದು ಹೆಸರು. ಪರಿಚ್ಛೇದನದಿಂದ ಈ ಹೆಸರು ಬಂದಿದೆ. 'ಬೃಂಹೇರ್ನಲೋಪಶ್ಚ' ಎಂಬ ಸೂತ್ರದಿಂದ ಬೃಂಹ್‌ಧಾತುವಿಗೆ ಇತಿಪ್ರತ್ಯಯ. ನಲೋಪ ಗುಣ ಕತ್ತರಿಸಲ್ಪಟ್ಟು ಅಭಿವೃದ್ಧವಾಗುತ್ತದೆ. ವೃದ್ಧ್ಯರ್ಥದಲ್ಲಿ ಪಠಿತವಾದರೂ ಛೇದನಾರ್ಥದಲ್ಲಿ ಪ್ರಯೋಗಿಸುತ್ತಾರೆ. ಆದುದರಿಂದಲೇ 'ಪ್ರಮಾಪಣಂ ನಿಬರ್ಹಣಂ ನಿಕಾರಣಂ ವಿಶಾರಣಂ' ಎಂದು ಅಮರಕಾರನು ಹಿಂಸಾರ್ಥದಲ್ಲಿ ಪ್ರಯೋಗಿಸಿರುತ್ತಾನೆ, ಉಪಸರ್ಗದಿಂದ ಅರ್ಥವಿಶೇಷ ಅಭಿವ್ಯಕ್ತವಾಗುತ್ತದೆ. ಈ ಬರ್ಹಿಶಬ್ದಕ್ಕೆ ಮುಂದೆ ಹೇಳುವ ಹೇಳುವ ಮಂತ್ರವು ಪ್ರಾಧಾನ್ಯಸ್ತುತಿಯಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ
ಎಂಟನೆಯ ಖಂಡವು ಸಮಾಪ್ತವಾಗಿದೆ.

## ಅಥಃ ನವಮಃ ಖಂಡಃ

## ಒಂಬತ್ತನೆಯ ಖಂಡವು

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ
ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಮ್ ॥

(ಋ. ೧೦-೧೧೦-೪) ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇಽಗ್ರೇಽಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿತೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ಸೇವಿತವ್ಯಂ ಭವತೀತಿ ವಾ ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ ತಾಸಾಮೇಷಾ ಭವತಿ ॥ ೯ ॥

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಮ್ ।
ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಮ್ ॥

(ಋ. ಸಂ. ೮-೬-೮)

ಬರ್ಹಿಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಾಙ್ಮುಖವಾದ ದರ್ಭೆಯ ಮುಷ್ಟಿಯು ಕತ್ತರಿಸಲ್ಪಡುತ್ತದೆ ಅಥವಾ ಪ್ರಸರಿಸಲ್ಪಡುತ್ತದೆ. ಅದೂ ಸ್ವೇಚ್ಛೆಯಿಂದಲ್ಲ, ಚನ್ನಾಗಿ ಉಚ್ಚರಿಸಲ್ಪಡುವ ಮಂತ್ರದಿಂದ. ಯಜ್ಞವೇದಿರೂಪ ಪೃಥಿವಿಯ ಆಚ್ಛಾದನೆಗೋಸ್ಕರ ಪೂರ್ವಾಹ್ಣದಲ್ಲಿ ಅದು ಪ್ರಸರಿಸಲ್ಪಡುತ್ತದೆ. ಇದು ಇತರ ಯಜ್ಞಾಂಗಗಳಿಂದ ಶ್ರೇಷ್ಠವಾಗಿದೆ. ಇದು ನಾನಾರೀತಿಯಿಂದ ಪ್ರಸರಿಸಲ್ಪಟ್ಟು ದೇವತೆಗಳಿಗೂ ವೇದಿರೂಪ ಪೃಥಿವಿಗೂ ಸುಖಕರವಾಗುತ್ತದೆ.

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾಃ ವಸನಾಯಸ್ಯಾಃ ಪ್ರವೃಜ್ಯತೇ । ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ । ವಿತರಂ—ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ । ವರೀಯೋ— ವರತರಮುರುತರಂ ವಾ । ದೇವೇಭ್ಯಶ್ಚಾದಿತಯೇ ಚ ಸ್ಯೋನಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇಲ್ಲಿ ಯಜ್ಞಾಂಗವಾದ ಬರ್ಹಿ ಎಂದರೆ ದರ್ಭೆಯ ಹಿಡಿಯ ಸ್ತುತಿಯ ಮೂಲಕ ಅಗ್ನಿಯೇ ಸ್ತುತಿಸಲ್ಪಡುತ್ತದೆ. ಪೃಥಿವೀಸ್ಥಾನಸಂಬಂಧಿಯು ಪ್ರಕೃತವಾದುದೆಂದು ಹಿಂದೆ ಹೇಳಿವೆ. ಕೆಲವರು ಅಗ್ನಿಯೇ ಬರ್ಹಿಶಬ್ದದಿಂದ ಹೇಳಿದೆಯೆಂದು ವರ್ಣಿಸುತ್ತಾರೆ. ಅಂತರಿಕ್ಷನಾಮದಲ್ಲಿ ಈ ಬರ್ಹಿಶಬ್ದವು ಪಠಿತವಾದುದರಿಂದ (ನಿ. ಘ. ೧-೩-೪) ತತ್ಸ್ಥಾನಾಪನ್ನನಾದ ಅಗ್ನಿಯು ಹೇಳಿದೆಯೆಂದು ಇನ್ನು ಕೆಲವರ ಮತ. ಪ್ರಾಚೀನಂ ಬರ್ಹಿಃ ಅಂದರೆ ಪ್ರವೃದ್ಧವಾದ ಆಹವನೀಯಾಗ್ನಿಯ ಜ್ಯೋತಿ. 'ಪ್ರಾಂಚಮುದ್ಧರಂತಿ' ಇತ್ಯಾದಿ ಮಂತ್ರಗಳಿಂದ ಅದು ವೃದ್ಧಿಗೊಳಿಸಲ್ಪಡುತ್ತದೆ. ಅಗ್ನಿಯಿಂದಲೇ ವೇದಿರೂಪವೃಥಿವಿಯು ಆಚ್ಛಾದಿತವಾಗುತ್ತದೆ. ಸಾಮಿಧಾನೀ ಪ್ರಕ್ಷೇಪದಿಂದ ಆಜ್ಯಭಾಗಾದ್ಯಾಘಾರಾದಿಗಳಲ್ಲಿ ಪೂರ್ವಾಹ್ಣದಲ್ಲಿ ಅದು ನಾನಾರೀತಿ ಪ್ರಕೀರ್ಣವಾಗುತ್ತದೆ. ಇತರ ಜ್ಯೋತಿಗಳಿಗಿಂತ ಈ ಜ್ಯೋತಿಯೇ ಅತಿ ಪ್ರಶಸ್ತವಾಗಿಯೂ ಮಹತ್ತಾಗಿಯೂ ಇರುತ್ತದೆ. ಇದು ಯಜಮಾನರಿಗೂ ಇತರರಿಗೂ ಸುಖದಾಯಕವಾಗುತ್ತದೆ.

ಸ್ಯೋನಮಿತಿ ಸುಖನಾಮ | ಸ್ಯತೇರವಸ್ಯಂತ್ಯೇತತ್ |
ಸೇವಿತವ್ಯಂ ಭವತೀತಿ ವಾ ||

ಸ್ಯೋನ ಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಷೋಽಂತಕರ್ಮಣಿ ಧಾತುವಿಗೆ ನ ಪ್ರತ್ಯಯ ಬಂದಾಗ, ಟಗೆ ಯು ಆದೇಶ, ಗುಣ ಬಂದು ಸ್ಯೋನ ಎಂದಾಗಿದೆ. ಸುಖದ ಹೆಸರು. ಸೇವಧಾತುವಿನಿಂದಲೂ ಇದು ನಿಷ್ಪನ್ನವಾಗುತ್ತದೆ. ಸಕಲರಿಂದ ಸೇವಿಸಲ್ಪಡುವುದು ಸುಖ.

ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ ತಾಸಾ-
ಮೇಷಾ ಭವತಿ || ೯ ||

ದ್ವಾರಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಯಜ್ಞಗೃಹದ್ವಾರಕ್ಕೆ ದ್ವಾರವೆಂದು ಹೆಸರು. ಇದು ಕ್ಯಾತ್ಥಕ್ಯರ ಮತ. ಗತ್ಯರ್ಥಕವಾದ ಸೌತ್ರ ಜು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಕೆಲವರಮತ. ದ್ರು-ಗತೌ ಧಾತುವಿನಿಂದ ಎಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಪ್ರವೃತ್ತಿವಿಘಾತಾರ್ಥಕ ವೃಧಾತುವಿನಿಂದ ದ್ವಾರಶಬ್ದವಾಗಿದೆಯೆಂದು ಹೇಳುತ್ತಾರೆ. ಇದರಿಂದ ಹೋಗುತ್ತಾರೆ ಎಂದು ಅರ್ಥ ತೋರುತ್ತದೆ. ಹೋಗುವುದಕ್ಕೆ ಬಾಗಿಲೇ ತಡೆಯೂ ಆಗುವುದರಿಂದ ಮೂರನೆಯವರ ಮತವೂ ಯುಕ್ತವಾಗುತ್ತದೆ. ದ್ವಾರ್, ದ್ವಾರ ಎಂದು ಎರಡುರೂಪಗಳೂ ಇವೆ. "ಸ್ತ್ರೀ ದ್ವಾದ್ವಾರ್ಂ ಪ್ರತೀಹಾರಃ' ಎಂದು ಅಮರ. ಮುಂದೆ ಉದಾಹರಿಸುವ ಋಙ್ಮಂತ್ರವು ದ್ವಾರದ ಪ್ರಧಾನ ಸ್ತುತಿಯನ್ನು ತಿಳಿಸುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ
ಒಂಭತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ದಶಮ ಖಂಡಃ

## ಹತ್ತನೆಯ ಖಂಡವು.

ವ್ಯಚಸ್ವತೀರುರ್ವಿಯಾ ವಿಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾ-ನಾಃ | ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ | (ಋ. ಸಂ. ೧೦-೧೧೦-೫) ವ್ಯಂಚನವತ್ಯ ಉರುತ್ವೇನ ವಿಶ್ರಯಂತಾಂ ಪತಿಭ್ಯ ಇವ ಜಾಯಾ ಊರೂ ಮೈಥುನೇ ಧರ್ಮೇ ಶುಶೋಭಿಷಮಾಣಾ ವರತಮಮಂಗಮೂರೂ ದೈವ್ಯೋ ದ್ವಾರೋ ಬೃಹತ್ಯೋ ವಿಶ್ವಮಿನ್ವಾ ವಿಶ್ವಮಾಭಿರೇತಿ ಯಜ್ಞೇ ಗೃಹದ್ವಾರ

ಇತಿ ಕಾತ್ಥಕ್ಯೋಽಗ್ನಿರಿತಿ ಶಾಕಪೂಣಿರುಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ ನಕ್ತೇತಿ ರಾತ್ರಿನಾಮಾನಕ್ತಿ ಭೂತಾನ್ಯವಶ್ಯಾಯೇನಾಪಿ ವಾ ನಕ್ತಾ-ವ್ಯಕ್ತವರ್ಣಾ ತಯೋರೇಷಾ ಭವತಿ ॥ ೧೦ ॥

ವ್ಯಚಸ್ವತೀರುರ್ವಿಯಾ ವಿಶ್ರಯಂತಾಂ ಪತಿಭ್ಯೋ ನ ಜನಯಃ ಶುಂ-
ಭಮಾನಾಃ ॥ ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ
ದೇವೇಭ್ಯೋ ಭವತ ಸುಪ್ರಾಯಣಾಃ ॥

(ಋ. ಸಂ. ೮-೬-೮)

ದ್ವಾರದ ಪ್ರಧಾನಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವ್ಯಾಪನವುಳ್ಳ,, ಮಹತ್ತಾದ ದ್ವಾರದೇವತೆಗಳ ಅಧಿಕವಾಗಿ ಅವಕಾಶವುಳ್ಳವರಾಗಲಿ. ದೃಷ್ಟಾಂತ ತೋರಿಸುತ್ತಾರೆ. ಪತ್ನಿಯರು ತಮ್ಮ ಪತಿಗೋಸ್ಕರ ಅಲಂಕರಿಸಿಕೊಂಡು ಮೈಥುನಕರ್ಮದಲ್ಲಿ ಉತ್ತಮವಾದ ತೊಡೆಗಳನ್ನು ಪ್ರಸರಿಸುತ್ತಾರೆ. ಅದರಂತೆ ದ್ವಾರಾಭಿಮಾನ ದೇವತೆಗಳೇ, ನೀವು ಸಂತುಷ್ಟರಾಗಿ ಯಜ್ಞೋಪಕರಣದಿಂದ ಕೂಡಿ ಋತ್ವಿಜರಿಗೂ, ಯಜಮಾನ ಮುಂತಾದವರಿಗೆ ಸುಖವಾಗಿ ಹೋಗಲು ತೆರದಿರಬೇಕೆಂದು ಪ್ರಾರ್ಥಿಸುತ್ತೇವೆ.

ವ್ಯಂಚನವತ್ಯಃ ಉರುತ್ವೇನ ವಿಶ್ರಯಂತಾಂ ಪತಿಭ್ಯ ಇವ ಜಾಯಾ
ಊರೂ ಮೈಥುನೇ ಧರ್ಮೇ ಶುಶೋಭಿಷಮಾಣಾ ವರತಮು-
ಮಂಗಮೂರೂ ದೇವ್ಯೋ ದ್ವಾರೋ ಬೃಹತ್ಯೋ ಮಹತ್ಯೋ
ವಿಶ್ವಮಿನ್ವಾಃ ವಿಶ್ವಮಾಭಿರೇತಿ । ಯಜ್ಞೇ—ಗೃಹದ್ವಾರ ಇತಿ
ಕಾತ್ಥಕ್ಯಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವ್ಯಚಸ್ವತೀಃ ಎಂಬುದಕ್ಕೆ ನಾನಾರೀತಿಯ ಗಮನವುಳ್ಳದ್ದು ಎಂದರ್ಥ. ವಿಶ್ವಮಿನ್ವಾ ಎಂಬುದಕ್ಕೆ ಸಕಲ ಯಜ್ಞೋಪಕರಣಗಳನ್ನು ಈ ದ್ವಾರದಮೂಲಕ ಹೊಂದುತ್ತಾರೆ ಎಂದರ್ಥ. ಇವಿ-ವ್ಯಾಪ್ತೌ-ಧಾತು-ಕರಣಾರ್ಥದಲ್ಲಿ ಅಣ್‌ಪ್ರತ್ಯಯ. ಬಹುಲಗ್ರಹಣದಿಂದ ಇಷ್ಟರೂಪಸಿದ್ಧಿಯಾಗುತ್ತದೆ. ಕಾತ್ಥಕ್ಯಮಹರ್ಷಿಗಳು ಯಜ್ಞದಲ್ಲಿರುವ ಗೃಹದ್ವಾರಕ್ಕೆ ದ್ವಾರವೆಂದು ತಿಳಿಯುತ್ತಾರೆ.

ಅಗ್ನಿರಿತಿ ಶಾಕಪೂಣಿಃ ॥

ಪ್ರಕರಣದಿಂದ ದ್ವಾರವೆಂದರೆ ಅಗ್ನಿಯೆಂದೇ ಶಾಕಪೂಣಿನಿರುಕ್ತಕಾರರು ಹೇಳುತ್ತಾರೆ. ಆಗ ಪೂರ್ವೋಕ್ತಮಂತ್ರಕ್ಕೆ ಹೀಗೆ ಅರ್ಥ ಕಲ್ಪಿಸಬೇಕು. ಅಗ್ನಿಯ ಜ್ವಾಲೆಗಳೇ ದ್ವಾರಗಳು. ಇದು ನಾನಾರೀತಿಯಿಂದ ಮೇಲಕ್ಕೆ ಏಳುತ್ತದೆ. ಅಥವಾ ಜ್ವಾಲೆಗಳ ಮೂಲಕ ಹವಿಸ್ಸನ್ನು ಹೊಂದುತ್ತಾನೆ. ಅಥವಾ ಕರಗಿಸುತ್ತಾನೆ ಎಂಬ ವ್ಯುತ್ಪತ್ತಿಯಿಂದ ದ್ವಾರ ಅಂದರೆ ಅರ್ಚಿಸ್ಸುಗಳು. ನಿರೋಧಾರ್ಥದಲ್ಲಿ ರಾಕ್ಷಸ ಮುಂತಾದವರನ್ನು ಈ ಜ್ವಾಲೆಗಳ ಮೂಲಕ ತಡೆಯುತ್ತಾನೆ ಎಂದರ್ಥವಾಗುತ್ತದೆ.

ಕೆಲವರು ಶೀತಾತಿನಿವಾರಣೆಗೋಸ್ಕರ ಇವುಗಳನ್ನು ಹೊಂದುತ್ತಾರೆ ಎಂದರ್ಥವನ್ನು ವಿವರಿಸುತ್ತಾರೆ. ವಿಶ್ವಮಿನ್ವಾಃ ಸಕಲ ಹವಿಸ್ಸನ್ನೂ ಈ ಜ್ವಾಲೆಗಳಮೂಲಕವೇ ತಮ್ಮ ಅಧೀನವನ್ನಾಗಿ ಮಾಡಿಕೊಳ್ಳುತ್ತವೆ. ಈ ರೀತಿಯಾಗಿರುವ ಅಗ್ನಿಯ ಜ್ವಾಲೆಗಳು ಸುಖವಾಗಿ ದೇವತೆಗಳಿಗೋಸ್ಕರ ಹವಿಸ್ಸನ್ನು ಒಯ್ಯುವವರಾಗಲಿ ಎಂದು ಪ್ರಾರ್ಥಿಸುತ್ತೇವೆ.

**ಉಷಾಸಾನಕ್ತಾ—ಉಷಾಶ್ಚ ನಕ್ತಾ ಚ । ಉಷಾ ವ್ಯಾಖ್ಯಾತಾ ॥ ನಕ್ತೇತಿ ರಾತ್ರಿನಾಮ । ಅನಕ್ತಿ ಭೂತಾನ್ಯವಶ್ಯಾಯೇನ । ಅಪಿವಾಽನ-ಕ್ತಾಽವ್ಯಕ್ತವರ್ಣಾ । ತಯೋರೇಷಾ ಭವತಿ ॥ ೧೦ ॥**

ಉಷಾಸಾನಕ್ತಾ (2) ಪದದ ನಿರ್ವಚನವನ್ನು ತೋರಿಸುತ್ತಾರೆ. ಉಷಾಶ್ಚ ನಕ್ತಾಚ ಎಂದು ವಿಗ್ರಹವನ್ನು ವಿವರಿಸಿದೆ. ಇದರಲ್ಲಿ ಉಷಾಶಬ್ದವು 'ಉಚ್ಛತೀತಿ ಸತ್ಯಾಃ' (ನಿಘ—೨-೧೮) ಎಂದು ಹಿಂದೆ ವ್ಯಾಖ್ಯಾತವಾಗಿದೆ. ಉಚ್ಛೀ—ವಿವಾಸೇ ಅಥವಾ ವಶ-ಕಾಂತೌ ಧಾತುವಿಗೆ ಅಸುನ್ ಪ್ರತ್ಯಯ ಬಂದು ಉಷಾ ಎಂದಾಗಿದೆ. ಮನೋಹರವಾದುದೆಂದರ್ಥ. ನಕ್ತಾ ಎಂದರೆ ರಾತ್ರಿ. ಭೂತಾನಿ ಅನಕ್ತಿ ಇತಿ ನಕ್ತಾ. ಪ್ರಾಣಿಗಳನ್ನು ಮಂಜಿನಿಂದ ಒದ್ದೆಯಾಗಿ ಮಾಡುವುದು. ರಾತ್ರಿಯಲ್ಲಿ ಎಲ್ಲವೂ ಶೀತದಿಂದ ಆವೃತವಾಗುತ್ತವೆ. ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮಂ ಎಂದು ಅಮರ. ಅವಶ್ಯಾಯ ವೆಂದರೆ ಹಿಮ. ಅಂ ಜೂ—ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಇದಕ್ಕೆ ಕರ್ತ್ರರ್ಥದಲ್ಲಿ ಔಣಾದಿಕಕ್ತನ್ ಪ್ರತ್ಯಯ ಧಾತುವಿಗೆ ನುಡಾಗಮ. ಟಾಪ್ ಎಂದು ರೂಪವಾಗುತ್ತದೆ. ಅಥವಾ ಅನಕ್ತಾ ಎಂದು ಪದದಸ್ವರೂಪ ಅವ್ಯಕ್ತವರ್ಣವುಳ್ಳುದ್ದೆಂದರ್ಥ. ನಞ್ ನಿಷೇಧಾರ್ಥವನ್ನು ತಿಳಿಸುತ್ತದೆ. ನ ಅಕ್ತಾ ನ ವ್ಯಕ್ತಾ. ಹಗಲು ಸಕಲ ಪದಾರ್ಥಗಳನ್ನು ವ್ಯಕ್ತಪಡಿಸ್ಸುವಂತೆ ರಾತ್ರಿ ವ್ಯಕ್ತಗೊಳಿಸುವುದಿಲ್ಲ. ಅದುದರಿಂದ ಅನಕ್ತಾ ರಾತ್ರಿ. ದ್ವಂದ್ವ ಸಮಾಸದಲ್ಲಿ ದ್ವಿವಚನಕ್ಕೆ ಆಕಾರ ಬರುತ್ತದೆ. ಉಷಸ್‌ಶಬ್ದಕ್ಕೆ ಉಷಾಸಾ ಆದೇಶ. ಉಷಾಸಾನಕ್ತಾ. ಅಹೋರಾತ್ರಿಯ ಅಭಿಮಾನಿದೇವಿಯರೆಂದರ್ಥ. ಅಗ್ನಿಯೆಂದು ಅರ್ಥ ಹೇಳುವಾಗ ಉಷಾಗ್ನಿಯ ದೀಪ್ತಿಯ ನಾಮವಾಗುತ್ತದೆ, ಇದು ಕತ್ತಲೆಯನ್ನು ಹೋಗಲಾಡಿಸುತ್ತದೆ. ನಕ್ತಾ ಪದಕ್ಕೆ ಆಹುತಿಯೆಂದರ್ಥ. ದೀಪ್ತ್ಯಾಹುತಿಗಳಿಂದ ಕೂಡಿರುವುದು ಅಗ್ನಿ. ಹೀಗೆ ಉಷಾಸಾನಕ್ತಾಪದದಿಂದ ತೋರುವ ದೇವಿಯರ ಅಥವಾ ದೀಪ್ತಿ ಮತ್ತು ಆಹುತಿಯ ಪ್ರಧಾನಸ್ತುತಿಯನ್ನು ಮುಂದೆ ಹೇಳುವ ಋಙ್ಮಂತ್ರವು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡ ಸಮಾಪ್ತವಾಗಿದೆ.

---

## ಅಥಃ ಏಕಾದಶಃ ಖಂಡಃ

## ಹನ್ನೊಂದನೆಯ ಖಂಡವು

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ । ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ**

ದಧಾನೇ || (ಋ. ಸಂ. ೧೦-೧೧೦-೬) ಸೇಷ್ಮೀಯಮಾಣೇ ಇತಿ ವಾ ಸುಷ್ವಾಪ-
ಯಂತ್ಯಾವಿತಿ ವಾ ಸೀದತಾಮಿತಿ ವಾ ನ್ಯಾಸೀದತಾಮಿತಿ ವಾ ಯಜ್ಞಿಯೇ ಉಪ-
ಕ್ರಾಂತೇ ದಿವ್ಯೇ ಯೋಷಣೇ ಬೃಹತ್ಯೌಮಹತ್ಯೌ ಸುರುಕ್ಮೇ ಸುರೋಚನೇ ಅಧಿದಧಾನೇ
ಶುಕ್ರಪೇಶಸಂ ಶ್ರಿಯಂ ಶುಕ್ರಂ ಶೋಚತೇರ್ಜ್ವಲತಿಕರ್ಮಣಃ ಪೇಶಇತಿ ರೂಪನಾಮ
ಪಿಂಶತೇರ್ವಿಪಿಶಿತಂ ಭವತಿ | ದೈವ್ಯಾಹೋತರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ
ಚ ಮಧ್ಯಮಸ್ತಯೋರೇಷಾ ಭವತಿ || ೧೧ ||

ಆ ಸುಷ್ವಯಂತೀ ಯಜತೇ ಉಪಾಕೇ ಉಷಾನಕ್ತಾ ಸದತಾಂ ನಿ
ಯೋನೌ | ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿಶ್ರಿಯಂ
ಶುಕ್ರಪಿಶಂ ದಧಾನೇ ||

(ಋ. ಸಂ. ೮-೬-೮)

ಉಷಾಸಾನಕ್ತಾ ಪದವಾಚ್ಯದೇವತೆಯನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಶೋಭನಗಮನವುಳ್ಳ, ಪೂಜಿಸಲು ಯೋಗ್ಯರಾದ, ಒಬ್ಬರನ್ನೊಬ್ಬರು ಅತಿಕ್ರಮಿಸಿರುವ, ಪ್ರಕಾಶಕರಾದ, ಪರಸ್ಪರವಿವಿಕ್ತರಾದ, ಗುಣಭರಿತರಾದ, ಶೋಭನಕಾಂತಿಯುಳ್ಳ ಅಹೋರಾತ್ರಿಗಳ ಅಭಿಮಾನಿಯರಾದ ದೇವಿಯರೇ. ಶುಕ್ಲರೂಪವಾದ ಶೋಭೆಯನ್ನು ಸ್ಥಾಪಿಸುತ್ತಾ ಈ ಯಜ್ಞಸ್ಥಾನದಲ್ಲಿ ನಿಯಮದಿಂದ ಬಂದು ಕುಳಿತಿರಿ ಎಂದು ಪ್ರಾರ್ಥಿಸುತ್ತೇವೆ.

ಸೇಷ್ಮೀಯಮಾಣೇ ಇತಿ ವಾ ಸುಷ್ವಾಪಯಂತ್ಯಾವಿತಿ ವಾಽಽಸೀದತಾ-
ಮಿತಿ ವಾ ನ್ಯಾಸೀದತಾಮಿತಿ ವಾ | ಯಜ್ಞಿಯೇ, ಉಪಕ್ರಾಂತೇ
ದಿವ್ಯೇ, ಯೋಷಣೇ ಬೃಹತ್ಯೌ-ಮಹತ್ಯೌ ಸುರುಕ್ಮೇಸುರೋಚನೇ |
ಅಧಿ-ದಧಾನೇ ಶುಕ್ರಪೇಶಸಂ ಶ್ರಿಯಮ್ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಷ್ವಯಂತೀ ಎಂಬುದಕ್ಕೆ ಸೇಷ್ಮೀಯಮಾಣೇ ಇತ್ಯಾದಿ ವ್ಯಾಖ್ಯಾನ. ಅನ್ಯೋನ್ಯ ವೈಭವವನ್ನು ನೋಡಿ ಮಂದಹಾಸಹೊಂದಿದವರು ಅಥವಾ ಚನ್ನಾಗಿ ಜನರನ್ನು ಮಲಗುವಂತೆ ಮಾಡುವವರು ಎಂದರ್ಥ ಉಪಸರ್ಗಗಳಿಗೆ ಕ್ರಿಯಾಪದದೊಡನೆ ಸಂಬಂಧವಿರುವುದರಿಂದ ಆ ಎಂಬುದನ್ನು ಸದತಾಂ ಎಂಬಲ್ಲಿ ಸೇರಿಸಬೇಕು. ವೇದದಲ್ಲಿ ಉಪಸರ್ಗಧಾತುಗಳಿಗೆ ವ್ಯವಹಿತವಾದ ಪ್ರಯೋಗವಿರುತ್ತದೆ. ನ್ಯಾಸೀದತಾಂ ಎಂದು ಅರ್ಥಕಲ್ಪಿಸುವಾಗ ಉತ್ತರದಲ್ಲಿರುವ ನಿ ಎಂಬುದನ್ನೂ ಪೂರ್ವಕ್ಕೆ ಸೇರಿಸಿಕೊಂಡು ಹೇಳಿದೆ. ಆಸೀದತಾಂ ಎಂಬಲ್ಲಿ ನಿಪದವು ಕೇವಲ ಪಾದಪೂರಣಾರ್ಥದಲ್ಲಿ ಹೇಳಿದೆಯೆಂದು ತಿಳಿಯಬೇಕು. ಉಳಿದ ಪದಗಳ ಅರ್ಥ ಸ್ಪಷ್ಟವಾಗಿದೆ.

ಶುಕ್ರಂ ಶೋಚತೇರ್ಜ್ವಲತಿಕರ್ಮಣಃ ||

ಶುಕ್ರಪೇಶಸಂ ಎಂಬ ಮಂತ್ರದಲ್ಲಿರುವ ಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಶುಚ-ದೀಪ್ತೌ ಧಾತು. ಇದಕ್ಕೆ 'ಋಜೇಂದ್ರಾಗ್ರವಜ್ರವಿಪ್ರ—' ಎಂಬ ಉಣಾದಿಸೂತ್ರದಿಂದ ರ ಪ್ರತ್ಯಯ. ಧಾತುವಿಗೆ ಕಕಾರಾಂತಾದೇಶ. ಗುಣಾಭಾವವು ನಿಪಾತದಿಂದ ಸಿದ್ಧವಾಗುತ್ತದೆ. ಅಥವಾ ಶುಚ್‌ಧಾತುವಿಗೆ ಕ್ವಿಪ್ ಬಂದರೆ ಶುಕ್ ಎಂದಾಗುತ್ತದೆ. ಅದು ಉಳ್ಳದ್ದು ಎಂಬ ಮತ್ವರ್ಥದಲ್ಲಿ ರಪ್ರತ್ಯಯ. ಪ್ರಕಾಶವೆಂದರ್ಥ.

ಪೇಶ ಇತಿ ರೂಪನಾಮ ಪಿಂಶತೇರ್ವಿಪಿಶಿತಂ ಭವತಿ ||

ರೂಪಕ್ಕೆ ಪೇಶವೆಂದು ಹೆಸರು. ಪಿಶ-ಅವಯವೇ ಧಾತು. ಮುಚಾದಿಗಳಲ್ಲಿ ಪಠಿತವಾದುದರಿಂದ ನುಮ್ ಬಂದುದರಾದ ಪಿಂಶತೇಃ ಎಂದು ನಿರ್ದೇಶಿಸಿರುತ್ತಾರೆ. ಭಟ್ಟೋಜಿದೀಕ್ಷಿತರು ದೀಪನಾರ್ಥವನ್ನೂ ಹೇಳಿರುತ್ತಾರೆ. ತ್ವಷ್ಟಾರೂಪಾಣಿ ಪಿಂಶತು ಎಂದು ಆಗಮಪ್ರಮಾಣವನ್ನು ತೋರಿಸುತ್ತಾರೆ. ವಿಪಿಶಿತಂ ಎಂಬುದಕ್ಕೆ ವಿಕಸಿತಂ ಎಂದರ್ಥ.

ದೈವ್ಯಾಹೋತಾರಾ | ದೈವ್ಯೌ ಹೋತಾರೌ | ಅಯಂ ಚಾಗ್ನಿರಸೌ ಚ ಮಧ್ಯಮಃ | ತಯೋರೇಷಾ ಭವತಿ || ೧೧ ||

ದೈವ್ಯಾಹೋತಾರಾ (F) ಎಂಬ ಪದದ ನಿರ್ವಚನವನ್ನು ತೋರಿಸುತ್ತಾರೆ. ಇಲ್ಲಿ ಎರಡು ಪದಗಳಿವೆ. ಎರಡು ಪದಗಳಲ್ಲಿಯೂ ದ್ವಿವಚನಸ್ಥಾನದಲ್ಲಿ ಆಕಾರಾದೇಶ ಬಂದಿದೆ. ಪಾರ್ಥಿವ ಮಧ್ಯಮಾಗ್ನಿಯ ನಾಮಧೇಯ. ಅಗ್ನ್ಯಾದಿತ್ಯರೆಂದರ್ಥ. ಇವೆರಡರ ಪ್ರಾಧಾನ್ಯಸ್ತುತಿಯನ್ನು ಮುಂದೆ ಹೇಳುವ ಋಙ್ಮಂತ್ರವು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಎಂಟನೆಯ ಅಧ್ಯಾಯದಲ್ಲಿ

ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾದಶ ಖಂಡಃ

## ಹನ್ನೆರಡನೆಯ ಖಂಡವು

ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ | ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ | (ಋ. ಸಂ, ೧೦-೦೧೦-೭) ದೈವ್ಯೌ ಹೋತಾರೌ ಪ್ರಥಮೌ ಸುವಾಚೌ ನಿರ್ಮಿಮಾನೌ ಯಜ್ಞಂ ಮನುಷ್ಯಸ್ಯ ಮನುಷ್ಯಸ್ಯ ಯಜನಾಯ ಪ್ರಚೋದಯಮಾನೌ

ಯಜ್ಞೇಷು ಕರ್ತಾರೌ ಪೂರ್ವಸ್ಯಾಂ ದಿಶಿ ಯಷ್ಟವ್ಯಮಿತಿ ಪ್ರದಿಶಂತೌ ತಿಸ್ರೋ ದೇವೀ-ಸ್ತಿಸ್ರೋ ದೇವ್ಯಸ್ತಾಸಾಮೇಷಾ ಭವತಿ ॥ ೧೨ ॥

ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ
ಮನುಷೋ ಯಜಧ್ಯೈ ॥ ಪ್ರ ಚೋದಯಂತಾ ವಿದಥೇಷು
ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥

(ಋ. ಸಂ. ೮-೬-೯)

ದೈವ್ಯಾ ಹೋತಾರಾ ಪದವಾಚ್ಯವಾದ ದೇವತಾಸ್ತುತಿಯನ್ನು ತೋರಿಸುವ ಋಙ್ಮಂತ್ರವನ್ನು ಉದಾಹರಿಸುತ್ತಾರೆ. ದೇವತೆಗಳ ಮಧ್ಯದಲ್ಲಿರುವ ಅಥವಾ ದೇವತೆಗಳಾದ, ಹೋಮನಿಷ್ಪಾದಕರಾದ, ಹೋತೃ ಎಂಬ ನಾಮವುಳ್ಳ ಆಗ್ನ್ಯಾದಿತ್ಯರು ದುರ್ಗಾ ಚಾರ್ಯರು ದೇವತೆಗಳನ್ನು ಕರೆಯುವ ವಾಯ್ವಗ್ನಿಗಳೆಂದು ಹೇಳುತ್ತಾರೆ. ಈ ಯಜ್ಞದಲ್ಲಿ ಬಂದು ಕುಳಿತಿರಲಿ ಎಂದು ಪೂರ್ವ ಮಂತ್ರದಿಂದ ಸಂಬಂಧ ಕಲ್ಪಿಸಬೇಕು. ಇವರು ಮನುಷ್ಯ ಹೋತೃವಿಗಿಂತ ಪ್ರಥಮರು, ಶೋಭನಸ್ತೋತ್ರವುಳ್ಳವರು ಸ್ವರ್ಗಕ್ಕೋಸ್ಕರ ಯಾಗಮಾಡುವ ಮನುಷ್ಯನ ಯಾಗಕ್ಕೋಸ್ಕರ ಪ್ರೇರೇಪಿಸುವವರು, ಆದುದರಿಂದಲೇ ಯಾಗವನ್ನು ಉತ್ಪಾದನೆಮಾಡುವವರು, ಯಜ್ಞಗಳಲ್ಲಿ ಸ್ತುತಿಯನ್ನು ರಚಿಸುವವರು, ಆಹವನೀಯ ಜ್ಯೋತಿಯನ್ನು ವಿಧಿವಾಕ್ಯಗಳಿಂದ ಉಪದೇಶಿಸುವವರು, ಅಥವಾ ಅವಿಯೋಗದಿಂದ ಸ್ವಭಾವದಿಂದ ಯಜ್ಞಕ್ಕೆ ಉಪಕಾರ ಮಾಡುತ್ತಾ ಯಜ್ಞದಲ್ಲಿ ಕುಳಿತಿರ ಬೇಕೆಂದು ಪ್ರಾರ್ಥಿಸುತ್ತೇವೆ.

ದೈವ್ಯೌ ಹೋತಾರೌ ಪ್ರಥಮೌ ಸುವಾಚೌ ನಿರ್ಮಿಮಾನೌ ಯಜ್ಞಂ
ಮನುಷ್ಯಸ್ಯ, ಮನುಷ್ಯಸ್ಯ ಯಜನಾಯ ಪ್ರಚೋದಯಮಾನೌ,
ಯಜ್ಞೇಷು ಕರ್ತಾರೌ । ಪೂರ್ವಸ್ಯಾಂ ದಿಶಿ ಯಷ್ಟವ್ಯಮಿತಿ
ಪ್ರದಿಶಂತೌ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮನುಷ್ಯನು ಸ್ವರ್ಗಸುಖವನ್ನು ಹೊಂದಲು ಮಾಡಬೇಕಾದ ಯಜ್ಞವನ್ನು ಉತ್ಪಾದನೆ ಮಾಡುವವರು ವಾಯ್ವಗ್ನಿಗಳು ಅಗ್ನಿ ಇಲ್ಲದ ಯಜ್ಞವಿಲ್ಲವಾದುದರಿಂದು ಯಜ್ಞವನ್ನು ನಿರ್ಮಿಸುವವನು ಅಗ್ನಿಯು. ಗಾಳಿ ಊದದೇ ಅಗ್ನಿಯು ಪ್ರಜ್ವಲಿಸುವುದಿಲ್ಲವಾದುದರಿಂದ ವಾಯುವೂ ಯಜ್ಞನಿರ್ಮಾಪಕನು. ಮೈತ್ರಾಯಣನಾದ ವಾಯುವು ಅಗ್ನಿಗೆ ಹೋತೃವಾಗುತ್ತಾನೆ. ಇವರಿಬ್ಬರಿಬ್ಬರೇ ದೇವತೆಗಳನ್ನು ಆಹ್ವಾನಮಾಡುವವರೂ ಆಗಿರುತ್ತಾರೆ. ಪೂರ್ವದಿಕ್ಕಿನಲ್ಲಿ ಆಹವನೀಯದಲ್ಲಿಯೇ ಯಾಗಮಾಡಬೇಕೆಂದು ಉಪದೇಶಿಸುವವರು. ಆಜ್ಞಾಪಿಸುವವರಂತೆ ಇವರಿಬ್ಬರೂ ನಿತ್ಯವೂ ಅವಿಯೋಗ ದಿಂದ ಇದ್ದು ಸ್ವಾಭಾವಿಕವಾಗಿ ಯಜ್ಞಕ್ಕೆ ಉಪಕಾರಮಾಡುತ್ತಿರುತ್ತಾರೆ ಎಂದು ಭಾಷ್ಯಕಾರರ ತಾತ್ಪರ್ಯ.

ತಿಸ್ರೋ ದೇವೀಃ । ತಿಸ್ರೋ ದೇವ್ಯಃ । ತಾಸಾಮೇಷ್ಯಭವತಿ ॥ ೧೨ ॥

ತಿಸ್ರೋ ದೇವೀಃ ಎಂಬ ಪದದ ಅರ್ಥವಿವರಣೆ ಆರಂಭಿಸುತ್ತಾರೆ. ಭಾರತೀ, ಇಳಾ, ಸರಸ್ವತೀ ಎಂದು ಮೂವರು ದೇವಿಯರು ಅರ್ಥ. ಆಗ್ನಾಯೀ, ಪೃಥಿವೀ ಇಳಾ ಎಂದು ಮೂವರು ಸ್ತ್ರೀಯರೆಂದು ಪ್ರತ್ಯಕ್ಷವಾಗಿ ಹಿಂದೆ ಹೇಳಿದೆ. ಆದರೂ ಮೂವರು

ದೇವಿಯರು ಎಂದು ಸಾಮಾನ್ಯಾಕಾರವಾಗಿ ಹೇಳಿರುವುದರಿಂದ ಪೃಥಿವೀಸ್ಥಾನವನ್ನು ಭಾಷ್ಯಕಾರರು ಜ್ಞಾಪಿಸಿರುತ್ತಾರೆ. ಸರಸ್ವತೀ ಮಧ್ಯಮಸ್ಥಾನದೇವತೆ. ಪ್ರತಿಜ್ಞಾವಾಕ್ಯದಲ್ಲಿ ಪ್ರಥಮಾರ್ಧದಲ್ಲಿ ದ್ವಿತೀಯಾ ಹೇಳಿದೆ. ಮುಂದೆ ಹೇಳುವ ಮಂತ್ರವು ಇವುಗಳಿಗೆ ಪ್ರಧಾನ ಸ್ತುತಿಯಾಗುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ಎಂಟನೆಯ ಅಧ್ಯಾಯದಲ್ಲಿ
ಹನ್ನೆರಡನೆಯಖಂಡವು ಸಮಾಪ್ತವಾಗಿದೆ.

---

## ಅಥ ತ್ರಯೋದಶ ಖಂಡಃ

## ಹದಿಮೂರನೆಯ ಖಂಡವು

ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ । ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥ (ಋ. ಸಂ. ೧೦-೧೧೦-೮) ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ ಭರತ ಆದಿತ್ಯಸ್ತಸ್ಯ ಭಾ ಇಡಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ. ಆಸೀದಂತು ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಸ್ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಸ್ತಸ್ಯೈಷಾ ಭವತಿ ॥ ೧೩ ॥

ಆನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹಚೇತ
ಯಂತೀ । ತಿಸ್ರೋ ದೇವಿರ್ಬರ್ಹಿರೇದಂ ಸ್ಯೋನಂಸರಸ್ವತೀ
ಸ್ವಪಸಃ ಸದಂತು ॥

(ಋ. ಸಂ. ೯-೬-೯)

ಭಾರತೀ, ಇಳಾ, ಸರಸ್ವತೀ ಮೂರು ದೇವಿಯರನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಆದಿತ್ಯಸಂಬಂಧವಾದ ದ್ಯುಸ್ಥಾನದೀಪ್ತಿಯು ನಮ್ಮ ಯಜ್ಞಕ್ಕೆ ಶೀಘ್ರವಾಗಿ ಬರಲಿ. ಮನುಷ್ಯರಂತೆ ತಮ್ಮ ಕರ್ತವ್ಯವನ್ನು ತಿಳಿದು ಪೃಥಿವೀಸ್ಥಾನವಾದ ಇಳಾದೇವಿಯು ಇಲ್ಲಿಗೆ ಬರಲಿ. ಹಾಗೆಯೇ ಸರಸ್ವತಿಯೂ (ಮಧ್ಯಮಸ್ಥಾನದೇವತೆ) ಬರಲಿ. ಹೀಗೆ ಮೂವರು ಶೋಭನ ಕರ್ಮವುಳ್ಳವರಾಗಿ ಸುಖಕರವಾದ ಈ ಯಜ್ಞವನ್ನು ಹೊಂದಲಿಯೆಂದು ಪ್ರಾರ್ಥಿಸುತ್ತೇವೆ.

ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ, ಭರತ ಆದಿತ್ಯಸ್ತಸ್ಯಭಾ,
ಇಳಾಚ ಮನುಷ್ಯವದಿಹ ಚೇತಯಮಾನಾ, ತಿಸ್ರೋ ದೇವ್ಯೋ
ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಭರತ ಅಂದರೆ ಸೂರ್ಯ. ಅವನ ಸಂಬಂಧವಾದ ಕಾಂತಿಗೆ ಭಾರತೀ ಎಂದು ಹೆಸರು. ತೂಯಂ ಶೀಘ್ರಾರ್ಥದಲ್ಲಿ (ನಿ. ೨-೧೫) ಹೇಳಿದೆ. ಬರ್ಹಿ ಶಬ್ದ ಹಿಂದೆ ವಾಖ್ಯಾತವಾಗಿದೆ.

ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇ ರ್ವಾ ಸ್ಯಾದ್ದಿ-
ಪ್ತೀಕರ್ಮಣಸ್ತ್ವಕ್ಷತೇ ರ್ವಾ ಸ್ಯಾತ್ಕರೋತಿ ಕರ್ಮಣಸ್ತಸ್ಯೈಷಾ
ಭವತಿ ॥ ೧೩ ॥

ತೃಷ್ಟೃ ಶಬ್ದದ (೧೦) ನಿರ್ವಚನವನ್ನು ತೋರಿಸುತ್ತಾರೆ. ತೂರ್ಣಮಶ್ನುತ ಎಂಬರ್ಥದಲ್ಲಿ ತೃಷ್ಟಾ ಎಂದಾಗಿದೆ. ತೂರ್ಣ ಪದವು ಉಪಪದವಾಗಿರುವಾಗ ಅಶೂ ಧಾತುವಿಗೆ ತೃತ್ ಪ್ರತ್ಯಯ ಬಂದು ಇಲೋಪ ನಿಪಾತಿತವಾಗಿದೆ. ವೇಗವಾಗಿ ವ್ಯಾಪಿಸು ವುದು ತ್ವಷ್ಟಾ. ಮಧ್ಯಮಸ್ಥಾನದ ವಾಯುವು. ಆಪ್ರೀ ಸೂಕ್ತ ಪಠಿತವಾದುದರಿಂದ ಇಲ್ಲಿ ಉಪಾತ್ತವಾಗಿದೆ. ಅಥವಾ ದೀಪ್ತ್ಯರ್ಥಕ ತ್ವಿಷಧಾತುವಿನಿಂದ ಈ ತ್ವಷ್ಟೃಪದವು ನಿಷ್ಪನ್ನವಾಗಿದೆ. ವೈದ್ಯುತವಾದುದರಿಂದ ಇದು ಪ್ರಕಾಶಕವಾಗುತ್ತದೆ 'ತ್ವಿಷೇರ್ದೇವತಾಯಾ ಮಕರಶ್ಚೋಪಧಾಯಾಃ' ಎಂಬ ಸೂತ್ರದಿಂದ ತೃನ್ ಬಂದು ರೂಪಸಿದ್ಧಿಯಾಗುತ್ತದೆ. ವೃದ್ಧ್ಯರ್ಥ ದಲ್ಲಿ ಇದು ನಿಷ್ಪನ್ನವಾಗಿದೆಯೆಂದು ದುರ್ಗಾಚಾರ್ಯರ ಅಭಿಪ್ರಾಯ. ಅಗ್ನಿಯೆಂದು ಅರ್ಥ ಹೇಳಿದಾಗ ಇದು ಸಂಗತವಾಗುತ್ತದೆ. ದೇವತೆಯಾದುದರಿಂದ ನಿತ್ಯವೂ ಅಭಿವೃದ್ಧನಾಗುತ್ತಾನೆ. ಅಥವಾ ಸಾಮಾನ್ಯಕ್ರಿಯಾವಾಚಕ ತ್ವಕ್ಷಧಾತುವಿನಿಂದ ಈ ತ್ವಷ್ಟೃಶಬ್ದವುಂಟಾಗಿದೆ. ತನೂಕರಣಾರ್ಥವನ್ನು ಒಟ್ಟರೆ ಸದಾಕ್ರಿಯಾಶೀಲನು ಎಂದರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ತ್ವಷ್ಟೃವಿನ ಪ್ರಧಾನಸ್ತುತಿಯನ್ನು ತಿಳಿಸುತ್ತದೆ.

ಜಾತವೇದೋರೂಪನಾದ ಎಲೈ ಅಗ್ನಿಯೇ, ಯಜ್ಞಕರ್ತನ ಗೃಹದಲ್ಲಿ ಇಂದು ಪ್ರಜ್ವಲಿತನೂ, ದೇವತಾತ್ಮನೂ ಆದ ನೀನು ಇಂದ್ರಾದಿದೇವತೆಗಳನ್ನು ಪೂಜಿಸುತ್ತೀಯೆ. ಸ್ತುತಿಕರ್ತರಿಂದ ಪೂಜಿಸಲ್ಪಡುವವನೂ, ಅವರ ಕರ್ಮವನ್ನು ಅರಿತವನೂ ಆದ ನೀನು ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾ. ಕ್ರಾಂತಪ್ರಜ್ಞನೂ, ಉತ್ಕೃಷ್ಟವಾದ ಜ್ಞಾನವುಳ್ಳವನೂ ಆದ ನೀನು ದೇವದೂತನಾಗಿರುತ್ತೀಯೆ.

ಯಾಸ್ಕರು ಈ ಸೂಕ್ತದ ಪ್ರತಿಋಕ್ಕಿಗೂ ನಿರ್ವಚನವನ್ನು ಹೇಳಿದಾರೆ—

ಇಧ್ಮಃ । ತಾಸಾಮಿಧ್ಮಃ ಪ್ರಥಮಗಾಮೀ ಭವತಿ । ಇಧ್ಮಃ ಸಮಿಂಧನಾತ್ । ತಸ್ಯೈಷಾ ಭವತಿ । ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ಯಜಸಿ ಜಾತವೇದಃ । ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ ॥ ಸಮಿದ್ಧೋ ಅದ್ಯ ಮನುಷ್ಯಸ್ಯ ಮನುಷ್ಯಸ್ಯ ಗೃಹೇ ದೇವೋ ದೇವಾನ್ಯಜಸಿ ಜಾತವೇದ ಆ ಚ ವಹ ಮಿತ್ರಮಹಶ್ಚಿಕಿತ್ವಾಂಶ್ಚೇತು ನಾವಾಸ್ತ್ವಂ ದೂತಃ ಕವಿರಸಿ ಪ್ರಣೀತಾಃ ಪ್ರವೃದ್ಧಚೇತಾಃ ॥ ಯಜ್ಞೇಧ್ಮ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥ (ನಿ. ೮-೫)

ಆಪ್ರೀಸೂಕ್ತಗಳಲ್ಲಿ ಸ್ತುತರಾಗುವ ದೇವತೆಗಳಲ್ಲಿ ಇಧ್ಮಃ ಎಂಬುದು ಮೊದಲನೆಯದು. ಸಮಿದ್ಧ ಶಬ್ದವು ಸಂ ಎಂಬ ಉಪರ್ಗ ದಿಂದ ಕೂಡಿದ ಇಧ್-ಹೊತ್ತಿಸು ಪ್ರಜ್ವಲನಗೊಳಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇಧ್ಮವೆಂದರೆ ಅಗ್ನಿಯ ಉರಿಯುವುದಕ್ಕಾಗಿ ಅದರಲ್ಲಿ ಹಾಕುವ ಸಮಿತ್, ಸೌದೆ. ಮೊದಲಾದ ಪ್ರಜ್ವಲನಸಾಧನ. ಸಮಿದ್ಧೋ ಅದ್ಯ ಎಂಬ ಮುಂದಿನ ಋಕ್ಕು ಈ ಇಧ್ಮಶಬ್ದದ ಅರ್ಥವನ್ನು ಸ್ಪಷ್ಟಪಡಿಸುವುದು.

**ಸಮಿದ್ಧೋ ಅದ್ಯ ಮನುಷ್ಯಸ್ಯ ಮನುಷ್ಯಸ್ಯ ಗೃಹೇ**—**ದುರೋಣೇ** ಎಂದರೆ ಗೃಹ ಅಥವಾ ಯಜ್ಞ ಗೃಹ. **ದುರವನೇ ಆಯಾಸೇನ ರಕ್ಷಿತವ್ಯೇ ಗೃಹೇ**--ನಮ್ಮನ್ನು ಆಯಾಸದಿಂದ ಎಂದರೆ ಅಪಾಯಗಳಿಂದ ರಕ್ಷಿಸುವ ಸ್ಥಳಕ್ಕೆ ದುರವನೇ ಅಥವಾ ದುರೋಣೇ ಎಂದು ಹೆಸರು. ಎಲೈ ಅಗ್ನಿಯೇ, ಪ್ರತಿ ಮನುಷ್ಯನ ಎಂದರೆ ಯಜಮಾನನ ಯಜ್ಞಗೃಹದ ಲ್ಲಿಯೂ ನೀನು ಹೊತ್ತಿಸಲ್ಪಟ್ಟು ಬೆಳಗುತ್ತಿರುವೆ ಎಂದರೆ ಪ್ರಕಾಶಮಾನನಾಗಿ ಉರಿಯುತ್ತಿರುವೆ.

**ದೇವೋ ದೇವಾನ್ ಯಜಸಿ ಜಾತವೇದಃ**—ಎಲೈ ಜಾತಪ್ರಜ್ಞನಾದ ಅಗ್ನಿಯೇ, ದೇವಾತ್ಮನಾದ ಅಥವಾ ಪ್ರಕಾಶಮಾನನಾದ ನೀನು ದೇವತೆಗಳನ್ನು ಪೂಜಿಸುತ್ತೀಯೆ, ಎಂದರೆ ಮನುಷ್ಯಯಜಮಾನರು ನಿನ್ನಲ್ಲಿ (ಅಗ್ನಿಯಲ್ಲಿ) ಆಹುತಿ ರೂಪವಾಗಿ ಅರ್ಪಿಸುವ ಹವಿರಾದಿಗಳನ್ನು ಆಯಾ ದೇವತೆಗಳಿಗೆ ಸೇರುವಂತೆ ಮಾಡುತ್ತೀಯೆ, **ಜಾತವೇದಃ** ಎಂದರೆ ಅಗ್ನಿಯು ಅರಣಿಗಳಲ್ಲಿ ಕಡೆಯಲ್ಪಟ್ಟು ಉತ್ಪನ್ನವಾದಕೂಡಲೇ ಎಲ್ಲರೂ ಅದನ್ನು ನೋಡಿ ತಿಳಿಯುವರು ಅಥವಾ ಉತ್ಪನ್ನವಾಗುವ ಸಕಲ ಭೂತಜಾತವನ್ನು ತಿಳಿಯುವವನಾದ್ದರಿಂದ ಅಗ್ನಿಗೆ **ಜಾತವೇದಾಃ** ಎಂದು ಹೆಸರು. ಇತರ ದೇವತೆಗಳಿಗೆ ಹವಿರಾದಿಗಳನ್ನು ಅಗ್ನಿಯ ಮೂಲಕವೇ ಅರ್ಪಿಸಬೇಕಾಗಿರುವುದರಿಂದ ಅಗ್ನಿಯೇ ಅವರನ್ನು ಪೂಜಿಸುವೆನೆಂದು **ದೇವಾನ್ ಯಜಸಿ** ಎಂಬ ಶಬ್ದಗಳಿಂದ ವರ್ಣಿಸಲಾಗಿದೆ.

**ಆ ಚ ವಹ ಮಿತ್ರಮಹಶ್ಚಿಕಿತ್ವಾಂಶ್ಚೇತನಾವಾಂಸ್ತ್ವಂ**—**ಮಿತ್ರಮಹಾ** ಎಂದರೆ **ಸ್ತುತ್ಯಸ್ತೋತೃಲಕ್ಷಣ-ತ್ವೇನ ಮಿತ್ರಭೂತಾನಾಂ ಸ್ತೋತೄಣಾಂ ಪೂಜ್ಯಮಾನಾಗ್ನೇ**—ಅಗ್ನಿಯು ಸ್ತುತಿಸಲ್ಪಡುವವನು. ಜನರು ಸ್ತೋತ್ರ ಮಾಡುವವರು. ಇವರಿಗೆ ಎಂದರೆ ಜನರಿಗೂ ಅಗ್ನಿಗೂ ಸ್ತುತ್ಯಸ್ತೋತೃಸಂಬಂಧವಿದೆ. ಈ ವಿಧವಾದ ಸಂಬಂಧದಿಂದ ಅಗ್ನಿಯು ಸ್ತೋತ್ರಮಾಡುವ ಜನರಿಗೆ ಮಿತ್ರನಾಗಿರುವನು ಎಂದರೆ ಪೂಜ್ಯನಾಗಿರುವನು. **ಚಿಕಿತ್ವಾನ್**—ಎಂದರೆ **ಚೇತನಾ-ವಾನ್ ತೈಃ ಕೃತಾಃ ಸ್ತುತೀಃ ಪ್ರಜಾನಾನ್** ಜನರು ಮಾಡುವ ಸ್ತೋತ್ರಗಳನ್ನು ಅಗ್ನಿಯು ತಿಳಿಯುವನು ಎಂದಭಿಪ್ರಾಯವು.

**ತ್ವಂ ದೂತಃ ಕವಿರಸಿ ಪ್ರಚೇತಾಃ ಪ್ರವೃದ್ಧಚೇತಾಃ**—ನಾನಾದೇವತೆಗಳಿಗೆ ಅಗ್ನಿಯ ಮೂಲಕ ಹವಿಸ್ಸನ್ನು ಅರ್ಪಿಸುವರು. ಅದನ್ನು ಅಗ್ನಿಯು ಆ ದೇವಗಳಿಗೆ ಸೇರುವಂತೆ ಮಾಡುವುದರಿಂದ ಅಗ್ನಿಯು ಜನರಿಗೂ ದೇವತೆಗಳಿಗೂ ಮಧ್ಯ ಇರುವ ದೂತನೆಂದು ಹೇಳಲ್ಪಡುವನು. **ಕವಿಃ** ಎಂದರೆ ಕ್ರಾಂತಪ್ರಜ್ಞನು. ಪ್ರಕೃಷ್ಟಜ್ಞಾನವುಳ್ಳವನು. ಇತರರಿಗಿಂತ ಅಧಿಕವಾದ ಜ್ಞಾನವುಳ್ಳವನು, ಅತೀಂದ್ರಿಯಜ್ಞಾನವುಳ್ಳವನು. ಮನುಷ್ಯರ ಇಂದ್ರಿಯಗಳಿಗೆ ತಿಳಿದುಕೊಳ್ಳಲು ಸಾಧ್ಯವಾಗದ ಜ್ಞಾನವು ಈ ಅಗ್ನಿಗಿದೆ. ಆದ್ದರಿಂದ ಇವನನ್ನು **ಪ್ರಚೇತಾಃ** ಅಥವಾ **ಪ್ರವೃದ್ಧಚೇತಾಃ** ಎಂದು ಕರೆಯಲಾಗಿದೆ. ಆದ್ದರಿಂದ ಎಲೈ ಅಗ್ನಿಯೇ, ನೀನು ದೇವಮನುಷ್ಯರ ನಡುವೆ ಹವಿರಾದಿಗಳನ್ನು ಒಯ್ಯುವ ದೂತನು, ಕ್ರಾಂತಪ್ರಜ್ಞನು, ಅತೀಂದ್ರಿಯ ಜ್ಞಾನವುಳ್ಳವನು. ಇಂತಹ ನೀನು **ಆ ಚ ವಹ ಆಪ್ರಾಪಯ**—ದೇವತೆಗಳನ್ನು ಈ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ ಎಂದಭಿಪ್ರಾಯವು.

**ಯಜ್ಞೇಧ್ಮ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ**—ಈ ಇಧ್ಮ ಎಂಬ ದೇವತೆ ಯಾರು ಎಂಬ ವಿಷಯದಲ್ಲಿ ಮತಭೇದಗಳಿವೆ. ಯಜ್ಞದಲ್ಲಿ ಉಪಯೋಗಿಸುವ ಇಧ್ಮ ಎಂಬ ಸಮಿತ್ತು ಎಂದು ಕಾತ್ಥಕ್ಯ (ಕತ್ಥಕ ಎಂಬುವರ ಪುತ್ರ) ಎಂಬ ಆಚಾರ್ಯರ ಮತವು. ಇಧ್ಮ ಎಂದರೆ ಅಗ್ನಿಯೆಂದು ಶಾಕಪೂಣಿಯವರ ಮತವು.

ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾಃ ಸಮಂಜನ್ತ್ಸ್ವದಯಾ ಸುಜಹಃ ।
ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥ ೨ ॥

ತನೂನಪಾತ್ಸಂಜ್ಞಕನೂ, ಉತ್ತಮವಾದ ಜಿಹ್ವೆಯುಳ್ಳವನೂ ಆದ ಎಲೈ ಅಗ್ನಿಯೇ, ಯಜ್ಞಕ್ಕೆ ಫಲಪ್ರಾಪ್ತಿ ಸಾಧಕವಾದ ಮಾರ್ಗಗಳನ್ನು ಮಧುಕರವಾದ ಸೋಮದಿಂದ ತೋಯಿಸುತ್ತ ಮಾಧುರ್ಯಯುಕ್ತವನ್ನಾಗಿ ಮಾಡು. ಧ್ಯಾನಾತ್ಮಕದಾದ ನಮ್ಮ ಸ್ತುತಿಗಳನ್ನೂ ನಮ್ಮ ಯಜ್ಞದ ಹವಿಸ್ಸನ್ನೂ ನಿನ್ನ ಪ್ರಜ್ಞೆಗಳಿಂದ ವೃದ್ಧಿಗೊಳಿಸುತ್ತ ನಮ್ಮ ಯಜ್ಞವನ್ನು ದೇವತೆಗಳಲ್ಲಿಗೆ ಸೇರುವಂತೆ ಮಾಡು.

ತನೂನಪಾತ್ । ತನೂನಪಾದಾಜ್ಯಮಿತಿ ಕಾತ್ಥಕ್ಯಃ । ನಪಾದಿತ್ಯನಂತರಾಯಾ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ । ಗೌರತ್ರ ತನೂರುಚ್ಯತೇ । ತತಾ ಅಸ್ಯಾಂ ಭೋಗಾಃ ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ಜಾಯತೇ । ಅಗ್ನಿರಿತಿ ಶಾಕಪೂಣೀ । ಆಪೋಽತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ ॥ ತಸ್ಯೈಷಾಪರಾ ಭವತಿ । ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜಸ್ತ್ಸ್ವದಯಾ ಸುಜಿಹ್ವ । ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥ ತನೂನಪಾತ್ ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ ಮಧುನಾ ಸಮಂಜನ್ಸ್ವದಯ ಕಲ್ಯಾಣಜಿಹ್ವಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ನೋ ನೋ ಯಜ್ಞಂ ಗಮಯ ॥

ಈ ಋಕ್ಕಿನಲ್ಲಿ ಸ್ತುತಿಸಲ್ಪಟ್ಟಿರುವ ತನೂನಪಾತ್ ಎಂಬ ದೇವತೆಯು ಯಾರು ಎಂದರೆ, ಈ ವಿಷಯದಲ್ಲಿಯೂ ಮತಭೇದವಿರುವುದು.

ತನೂಪಾತ್ । ತನೂನಪಾದಾಜ್ಯಮಿತಿ ಕಾತ್ಥಕ್ಯಃ—ತನೂನಪಾತ್ ಎಂದರೆ ಆಜ್ಯವು (ತುಪ್ಪ) ಎಂದು ಕಾತ್ಥಕ್ಯ ಎಂಬುದರ ಮತವು. ಅದು ಹೇಗೆ ಎಂಬ ವಿಷಯವನ್ನು ಮುಂದಿನ ವಾಕ್ಯದಲ್ಲಿ ವಿವರಿಸಲಾಗುವುದು.

ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ । ಗೌರತ್ರ ತನೂರುಚ್ಯತೇ । ತತಾ ಅಸ್ಯಾಂ ಭೋಗಾಃ ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ಜಾಯತೇ—ನಪಾತ್ ಎಂದರೆ ಪ್ರಜೆಯ ಪ್ರಜೆಯು ಎಂದರೆ ಪುತ್ರನ ಅಥವಾ ಪುತ್ರಿಯ ಪ್ರಜೆ ಅಥವಾ ಸಂತತಿಯು. ಎಂದರೆ ಮಗನ ಮಗ ಅಥವಾ ಮಗಳ ಮಗ, ಮೊಮ್ಮಗ ಎಂದರ್ಥವು. ಅಥವಾ ಮೊಮ್ಮಗಳಾದರೂ ಆಗಬಹುದು. ಒಂದು ಸಂತತಿಯನ್ನು ದಾಟಿ ಮುಂದೆ ಬರುವ ಸಂತತಿಯು ಎದಭಿಪ್ರಾಯವು. ಈಗ ಗೋವಿಗೂ (ಹಸುವಿಗೂ) ತನೂಃ ಎಂದು ಹೆಸರಿದೆ. ಆ ಗೋವಿನಿಂದ ಭೋಗಸಾಧನವಾದ ಹಾಲು ಉತ್ಪನ್ನವಾಗುವುದು. ಆ ಹಾಲಿನಿಂದ ಪುನಃ ಆಜ್ಯವು ಉತ್ಪನ್ನವಾಗುವುದು. ಆದ್ದರಿಂದ ಗೋವಿಗೆ ಹಾಲು ಸಂತತಿಯು, ಹಾಲಿಗೆ ಆಜ್ಯವು ಸಂತತಿಯು. ಎಂದರೆ ಗೋವಿಗೆ ಆಜ್ಯವು ತನ್ನ ಸಂತತಿಯ ಸಂತತಿ ಎಂದಾಯಿತು. ಆದ್ದರಿಂದ ತನೂನಪಾತ್ ಎಂದರೆ ಆಜ್ಯವು ಎಂದು ಕಾತ್ಥಕ್ಯರ ಮತವು.

**ಅಗ್ನಿರಿತಿ ಶಾಕಪೂಣಿಃ । ಅಪೋಽತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ । ತಸ್ಯೈಷಾ ಭವತಿ ॥** ತನೂಪಾತ್ ಎಂದರೆ ಅಗ್ನಿಯೆಂದು ಶಾಕಪೂಣಿ ಎಂಬ ಆಚಾರ್ಯರ ಮತವು. ಹಿಂದೆ ಹೇಳಿದಂತೆ ನಪಾತ್ ಶಬ್ದಕ್ಕೆ ಸಂತತಿಯ ಸಂತತಿಯು ಎಂದರ್ಥವು. ತನ್ವಃ ಎಂದರೆ ಉದಕಗಳು, ಆ ಉದಕಗಳು ಅಂತರಿಕ್ಷದಲ್ಲಿ ಮೇಘರೂಪದಿಂದ ವ್ಯಾಪಿಸಿ ಭೂಮಿಯ ಮೇಲೆ ಮಳೆಯನ್ನು ಕರೆಯುವುದರಿಂದ ಓಷಧಿವನಸ್ಪತಿಗಳು ಎಂದರೆ ವೃಕ್ಷಗಳು ಉತ್ಪನ್ನವಾಗುತ್ತದೆ. ಆದ್ದರಿಂದ ಉದಕಗಳಿಗೆ ಓಷಧಿವನಸ್ಪತಿಗಳೇ ಸಂತತಿಯು. ಮತ್ತು ಓಷಧಿವನಸ್ಪತಿಗಳೇ ಸಂತತಿಯು. ಮತ್ತು ಓಷಧಿವನಸ್ಪತಿಗಳಿಂದ (ವೃಕ್ಷಗಳಿಂದ ಅಥವಾ ವೃಕ್ಷರೂಪದ ಅರಣಿಗಳಿಂದ) ಅಗ್ನಿಯು ಉತ್ಪತ್ತಿಯಾಗುವುದು. ಓಷಧಿವನಸ್ಪತಿಗಳಿಗೆ ಅಗ್ನಿಯು ಸಂತತಿಯೆಂದಾಯಿತು. ಆದ್ದರಿಂದ ಉದಕಗಳಿಗೆ ಅಗ್ನಿಯು ಸಂತತಿಯ ಸಂತತಿಯು ಎಂದರೆ ಮೊಮ್ಮಗ ಅಥವಾ ಪೌತ್ರಸ್ಥಾನೀಯನು ಎಂದಾಯಿತು. ಅದನ್ನೇ ಇಲ್ಲಿ ತನೂನಪಾತ್ ಎಂದರೆ ಉದಕಗಳ ಪೌತ್ರಸ್ಥಾನೀಯನಾದ ಅಗ್ನಿಯು ಎಂದು ಹೇಳಲಾಗಿದೆ. ಈ ತನೂನಪಾತ್ ಎಂಬ ಶಬ್ದಪ್ರಯೋಗವಿರುವ ಋಕ್ಕಿನ ನಿರ್ವಚನವನ್ನು ಇಲ್ಲಿ ಹೇಳಿದೆ—

> **ತನೂನಪಾತ್ ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ । ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥ ತನೂನಪಾತ್ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾತಾನ್ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ ॥**
>
> (ನಿ. ೮-೬)

**ತನೂನಪಾತ್ ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವ**—ಈ ವಾಕ್ಯದಲ್ಲಿರುವ ಋತಸ್ಯ ಎಂಬ ಶಬ್ದಕ್ಕೆ ಯಜ್ಞದ ಎಂದೂ ಯಾನಾನ್ ಎಂದರೆ ಮಾರ್ಗ ಅಥವಾ ರೀತಿ ರೀತಿ (ಕ್ರಮ)ಯೆಂದೂ ಅರ್ಥವು. ಸುಜಿಹ್ವ ಎಂದರೆ ಕಲ್ಯಾಣಜಿಹ್ವ-ಉತ್ತಮವಾದ ನಾಲಗೆಯುಳ್ಳವನು. ಅಗ್ನಿಗೆ ಜ್ವಾಲೆಯೇ ಜಿಹ್ವೆಯು ಮನುಷ್ಯರು ತಮ್ಮ ಜಿಹ್ವೆಯಿಂದ (ನಾಲಗೆಯಿಂದ) ಆಹಾರವನ್ನು ತಿನ್ನುವಂತೆ ಅಗ್ನಿಯು ತನ್ನ ಜ್ವಾಲೆಗಳಿಂದ ಕಾಷ್ಠಾದಿಗಳನ್ನು ದಹಿಸುವನು ಅಥವಾ ಅಗ್ನಿಯಲ್ಲಿ ಅರ್ಪಿಸುವ ಹವಿರಾಜ್ಯಾದಿಗಳನ್ನು ಪಕ್ವಮಾಡಿ ದಹಿಸುವನು. ಮನುಷ್ಯರಿಗೆ ನಾಲಗೆಯು ಹೇಗೋ ಅಗ್ನಿಗೆ ಜ್ವಾಲೆಯು ಹಾಗೆ. ಆದ್ದರಿಂದ ಇಲ್ಲಿ ಅಗ್ನಿಯನ್ನು ಸುಜಿಹ್ವ-ಶೋಭನಜ್ವಾಲ ಎಂದು ಸಂಬೋಧಿಸಿದೆ. ಆದ್ದರಿಂದ ಈ ವಾಕ್ಯಕ್ಕೆ—ಎಲೈ ಜ್ವಾಲಾರೂಪದ ಜಿಹ್ವೆಯುಳ್ಳ ಅಗ್ನಿಯೇ, ತನೂನಪಾತ್ ಎಂಬ ಅಭಿಧಾನದಿಂದ ಕರೆಯಲ್ಪಡುವ ನೀನು ಯಜ್ಞದ ಮಾರ್ಗಗಳನ್ನು ಎಂದರೆ ಕ್ರಮಗಳನ್ನು ಮಧುರವಾದ ನಿನ್ನ ವಾಗ್ಜನಿತ ಮಂತ್ರದಿಂದ ಅಥವಾ ಮಧುರವಾದ ನಿನ್ನ ಪ್ರಕಾಶದಿಂದ ಅಥವಾ ಮಧುರವಾದ ಸೋಮರಸದಿಂದ ಚೆನ್ನಾಗಿ ಪ್ರಕಾಶಿತವನ್ನಾಗಿ ಮಾಡಿ ದೇವತೆಗಳಿಗೆ ಗ್ರಾಹ್ಯವಾಗುವಂತೆ ಮಧುರವಾಗಿಮಾಡು ಎಂದರ್ಥವು. ತನೂನ್‌ಪಾನ್‌ಶಬ್ದದ ನಿಷ್ಪತ್ತಿಯನ್ನು ಹಿಂದೆಯೇ ವಿವರಿಸಿದೆ. **ಪಥ ಋತಸ್ಯ ಯಾನಾನ್**—ಯಜ್ಞದ ಮಾರ್ಗಗಳನ್ನು ಎಂದರೆ ರೀತಿಗಳನ್ನು ಅಥವಾ ಕ್ರಮಗಳನ್ನು, ವಿಧಾನಗಳನ್ನು; ಯಜ್ಞವು ಯಾವ ಮಂತ್ರಗಳಿಂದ ಹೇಗೆ ಯಾವ ಕ್ರಮದಲ್ಲಿ ನಡೆಯಬೇಕು ಎಂಬ ವಿಧಿನಿಯಮಗಳನ್ನು ಸರಿಯಾಗಿ ಪಾಲಿಸಿ ಎಂದರ್ಥವು. **ಮಧುನಾ ಸಮಂಜನ್ ಸ್ವದಯ**-ಇಲ್ಲಿ ಮಧುಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಬಹುದು ಮಧುನಾ ಎಂದರೆ ಸುಲಲಿತವಾಗಿ, ಯಾವ ವಿಘ್ನಗಳೂ ಉಂಟಾಗದಂತೆ, ಅಥವಾ ಮಧುರವಾದ ಅಗ್ನಿಯ ಪ್ರಕಾಶದಿಂದ ದೀಪ್ತವಾಗುವಂತೆ ಇತ್ಯಾದಿ. **ಸಮಂಜನ್ ಸ್ವದಯ**—ಸಮಂಜನ್ ಎಂದರೆ ಆಜ್ಯಾದಿಗಳ ಅಂಜನದಿಂದ ಸುಲಲಿತವಾಗಿ ಕೆಲಸಮಾಡುವಂತೆ. ಎಂದರೆ ರಥದ ಚಕ್ರಗಳೂ ಇತರ ಭಾಗಗಳು ತೈಲ (ಎಣ್ಣೆ) ಅಥವಾ ಘೃತವನ್ನು ಲೇಪನ

ಮಾಡುವುದರಿಂದ ಸುಲಭವಾಗಿ ಕೆಲಸ ಮಾಡುವಂತೆ ಯಜ್ಞದ ನಾನಾ ಕಾರ್ಯಕಲಾಪಗಳನ್ನು ಮಧುರವಾದ ನೇತೃತ್ವದಿಂದ ಮುಂದುರೆಸಿ ಆ ಯಜ್ಞಕರ್ಮವು ದೇವತೆಗಳಿಗೆ ಸ್ವೀಕಾರಾರ್ಹವೂ, ಸುಖಪ್ರದವೂ ಆಗುವಂತೆ ಮಾಡು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

**ಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ—ಮನ್ಮಾನಿ** ಎಂದರೆ ಮನನಾನಿ, ಮನನೀಯಾನಿ. ಅರ್ಥಾದಿಗಳನ್ನು ತಿಳಿದುಕೊಂಡು ಮನಸ್ಸಿಗೆ ಮುಂದಟ್ಟುಮಾಡಿಕೊಳ್ಳುವುದಕ್ಕೆ ಯೋಗ್ಯವಾದ ಮಂತ್ರಗಳನ್ನು ಎಂದರ್ಥವು. ಧೀಭಿಃ ಎಂದರೆ ಕರ್ಮಗಳಿಂದ; ಎಲೈ ಅಗ್ನಿಯೇ, ಈ ಯಜ್ಞದಲ್ಲಿ ನಾವು ಪಠಿಸುತ್ತಿರುವ ಸ್ತೋತ್ರಗಳನ್ನೂ ಯಜ್ಞವನ್ನೂ ಸಂದರ್ಭಾನುಸಾರ ಮಾಡಬೇಕಾದ ಕರ್ಮಗಳಿಂದಲೂ, ಪ್ರಜ್ಞೆ(ತಿಳಿವಳಿಕೆ) ಯಿಂದಲೂ ಸಹ ಕ್ರಮವಾಗಿ ಮುಂದುವರೆಯುವಂತೆ ಮಾಡು ಮತ್ತು ನಾವು ಮಾಡುತ್ತಿರುವ ಈ ಯಜ್ಞಕ್ಕೆ ದೇವತೆಗಳನು ಕರೆದುಕೊಂಡು ಬಾ ಎಂದು ಈ ವಾಕ್ಯದ ಅಭಿಪ್ರಾಯವು.

ಆಪ್ರೀಸೂಕ್ತದ ಎರಡನೆಯ ಋಕ್ಕಿನಲ್ಲಿ ಸ್ತುತಿಸಲಾದ ತನೂನಪಾತ್ ಎಂಬ ದೇವತೆಯ ವಿಷಯವನ್ನು ವಿವರಿಸಿದ್ದಾಯಿತು. ಈ ಸೂಕ್ತದಲ್ಲಿ ತನೂನಪಾತ್ ದೇವತೆಯನ್ನೇ ಸ್ತುತಿಸಲಾಗಿದೆ. ಆದರೆ ಕೆಲವು ಆಪ್ರೀಸೂಕ್ತದಲ್ಲಿ ತನೂನಪಾತ್ ಎಂಬ ದೇವತೆಯ ಜತೆಯಲ್ಲಿ ಅಥವಾ ಆ ದೇವತೆಗೆ ಬದಲಾಗಿ ನರಾಶಂಸ ಎಂಬ ದೇವತೆಯ ಸ್ತುತಿ ಇರುವುದು. ಆದ್ದರಿಂದ ಆಪ್ರೀಸೂಕ್ತದ ದೇವತೆಗಳನ್ನು ವಿವರಿಸುವಾಗ ಯಾಸ್ಕರು ಪ್ರಕೃತಸಂದರ್ಭಕ್ಕೆ ಸೇರಿಲ್ಲದಿದ್ದರೂ ನರಾಶಂಸ ದೇವತೆಯ ವಿಷಯವನ್ನು ವಿವರಿಸಿದ್ದಾರೆ—

> **ನರಾಶಂಸಃ । ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ । ತಸ್ಯೈಷಾ ಭವತಿ। ನರಾಶಂಸಸ್ಯ ಮಹಿಮಾನಮೇಷಾ-ಮುಪ ಸ್ತೋಷಾಮ ಯಜತಸ್ಯ ಯಜ್ಞೈಃ । ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ।' (ಋ. ಸಂ. ೭–೨–೨) ॥ ನರಾಶಂಸಸ್ಯ ಮಹಿಮಾನಮೇಷಾಮುಪಸ್ತುಮೋ ಯಜ್ಞಿಯಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ ॥**
>
> (ನಿ. ೮–೭)

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ—**ನರಾಶಂಸ ಎಂದರೆ ಯಜ್ಞವು. ಈ ಯಜ್ಞದಲ್ಲಿ (ಯಜ್ಞವೇದಿಯಲ್ಲಿ) ಮನುಷ್ಯರು ಎಂದರೆ ಋತ್ವಿಗ್ಯಜಮಾನರು ಕುಳಿತು (ದೇವತೆಗಳನ್ನು) ಸ್ತೋತ್ರಮಾಡುವರು. ಆದ್ದರಿಂದ ನರಾಶಂಸವೆಂದರೆ ಯಜ್ಞವು ಎಂದು ಕಾತ್ಥಕ್ಯರ ಮತವು.

**ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ । ತಸ್ಯೈಷಾ ಭವತಿ—** ನರಾಶಂಸನೆಂದರೆ ಅಗ್ನಿಯು ಏಕೆಂದರೆ—ಈ ಅಗ್ನಿಯು ನರರಿಂದ ಎಂದರೆ ಮಾನವರಿಂದ ಸ್ತುತಿಸಲ್ಪಡುವನು. ಇದು ಶಾಕಪೂಣಿ ಎಂಬ ಆಚಾರ್ಯರ ಮತವು. ಈ ನರಾಶಂಸ ಶಬ್ದಪ್ರಯೋಗವಿರುವ ಋಕ್ಕನ್ನು ಕೆಳಗೆ ಉದಾಹರಿಸಲಾಗಿದೆ.

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**
(ಋ. ಸಂ. ೭-೨-೨)

**ನರಾಶಂಸಸ್ಯ ಮಹಿಮಾನಂ ಏಷಾಂ ಉಪಸ್ತುಮಃ ಯಜತಸ್ಯ ಯಜ್ಞೈಃ**— ಇಲ್ಲಿ ಏಷಾಂ ಎಂದರೆ ಈ ಯಜ್ಞಕರ್ಮದಲ್ಲಿ ನಿರತರಾಗಿರುವ ಜನರಿಗೆ ಎಂದರ್ಥವು. ಇಂತಹ ಜನರಿಗೆ ಅಭಿಮತ ಫಲಗಳನ್ನು ಕೊಡುವ, ಯಜ್ಞಾದಿ ಕರ್ಮಗಳಿಂದ ಆರಾಧಿಸಲ್ಪಡುವ ನರರಿಂದ ಪ್ರಶಂಸಿಸಲ್ಪಡುವ (ನರಾಶಂಸಸ್ಯ) ಈ ಯಜ್ಞದ ಮಹಿಮೆಯನ್ನು ಅಥವಾ ನರಾಶಂಸನೆಂಬ (ಅಗ್ನಿಯೆಂಬ) ಈ ದೇವತೆಯನ್ನು ಸಮಿಾಪಿಸಿ ಸ್ತೋತ್ರಮಾಡುತ್ತೇವೆ.

**ಯೇ ಸುಕರ್ಮಣಃ ಶುಚಯಃ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ**— ಇಲ್ಲಿ **ಸುಕ್ರತವಃ ಶುಚಯಃ ಧಿಯಂಧಾಃ** ಎಂಬ ಶಬ್ದಗಳು **ದೇವಾಃ** ಎಂಬ ಶಬ್ದಕ್ಕೆ ವಿಶೇಷಣಪದಗಳಾಗಿವೆ. ಕ್ರತು ಶಬ್ದಕ್ಕೆ ಕರ್ಮವೆಂದರ್ಥವಿರುವುದರಿಂದ ಸುಕ್ರತವಃ ಎಂದರೆ ಜಗತ್ಪಾಲನ, ಅನುಗ್ರಹಾತ್ಮಕವಾದ ಕರ್ಮಗಳನ್ನು ಮಾಡುತ್ತಿರುವ ಎಂದು **ಸುಕ್ರತವಃ** ಅಥವಾ **ಸುಕರ್ಮಾಣಃ** ಎಂಬ ಶಬ್ದಕ್ಕೆ ಅರ್ಥವು. **ಶುಚಯಃ** ಎಂದರೆ ಪಾಪರಹಿತರಾದವರು ಅಥವಾ ಪ್ರಕಾಶಮಾನರಾದವರು. **ಧಿಯಂಧಾಃ** ಎಾದರೆ ಧಿಯಂ ಎಂದರೆ ಯಜ್ಞಾದಿ ಕರ್ಮದನ್ನು ಅಥವಾ ಪ್ರಜ್ಞೆಯನ್ನು ಧಾಃ ಧರಿಸಿರುವವರು ಎಂದರೆ ಯಜ್ಞಾದಿ ಕರ್ಮಗಳಿಗೆ ಪ್ರೋತ್ಸಾಹವಿತ್ತು, ಅವನ್ನು ಸಾಂಗವಾಗಿ ನೆರವೇರುವಂತೆ ಮಾಡುವವರು ಅಥವಾ ಪ್ರಜ್ಞಾವಂತರಾದವರು. **ಉಭಯಾನಿ ಹವ್ಯಾ** ಎಂದರೆ ಎರಡು ವಿಧವಾದ ಹವಿಸ್ಸುಗಳು. ಅವು ಯಾವವೆಂದರೆ—**ಸೋಮಂ ಚೇತರಾಣಿ ಚ**—ಸೋಮರಸ ಮತ್ತು ಚರುಪುರೋಡಾಶಾದಿ ಹವಿಸ್ಸು. ಅಥವಾ **ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ**—ಪ್ರಯಾಜ. ಅಜ್ಯಭಾಗ, ಸ್ವಿಷ್ಟಕೃತ್ ಮೊದಲಾದ ನಹುತಿಗಳಲ್ಲಿ ಅರ್ಪಿಸುವ ಹವಿಸ್ಸು ಮತ್ತು ಪ್ರಧಾನಹೋಮಗಳಲ್ಲಿ ಅರ್ಪಿಸುವ ಹವಿಸ್ಸು. ಈರೀತಿ ಎರಬು ವಿಧವಾನ ಹವಿಸ್ಸುಗಳನ್ನು ದೇವತೆಗಳು ಸೇವಿಸಲಿ.

ಮುಖ್ಯಾಭಿಪ್ರಾಯವು—ಜಗತ್ಪಾಲನಾದಿ ಒಳ್ಳೆಯ ಕರ್ಮಗಳಲ್ಲಿ ನಿರತರಾದವರೂ, ಪಾಪರಹಿತರೂ, ಶುದ್ಧರೂ ಅಥವಾ ಪ್ರಕಾಶಾತ್ಮರೂ ಪ್ರಜ್ಞಾವಂತರೂ ಅಥವಾ ಯಜ್ಞಾದಿಕರ್ಮಗಳಿಗೆ ನೆರವಾಗುವವರೂ ಅಥವಾ ಆ ಕರ್ಮಗಳಿಗೆ ಫಲದಾತೃಗಳೂ ಆದ ಯಾವ ದೇವತೆಗಳಿರುವರೋ ಅವರು ಈ ಯಜ್ಞದಲ್ಲಿ ನಾವು ಅವರನ್ನುದ್ದೇಶಿಸಿ ಅರ್ಪಿಸುವ ಸೋಮರಸ ಮತ್ತು ಚರುಪುರೋಡಾಶ ಎಂಬ ಎರಡುವಿಧ ಹವಿಸ್ಸುಗಳನ್ನು ಅಥವಾ ಪ್ರವಾಜಾಜ್ಯ ಭಾಗಸ್ವಿಷ್ಟಕೃದಾದಿಹೋಮಗಳಲ್ಲಿಯೂ, ಪ್ರಧಾನಹೋಮಗಳಲ್ಲಿಯೂ ಅರ್ಪಿಸುವ ಎರಡುವಿಧ ಹವಿಸ್ಸುಗಳನ್ನು ಸೇವಿಸಲಿ.

**ಆಜುಹ್ವಾನ ಈಡ್ಯೋ ವಂದ್ಯಶ್ಚಾ ಯಾಹ್ಯಗ್ನೇ ವಸುಭಿಃ ಸಜೋಷಾಃ।**
**ತ್ವಂ ದೇವಾನಾಮಸಿಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ॥ ೩ ॥**

ಎಲೈ ಅಗ್ನಿಯೇ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಪ್ರಶಂಸನೀಯನೂ, ಪೂಜ್ಯನೂ ಆದ ನೀನ ವಸುಸಂಜ್ಞಕರಾದ ದೇವತೆಗಳೊಡನೆ ಕೂಡಿಕೊಂಡು ದಯಮಾಡು. ಮಹಾತ್ಮನಾದ ಎಲೈ ಅಗ್ನಿಯೇ, ನೀನು ದೇವತೆಗಳನ್ನು ಕರೆಯುವವನಾಗಿದ್ದೀಯೆ. ಅತ್ಯಂತ ಪೂಜ್ಯನಾದ ನೀನು ನಮ್ಮಿಂದ ಪ್ರಾರ್ಥಿತನಾಗಿ ದೇವತೆಗಳನ್ನು ಪೂಜಿಸು.

**ಬ್ರಾಹ್ಮಣಂ | ಆತ್ಮದೇವತಾ ಇತ್ಯಪರಂ | 'ಆತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾಃ'' ಇತಿ ಚ ಬ್ರಾಹ್ಮಣಮ್ ||**

ನಾನಾ ದೇವತಾ ಪ್ರವಾದಗಳಿವೆಯೆಂದು ಹಿಂದೆ ಹೇಳಿರುವುದರಿಂದ ಅದನ್ನೂ ವಿವರಿಸುತ್ತಾನೆ. ಕೆಲವರು ಛಂದೋದೇವತೆಗಳೆಂದೂ, ಇನ್ನುಕೆಲವರು ಋತುದೇವತೆಗಳೆಂದೂ, ಇನ್ನುಕೆಲವರು ಪ್ರಾಣದೇವತೆಯೆಂದೂ, ಇನ್ನುಕೆಲವರು ಆತ್ಮದೇವತೆಯೆಂದೂ ಹೇಳುತ್ತಾರೆ. ಈ ಎಲ್ಲಾ ಪ್ರವಾದಗಳಿಗೂ ಬ್ರಾಹ್ಮಣವಾಕ್ಯಗಳ ಪ್ರಮಾಣವಿರುತ್ತವೆ.

**ಆಗ್ನೇಯಾ ಇತಿ ತು ಸ್ಥಿತಿಃ ||**

ನಾನಾಪ್ರವಾದಗಳಿರುವುದಾದರೆ ನಿಶ್ಚಯ ಹೇಗೆ? ಎಂದು ಆಶಂಕಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾರೆ. ತು ಶಬ್ದವು ಅನ್ಯಪಕ್ಷವ್ಯಾವೃತ್ತಿಯನ್ನು ತಿಳಿಸುತ್ತದೆ. ಬ್ರಾಹ್ಮಣವಾಕ್ಯ ಮತ್ತು ಮಂತ್ರ ಎರಡು ಪ್ರಮಾಣಗಳಿರುವುದರಿಂದ ಅಗ್ನಿದೇವತಾಕಗಳೆಂದೇ ತಿಳಿಯಬೇಕು. ಇತರ ಮತಕ್ಕೆ ಬ್ರಾಹ್ಮಣವೊಂದೇ ಪ್ರಮಾಣವಿರುವುದರಿಂದ ಅದು ಗ್ರಾಹ್ಯವಲ್ಲ.

**ಭಕ್ತಿಮಾತ್ರಮಿತರತ್ ||**

ಅನ್ಯಮತಕ್ಕೆ ತಾತ್ಪರ್ಯವನ್ನು ವಿವರಿಸುತ್ತಾರೆ. ಛಂದೋದೇವತಾಃ ಇತ್ಯಾದಿ ಪ್ರವಾದಗಳು ಗೌಣವೆಂದು ತಿಳಿಯಬೇಕು. ಭಕ್ತಿವಾದದಿಂದ ನಾನಾ ಬ್ರಾಹ್ಮಣವಾಕ್ಯಗಳು ಆರಬ್ಧವಾಗಿವೆ.

**ಕಿಮರ್ಥಂ ಪುನರಿದಮುಚ್ಯತೇ ? ||**

ಈ ಎಲ್ಲಾ ವಿಚಾರದಿಂದ ಪ್ರಯೋಜನವೇನು? ಎಂದು ವಿಚಾರಿಸುತ್ತಾರೆ.

**''ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ |
ತಾಂ ಮನಸಾ ಧ್ಯಾಯೇದ್ವಷಟ್‌ಕರಿಷ್ಯನ್'' ಇತಿ ಹ ವಿಜ್ಞಾಯತೇ ||**

ಯಾರು ಸೂಕ್ತದಿಂದ ಸ್ತುತಿಸಲ್ಪಟ್ಟಿರುವರೋ, ಯಾರಿಗೋಸ್ಕರ ಹವಿಸ್ಸು ಅರ್ಪಿಸಲ್ಪಡುವುದೋ, ಅದೇ ಪ್ರಧಾನವೆಂದು ಹಿಂದೆ ವಿವರಿಸಿದೆ. ಆ ದೇವತೆಗೇ ಹವಿಸ್ಸನ್ನು ಕೊಡಬೇಕಾದುದರಿಂದ ದೇವತಾವಿಚಾರಕ್ಕೆ ಪ್ರಯೋಜನವಿದೆಯೆಂದು ತಾತ್ಪರ್ಯ.

**ತಾನ್ಯೇತಾನ್ಯೇಕಾದಶಾಪ್ರೀಸೂಕ್ತಾನಿ ||**

ಹೀಗೆ ಹನ್ನೊಂದು ಆಪ್ರೀಸೂಕ್ತಗಳೆಂದು ತಿಳಿಯಬೇಕು. ಇವುಗಳಲ್ಲಿ ಋಗ್ವೇದದ ಸೂಕ್ತಗಳು ಹತ್ತು ಹನ್ನೊಂದನೆಯ ಸೂಕ್ತವು ಪ್ರೈಷಕವಾಗಿರುತ್ತದೆ.

**ತೇಷಾಂ ವಾಸಿಷ್ಠಮಾತ್ರೇಯಂ ವಾಧ್ರ್ಯಶ್ವಂ ಗಾರ್ತ್ಸಮದಮಿತಿ ನಾರಾಶಂಸವಂತಿ | ಮೈಧಾತಿಥಂ ದೈರ್ಘತಮಸಂ ಪ್ರೈಷಿಕಮಿತ್ಯುಭಯವಂತಿ | ಅತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ || ೨೨ ||**

ಆಪ್ರೀಸೂಕ್ತದಲ್ಲಿರುವ ಕೆಲವು ವಿಶೇಷವನ್ನು ವಿವರಿಸುತ್ತಾರೆ. ಅವುಗಳಲ್ಲಿ ವಸಿಷ್ಠದೃಷ್ಟವಾದ ಸೂಕ್ತವಾಸಿಷ್ಠ, ಅತ್ರಿಮಹರ್ಷಿ ದೃಷ್ಟವಾದಸೂಕ್ತ ಆತ್ರೇಯ, ವಾಧ್ರ್ಯಶ್ವ ಋಷಿಯಿಂದ ದೃಷ್ಟವಾದಸೂಕ್ತ ವಾಧ್ರ್ಯಶ್ವ, ಗೃತ್ಸಮದ ಋಷಿಯಿಂದ ದೃಷ್ಟವಾದ ಸೂಕ್ತ ಗಾರ್ತ್ಸಮದ ಇವು ನಾಲ್ಕು ನಾರಾಶಂಸದಿಂದ ಕೂಡಿರುವವುಗಳು. ಮೇಧಾತಿಥಿ, ದೀರ್ಘತಮಸ್ಸು ಇವರಿಂದ ದೃಷ್ಟವಾದ ಮೈಧಾತಿಥ, ದೀರ್ಘತಮಸ ಎರಡು ಸೂಕ್ತಗಳು ಪ್ರೈಷಿಕಗಳು. ಪ್ರೈಷವೆಂದರೆ ಗ್ರಂಥ. ಆದರಲ್ಲಿರುವವುಗಳು. ಇವು ಎರಡರಿಂದಲೂ ಕೂಡಿರುತ್ತವೆ. ಇನ್ನು ಉಳಿದಿರುವ ನಾಲ್ಕು ಸೂಕ್ತಗಳು ತನೂನಪಾತ್ ವಿಶಿಷ್ಟವಾಗಿರುತ್ತವೆ. ಅಧ್ಯಾಯ ಸಮಾಪ್ತಿಗೋಸ್ಕರ ತನೂನಪಾತ್ಪಂತಿ ಎಂದು ಎರಡುಬಾರಿ ಹೇಳಿರುತ್ತಾರೆ. ಇದರಲ್ಲಿ ವಸಿಷ್ಠಾದಿಗಳು ನಾರಾಶಂಸಯಾಜಿಗಳು. ಉಳಿದವರು ತನೂನಪಾದ್ಯಾಜಿಗಳು. ಪೂರ್ವೋಕ್ತವಿಭಾಗದಿಂದ ಇದ ವ್ಯಕ್ತವಾಗುತ್ತದೆ.

ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ
ದತ್ತಭಾಗಂ

ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯು
ರಸ್ತು ದೇವಾಃ ॥ ೮ ॥

ಅಗ್ನಿ—ಎಲೈ ದೇವತೆಗಳೇ ! ಪ್ರಯಾಜಸಂಜ್ಞಕಗಳಾದ ಹವಿಸ್ಸುಗಳನ್ನೂ ಅನುಯಾಜಸಂಜ್ಞಕಗಳಾದ ಹವಿಸ್ಸುಗಳನ್ನೂ ಕೇವಲ ನನಗೆ ಮಾತ್ರ ಸೇರುವಂತೆ ಅರ್ಪಿಸಿರಿ. ನನಗೆ ಹವಿಸ್ಸಿನಿಂದ ಸಾರವತ್ತಾದ ಭಾಗವನ್ನು ಕೊಡಿರಿ.. ಉದಕಗಳಿಗೆ ಸಾರಭೂತವಾದ ಆಜ್ಯವನ್ನೂ, ಓಷಧಿಗಳಿಗೆ ಸಾರಭೂತವಾದ ಪುರುಷಭಾಗವನ್ನೂ (ಅನ್ನವನ್ನೂ) ಕೊಡಿರಿ. ನನಗೆ ಬಹುಕಾಲ ಬದುಕುವ ಶಕ್ತಿಯುಂಟಾಗಲಿ.

ಪ್ರಕೃತ ಋಕ್ಕಿನಲ್ಲಿಯೂ ಪ್ರಯಾಜಾಃ ಮತ್ತು ಅನುಯಾಜಾಃ ಎಂಬ ಶಬ್ದಗಳ ಪ್ರಯೋಗವಿದೆ. ಈ ಶಬ್ದಗಳಿಗೆ ಅರ್ಥವೇನು ಎಂಬ ವಿಷಯದಲ್ಲಿ ಯಾಸ್ಕರು ನಿರ್ವಚನವನ್ನು ಈ ರೀತಿ ಹೇಳಿದಾರೆ—

> ಅಥ ಕಿಂ ಪ್ರಯೋಜಾನುಯೋಜಾ ! ಆಗ್ನೇಯಾ ಇತ್ಯೇಕೇ ! ಪ್ರಯೋಜಾನ್ಮೇ ಅನುಯೋಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತಭಾಗಂ ! ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ! ತವ ಪ್ರಯೋಜಾ ಅನುಯೋಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ! ತವಾಗ್ನೇ ಯಜ್ಞೋ೩ ಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥ ಆಗ್ನೇಯಾ ವೈ ಪ್ರಯೋಜಾ ಆಗ್ನೇಯಾ ಅನುಯೋಜಾ ಇತಿ ಚ ಬ್ರಾಹ್ಮಣಂ ॥
>
> (ನಿ. ೮—೨೨)

ಪ್ರಯಾಜಾನುಯಾಜಾಃ ಎಂದರೆ ಯಾವ ದೇವತೆಗಳು? ಎಂದು ಪ್ರಶ್ನೆಮಾಡಿ ಅದಕ್ಕೆ—ಆಗ್ನೇಯಾ ಇತ್ಯೇಕೇ ಅಗ್ನಿಯೇ ಆ ಮಂತ್ರಗಳ ದೇವತೆಯು ಎಂದು ಕೆಲವರ ಮತವೆಂದು ಇಲ್ಲಿ ಹೇಳಿದೆ. ಇಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು. ಯಜ್ಞಾದಿ ಕರ್ಮಗಳಲ್ಲಿ ಪರೋಕ್ಷವಾದ ದೇವತೆಗಳನ್ನುದ್ದೇಶಿಸಿ, ಅಗ್ನಿಯಲ್ಲಿ ಆಹುತಿಯನ್ನರ್ಪಿಸಿ ಹೋಮ ಮಾಡುವುದು ಸರಿಯಷ್ಟೆ.

ಉದ್ದಿಷ್ಟರಾದ ಮತ್ತು ಆಹೂತರಾದ (ಕರೆಯಲ್ಪಟ್ಟ) ದೇವತೆಗಳನ್ನುದ್ದೇಶಿಸಿ ಮಾಡುವ ಆಹುತಿಗಳಿಗೆ ಪ್ರಧಾನಾಹುತಿಗಳೆಂದು (ಮುಖ್ಯಾಹುತಿ) ಹೆಸರು. ಈ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿಯೂ, ಅನಂತರವೂ ಕೆಲವು ಉಪಹೋಮಗಳನ್ನು ಮಾಡುವುದು ರೂಢಿಯು. ಆದ್ದರಿಂದ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿ ಮಾಡುವ ಉಪಹೋಮಗಳಿಗೆ ಪ್ರಯಾಜಾಃ ಎಂದೂ, ಪ್ರಧಾನಾಹುತಿಯ ಅನಂತರ ಮಾಡುವ ಉಪಹೋಮಕ್ಕೆ ಅನುಯಾಜಾ ಎಂದೂ ಹೆಸರು. ಮೇಲೆ ಉದಾಹರಿಸಿರುವ ಎರಡು ಋಕ್ಕುಗಳಲ್ಲಿ ಈ ಪ್ರಯಾಜಾನುಯಾಜಗಳೆಂಬ ಆಹುತಿಗಳನ್ನು ತನ್ನನ್ನುದ್ದೇಶಿಸಿಯೇ ಅರ್ಪಿಸಬೇಕೆಂದೂ ಆ ಆಹುತಿಗಳಿಗೆ ತಾನೇ ದೇವತೆಯಾಗಬೇಕೆಂದೂ ಅಗ್ನಿಯು ದೇವತೆಗಳಿಂದ ವರವನ್ನು ಪಡೆದ ಪ್ರಕಾರ ದೇವತೆಗಳು ಹಾಗೇ ಆಗಲೆಂದು ವರವನ್ನು ಕೊಟ್ಟರು. ಆದಕಾರಣ ಈ ಪ್ರಯಾಜಾನುಯಾಜಾ ಮಂತ್ರಗಳಿಗೂ ಆಹುತಿಗಳಿಗೂ ಅಗ್ನಿಯೇ ದೇವತೆಯೆಂದು ಕೆಲವರ ಮತವೆಂದು ಯಾಸ್ಕರು ಇಲ್ಲಿ ವಿವರಿಸಿದಾರೆ. ಈ ವಿಷಯದಲ್ಲಿ ಆಗ್ನೇಯಾ ವೈ ಪ್ರಯಾಜಾ ಅಗ್ನೇಯಾ ಅನುಯಾಜಾ ಎಂಬ ಬ್ರಾಹ್ಮಣ ವಾಕ್ಯವನ್ನೂ ಉದಾಹರಿಸಿದಾರೆ. ಇದೇ ರೀತಿ ಬೇರೆ ಬೇರೆ ಮತದವರ ಅಭಿಪ್ರಾಯಗಳನ್ನೂ ಈ ರೀತಿ ತಿಳಿಸಿದಾರೆ

* **ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ ಇತಿ ಚ ಬ್ರಾಹ್ಮಣಂ ॥**

**ಋತುದೇವತಾ ಇತ್ಯಪರಂ । ಋತವೋ ವೈ, ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ ॥**

**ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾ ಪಶವೋಽನುಯಾಜಾ ಇತಿ ಚ ಬ್ರಾಹ್ಮಣಂ ॥**

**ಪ್ರಾಣದೇವತಾ ಇತ್ಯಪರಂ । ಪ್ರಾಣಾ ವೈ ಪ್ರಯಾಜಾಃ ಪ್ರಾಣಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ ॥**

**ಆತ್ಮದೇವತಾ ಇತ್ಯಪರಂ । ಅತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ ॥**

ಕೆಲವರು ಪ್ರಯಾಜಾನುಯಾಜಮಂತ್ರಗಳಿಗೆ ಛಂದಸ್ಸೇ ದೇವತೆಯೆಂದು ಹೇಳುವರು. ಈ ವಿಷಯದಲ್ಲಿ— ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ ಎಂಬ ಬ್ರಾಹ್ಮಣವಾಕ್ಯವಿರುವುದು. ಮತ್ತೆ ಕೆಲವರು ಈ ಮಂತ್ರಗಳಿಗೆ ಋತುಗಳೇ (ವಸಂತಾದಿ ಋತುಗಳು) ದೇವತೆಗಳೆಂದು ಹೇಳುವರು. ಇದನ್ನು—ಋತವೋ ವೈ ಪ್ರಯಾಜಾ ಋತವೋಽನುಯಾಜಾ ಎಂಬ ಬ್ರಾಹ್ಮಣವಾಕ್ಯವು ಸಮರ್ಥಿಸುವುದು. ಮತ್ತೆ ಕೆಲವರು ಇವುಗಳಿಗೆ ಗೋವುಗಳೇ ಮೊದಲಾದ ಪಶುಗಳೇ ದೇವತೆಯೆಂದು ಹೇಳುವರು. ಇದಕ್ಕೆ ಪಶವೋ ವೈ ಪ್ರಯಾಜಾ ಪಶವೋಽನುಯಾಜಾ ಎಂಬ ಬ್ರಾಹ್ಮಣವಾಕ್ಯವೇ ಆಧಾರವಾಗಿರುವುದು. ಮತ್ತೆ ಕೆಲವರು ಈ ಮಂತ್ರಗಳಿಗೆ ಪ್ರಾಣವೇ ದೇವತೆಯೆಂದು ಹೇಳಿ ಪ್ರಾಣಾ ವಾ ಪ್ರಯೋಜಾಃ ಪ್ರಾಣಾ ವಾ ಅನುಯಾಜಾ ಎಂಬ ಬ್ರಾಹ್ಮಣವಾಕ್ಯವೇ ಪ್ರಮಾಣವಾಗಿರುವುದೆಂದು ಪ್ರತಿವಾದಿಸುವರು.

**ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರತ್ । ಕಿಮರ್ಥಂ ಪುನರಿದಮುಚ್ಯತೇ । ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಮನಸಾ ಧ್ಯಾಯೇದ್ವಷಟ್ಕರಿಷ್ಯನ್ನಿತಿ ಹ ವಿಜ್ಞಾಯತೇ ॥**

(ನಿ. ೮–೨೨)

ಇಷ್ಟೆಲ್ಲಾ ಮತಭೇದಗಳೂ ಅಭಿಪ್ರಾಯಭೇದಗಳೂ ಇದ್ದರೂ ಈ ಮಂತ್ರಗಳಿಗೆ ಅಗ್ನಿಯೇ ದೇವತೆಯೆಂಬ ಮತವೇ ಪ್ರಮಾಣಾರ್ಹವಾದುದು ಎಂದು ನಿರ್ಧರಿಸಲ್ಪಟ್ಟಿರುವುದು. ಹೀಗಿದ್ದರೂ ನಾನಾ ಮತಭೇದಗಳನ್ನು ಹೇಳಿರುವುದು ಯಾಕೆ? ಇದರಿಂದ ಏನು ಪ್ರಯೋಜನ ಎಂದರೆ ಪ್ರಯಾಜಾನುಯಾಜಮಂತ್ರಗಳನ್ನು ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲಿ ಆಹುತಿ ಯನ್ನರ್ಪಿಸಬೇಕೆಂದು ವಿಧಿಯೂ ಸಂಪ್ರದಾಯವೂ ಇರುವುದರಿಂದ ಇದನ್ನೆಲ್ಲಾ ಇಲ್ಲಿ ವಿಶದವಾಗಿ ತಿಳಿಸಬೇಕಾಯಿತು.

ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ
ಸಂತು ಭಾಗಾಃ ।
ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿ-
ಶಶ್ಚತಸ್ರಃ ॥ ೬ ॥

ದೇವತೆಗಳು—ಎಲೈ ಅಗ್ನಿಯೇ, ಪ್ರಯಾಜರೂಪವಾದ ಹವಿಸ್ಸುಗಳೂ, ಅನುಯಾಜ್ಞಕಗಳಾದ ಹವಿಸ್ಸುಗಳೂ ಕೇವಲ ನಿನಗಾಗಿಯೇ ಉದ್ದಿಷ್ಟವಾಗಿರುತ್ತವೆ. ಹವಿಸ್ಸುಗಳ ಸಾರವತ್ತಾದ ಭಾಗಗಳು ನಿನಗಾಗಿಯೇ ಇರುತ್ತವೆ. ಸಕಲ ಯಜ್ಞವೂ ನಿನ್ನನ್ನೇ ಉದ್ದೇಶಿಸಿ ಅರ್ಪಿತವಾಗಲಿ. ನಾಲ್ಕು ಮುಖ್ಯವಾದ ದಿಕ್ಕುಗಳೂ ನಿನಗೆ ನಮಸ್ಕರಿಸಲಿ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತ ಭಾಷ್ಯದ ಎಂಟನೆಯ ಅಧ್ಯಾಯದಲ್ಲಿ
ಇಪ್ಪತ್ತೆರಡನೆಯ ಖಂಡವು ಸಮಾಪ್ತವಾಗಿದೆ.

ದ್ರವಿಣೋದಾಃ ಕಸ್ಮಾದ್‌ದ್ರವಿಣೋದಾದ್ರವಿಣಸೋ ಮೇದ್ಯಂತುತ್ಯೇಥಾತ ಆಪ್ರಿಯಃ ಸಮಿದ್ಧೋ ಅದ್ಯತನೂನಪಾನ್ನರಾಶಂಸಸ್ಯಾಜುಹ್ವಾನಃ ಪ್ರಾಚೀನಂ ವ್ಯಚಸ್ವತೀ ರಾಸುಷ್ವಯಂತೀ ದೈವ್ಯಾ ಹೋತಾರಾನೋ ಯಜ್ಞಂ ಯ ಇಮೇ ಆವಿಷ್ಯೋ ವನಸ್ಪತಿ ರುಪಾವಸೃಜಾಂಜಂತಿ ದೇವೇಭ್ಯೋ ವನಸ್ಪತೇ ವನಸ್ಪತೇ ರಶನಯಾಸದ್ಯೋ ಜಾತಃ ಪ್ರಯಾಜಾನ್ಮೇದ್ವಾವಿಂಶತಿಃ ॥

ಇತಿ ನಿರುಕ್ತ ಉತ್ತರಷಟ್ಕೇ ದ್ವಿತೀಯೋಧ್ಯಾಯಃ ॥

— —

# ನಿರುಕ್ತಂ

## ಅಥ ನವಮಾಧ್ಯಾಯಸ್ಯ

## ಪ್ರಥಮಃ ಖಂಡಃ

## ಮೊದಲನೆಯ ಖಂಡವು

ಓಂ । ಅಥ ಯಾನಿ ಪೃಥಿವ್ಯಾಯತನಾನಿ ಸತ್ವಾನಿ ಸ್ತುತಿಂ ಲಭಂತೇ ತಾನ್ಯತೋಽನುಕ್ರಮಿಷ್ಯಾಮಸ್ತೇಷಾಮಶ್ವಃ ಪ್ರಥಮಗಾಮೀ ಭವತ್ಯಾಶ್ವೋ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೧ ॥

ಅಥ ಯಾನಿ ಪೃಥಿವ್ಯಾಯತನಾನಿ ಸತ್ವಾನಿ ಸ್ತುತಿಂ ಲಭಂತೇ
ತಾನ್ಯತೋಽನುಕ್ರಮಿಷ್ಯಾಮಃ ॥

ಅಥ ಶಬ್ದದಿಂದ ಅನಂತರಾಧಿಕಾರವನ್ನು ತಿಳಿಸುತ್ತಾರೆ. ಇನ್ನು ಮುಂದೆ ಪೃಥಿವಿಯನ್ನು ಆಶ್ರಯಿಸಿರುವ ಅಶ್ವಾದಿಗಳು ಅಥವಾ ದ್ರವ್ಯಗಳು ಮಂತ್ರದಲ್ಲಿ ಸ್ತುತಿಯನ್ನು ಹೊಂದುವುದರಿಂದ ಅವುಗಳನ್ನು ಕ್ರಮವಾಗಿ ವ್ಯಾಖ್ಯಾನ ಮಾಡುತ್ತೇವೆ. ಆಪ್ರೀ ಸೂಕ್ತಗಳ ದೇವತೆಗಳಿಂದ ಇವು ವಿಲಕ್ಷಣವಾದುದರಿಂದ ಬೇರೊಂದು ಅಧಿಕಾರವನ್ನು ಆರಂಭಿಸಿರುತ್ತಾರೆ. ಸತ್ವಪದ ಉಪಲಕ್ಷಣ ಇದರಿಂದ ಸರ್ಪ, ಲಾಂಗಲ, ಕುಸುಂಭಕ ಮುಂತಾದವುಗಳೂ ಇದರಲ್ಲಿ ಸೇರುತ್ತವೆ. ಪೃಥಿವ್ಯಾಶ್ರಯಗಳಾದುದರಿಂದ ಅವುಗಳನ್ನೂ ಸ್ತುತಿಸಿರುತ್ತಾರೆ. ಈ ಅಶ್ವಾದಿಗಳು ಭೂಸ್ಥಾನದೇವತೆಗಳೇ ಆಗಿರುತ್ತವೆ.

ತೇಷಾಮಶ್ವಃ ಪ್ರಥಮಗಾಮೀ ಭವತಿ ॥

ಎಲ್ಲವನ್ನೂ ಒಟ್ಟಿಗೆ ಹೇಳುವುದು ಅಸಂಭವವಾದುದರಿಂದ ಕ್ರಮದಿಂದ ಹೇಳಬೇಕಾಗಿದೆ. ಕ್ರಮದಲ್ಲಿಯೂ ಪ್ರಾಧಾನ್ಯವುಳ್ಳದ್ದಕ್ಕೆ ಮೊದಲು ಉಪಸ್ಥಿತಿಯುಂಟಾಗುವುದರಿಂದ ಪ್ರಧಾನವನ್ನು ತೋರಿಸುತ್ತಾರೆ. ಪೃಥಿವಿಯನ್ನು ಆಶ್ರಯಿಸಿರುವ ಮೂವತ್ತಾರು ಪದಗಳ ಮಧ್ಯದಲ್ಲಿ ಅಶ್ವವು ಮುಖ್ಯವಾಗಿರುತ್ತದೆ. ತಸ್ಯಾ ಆಹುತ್ಯಾಃ ಪುರುಷೋಽಜಾಯತ, ದ್ವಿತೀಯಾಂ ಯಜ್ಜುಹೋತಿ ತತೋಽಶ್ವೋಽಜಾಯತ ಎಂದು ಪುರುಷ ಸೃಷ್ಟಿಯಾದ ಮೇಲೆ ಅಶ್ವಸೃಷ್ಟಿಯನ್ನು ಹೇಳಿರುವುದರಿಂದ ಅಶ್ವಕ್ಕೆ ಪ್ರಾಧಾನ್ಯ ತಿಳಿಯಬೇಕು. ವಿಶಿಷ್ಟವಾದ ಅಶ್ವಮೇಧಲಕ್ಷಣಕರ್ಮದಲ್ಲಿ ಅಶ್ವಕ್ಕೆ ವಿಶಿಷ್ಟವಾದ ಅಂಗಭಾವವಿರುವುದರಿಂದಲೂ ಮುಖ್ಯತ್ವ ಪ್ರಾಪ್ತವಾಗುತ್ತದೆ.

ಅಶ್ವೋ ವ್ಯಾಖ್ಯಾತಸ್ತಸ್ಯೈಷಾ ಭವತಿ ॥

ಅಶ್ವಶಬ್ದನಿರ್ವಚನ ಹಿಂದೆ ಆಗಿದೆಯೆಂದು ವಿವರಿಸುತ್ತಾರೆ. "ಅಶ್ನುತೇಽಧ್ವಾನಂ ಮಹಾಶನೋ ಭವತೀತಿವಾ" (ನಿಘ. ೨೨೭) ಎಂದು ಹಿಂದೆ ಇದು ವಿವೃತವಾಗಿದೆ. ಆ ಅಶ್ವದ ಪ್ರಾಧಾನ್ಯಸ್ತುತಿಯನ್ನು ಮುಂದೆ ಹೇಳುವ ಮಂತ್ರವು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ಪ್ರಥಮಖಂಡವು ಸಮಾಪ್ತವಾಗಿದೆ.

## ಅಥ ದ್ವಿತೀಯಃ ಖಂಡಃ

## ಎರಡನೆಯ ಖಂಡವು

ಅಶ್ವೋ ವೋಳ್ಹಾ ಸುಖಂ ರಥಂ ಹಸನಾಮುಪಮಂತ್ರಿಣಃ। ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾಯೇಂದ್ರೋ ಪರಿ ಸ್ರವ (ಋ. ಸಂ. ೯-೨೧೨-೪೨) ॥ ಅಶ್ವೋ ವೋಳ್ಹಾ ರಥಂ ವೋಳ್ಹಾ ಸುಖಮಿತಿ ಕಲ್ಯಾಣನಾಮ ಕಲ್ಯಾಣಂ ಪುಣ್ಯಂ ಸುಹಿತಂ ಭವತಿ ಸುಹಿತಂ ಗಮ್ಯತೀತಿ ವಾ ಹಸೈತಾ ವಾ ಪಾತಾ ವಾ ಪಾಲಯಿತಾ ವಾ ಶೇಪಸ್ಸೃಚ್ಛತೀತಿ ವಾರಿ ವಾರಯತಿ ಮಾ ನೋ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೨ ॥

ಅಶ್ವೋ ವೋಳ್ಹಾ ಸುಖಂ ರಥಂ ಹಸನಾಮುಪಮಂತ್ರಿಣಃ। ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾಯೇಂದೋ ಪರಿಸ್ರವ ॥
(ಋ. ಸಂ. ೭-೫-೨೫)

ಇದು ಸೋಮಸ್ತುತಿಯನ್ನು ತಿಳಿಸುತ್ತದೆ. ಎಲೈ ಸೋಮವೇ, ವಹನಸಮರ್ಥವಾದ ಕುದುರೆಯು ಲಕ್ಷ್ಯದೇಶವನ್ನು ಹೊಂದಿಸಲು ಸುಖಕರವಾದ ರಥವನ್ನು ಬಯಸುತ್ತದೆಯೋ, ಹೇಗೆ ನರ್ಮಸಚಿವರು ಉಪಹಾಸಪ್ರಧಾನವಾದ ಮಾತನ್ನು ಬಯಸುತ್ತಾರೋ, ಪುರುಷರ ಜನನಾಂಗವು ರೋಮವಿಶಿಷ್ಟವಾದ ಎರಡು ಸೀಳಾದ ಉಪಸ್ಥವನ್ನು ಬಯಸುವುದೋ, ಕಪ್ಪೆಯು ಹೇಗೆ ನೀರನ್ನೇ ಬಯಸುತ್ತದೆಯೋ ಅದರಂತೆ ನಾನು ನಿನ್ನ ರಸಸುರಿಯುವುದನ್ನು ಬಯಸುತ್ತೇನೆ. ಆದುದರಿಂದ ಇಂದ್ರನಿಗೋಸ್ಕರ ದಶಾಪವಿತ್ರದಿಂದ ರಸವನ್ನು ಸುರಿಸು.

'ಅಶ್ವೋ ವೋಳ್ಹಾ' ಸುಖಂ ವೋಳ್ಹಾ ರಥಂ ವೋಳ್ಹಾ। ಸುಖಮಿತಿ ಕಲ್ಯಾಣನಾಮ। ಕಲ್ಯಾಣಂ ಪುಣ್ಯಂ ಸುಹಿತಂ ಭವತಿ (ಸುಹಿತಂ ಗಮ್ಯತೀತಿ ವಾ। ಹಸೈತಾ ವಾ ಪಾತಾ ವಾ ಪಾಲ-

ಯಿತಾ ವಾ ಶೇಪಸಮೃಚ್ಛತೀತಿ ವಾರಿ ವಾರಯತಿ, ಮಾನೋ ವ್ಯಾಖ್ಯಾತಸ್ತಸ್ಯೈಷಾ ಭವತಿ) ॥ ೨ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. 'ಅಶ್ವೋ ವೋಳ್ಹಾ' ಎಂದು ಮಂತ್ರದ ಪ್ರತೀಕವನ್ನು ತೆಗೆದುಕೊಂಡಿರುತ್ತಾರೆ. ವೋಢಾ ಎಂಬಲ್ಲಿ ವಹಧಾತುವಿಗೆ ತೃಚ್‌ಪ್ರತ್ಯಯ. ಯಾವುದನ್ನು ಎಳೆಯುವುದು ಎಂದು ತಾನೇ ಪ್ರಶ್ನೆಯನ್ನು ಹಾಕಿಕೊಂಡು ಉತ್ತರ ತೋರಿಸುತ್ತಾರೆ. ಸುಖವಾಗಿ ಒಯ್ಯುವುದನ್ನು ಅಥವಾ ಸುಖಕರವಾದ ರಥವನ್ನು ಒಯ್ಯುವುದನ್ನು ಬಯಸುತ್ತದೆ. ಕಲ್ಯಾಣಂ ಪುಣ್ಯಂ ಮುಂತಾದ ವ್ಯಾಖ್ಯಾನ ಅಪ್ರಕೃತವಾಗಿ ತೋರುತ್ತದೆ. ಇದು ಪ್ರಕ್ಷಿಪ್ತವಾದ ಪಾಠವೆಂದು ಕೆಲವರ ಮತ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಎರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತೃತೀಯ ಖಂಡಃ

### ಮೂರನೆಯ ಖಂಡವು

ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿಖ್ಯನ್ । ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷಾಮೋ ವಿದಥೇ ವೀರ್ಯಾಣಿ ॥ (ಋ. ಸಂ. ೧-೧೬೨-೧) ಯದ್ವಾಜಿನೋ ದೇವೈರ್ಜಾತಸ್ಯ ಸಪ್ತೇಃ ಸರಣಸ್ಯ ಪ್ರವಕ್ಷ್ಯಾಮೋ ಯಜ್ಞೇ ವಿದಥೇ ವೀರ್ಯಾಣಿ ಮಾ ನಸ್ತ್ವಂ ಮಿತ್ರಶ್ಚ ವರುಣಶ್ಚಾರ್ಯಮಾ ಚಾಯುಶ್ಚ ವಾಯುರಯನ ಇಂದ್ರಶ್ಚೋರುಕ್ಷಯಣ ಋಭೂಣಾಂ ರಾಜೇತಿ ವಾ ಮರುತಶ್ಚ ಪರಿಖ್ಯಿನ್ಪ್ರ ಶಕುನಿಃ ಶಕ್ನೋತ್ಯುನ್ನೇತುಮಾತ್ಮಾನಂ ಶಕ್ನೋತಿ ನದಿತುಮಿತಿ ವಾ ಶಕ್ನೋತಿ ತಕಿತುಮಿತಿ ವಾ ಸರ್ವತಃ ಶಂಕರೋಽಸ್ತ್ವಿತಿ ವಾ ಶಕ್ನೋತೇರ್ವಾ ತಸ್ಯೈಷಾ ಭವತಿ ॥ ೩ ॥

ಅಶ್ವವನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಅಶ್ವಸ್ತುತಿಯಲ್ಲಿ ಪ್ರವೃತ್ತರಾದ ನಮ್ಮನ್ನು, ಅಹರಭಿಮಾನಿ ದೇವನಾದ ಮಿತ್ರನೂ, ರಾತ್ರ್ಯಭಿಮಾನಿದೇವನಾದ ವರುಣನೂ, ಅಂತರಾಲಾಭಿಮಾನಿದೇವನಾದ ಅರ್ಯಮನೂ, ವಾಯುವೂ, ಮಹದೈಶ್ವರ್ಯವುಳ್ಳ ಇಂದ್ರನೂ, ಮರುದ್ದೇವತೆಗಳೂ ನಿಂದಿಸದಿರಲಿ. ಏಕೆಂದರೆ ವೇಗವುಳ್ಳ ಅಥವಾ ಬಹ್ವನ್ನವುಳ್ಳ, ವಸ್ತುಗಳಿಂದ ಉತ್ಪನ್ನನಾದ, ಅಥವಾ ಗಂಧರ್ವಕುಲದಲ್ಲಿ ಹುಟ್ಟಿರುವ ಅಶ್ವದ ವೀರಕರ್ಮಗಳನ್ನೂ, ಗುಣಗಳನ್ನೂ, ಈ ಯಜ್ಞದಲ್ಲಿ ಪ್ರಶಂಸಿಸುತ್ತೇವೆ. ಆದುದರಿಂದ ನಿಂದಿಸದೆ ಅನುಗ್ರಹಿಸಲಿ ಎಂದರ್ಥ.

ಯದ್ವಾಜಿನೋ ದೇವ್ಯಜಾತಸ್ಯ ಸಪ್ತೇಃ ಸರಣಸ್ಯ ಪ್ರವಕ್ಷ್ಯಾಮೋ
ಯಜ್ಞೇ ವಿದಥೇ ವೀರ್ಯಾಣಿ ಮಾ ನಸ್ತ್ವಂ ಮಿತ್ರಶ್ಚ ವರುಣ
ಶ್ಚಾರ್ಯಮಾ ಚಾಯುಶ್ಚ ವಾಯುರಯುಸ ಇಂದ್ರ ಶ್ಚೋರು
ಕ್ಷಯಣ ಋಭೂಣಾಂ ರಾಜೇತಿ ವಾ ಮರುತಶ್ಚ ಪರಿಖ್ಯನ್ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಋಭುಕ್ಷಾಃ ಎಂಬುದಕ್ಕೆ ಎರಡು ರೀತಿಯಿಂದ ಅರ್ಥ ಕಲ್ಪಿಸುತ್ತಾರೆ. ಅತಿಶಯವಾದ ಐಶ್ವರ್ಯವುಳ್ಳವನು ಅಥವಾ ಮಹತ್ತಾದ ಸ್ಥಾನದಲ್ಲಿರುವವನು. ಅಥವಾ ಋಭೂನ್ ಕ್ಷಿಯತಿ ಈಷ್ಟೇ, ಎಂಬ ವ್ಯುತ್ಪತ್ತಿಯಿಂದ ಋಭುಗಳ ರಾಜನೆಂದರ್ಥ.

ಶಕುನಿಃ ಶಕ್ನೋತ್ಯುನ್ನೇತುಮಾತ್ಮಾನಂ, ಶಕ್ನೋತಿನದಿತುಮಿತಿ ವಾ ||
ಶಕ್ನೋತಿ ತಕಿತುಮಿತಿವಾ | ಸರ್ವತಃ ಶಂಕರೋ ನಿಸ್ತ್ವಿತಿವಾ |
ಶಕ್ನೋತೇರ್ವಾ, ತಸ್ಯೈಷಾ ಭವತಿ || ೩ ||

ಶಕುನಿಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ತನ್ನನ್ನು ತಾನೇ ಎತ್ತಲು ಸಮರ್ಥವಾಗುವುದು ಶಕುನಿ. ಪಕ್ಷಿಯು ಅತಿ ಲಘುವಾದುದರಿಂದ ಮೇಲಕ್ಕೆ ತಾನಾಗಿ ಎದ್ದು ಹಾರುತ್ತದೆ. ಶಕಧಾತು ಪೂರ್ವಪದ. ಉತ್‌ಪೂರ್ವಕನೀಧಾತು ಉತ್ತರಪದ. ಶಕಿಗೆ ಕ್ವಿಪ್ ಬಂದಾಗ ಶಕ್ ಎಂದಾಗುತ್ತದೆ. ಉತ್‌ಪೂರ್ವಕ ನೀ ಧಾತುವಿಗೆ ಇನಿಪ್ರತ್ಯಯ. ಶಕುನಿಯೆಂದಾಗುತ್ತದೆ. ಅಥವಾ ನದಧಾತು, ಅಥವಾ ಸ್ತು ಧಾತು ಉತ್ತರಪದದಿಂದ ಈ ರೂಪಸಿದ್ಧಿಯಾಗುತ್ತದೆ. ಶಬ್ದಮಾಡಲು ಸಮರ್ಥವಾದುದು ಎಂದರ್ಥವಾಗುತ್ತದೆ. ಅಥವಾ ಗತ್ಯರ್ಥಕ ತಕದಾತು ಉತ್ತರಪದವಿರುವಾಗ ತಕಾರಕ್ಕೆ ಕಕಾರದೇಶ. ತಡೆ ಇಲ್ಲದೆ ಹೋಗಲು ಸಮರ್ಥವಾದುದು ಎಂದರ್ಥ. ಅಥವಾ ಎಲ್ಲಾ ವಿಧದಿಂದಲೂ ಇದು ನಮಗೆ ಮಂಗಳವನ್ನುಂಟುಮಾಡಲಿ ಎಂಬರ್ಥದಲ್ಲಿ ಈ ಶಬ್ದವು ನಿಷ್ಪನ್ನವಾಗಿದೆ. ಆಗ ಸುಖನಾಮವಾದ ಶಂ ಎಂಬುದು ಪೂರ್ವಪದ. ಕೃಞಧಾತು ಉತ್ತರಪದ. ಪೃಷೋದರಾದಿಯಲ್ಲಿ ಪಠಿತವಾದುದರಿಂದ ಇಷ್ಟರೂಪಸಿದ್ಧಿಯಾಗುತ್ತದೆ. ಇನ್ನು ಕೆಲವರು ಶಂಕಾರ್ಥಕ ಶಕಿಧಾತುವಿನಿಂದ ಈ ರೂಪಸಿದ್ಧಿಯನ್ನು ಹೇಳುತ್ತಾರೆ. ಶಂಕಿಸಲು ಯೋಗ್ಯವಾದದ್ದು ಶಕುನಿ. ಹೀಗೆ ನಾನಾ ರೀತಿಯಿಂದ ನಿಷ್ಪನ್ನವಾದ ಶಕುನಿಗೆ ಮುಂದೆ ಹೇಳುವ ಮಂತ್ರವು ಪ್ರಧಾನಸ್ತುತಿಯಾಗುತ್ತದೆ.

ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾಮರುತಃ ಪರಿಖ್ಯನ್ |
ಯದ್ವಾ ಜಿನೋ ದೇವಾಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ || ೧ ||

ಶೀಘ್ರಗಾಮಿಯಾದುದೂ, ದೇವತೆಗಳಿಂದ ಉತ್ಪನ್ನವಾದುದೂ ಅಥವಾ ನಾನಾ ದೇವತೆಗಳ ರೂಪದಲ್ಲಿರುವುದೂ ಆದ ಈ ಯಜ್ಞಾಶ್ವದ ವೀರ್ಯಕರ್ಮಗಳನ್ನು ಪ್ರಕಟಿಸಿ ನಾವು ಈ ಯಜ್ಞದಲ್ಲಿ ಪ್ರಶಂಸಿಸುತ್ತೇವೆಯಾದ್ದರಿಂದ ಮಿತ್ರನೂ, ವರುಣನೂ, ಅರ್ಯಮನೂ, ಸತತವಾಗಿ ಸಂಚರಿಸುವ ವಾಯುವೂ, ಇಂದ್ರನೂ, ಋಭುಕ್ಷನೂ, ಮರುತ್ತುಗಳೊಡನೆ ನಮ್ಮನ್ನು ಅಲಕ್ಷ್ಯಮಾಡದಿರಲಿ (ನಿಂದಿಸದಿರಲಿ).

(ಕಿಮಾರ್ಥವಂ) ಪರೇ ಮಾ ನೋ ಮೇಧ್ಯಸ್ಯಾಶ್ವಸ್ಯ ಸಂಸ್ತ್ರಪಃ |
ಈರ್ಮಾಂತಾಸ ಇತಿ ತ್ವಸ್ಯಾಂ ನೀಯಮಾನಂ ಪ್ರಶಂಸತಿ || (ಬೃಹದ್ದೇವತಾ. ೪-೨೭)

**ಮಾ ನೋ ಮಿತ್ರೋ ವರುಣೋ** (೧-೧೬೨-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ, **ಯದಕ್ರಂದಃ ಪ್ರಥಮಂ ಜಾಯಮಾನಃ** (೧-೧೬೩-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ **ಮೇಧ್ಯಾಶ್ವದ** ಪ್ರಶಂಸಾ ರೂಪವಾದ ಕೃತಿಗಳಾಗಿವೆ. **ಈರ್ಮಾಂತಾಸಃ ಸಿಲಿಕಮಧ್ಯಮಾಸಃ** (೧-೧೬೩-೧೦) ಇತ್ಯಾದಿ ಋಕ್ಕುಗಳಲ್ಲಿ ಪುಷ್ಟವಾಗಿ ಬೆಳೆದ ಮೇಧ್ಯಾಶ್ವದ ವರ್ಣನೆಯಿದೆ.

> ಸ್ವಯೂಥ್ಯಾಸ್ತಸ್ಯ ಚೈವಾತ್ರ ಬಹವಃ ಸಂಸ್ತುತಾ ಹಯಾಃ ।
> ನಿಯುಕ್ತಾಶ್ಚಾನಿಯುಕ್ತಾಶ್ಚ ಪ್ರಸಂಗಾದನುಕೀರ್ತಿತಾಃ ॥

(ಬೃ. ದೇ. ೪-೨೮)

ಈ ಮೇಧ್ಯಾಶ್ವದ ಜೊತೆಯಲ್ಲಿ ಸಹಾಯಾರ್ಥವಾಗಿಯಾಗಲಿ ಅಥವಾ ಅಲಂಕಾರಾರ್ಥವಾಗಿಯಾಗಲಿ, ನಿಯುಕ್ತವಾಗಿರಲಿ, ಅಥವಾ ಅನಿಯುಕ್ತವಾಗಿರಲಿ ಇರತಕ್ಕ ಇನ್ನೂ ಇತರ ಅಶ್ವಗಳನ್ನೂ ಸಹ ಆನುಷಂಗಿಕವಾಗಿ ಸ್ತುತಿಸಿದೆ.

> ಸಂಜ್ಞಪ್ರವದಸಂಜ್ಞಪ್ತಂ ಭವಿಷ್ಯಂ ಚಾಹ ಭೂತವತ್ ।
> ತಸ್ಯ ಮಾಂಸಸ್ಯ ಸೂನಸ್ಯ ಚರೂಣಾಂ ಹವಿಷಸ್ತಥಾ ।
> ವಾಸೋಽಧಿವಾಸಸೋಶ್ಚಾತ್ರ ಯದ್ವಿಶಸ್ಯಂ ಚ ಕೀರ್ತಿತಂ ।
> ಗಾತ್ರಸ್ಯ ಶೂಲಸ್ಥೂಣಾನಾಂ ಸ್ವಧಿತೇಶ್ಚ ಪ್ರಕೀರ್ತನಂ ॥
> ಛಾಗಸ್ಯ ಕೀರ್ತನಂ ಚಾತ್ರ ಇಂದ್ರಾಪೂಷ್ಣೋಃ ಸಹ ಸ್ತುತಿಃ ।

(ಬೃ. ದೇ. ೪-೨೯-೩೧)

ಮುಂದೆ ಯಷ್ಟವ್ಯವಾಗಿರುವ ಅಶ್ವವನ್ನು ಆಗಲೇ ಯಜ್ಞಾಹುತಿಯನ್ನಾಗಿ ಅರ್ಪಿಸಿದಂತೆಯೇ ಭಾವಿಸಿ ಈ ಅಶ್ವವನ್ನು ವರ್ಣಿಸಿದೆ. ಇದರ **ಮಾಂಸವೂ, ಸೂನವೂ, ಚರುವೂ. ವಾಸಾಧಿವಾಸಗಳೂ, ಗಾತ್ರವೂ, ಶೂಲವೂ ಸ್ಥೂಣವೂ, ಸ್ವಧಿತಿಯೂ** ಇನ್ನೂ ಇತರ ವಿಶೇಷಗಳೂ ಪ್ರಶಂಸಿತವಾಗಿವೆ. ಈ ಯಜ್ಞಕ್ಕೆ ಸಂಬಂಧಿಸಿದ **ಛಾಗವೂ** (ಮೇಕೆಯೂ) ನಿರ್ದೇಶಿಸಲ್ಪಟ್ಟಿದೆ. **ಇಂದ್ರನ** ಸ್ತುತಿಯೂ **ಪೂಷನ** ಸ್ತುತಿಯೂ ಅಡಕವಾಗಿದೆ ಎಂಬುದಾಗಿ ಬೃಹದ್ದೇವತಾಕಾರರ ೧-೧೬೨ ಮತ್ತು ೧-೧೬೩ನೇ ಸೂಕ್ತಗಳ ವಿವರಣೆಯನ್ನು ಕೊಟ್ಟಿದ್ದಾರೆ. ಪ್ರಕೃತವಾದ ಮೊದಲನೆಯ ಋಕ್ಕಿನಲ್ಲಿಯೂ ಸಹ,

> **ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ।**

ಈ ಯಜ್ಞದಲ್ಲಿ ದೇವಜಾತವಾದ ಅಶ್ವದ ವೀರ್ಯಕರ್ಮಗಳನ್ನು ಪ್ರಶಂಸಿಸುವೆವು ಎಂದು ಸಂಕಲ್ಪಿಸಿದೆ. ಈ ಯಜ್ಞದ ಸ್ವರೂಪ ವೇನು, ಅದಕ್ಕಾಗಿ ನಿಯುಕ್ತವಾದ ಅಶ್ವದ ಮಹಿಮೆಯೇನು ? ಉಳಿದ ಯಾಗಗಳಿಗಿಂತಲೂ ಅಧಿಕವಾಗಿ ಈ ಯಜ್ಞದಲ್ಲಿರುವ ವೈಶಿಷ್ಟ್ಯವೇನು ಎಂಬುದನ್ನು ಮೊದಲು ತಿಳಿಯಬೇಕು

> **ರಾಷ್ಟ್ರಂ ವಾ ಅಶ್ವಮೇಧಃ । ರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛಂತೇ ।**

(ತೈ. ಬ್ರಾ. ೩-೮-೯-೪)

ಅಶ್ವಮೇಧವು ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆದ ಯಜ್ಞವು. ರಾಜ್ಯವಿಸ್ತರಣೆಗಾಗಿ ಸಾರ್ವಭೌಮ ಪದವಿಗೆ ಮಾತ್ರ ಅರ್ಹನಾಗಿರತಕ್ಕ ರಾಜನು ನೆರವೇರಿಸತಕ್ಕ ಈ ಯಜ್ಞವು ಒಂದು ರಾಷ್ಟ್ರೀಯವಾದ ಪ್ರಾಮುಖ್ಯತೆಯನ್ನು ಹೊಂದಿದೆ.

ಪಟ್ಟಾಭಿಷೇಕದ ಕಾಲದಲ್ಲಿ ನೆರವೇರಿಸತಕ್ಕ ಕರ್ಮಗಳಂತೆಯೂ ಅಥವಾ ರಾಜಸೂಯಯಾಗದಂತೆಯೂ ಕೇವಲ ವೈಯಕ್ತಿಕ ವಾದ ಆಡಂಬರವಲ್ಲದೆ, ಸಣ್ಣ ಸಣ್ಣ ರಾಜರುಗಳಿಂದ ನಿರ್ವಹಿಸಲು ಅಸಾಧ್ಯವಾದುದೂ, ಅನೇಕ ರಾಜಾಧಿರಾಜರುಗಳಿಗೆ ಸಾರ್ವಭೌಮವಾಗಿ ತನ್ನ ರಾಜಕೀಯವಾದ ಅಧಿಕಾರವನ್ನು ವ್ಯಕ್ತಪಡಿಸುವವನೂ, ಯಾವ ರಾಜನಿಂದಲೂ ಪರಿಭವವನ್ನು ಹೊಂದದಿರುವವನೂ ಆದ ಚಕ್ರವರ್ತಿಯಿಂದ ಮಾತ್ರ ನಿರ್ವಹಿಸಲ್ಪಡುವ ಈ ಮಹಾಯಜ್ಞವು ಬಹಳ ಶ್ರಮಸಾಧ್ಯವಾದ ಕರ್ಮವಾಗಿದೆ.

ಪರಾ ವಾ ಏಷ ಸಿಚ್ಯತೇ । ಯೋಽಬಲೋಽಶ್ವಮೇಧೇನ ಯಜತೇ ।

(ತೈ. ಬ್ರಾ. ೩-೮-೯-೫)

ದುರ್ಬಲನಾದ ಯಾವ ರಾಜನಾಗಲಿ ಅಶ್ವಮೇಧವನ್ನು ತಾನೂ ಮಾಡುತ್ತೇನೆಂದು ಪ್ರಯತ್ನಿಸಿದರೆ ಅವನಿಗೆ ತನ್ನ ಸ್ಥಾನದಿಂದ ಉಚ್ಚಾಟನೆಯಾಗುವುದು ಖಂಡಿತವು.

ಯದಮಿತ್ರಾ ಅಶ್ವಂ ವಿಂದೇರನ್ । ಹನ್ಯೇತಾಸ್ಯ ಯಜ್ಞಃ ।

(ತೈ. ಬ್ರಾ. ೩-೮-೯-೫)

ಶತ್ರುಗಳು ಇವನ ಅಶ್ವವನ್ನಪಹರಿಸಿ ಇವನ ಯಜ್ಞಕ್ಕೆ ವಿಘ್ನವನ್ನು ತರುತ್ತಾರೆ. ಇತ್ಯಾದಿಯಾಗಿ ಈ ಯಜ್ಞವನ್ನು ನಿರ್ವಹಿಸು ವವನ ಯೋಗ್ಯತೆಯನ್ನು ನಿಷ್ಕರ್ಷಿಸಿ ಇದರ ರಾಜಕೀಯದ ಸಂಕೇತವನ್ನೂ ರಾಷ್ಟ್ರೀಯಮಹತ್ವವನ್ನೂ ತಿಳಿಸಿದೆ. ಇಂತಹ ಮಹತ್ಕಾರ್ಯಕ್ಕೆ ಸಾಧ್ಯವಾದ ಅಶ್ವವೂ ಮಹತ್ತಾದ ಗುಣವುಳ್ಳದ್ದೇ ಆಗಿರಬೇಕು.

ಈ ಅಶ್ವವು ವೇಗಗಾಮಿಯಾಗಿರಬೇಕು. ಮುಂಭಾಗದಲ್ಲಿ ಕೃಷ್ಣವರ್ಣವೂ, ಹಿಂಭಾಗದಲ್ಲಿ ಶ್ವೇತವರ್ಣವೂ, ಒಂದು ಕರಿಯ ಚುಕ್ಕಿಯೂ ಇದರ ವಿಶೇಷಗುಣಗಳು. ಫಾಲ್ಗುಣಮಾಸದ ಎಂಟನೆಯ ಅಥವಾ ಒಂಭತ್ತನೆಯ ದಿನ ಈ ಕಲಾಪಗಳು ಆರಂಭವಾಗುವುವು. ರಾಜನು ಆ ರಾತ್ರಿಯನ್ನು ಗಾರ್ಹಪತ್ಯಾಗ್ನಿಯ ಗೃಹದಲ್ಲಿ ಕಳೆಯುವನು. ಮಾರನೆಯ ದಿನ ಅಶ್ವವು ಸಿದ್ಧವಾಗುವುದು. ಅದಕ್ಕೆ ಸ್ನಾನಾದಿಗಳನ್ನು ಮಾಡಿಸುವರು. ಅನಂತರ ನಾಲ್ಕು ಕಣ್ಣುಗಳ ಒಂದು ನಾಯಿ ಯನ್ನು ಕತ್ತರಿಸಿ ಅಶ್ವದ ಅಡಿಯಲ್ಲಿ ಹೊರಳಾಡುವಂತೆ ಬಿಡುವರು. ಆಗ ಯಜ್ಞಕರ್ತನು " ಈ ಅಶ್ವವನ್ನು ಎದುರಿಸುವವನು ವರುಣನನ್ನು ಪ್ರತಿಭಟಿಸಿದಂತೆಯೇ " ಎಂದು ಬರೆದು ಅದರ ಮೇಲೆ ಅಂಟಿಸುವನು. ಅನಂತರ ಅಶ್ವವು ಅಗ್ನಿಯ ವೇದಿಕೆಯ ಹತ್ತಿರ ಬರುತ್ತದೆ. ಸವಿತೃವನ್ನು ಉದ್ದೇಶಿಸಿ ಮೂರು ದಿನಗಳು ಆಹುತ್ಯರ್ಪಣಗಳಾದನಂತರ ಅದು ಸ್ವತಂತ್ರವಾಗಿ ಬಿಡಲ್ಪಡುವುದು. ಅದರ ರಕ್ಷಣೆಗಾಗಿ ನೂರು ಇತರ ಅಶ್ವಗಳೂ ನೂರಾರು ಯುವಕರೂ, ಅನೇಕ ಯೋಧರೂ ಅದನ್ನು ಹಿಂಬಾಲಿಸುವರು. ಸಾರ್ವಭೌಮನಾಗಿರತಕ್ಕವನ ಅಧೀನರಾಜರು ಅದರ ರಕ್ಷಣೆಯಲ್ಲಿ ಜಯಶಾಲಿಗಳಾದರೆ ಅವರಿಗೆ ತಮ್ಮ ತಮ್ಮ ಪ್ರಭುತ್ವವೂ ಸುರಕ್ಷಿತವಾಗಿರುವುದು. ಆ ಅಶ್ವವು ಸಂಚಾರಮಾಡುವ ಕಾಲದಲ್ಲಿ ಯಜ್ಞಕರ್ತನೂ ಅವನ ಪುರೋಹಿ ತನೂ ಸುವರ್ಣಾಸನದಲ್ಲಿ ಕುಳಿತಿರುವರು. ಹೋತೃವು ಆಖ್ಯಾನಾದಿಗಳನ್ನು ಪಠಿಸುವನು. ಅಧ್ವರ್ಯುವು ಅಶ್ವದ ಜಯ ಲಾಭಕ್ಕಾಗಿ ಕೆಲವು ಕರ್ಮಗಳನ್ನು ನೆರವೇರಿಸುವನು—ಅದು ಹಿಂತಿರುಗಿದನಂತರ ಯಜ್ಞವು ನೆರವೇರುವುದು.

ಶತಪಥಾದಿಗಳಲ್ಲಿ ಈ ಅಶ್ವಮೇಧದ ಮಹತ್ವವನ್ನು ಬಹಳವಾಗಿ ಸ್ತುತಿಸಿದೆ. **ಋಷಭ ಏಷ ಯಜ್ಞಾನಾಂ** (ಶ. ಬ್ರಾ. ೧೩-೧-೨-೨) ಯಜ್ಞಗಳಲ್ಲೆಲ್ಲಾ ಇದೇ ಬಲಶಾಲಿಯಾದ ಋಷಭದಂತೆ ಶ್ರೇಷ್ಠವಾದುದೆಂದೂ, **ರಾಜಾ ವಾ ಏಷ ಯಜ್ಞಾನಾಂ ಯದಶ್ವಮೇಧಃ** (ಶ. ಬ್ರಾ. ೧೩-೨-೨-೧) ಯಜ್ಞಗಳಿಗೆಲ್ಲಾ ಇದೇ ರಾಜನೆಂದೂ.

ಏಷ ವೈ, ಪ್ರಭೂರ್ನಾಮ ಯಜ್ಞಃ............ಏಷ ವೈ ವಿಭೂರ್ನಾಮ ಯಜ್ಞಃ............ಏಷ ವೈ ವಿಧೃತಿರ್ನಾಮ ಯಜ್ಞಃ । .. ........ಏಷ ವೈ ಪ್ರತಿಷ್ಠಾ ನಾಮ ಯಜ್ಞಃ

(ಶ. ಬ್ರಾ. ೧೩-೩-೭)

ಇತ್ಯಾದಿಯಾಗಿ ನಾನಾವಿಧವಾಗಿ ಈ ಯಜ್ಞದ ವೈಶಿಷ್ಟ್ಯವನ್ನು ಪ್ರಶಂಸಿಸಿದೆ. ಪ್ರಕೃತದಲ್ಲಿ ಈ ಮಹತ್ತಾದ ಯಜ್ಞಕ್ಕೆ ಸಾಧನವಾದ ಅಶ್ವದ ಸ್ತುತಿಯಿದೆ. ಈ ಅಶ್ವವನ್ನು ಸ್ತುತಿಸುವಾಗ ಏನಾದರೂ ನ್ಯೂನತೆಯಿದ್ದರೆ ಮಿತ್ರಾದಿದೇವತೆಗಳು ಅದನ್ನು ಲಕ್ಷ್ಯವಾಗಿಟ್ಟುಕೊಂಡು ನಮ್ಮನ್ನು ದೂಷಿಸದಿರಲಿ ಎಂದು ಪ್ರಾರ್ಥಿಸಿದೆ.

ಸಪ್ತೇಃ—ಸಪ್ತಿಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೭) ಸಪ್ತೇಃ ಎಂಬ ಪದಕ್ಕೆ ಸರಣಸ್ಯ ಎಂದು ವಿವರಿಸಿದ್ದಾರೆ. ಈ ಪದಕ್ಕೆ ಕೇವಲ ಚಲಿಸುವುದು ಎಂದರ್ಥವಾದರೂ ಸಹ ಚಲನದಲ್ಲಿ ವೇಗವನ್ನೂ ಶಕ್ತಿಯನ್ನೂ ಸೂಚಿಸುತ್ತದೆ.

ವಾಜಿನಃ—ಈ ಪದಕ್ಕೂ ಸಹ ಮೇಲಿನ ಅರ್ಥವು ರೂಢಿಯಲ್ಲಿದೆ. ಆದರೆ ಇಲ್ಲಿ ಎರಡು ಪದಗಳೂ ಇರುವುದರಿಂದ ಇದಕ್ಕೆ ಬೇರೆ ಅರ್ಥವಿರಬೇಕು. ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ ವಾಜ ಶಬ್ದಕ್ಕೆ ಅನ್ನವೆಂದರ್ಥಮಾಡಿ ಬಹ್ವನ್ನವತಃ ಪ್ರಭೂತವಾದ ಅನ್ನಉಳ್ಳ ಅಶ್ವವೆಂದರ್ಥಮಾಡಿದ್ದಾರೆ. ಆದರೆ ಓವಿಜೀ ಭಯ ಚಲನಯೋಃ ಎಂದು ಈ ಧಾತುವಿಗೆ ಭಯ ಚಲನ ಎಂಬ ಎರಡರ್ಥಗಳೂ ಇರುವುದರಿಂದ ಇಲ್ಲಿ ಭಯಪಡಿಸತಕ್ಕದ್ದು ಎಂದು ಹೇಳಿದರೂ ಹೇಳಬಹುದು ನಿರುಕ್ತಕಾರರು ಉತ್ತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ (ಋ. ಸಂ. ೪-೪೦-೪) ಎಂಬ ಋಕ್ಕನ್ನುದಾಹರಿಸಿ ವಾಜೀ—ವೇಜನವಾನ್ ಎಂದು ವಿವರಿಸಿರುವುದಕ್ಕೆ ದುರ್ಗಾಚಾರ್ಯರು ಭಯವಾನ್ ಪರೇಭ್ಯೋ ಭಯಧಾತಾ ಪರೇಷಾಂ ಹಿ ತಂ ದೃಷ್ಟ್ವಾ ಭಯಮುತ್ಪದ್ಯತೇ—ಈ ಅಶ್ವದ ವೇಗದ ಶಕ್ತಿಯನ್ನು ನೋಡಿ ಇತರರಿಗೆ ಭಯವುಂಟಾಗುತ್ತದೆ. ಭಯಜನಕವಾದ ಅಶ್ವವು ಎಂದು ತಾತ್ಪರ್ಯವೆಂದು ಹೇಳಿದ್ದಾರೆ. ಸಪ್ತಿ, ವಾಜೀ ಎಂಬ ಎರಡು ಪದಗಳೂ ಸಹ ತೈತ್ತೀರಿಯ ಸಂಹಿತೆಯಲ್ಲಿ ಒಟ್ಟಿಗೆ ಪ್ರಯೋಗಿಸಲ್ಪಟ್ಟಿ.

ಅರ್ವಾಸಿ ಸಪ್ತಿರಸಿ ವಾಜ್ಯಸಿ (ತೈ. ಸಂ. ೧-೭-೮) ಎಂದು ಅಶ್ವದ ಸ್ವರೂಪವನ್ನು ವರ್ಣಿಸುವಾಗ ಸಪ್ತಿ ಶಬ್ದಕ್ಕೆ ಸಂಗ್ರಾಮೇಷು ಸಹಸಾ ಸಮವೈತಿ (ಷಪ ಸಮವಾಯೇ) ನಿಮಿಷಮಾತ್ರದಲ್ಲಿ (ಸಂಗ್ರಾಮ ಭೂಮಿಗೆ) ಸೇರತಕ್ಕ ಶಕ್ತಿಯುಳ್ಳದ್ದೆಂದೂ, ವಾಜೀ ಎಂಬುದಕ್ಕೆ ವೇಗವಾನ್, ಅನ್ನವಾನ್ ವಾ ಎಂದು ಸಹ ವಿವರಿಸುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥಮಾಡಬಹುದು.

ದೇವಜಾತಸ್ಯ— ಈ ಪದಕ್ಕೆ ಎರಡುವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ, ಬಹುದೇವತಾ ಸ್ವರೂಪೇಣೋತ್ಪನ್ನಸ್ಯ । ಉಷಾದೀನಾಮಸ್ಯ ಶಿರ ಆದ್ಯವಯವತ್ವಾದಿತಿ ಭಾವಃ । ಉಷಸ್ಸು ಸೂರ್ಯ ಇತ್ಯಾದಿ ದೇವತೆಗಳು ಈ ಅಶ್ವದ ಅವಯವಗಳೆಂದು ಹೇಳಿರುವುದರಿಂದ ಈ ಅರ್ಥವೂ, ಅಥವಾ ಎರಡನೆಯದಾಗಿ ದೇವೇಭ್ಯೋ ಜಾತಸ್ಯ ಗಂಧರ್ವಕುಲೇ ಉತ್ಪನ್ನತ್ವಾತ್ । ದೇವತೆಗಳಿಂದ ಗಂಧರ್ವ ಕುಲದಲ್ಲಿ ಉತ್ಪನ್ನವಾದುದರಿಂದ ಈ ವಿಶೇಷಣವೆಂದೂ ವಿವರಿಸಿದೆ. ಈ ಎರಡುವಿಧವಾದ ವಿವರಣೆಗೂ ಪೂರ್ಣವಾದ ಅವಕಾಶವಿದೆ.

ಉಷಾ ವಾ ಅಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ ಪ್ರಾಣೋ ವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ । ದ್ಯೌಃ ಪೃಷ್ಠಮಂತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ

**ಪಾರ್ಶ್ವೇ ಅವಾಂತರದಿಶಃ ಪರ್ಶವ ಋತವೋಽಂಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋ-ರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಂಸಾನಿ ॥**

(ಶ. ಬ್ರಾ. ೧೦-೬-೪), (ಬೃ- ಉ. ೧-೧-೧)

ಉಷಸ್ಸೇ ಈ ಯಜ್ಞಾಶ್ವದ ಶಿರಸ್ಸು, ಸೂರ್ಯನೇ ಕಣ್ಣು, ವಾಯುವೇ ಪ್ರಾಣವು, ವೈಶ್ವಾನರಗ್ನಿಯೇ ತೆರೆದ ಮುಖವು, ಸಂವತ್ಸರವೇ ದೇಹವು (ಆತ್ಮಾ), ದ್ಯುಲೋಕವೇ ಪೃಷ್ಠವು, ಅಂತರಿಕ್ಷವೇ ಉದರವು, ಪೃಥಿವಿಯೇ ಅಧೋಭಾಗವು, ದಿಕ್ಕುಗಳೇ ಪಾರ್ಶ್ವಗಳು—ಇತ್ಯಾದಿಯಾಗಿ ಈ ಯಜ್ಞಾಶ್ವದ ಸ್ವರೂಪವನ್ನು ವರ್ಣಿಸಿದೆ.

**ದೇವೇಭ್ಯೋ ಜಾತಸ್ಯ ಗಂಧರ್ವಕುಲ ಉತ್ಪನ್ನತ್ವಾತ್ ।** ಎಂಬ ಇನ್ನೊಂದು ಅರ್ಥವಿದೆ- ಈ ಅರ್ಥದಲ್ಲಿ ಅಶ್ವಕ್ಕೂ ದೇವತೆಗಳಿಗೂ ಪರಂಪರಾಸಂಬಂಧವಿದೆ. ದೇವತೆಗಳೊಡನೆ ಸಾಕ್ಷಾತ್ಸಂಬಂಧವಿರುವ ಅಂಶವನ್ನೂ ಸಹ ಅನೇಕಕಡೆ ಹೇಳಿರುವುದರಿಂದ ದೇವಜಾತಸ್ಯ ಎನ್ನುವುದಕ್ಕೆ ಸಾಕ್ಷಾತ್ತಾಗಿ ದೇವತೆಯಿಂದಲೇ ಉತ್ಪನ್ನನಾದ ಎಂದೂ ಹೇಳಬಹುದು. ಪಶುರೂಪದಿಂದ ಲಬ್ಧನಾದ ಪ್ರಜಾಪತಿಯು ಒಡನೆಯೇ ಸರ್ವವ್ಯಾಪಿಯಾದ ಅಶ್ವನಾದನು. ಅದೇ ಅಹಸ್ಸಿನಲ್ಲಿಯೇ ಆ ಅಶ್ವವು ಮೇಧರೂಪವಾದ ಯಜ್ಞವಾಯಿತು. ಆದುದರಿಂದ ಅಶ್ವಮೇಧವೆಂಬ ಹೆಸರು ಪ್ರಸಿದ್ಧವಾಗಿದೆ.. ಅಲ್ಲದೆ,

**ಯತ್ಪ್ರಜಾಪತಿರಾರಬ್ಧೋಽಶ್ವೋಽಭವತ್ । ತಸ್ಮಾದಶ್ವಃ । ಯತ್ಸದ್ಯೋ ಮೇಧೋಽಭವತ್ । ತಸ್ಮಾದಶ್ವಮೇಧಃ ।**

(ತೈ. ಬ್ರಾ. ೩-೯-೨೨-೧)

ಪಶುರೂಪದಿಂದ ಲಬ್ಧನಾದ ಪ್ರಜಾಪತಿಯು ಒಡನೆಯೇ ಸರ್ವವ್ಯಾಪಿಯಾದ ಅಶ್ವನಾದನು. ಅದೇ ಅಹಸ್ಸಿನಲ್ಲಿಯೇ ಆ ಅಶ್ವವು ಮೇಧರೂಪವಾದ ಯಜ್ಞವಾಯಿತು. । ಅದುದರಿಂದ ಅಶ್ವಮೇಧವೆಂಬ, ಹೆಸರು ಪ್ರಸಿದ್ಧವಾಗಿದೆ. ಅಲ್ಲದೆ,

**ಹಯೋ ಭೂತ್ವಾ ದೇವಾನವಹದ್ವಾಜೀ ಗಂಧರ್ವಾನರ್ವಾಸುರಾನಶ್ವೋ ಮನುಷ್ಯಾನ್ ಸಮುದ್ರ ಏವಾಸ್ಯ ಬಂಧುಃ ಸಮುದ್ರೋ ಯೋನಿಃ ॥**

(ಬೃ. ಉ. ೧-೧-೨

ವಿಶ್ವವ್ಯಾಪಕವಾದ ಈ ಮೇಧಾಶ್ವವು ಹಯದ ರೂಪದಲ್ಲಿ ದೇವತೆಗಳನ್ನೂ, ವಾಜಿಯ ರೂಪದಲ್ಲಿ ಗಂಧರ್ವರನ್ನೂ, ಅರ್ವರೂಪದಲ್ಲಿ ಅಸುರರನ್ನೂ ಮತ್ತು ಅಶ್ವರೂಪದಲ್ಲಿ ಮಾನವರನ್ನೂ ವಹಿಸುತ್ತದೆ. ಗಂಧರ್ವರಿಗೆ ವಾಸಸ್ಥಾನವಾದ ಅಂತರಿಕ್ಷವೇ ಈ ಅಶ್ವಕ್ಕೆ ಬಂಧುವು ಮತ್ತು ಜನ್ಮಸ್ಥಾನವು. ಇತ್ಯಾದಿಯಾದ ವರ್ಣನೆಗಳ ಆಧಾರದಿಂದ ದೇವಜಾತಸ್ಯ ಎಂಬ ವಿಶೇಷಣಕ್ಕೆ ಮೇಲೆ ಹೇಳಿರುವ ಎರಡನೆಯ ಅರ್ಥವೂ ಸಾಧ್ಯವಾಗುತ್ತದೆ.

**ಋಭುಕ್ಷಾಃ**— ಈ ಪದಕ್ಕೆ ನಿರುಕ್ತಕಾರರೇ ಎರಡರ್ಥವನ್ನು ಹೇಳಿದ್ದಾರೆ. **ಉರುಕ್ಷಯೇಣಃ ಇಂದ್ರಃ** ಎಂದು ಒಂದರ್ಥವನ್ನೂ, ಋಭೂನಾಂ ರಾಜಾ ಎಂಬ ಇನ್ನೊಂದರ್ಥವನ್ನೂ ಮಾಡಿದ್ದಾರೆ. ವಿಸ್ತೃತವಾದ ಅಂತರಿಕ್ಷದಲ್ಲಿ ವಾಸಮಾಡುವವನು ಎಂದು ಇಂದ್ರನಿಗೆ ವಿಶೇಷಣವಾಗಿಯಾಗಲಿ ಅಥವಾ ಋಭುಗಳಿಗೆ ಎಂದರೆ ಪ್ರಕಾಶಮಾನರಾದ ದೇವತೆಗಳಿಗೆ ರಾಜನೆಂದಾಗಲಿ ಅರ್ಥವಾಗುತ್ತದೆ. ಅಥವಾ ಸಾಯಣರು ವಿವರಿಸಿರುವಂತೆ ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಮಹಾತ್ಮನಾದ ಇಂದ್ರನೆಂದಾದರೂ ಆಗಬಹುದು.

**ಮಾ ಪರಿಖ್ಯನ್**— ಅವಹೇಳನವನ್ನು ಮಾಡದಿರಲಿ ಎಂದು ಪ್ರಾರ್ಥಿಸಿದೆ. ದೇವತಾತ್ಮಕವಾದ ಈ ಅಶ್ವವನ್ನು ತುಚ್ಛರಾದ ಮಾನವರು ಸ್ತುತಿಸುವುದರಲ್ಲಿ ಔಚಿತ್ಯವಿಲ್ಲವೆಂದು ಮಿತ್ರಾದಿದೇವತೆಗಳು ತಿರಸ್ಕರಿಸದೆ ಇರಲಿ ಎಂದರ್ಥ.

ವಿದಥೇ— ವೇದನಸಾಧನೇ ಯಜ್ಞೇ। ತಿಳಿವಳಿಕೆ ಸಾಧನವಾದ ಯಜ್ಞದಲ್ಲಿ ಎಂದು ಸಾಯಣರು ವಿವರಿಸಿದ್ದಾರೆ. ಆದುದರಿಂದ ಈ ಯಜ್ಞವು ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಸಾಧನವೆಂದು ತಿಳಿಯುತ್ತದೆ. ಈ ಯಜ್ಞಕಾಲದಲ್ಲಿ ಅಧ್ವರ್ಯುವಿಗೂ ಹೋತೃವಿಗೂ ಮತ್ತಿತರ ಋತ್ವಿಕ್ಕುಗಳಿಗೂ ಸಂಬಂಧಿಸಿದಂತೆ ಬ್ರಹ್ಮೋದ್ಯ ಸಭೆಯು ನಡೆದು ಅದರಲ್ಲಿ ವಿಶ್ವತತ್ವಗಳ ವಿಚಾರದಲ್ಲಿ ಚರ್ಚೆಯು ನಡೆಯುವುದು.

ಅಪ ವಾ ಏತಸ್ಮಾತ್ । ತೇಜೋ ಬ್ರಹ್ಮವರ್ಚಸಂ ಕ್ರಾಮತಿ ಯೋऽಶ್ವಮೇಧೇನ ಯಜತೇ ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತ ಆಗ್ನೇಯೋ ವೈ ಹೋತಾ ಬಾರ್ಹಸ್ಪತ್ಯೋ ಬ್ರಹ್ಮಾ ಬ್ರಹ್ಮಾ ಬೃಹಸ್ಪತಿಸ್ತೇಜಶ್ಚೈವಾಸ್ಮಿನ್ಬ್ರಹ್ಮವರ್ಚಸಂ ಚ ಸಮೀಚೀ ಧತ್ತೋ ಯೂಪ-ಮಭಿತೋ ವದತೋ ಯಜಮಾನೋ ವೈ ಯೂಪೋ ಯಜಮಾನಮೇವೈತತ್ತೇಜಸಾ ಚ ಬ್ರಹ್ಮವರ್ಚಸೇನ ಚೋಭಯತಃ ಪರಿಧತ್ತಃ॥

(ಶ ಬ್ರಾ. ೧೩-೨-೬-೯)

ತೇಜಸಾ ವಾ ಏಷ ......... ಬ್ರಹ್ಮವರ್ಚಸಮೇವಾವರುಂಧೇ । (ತೈ. ಬ್ರಾ. ೩-೯-೫)

ಇತ್ಯಾದಿ ವಾಕ್ಯಗಳಲ್ಲಿ ಋತ್ವಿಕ್ಕುಗಳಿಗೆ ತಾತ್ತ್ವಿಕವಿಚಾರವಾದ ಚರ್ಚೆಯು ನಡೆದು ಅದು ಜ್ಞಾನಸಾಧನವಾಗುವುದರಿಂದ ಈ ಅಶ್ವಮೇಧವು ನೆರವೇರುವ ಸ್ಥಾನಕ್ಕೆ ವಿದಥವೆಂದು ಹೆಸರು ಎಂದು ಸಾಯಣರ ವಿವರಣೆಯಿದೆ. ಈ ವಿಷಯವನ್ನು ಈ ಸೂಕ್ತದ ಮತ್ತು ಮುಂದಿನ ಸೂಕ್ತದ ಉಪಸಂಹಾರದಲ್ಲಿ ಅಶ್ವಮೇಧದ ಸ್ವರೂಪವನ್ನು ಕರ್ಮದ ದೃಷ್ಟಿಯಿಂದಲೂ ಜ್ಞಾನದ ದೃಷ್ಟಿಯಿಂದಲೂ ವಿವರಿಸುವಾಗ ತಿಳಿಸಲಾಗುತ್ತದೆ. ಆದರೆ ಇಲ್ಲಿ ವಿದಥಶಬ್ದಕ್ಕೆ ಜ್ಞಾನಸಾಧನವಾದ ಯಜ್ಞವೆಂದರ್ಥಮಾಡಿರುವುದರಿಂದ ಆ ಜ್ಞಾನವಿಷಯಕವಾದ ಚರ್ಚೆಯ ಸೂಕ್ಷ್ಮವಾದ ಪರಿಚಯವನ್ನು ಮಾಡಿಕೊಳ್ಳಬಹುದು. ಹೋತೃವಿಗೂ ಬ್ರಹ್ಮನಿಗೂ ನಡೆಯತಕ್ಕ ಬ್ರಹ್ಮೋದ್ಯದ ಚರ್ಚೆಯು ಈ ರೀತಿಯಿದೆ.

ಕಃ ಸ್ವಿದೇಕಾಕೀ ಚರತೀತಿ। ಅಸೌ ವಾ ಆದಿತ್ಯ ಏಕಾಕೀ ಚರತ್ಯೇಷ ಬ್ರಹ್ಮವರ್ಚಸಂ ಬ್ರಹ್ಮ-ವರ್ಚಸಮೇವಾಸ್ಮಿನ್ಧತ್ತಃ।

(ಶ. ಬ್ರಾ. ೧೩-೨-೬-೧೦)

ಏಕಾಕಿಯಾಗಿ ಸಂಚರಿಸುವ ವ್ಯಕ್ತಿಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ ದೂರದಲ್ಲಿರುವ ಆದಿತ್ಯನೇ ಏಕಾಕಿಯಾಗಿ ಸಂಚರಿಸುವವನು. ಅವನೇ ಬ್ರಹ್ಮವರ್ಚಸ್ಸು.

ಕಿಗ್‌ಸ್ವಿದಾಸೀತ್ಬೃಹದ್ವಯ ಇತಿ। ಅಶ್ವೋ ವೈ ಬೃಹದ್ವಯ ಆಯುರೇವಾವರುಂಧೇ।

(ಶ. ಬ್ರಾ. ೧೩-೨-೬-೧೫)

ಆ ಬೃಹತ್ಪಕ್ಷಿ ಯಾವುದು ಎಂಬ ಪ್ರಶ್ನೆಗೆ ಉತ್ತರವಾಗಿ ಮೇಧ್ಯಾಶ್ವನೇ ಆ ಬೃಹದ್ವಯವು. ಅದು ಆಯುಶ್ಶಕ್ತಿಯನ್ನು ಪಡೆಯುತ್ತದೆ. ಇತ್ಯಾದಿಯಾಗಿ ತಾತ್ವಿಕವಾದ ಚರ್ಚೆಯು ಬ್ರಹ್ಮೋದ್ಯದ ಸ್ವರೂಪವನ್ನು ತಿಳಿಸುತ್ತದೆ. ಈ ರೀತಿಯಾದ ಚರ್ಚೆಯಿಂದ ಅಶ್ವಮೇಧವು ಜ್ಞಾನಸಾಧನವಾದುದರಿಂದ ವಿದಥವೆಂಬ ಹೆಸರು. ಇದೇ ವಿಷಯವನ್ನು ಬೃಹದಾರಣ್ಯಕದಲ್ಲಿ,

ಏಷ ಹ ವಾ ಅಶ್ವಮೇಧೋ ಯ ಏಷ ತಪತಿ ತಸ್ಯ ಸಂವತ್ಸರ ಆತ್ಮಾಯಮಗ್ನಿರರ್ಕಸ್ತಸ್ಯೇಮೇ-
ಲೋಕಾ ಆತ್ಮಾನಸ್ತಾವೇತಾವರ್ಕಾಶ್ವಮೇಧೌ॥

(ಬೃ ಉ ೧-೨-೭)

ಎಂದು ಅಶ್ವಮೇಧದ ವಿಶ್ವಾತ್ಮಸ್ವರೂಪವನ್ನು ತಿಳಿಸಿದೆ. ಬ್ರಹ್ಮೋದ್ಯದಲ್ಲಿ ಈ ವಿಶ್ವಾತ್ಮದ ಸ್ವರೂಪವನ್ನು ವಿವರಿಸುವ ಚರ್ಚಾಯಿದೆ. ಆದುದರಿಂದ ಬ್ರಹ್ಮೋದ್ಯದ ಚರ್ಚೆಯಿರುವ ಅಶ್ವಮೇಧಕ್ಕೆ ಜ್ಞಾನಸಾಧನವಾದ ವಿದಥವೆಂದು ಹೆಸರು.

ಈರೀತಿ ಶ್ರೀ ನಿರುಕ್ತಭಾಷ್ಯದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ

ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು.

---

## ಅಥ ಚತುರ್ಥಃ ಖಂಡಃ

## ನಾಲ್ಕನೆಯ ಖಂಡವು.

ಕನಿಕ್ರದಜ್ಜನುಷಂ ಪ್ರಬ್ರುವಾಣಾ ಇಯರ್ತಿ ವಾಚಮರಿತೇವ ನಾವಂ । ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾಚಿದಭಿಭಾ ವಿಶ್ವ್ಯಾ ವಿದತ್ । (ಋ. ಸಂ. ೨-೪೨-೧) ॥ ನ್ಯಕ್ರಂದೀಜ್ಜನ್ಮ ಪ್ರಬ್ರುವಾಣೋ ಯಥಾಸ್ಯ ಶಬ್ದಸ್ತಥಾ ನಾಮೇರಯತಿ ವಾಚಮೀರಯಿತೇವ ನಾವಂ ಸುಮಂಗಲಶ್ಚ ಶಕುನೇ ಭವ ಕಲ್ಯಾಣಮಂಗಲೋ ಮಂಗಲಂ ಗಿರತೇರ್ಗೃಣಾತ್ಯರ್ಥೇ ಗಿರತ್ಯ ನರ್ಥಾನಿತಿ ವಾಂಗಲಮಂಗವನ್ಮಜ್ಜಯತಿ ಪಾಪಕಮಿತಿ ನೈರುಕ್ತಾ ಮಾಂ ಗಚ್ಛತ್ವಿತಿ ವಾ ಮಾ ಚ ತ್ವಾ ಕಾಚಿದಭಿಭೂತಿಃ ಸರ್ವತೋ ವಿದದ್ಗೃತ್ಸಮುದಮರ್ಥಮಭ್ಯುತ್ಥಿತಂ ಕಪಿಂಜಲೋಽಭಿವಾಶೇ ತದಭಿವಾದಿನ್ಯೇಷರ್ಗ್ಭವತಿ ॥ ೪ ॥

ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ
ನಾವಮ್ । ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ
ಕಾಚಿದಭಿಭಾ ವಿಶ್ವ್ಯಾ ವಿದತ್ ॥

(ಋ. ಸಂ. ೨-೪-೧೧)

ಶಕುನಿಯ ಪ್ರಧಾನಸ್ತುತಿಯನ್ನು ಬೋಧಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಕಪಿಂಜಲವೆಂಬ ಪಕ್ಷಿಯು ಪುನಃ ಪುನಃ ಶಬ್ದಮಾಡುತ್ತಾ ತನ್ನ ಶ್ರೇಷ್ಠಜಾತಿಯನ್ನು ಹೇಳುವುದೋ ಎಂಬಂತೆ, ಅಥವಾ ಮುಂದಾಗುವ ವಿಷಯವನ್ನು ಹೇಳುವುದೋ

ಎಂಬಂತೆ ಕರ್ಣಧಾರನು ಹಡಗನ್ನೆಂಬಂತೆ ಮಾತನ್ನು ಪ್ರೇರೇಪಿಸುತ್ತದೆ. ಎಲೈ ಕಪಿಂಜಲವೇ ನೀನು ನಮಗೆ ಮಂಗಲಕರನಾಗು. ನಿನಗೂ ನಾವು ಒಳ್ಳೆದನ್ನು ಬಯಸುತ್ತೇವೆ. ಯಾವ ಪರೋಪದ್ರವವೂ ಯಾವ ಕಡೆಯಿಂದಲೂ ನನಗೆ ಆಗದಿರಲಿ.

**ನೃಕ್ರುಂದೀಜ್ಜನ್ಮ ಪ್ರುಬ್ರುವಾಣೋ ಯಥಾಸ್ಯ ಶಬ್ದಸ್ತಥಾ ನಾಮೇರ-ಯತಿ ವಾಚಮೀರಯತೇವ ನಾವಮ್ । ಸುಮಂಗಲಶ್ಚ ಶಕುನೇ ಭವ ಕಲ್ಯಾಣಮಂಗಲಃ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಶಬ್ದವು ಕಲ್ಯಾಣರೂಪಾರ್ಥವನ್ನು ತಿಳಿಸುತ್ತದೆ. ನಾವಿಕನು ದಡವನ್ನು ಸಾಗಿಸಲು ಹಡಗನ್ನು ಪುನಃ ಪುನಃ ಮುಂದೆ ಪ್ರೇರೇಪಿಸುವನೋ ಅದರಂತೆ ಮುಂದಿನ ವಿಷಯವನ್ನು ತಿಳಿಸಲು ಅದು ಪುನಃ ಪುನಃ ಶಬ್ದಮಾಡುತ್ತದೆ.

**ಮಂಗಲಂ ಗಿರತೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿವಾ ॥**

ಮಂಗಲಶಬ್ದವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಗೃ–ಶಬ್ದೇ ಧಾತು. ಇಲ್ಲಿ ಶಬ್ದವೆಂದರೆ ಸ್ತುತಿರೂಪಶಬ್ದವನ್ನು ಹೇಳಬೇಕು. ಮಂಗಲವು ಸ್ತುತ್ಯವಾಗಿರುತ್ತದೆ. ಅಥವಾ ನಿಗರಣ ಅಂದರೆ ನುಂಗುವುದು ಎಂಬರ್ಥವನ್ನು ಕೊಡುವ ಪೂರ್ವೋಕ್ತಧಾತುವಿನಿಂದ ನಿಷ್ಪನ್ನವಾಗುತ್ತದೆ. ಇದು ಹುಟ್ಟುತ್ತಿರುವಾಗಲೇ ಅನರ್ಥಾದಿಗಳನ್ನು ನುಂಗುತ್ತದೆ. ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಧಾತುರೇಫಕ್ಕೆ ಲತ್ವ. ಮಮುಟಾಗಮ. ಟಿತ್ತಾದುದರಿಂದ ಆದಿಗೆ ಬರುತ್ತದೆ. ಶಾಕಟಾಯನ, ಪಾಣಿನಿಮತದಲ್ಲಿ ಗತ್ಯರ್ಥಕ ಮಗಿಧಾತುವಿಗೆ ಅಲಚ್‌ಪ್ರತ್ಯಯ. ಮಂಗಯತಿ ಸುಖಂ ಇತಿ ಮಂಗಲಂ. ಸುಖವನ್ನು ಹೊಂದಿಸುವುದು ಮಂಗಲ.

**ಅಂಗಲಮಂಗವತ್ । ಮಜ್ಜಯತಿ ಪಾಪಕಮ್ । ಇತಿ ನೈರುಕ್ತಾಃ ॥**

ಅಥವಾ ಅಂಗಲವೆಂಬ ಶಬ್ದವು ಮಕಾರಾಧಿಕ್ಯದಿಂದ ಮಂಗಲಂ ಎಂದಾಗಿದೆ. ಅಂಗವಾದ ದಧಿ, ಮಧು ಅಕ್ಷತಾದಿಗಳಂತಿರುವುದು ಮಂಗಲ. ಮತ್ವರ್ಥದಲ್ಲಿ ರ ಬಂದು ವ್ಯತ್ಯಯದಿಂದ ಅದಕ್ಕೆ ಲತ್ವ ಬರುತ್ತದೆ. ಅಥವಾ ಟುವ ಸ್ಜೋ–ಶುದ್ಧೌ–ಧಾತುವಿನಿಂದ ಇದು ನಿಷ್ಪನ್ನವಾಗಿದೆ. ಪಾಪಕಂಮಜ್ಜಯತಿ ಇದು ಹುಟ್ಟುತ್ತಿರುವಾಗಲೇ ಯಾವ ಮನುಷ್ಯನನ್ನು ಆಶ್ರಯಿಸಿದೆಯೋ ಅವನ ಪಾತಕಾದಿಗಳನ್ನು ನಾಶಪಡಿಸುತ್ತದೆ. ಮಸ್ಜಧಾತುವಿಗೆ ಣಿಚ್ ಬಂದು ಅದರಮೇಲೆ ಗಲಚ್‌ಪ್ರತ್ಯಯ. ಇದು ನಿರುಕ್ತಕಾರರ ಮತವೆಂದು ತಿಳಿಯಬೇಕು

**ಮಾಂ ಗಚ್ಛತ್ವಿತಿವಾ ॥**

'ಮಾಂ ಏತದ್ ಗಚ್ಛತು' ಇದು ನನ್ನನ್ನು ಹೊಂದಲಿ ಎಂದು ಎಲ್ಲರೂ ಬಯಸುತ್ತಾರೆ. ಆಗ ಮಾಂ ಎಂಬುದು ಉಪಪದವಾಗಿರುವಾಗ ಗಮ್ ಧಾತುವಿಗೆ ಡಲಚ್ ಪ್ರತ್ಯಯ. ಡಿತ್ತಾದುದರಿಂದ ಗಮ್ ಎಂಬಲ್ಲಿ ಅಮ್‌ಗೆ ಲೋಪ. ಮಾಂ ಎಂಬುದಕ್ಕೆ ಹ್ರಸ್ವ. ಮಂಗಲಂ ಎಂದಾಗುತ್ತದೆ.

ಮಾ ಚ ತ್ವಾ ಕಾಚದಭಿಭೂತಿಃ ಸರ್ವತೋ ವಿದತ್ ||

ಉಳಿದಿರುವ ನಾಲ್ಕನೆಯ ಪಾದವನ್ನು ಅರ್ಥರೂಪದಿಂದ ವಿವರಿಸುತ್ತಾರೆ. ವಿದ್ ಧಾತುವಿಗೆ ಲಾಭಾರ್ಥ ಇಲ್ಲಿ ಹೇಳಬೇಕು. ಯಾವುದೊಂದು ತಿರಸ್ಕಾರವೂ ಯಾವ ಕಡೆಯಿಂದಲೂ ನಿನಗೆ ಬಾರದಿರಲಿ ಎಂದರ್ಥ.

ಗೃತ್ಸಮದಮಭ್ಯುತ್ಥಿತಂ ಕಪಿಂಜಲೋಽಭಿವವಾಶೇ ತದಭಿವಾದಿನ್ಯೈ-
ಷರ್ಗ್ಭವತಿ || ೪ ||

ಕಪಿಂಜಲವೆಂಬುದು ಪಕ್ಷಿಯೆಂದೇ ದೃಢಪಡಿಸಲು ಶ್ರುತಿಪ್ರಮಾಣವನ್ನು ಹೇಳಲು ಪೀಠಿಕೆ ತೋರಿಸುತ್ತಾರೆ. ಗೃತ್ಸಮದ ಎಂಬವನು ಒಬ್ಬ ಮಹರ್ಷಿ. ಅವನು ಸ್ತುತಿಯಿಂದ ಹೊಂದಬೇಕಾದ ಒಂದು ಪ್ರಯೋಜನವನ್ನುದ್ದೇಶಿಸಿ ಹೊರಟನು. ಹಾಗೆ ಉದ್ಯುಕ್ತನಾದ ಅವನನ್ನು ನೋಡಿ ಕಪಿಂಜಲವೆಂಬ ಪಕ್ಷಿಯು ಪುನಃ ಪುನಃ ಶಬ್ದಮಾಡಿತು, ಶಬ್ದಮಾಡುವುದರ ಮೂಲಕ ಅವನಿಗೆ ಸಿದ್ಧಿಯಾಗುವುದೆಂದು ಸೂಚಿಸಿತು. ಈ ವಿಷಯವನ್ನು ಮುಂದೆ ಹೇಳುವ ಋಙ್ಮಂತ್ರವು ಸ್ಪಷ್ಟಪಡಿಸುತ್ತದೆ.

ಕನಿಕ್ರಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ ನಾವಂ |
ಸುಮಂಗಲಶ್ಚ ಶಕುನೇ ಭವಾಸೆ ಮಾ ತ್ವಾ.ಕಾ ಚಿದಭಿಭಾ ವಿಶ್ವ್ಯಾ ವಿದತ್ || ೧ ||

ಕಪಿಂಜಲಪಕ್ಷಿಯು ಪುನಃಪುನಃ ಶಬ್ದಮಾಡುತ್ತಲೂ, ಮುಂದೆ ಉತ್ಪನ್ನವಾಗತಕ್ಕ ಅಂಶವನ್ನು ಮೊದಲೇ ಸೂಚಿಸುತ್ತಲೂ, ದೋಣಿಯನ್ನು ನಡೆಸಲು ನಾವಿಕನು ಸೂಚನೆಯನ್ನು ಕೊಡುವಂತೆ ಅದರ ಶಬ್ದವನ್ನು ಪ್ರೇರಿಸುತ್ತದೆ. ಎಲೈ ಕಪಿಂಜಲಪಕ್ಷಿಯೇ, ನಿನಗೆ ಮಂಗಳವುಂಟಾಗಲಿ. ಯಾವ ವಿಧವಾದ ವಿಪತ್ತೂ ನಿನ್ನನ್ನು ಯಾವ ದಿಕ್ಕಿನಿಂದಲೂ ಸಮೀಪಿಸದಿರಲಿ.

ಈ ಸೂಕ್ತದಲ್ಲಿರುವ ಮೂರು ಋಕ್ಕುಗಳಿಗೂ ಮುಂದಿನ ಸೂಕ್ತದಲ್ಲಿರುವ ಮೂರು ಋಕ್ಕುಗಳಿಗೂ ಕಪಿಂಜಲರೂಪಿಯಾದ ಇಂದ್ರನು ದೇವತೆಯೆಂದು ಹೇಳಲ್ಪಟ್ಟಿದೆ. ಈ ಋಕ್ಕುಗಳಲ್ಲಿ ಕಪಿಂಜಲಶಬ್ದವು ಸೂಚಿತವಾಗಿಲ್ಲದಿದ್ದರೂ ಅನುಕ್ರಮಣಿಕೆಯಲ್ಲಿ ಕಪಿಂಜಲರೂಪಿಯಾದ ಇಂದ್ರನು ದೇವತೆಯೆಂದು ಹೇಳಲ್ಪಟ್ಟಿರುವುದು. ಕಪಿಂಜಲವೆಂಬುದು ಒಂದು ಪಕ್ಷಿಯು. ಇದಕ್ಕೆ ಆಂಗ್ಲಭಾಷೆಯಲ್ಲಿ Francoline partridge ಅಥವಾ hozel-cock ಎಂದು ಹೆಸರಿದೆ. ಋಗ್ವೇದದಲ್ಲಿ ಕಪಿಂಜಲವೆಂಬ ಶಬ್ದದ ಪ್ರಯೋಗವಿರುವುದಿಲ್ಲ. ಇತರ ವೇದಗಳಲ್ಲಿ ಎಂದರೆ ತೈತ್ತಿರೀಯ ಸಂಹಿತಾ. ೨-೫-೧-೧ ; ೫-೫-೧೬-೧ ; ಮೈತ್ರಾಯಣೀ ಸಂಹಿತಾ. ೩-೧೪-೧ ; ಕಾಠಕ-ಸಂಹಿತಾ. ೧೨-೧೦ ; ವಾಜಸನೇಯ ಸಂಹಿತಾ. ೨೪-೨೦,೩೮ ; ಶತಪಥಬ್ರಾಹ್ಮಣ. ೧-೬-೩-೩ ; ೫-೫-೪-೪ ; ೧೩-೫-೧-೧೩ : ಜೈಮಿನೀಯ ಬ್ರಾಹ್ಮಣ. ೧-೧೫೪-೨ ಇತ್ಯಾದಿ ಸ್ಥಳಗಳಲ್ಲಿ ಕಪಿಂಜಲಪಕ್ಷಿಯ ವಿಷಯವು ಸೂಚಿತವಾಗಿರುವುದು.

ಯಾಸ್ಕರು ಅರ್ಥೋಪಮಾ, ಲುಪ್ತೋಪಮಾ ಎಂಬ ಉಪಮಾನಗಳನ್ನು ವಿವರಿಸುವಾಗ ಕಪಿಂಜಲ ಪಕ್ಷಿಯ
ಕಪಿಂಜಲಃ ಕಪಿರಿವ ಜೀರ್ಣಃ ಕಪಿರಿವ ಜವತ ಈಷತ್ಪಿಂಗಲೋ ವಾ ಗಮನೀಯಂ ಶಬ್ದಂ ಪಿಂಜಯತೀತಿ ವಾ ||

(ನಿ. ೩-೧೮)

ಎಂದರೆ ಕಪಿಂಜಲವೆಂಬ ಪಕ್ಷಿಗೆ ಕಪಿಯಂತೆ ಜೀರ್ಣವಾಗಿರುವಂತೆ ಕಾಣುವ ಶರೀರವಿರುವುದರಿಂದಾಗಲಿ, ಕಪಿಯಂತೆ ಮಾಸಲು ಹಳದೀ ಬಣ್ಣವಿರುವುದರಿಂದಲಾಗಲೀ, ಉತ್ತಮವಾದ ಎಂದರೆ ಮಂಗಲಕರವಾದ ಮಧುರಧ್ವನಿಯನ್ನು ಮಾಡುವುದರಿಂದಾಗಲೀ ಕಪಿಂಜಲವೆಂಬ ಹೆ ರು ಉಂಟಾಗಿದೆಯೆಂದು ನಿರ್ವಚನವನ್ನು ಹೇಳಿದಾರೆ.

ಕಪಿಂಜಲಪಕ್ಷಿಯು ದಕ್ಷಿಣದಿಕ್ಕಿನಲ್ಲಿ ಧ್ವನಿಮಾಡಿದರೆ (ಕೂಗಿದರೆ) ಉತ್ತಮವಾದ ಶಕುನವೆಂದು ಪ್ರಸಿದ್ಧಿಯು. ಆದುದರಿಂದ ಗೃತ್ಸಮದಋಷಿಯು ತನಗೆ ಯಾವ ವಿಧವಾದ ವಿಪತ್ತೂ ಉಂಟಾಗದಿರುವಂತೆಯೂ ಎಲ್ಲಾ ದಿಕ್ಕುಗಳಲ್ಲಿಯೂ ಮಂಗಳವುಂಟಾಗುವಂತೆಯೂ ಕಪಿಂಜಲಪಕ್ಷಿಯನ್ನು (ಕಪಿಂಜಲರೂಪಿಯಾದ ಇಂದ್ರನನ್ನು) ಪ್ರಾರ್ಥಿಸಿದಾನೆ—

**ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ ।**
**ಭದ್ರಂ ಪುರಸ್ತಾನ್ನೋ ವದ ಭದ್ರಂ ಪಶ್ಚಾತ್ಕಪಿಂಜಲ ॥**

ಎಂಬ ಈ ಮಂತ್ರವು ಪರಿಶಿಷ್ಟದಲ್ಲಿ ಎಂದರೆ ಖಿಲಮಂತ್ರಗಳಲ್ಲಿ ಉಕ್ತವಾಗಿದೆ. ಎಲೈ ಕಪಿಂಜಲಪಕ್ಷಿಯೇ, ನೀನು ದಕ್ಷಿಣ ದಿಕ್ಕಿನಲ್ಲಿದ್ದು, ಮಂಗಳಕರವಾದ ಶಕುನವನ್ನು ನುಡಿ ಅದರಂತೆ ಉತ್ತರದಿಕ್ಕಿನಲ್ಲಿಯೂ ನಮ್ಮ ಮುಂದುಗಡೆಯೂ, ಹಿಂದುಗಡೆಯಲ್ಲಿಯೂ ಮಂಗಳಕರವಾದ ಶಕುನವನ್ನೇ ನುಡಿ ಎಂದು ಗೃತ್ಸಮದಋಷಿಯು ಕಪಿಂಜಲಪಕ್ಷಿಯನ್ನು ಪ್ರಾರ್ಥಿಸಿರುವನು. ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ನ್ಯಕ್ರಂದೀಜ್ಜನ್ಮ ಪ್ರಬ್ರುವಾಣೋ ಯಥಾಸ್ಯ ಶಬ್ದಸ್ತಥಾ ನಾಮೇರಯತಿ ನಾವಮಿವಾರಯಿತೇವ ನಾವಂ ಸುಮಂಗಲಶ್ಚ ಶಕುನೇ ಭವ ಕಲ್ಯಾಣ ಮಂಗಲಃ । ಮಂಗಲಂ ಗಿರತೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ । ಅಂಗಲ ಮಂಗವತ್ । ಮಜ್ಜಯತಿ ಪಾಪಕಮಿತಿ ನೈರುಕ್ತಾಃ । ಮಾಂ ಗಚ್ಛತ್ವಿತಿ ವಾ । ಮಾ ಚ ತ್ವಾ ಕಾಚಿದಭಿಭೂತಿಃ ಸರ್ವತೋ ವಿದತ್ ॥**

(ನಿ. ೯–೪)

ಎಲೈ ಶಕುನಪಕ್ಷಿಯೇ. ನೀನು ಪುನಃಪುನಃ ಶಬ್ದಮಾಡುತ್ತಾ, ಮುಂದೆ ಸಂಭವಿಸುವ ಭವಿಷ್ಯದ್ವೃತ್ತಾಂತವನ್ನು ನಾವಿಕನು ನಾವೆಯನ್ನು ಪ್ರೇರೇಪಿಸುವಂತೆ, ನಿನ್ನ ಧ್ವನಿಯಿಂದ ಸೂಚಿಸುತ್ತೀಯೆ. ನಿನಗೆ ಮಂಗಳವುಂಟಾಗಲಿ ಎಂದು ಮುಖ್ಯಾರ್ಥವನ್ನು ವಿವರಿಸಿ ಕೆಲವು ಶಬ್ದಗಳ ಅವಯವಾರ್ಥಗಳನ್ನು ವಿವರಿಸಿರುವರು.

**ಸುಮಂಗಲಃ—ಕಲ್ಯಾಣಮಂಗಲಃ ।** ಉತ್ತಮವಾದ ಮಂಗಲದಿಂದ ಕೂಡಿರುವ. **ಮಂಗಲಂ ಗಿರತೇರ್ಗೃಣಾತ್ಯರ್ಥೇ, ಗಿರತ್ಯರ್ಥಾನಿತಿ ವಾ ।** ವರ್ತಮಾನ ಕಾಲದಲ್ಲಿ ಸ್ತುತ್ಯವಿಷಯವನ್ನು ಸೂಚಿಸಿರುವುದರಿಂದ ಮಂಗಲವೆಂದು ಹೆಸರು. ಅಥವಾ ಅನರ್ಥಗಳನ್ನು ನಾಶಮಾಡುವುದರಿಂದ ಮಂಗಲವೆಂದು ಹೆಸರು. ಅಥವಾ **ಅಂಗಲಂ** ಎಂಬ ಶಬ್ದದ ಅಂತ್ಯದಲ್ಲಿರುವ ಮಕಾರವು ವ್ಯತ್ಯಸ್ತವಾಗಿ ಆದಿಯಲ್ಲಿ ಉಪಯೋಗಿಸಲ್ಪಟ್ಟರೆ ಅಗಮ್ ಅಂಗಲ = ಮಂಗಲ ಎಂದು ರೂಪವಾಗುವುದು. ಅಂಗಲಂ ಎಂಬ ಶಬ್ದಕ್ಕೆ ದಧಿ, ಮಧು, ಅಕ್ಷತೆ ಮೊದಲಾದ ಮಂಗಳದ್ರವ್ಯಗಳಿಂದ ಮಂಗಳವುಂಟಾಗುವಂತೆ ಎಂದೂ ಅರ್ಥವನ್ನು ಹೇಳಬಹುದು ಅಥವಾ **ಮಜ್ಜಯತಿ ಪಾಪಕಮಿತಿ ನೈರುಕ್ತಾಃ ।** ಪಾಪಗಳನ್ನು ಮುಳುಗಿಸಿ ನಾಶಮಾಡುವುದರಿಂದ ಮಂಗಲವೆಂದು ನಿರುಕ್ತಿಕಾರರು ಹೇಳುವರು. ಅಥವಾ **ಮಾಂ ಗಚ್ಛತ್ವಿತಿ ವಾ ।** ಒಂದು ಉತ್ತಮವಾದ ವಸ್ತುವು (ಐಶ್ವರ್ಯವು) ನನ್ನನ್ನು ಬಂದು ಸೇರಲಿ ಎಂಬರ್ಥವುಳ್ಳ **ಮಾಂ ಗಚ್ಛತ್ವಿತಿ** ಎಂಬ ವಾಕ್ಯದಿಂದಾಗಲಿ ಮಂಗಲಶಬ್ದವು ನಿಷ್ಪನ್ನವಾಗಬಹುದು ಎಂದು ವಿವರಿಸಿದಾರೆ.

ಕನಿಕ್ರದತ್ ಜನುಷಂ ಪ್ರಬ್ರುವಾಣಃ ನಾವಂ ಅರಿತೇವ ವಾಚಂ ಇಯರ್ತಿ—ಈ ಕಪಿಂಜಲಪಕ್ಷಿಯು (ಅಥವಾ ಶಕುನ ಪಕ್ಷಿಯು) ಪುನಃಪುನಃ ಶಬ್ದಮಾಡುತ್ತಿರುತ್ತವೆ. ನಾವಿಕನು ದೋಣಿಯನ್ನು ನಡೆಸುವಾಗ ಪುನಃಪುನಃ ನೂಕುವಂತೆ ಎಂದರೆ ಮುಂದಕ್ಕೆ ಹೋಗುವಂತೆ, ಪ್ರೇರಿಸುವಂತೆ ಈ ಕಪಿಂಜಲಪಕ್ಷಿಯು ಪುನಃಪುನಃ ಶಬ್ದಮಾಡುವುದರಿಂದ ಮುಂದೆ ಬರುವ ಆಗುಹೋಗುಗಳನ್ನು ಪ್ರೇರಿಸುತ್ತದೆ ಎಂದರೆ ತಿಳಿಸುತ್ತದೆ. ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವು. ಎಂದರೆ ಈ ಪಕ್ಷಿಯು ತನ್ನೆದುರಿಗಿಲ್ಲದೆ ಬೇರೆಕಡೆ ಇರುವುದೆಂದು ಭಾವಿಸಿ ಅದು ಮಾಡುತ್ತಿರುವ ಕಾರ್ಯವನ್ನು ವರ್ಣಿಸುವುದರಿಂದ ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವೆಂದೂ, ಉತ್ತರಾರ್ಧದಲ್ಲಿ ಆ ಪಕ್ಷಿಯು ತನ್ನ ಎದುರಿಗೇ ಇರುವುದೆಂದೂ ಭಾವಿಸಿ ಅದನ್ನು ಸಂಭೋದಿಸಿ ಅದರೊಡನೆ ಸಂಭಾಷಣೆ ಮಾಡುತ್ತಿರುವುದನ್ನು ವರ್ಣಿಸುವುದರಿಂದ ಉತ್ತರಾರ್ಧವು ಪ್ರತ್ಯೇಕ ಕೃತವೆಂದೂ ಹೇಳಿದೆ.

ಶಕುನೇ (ತ್ವಂ) ಸುಮಂಗಲಶ್ಚ ಭವಾಸಿ । ಕಾ ಚಿದಭಿಭಾ ತ್ವಾ ವಿಶ್ವ್ಯಾ ಮಾ ವಿಧತ್—ಹೇ ಶಕುನೇ ತ್ವಂ ಪ್ರಕೃಷ್ಟಕಲ್ಯಾಣಃ ಭವಾಸಿ । ಕಿಂಚ ಕೋಽಪ್ಯಭಿಭವಃ ತ್ವಾ ಸರ್ವಾಸು ದಿಕ್ಷು ಮಾ ಪ್ರಾಪತ್ ॥

ಎಲೈ ಶಕುನಪಕ್ಷಿಯೇ, ಉತ್ತಮವಾದ ಕಲ್ಯಾಣ (ವ ಂಗಳ) ಗಳಿಂದ ಕೂಡಿದವನಾಗು, ಮತ್ತು ಯಾವವಿಧವಾದ ವಿಪತ್ತು ಯಾವ ದಿಕ್ಕಿನಲ್ಲಿಯೂ ನಿನ್ನನ್ನು ಸಮೀಪಿಸದಿರಲಿ ಎಂಬ ಆಶಂಸನೆಯು ಇಲ್ಲಿ ಉಕ್ತವಾಗಿದೆ.

ಈ ಸೂಕ್ತ ಮತ್ತು ಮುಂದಿನ ಸೂಕ್ತಗಳಿಗೆ ಸಂಬಂಧಪಟ್ಟಂತೆ ಇರುವ ಪರಿಶಿಷ್ಟಮಂತ್ರಗಳನ್ನು ಈ ಮಂಡಲದ ಅಂತ್ಯಭಾಗದಲ್ಲಿ ವಿವರಿಸಲಾಗಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚಮ ಖಂಡಃ

### ಐದನೆಯ ಖಂಡವು

ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ ಭದ್ರ ಪುರಸ್ತಾನ್ನೋ ವದ ಭದ್ರಂ ಪಶ್ಚಾತ್ಕಪಿಂಜಲ॥ (ಖೈಲಿಕೇ ಸೂಕ್ತೆ ೩-೧) ॥ ಇತಿ ಸಾ ನಿಗದ ವ್ಯಾಖ್ಯಾತಾ ಗೃತ್ಸಮದೋ ಗೃತ್ಸೋ ಮದನೋ ಗೃತ್ಸ ಇತಿ ಮೇಧಾವಿನಾಮ ಗೃಣಾತೇಃ ಸ್ತುತಿಕರ್ಮಣೋ ಮಂಡೂಕಾ ಮಜ್ಜೂಕಾ ಮಜ್ಜನಾನ್ಮದತೇರ್ವಾ ಮೋದತಿ ಕರ್ಮಣೋ ಮಂದತೇರ್ವಾ ತೃಪ್ತಿಕರ್ಮಣೋ ಮಂಡಯತೇರಿತಿ ವೈಯಾಕರಣಾ ಮಂಡ ಏಷಾಮೋಕ ಇತಿ ವಾ ಮಂಡೋ ಮದೇರ್ವಾ ಮುದೇರ್ವಾ ತೇಷಾಮೇಷಾ ಭವತಿ ॥ ೫ ॥

ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ। ಭದ್ರಂ ಪುರ
ಸ್ತಾನ್ನೋ ವದ ಭದ್ರಪಶ್ಚಾತ್ಕಪಿಂಜಲ। ಇತಿ ಸಾ ನಿಗದವ್ಯಾಖ್ಯಾತಾ ॥

ಪಕ್ಷಿಯು ಕೆಲವು ದಿಕ್ಕಿನಲ್ಲಿ ಕೂಗಿದರೆ ಒಳ್ಳೆಯದಾಗುತ್ತದೆ. ಕೆಲವು ದಿಕ್ಕಿನಲ್ಲಿ ಕೂಗಿದರೆ ಅನಿಷ್ಟವಾಗುತ್ತದೆ. ಆದುದರಿಂದ ಮಂಗಳವನ್ನು ಯಾಚಿಸುತ್ತಾರೆ. ಮಂತ್ರದಲ್ಲಿರುವ ಪದಗಳೆಲ್ಲವೂ ಪ್ರಸಿದ್ಧಾರ್ಥಕಗಳಾದುದರಿಂದ ನಿಗದವ್ಯಾಖ್ಯಾತಾ ಅಂದರೆ ಪಾಠಮಾತ್ರದಿಂದಲೇ ವ್ಯಾಖ್ಯಾತವಾಗಿದೆಯೆಂದರ್ಥ. ಎಲೈ ಕಪಿಂಜಲವೇ ನೀನು ಯಾವ ದಿಕ್ಕಿನಲ್ಲಿ ಕೂಗಿದರೂ ನಮಗೆ ಹಿತವನ್ನೇ ಹೇಳು ಎಂದು ತಾತ್ಪರ್ಯ.

ಗೃತ್ಸಮದೋ ಗೃತ್ಸ ಮದನಃ। ಗೃತ್ಸ ಇತಿ ಮೇಧಾವಿನಾಮ
ಗೃಣಾತೇಃ ಸ್ತುತಿಕರ್ಮಣಃ ॥

ಗೃತ್ಸಮದಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಗೃತ್ಸಶ್ಚಾಸೌ ಮದನಶ್ಚ ಗೃತ್ಸಮದನಃ ಸ್ತುತ್ಯರ್ಥವನ್ನು ಕೊಡುವ ಗೃಧಾತುವಿನಿಂದ ಗೃತ್ಸ ಎಂಬ ಶಬ್ದವಾಗಿದೆ. ಮೇಧಾವಿಯೆಂದರ್ಥ. ಮದನ ಎಂಬುದು ಹರ್ಷಾರ್ಥಕಮದಧಾತುವಿನಿಂದ ನಿಷ್ಪನ್ನವಾಗಿದೆ. ಯಾವಾಗಲೂ ಹರ್ಷದಿಂದ ಇರುವವನು ಎಂದರ್ಥ. ಹೃಷ್ಟನಾಗಿ ಮೇಧಾವಿಯಾಗಿರುವ ಋಷಿಗೆ ಗೃತ್ಸಮದ ಎಂದು ಹೆಸರು ಬಂದಿದೆ

ಮಂಡೂಕಾಃ ಮಂಜೂಕಾಃ। ಮಂಜನಾನ್ಮದ ತೇವಾ ಮೋದತಿಕ
ರ್ಮಣೋ ಮಂದತೇರ್ವಾ ತೃಪ್ತಿಕರ್ಮಣಃ ॥

ಮಂಡೂಕಪದದ ನಿರ್ವಚನವನ್ನು ತೋರಿಸುತ್ತಾರೆ. ಪರ್ಯಾಯಪದದಿಂದ ಮೊದಲು ನಿರ್ವಚನ ತೋರಿಸುತ್ತಾರೆ. ಮಂಡೂಕ ಯಾವುದೋ ಅದೇ ಮಂಜೂಕವಾಗಿದೆ. ಮಜ್ಜನಕರ್ಮದಿಂದ ಮಂಜೂಕವಾಗಿದೆ. ಯಾವಾಗಲೂ ಕಪ್ಪೆಯು ನೀರಿನಲ್ಲಿ ಮುಳುಗಿರುತ್ತದೆ. ಅಥವಾ ಮದಧಾತುವಿನಿಂದ ಈಶಬ್ದವಾಗಿದೆ. ಯಾವಾಗಲೂ ಸಂತೋಷದಿಂದ ಇರುವವುಗಳು. ಅಥವಾ ಮದಧಾತುವಿನಿಂದ ನೀರಿನಲ್ಲಿದ್ದು ನಿತ್ಯತೃಪ್ತವಾಗಿರುವುದರಿಂದ ತೃಪ್ತ್ಯರ್ಥಕ ಮದಿಧಾತುವಿನಿಂದ ನಿಷ್ಪನ್ನವಾಗಿದೆ. ಯಾವ ರೀತಿ ವ್ಯುತ್ಪತ್ತಿಹೇಳಿದರೂ ಆಯಾಯಧಾತುಗಳಿಗೆ ಊಕಪ್ರತ್ಯಯ ಬಂದು ಪ್ರಕೃತಿಗೆ ಮಂಡಾದೇಶ ನಿಪಾತದಿಂದ ಸಿದ್ಧ ವಾಗುತ್ತದೆ.

ಮಂಡಯತೇರಿತಿ ವೈಯಾಕರಣಾಃ ॥

ವೈಯಾಕರಣರ ಮತದಲ್ಲಿ ಇದು ಮಡಿ–ಭೂಷಾಯಾಂ ಎಂಬ ಧಾತುವಿಗೆ ಉರಞ್ ಪ್ರತ್ಯಯಮಾಡುವುದರಿಂದ ಸಿದ್ಧವಾಗುತ್ತದೆ. ಕಪ್ಪೆಗಳನ್ನು ಬ್ರಹ್ಮನು ಅಲಂಕೃತವಾಗಿ ಸೃಷ್ಟಿಸಿರುತ್ತಾನೆ. ಅವುಗಳ ಮೈಮೇಲೆ ನಾನಾಗೆರೆಗಳಿದ್ದು ಚಿತ್ರ ವಾಗಿರುವುದರಿಂದ ಭೂಷಿತವಾಗಿರುತ್ತವೆ.

ಮಂಡ ಏಷಾಮೋಕ ಇತಿ ವಾ ||

ಅಥವಾ ಮಂಡ ಮತ್ತು ಓಕಶಬ್ದಗಳಿಂದ ಮಂಡೂಕಪದವಾಗಿದೆ. ಮಂಡವೆಂದರೆ ನೀರು. ಓಕ ಅಂದರೆ ಸ್ಥಾನ. ಉದಕವೇ ಆವಾಸಸ್ಥಾನವಾಗಿ ಇರುವವುಗಳು ಮಂಡೂಕಗಳು. ಛಾಂದಸವಾಗಿ ವರ್ಣವ್ಯತ್ಯಯ ಬರುತ್ತದೆ.

ಮಂಡೋ ಮದೇರ್ವಾ ಮುದೇರ್ವಾ | ತೇಷಾಮೇಷಾ ಭವತಿ || ೫ ||

ಮಂಡಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಮದೀ–ಹರ್ಷೇ. ಧಾತುವಿಗೆ ಕಪ್ರತ್ಯಯದಿಂದ ಮಂಡರೂಪವಾಗುತ್ತದೆ. ಅಥವಾ ಮುದಧಾತುವಿನಿಂದ ಈ ರೂಪವಾಗಿದೆ. ಛಾಂದಸವಾಗಿ ಎಲ್ಲಾ ಲಕ್ಷ್ಯದಲ್ಲಿಯೂ ವರ್ಣವ್ಯತ್ಯಯ ಹೇಳಲೇಬೇಕು. ಮುಂದೆ ಹೇಳುವ ಋಙ್ಮಂತ್ರವು ಮಂಡೂಕಗಳ ಪ್ರಾಧಾನ್ಯಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ಐದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಷ್ಠ ಖಂಡಃ

## ಆರನೆಯ ಖಂಡವು

ಸಂವತ್ಸರಂ ಶಶಯಾನಾ ಬ್ರಾಹ್ಮಣಾ ವ್ರತಚಾರಿಣಃ| ವಾಚಂ ಪರ್ಜನ್ಯ ಜಿನ್ವತಾಂ ಪ್ರ ಮಂಡೂಕಾ ಅವಾದಿಷುಃ | (ಋ-ಸೇ-೭-೧೦೩-೧) || ಸಂವತ್ಸರಂ ಶಿಶ್ಯಾನಾ ಬ್ರಾಹ್ಮಣಾ ವ್ರತಚಾರಿಣೋ ಬ್ರುವಾಣಾ ಅಪಿ ವೋಪಮಾರ್ಥೇ ಸ್ಯಾದ್ಬ್ರಾಹ್ಮಣಾ ಇವ ವ್ರತಚಾರಿಣಾ ಇತಿ ವಾಚಂ ಪರ್ಜನ್ಯಪ್ರೀತಾಂ ಪ್ರಾವಾದಿಷು ರ್ಮಂಡೂಕಾ ವಸಿಷ್ಠೋ ವರ್ಷಕಾಮಃ ಪರ್ಜನ್ಯಂ ತುಷ್ಟಾವ ತಂ ಮಂಡೂಕಾ ಅನ್ವಮೋದಂತ ಸ ಮಂಡೂಕಾನನು ಮೋದಮಾನಾನ್ ದೃಷ್ಟ್ವಾ ತುಷ್ಟಾವ ತದಭಿವಾದಿನ್ಯೇ ಷರ್ಗ್ಭವತಿ || ೬ ||

ಸಂವತ್ಸರಂ ಶಶಯಾನಾ ಬ್ರಾಹ್ಮಣಾ ವ್ರತಚಾರಿಣಃ || ವಾಚಂ ಪರ್ಜ
ನ್ಯಜಿನ್ವತಾಂ ಪ್ರಮಂಡೂಕಾ ಅವಾದಿಷುಃ

(ಋ – ಸಂ – ೫ – ೭ – ೩)

ಮಂಡೂಕಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಈ ಮಂತ್ರದಿಂದ ವಸಿಷ್ಠರು ಪರ್ಜನ್ಯ (ಮಳೆ) ಸ್ತುತಿಯಿಂದ ಸಂತುಷ್ಟವಾದ ಕಪ್ಪೆಗಳನ್ನು ಸ್ತುತಿಸುತ್ತಾರೆ. ಮಳೆಗಾಲದವರೆಗೆ ಒಂದು ವರ್ಷದ ಪರ್ಯಂತ ಸದ್ದಿಲ್ಲದೆ ಮಲಗಿರುವವುಗಳಾಗಿ, ಶಬ್ದಮಾಡಲು ಸಮರ್ಥಗಳಾಗಿದ್ದರೂ ವ್ರತವನ್ನಾಚರಿಸುವವರಂತೆ ಮೌನದಿಂದ ಕಪ್ಪೆಗಳು ಮಳೆಗಾಲಹೊಂದಿ ಪರ್ಜನ್ಯನು ಪ್ರೀತನಾಗುವಂತೆ ಶಬ್ದಮಾಡುತ್ತವೆ.

ಸಂವತ್ಸರಂ ಶಿಶ್ಯಾನಾ ಬ್ರಾಹ್ಮಣಾ ವ್ರತಚಾರಿಣೋ ಬ್ರುವಾಣಾಃ ।
ಅಪಿವೋಪಮಾರ್ಥೆ ಸ್ಯಾತ್ । ಬ್ರಾಹ್ಮಣಾ ಇವ ವ್ರತಚಾರಿಣ ಇತಿ
ವಾಚಂ ಪರ್ಜನ್ಯಪ್ರೀತಾಂ ಪ್ರಾವಾದಿಷುರ್ಮಂಡೂಕಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬ್ರಾಹ್ಮಣರೆಂದರೆ ಯಾವಾಗಲೂ ವೇದಘೋಷಾದಿಗಳನ್ನು ಮಾಡುತ್ತಿರುವವರು. ಇಲ್ಲಿ ಗೌಣವಾಗಿ ಕಪ್ಪೆಗಳಿಗೆ ವಿಶೇಷಣವಾಗಿ ಹೇಳಿದೆ. ರೂಢ್ಯರ್ಥವೇ ಪ್ರಧಾನವಾದುದರಿಂದ ಬಾಹ್ಮಣಾ ಎಂಬುದು ಸಾದೃಶ್ಯದಲ್ಲಿ ಹೇಳಿದೆಯೆಂದು ಪಕ್ಷಾಂತರ ತೋರಿಸುತ್ತಾರೆ. ವ್ರತಾಚಾರಿಯಾದ ಬ್ರಾಹ್ಮಣನು ಮೌನವನ್ನು ಧರಿಸಿರುವಂತೆ ವರ್ಷಾಕಾಲದವರೆಗೆ ಅವುಗಳು ಮೌನದಿಂದ ಇರುತ್ತವೆ. ಬಾಹ್ಮಣನು ಉಪಾಕರ್ಮವಾದಮೇಲೆ ವೇದವನ್ನು ಪುನಃ ಸ್ವೀಕರಿಸುವಂತೆ ಇವುಗಳು ವರ್ಷಾಕಾಲದಲ್ಲಿ ಮಳೆಯಿಂದ ಸಂತೋಷಗೊಂಡು ಶಬ್ದಮಾಡುತ್ತವೆ. ಪರ್ಜನ್ಯನಿಗೆ ಇಷ್ಟವಾದ ಮಾತನ್ನು ಹೇಳುತ್ತವೆ.

ವಸಿಷ್ಠೋ ವರ್ಷಕಾಮಃ ಪರ್ಜನ್ಯಂ ತುಷ್ಟಾವ , ತಂ ಮಂಡೂಕಾ
ಅನ್ವಮೋದಂತ । ಸ ಮಂಡೂ ಕಾನನುಮೋದಮಾನಾನ್ ದೃಷ್ಟ್ವಾ
ತುಷ್ಟಾವ । ತದಭಿ ವಾದಿನ್ಯೇಷರ್ಗ್ಭವತಿ ॥ ೬ ॥

ಮಂತ್ರದ ಅವತರಣಿಕೆಯನ್ನು ತೋರಿಸುತ್ತಾರೆ. ವಸಿಷ್ಠಮಹರ್ಷಿಗಳು ಮಳೆಯಾಗಬೇಕೆಂದು ಪರ್ಜನ್ಯದೇವತೆಯನ್ನು ಸ್ತುತಿಸಿದರು. ಆಗ ಹಾಗೆ ಸ್ತುತಿಸುವುದನ್ನುನೋಡಿ ಕಪ್ಪೆಗಳು ಸ್ತುತಿಸು, ಸ್ತುತಿಸು ಎಂದು ಅನುಮೋದನ ಮಾಡಿದವು. ಅನುಮೋದನ ಮಾಡಿರುವ ಕಪ್ಪೆಗಳನ್ನು ನೋಡಿ ವಸಿಷ್ಠಮಹರ್ಷಿಗಳು ಸಂತುಷ್ಟರಾಗಿ ಅವುಗಳನ್ನು ಸ್ತುತಿಸಿದರು. ಕಪ್ಪೆಯು ಕೂಗಲಾರಂಭಿಸಿದರೆ ಮಳೆ ಬರುತ್ತದೆಯೆಂಬ ಪ್ರವಾದವಿದೆ. ಈ ವಿಷಯವನ್ನು ಮುಂದೆ ಹೇಳುವ ಋಙ್ಮಂತ್ರವು ವ್ಯಕ್ತಪಡಿಸುತ್ತದೆ,

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ

ಆರನೆಯ ಖಂಡವು ಸಮಾಪ್ತವಾಗಿದೆ.

---

# ಅಥ ಸಪ್ತಮಃ ಖಂಡಃ

## ಏಳನೆಯ ಖಂಡವು

ಉಪ ಪ್ರವದ ಮಂಡೂಕಿ ವರ್ಷ ಮಾ ವದ ತಾದುರಿ । ಮಧ್ಯೇ ಹ್ರದಸ್ಯ ಪ್ಲವಸ್ವ ವಿಗೃಹ್ಯ ಚತುರಃ ಪದಃ (ಖೈಲಿಕಂ ಸೂಕ್ತಂ ೧೬) । ಇತಿ ಸಾ ನಿಗದವ್ಯಾಖ್ಯಾ-ತಾಕ್ಷಾ ಅಶ್ನುವತ ಏತಾನಿತಿ ವಾಭ್ಯಶ್ನುವತ ಏಭಿರಿತಿ ವಾ । ತೇಷಾಮೇಷಾ ಭವತಿ ॥ ೭ ॥

ಉಪ ಪ್ರವದ ಮಂಡೂಕಿ ವರ್ಷ ಮಾ ವದ ತಾದುರಿ । ಮಧ್ಯೇ
ಹ್ರದಸ್ಯ ಪ್ಲವಸ್ವ ವಿಗೃಹ್ಯ ಚತುರಃ ಪದಃ ॥ ಇತಿ ಸಾ ನಿಗದ
ವ್ಯಾಖ್ಯಾತಾ ॥

ವಸಿಷ್ಠರು ಕಪ್ಪೆಗಳನ್ನು ಸ್ತುತಿಸಿರುವ ಋಙ್ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಮಂಡೂಕಪತಿಯೇ ನನ್ನ ಸಮೀಪಕ್ಕೆ ಬಂದು ಚನ್ನಾಗಿ ಹೇಳು (ಶಬ್ದಮಾಡು.) ಎಲೈ ತರಣಶೀಲನೇ ಮಳೆ ಸುರಿಸಿದ ಮೇಲೆ ತುಂಬಿದ ಕೊಳದಲ್ಲಿ ಮಧ್ಯದಲ್ಲಿ ನಾಲ್ಕು ಹೆಜ್ಜೆ ಪ್ರಸರಿಸಿ ಈಜಾಡು ಎಂದರ್ಥ. ಸರಳವಾದ ಅರ್ಥವಿರುವುದರಿಂದ ನಿಗದವ್ಯಾಖ್ಯಾತಾ ಎಂದಿರುತ್ತಾರೆ.

ಅಕ್ಷಾ, ಅಶ್ನುವತ ಏತಾನಿತಿ ವಾಽಭ್ಯಶ್ನುವತ, ಏಭಿರಿತಿವಾ । ತೇಷಾ
ಮೇಷಾ ಭವತಿ ॥ ೭ ॥

ಅಕ್ಷ ಮುಂತಾದವುಗಳೂ ಸ್ತುತಿವಿಷಯಗಳಾದುದರಿಂದಲೂ, ಪೃಥಿವಿಯನ್ನಾಶ್ರಯಿಸಿರುವುದರಿಂದಲೂ, ಈ ಸಮುದಾಯದಲ್ಲಿ ಹೇಳಿವೆ ಅವುಗಳಲ್ಲಿಯೂ ಹೇಗೆ ಪಾಠವಿದೆಯೋ ಅದರಂತೆ ನಿರ್ವಚನಮಾಡಬೇಕಾದುದರಿಂದ ಮೊದಲು ಅಕ್ಷಶಬ್ದಪಾಠ ವಿರುವುದರಿಂದ ಅದರ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಅಶೂ—ವ್ಯಾಪ್ತೌ ಧಾತು. ಕರ್ಮಕಾರಕಾರ್ಥದಲ್ಲಿ ಈ ಧಾತುವಿಗೆ ಸಪ್ರತ್ಯಯ. ಶಕಾರಕ್ಕೆ ಷತ್ವಬಂದಾಗ ಕತ್ವಾದಿಗಳು ಬಂದು ಅಕ್ಷ ಎಂದಾಗಿದೆ. ಪಗಡೆಯಾಡುವವರು ಇವುಗಳನ್ನು ಕೈಯಿಂದ ಓಡಾಡಿಸುತ್ತಾರೆ. ಇದರಿಂದ ವ್ಯಾಪನಹೊಂದುತ್ತವೆ. ಅಥವಾ ಒಂದು ಪಂಗಡದ ಜೂಜುಕೋರರು ಇನ್ನೊಂದು ಪಂಗಡ ದವರನ್ನು ಇದರಿಂದ ಸೋಲಿಸಿ ಧನಾದಿಗಳನ್ನು ಹೊಂದುತ್ತಾರೆ ಎಂದರ್ಥವಾಗುವುದರಿಂದ ಕರಣಾರ್ಥದಲ್ಲಿ ಸಪ್ರತ್ಯಯ. ಮುಂದೆ ಹೇಳುವ ಋಙ್ಮಂತ್ರವು ಅಕ್ಷದ (ಪಗಡೆ) ಪ್ರಧಾನಸ್ತುತಿಪ್ರತಿಪಾದಕವಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ

ಏಳನೆಯ ಖಂಡವು ಸಮಾಪ್ತವಾಗಿದೆ.

## ಅಥ ಅಷ್ಟಮಃ ಖಂಡಃ

### ಎಂಟನೆಯ ಖಂಡವು

ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ । ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ । (ಋ. ಸಂ. ೧೦-೩೪-೧) ॥ ಪ್ರವೇಪಿಣೋ ಮಾ ಮಹತೋ ವಿಭೀದಕಸ್ಯ ಫಲಾನಿ ಮಾದಯಂತಿ ಪ್ರವಾತೇಜಾ ಇರಿಣೇ ವರ್ತಮಾನಾ ಇರಿಣಂ ನಿರ್ಋಣಮೃಣಾತೇರಪಾರ್ಣಂ ಭವತ್ಯಪರತಾ ಅಸ್ಮಾದೋಷಧಯ ಇತಿ ವಾ । ಸೋಮಸ್ಯೇವ ಮೌಜವತಸ್ಯ ಭಕ್ಷಃ । ಮೌಜವತೋ ಮೂಜವತಿ ಜಾತೋ ಮೂಜವಾನ್ ಪರ್ವತೋ ಮುಂಜವಾನ್ ಮುಂಜೋ ವಿಮುಚ್ಯತ ಇಷೀಕಯೇಷೀಕೇಷತೇರ್ಗತಿಕರ್ಮಣ ಇಯಮಪೀತರೇಷೀಕೈತಸ್ಮಾ ದೇವ ವಿಭೀದಕೋ ವಿಭೇದನಾಜ್ಜಾಗೃವಿರ್ಜಾಗರಣಾನ್ಮಹ್ಯಮಚಚ್ಛದತ್ಪ್ರಶಂಸತ್ಯೇನಾನ್ಪ್ರಥಮಯಾ ನಿಂದತ್ಯುತ್ತರಾಭಿರೃಷೇರಕ್ಷಪರಿದ್ಯೂನಸ್ಯೈತದಾರ್ಷಂ ವೇದಯಂತೇ ಗ್ರಾವಾಣೋ ಹಂತೇರ್ವಾ ಗೃಣಾತೇರ್ವಾ ಗೃಹ್ಣಾತೇರ್ವಾ ತೇಷಾಮೇಷಾ ಭವತಿ ॥ ೮ ॥

ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ
ವರ್ವೃತಾನಾಃ । ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀ-
ದಕೋ ಜಾಗೃವಿರ್ಮಹ್ಯಮಚ್ಛಾನ್ ॥

ಅಕ್ಷಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಇವು ಅಧಿಕ ಕಂಪನವುಳ್ಳ ಅಕ್ಷವೃಕ್ಷಗಳಿಂದ ಹುಟ್ಟಿರುತ್ತವೆ. ಅಧಿಕಗಾಳಿ ಇರುವ ಕಾಲದಲ್ಲಿ ಅಂದರೆ ವರ್ಷಾಕಾಲದಲ್ಲಿ ಉಂಟಾಗುತ್ತವೆ. ಮೂಜಪರ್ವತದಲ್ಲಿ ಹುಟ್ಟಿದ ಸೋಮದ ಭಕ್ಷಣವು ಯಜಮಾನನನ್ನು ಮತ್ತನನ್ನಾಗಿ ಮಾಡುವಂತೆ ಪುನಃ ಪುನಃ ಇವು ನನ್ನನ್ನು ಹರ್ಷಗೊಳಿಸುತ್ತವೆ. ಇತರ ಯೋಚನೆಯನ್ನು ದೂರಮಾಡಿ ಪಗಡೆಯಾಡುವುದರಲ್ಲಿಯೇ ಮನಸ್ಸನ್ನು ಮುಚ್ಚಿರುತ್ತವೆ.

ಪ್ರವೇಪಿಣೋ ಮಾ ಮಹತೋ ವಿಭೀದಕಸ್ಯ ಫಲಾನಿ ಮಾದಯಂತಿ
ಪ್ರವಾತೇ ಜಾಃ ಪ್ರವಣೇ ಜಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಾಪದಕ್ಕೆ ಮಹತ್ತಾದ ಎಂದರ್ಥ. ಪ್ರವಣೇ ಜಾಯಂತೇ ಇತಿ ಪ್ರವಣೇಜಾ. ಜನೀ–ಪ್ರಾದುರ್ಭಾವೇ ಧಾತುವಿಗೆ ಅಸುನ್‌ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ವಿಭೀತಕ್ಕೆ ವಿಶೇಷಣ.

ಹೆಚ್ಚಾಗಿ ನೀರಿರುವ ಪ್ರದೇಶದಲ್ಲಿ ಬೆಳೆಯುವವುಗಳು ಕೆಲವರು ಅಕ್ಷಕ್ಕೆ ವಿಶೇಷಣವೆಂದು ಹೇಳುತ್ತಾರೆ. ಹಣ್ಣಾದೊಡನೆ ಬೀಳುವಸ್ವಭಾವದವುಗಳು.

**ಇರಿಣೇ ವರ್ತಮಾನಾ ಇರಿಣಂ ನಿರ್ಋಣ-(ಮೃಣ) ಮೃಣಾತೇ-**
**ರಪಾರ್ಣಂ ಭವತಿ । ಅಪರತಾ ಅಸ್ಮಾದೋಷಧಯ ಇತಿವಾ ।**
**" ಸೋಮಸ್ಯೇವ ಮೌಜವತಸ್ಯ ಭಕ್ಷಃ " ಮೌಜವತೋ ಮೂಜ-**
**ವತಿ ಜಾತಃ । ಮೂಜವಾನ್ ಪರ್ವತಃ ಮುಂಜವಾನ್ ॥**

ಇರಿಣಪದದ ನಿರ್ವಚನವನ್ನು ತೋರಿಸುತ್ತಾರೆ. ಋಣಶಬ್ದಕ್ಕೆ ಜಲವೆಂದರ್ಥ. ಅಪಗತವಾದ ಋಣವುಳ್ಳದ್ದು. ಉದಕ ವನ್ನು ಬಿಟ್ಟರುವುದು. ಅಥವಾ ಇದರಿಂದ ಓಷಧ್ಯಾದಿಗಳು ಕಳೆದುಹೋದದ್ದು ಎಂದರ್ಥ. ಶುಷ್ಕವೆಂದು ತಾತ್ಪರ್ಯ. ಮೌಜವತಪದಕ್ಕೆ ಸೋಮವೆಂದರ್ಥ. ಅದು ಮೂಜವತ್ಪರ್ವತದಲ್ಲಿ ಹುಟ್ಟುತ್ತದೆ. ಮುಂಜಾದಿಗಳಿಂದ (ತೃಣವಿಶೇಷ) ಕೂಡಿರುವ ಪರ್ವತಕ್ಕೆ ಮೂಜವಾನ್ ಎಂಬ ಹೆಸರು ಬಂದಿದೆ. ಪೃಷೋದರಾದಿಗಣಪಠಿತವಾದುದರಿಂದ ಮುಂಜವಾನ್ ಎಂದು ಆಗಬೇಕಾದದ್ದು ಮೂಜವಾನ್ ಎಂದಾಗಿದೆ.

**ಮುಂಜಃ ವಿಮುಚ್ಯತ ಇಷೀಕಯಾ । ಇಷೀಕಾ-ಇಷತೇರ್ಗತಿ-**
**ಕರ್ಮಣಃ । ಇಯಮಪೀತರೇಷೀಕೈತಸ್ಮಾದೇವ ॥**

ಮುಂಜ ಶಬ್ದಾರ್ಥವನ್ನು ವಿವರಿಸುತ್ತಾರೆ. ಒಳಗಿನ ದಂಟಿನಿಂದ ಬಿಡಲ್ಪಡುವುದು. ಕೆಲವು ಹುಲ್ಲುಗಳಲ್ಲಿ ದಂಟನ್ನು ಸೀಳಿ ತೆಗೆಯಲು ಬರುತ್ತದೆ. ಮುಚಲೃ—ಮೋಕ್ಷಣೇ ಧಾತು. ಕರ್ಮಣಿಯಲ್ಲಿ ಕ ಪ್ರತ್ಯಯ ಬಂದಾಗ ಬಹುಲಗ್ರಹಣದಿಂದ ಚಕಾರಕ್ಕೆ ಜಕಾರ ಬಂದಿದೆ. ಇಷೀಕಾ ಅಂದರೆ ಒಳಗಿನ ಕಾಂಡಭಾಗ, ದಂಟು. ಗತ್ಯರ್ಥಕ ಇಷ ಧಾತುವಿಗೆ ಈಕಕ್ ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಇದು ಮುಂಜವೆಂಬ ಹುಲ್ಲಿಂದ ಹೊರಗೆ ಬರುತ್ತದೆ. ಲೋಕದಲ್ಲಿಯೂ ಹಲೇಷಾ ಇತ್ಯಾದಿ ಸ್ಥಳದಲ್ಲಿಯೂ ಹಲ ಅಂದರೆ ನೇಗಿಲಿನಿಂದ ತೆಗೆಯಲು ಬರುವುದು ಅಂದರೆ ಲಾಂಗಲದಂಡವೆಂದರ್ಥವಾಗುತ್ತದೆ.

**ವಿಭೀದಕೋ ವಿಭೇದನಾತ್। ಜಾಗೃವಿರ್ಜಾಗರಣಾತ್ । ಮಹ್ಯಮ-**
**ಚಚ್ಛದತ್ । ಪ್ರಶಂಸತ್ಯೇನಾನ್ಪ್ರಥಮಯಾ । ನಿಂದತ್ಯುತ್ತರಾಭಿಃ ।**
**ಋಷೇರಕ್ಷಪರಿದ್ಯೂನಸ್ಯೈತದಾರ್ಷಂ ವೇದಯಂತೇ ॥**

ವಿಭೇದನಾತ್ ಎಂದು ಅರ್ಥ ವಿವರಿಸುತ್ತಾರೆ. ಕರ್ಮಣಿಯಲ್ಲಿ ಭಿದಧಾತುವಿಗೆ ಣ್ವುಲ್‌ಪ್ರತ್ಯಯ. ಅದಕ್ಕೆ ಅಕಾದೇಶ. ಬಹುಲ ಗೃಹಣದಿಂದ ಉಪಧೆಗೆ ಈತ್ವ ಬಂದಿದೆ. ಜಾಗೃವಿಯೆಂಬಲ್ಲಿ ಅಂತರ್ಭಾವಿತಣ್ಯರ್ಥವಿದೆಯೆಂದು ತೋರಿಸುತ್ತಾರೆ. ಣಿಚ್ ಬಾರದಿದ್ದರೂ ಅದರ ಅರ್ಥ ತೋರುತ್ತದೆ. ಅಚ್ಛಾನ್ ಎಂಬುದಕ್ಕೆ ಅಚಚ್ಛದತ್ ಎಂದರ್ಥ. ಛದ—ಅಪವಾರಣೇ ಧಾತು. ಲಡರ್ಥದಲ್ಲಿ ಲುಙ್ ಬಂದಿದೆ. ಛಾಂದಸವಾಗಿ ರೂಪವಾಗಿದೆ. ಈ ಮಂತ್ರದಲ್ಲಿ ಪೂರ್ವಾರ್ಧ ಋಕ್ಕಿನಿಂದ ಅಕ್ಷಸ್ತುತಿ ಹೇಳಿದೆ. ಹೆಚ್ಚಾದ ನೀರುಳ್ಳ ಪ್ರದೇಶದಲ್ಲಿ ಹೊಂದಿದ ಅವುಗಳ ಮಧ್ಯಭಾಗದಿಂದ ತೃಪ್ತಿದಾಯಕನಾದುದರಿಂದ ನನ್ನನ್ನು ಸಂತೋಷಗೊಳ

ಸುತ್ತವೆ. ಅದರ ಭಕ್ಷಣದಿಂದಲೇ ಕೆಲವು ಸಮಯ ಸಂತೋಷದಿಂದ ಕಳೆಯುತ್ತೇನೆ. ಯಾವಾಗ ಅದರ ಫಲವು ಸ್ಮೃತ ವಾಗುವುದೋ ಆಗ ಮೋಹವನ್ನು ಹುಟ್ಟಿಸುತ್ತಾ ಅದರ ಕ್ರೀಡೆಯಲ್ಲಿ ಆಸಕ್ತಿಯನ್ನುಂಟುಮಾಡುತ್ತದೆ. ಇದರಿಂದ ನನಗೆ ಸರ್ವಾನರ್ಥವೂ ಸಂಭವಿಸಿದೆಯೆಂದು ಉತ್ತರಾರ್ಧದ ಋಕ್ಕಿನಿಂದ ತಿಳಿಸುತ್ತದೆ. ಅದರಿಂದ ಅಕ್ಷನಿಂದೆ ವ್ಯಕ್ತವಾಗುತ್ತದೆ. ಮೂಜವತ ಪರ್ವತದ ಸೋಮವು ಅತಿಮಾದಕವಾದುದರಿಂದ ಅದರ ಭಕ್ಷಣವು ಯಜಮಾನನಿಗೆ ಸರ್ವಾನರ್ಥಕಾರಿ ಯಾಗುವಂತೆ ಅಕ್ಷಸ್ಮರಣ ಮಾತ್ರದಿಂದ ಅದರ ಕ್ರೀಡಾಸಕ್ತಿಯಾಗುವುದರಿಂದ ಪುನಃ ಪುನಃ ಅನರ್ಥಕಾರಿಯಾಗುತ್ತ ದೆಂದರ್ಥ. ಪರಿದ್ಯೂನ ಅಂದರೆ ಪರಿದೇವನ ಮಾಡುವವನು, ವಿಲಾಪ ಮಾಡುವವನೆಂದರ್ಥ. ದಿವ್‌ಧಾತುವಿಗೆ ನಿಷ್ಠಾತ ಕಾರ ಬಂದುನತ್ವ ಬಂದಿದೆ. ವಕಾರಕ್ಕೆ ಊಠಾದೇಶ. ವೇದಯಂತೆ ಅಂದರೆ ಹೇಳುತ್ತವೆಯೆಂದರ್ಥ.

ಗ್ರಾವಾಣೋ ಹಂತೇರ್ವಾ, ಗೃಣಾತೇರ್ವಾ । ತೇಷಾಮೇಷಾ ಭವತಿ ॥ ೮ ॥

ಗ್ರಾವಾಣ ಎಂಬ ಪದದ ನಿರ್ವಚನವನ್ನು ತೋರಿಸುತ್ತಾರೆ. ಹನ, ಗೃ, ಗ್ರಹ ಈ ಮೂರು ಧಾತುಗಳಿಂದ ಇದರ ನಿಷ್ಪತ್ತಿಯಾಗುತ್ತದೆ. 'ಅನ್ಯೇಭ್ಯೋಽಪಿದೃಶ್ಯಂತೇ' ಸೂತ್ರದಿಂದ ಕ್ವನಿಪ್. ಪೃಷೋದರಾದಿ ಪಠಿತವಾದುದರಿಂದ ಧಾತುವಿಗೆ ಗ್ರಾದೇಶ ಬಂದಿದೆ. ಸೋಮಲತೆಯನ್ನು ಕುಟ್ಟುವಾಗ ಹಿಂಸಿಸಲ್ಪಡುತ್ತದೆ. ಸೋಮಲತೆಯಿಂದ ರಸತೆಗೆಯಲು ಸಾಧನ ವಾದುದರಿಂದ ಸ್ತುತಿಸಲ್ಪಡುವುದು. ಸೋಮವನ್ನು ಅರೆಯುವದರಿಂದ ಹಿಡಿಯಲ್ಪಡುವುದು. ಈ ಪಾಷಾಣದ ಸ್ತುತಿ ಯನ್ನು ಮುಂದೆ ಹೇಳುವ ಮಂತ್ರವು ತಿಳಿಸುತ್ತದೆ.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಎಂಟನೆಯು ಖಂಡವು ಸಮಾಪ್ತವಾಗಿದೆ.

---

## ಅಥ ನವಮಃ ಖಂಡಃ

### ಒಂಬತನೆಯ ಖಂಡವು

ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ । ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂ ದ್ರಾಯ ಸೋಮಿನಃ ॥ (ಋ. ಸಂ. ೧೦-೯೪-೧) । ಪ್ರವದಂತ್ವೇತೇ ಪ್ರವದಾಮ ವಯಂ ಗ್ರಾವಭ್ಯೋ ವಾಚಂ ವದತ ವದದ್ಭ್ಯೋ ಯದದ್ರಯಃ ಪರ್ವತಾ ಆದರಣೀಯಾಃ ಸಹ ಸೋಮಮಾಶವಃ ಕ್ಷಿಪ್ರಕಾರಿಣಃ ಶ್ಲೋಕಃ ಶೃಣೋತೇರ್ಘೋಷೋ ಘುಷ್ಯತೇಃ ಸೋಮಿನೋ ಯೂಯಂ ಸ್ಥೇತಿ ವಾ ಸೋಮಿನೋ ಗೃಹೇಷ್ವಿತಿ ವಾ ಯೇನ ನರಾಃ ಪ್ರಶಸ್ಯಂತೇ ಸ ನಾರಾಶಂಸೋ ಮಂತ್ರಸ್ತಸ್ಯೈಷಾ ಭವತಿ ॥ ೯ ॥

ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ
ವದತಾ ವದದ್ಭ್ಯಃ। ಯದದ್ರಯಃ ಪರ್ವತಾಃ ಸಾಕಮಾಶವಃ
ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ॥

(ಋ – ಸಂ – ೮ – ೪ – ೫೯)

ಗ್ರಾವಾಣಸ್ತುತಿಯನ್ನು ಹೇಳುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಪಾಷಾಣಗಳೇ ಸೋಮಾಭಿಷವಶಬ್ದವನ್ನು ಮಾಡಿರಿ. ನಾವು ಅಭಿಷವಶಬ್ದಮಾಡುವ ನಿಮಗೆ ಸ್ತುತಿಯನ್ನು ಮಾಡುತ್ತೇವೆ. ಋತ್ವಿಜರೇ ನೀವೂ ಆ ಉಪಲಗಳನ್ನು ಸ್ತುತಿಸಿರಿ. ದೃಢವಾಗಿ ಪರ್ವದಿಂದ ಕೂಡಿರುವ ಕ್ಷಿಪ್ರಕಾರಿಗಳಾದ ನೀವು ಇಂದ್ರನಿಗೋಸ್ಕರ ಅಭಿಷವಶಬ್ದವನ್ನು ಮಾಡಿರಿ ಇದರಿಂದ ಸೋಮದಿಂದ ತುಂಬಿದವರಾಗುವಿರಿ.

ಪ್ರವದಂತ್ವೇತೇ ಪ್ರವದಾಮ ವಯಂ ಗ್ರಾವಭ್ಯೋ ವಾಚಂವದತ
ವದದ್ಭ್ಯೋ ಯದದ್ರಯಃ ಪರ್ವತಾ ಆದರಣೀಯಾಃ ಸಹ
ಸೋಮ ಮಾಶವಃ ಕ್ಷಿಪ್ರಕಾರಣಃ। ಶ್ಲೋಕಃ ಶೃಣೋತೇಃ,
ಘೋಷೋ ಘುಷ್ಯತೇಃ, ಸೋಮಿನೋ ಯೂಯಂ ಸ್ಥೇತಿ ವಾ,
ಸೋಮಿನೋ ಗೃಹೇಷ್ವಿತಿ ವಾ ॥

ಮಂತ್ರಾರ್ಥವನ್ನು ವಿವರಿಸಿಸುತ್ತಾರೆ. ಅದ್ರಿ ಪದಕ್ಕೆ ಸೀಳಲು ಅಸಾಧ್ಯವಾದದ್ದೆಂದರ್ಥ. ಆಶವಃ ಅಂದರೆ ಸೋಮವನ್ನು ಬೇಗನೆ ಸುರಿಸುವುದೆಂದರ್ಥ. ಶ್ರು - ಶ್ರವಣೇ. ಧಾತು. ಕನ್‌ಪ್ರತ್ಯಯ ಬಂದಾಗ ಗುಣ. ರೇಫಕ್ಕೆ ಲಕಾರಾದೇಶ. ಕೇಳಲ್ಪಡುವುದು ಶೋಕ. ಘುಷಧಾತುವಿಗೆ ಕರ್ಮಣಿಯಲ್ಲಿ ಘಞ ಘುಷ್ಯತೇ ಇತಿ ಘೋಷಃ

ಯೇನ ನರಾಃ ಪ್ರಶಸ್ಯಂತೇ ಸ ನಾರಾಶಂಸೋ ಮಂತ್ರಃ। ತಸ್ಯೈಷಾ
ಭವತಿ ॥ ೯ ॥

ಆ ಮೇಲೆ ಕ್ರಮಪ್ರಾಪ್ತವಾದ ನಾರಾಶಂಸಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ ನರಶಬ್ದವು ರಾಜವಿಶೇಷವನ್ನು ತಿಳಿಸುತ್ತದೆ. ನರಾನ್ ಶಂಸತಿ ಇತಿ ನರಾಶಂಸಃ. ನರಶಬ್ದ ಉಪಪದವಾಗಿರುವಾಗ ಶಂಸಧಾತುವಿಗೆ ಅಣ್‌ಪ್ರತ್ಯಯ. 'ಅನ್ಯೇಷಾಮಪಿ ದೃಶ್ಯತೆ' ಸೂತ್ರದಿಂದ ಪೂರ್ವಪದಕ್ಕೆ ದೀರ್ಘ.. ಪ್ರಜ್ಞಾದಿಗಣ ಪಠಿತವಾದುದರಿಂದ ಸ್ವಾರ್ಥದಲ್ಲಿ ಅಣ್ ಪ್ರತ್ಯಯ ಬಂದು ನಾರಾಶಂಸ ಎಂದಾಗುತ್ತದೆ. ಮುಂದೆ ಹೇಳುವ ಮಂತ್ರವು ನಾರಾಶಂಸ ಮಂತ್ರಕ್ಕೆ ಉದಾಹರಣೆಯಾಗುತ್ತದೆ. ಅಥವಾ ಭಾವಯವ್ಯದ ಪ್ರಧಾನ ಸ್ತುತಿಯಾಗುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಒಂಬತ್ತನೆಯ ಖಂಡವು ಸಮಾಪ್ತವು.

---

## ಅಥ ದಶಮಃ ಖಂಡಃ

### ಹತ್ತನೆಯ ಖಂಡವು

ಅಮುಂದಾನ್‌ತ್ಸ್ತೋಮಾನ್ಪ್ರ ಭರೇ ಮನೀಷಯಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ || (ಋ. ಸಂ. ೧-೧೨೬-೧) || ಅಮುಂದಾನ್‌ತ್ಸ್ತೋಮಾನಬಾಲಶಾನನಲ್ಪಾನ್ವಾ ಬಾಲೋ ಬಲವರ್ತೀ ವಾ ಬಲೋ ವಾ ಪ್ರತಿಷೇಧವ್ಯವಹಿತಃ ಪ್ರಭರೇ ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ ಸಿಂಧಾವಧಿ ನಿವಸತೋ ಭಾವಯವ್ಯಸ್ಯ ರಾಜ್ಞೋ ಯೋ ಮೇ ಸಹಸ್ರಂ ನಿರಮಿಮೀತ ಸವಾನತೂರ್ತೋ ರಾಜಾತೂರ್ಣ ಇತಿ ವಾತ್ವರಮಾಣ ಇತಿ ವಾ ಪ್ರಶಂಸಾಮಿಚ್ಛಮಾನಃ || ೧೦ ||

ಅಮುಂದಾನ್ ಸ್ತೋಮಾನ್ ಪ್ರಭರೇ ಮನೀಷಯಾ ಸಿಂಧಾವ
ಧಿಕ್ಷಿಯತೋ ಭಾವ್ಯಸ್ಯ || ಯೋ ಮೇ ಸಹಸ್ರಮಮಿ ಮೀತ
ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ||

(ಋ – ಸಂ – ೨ – ೧ – ೧೦)

ಭಾವಯವ್ಯನ ಪ್ರಧಾನ ಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸಿಂಧು ದೇಶದಲ್ಲಿ ವಾಸಿಸುವ ಭಾವಯವ್ಯನ ಅನಲ್ಪವಾದ ಕೀರ್ತನಗಳನ್ನು ಸ್ತುತಿಯಿಂದ ಉಚ್ಚರಿಸುತ್ತೇನೆ. ಯಾರಿಂದಲೂ ಹಿಂಸಿಸಲ್ಪಡದಿರುವ ಯುವರಾಜನು ನನಗೋಸ್ಕರ ಸಹಸ್ರ ಸಂಖ್ಯಾಕಗಳಾದ ಸೋಮಯಾಗಗಳನ್ನು ತಾನು ಕೀರ್ತಿಯನ್ನು ಬಯಸುವವನಾಗಿ ನಿರ್ಮಿಸಿದನೋ ಆ ವಿಶೇಷವನ್ನು ಸ್ತುತಿಸುತ್ತೇನೆ ಎಂದರ್ಥ.

ಅಭಿಂದಾನ್ ಸ್ತೋಮಾನಬಾಲಿಶಾನನಲ್ಪಾನ್ವಾ | ಬಾಲೋಬಲವರ್ತೀ ಭರ್ತವ್ಯೋ ಭವತಿ | ಅಂಬಾಸ್ಮಾ ಅಲಂಭವತೀತಿವಾ | ಅಂಬಾಸ್ಮೈ ಬಲಂ ಭವತೀತಿ ವಾ | ಬಲಲೋ ವಾ ಪ್ರತಿಷೇಧವ್ಯವಹಿತಃ | " ಪ್ರಭರೇ ಮನೀಷಯಾ " ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ | ಸಿಂಧಾವಧಿ ನಿವಸತೋ ಭಾವಯವ್ಯಸ್ಯ ರಾಜ್ಞೋ ಯೋ ಮೇ ಸಹಸ್ರಂ ನಿರಮಿಮೀತ ಸವಾನತೂರ್ತೋ ರಾಜಾಽತೂರ್ಣ ಇತಿ ವಾಽತ್ವರಮಾಣ ಇತಿ ವಾ ಪ್ರಶಂಸಾ-ಮಿಚ್ಛಮಾನಃ || ೧೦ ||

ಮಂತ್ರಾರ್ಥವನ್ನು ವಿವರಿಸುತ್ತಾರೆ- ಮಂತ್ರದಲ್ಲಿ ಅಮಂದಾನ್ ಎಂಬಲ್ಲಿ ಮಂದಶಬ್ದ ಮೂಢಶಬ್ದ ಪರ್ಯಾಯವಾಚಕ ವಾಗಿದೆ. ಮೂಢಪರ್ಯಾಯಬಾಲಿಶ, ಅಲ್ಪಪದಗಳಾಗುತ್ತವೆ. "ಮೂಢಾಲ್ಪಾಪಟುನಿರ್ಭಾಗ್ಯಾ ಮಂದಾಃ ಸ್ಯುಃ" ಎಂದು ಅಮರ. ಇದನ್ನೇ ಅಬಾಲಿಶಾನ್, ಅನಲ್ಪಾನ್ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಬಾಲಿಶಪದದ ಪ್ರಕೃತಿಯಾದ ಬಾಲಶಬ್ದ ನಿರ್ವಚನವನ್ನು ತೋರಿಸುತ್ತಾರೆ. ಬಲ–ಪ್ರಾಣನೇ ಧಾತುವಿಗೆ ಣ ಪ್ರತ್ಯಯ ಬಂದು ಬಾಲ ಎಂದಾಗಿದೆ. ಬಲವರ್ತೀ ಎಂಬುದಕ್ಕೆ ಕೃಚ್ಛ್ರಜೀವನವುಳ್ಳವನೆಂದರ್ಥ, ಇದನ್ನೇ ಭರ್ತವ್ಯ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಪೋಷಿ ಸಲ್ಪಡುವವನೆಂದರ್ಥ. ಅಥವಾ ಅಂಬಾ ಅಲಂ ಈ ಎರಡುಪದಗಳಿಂದ ಬಾಲಶಬ್ದವಾಗಿದೆ. ಇವನ ಪೋಷಣೆಗೆ ತಾಯಿಮಾತ್ರ ಪರ್ಯಾಪ್ತಳಾದವಳು. ಇನ್ನು ಯಾರ ಸಹಾಯಾಪೇಕ್ಷೆ ಇಲ್ಲದವನು ಆದಿ ಕೊನೆ ಅಕ್ಷರಗಳಿಗೆ (ಅಂ ಅಂ) ಲೋಪಬಂದರೆ ಬಾಲ ಎಂದಾಗುತ್ತದೆ. ಅಥವಾ ಬಲಂ ಅಂಬಾ ಎಂಬುದರಿಂದ ಬಾಲಪದವಾಗಿದೆ. ವರ್ಣವ್ಯತ್ಯಯ ಬಂದಿದೆ. ತಾಯಿಯೇ ಇವನಿಗೆ ಬಲವಾಗಿರುವವಳು ಎಂದರ್ಥ. ಅಥವಾ ನ ಬಲಂ ಯಸ್ಯ ಎಂಬರ್ಥದಲ್ಲಿ ಬಾಲ ಎಂದಾಗಿದೆ. ಬಲವಿಲ್ಲದವನೆಂದರ್ಥ. ಪ್ರತಿಷೇಧಾರ್ಥಕನಞಿನ ನಕಾರಕ್ಕೆ ಲೋಪಬಂದಮೇಲೆ ಉಳಿದಿರುವ ಅಕಾರ ವಿಪರ್ಯಯದಿಂದ ಬಕಾರದಮೇಲೆ ಹೇಳಿದೆ. ಸವರ್ಣದೀರ್ಘದಿಂದ ಬಾಲ ಎಂದೇ ರೂಪವಾಗಿದೆ. ಮನಸಃ ಈಷಾ = ಮನೀಷಾ. ಸ್ತುತಿ ಅಥವಾ ಪ್ರಜ್ಞೆ ಎಂದರ್ಥ. ಸಿಂಧಾವಧಿಕ್ಷಿಯತಃ = ಸ್ತುತಿ ಅಥವಾ ಪ್ರಜ್ಞೆ ಎಂದರ್ಥ. ಸಿಂಧಾವಧಿಕ್ಷಿಯತಃ = ಸಿಂಧು ದೇಶದಲ್ಲಿ ಅಥವಾ ಸಮುದ್ರತೀರದಲ್ಲಿ ವಾಸಿಸುವನು. ಆ ರಾಜನು ಅತೂರ್ತಃ = ಚಪಲನಲ್ಲದವನು ಅಥವಾ ತ್ವರೆ ಇಲ್ಲದವನು. ಸಾವಧಾನದಿಂದ ಕಾರ್ಯವನ್ನು ಮಾಡುವವನೆಂದು ತಾತ್ಪರ್ಯ. ಶ್ರವಃ ಎಂಬುದಕ್ಕೆ ಪ್ರಶಂಸೆಯೆಂದರ್ಥ. ತನಗೂ ಕೀರ್ತಿಬರಬೇಕೆಂದು ಸಹಸ್ರಸೋಮ ಯಾಗಗಳನ್ನು ನಿರ್ಮಿಸಿರುತ್ತಾನೆ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಹತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕಾದಶ ಖಂಡಃ

## ಹನ್ನೊಂದನೆಯ ಖಂಡವು

ಯಜ್ಞ ಸಂಯೋಗಾದ್ರಾಜಾ ಸ್ತುತಿಂ ಲಭೇತ ರಾಜಸಂಯೋಗಾದ್ಯುದ್ಧೋಪಕ ರಣಾನಿ ತೇಷಾಂ ರಥಃ ಪ್ರಥಮಗಾಮೀ ಭವತಿ ರಥೋ ರಂಹತೇರ್ಗತಿಕರ್ಮಣಃ ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾರಸ ತೇರ್ವಾ ತಸ್ಯೈಷಾ ಭವತಿ ॥ ೧೧ ॥

ಯಜ್ಞಸಂಯೋಗಾದ್ರಾಜಾ ಸ್ತುತಿಂ ಲಭೇತ । ರಾಜಸಂಯೋಗಾ
ದ್ಯುದ್ಧೋಪಕರಣಾನಿ । ತೇಷಾಂ ರಥಃ ಪ್ರಥಮಗಾಮೀ ಭವತಿ ॥

ಭಾವಯವ್ಯ ರಾಜನು ಸಹಸ್ರಯಜ್ಞಗಳನ್ನು ನಿರ್ಮಿಸಿರುವುದರಿಂದ ಸ್ತುತ್ಯರ್ಹನಾದನೆಂದು ಪೂರ್ವಖಂಡದಲ್ಲಿ ಹೇಳಿದೆ. ಯಜ್ಞಸಂಬಂಧದಿಂದ ಅವನಿಗೆ ಸ್ತುತಿಪ್ರಾಪ್ತವಾಯಿತು. ಸ್ತುತ್ಯನಾದ ರಾಜನ ಸಂಬಂಧದಿಂದ ಯುದ್ಧಸಾಮಗ್ರಿಗಳಾದ ರಥಾದಿಗಳೂ ಸ್ತುತಿವಿಷಯವಾಗುತ್ತವೆ. ಯುದ್ಧಕ್ಕೋಸ್ಕರ ಉಪಯೋಗಿಸಲ್ಪಡುವವುಗಳು ಅಥವಾ ಯುದ್ಧದಲ್ಲಿ ಉಪಕಾರ ಮಾಡುವವುಗಳು ಯುದ್ಧೋಪಕರಣಗಳು. ಎಲ್ಲಾ ಸ್ಥಳದಲ್ಲಿಯೂ ಆಚಾರ್ಯರು ಈ ಸ್ತುತಿಸಂಕ್ರಮನ್ಯಾಯವನ್ನು ಹೇಳುತ್ತಾರೆ. ಯುದ್ಧೋಪಕರಣಗಳು ರಾಜಸಂಯೋಗದಿಂದ (ಅವನಿಗೆ ಅಂಗವಾದುದರಿಂದ) ಸ್ತುತಿಯನ್ನು ಹೊಂದುತ್ತವೆ. ರಾಜನು ಯಜ್ಞಸಂಬಂಧದಿಂದ, ಯಜ್ಞವು ದೇವತಾಸಂಬಂಧದಿಂದ, ದೇವತೆಯೂ ಆತ್ಮಸಂಬಂಧದಿಂದ ಸ್ತುತಿಯನ್ನು ಹೊಂದುತ್ತವೆ. ಹೀಗೆಯೇ ಅಂಗಪ್ರತ್ಯಂಗಭಾವದಿಂದ ಸರ್ವಾವಸ್ಥೆಯಲ್ಲಿರುವ ಆತ್ಮನೇ ಸ್ತುತಿವಿಷಯನಾಗುತ್ತಾನೆ. ಇದೇ ಸ್ತುತಿಸಂಕ್ರಮ ನ್ಯಾಯ. ಸಕಲ ಯುದ್ಧಸಾಮಗ್ರಿಗಳಿಗೆ ರಥವೇ ಆಧಾರವಾದುದರಿಂದ ಯುದ್ಧೋಪಕರಣಗಳ ಮಧ್ಯದಲ್ಲಿ ರಥವೇ ಪ್ರಥಮ ಗಾಮೀ ಅಂದರೆ ಮುಖ್ಯವಾಗುತ್ತದೆ.

**ರಥೋ ರಂಹತೇರ್ಗತಿಕರ್ಮಣಃ ||**

ರಥಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಗತ್ಯರ್ಥಕವಾದ ರಹಿಧಾತುವಿಗೆ ಕ್ಥನ್‌ಪ್ರತ್ಯಯ ಬಂದು ರಥ ಎಂದಾಗಿದೆ. ಬಹುಲಗ್ರಹಣದಿಂದ ನಕಾರಹಕಾರಗಳಿಗೆ ಲೋಪಬರುತ್ತದೆ. ಅನೇನ ರಂಹತಿ ಇತಿ ರಥಃ. ಇದರಿಂದ ಹೋಗುತ್ತಾರೆ ಎಂದರ್ಥ. ಗಮನಸಾಧನವಾದುದು ರಥ.

**ಸ್ಥಿರತೇರ್ವಾಸ್ಯಾ ದ್ವಿಪರೀತಸ್ಯ । ರಮಮಾಣೋऽಸ್ಮಿಂಸ್ತಿಷ್ಠತೀತಿವಾ ।**
**ರಪತೇರ್ವಾ, ರಸತೇರ್ವಾ, ತಸ್ಯೈಷಾಭವತಿ || ೧೧ ||**

ಸ್ಥಿರಧಾತು ನಿರುಕ್ತಕಾರರಿಂದ ಪಠಿತವಾಗಿದೆ. ಇದಕ್ಕೆ ಥೈಙಪ್ರತ್ಯಯ ಬಂದಾಗ ಸಕಾರಇಕಾರಗಳಿಗೆ ಲೋಪ. ವಿಪರೀತಾಕ್ಷರದಿಂದ ರಥ ಎಂದಾಗಿದೆ. ದೃಢಗಮನದಿಂದ ಸ್ಥಿರವೆಂದು ಹೇಳಿದೆ. ಅಥವಾ ರಮು ಮತ್ತು ಷ್ಠಾ ಈ ಎರಡು ಧಾತುಗಳಿಂದ ರಥಶಬ್ದವಾಗಿದೆ. ಕ್ರೀಡಾರ್ಥವಾಗಿ ಇದರಲ್ಲಿ ಇದ್ದವನು ವಿಶ್ವಸ್ತನಾಗಿ ಇರುತ್ತಾನೆ. ಕುದುರೆ ಮುಂತಾದವುಗಳಿಂದ ವಿಶ್ವಾಸ ವಿರುವುದಿಲ್ಲ. ಅಥವಾ ಶಬ್ದಾರ್ಥಕ ರಪಧಾತು, ಅಥವಾ ರಸಧಾತುವಿಗೆ ಹಿಂದಿನಂತೆ ಕ್ಥನ್‌ಪ್ರತ್ಯಯ ಬಂದು ರಥವೆಂದಾಗಿದೆ ಇದು ಹೋಗುವಾಗ ದೂರದಿಂದಲೇ ಶಬ್ದಮಾಡುತ್ತದೆ. ಮುಂದೆ ಹೇಳುವ ಋಙ್ಮಂತ್ರವು ಈ ರಥದ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾದಶ ಖಂಡಃ
## ಹನ್ನೆರಡನೆಯ ಖಂಡವು

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।**
**ಗೋಭಿಃ ಸಂನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ । ( ಋ - ಸಂ-**

೬- ೪೭- ೨೬ ) ॥ ವನಸ್ಪತೇ ದೃಢಾಂಗೋಹಿ ಭವಾಸ್ಮತ್ಸಖಾ ಪ್ರತರಣಃ ಸುವೀರಃ ಕಲ್ಯಾಣವೀರೋ ಗೋಭಿಃ ಸಂನದ್ಧೋ ಅಸಿ ವೀಳಯಸ್ವೇತಿ ಸಂಸ್ತಂಭಸ್ವಾಸ್ಥಾತಾ ತೇ ಜಯತು ಜೇತವ್ಯಾನಿ ದುಂದುಭಿರಿತಿ ಶಬ್ದಾನುಕರಣಂ ದ್ರುಮೋಭಿನ್ನ ಇತಿ ವಾ ದುಂದುಭ್ಯತೇರ್ವಾ ಸ್ಯಾಚ್ಛಬ್ದಕರ್ಮಣಸ್ತಸ್ಯೈಷಾ ಭವತಿ ॥ ೧೨ ॥

ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ
ಸುವೀರಃ ॥ ಗೋಭಿಃ ಸನ್ನದ್ಧೋ ಅಸಿ ವೀಳಯಸ್ವಾಸ್ಥಾತೇ
ಜಯತು ಜೇತ್ವಾನಿ ॥

(ಯ. ಸಂ. ೪–೭–೩೫)

ವನಸ್ಪತಿಯ ವಿಕಾರವಾದ ರಥವೇ ನೀನು ದೃಢಾಂಗನಾಗಿರು. ನೀನು ನಮ್ಮ ಮಿತ್ರನಾಗು. ಯುದ್ಧದ ಪಾರವನ್ನು ಹೊಂದಿಸು. ಶೋಭನಭಟರು ಅಥವಾ ಪುತ್ರಾದಿಗಳಿಂದ ಕೂಡಿರು. ನೀನು ಗೋಚರ್ಮಾದಿಗಳಿಂದ ಕಟ್ಟಲ್ಪಟ್ಟಿರುವಿ. ಆದುದರಿಂದ ಸಂಸ್ತಬ್ಧನಾಗಿರು. ನಿನ್ನಲ್ಲಿರುವ ಯುದ್ಧಾಳುವು ಜಯಹೊಂದಲಿ.

ವನಸ್ಪತೇ ದೃಢಾಂಗೋ ಹಿ ಭವಾಸ್ಮತ್ಸಖಾ ಪ್ರಕರಣಃ ಸುವೀರಃ ಕಲ್ಯಾಣ
ವೀರಃ । ಗೋಭಿಃ ಸನ್ನದ್ಧೋ ಅಸಿ ವೀಳಯಸ್ವ ಇತಿ ಸಂಸ್ತಭಸ್ವ ॥
ಆಸ್ಥಾತಾ ತೇ ಜಯತು ಜೇತವ್ಯಾನಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುವೀರ ಎಂಬುದಕ್ಕೆ ಕಲ್ಯಾಣವೀರ ಎಂದು ವ್ಯಾಖ್ಯಾನ. ನಿನ್ನಲ್ಲಿರುವವನು ಯಾವ ದುಃಖಾದಿಗಳೂ, ಅವಲಕ್ಷಣಗಳೂ ಇಲ್ಲದಿರುವವನೆಂದರ್ಥ. ಉಳಿದ ಪದಗಳು ಹಿಂದೆ ವಿವೃತವಾಗಿವೆ.

ದುಂದುಭಿರಿತಿ ಶಬ್ದಾನುಕರಣಂ, ದ್ರುಮೋ ಭಿನ್ನ ಇತಿ ವಾ
ದುಂದುಭ್ಯತೇರ್ವಾ ಸ್ಯಾಚ್ಛಬ್ದಕರ್ಮಣಸ್ತ ಸ್ಯೈಷಾ ಭವತಿ ॥ ೧೨ ॥

ಕ್ರಮಪ್ರಾಪ್ತವಾದ ದುಂದುಭಿಪದದ ನಿರ್ವಚನವನ್ನು ತೋರಿಸುತ್ತಾರೆ. ದುಂದುಭಿಪದದ ವಾಚ್ಯಾರ್ಥ ಶಬ್ದಾನುಕರಣ ಇದು ಶಬ್ದಮಾಡಿದೊಡನೆ ದುಂದುಂ ಎಂದು ಶಬ್ದಮಾಡುವುದರಿಂದ ದುಂದುಭಿ ಎಂದೇ ನಾಮಧೇಯ ಉಂಟಾಗಿದೆ. ಅಥವಾ ದ್ರುಮಃ ಭಿನ್ನಃ ಎಂಬುದರಿಂದ ದುಂದುಭಿ ಎಂದಾಗಿದೆ ದ್ರುಮಪದವೇ ಪೂರ್ವಪದ. ಭಿಧದಾತು ಉತ್ತರಪದ. ಮರವನ್ನು ಕಡಿದು ಚನ್ನಾಗಿ ಕತ್ತರಿಸಿ ಕೊರೆದು ಒಂದುಭಾಗವನ್ನು ಚರ್ಮದಿಂದ ಮುಚ್ಚಿರುವುದೇ ದುಂದುಭಿ. ನಗಾರಿ ಭೇರಿ ಎನ್ನುತ್ತಾರೆ. ಮುಂದೆ ಉದಾಹರಿಸುವ ಮಂತ್ರವು ದುಂದುಭಿಯ ಸ್ತುತಿಯನ್ನು ತಿಳಿಸುತ್ತಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ಹನ್ನೆರಡನೆಯ ಖಂಡವು ಸಮಾಪ್ತವಾಗಿದೆ.

## ಅಥ ತ್ರಯೋದಶ ಖಂಡಃ

### ಹದಿಮೂರನೆಯ ಖಂಡ

ಉಪಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ ಜಗತ್ । ಸ ದುಂದುಭೇ ಸಜೂರಿಂದ್ರೇಣ ದೇವೈರ್ದೂರಾದ್ದವೀಯೋ ಅಪ ಸೇಧ ಶತ್ರೂನ್ । (ಋ - ಸಂ - ೬- ೪೭ - ೨೯) ॥ ಉಪ ಶ್ವಾಸಯ ಪೃಥಿವೀ ಚ ದಿವಂ ಚ ಬಹುಧಾತೇ ಘೋಷಂ ಮನ್ಯತಾಂ ವಿಷ್ಠಿತಂ ಸ್ಥಾವರಂ ಜಂಗಮಂ ಚ ಯತ್ಸ ದುಂದುಭೇ ಸಹಜೋಷಣ ಇಂದ್ರೇಣ ಚ ದೇವೈಶ್ಚ ದೂರಾದ್ದೂರ ತರಮುಪ ಸೇಧ ಶತ್ರೂನಿಷಧಿರಿಷೂಣಾಂ ನಿಧಾನಂ ತಸ್ಯೈಷಾ ಭವತಿ ॥ ೧೩ ॥

ಉಪ ಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ
ಜಗತ್ । ಸ ದುಂದುಭೇ ಸಜೂರಿಂದ್ರೇಣ ದೇವೈರ್ದೂರಾದ್ದವೀಯೋ
ಅಪಸೇಧ ಶತ್ರೂನ್ ॥

(ಋ. ಸಂ. ೪-೭-೩೫)

ದುಂದುಭಿಯದ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ದುಂದುಭಿಯೇ ದ್ಯಾವಾಭೂಮಿಗಳನ್ನು ನಿನ್ನ ಶಬ್ದದಿಂದ ತುಂಬಿಸು. ಸ್ಥಾವರಜಂಗಮುಗಳು ನಿನ್ನ ಬಹುವಿಧವಾದ ಶಬ್ದಗಳನ್ನು ಕೇಳಲಿ. ಇತರ ದೇವತೆಗಳೊಡಗೂಡಿರುವ ಇಂದ್ರನಿಂದ ಸೇವಿಸಲ್ಪಡುವ ನೀನು ಅತಿ ದೂರದಲ್ಲಿರುವ ನಮ್ಮ ಶತ್ರುಗಳನ್ನು ಓಡಿಸಿಬಿಡು.

ಉಪಶ್ವಾಸಯ ಪೃಥಿವೀಮುಪ ದಿವಂ ದಿವಂ ಚ ಬಹುಧಾ ತೇ ಘೋಷಂ
ಮನ್ಯತಾಂ ವಿಷ್ಠಿತಾಂ ಸ್ಥಾವರಂ ಜಂಗಮಂ ಚ ಯತ್ಸ ದುಂದುಭೇ !
ಸಹಜೋಷೇಣ ಇಂದ್ರೇಣ ಚ ದೇವೈಶ್ಚ ದೂರಾದ್ದೂರತರಮುಪಸೇಧ
ಶತ್ರೂನ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪುರುತ್ರಾ=ನಾನಾ ವಿಧವಾಗಿರುವ, ವಿಷ್ಠಿತಂ=ವಿಶೇಷವಾಗಿರುವುದು. ಚಲಿಸದಿರುವುದು ಸ್ಥಾವರವೆಂದರ್ಥ.

ಇಷುಧಿರಿಷೂಣಾಂ ನಿಧಾನಂ, ತಸ್ಯೈಷಾ ಭವತಿ ॥ ೧೩ ॥

ಕ್ರಮಪ್ರಾಪ್ತವಾದ ಇಷುಧಿ ಶಬ್ದನಿರ್ವಚನವನ್ನು ತೋರಿಸುತ್ತಾರೆ. ಇಷುಧಿಯೆಂದರೆ ಬಾಣವಿಡುವ ಬತ್ತಳಿಕೆ. ಇಷವಃ ಧೀಯಂತೇ ಅತ್ರ ಇತಿ ಇಷುಧಿಃ ನಿಧಾನಂ ಅಂದರೆ ಆಶ್ರಯ. ಮುಂದೆ ಹೇಳುವ ಮಂತ್ರವು ಇಷುಧಿ ಸ್ತುತಿಯನ್ನು ತಿಳಿಸುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಒಂಭತ್ತನೆಯ ಅಧ್ಯಾಯದಲ್ಲಿ
ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತುರ್ದಶ ಖಂಡಃ

## ಹದಿನಾಲ್ಕನೆಯ ಖಂಡವು

ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾಕೃಣೋತಿ ಸಮನಾವಗತ್ಯ । ಇಷುಧಿಃ ಸಂಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿದದ್ಧೋ ಜಯತಿ ಪ್ರಸೂತಃ ॥ (ಋ - ಸಂ - ೬ - ೭೫ - ೫) ॥ ಬಹ್ವೀನಾಂ ಪಿತಾ ಬಹುರಸ್ಯ ಪುತ್ರ ಇತೀಷೂನಭಿಪ್ರೇತ್ಯ ಪ್ರಸ್ಮಯತ ಇವಾ ಪಾವ್ರಿಯಮಾಣಃ ಶಬ್ದಾನುಕರಣಂ ವಾ ಸಂಕಾಃ ಸಚತೇಃ ಸಂಪೂರ್ವಾದ್ವಾ ಕಿರತೇಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತ ಇತಿ ವ್ಯಾಖ್ಯಾತಂ ಹಸ್ತಘ್ನೋ ಹಸ್ತೇ ಹನ್ಯತೇ ತಸ್ಯೈಷಾ ಭವತಿ ॥ ೧೪॥

ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾವಗತ್ಯ ।
ಇಷುಧಿಃ ಸಂಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯಂತಿ
ಪ್ರಸೂತಃ ॥

(ಋ. ಸಂ. ೫–೧೯೧)

ಇಷುಧಿಸ್ತುತಿಬೋಧಕಮಂತ್ರವನ್ನು ಉದಾಹರಿಸುತ್ತಾರೆ. ಬತ್ತಳಿಕೆಯು ಬಹಳ ಬಾಣಗಳಿಗೆ ರಕ್ಷಕವಾಗಿರುತ್ತವೆ. ಇದರ ಪುತ್ರದಂತಿರುವ ಅಧಿಕ ಬಾಣಗಳು ಅನೇಕರನ್ನು ಸಂರಕ್ಷಿಸುತ್ತವೆ. ನಾನಾ ಚಿತ್ರವರ್ಣದ ಬಾಣಗಳಿಗೆ ಆಶ್ರಯವಾಗಿರುವುದರಿಂದ ಇದು ನಗುತ್ತಿರುವಂತಿದೆ. ಯುದ್ಧವನ್ನು ತಿಳಿದು ರಾಜರ ಬೆನ್ನುಭಾಗದಲ್ಲಿ ಕಟ್ಟಲ್ಪಟ್ಟ ಈ ಬತ್ತಳಿಕೆಯು ಬಾಣಗಳನ್ನು ಕೊಡುತ್ತಾ ಶಬ್ದಮಾಡುವ ಸಕಲಸೈನ್ಯಗಳನ್ನು ಜಯಿಸುತ್ತದೆ.

ಬಹೂನಾಂ ಪಿತಾ ಬಹುರಸ್ಯ ಪುತ್ರ ಇಷೂನಭಿಪ್ರೇತ್ಯ । ಪ್ರಸ್ಮಯತ
ಇವಾಪಾವ್ರಿಯಮಾಣಃ । ಶಬ್ದಾನುಕರಣಂ ವಾ । ಸಂಕಾಃ
ಸಚತೇಃ । ಸಂಪೂರ್ವಾದ್ವಾ ಕಿರತೇಃ ॥ "ಪೃಷ್ಠೇ ನಿನದ್ಧೋ
ಜಯತಿ ಪ್ರಸೂತಃ" ಇತಿ ವ್ಯಾಖ್ಯಾತಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬಾಣವನ್ನು ಉದ್ದೇಶಿಸಿ ಇಲ್ಲಿ ಪಿತೃಪುತ್ರ ವ್ಯವಹಾರಮಾಡಿದೆ. ಪುರುಷರನ್ನು ರಕ್ಷಿಸುವುದು ಪುತ್ರವೆಂದು ಇಲ್ಲಿ ತೋರುವ ಅರ್ಥ. ಶಿಶ್ಚಾ ಕೃಣೋತಿ ಎಂಬುದಕ್ಕೆ ಪ್ರಸ್ಮಯತ ಇವ ಎಂದು ವ್ಯಾಖ್ಯಾನ. ಬತ್ತಳಿಕೆಯಲ್ಲಿ ನಾನಾ ಗರಿಗಳಿಂದ ಕೂಡಿದ ಬಾಣಗಳಿರುವುದರಿಂದ ಅದರ ಮುಚ್ಚಳ ತೆರೆದೊಡನೆ ನಗುವಂತಿರುತ್ತದೆ. ಅಥವಾ ಬಾಣಗಳನ್ನೆಳೆಯುವುದರಿಂದ ಶಬ್ದಮಾಡುತ್ತಿರುತ್ತದೆ. ಉಳಿದ ಪದಗಳ ಅರ್ಥ ಸ್ಪಷ್ಟವಾಗಿದೆ.

**ಹಸ್ತಘ್ನೋ ಹಸ್ತೇ ಹನ್ಯತೇ ತಸ್ಯೈಷಾ ಭವತಿ ॥ ೧೪ ॥**

ಕ್ರಮಪ್ರಾಪ್ತವಾದ ಹಸ್ತಘ್ನಪದದ ನಿರ್ವಚನವನ್ನು ತೋರಿಸುತ್ತಾರೆ. ಹಸ್ತಘ್ನ ಅಂದರೆ ಚರ್ಮದ ಕೈಚೀಲ. ಯುದ್ಧದಲ್ಲಿ ಎರಡು ಕೈಗಳಲ್ಲಿಯೂ ಧರಿಸುವುದು. ಆದುದರಿಂದ ಧನುಸ್ಸಿನ ಹಗ್ಗ (ಮೌರ್ವೀ) ಮುಂತಾದವುಗಳಿಂದ ತಿಕ್ಕಲ್ಪಡುವುದರಿಂದ ಪೀಡಿಸಲ್ಪಡುತ್ತದೆ. ಹಸ್ತ ಉಪಪದವಾಗಿರುವಾಗ ಹನಧಾತುವಿಗೆ ಕಪ್ರತ್ಯಯ ಬಂದು ಹಸ್ತಘ್ನ ಎಂದಾಗಿದೆ. ಮುಂದೆ ಹೇಳುವ ಮಂತ್ರವು ಈ ಹಸ್ತಘ್ನದ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿವಿರಚಿತ ಒಂಬತ್ತನೆಯ ಅಧ್ಯಾಯದಲ್ಲಿ
ಹದಿನಾಲ್ಕನೆಯ ಖಂಡವು ಸಮಾಪ್ತವಾಗಿದೆ.

— —

## ಅಥ ಪಂಚಾದಶ ಖಂಡಃ

### ಹದಿನೈದನೆಯ ಖಂಡವು

**ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ ಪರಿಬಾಧಮಾನಃ । ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಂಸಂ ಪರಿ ಪಾತು ವಿಶ್ವತಃ । (ಋ. ಸಂ. ೬-೭೫-೧೪) ಅಹಿರಿವ ಭೋಗೈಃ ಪರಿವೇಷ್ಟಯತಿ ಬಾಹುಂ ಜ್ಯಾಯಾವಧಾತ್ ಪರಿತ್ರಾಯಮಾಣೋ ಹಸ್ತಘ್ನಃ ಸರ್ವಾಣಿ ಪ್ರಜ್ಞಾನಾನಿ ಪ್ರಜಾನನ್ ಪುಮಾನ್ ಪುರುಮನಾ ಭವತಿ ಪುಂಸತೇರ್ವಾಭೀಶವೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೧೫ ॥**

**ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ**
**ಪರಿಬಾಧಮಾನಃ । ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್**
**ಪುಮಾನ್ಪುಮಾಂಸಂ ಪರಿಪಾತು ವಿಶ್ವತಃ ॥**

(ಋ. ಸಂ. ೫–೧–೨೧)

ಹಸ್ತಘ್ನ ಸ್ತುತಿಯನ್ನು ಹೇಳುವ ಮಂತ್ರವನ್ನು ಉದಾಹರಿಸುತ್ತಾರೆ. ಮೌರ್ವಿಯಿಂದಾಗುವ ಹಿಂಸೆಯನ್ನು ನಿವಾರಣೆ ಮಾಡುತ್ತಾ ತನ್ನ ಶರೀರದಿಂದ ಸರ್ಪದಂತೆ ಧನುರ್ಧಾರಿಯ ಹಸ್ತವನ್ನು ಆವರಿಸಿರುತ್ತದೆ. ಈ ಕೈಚೀಲವು ತಿಳಿಯಬೇಕಾದ ಸಕಲವನ್ನು ತಿಳಿಯುತ್ತಾ ಆಪ್ತ ಪುರುಷನಂತೆ ಧನುರ್ಧಾರಿಯಾದ ಪುರುಷನನ್ನು ಸರ್ವಪ್ರಕಾರದಿಂದಲೂ ರಕ್ಷಿಸಲಿ.

**ಅಹಿರಿವ ಭೋಗೈಃ ಪರಿವೇಷ್ಟಯತಿ ಬಾಹುಂ ಜ್ಯಾಯಾ ವಧಾತ್ ಪರಿತ್ರಾಯಮಾಣೋ ಹಸ್ತಘ್ನಃ ಸರ್ವಾಣಿ ಪ್ರಜ್ಞಾನಾನಿ ಪ್ರಜಾನನ್ ||**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸರ್ಪ ಸುತ್ತುವಂತೆ ಇದು ಹಸ್ತವನ್ನು ಸುತ್ತಿ ಮುಚ್ಚುತ್ತದೆ. ಮೌರ್ವಿಯ ಹೊಡೆತದಿಂದ ರಕ್ಷಿಸುತ್ತದೆ. ವಯುನಾನಿ = ಪ್ರಜ್ಞಾನಪರ್ಯಾಯದಲ್ಲಿ ಹೇಳಿದೆ. (ನಿಘ – ೩ – ೯ – ೧೦)

**ಪುಮಾನ್ ಪುರುಮನಾ ಭವತಿ ಪುಂಸತೇರ್ವಾ ||**

ಪುಮಾನ್ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಪುರು ಅಧಿಕವಾದ ಮನಃ ಮನಸ್ಸುಳ್ಳವನು. ಅಲ್ಪ ಮನಸ್ಕರಾದ ಸ್ತ್ರೀಯರಿಗಿಂತಲೂ ಅಧಿಕವಾದ ಮನಸ್ಸುಳ್ಳವರು ಪುರಷರು. ಅಥವಾ ಪೌಂಸ್ಯ ಎಂಬುದ ಬಲನಾಮ (ನಿಘ – ೨ – ೯ – ೨೪) ಸ್ತ್ರೀಯರಿಗಿಂತ ಅಧಿಕ ಬಲವುಳ್ಳವರು. ಪುಂಸ – ಅಭಿವರ್ಧನೇ. ಧಾತು. ಪೃಷೋದರಾದಿ ಗಣ ಪಠಿತವಾದುದರಿಂದ ಪುಮಾನ್ ಎಂದಾಗಿದೆ.

**ಅಭೀ ಶವೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೧೫ ||**

ಕ್ರಮಪ್ರಾಪ್ತವಾದ ಅಭೀಶು ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಇದು 'ಅಭೀಶವೋಽಭ್ಯಶ್ನುವತೇ' ಎಂದು (ನಿಘ. ೩-೯) ಹಿಂದೆ ವ್ಯಾಖ್ಯಾತವಾಗಿದೆ. ಅಭಿ ಉಪಸರ್ಗ ಪೂರ್ವದಲ್ಲಿರುವಾಗ ಅಶೂ–ವ್ಯಾಪ್ತೌ ಧಾತುವಿಗೆ ಉ ಪ್ರತ್ಯಯ ಬಹುಲಗ್ರಹಣದಿಂದ ಧಾತ್ವಾವಯವವಾದ ಅಕಾರಕ್ಕೆ ಇಕಾರಾದೇಶ. ಕುದುರೆಯ ಕತ್ತನ್ನು ವ್ಯಾಪಿಸುವವುಗಳು ಅಭೀಶುಗಳು ಮುಂದೆ ಹೇಳುವ ಮಂತ್ರವು ಅಭೀಶು ಸ್ತುತಿಯನ್ನು ಪ್ರತಿಪಾತಿಸುತ್ತದೆ:

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ

ಹದಿನೈದನೆಯ ಖಂಡವು ಸಮಾಪ್ತವು.

---

## ಅಥ ಷೋಡಶ ಖಂಡಃ

## ಹದಿನಾರನೆಯ ಖಂಡವು.

**ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರಯತ್ರ ಕಾಮಯತೇ ಸುಷಾರಥಿಃ | ಅಭೀಶೂನಾಂ ಪನಾಯತ ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ | (ಋ, ಸಂ. ೬-೭೫-೬) | ರಥೇ ತಿಷ್ಠನ್ನಯತಿ ವಾಜಿನಃ ಪುರಸ್ತಾತ್ಸತೋ ಯತ್ರ ಯತ್ರ ಕಾಮಯತೇ**

ಸುಷಾರಥಿಃ ಕಲ್ಯಾಣಸಾರಥಿರಭೀಶೂನಾಂ ಮಹಿಮಾನಂ ಪೂಜಯಾಮಿ ಮನಃ ಪಶ್ಚಾತ್ಸಂತೋಽನುಯಚ್ಛಂತಿ ರಶ್ಮಯೋ ಧನುರ್ಧನ್ವತೇರ್ಗತಿಕರ್ಮಣೋ ವಧಕರ್ಮಣೋ ವಾ ಧನ್ವಂತ್ಯಸ್ಮಾದಿಷವಸ್ತಸ್ಯೈಷಾ ಭವತಿ ॥ ೧೬ ॥

ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರ ಯತ್ರ ಕಾಮಯತೇ
ಸುಷಾರಥಿಃ ॥ ಅಭೀಶೂನಾಂ ಮಹಿಮಾನಂ ಪನಾಯತ ಮನಃ
ಪಶ್ಚಾದನು ಯಚ್ಛಂತಿ ರಶ್ಮಯಃ ॥

(ಋ. ಸಂ. ೫-೧-೨೦)

ಅಭೀಶುಸ್ತುತಿಯನ್ನು ಹೇಳುವ ಮಂತ್ರವನ್ನು ಉದಾಹರಿಸುತ್ತಾರೆ. ಅಭೀಶು ಅಂದರೆ ಕಡಿವಾಣ. ರಥದಲ್ಲಿರುವ ಕಲ್ಯಾಣ ಸಾರಥಿಯು ಮುಂದಿರುವ ಕುದುರೆಗಳನ್ನು ಎಲ್ಲೆಲ್ಲಿ ಹೋಗಬೇಕೆಂದು ಬಯಸುತ್ತಾನೋ ಅಲ್ಲಿಗೆ ಒಯ್ಯುತ್ತಾನೆ. ಜನರೇ ಈ ಕಡಿವಾಣದ ಮಹಾಭಾಗ್ಯವನ್ನು ಸ್ತುತಿಸಿರಿ. ಕುದುರೆಯ ಕತ್ತನ್ನು ವ್ಯಾಪಿಸಿರುವ ಈ ಹಗ್ಗಗಳು ಅಂದರೆ ಸಾರಥಿಯು ಎಳೆದು ಹಿಡಿದಿರುವ ಕಡಿವಾಣದ ಹಗ್ಗಗಳು ಹಿಂದಿದ್ದರೂ ಮುಂದಿರುವ ಕುದುರೆಗಳನ್ನು ಬೇಕಾದ ಸ್ಥಳಕ್ಕೆ ಒಯ್ಯಲು ಸಮರ್ಥವಾಗಿರುತ್ತವೆ.

ರಥೇ ತಿಷ್ಠನ್ನಯತಿ ವಾಜಿನಃ ಪುರಸ್ತಾತ್ಸತೋ ಯತ್ರ ಯತ್ರ ಕಾಮಯತೇ
ಸುಷಾರಥಿಃ । ಕಲ್ಯಾಣಸಾರಥಿಃ । ಅಭೀಶೂನಾಂ ಮಹಿಮಾನಂ ಪೂಜಯಾಮಿ । ಮನಃ ಪಶ್ಚಾತ್ಸಂತೋಽನುಯಚ್ಛಂತಿ ರಶ್ಮಯಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಷಾರಥಿಃ = ಕಲ್ಯಾಣ ಸಾರಥಿಯೆಂದರ್ಥ. ಇವು ಹಿಂದಿದ್ದರೂ ಕುದುರೆಗಳ ಮನಸ್ಸನ್ನು ಮನಬಂದಂತೆ ಓಡುವುದನ್ನು ನಿಲ್ಲಿಸುತ್ತವೆ. ಮಂತ್ರದಲ್ಲಿ ಯಾವ ಸಂಬೋಧ್ಯವೂ ಇಲ್ಲದಿರುವುದರಿಂದ ಪನಾಯತ ಎಂಬುದಕ್ಕೆ ಪುರುಷವ್ಯತ್ಯಯದಿಂದ ಪೂಜಯಾಮಿ = ಪೂಜಿಸುತ್ತೇನೆ ಎಂದು ಅರ್ಥವನ್ನು ಕಲ್ಪಿಸಿರುತ್ತಾರೆ.

ಧನುರ್ಧನ್ವತೇರ್ಗತಿಕರ್ಮಣೋ ವಧಕರ್ಮಣೋ ವಾ ।
ಧನ್ವಂತ್ಯಸ್ಮಾದಿಷವಃ । ತಸ್ಯೈಷಾ ಭವತಿ ॥ ೧೬ ॥

ಕ್ರಮಪ್ರಾಪ್ತದ ಧನುಃ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಗತ್ಯರ್ಥವನ್ನು ಅಥವಾ ವಧಾರ್ಥವನ್ನು ಕೊಡುವ ಧವಿಧಾತುವಿಗೆ ಬಹುಳಗ್ರಹಣದಿಂದ ಉಸಿ ಪ್ರತ್ಯಯ. ಇದಿತ್ತಾದುದರಿಂದ ನುಮ್ ಧಾತುವಕಾರಕ್ಕೆ ಲೋಪಬಂದು ಧನುಃ ಎಂದಾಗಿದೆ. ಇದರಿಂದ ಬಾಣಗಳು ಹೊರಡುತ್ತವೆ. ಅಥವಾ ಇದರಿಂದ ಶತ್ರುಗಳನ್ನು ಕೊಲ್ಲುತ್ತಾರೆ. ಎಂದರ್ಥವಾಗುತ್ತದೆ. ಬಿಲ್ಲು ಯುದ್ಧದಲ್ಲಿ ಪ್ರಧಾನ ಸಾಧನವಾಗಿರುತ್ತದೆ. ಮುಂದು ಹೇಳುವ ಮಂತ್ರವು ಈ ಧನುಸ್ಸಿನ ಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಹದಿನಾರನೆಯ ಖಂಡ ಮುಗಿದಿದೆ.

## ಅಥ ಸಪ್ತದಶ ಖಂಡಃ

### ಹದಿನೇಳನೆಯ ಖಂಡವು

ಧನ್ವನಾ ಗಾ ಧನ್ವನಾಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ । ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾ ಸರ್ವಾಃ ಪ್ರದಿಶೋ ಜಯೇಮ ॥ (ಋ. ಸಂ. ೬-೭೫-೨) ॥ ಇತಿ ಸಾ ನಿಗದವ್ಯಾಖ್ಯಾತಾ ಸಮದಃ ಸಮದೋ ವಾತ್ತೇಃ ಸಂಮದೋ ವಾ ಮದತೇರ್ಜ್ಯಾ ಜಯತೇರ್ವಾ ಜಿನಾತೇರ್ವಾ ಪ್ರಜಾವಯತೀಷೂನಿತಿ ವಾ ತಸ್ಯಾ ಏಷಾ ಭವತಿ ॥ ೧೭ ॥

ಧನ್ವನಾ ಗಾ ಧನ್ವನಾಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ
ಜಯೇಮ ॥ ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾ
ಸರ್ವಾಃ ಪ್ರದಿಶೋ ಜಯೇಮ ॥

(ಋ – ಸಂ – ೫ – ೧ – ೧೯)

ಧನುಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ನಾವು ಧನುಸ್ಸಿನಿಂದಲೇ ಶತ್ರುಗಳ ಗೋವುಗಗಳನ್ನು ಜಯಿಸುತ್ತೇವೆ. ಧನುಸ್ಸಿನಿಂದಲೇ ಯುದ್ಧದಲ್ಲಿ ಜಯಸುತ್ತೇವೆ. ಧನುಸ್ಸಿನಿಂದಲೇ ಉದ್ಧತರಾದ ದಾರುಣಮದವುಳ್ಳ ಶತ್ರುಸೇನೆಯನ್ನು ಜಯಸುತ್ತೇವೆ. ಹೆಚ್ಚೇನು ಧನಸ್ಸು ಶತ್ರುವಿನ ಕಾಮವನ್ನು ವ್ಯರ್ಥವನ್ನಾಗಿ ಮಾಡಲಿ ಶತ್ರುವು ವಿಫಲನಾಗಿ ಓಡಿಹೋದಾಗ ಧನುಸ್ಸಿನಿಂದ ನಾವು ದಿಕ್ಕು ವಿದಿಕ್ಕುಗಳನ್ನು ಜಯಸುತ್ತೇವೆ.

ಇತಿ ಸಾ ನಿಗದವ್ಯಾಖ್ಯಾತಾ । ಸಮದಃ— ಸಮದೋವಾತ್ತೇಃ ।
ಸಂಮದೋ ವಾ ಮದತೇಃ ॥

ಮಂತ್ರಾರ್ಥ ಸುಲಭವಾದುದರಿಂದ ವ್ಯಾಖ್ಯಾನ ಮಾಡಿದಂತೆಯೇ ಎಂದು ತಿಳಿಸುತ್ತಾರೆ. ಸಮದಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಸಮದಶಬ್ದವು ಅದ— ಭಕ್ಷಣೇ ಧಾತುವಿನಿಂದ ನಿಷ್ಪನ್ನವಾಗಿದೆ. ಸಮ್ ಉಪಸರ್ಗ. ಒಬ್ಬರನ್ನೊಬ್ಬರು ತಿನ್ನುವಂತೆ ಯುದ್ಧಮಾಡುತ್ತಾರೆ. ಸಂಮದ ಪದವು ಸಮ್ ಉಪಸರ್ಗವಿರುವಾಗ ಮದೀ — ಹರ್ಷೇ ಧಾತುವಿನಿಂದ ನಿಷ್ಪನ್ನವಾಗಿದೆ. ಪರಸ್ಪರ ಸಂತುಷ್ಟರಾಗಿ ಯುದ್ಧಮಾಡುವವರು ಎಂದರ್ಥ.

ಜ್ಯಾ ಜಯತೇರ್ವಾ, ಜಿನಾತೇರ್ವಾ, ಪ್ರಜಾವಯತೀಷೂನಿತಿ ವಾ ।
ತಸ್ಯಾ ಏಷಾ ಭವತಿ ॥ ೧೭ ॥

ಕ್ರಮಪ್ರಾಪ್ತವಾದ ಜ್ಯಾ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಜ್ಯಾ ಅಂದರೆ ಬಿಲ್ಲಿನ ಹಗ್ಗ. ಜಿ—ಜಯೇ ಧಾತುವಿ

ನಿಂದ ಇದು ನಿಷ್ಪನ್ನವಾಗಿದೆ. ಅಥವಾ ಜ್ಯಾ ಧಾತುವಿನಿಂದಲೇ ಆಗಿದೆ. ಇದರಿಂದ ಶತ್ರುಗಳನ್ನು ಜಯಿಸುತ್ತಾರೆ ಎಂದರ್ಥ. ಇದಕ್ಕೆ ಮೌರ್ವೀ ಎಂದು ಕರೆಯುತ್ತಾರೆ. ಮುಂದೆ ಹೇಳುವ ಮಂತ್ರವು ಜ್ಯಾಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡ ಸಮಾಪ್ತವಾಗಿದೆ.

## ಅಥ ಅಷ್ಟಾದಶ ಖಂಡಃ

## ಹದಿನೆಂಟನೆಯ ಖಂಡವು

ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿಷಸ್ವಜಾನಾ। ಯೋಷೇವ ಶಿಂಕ್ತೇ ವಿತತಾದಿ ಧನ್ವನ್ ಜ್ಯಾ ಇಯಂ ಸಮನೇ ಪಾರಯಂತೀ॥ (ಋ- ಸಂ. ೭-೭೫-೩) ವಕ್ಷ್ಯಂತೀವಾಗಚ್ಛತಿ ಕರ್ಣಂಪ್ರಿಯಮಿವ ಸಖಾಯಮಿಷುಂ ಪರಿಷ್ವಜಮಾನಾ ಯೋಷೇವ ಅಂಕ್ತೇ ಶಬ್ದಂ ಕರೋತಿ ವಿತತಾಧಿ ಧನುಷಿ ಜ್ಯೇಯಂ ಸಮನೇ ಸಂಗ್ರಾಮೇ ಪಾರಯಂತಿ ಪಾರಂ ನಯಂತೀಷುರಿಷತೇರ್ಗತಿ-ಕರ್ಮಣೋ ವಧಕರ್ಮಣೋ ವಾ ತಸ್ಯೈಷಾ ಭವತಿ ॥ ೧೮ ॥

ವಕ್ಷ್ಯಂತೀ ವೇದಾಗನಿಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿ-
ಷಸ್ವಜಾನಾ । ಯೋಷೇವ ಶಿಂಕ್ತೇ ಪಿತತಾಧಿಧನ್ವನ್ ಜ್ಯಾ
ಇಯಂ ಸಮನೇ ಪಾರಯಂತೀ ॥

(ಋ. ಸಂ. ೬–೧–೧೯)

ಜ್ಯಾಸ್ತುತಿಯನ್ನು ಹೇಳುವ ಮಂತ್ರವನ್ನು ಉದಾಹರಿಸುತ್ತಾರೆ. ಕಾಮಿನಿಯು ಇಷ್ಟಪುರುಷನಿಗೆ ರಹಸ್ಯವನ್ನು ಹೇಳುವಂತೆ ಕಿವಿಯವರೆಗೆ ಸೆಳೆಯಲ್ಪಡುತ್ತದೆ. ಧನುರ್ಧಾರಿಯಿಂದ ಮಧ್ಯಪ್ರದೇಶವು ಎಳೆಯಲ್ಪಟ್ಟು ಬಾಣ ಜೋಡಿಸಲ್ಪಡುತ್ತದೆ. ಸ್ತ್ರೀಯು ಪ್ರಿಯತಮನನ್ನು ಆಲಿಂಗಿಸುವಂತೆ ಬಾಣವನ್ನು ಆಲಿಂಗಿಸುತ್ತದೆ. ಪ್ರೀತಿಯಿಂದ ಪುರುಷನು ಸೆಳೆಯುವಾಗ ಪ್ರಿಯತಮೆಯು ಅವ್ಯಕ್ತಸ್ವರವನ್ನು ಮಾಡುವಂತೆ, ಧನುಸ್ಸಿನಲ್ಲಿ ಹೆದೆಯೇರಿಸಿದ ಈ ಹಗ್ಗವು ಶಬ್ದಮಾಡುತ್ತಾ ಯುದ್ಧದಲ್ಲಿ ಶತ್ರುನಾಶವನ್ನು ಮಾಡಲಿ.

ವಕ್ಷ್ಯಂತೀವಾಗಚ್ಛತಿ ಕರ್ಣಂ ಪ್ರಿಯಮಿವ ಸಖಾಯಮಿಷುಂ ಪರಿಷ್ವ-
ಜಮಾನಾ ಯೋಷೇವ ಶಿಂಕ್ತೇ ಶಬ್ದಂ ಕರೋತಿ ವಿತತಾಧಿಧನುಷಿ
ಜ್ಯಾ ಇದಂ ಸಮುಯೇ ಪಾರಯಂತೀ ಪಾರಂ ನಯಂತೀ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪ್ರಿಯತಮೆಯು ಕಿವಿಯಲ್ಲಿ ರಹಸ್ಯ ಹೇಳುವಂತೆ ಕಿವಿಯವರೆಗೆ ಹೋಗುತ್ತದೆ. ಆಲಿಂಗಿಸಲ್ಪಡುವ ಸ್ತ್ರೀಯೂ ಶಬ್ದಮಾಡುವಂತೆ ಇದೂ ಶಬ್ದಮಾಡುತ್ತದೆ. ಧನುಸ್ಸಿನಲ್ಲಿ ವಿಶಾಲವಾಗಿದ್ದು ಇದು ಯುದ್ಧವನ್ನು ಕೊನೆಗಾಣಿಸಲಿ.

ಇಷುರೀಷತೇರ್ಗತಿಕರ್ಮಣೋ ವಧಕರ್ಮಣೋವಾ ।
ತಸ್ಮೈಷಾ ಭವತಿ ॥ ೧೮ ॥

ಕ್ರಮಪ್ರಾಪ್ತವಾದ ಇಷುಪದದ ನಿರ್ವಚನವನ್ನು ಹೇಳುತ್ತಾರೆ. ಇಷುವೆಂದರೆ ಬಾಣ. ಈಶ-ಗತಿಹಿಂಸಾದರ್ಶನೇಷು ಎಂಬ ಧಾತುವಿಗೆ ಉ ಪ್ರತ್ಯಯ ಬಂದಾಗ ಉಪಧೆಗೆ ಹ್ರಸ್ವ. ಶತ್ರುಗಳನ್ನು ಕುರಿತು ಹೋಗುವುದು ಅಥವಾ ಅವರನ್ನು ಕೊಲ್ಲುವುದು ಬಾಣ. ಮುಂದೆ ಹೇಳುವ ಮಂತ್ರವು ಇಷು ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಹದಿನೆಂಟನೆಯಖಂಡ ಸಮಾಪ್ತವಾಗಿದೆ.

---

## ಅಥ ಏಕೋನವಿಂಶತಿಃ ಖಂಡಃ

## ಹತ್ತೊಂಬತ್ತನೆಯ ಖಂಡವು

ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ । ಯತ್ರಾ ನರ�ः ಸಂ ಚ ವಿಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್ ।.( ಋ. ಸಂ. ೬ - ೭೫ - ೧೧ ) ಸುಪರ್ಣಂ ವಸ್ತ ಇತಿ ವಾಜಾನಭಿಪ್ರೇತ್ಯ ಮೃಗಮಯೋಽಸ್ಯಾ ದಂತೋ ಮೃಗಯತೇರ್ವಾ ಗೋಭಿಃ ಸಂನದ್ಧಾಪತತಿ ಪ್ರಸೂತೇತಿ ವ್ಯಾಖ್ಯಾತಂ (ನಿರು . ೨ . ೫) ಯತ್ರ ನರಾः ಸಂದ್ರವಂತಿಚ ವಿದ್ರವಂತಿ ಚ ತತ್ರಾಸ್ಮಭ್ಯಮಿಷವಃ ಶರ್ಮ ಯಚ್ಛಂತು ಶರಣಂ ಸಂಗ್ರಾಮೇಷ್ವಶ್ವಾಜನೀಂ ಕಶೇತ್ಯಾಹುಃ ಕಶಾ ಪ್ರಕಾಶಯತಿ ಭಯಮಶ್ವಾಯ ಕೃಷ್ಯತೇರ್ವಾಣೂ ಭಾವಾದ್ವಾಕ್ ಪುನಃ ಪ್ರಕಾಶಯತ್ಯರ್ಥಾನ್ ಖಶಯಾ ಕ್ರೋಶತೇರ್ವಾಕಶಾಯಾ ಏಷಾ ಭವತಿ ॥ ೧೯ ॥

ಸುಪರ್ಣಂ ವಸ್ತೇ ಮೃಗೋ ಅಸ್ಯಾದಂತೋ ಗೋಭಿಃ ಸನ್ನದ್ಧಾ
ಪತತಿ ಪ್ರಸೂತಾ ॥ ಯತ್ರಾ ನರಃ ಸಂ ಚ ವಿಚ ದ್ರವಂತಿ ತತ್ರಾಸ್ಮ-
ಭ್ಯಮಿಷವಃ ಶರ್ಮ ಯಂಸನ್ ॥

(ಯ. ಸಂ. ೫-೧-೨೧)

ನಿಂದ ಇದು ನಿಷ್ಪನ್ನವಾಗಿದೆ. ಅಥವಾ ಜ್ಯಾ ಧಾತುವಿನಿಂದಲೇ ಆಗಿದೆ. ಇದರಿಂದ ಶತ್ರುಗಳನ್ನು ಜಯಿಸುತ್ತಾರೆ ಎಂದರ್ಥ. ಇದಕ್ಕೆ ಮೌರ್ವೀ ಎಂದು ಕರೆಯುತ್ತಾರೆ. ಮುಂದೆ ಹೇಳುವ ಮಂತ್ರವು ಜ್ಯಾಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡ ಸಮಾಪ್ತವಾಗಿದೆ.

---

## ಅಥ ಅಷ್ಟಾದಶ ಖಂಡಃ

## ಹದಿನೆಂಟನೆಯ ಖಂಡವು

ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿಷಸ್ವಜಾನಾ । ಯೋಷೇವ ಶಿಂಕ್ತೇ ವಿತತಾದಿ ಧನ್ವನ್ ಜ್ಯಾ ಇಯಂ ಸಮನೇ ಪಾರಯಂತೀ ॥ (ಋ- ಸಂ. ೭-೭೫-೩) ವಕ್ಷ್ಯಂತೀವಾಗಚ್ಛತಿ ಕರ್ಣಂಪ್ರಿಯಮಿವ ಸಖಾಯಮಿಷುಂ ಪರಿಷ್ವಜಮಾನಾ ಯೋಷೇವ ಅಂಕ್ತೇ ಶಬ್ದಂ ಕರೋತಿ ವಿತತಾಧಿ ಧನುಷಿ ಜ್ಯೇಯಂ ಸಮನೇ ಸಂಗ್ರಾಮೇ ಪಾರಯಂತಿ ಪಾರಂ ನಯಂತೀಷುರಿಷತೇರ್ಗತಿ-ಕರ್ಮಣೋ ವಧಕರ್ಮಣೋ ವಾ ತಸ್ಯೈಷಾ ಭವತಿ ॥ ೧೮ ॥

ವಕ್ಷ್ಯಂತೀ ವೇದಾಗನಿಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿ-
ಷಸ್ವಜಾನಾ । ಯೋಷೇವ ಶಿಂಕ್ತೇ ಪಿತತಾಧಿಧನ್ವನ್ ಜ್ಯಾ
ಇಯಂ ಸಮನೇ ಪಾರಯಂತೀ ॥

(ಋ. ಸಂ. ೫–೧–೧೯)

ಜ್ಯಾಸ್ತುತಿಯನ್ನು ಹೇಳುವ ಮಂತ್ರವನ್ನು ಉದಾಹರಿಸುತ್ತಾರೆ. ಕಾಮಿನಿಯು ಇಷ್ಟಪುರುಷನಿಗೆ ರಹಸ್ಯವನ್ನು ಹೇಳುವಂತೆ ಕಿವಿಯವರೆಗೆ ಸೆಳೆಯಲ್ಪಡುತ್ತದೆ. ಧನುರ್ಧಾರಿಯಿಂದ ಮಧ್ಯಪ್ರದೇಶವು ಎಳೆಯಲ್ಪಟ್ಟು ಬಾಣ ಜೋಡಿಸಲ್ಪಡುತ್ತದೆ. ಸ್ತ್ರೀಯು ಪ್ರಿಯತಮನನ್ನು ಆಲಿಂಗಿಸುವಂತೆ ಬಾಣವನ್ನು ಆಲಿಂಗಿಸುತ್ತದೆ. ಪ್ರೀತಿಯಿಂದ ಪುರುಷನು ಸೆಳೆಯುವಾಗ ಪ್ರಿಯತಮೆಯು ಅವ್ಯಕ್ತಸ್ವರವನ್ನು ಮಾಡುವಂತೆ, ಧನುಸ್ಸಿನಲ್ಲಿ ಹೆದೆಯೇರಿಸಿದ ಈ ಹಗ್ಗವು ಶಬ್ದಮಾಡುತ್ತಾ ಯುದ್ಧದಲ್ಲಿ ಶತ್ರುನಾಶವನ್ನು ಮಾಡಲಿ.

ವಕ್ಷ್ಯಂತೀವಾಗಚ್ಛತಿ ಕರ್ಣಂ ಪ್ರಿಯಮಿವ ಸಖಾಯಮಿಷುಂ ಪರಿಷ್ವ-
ಜಮಾನಾ ಯೋಷೇವ ಶಿಂಕ್ತೇ ಶಬ್ದಂ ಕರೋತಿ ವಿತತಾಧಿಧನುಷಿ
ಜ್ಯಾ ಇದಂ ಸಮಯೇ ಪಾರಯಂತೀ ಪಾರಂ ನಯಂತೀ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪ್ರಿಯತಮೆಯು ಕಿವಿಯಲ್ಲಿ ರಹಸ್ಯ ಹೇಳುವಂತೆ ಕಿವಿಯವರೆಗೆ ಹೋಗುತ್ತದೆ. ಆಲಿಂಗಿಸಲ್ಪಡುವ ಸ್ತ್ರೀಯೂ ಶಬ್ದಮಾಡುವಂತೆ ಇದೂ ಶಬ್ದಮಾಡುತ್ತದೆ. ಧನುಸ್ಸಿನಲ್ಲಿ ವಿಶಾಲವಾಗಿದ್ದು ಇದು ಯುದ್ಧವನ್ನು ಕೊನೆಗಾಣಿಸಲಿ.

ಇಷುರೀಷತೇರ್ಗತಿಕರ್ಮಣೋ ವಧಕರ್ಮಣೋವಾ ।
ತಸ್ಯೈಷಾ ಭವತಿ ॥ ೧೮ ॥

ಕ್ರಮಪ್ರಾಪ್ತವಾದ ಇಷುಪದದ ನಿರ್ವಚನವನ್ನು ಹೇಳುತ್ತಾರೆ. ಇಷುವೆಂದರೆ ಬಾಣ. ಈಶ-ಗತಿಹಿಂಸಾದರ್ಶನೇಷು ಎಂಬ ಧಾತುವಿಗೆ ಉ ಪ್ರತ್ಯಯ ಬಂದಾಗ ಉಪಧೆಗೆ ಹ್ರಸ್ವ. ಶತ್ರುಗಳನ್ನು ಕುರಿತು ಹೋಗುವುದು ಅಥವಾ ಅವರನ್ನು ಕೊಲ್ಲುವುದು ಬಾಣ. ಮುಂದೆ ಹೇಳುವ ಮಂತ್ರವು ಇಷು ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಹದಿನೆಂಟನೆಯಖಂಡ ಸಮಾಪ್ತವಾಗಿದೆ.

---

## ಅಥ ಏಕೋನವಿಂಶತಿಃ ಖಂಡಃ

### ಹತ್ತೊಂಬತ್ತನೆಯ ಖಂಡವು

ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ । ಯತ್ರಾ ನರಃ ಸಂ ಚ ವಿಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್ । ( ಋ. ಸಂ. ೬ - ೭೫ - ೧೧ ) ಸುಪರ್ಣಂ ವಸ್ತ ಇತಿ ವಾಜಾನಭಿಪ್ರೇತ್ಯ ಮೃಗಮಯೋಽಸ್ಯಾ ದಂತೋ ಮೃಗಯತೇರ್ವಾ ಗೋಭಿಃ ಸಂನದ್ಧಾಪತತಿ ಪ್ರಸೂತೇತಿ ವ್ಯಾಖ್ಯಾತಂ (ನಿರು . ೨ . ೫) ಯತ್ರ ನರಾಃ ಸಂದ್ರವಂತಿಚ ವಿದ್ರವಂತಿ ಚ ತತ್ರಾಸ್ಮಭ್ಯಮಿಷವಃ ಶರ್ಮ ಯಚ್ಛಂತು ಶರಣಂ ಸಂಗ್ರಾಮೇಷ್ವಶ್ವಾಜನೀಂ ಕಶೇತ್ಯಾಹುಃ ಕಶಾ ಪ್ರಕಾಶಯತಿ ಭಯಮಶ್ವಾಯ ಕೃಷ್ಯತೇರ್ವಾಣೂ ಭಾವಾದ್ವಾಕ್ ಪುನಃ ಪ್ರಕಾಶಯತ್ಯರ್ಥಾನ್ ಖಶಯಾ ಕ್ರೋಶತೇರ್ವಾಕಶಾಯಾ ಏಷಾ ಭವತಿ ॥ ೧೯ ॥

ಸುಪರ್ಣಂ ವಸ್ತೇ ಮೃಗೋ ಅಸ್ಯಾದಂತೋ ಗೋಭಿಃ ಸನ್ನದ್ಧಾ
ಪತತಿ ಪ್ರಸೂತಾ ॥ ಯತ್ರಾ ನರಃ ಸಂ ಚ ವಿಚ ದ್ರವಂತಿ ತತ್ರಾಸ್ಮ-
ಭ್ಯಮಿಷವಃ ಶರ್ಮ ಯಂಸನ್ ॥

(ಯ. ಸಂ. ೫-೧-೨೧)

ಇಷುಸ್ತುತಿಯನ್ನು ವಿವರಿಸುವ ಮಂತ್ರವನ್ನು ವಿವರಿಸುತ್ತಾರೆ. ಈ ಬಾಣವು ಶೋಭನಪಕ್ಷವನ್ನು ಧರಿಸಿ ಅದರಿಂದ ಅರ್ಧ ಮುಚ್ಚಿರುತ್ತದೆ. ಇದಕ್ಕೆ ಮೃಗಮಯ ದಂತವಿರುತ್ತದೆ. ಮೌರ್ವಿಯಿಂದ ಸಂನದ್ಧವಾಗಿರುತ್ತದೆ. ಬಿಲ್ಲಾಳುವಿನಿಂದ ಬಿಡಲ್ಪಟ್ಟು ಕೆಳಗೆ ಬೀಳುತ್ತದೆ. ಯಾವ ಯುದ್ಧರಂಗದಲ್ಲಿ ಭಟರು ಒಟ್ಟಾಗಿಯೂ ಬೇರೆಯಾಗಿಯೂ ಪಲಾಯನಮಾಡುವರೋ ಅಲ್ಲಿ ನಮ್ಮ ಬಾಣಗಳು ಜಯನಿಮಿತ್ತವಾದ ಸುಖವನ್ನು ಕೊಡಲಿ.

**ಸುಪರ್ಣಂ ವಸ್ತೇ ಇತಿ ವಾಜಾನಭಿಪ್ರೇತ್ಯ । ಮೃಗಮಯೋಽಸ್ಯಾ-ದಂತೋ, ಮೃಗಯತೇರ್ವಾ ॥ "ಗೋಭಿಃ ಸನ್ನದ್ಧಾ ಪತತಿ ಪ್ರಸೂತಾ" ಇತಿ ವ್ಯಾಖ್ಯಾತಂ । ಯತ್ರ ನರಾಃ ಸಂದ್ರವಂತಿ ಚ ವಿದ್ರವಂತಿ ಚ ತತ್ರಾಸ್ಮಭ್ಯಮಿಷವಃ ಶರ್ಮ ಯಚ್ಛಂತು ಶರಣಂ ಸಂಗ್ರಾಮೇಷು ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ವಾಜ ಎಂದರೆ ಪಕ್ಷ. ಗರಿ. " ಪಕ್ಷೋವಾಜ ಸ್ತ್ರೀಷೂತ್ತರೇ " ಎಂದು ಅಮರ. ಇದು ದಂತ ಅಂದರೆ ಅಗ್ರಭಾಗ ಮೃಗಮಯವಾಗಿರುತ್ತದೆ. ಅಥವಾ ಶತ್ರುಗಳನ್ನು ಹುಡುಕಿಹೋಗುವುದು. ಪಾಠಮಾತ್ರದಿಂದ ಅರ್ಥವಾಗುವುದರಿಂದ ವ್ಯಾಖ್ಯಾತಂ ಎಂದಿರುತ್ತಾರೆ.

**ಅಶ್ವಾಜನೀಂ ಕಶೇತ್ಯಾಹುಃ । ಕಶಾ-ಪ್ರಕಾಶಯತಿ ಭಯಮಶ್ವಾಯ । ಕೃಷ್ಯತೇರ್ವಾ ಅಣೂಭಾವಾತ್ ॥**

ಪ್ರತೋದವೆಂಬುದೂ ಯುದ್ಧಾಂಗವಾಗಿದೆ. ಅದನ್ನು ಅಶ್ವಾಜನೀ ಎಂಬ ಶಬ್ದದಿಂದ ಹೇಳಿ ಅದರ ನಿರ್ವಚನವನ್ನು ತೋರಿಸುತ್ತಾರೆ. ಅಶ್ವಾಜನೀ ಎಂಬುದು ಕ್ರಮಪ್ರಾಪ್ತವಾಗಿದೆ. ಅದನ್ನು ಕಶಾ ಅಂದರೆ ಚಾವಟಿಯೆನ್ನುತ್ತಾರೆ. ಅಶ್ವಾನಾಂ ಅಜನೀ. ಅಶ್ವಾಜನೀ. ಅಜ–ಗತಿಕ್ಷೇಪಣಯೋಃ. ಧಾತು. ಲ್ಯುಟಪ್ರತ್ಯಯಕ್ಕೆ ಅನಾದೇಶ. ಸ್ತ್ರೀತ್ವದಲ್ಲಿ ಙೀಪ್. ಅಶ್ವಗಳನ್ನು ಪ್ರೇರೇಪಿಸುವುದು. ಕಶಾಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಅಶ್ವಕ್ಕೆ ಭಯವನ್ನು ತೋರಿಸುವುದು ಕಶಾ. ಕಾಶೃ–ದೀಪ್ತೌ. ಧಾತು. ಣಿಜರ್ಥತೋರುವಾಗ ಅಚ್‌ಪ್ರತ್ಯಯ. ಛಾಂದಸವಾಗಿ ಆಕಾರಕ್ಕೆ ಹ್ರಸ್ವ. ಅಥವಾ ಕೃಷ–ವಿಲೇಖನೇ ಧಾತು. ಇದರಿಂದ ಕಶಾಶಬ್ದವಾಗಿದೆ. ಇದು ಅತಿ ಚಿಕ್ಕದಾದ ಚರ್ಮದ ಬಾರಿನಿಂದ ಕೂಡಿರುತ್ತದೆ.

**ವಾಕ್ ಪುನಃ—ಪ್ರಕಾಶಯತ್ಯರ್ಥಾನ್ ॥**

ವಾಕ್‌ಶಬ್ದವೂ ಕೂಡಾ ಕಶಾರ್ಥವನ್ನು ತಿಳಿಸುತ್ತದೆ. ಇದೂ ಕೂಡಾ ಅರ್ಥವನ್ನು ಪ್ರಕಾಶಿಸುತ್ತದೆ. ಆದುದರಿಂದ ಹಿಂದಿನಂತೆಯೇ ಪ್ರಕ್ರಿಯಾ.

**ಖಶಯಾ । ಕ್ರೋಶತೇರ್ವಾ ॥**

ಅಥವಾ ಖಶಯಾ ಎಂಬುದು ವರ್ಣವ್ಯತ್ಯಯದಿಂದ ಕಶಾ ಎಂದಾಗಿದೆ. ವಾಗರ್ಥದಲ್ಲಿ ಖೇ—ಮುಖಾಕಾಶದಲ್ಲಿ ಶೇತೇ—

ಮಲಗಿರುವು ಅಥವಾ ಆಶ್ರಯಿಸಿರುವುದು ಎಂದು ಅರ್ಥವಾಗುತ್ತದೆ ಅಥವಾ ಶಬ್ದವಾಗುವುದರಿಂದ ಕ್ರುಶಧಾತುವಿನಿಂದ ವಾಗರ್ಥಕ ಕಶಾ ಶಬ್ದ ನಿಷ್ಪನ್ನವಾಗಿದೆ.

ಅಶ್ವಕಶಾಯಾ ಏಷಾ ಭವತಿ ॥ ೧೯ ॥

ಮುಂದೆ ಹೇಳುವ ಮಂತ್ರವು ಅಶ್ವಕಶಾ (ಕುದುರೆಯನ್ನು ಹೊಡೆಯುವ ಬಾರಕೋಲು) ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ಹತ್ತೊಂಭತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ವಿಂಶಃ ಖಂಡಃ

## ಇಪ್ಪತ್ತನೆಯ ಖಂಡವು

ಆ ಜಂಘಂತಿ ಸಾನ್ವೇಷಾಂ ಜಘನಾಁ ಉಪ ಜಿಘ್ನತೇ । ಅಶ್ವಾಜನಿ ಪ್ರಚೇತ-ಸೋಽಶ್ವಾನ್‌ತ್ಸಮತ್ಸು ಚೋದಯ । (ಋ. ಸಂ. ೬-೭೫-೧೩) ॥ ಆಘ್ನಾತಂ ಸಾನೂ-ನ್ಯೇಷಾಂ ಸರಣಾನಿ ಸಕ್ಥೀನಿ ಸಕ್ಥಿಃ ಸಚತೇ ರಾಸಕ್ತೋಽಸ್ಮಿನ್ಕಾಯೋ ಜಘನಾನಿ ಚೋಪಘ್ನಂತಿ ಜಘನಂ ಜಂಘನ್ಯತೇರಶ್ವಾಜನಿ ಪ್ರಚೇತಸಃ ಪ್ರವೃದ್ಧಚೇತಸೋಽಶ್ವಾನ್ ಸಮತ್ಸು ಸಮರಣೇಷು ಸಂಗ್ರಾಮೇಷು ಚೋದಯೋಲೂಖಲ ಮುರುಕರಂ ವೈತತ್ತದುಲೂಖಲಮಿತ್ಯಾಚಕ್ಷತೇ ಸರೋಕ್ಷೇಣೇತಿ ಚ ಬ್ರಾಹ್ಮಣಂ ತಸ್ಯೈಷಾ ಭವತಿ ॥ ೨೦ ॥

ಆಜಘ್ನಂತಿ ಸಾನ್ವೇಷಾಂ ಜಘನಾಂ ಉಪಜಿಘ್ನತೇ । ಅಶ್ವಾಜನಿ
ಪ್ರಚೇತಸೋಽಶ್ವಾನ್‌ತ್ಸಮತ್ಸು ಚೋದಯ ॥

(ಋ. ಸಂ. ೫-೧-೨೧)

ಕಶಾಪರ್ಯಾಯಪದವಾದ ಅಶ್ವಾಜನಿ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ, ಕಶಯೇ ನೀನು ಉತ್ತಮ ಸಾರಥಿಯ ಕುದುರೆಗಳ ಉನ್ನತವಾದ ತೊಡೆಯ ಮೇಲ್ಭಾಗಗಳನ್ನು ಪುನಃಪುನಃ ಹೊಡೆಯುತ್ತಿರುವಿ. ಜಘನಪ್ರದೇಶಗಳನ್ನೂ ಕೂಡಾ ಹೊಡೆಯುತ್ತಿರುವಿ, ಆ ನೀನು ಸಮರದಲ್ಲಿ ಕುದುರೆಗಳನ್ನು ಪ್ರೇರೇಪಿಸು.

ಆಘ್ನಂತಿ ಸಾನೂನ್ಯೇಷಾಂ ಸರಣಾನಿ ಸಕ್ಥೀನಿ । ಸಕ್ಥಿಃ ಸಚತೇಃ ।
ಆಸಕ್ತೋಽಸ್ಮಿನ್ಕಾಯೋ,-ಜಘನಾನಿ ಚೋಪಘ್ನಂತಿ । ಜಘನಂ
ಜಂಘನ್ಯತೇ । ಅಶ್ವಾಜನಿ ಪ್ರಚೇತಸಃ ಪ್ರವೃದ್ಧಚೇತಸೋಽಶ್ವಾನ್
ಸಮತ್ಸು ಸಮರೇಷು ಸಂಗ್ರಾಮೇಷು ಚೋದಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಾನು ಪದಕ್ಕೆ ತೊಡೆಯ ಎತ್ತರವಾದ ಭಾಗವೆಂದರ್ಥ. ಸಕ್ಥಿಃ ಎಂದು ಶಬ್ದಾಭಿಪ್ರಾಯ ದಿಂದ ಪುಲ್ಲಿಂಗ ಹೇಳಿದೆ. ಷ ಚ-ಸೇಚನೇ ಸೇವನೇ ಚ. ಈ ಧಾತುವಿಗೆ ಕ್ಥಿನ್ ಪ್ರತ್ಯಯ ಬಂದು ಸಕ್ಥಿ ಎಂಬ ಅನ್ವರ್ಥ ನಾಮ ಬಂದಿದೆ. ಜಘನ ಪದವು ಗತ್ಯರ್ಥಕವಾದ ಹನ್ ಧಾತುವಿಗೆ ಯಙಲುಗಂತದಮೇಲೆ ಕರ್ಮಣಿಯಲ್ಲಿ ಅಚ್ ಪ್ರತ್ಯಯ ದಿಂದ ಆಗಿದೆ. ಕುಟಿಲವಾಗಿ ಹೊಂದಲ್ಪಡುವುದೆಂದರ್ಥ.

ಉಲೂಖಲ ಮುರುಕರಂ ವೋರ್ಕರಂ ವೋರ್ಧ್ವಖಂ ವಾ ॥
"ಉರು ಮೇ ಕುರ್ವಿತ್ಯಬ್ರವೀತ್ತದೂಲೂಖಲಮಭವತ್"
"ಉರುಕರಂ ವೈತದುಲೂಖಲಮಿತ್ಯಾಚಕ್ಷತೇಽಪರೋಕ್ಷೇಣ"
ಇತಿ ಚ ಬ್ರಾಹ್ಮಣಮ್ ॥ ತಸ್ಮೈಷಾ ಭವತಿ ॥ ೨೦ ॥

ಉಲೂಖಲ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಉರುಕರವೆಂಬುದು ವರ್ಣವ್ಯತ್ಯಯದಿಂದ ಉಲೂಖಲವೆಂದಾಗಿದೆ. ಇದು ಬಹ್ವನ್ನಸಂಪಾದಕವಾಗುತ್ತದೆ. ಉಲೂಖಲವೆಂದರೆ ಒರಳು. ಉರುಪೂರ್ವಪದ. ಕೃಞ್‌ಧಾತು ಉತ್ತರಪದ. ಅಥವಾ ಊರ್ಕರವೆಂಬುದು ಉಲೂಖಲವೆಂದಾಗಿದೆ. ಊರ್ಕ್ ಅಂದರೆ ಅನ್ನ (ನಿಘ. ೨-೭-೧೫) ತತ್ಕರೋತಿ. ಅನ್ನವನ್ನು ಮಾಡುವುದು. ಇದರಲ್ಲಿ ಭತ್ತ ಕುಟ್ಟಿ ಅಕ್ಕಿ ಮಾಡುವುದರಿಂದ ಅನ್ನಸಂಪಾದಕವಾಗುತ್ತದೆ. ಅಥವಾ ಊರ್ಧ್ವಖಂ ಎಂಬುದು ಉಲೂಖಲವೆಂದಾಗಿದೆ. ಮೇಲ್ಭಾಗದಲ್ಲಿ ಮಾತ್ರ ಖಾತವಾದದ್ದು ಅಂದರೆ ಕೊರೆಯಲ್ಪಟ್ಟದ್ದು. ಇದಕ್ಕೆ 'ಉರುಮೇ' ಎಂದು ಬ್ರಾಹ್ಮಣಪ್ರಮಾಣವನ್ನು ತೋರಿಸುತ್ತಾರೆ. ನನ್ನ ಮುಖವನ್ನು ವಿಸ್ತೀರ್ಣವನ್ನಾಗಿ ಮಾಡು ಎಂದು ಅದು ಕೇಳಿ ಕೊಂಡುದರಿಂದ ಉರುಕರವೆಂದಾಗಿದೆ. ಅದು ಈಗ ಪ್ರತ್ಯಕ್ಷವಾಗಿ ಉಲೂಖಲವೆಂದಾಗಿದೆ. ಮುಂದೆ ಹೇಳುವ ಮಂತ್ರವು ಉಲೂಖಲಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕವಿಂಶತಿಃ ಖಂಡಃ

### ಇಪ್ಪತ್ತೊಂದನೆಯ ಖಂಡವು

ಯಚ್ಚಿದ್ಧಿ ತ್ವಂ ಗೃಹೇಗೃಹ ಉಲೂಖಲ ಯುಜ್ಯಸೇ । ಇಹ ದ್ಯುಮತ್ತಮಂ ವದ ಜಾಯತಾಮಿವ ದುಂದುಭಿಃ ॥ (ಋ. ಸಂ. ೧-೨೮-೫) ಇತಿ ಸಾ ನಿಗದ ವ್ಯಾಖ್ಯಾತಾ ॥ ೨೧ ॥

ಯಚ್ಚಿದ್ಧಿ ತ್ವಂ ಗೃಹೇ ಗೃಹ ಉಲೂಖಲ ಯುಜ್ಯಸೇ ಇಹ
ದ್ಯುಮತ್ತಮಂ ವದ ಜಯತಾಮಿವ ದುಂದುಭಿಃ ॥

(ಋ. ಸಂ. ೧–೨–೨೮)

ಇತಿ ಸಾ ನಿಗದವ್ಯಾಖ್ಯಾತಾ ॥ ೨೧ ॥

ಉಲೂಖಲಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಉಲೂಖಲವೇ ನೀನು ಮನೆಮನೆಗಳಲ್ಲಿ ಅನ್ನ ಸಂಸ್ಕಾರಕ್ಕೋಸ್ಕರ ಕುಟ್ಟಲು ಹೊಂದಿಕೊಂಡಿರುವಿ. ಆದರೂ ವೈದಿಕಕರ್ಮದಲ್ಲಿ ನಮ್ಮ ಮನೆಯಲ್ಲಿ ಒನಕೆಯ ಪ್ರಹಾರದಿಂದ ಅಧಿಕಧ್ವನಿಯಿಂದ ಶಬ್ದಮಾಡು. ಯುದ್ಧದಲ್ಲಿ ಜಯವನ್ನು ಹೊಂದುವ ರಾಜರ ದುಂದುಭಿಗಳು ಧ್ವನಿಗೈಯುವಂತೆ ಉದ್ದೀಪ್ತನಾಗಿ ಶಬ್ದಮಾಡು. ಸುಬರ್ಥಬೋಧಕವಾದುದರಿಂದ ಪಾಠಮಾತ್ರದಿಂದಲೇ ವ್ಯಾಖ್ಯಾತವಾಗಿದೆಯೆಂದು ತಿಳಿಸುತ್ತಾರೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೊಂದನೆಯ ಖಂಡವು ಸಮಾಪ್ತವು.

---

## ಅಥ ದ್ವಾವಿಂಶತಿಃ ಖಂಡಃ

### ಇಪ್ಪತ್ತೆರಡನೆಯ ಖಂಡವು

ವೃಷಭಃ ಪ್ರಜಾಂ ವರ್ಷತೀತಿ ವಾತಿಬೃಹತಿ ರೇತ ಇತಿ ವಾ ತದ್ವೃಷಕರ್ಮಾ ವರ್ಷಣಾದ್ವೃಷಭಸ್ತಸ್ಯೈಷಾ ಭವತಿ ॥ ೨೨ ॥

ವೃಷಭಃ ಪ್ರಜಾಂ ವರ್ಷತೀತಿ ವಾ । ಅತಿ ಬೃಹತಿ ರೇತ ಇತಿ ವಾ ।
ತದ್ ವೃಷಕರ್ಮಣಾ । ವರ್ಷಣಾದ್ವೃಷಭಸ್ತಸ್ಯೈಷಾ ಭವತಿ ॥ ೨೨ ॥

ಕ್ರಮಪ್ರಾಪ್ತವಾದ ವೃಷಭಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಇದು ಪ್ರಜೋತ್ಪತ್ತಿಕಾರಣವಾದ ರೇತಸ್ಸನ್ನು ಯೋನಿಯಲ್ಲಿ ಸೇಚನ ಮಾಡುವುದರಿಂದ ವೃಷಭ ಎಂದಾಗಿದೆ. ವೃಷು = ಸೇಚನೇ ಧಾತು. "ಋಷಿವೃಷಿಭ್ಯಾಂಕಿತ್'' ಸೂತ್ರದಿಂದ ಅಭಚ್‌ಪ್ರತ್ಯಯ ಕಿತ್ತಾದ್ದರಿಂದ ಗುಣ ಬರುವುದಿಲ್ಲ. ಅಥವಾ ಯೋನಿಯಲ್ಲಿ ರೇತಸ್ಸನ್ನು ಸೇಚನ ಮಾಡಲು ತನ್ನ ಶರೀರವನ್ನು ಮೇಲಕ್ಕೆ ಉತ್ಸಾಹದಿಂದ ಎತ್ತುತ್ತದೆ. ವೃಹೂ–ಉದ್ಯಮನೇ ಧಾತು. ಇದಕ್ಕೆ ಅಭಚ್ ಪ್ರತ್ಯಯ ಬಂದಾಗ ಹಕಾರಕ್ಕೆ ಭಕಾರಾದೇಶ. ಇದು ಸಾಮಾನ್ಯ ಗಂಡುಪ್ರಾಣಿಯಲಕ್ಷಣ. ಈ ರೇತೋವರ್ಷಣಲಕ್ಷಣದಿಂದ ಎತ್ತೂ ಕೂಡಾ ಕೂಡಿರುವುದರಿಂದ ರೇತೋವರ್ಷಣಕಾರ್ಯದಿಂದ ವೃಷ ಎಂದಾಗಿ ಭಕಾರಾಧಿಕ್ಯದಿಂದ ವೃಷಭ ಎಂದಾಗಿದೆ. ಮುಂದೆ ಹೇಳುವ ಮಂತ್ರವು ವೃಷಭಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯೋವಿಂಶತಿಃ ಖಂಡಃ

### ಇಪ್ಪತ್ತಮೂರನೆಯ ಖಂಡವು

ನ್ಯಕ್ರಂದಯನ್ನುಪಯಂತ ಏನಮಮೇಹಯನ್ವೃಷಭಂ ಮಧ್ಯ ಆಜೇಃ । ನತೇ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ (ಋ. ಸಂ. ೧೦-೧೦೨-೫) ನ್ಯಕ್ರಂದಯನ್ನುಪಯಂತ ಏನಮಿತಿ ವ್ಯಾಖ್ಯಾತಮಮೇಹಯನ್ವೃಷಭಂ ಮಧ್ಯ ಆಜೇರಾಜಯನಸ್ಯಾಜವನಸ್ಯೇತಿ ವಾ ತೇನ ತಂ ಸೂಭರ್ವಂ ರಾಜಾನಂ ಭರ್ವತಿರತ್ತಿಕರ್ಮಾ ತದ್ವಾ ಸೂಭರ್ವಂ ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ ಪ್ರಧನ ಇತಿ ಸಂಗ್ರಾಮನಾಮ ಪ್ರಕೀರ್ಣಾನ್ಯಸ್ಮಿನ್ಧನಾನಿ ಭವಂತಿ ದ್ರುಘಣೋ ದ್ರುಮಮಯೋ ಘನಸ್ತತ್ರೇತಿಹಾಸ ಮಾಚಕ್ಷತೇ ಮುದ್ಗಲೋ ಭಾರ್ಮ್ಯಶ್ವ ಋಷಿರ್ವೃಷಭಂ ಚ ದ್ರುಘಣಂ ಚ ಯುಕ್ತ್ವಾ ಸಂಗ್ರಾಮೇ ವ್ಯವಹೃತ್ಯಾಜಿಂ ಜಿಗಾಯ ತದಭಿವಾದಿನ್ಯೇಷರ್ಗ್ಭವತಿ ॥ ೨೩ ॥

ನ್ಯಕ್ರಂದಯನ್ನುಪಯಂತ ಏನಮಮೇಹಯನ್ವೃಷಭಂ ಮಧ್ಯ ಆಜೇಃ । ತೇನ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ ॥

(ಋ. ಸಂ. ೮-೫-೨೦)

ವೃಷಭಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸಮೀಪಕ್ಕೆ ಬಂದಿರುವ ಜನರು ಈ ಎತ್ತನ್ನು ಫೂತ್ಕಾರ ಮಾಡುವಂತೆ ಮಾಡಿರಿ ಎಂದು ಪ್ರಚಂಡಧ್ವನಿ ಮಾಡಿದರು. ಸಂಗ್ರಾಮದ ಮಧ್ಯದಲ್ಲಿ ವಿಶ್ರಾಂತಿಗೋಸ್ಕರ ಮೂತ್ರ ಪುರೀಷಾದಿಗಳನ್ನು ಮಾಡಿಸಿದರು. ಈ ಎತ್ತಿನಿಂದ ಸುಭರ್ವ ರಾಜನನ್ನು ಯುದ್ಧದಲ್ಲಿ ಮುದ್ಗಲನಾದ ನಾನು ಜಯಿಸಿದೆನು

"ನ್ಯಕ್ರಂದನ್ನುಪಯಂತ ಏನಂ" ಇತಿ ವ್ಯಾಖ್ಯಾತಮ್ । ಅಮೇಹನ್ವೃಷಭಂ ಮಧ್ಯ ಆಜೇ—ರಾಜಯನಸ್ಯಾಜವನಸ್ಯೇತಿ ವಾ । ತೇನ ತಂ ಸೂಭರ್ವ ರಾಜಾನಂ, ಭರ್ವತಿರತ್ತಿಕರ್ಮಾ, ತದ್ವಾಸೂಧರ್ವಂ । ಸಹಸ್ರಂ । ಗವಾಂ ಮುದ್ಗಲಃ ಪ್ರಧನೇ ಜಿಗಾಯ। ಪ್ರಧನ ಇತಿ ಸಂಗ್ರಾಮನಾಮ । ಪ್ರಕೀರ್ಣಾನ್ಯಸ್ಮಿನ್ಧನಾನಿ ಭವಂತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಜಯವುಳ್ಳದ್ದು, ಅಥವಾ ಶರಪತನದ ವೇಗವುಳ್ಳದ್ದು ಸಂಗ್ರಾಮ. ಸೂಭರ್ವ ಅಂದರೆ ಒಬ್ಬ ರಾಜನು. ಅಥವಾ ಭರ್ವಧಾತುವಿಗೆ ಭಕ್ಷಣಾರ್ಥವಿರುವುದರಿಂದ ಚನ್ನಾಗಿ ತಿನ್ನಲಿರುವ ಕಡಲೆ ಮುಂತಾದವುಗಳುಳ್ಳ ಎಂದರ್ಥ. ಪ್ರಧನ ಎಂಬುದು ಯುದ್ಧದ ಹೆಸರು. ಯುದ್ಧಮಾಡುವಾಗ ಆಭರಣಾದಿಗಳು ಕಡಿದು ಚಲ್ಲಿರುವುದರಿಂದ ಅಧಿಕ ಧನವುಳ್ಳದ್ದಾಗುತ್ತದೆ.

ದ್ರುಘಣಃ ದ್ರುಮಮಯೋ ಘನಃ ॥

ಕ್ರಮ ಪ್ರಾಪ್ತವಾದ ದ್ರುಘಣಪದದ ನಿರ್ವಚನವನ್ನು ತೋರಿಸುತ್ತಾರೆ. ದ್ರುಮಮಯ ಘನವೆಂಬುದು ದ್ರುಘಣವೆಂದಾಗಿದೆ. ದ್ರು ಎಂಬುದು ಪ್ರಕೃತಿ. ದ್ರುಮಪರ್ಯಾಯವಾಚಕ ಶಬ್ದ. 'ಪಲಾಶೀದ್ರುದ್ರುಮಾಗಮಾಃ' ಎಂದು ಅಮರ. 'ತತ್ಪ್ರಕೃತ ವಚನೇ ಮಯಟ್' ಸೂತ್ರದಿಂದ ಮಯಟ್‌ಪ್ರತ್ಯಯ. ದ್ರುಮಯ ಎಂದು ರೂಪವಾದಾಗ ಮಯಟಿಗೆ ಲೋಪ. ಘನ ಎಂಬಲ್ಲಿ ಹನಧಾತು. ಅದಕ್ಕೆ ಅಪ್ ಪ್ರತ್ಯಯ ಬಂದಾಗ ಘನಾದೇಶ. "ಮೂರ್ತೌ ಘನಃ" ಎಂದು ನಿಪಾತಿತವಾಗಿದೆ. ಮೂರ್ತಿಯೆಂದರೆ ಕಾಠಿಣ್ಯ. ಕಾಠಿಣ್ಯಾರ್ಥತೋರುವಾಗ ಘನವೆಂದಾಗುತ್ತದೆ. ದ್ರುಮಮಯಶ್ಚಾಸೌ ಘನಶ್ಚ. ದ್ರುಘಣಃ ಅಂದರೆ ಗುದಿಗೆ. ಗಟ್ಟಿಯಾದ ದೊಣ್ಣೆಯಾಗುತ್ತದೆ. ಕಬ್ಬಿಣದ ಕುಸುಮಾಗಿಗೂ ಈ ಹೆಸರಿದೆ. 'ದ್ರುಘಣೋ ಮುದ್ಗರಘನೌ' ಎಂದು ಅಮರ.

ತತ್ರೇತಿಹಾಸಮಾಚಕ್ಷತೇ ||

ಪೂರ್ವೋಕ್ತವಾದ ವೃಷಭ ಮತ್ತು ಈ ದ್ರುಘಣ ಇವೆರಡರ ವಿಷಯದಲ್ಲಿ ಸ್ತುತಿಲಾಭಕ್ಕೋಸ್ಕರ ಒಂದು ಇತಿಹಾಸವನ್ನು ಹೇಳುತ್ತಾರೆ.

ಮುದ್ಗಲೋ ಭಾರ್ಮ್ಯಶ್ವಋಷಿರ್ವೃಷಭಂ ಚ ದ್ರುಘಣಂ ಚ ಯುಕ್ತ್ವಾ ಸಂಗ್ರಾಮೇ ವ್ಯವಹೃತ್ಯಾಜಿಂ ಜಿಗಾಯ | ತದಭಿವಾದಿನ್ಯೇಷರ್ಗ್ಭವತಿ || ೨೩ ||

ಮುದ್ಗಲನೆಂಬ ಭೃಮ್ಯಶ್ವಮಹರ್ಷಿಯ ಪುತ್ರನು ತನ್ನಲ್ಲಿ ಯಾವ ಹಸುವೂ ಇಲ್ಲದಿರುವುದರಿಂದ ಗಾಡಿಗೆ ಕಟ್ಟಲೂ ಎರಡನೆಯ ಎತ್ತೂ ಇಲ್ಲದೆ ಒಂದು ಎತ್ತಿನೊಡನೆ ಈ ದ್ರುಘಣವನ್ನೇ ಇನ್ನೊಂದು ಕಡೆ ಕಟ್ಟಿ ರಾಜನೊಡನೆ ಯುದ್ಧಮಾಡಿದನು. ಸಂಗ್ರಾಮದಲ್ಲಿ ವ್ಯವಹರಿಸಿ ತನ್ನ ಶಕ್ತಿಗನುಸಾರವಾಗಿ ಯುದ್ಧಮಾಡಿ ಜಯಿಸಿದನು. ಈ ಅರ್ಥವನ್ನು ಮುಂದೆ ಹೇಳುವ ಋಙ್ಮಂತ್ರವು ವಿವರಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ವಿಂಶತಿಃ ಖಂಡಃ

## ಇಪ್ಪತ್ತನಾಲ್ಕನೆಯ ಖಂಡವು

ಇಮಂ ತಂ ಪಶ್ಯ ವೃಷಭಸ್ಯ ಯುಂಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಮ್ | ಯೇನ ಜಿಗಾಯ ಶತವತ್ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು | (ಋ. ಸಂ. ೧೦-೧೦೨-೧) ಇಮಂ ತಂ ಪಶ್ಯ ವೃಷಭಸ್ಯ ಸಹಯುಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಂ ಯೇನ ಜಿಗಾಯ ಶತವತ್ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು ಪೃತನಾಜ್ಯಮಿತಿ ಸಂಗ್ರಾಮನಾಮ ಪೃತನಾನಾಮಜನಾದ್ವಾ ಜಯನಾದ್ವಾ ಮುದ್ಗಲೋ ಮುದ್ಗವಾನ್ ಮುದ್ಗಗಿಲೋ ವಾ ಮದನಂ ಗಿಲತೀತಿ ವಾ ಮದಗಿಲೋ ವಾ ಮುದಂಗಿಲೋ ವಾ ಭಾರ್ಮ್ಯಶ್ವೋ ಭೃಮ್ಯಶ್ವಸ್ಯ ಪುತ್ರೋ ಭೃಮ್ಯಶ್ವೋ ಭೃಮ್ಯಾಯತೇರ್ವಾ ತಸ್ಯೈಷಾ ಭವತಿ || ೨೪ ||

ಇಮಂ ತಂ ಪಶ್ಯ ವೃಷಭಸ್ಯ ಯುಂಜಂ ಕಾಷ್ಠಾಯಾ ಮಧ್ಯೇ
ದ್ರುಘಣಂ ಶಯಾನಂ || ಯೇನ ಜಿಗಾಯ ಶತವತ್ ಸಹಸ್ರಂ
ಗವಾಂ ಮುದ್ಗಲಃ ಪೃತನಾಜ್ಯೇಷು ||

ಮುದ್ಗಲ ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಮುದ್ಗಲ ಮಹರ್ಷಿಯನ್ನು ಕುರಿತು ಅವನ ಸ್ನೇಹಿತರು ನೀನು ಸೈನ್ಯಸಹಾಯವಿಲ್ಲದೆ ರಾಜನನ್ನು ಹೇಗೆ ಜಯಿಸಿದಿ ಎಂದು ಕೇಳಿದಾಗ ಮುದ್ಗಲನು ವಿವರಿಸುತ್ತಾನೆ. ಮುಂದಿರುವ ನನಗೆ ಸಹಾಯಕನಾದ ಎತ್ತಿನೊಡನೆ ಜೋಡಿಸಿರುವ ಮರದ ಮಧ್ಯದಲ್ಲಿ ಶತ್ರುಗಳನ್ನು ಸಂಹರಿಸಿ ಮಲಗಿರುವ ದ್ರುಘಣ ವನ್ನು ನೋಡಿರಿ. ಇದರ ಸಹಾಯದಿಂದಲೇ ಯುದ್ಧದಲ್ಲಿ ಗೋ ಸಹಸ್ರವನ್ನು ಮುದ್ಗಲನಾದ ನಾನು ಜಯಿಸಿರುತ್ತೇನೆ.

ಇಮಂ ತಂ ಪಶ್ಯ ವೃಷಭಸ್ಯ ಸಹಯುಜಂ ಕಾಷ್ಠಾಯಾ ಮಧ್ಯೇ
ದ್ರುಘಣಂ ಶಯಾನಂ | ಯೇನ ಜಿಗಾಯ ಶತವತ್ಸಹಸ್ರಂ ಗವಾಂ
ಮುದ್ಗಲಃ ಪೃತನಾಜ್ಯೇಷು ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಲಭಾರ್ಥಕವಾದುದರಿಂದ ಮಂತ್ರಾಂಶವನ್ನೇ ಅನುವಾದ ಮಾಡಿರುತ್ತಾರೆ.

ಪೃತನಾಜ್ಯಮಿತಿ ಸಂಗ್ರಾಮನಾಮ | ಪೃತನಾನಾಮಜನಾದ್ವಾ |
ಜಯನಾದ್ವಾ ||

ಮಂತ್ರದಲ್ಲಿರುವ ಕ್ಲಿಷ್ಟಶಬ್ದಗಳ ಅರ್ಥವನ್ನು ವಿವರಿಸುತ್ತಾರೆ. ಪೃತನಾಜ್ಯವೆಂದರೆ ಯುದ್ಧ. ಪೃತನಾ ಅಂದರೆ ಮನುಷ್ಯರು. ( ನಿಘ ೨ - ೩ - ೨೫ ) ಅವರು ಎಲ್ಲಿ ವಿಶೇಷವಾಗಿ ಹೋಗಿ ಸೇರುವರೋ ಅದು ಪೃತನಾಜ್ಯ. ಅಜಗತೌ ಧಾತು. ಅಥವಾ ಜಯಾಪಜಯದಿಂದ ಕೂಡಿರುವುದು. ಆಗ ಉತ್ತರ ಪದವು ಜಿ- ಜಯೇ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಯ ಬೇಕು.

ಮುದ್ಗಲೋ ಮುದ್ಗವಾನ್ | ಮುದ್ಗಗಿಲೋ ವಾ | ಮದನಂ
ಗಿಲತೀತಿ ವಾ | ಮದಂಗಿಲೋ ವಾ | ಮುದಂಗಿಲೋ ವಾ ||

ಮುದ್ಗಲಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಮುದ್ಗ ಅಂದರೆ ಹೆಸರುಧಾನ್ಯ. ಅದು ಉಳ್ಳವನು ಮತ್ವರ್ಥದಲ್ಲಿ ಲ ಬರುತ್ತದೆ. ಅಥವಾ ಮುದ್ಗಗಿಲಃ ಎಂಬುದು ಮುದ್ಗಲ ಎಂದಾಗಿದೆ. ಹೆಸರುಧಾನ್ಯ ಭೋಜನವಾಗಿರುವವನು. ಅಥವಾ ಮದನಂ ಗಿಲತಿ ಇತಿ ಮುದ್ಗಲಃ. ಮದನ ಅಂದರೆ ಮನ್ಮಥ ಅವನನ್ನು ವಶವಾಗಿ ಮಾಡಿಕೊಂಡಿರುವವನು. ಜಿತೇಂದ್ರಿಯ ನೆಂದು ತಾತ್ಪರ್ಯ. ಮದನ ಶಬ್ದವೇ ಪೂರ್ವಪದ. ಗಿಲತಿ ಎಂಬುದೇ ಉತ್ತರ ಪದವೆಂದು ತಿಳಿಯಬೇಕು. ಅಥವಾ ಮದಂಗಿಲಃ ಮುದ್ಗಲಃ- ಮದವೆಂದರೆ ಉದ್ರೇಕ. ಅದನ್ನು ನುಂಗಿದವನು ಶಾಂತಸ್ವಭಾವನೆಂದರ್ಥ. ಅಥವಾ ಮುದಂಗಿಲಃ ಮುದ್ಗಲಃ || ಹರ್ಷವನ್ನು ನುಂಗಿದವನು. ಸಕಲ ವಿಷಯ ಸುಖಗಳನ್ನು ದೂರೀಕರಿಸಿದವನೆಂದರ್ಥ.

ಭಾರ್ಮ್ಯರ್ಶ್ವಃ ಭೃಮ್ಯ್ಯಶ್ವಸ್ಯ ಪುತ್ರಃ । ಭೃಮ್ಯ್ಯಶ್ವಃ ಭೃಮಯೋಽಸ್ಯಾ
ಶ್ವಾಃ । ಅಶ್ವಭರಣಾದ್ವಾ ॥

ಪೂರ್ವೋಕ್ತ ಭಾರ್ಮ್ಯರ್ಶ್ವಯಷಿಯನ್ನು ಸ್ಮರಿಸಿ ಆ ಪದದ ನಿರ್ವಚನವನ್ನು ತೋರಿಸುತ್ತಾರೆ. ಭೃಮ್ಯ್ಯಶ್ವನೆಂಬುವನು ತಂದೆ. ಅವನ ಮಗನು ಭಾರ್ಮ್ಯರ್ಶ್ವ. ಭೃಮಿಉಳ್ಳದ್ದು ಅಂದರೆ ಚಾಂಚಲ್ಯವುಳ್ಳ ಕುದುರೆಗಳನ್ನು ಧರಿಸಿದವನು ಭೃಮ್ಯ್ಯಶ್ವನು. ಭೃಧಾತುವಿಗೆ ಮಿಙ್‌ಪ್ರತ್ಯಯ ಭೃಮಿಗಳೆಂದರೆ ಕುದುರೆಗಳು.

ಪಿತುರಿತ್ಯನ್ನನಾಮ । ಪಾತೇರ್ವಾ ಪಿಬತೇರ್ವಾ ಪ್ಯಾಯತೇರ್ವಾ ।
ತಸ್ಯೈಷಾ ಭವತಿ ॥ ೨೪ ॥

ಕ್ರಮಪ್ರಾಪ್ತವಾದ ಪಿತುಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾನೆ. ಪಿತು ಎಂಬುದು ಅನ್ನನಾಮ. ಇದು ರಕ್ಷಣಾರ್ಥಕ ಪಾಧಾತುವಿನಿಂದ ನಿಷ್ಪನ್ನವಾಗಿದೆ. ಕರ್ಮಣಿಯಲ್ಲಿ ಅಥವಾ ಕರ್ತರಿಯಲ್ಲಿ ತುಪ್ರತ್ಯಯ. ಬಹುಲ ಗ್ರಹಣದಿಂದ ಧಾತುವಿನ ಆಕಾರಕ್ಕೆ ಇಕಾರ. ರಕ್ಷಿಸಲ್ಪಡುವುದು, ಅಥವಾ ಇದು ಪ್ರಾಣವನ್ನು ರಕ್ಷಿಸುತ್ತದೆ. ಅಥವಾ ಪಾನಾರ್ಥಕ ಪಾಧಾತುವಿಗೆ ತುಪ್ರತ್ಯಯ ಬಂದು ಈರೂಪವಾಗಿದೆ. ಅಥವಾ ಓಪ್ಯಾಯೀವೃದ್ಧೌ. ಈ ಧಾತುವಿನಿಂದ ನಿಷ್ಪನ್ನವಾಗಿದೆ ಬಹುಲಗ್ರಹಣದಿಂದ ಧಾತುವಿಗೆ ಪಿಭಾವ ಬರುತ್ತದೆ. ಅಭಿವರ್ಧಕವಾಗಿರುವುದು ಅನ್ನ. ಮುಂದೆ ಹೇಳುವ ಮಂತ್ರವು ಪಿತು ಅಂದರೆ ಅನ್ನದ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ.

ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚವಿಂಶತಿ ಖಂಡಃ

### ಇಪ್ಪತ್ತೈದನೆಯ ಖಂಡವು

ಪಿತುಂ ನುಸ್ತೋಷಂ ಮಹೋ ಧರ್ಮಾಣಂ ತವಿಷೀಮ್ । ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್' । (ಋ. ಸಂ. ೧-೧೮೭-೧) ॥ ತಂ ಪಿತುಂ ಸ್ತೌಮಿ ಮಹತೋ ಧಾರಯಿತಾರಂ ಬಲಸ್ಯ ತವಿಷೀತಿ ಬಲನಾಮ ತವತೇರ್ವೃದ್ಧಿ-ಕರ್ಮಣೋ ಯಸ್ಯ ತ್ರಿತ ಓಜಸಾ ಬಲೇನ ತ್ರಿತಸ್ತ್ರಿಸ್ಥಾನ ಇಂದ್ರೋ ವೃತ್ರಂ ವಿಪರ್ವಾಣಂ ವ್ಯರ್ದಯತಿ ನದ್ಯೋ ವ್ಯಾಖ್ಯಾತಾಸ್ತಾ ಸಾಮೇಷಾ ಭವತಿ ॥ ೨೫ ॥

ಪಿತುಂ ನ ಸ್ತೋ॑ಷಂ ಮ॒ಹೋ ಧ॒ರ್ಮಾ॑ಣಂ ತವಿ॑ಷೀಮ್ । ಯಸ್ಯ॑
ತ್ರಿ॒ತೋ ವ್ಯೋಜ॑ಸಾ ವೃ॒ತ್ರಂ ವಿಪ॑ರ್ವಮ॒ರ್ದಯ॑ತ್ ॥

(ಋ. ಸಂ. ೨-೫-೬)

ಪಿತು ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಅಧಿಕವಾದ ಬಲವನ್ನು ಧರಿಸಿರುವ ಪಾಲಕವಾ ಅನ್ನವನ್ನು ಸ್ತುತಿಸುತ್ತೇನೆ. ಯಾವ ಅನ್ನದ ಬಲದಿಂದ ಮೂರು ಸ್ಥಾನಗಳಲ್ಲಿಯೂ ಅಪ್ರತಿಹತವಾದ ಪ್ರಭಾವವುಳ್ಳ ಇಂದ್ರನು ವೃತ್ರಾಸುರನನ್ನು ಪುನರಾವರ್ತಿ ಇಲ್ಲದಂತೆ ಸಂಹರಿಸಿದನು.

ತಂ ಪಿತುಂ ಸ್ತೌಮಿ ಮಹತೋ ಧಾರಯಿತಾರಂ ಬಲಸ್ಯ, ತವಿಷೀತಿ ಬಲನಾಮ । ತವತೇರ್ವಾ ವೃದ್ಧಿಕರ್ಮಣಃ । ಯಸ್ಯ ತ್ರಿತ ಓಜಸಾ ಬಲೇನ ತ್ರಿತಸ್ತ್ರಿಸ್ಥಾನ ಇಂದ್ರೋ ವೃತ್ರಂ ವಿಪರ್ವಾಣಂ ವ್ಯರ್ದಯತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ತವಿಷೀ ಅಂದರೆ ಬಲ. ತು- ವೃದ್ಧೌ ಧಾತು ಆದಕ್ಕೆ ಟಿಷಚ್‌ಪ್ರತ್ಯಯ. ತ್ರಿತಃ = ತ್ರಿಸ್ಥಾನದಲ್ಲಿರುಪವನು ಇಂದ್ರನು.

ನದ್ಯೋ ವ್ಯಾಖ್ಯಾತಾಸ್ತಾಸಾಮೇಷಾ ಭವತಿ ॥ ೨೫ ॥

ಕ್ರಮಪ್ರಾಪ್ತವಾದ ನದೀಶಬ್ದದ ನಿರ್ವಚನವನ್ನು ತೋರಿಸುತ್ತಾರೆ. 'ನದನಾ ಭವಂತಿ ಶಬ್ದವತ್ಯಃ' (ನಿಘ ೨-೭-೨) ಎಂದು ಇದು ಹಿಂದೆ ವಾಖ್ಯಾತವಾಗಿದೆ. ಶಬ್ದಮಾಡುತ್ತಾ ಹರಿಯುವುದರಿಂದ ನದೀ ಎಂದಾಗಿದೆ. ಮುಂದೆ ಹೇಳುವ ಮಂತ್ರವು ನದೀ ಸ್ತುತಿಯನ್ನು ಪ್ರತಿಪಾದಿಸುತ್ತತೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಬತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷಡ್ವಿಂಶತಿ ಖಂಡಃ

## ಇಪ್ಪತ್ತಾರನೆಯ ಖಂಡ

ಇ॒ಮಂ ಮೇ॑ ಗಂಗೇ ಯಮುನೇ ಸರಸ್ವತಿ॒ ಶುತು॑ದ್ರಿ॒ ಸ್ತೋಮಂ॑ ಸಚತಾ ಪರು॒ಷ್ಣ್ಯಾ । ಅ॒ಸಿ॒ಕ್ನ್ಯಾ ಮ॑ರುದ್ವೃಧೇ ವಿ॒ತಸ್ತ॒ಯಾರ್ಜೀ॑ಕೀಯೇ ಶೃಣು॒ಹ್ಯಾ ಸು॒ಷೋಮ॑ಯಾ । (ಋ. ಸಂ. ೧೦-೭೫-೫) ಇಮಂ ಮೇ ಗಂಗೇ ಯಮುನೇ ಸರಸ್ವತಿ

ಶುತುದ್ರಿ ಪರುಷ್ಣಿ ಸ್ತೋಮ ಮಾಸೇವಧ್ವಮಸಿಕ್ನ್ಯಾ ಚ ಸಹ ಮರುದ್ವೃಧೇ ವಿತಸ್ತಯಾ ಚಾರ್ಜೀಕೀಯ ಆಶೃಣು ಹಿ ಸುಷೋಮಯಾ ಚೇತಿ ಸಮಸ್ತಾರ್ಥೋಽಥೈಕಪದನಿರುಕ್ತಂ ಗಂಗಾ ಗಮನಾದ್ಯಮುನಾ ಪ್ರಯುವತೀ ಗಚ್ಛತೀತಿ ವಾ ಪ್ರವಿಯುತಂ ಗಚ್ಛತೀತಿ ವಾ ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ ಶುತುದ್ರೀ ಶುದ್ರಾವಿಣೀ ಕ್ಷಿಪ್ರದ್ರಾವಿಣ್ಯಾಶು ತುನ್ನೇವ ದ್ರವತೀತಿ ವೇರಾವತೀಂ ಪರುಷ್ಣೀತ್ಯಾಹುಃ ಪರ್ವವತೀ ಕುಟಿಲಗಾಮಿನ್ಯಸಿಕ್ನ್ಯಶುಕ್ಲಾಸಿತಾ ಸಿತಮಿತಿ ವರ್ಣನಾಮ ತತ್ಪ್ರತಿಷೇಧೋಸಿತಂ ಮರುದ್ವೃಧಾಃ ಸರ್ವಾ ನದ್ಯೋ ಮರುತ ಏನಾ ವರ್ಧಯಂತಿ ವಿತಸ್ತಾ ವಿದಗ್ಧಾ ವಿವೃದ್ಧಾ ಮಹಾಕೂಲಾರ್ಜೀಕೀಯಾಂ ವಿಪಾಳಿತ್ಯಾಹುರ್ಋಜೀಕಪ್ರಭವಾ ವರ್ಜುಗಾಮಿನೀ ವಾ ವಿಪಾಡ್ವಿಪಾಟನಾದ್ವಾ ವಿಪಾಶನಾದ್ವಾ ವಿಪ್ರಾಪಣಾದ್ವಾ ಪಾಶಾ ಅಸ್ಯಾಂ ವ್ಯಪಾಶ್ಯಂತ ವಸಿಷ್ಠಸ್ಯ । ಮುಮೂರ್ಷತಸ್ತಸ್ಮಾದ್ವಿಪಾಳುಚ್ಯತೇ ಪೂರ್ವಮಾಸೀದುರಂಜಿರಾ ಸುಷೋಮಾ ಸಿಂಧುರ್ಯದೇನಾಮಭಿಪ್ರಸುವಂತಿ ನದ್ಯಃ ಸಿಂಧುಃ ಸ್ಯಂದನಾದಾಪ ಆಪ್ನೋತೇಸ್ತಾಸಾಮೇಷಾ ಭವತಿ ॥ ೨೬ ॥

ಇಮಂ ಮೇ ಗಂಗೇ ಯಮುನೇ ಸರಸ್ವತೀ ಶುತುದ್ರೀ ಸ್ತೋಮಂ
ಸಚತಾ ಪರುಷ್ಣ್ಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀ-
ಕೀಯೇ ಶೃಣುಹ್ಯಾ ಸುಷೋಮಯಾ ॥

ಒಂಭತ್ತು ನದಿಗಳನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೇ ಗಂಗೆಯೇ ಯಮುನೆಯೇ, ಸರಸ್ವತಿ, ಶುತುದ್ರಿ ನೀವು ಈ ನನ್ನ ಸ್ತೋತ್ರವನ್ನು ಸೇವಿಸಿರಿ. ಪರುಷ್ಣಿಯಿಂದ ಕೂಡಿವ ಮರುದ್ವೃಧೇ, ಅಸಕ್ನಿ, ವಿತಸ್ತಾ, ಸುಷೋಮಾ ಇವರಿಂದ ಕೂಡಿದ ಆರ್ಜೀಕೀಯ ನೀನೂ ಅಭಿಮುಖವಾಗಿದ್ದು ಕೇಳು.

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಪರುಷ್ಣಿ-
ಯಾಸ್ತೋಮಮಾಸೇವಧ್ವಂ ಅಸಿಕ್ನ್ಯಾ ಚ ಸಹ ಮರುದ್ವೃಧೇ !
ವಿತಸ್ತಯಾ ಚಾರ್ಜೀಕೀಯೇ ! ಆಶೃಣುಹಿ ಸುಷೋಮಯಾ ಚೇತಿ
ಸಮಸ್ತಾರ್ಥಃ ॥ ಅಥೈಕಪದನಿರುಕ್ತಂ—ಗಂಗಾಗಮನಾತ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಎಲ್ಲಾ ಸುಲಭಾರ್ಥಗಳಾದುದರಿಂದ ಒಂದೊಂದು ಪದದ ನಿರ್ವಚನವನ್ನು ತೋರಿಸುತ್ತಾರೆ. ಗಂಗೆಯು ವಿಶಿಷ್ಟ ಸ್ಥಾನವನ್ನು ಹೊಂದುತ್ತದೆ ಅಥವಾ ಪ್ರಾಣಿಗಳನ್ನು ವಿಶಿಷ್ಟ ಸ್ಥಾನಕ್ಕೆ ಒಯ್ಯುತ್ತದೆ. 'ಗನ್ಗಮ್ಯದ್ಯೋಃ' ಸೂತ್ರದಿಂದ ಗಮ್‌ಧಾತುವಿಗೆ ಗನ್‌ಪ್ರತ್ಯಯ ಬಂದು ಗಂಗಾ ಎಂದಾಗಿದೆ. ಗಮ್–ಧಾತು

## ಯಮುನಾ—ಪ್ರಯುವತೀ ಗಚ್ಛತೀತಿ ವಾ ಪ್ರವಿಯುತಂ ಗಚ್ಛತೀತಿ ವಾ ||

ಯಮುನಾಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಇದು ಅತಿಶಯವಾಗಿ ಇತರ ನದಿಗಳೊಡನೆ ತನ್ನ ನೀರನ್ನು ಸೇರಿಸುತ್ತದೆ. ಅಥವಾ ತರಂಗಗಳಿಂದ ಸ್ತಬ್ಧವಾಗಿ ಹೋಗುತ್ತದೆ. ಯು—ಮಿಶ್ರಣಾಮಿಶ್ರಣಯೋಃ ಧಾತುವಿನಿಂದ ಯಮುನಾಶಬ್ದ ನಿಷ್ಪನ್ನವಾಗಿದೆ.

## ಸರಸ್ವತೀ—ಸರ ಇತ್ಯುದಕನಾಮ ಸರ್ತೇಃ | ತದ್ವತೀ ||

ಸೃ—ಗತೌ ಧಾತು. ಅಸುನ್‌ಪ್ರತ್ಯಯ. ಸರಃ ಅಂದರೆ ನೀರು. ಅದು ಯಾವಾಗಲೂ ಹರಿಯುವ ಸ್ವಭಾವವುಳ್ಳದ್ದು. ವಿಶಿಷ್ಟವಾದ ನೀರಿನಿಂದ ಕೂಡಿರುವುದು ಸರಸ್ವತೀ. ರಾಜಸೂಯಪ್ರಕರಣದಲ್ಲಿ ಸರಸ್ವತೀ ನದಿಯ ವೈಶಿಷ್ಟ್ಯ ಅಭಿಷೇಕಾರ್ಥವಾದದಿಂದ ವಿವೃತವಾಗಿದೆ. "ವರುಣಸ್ಯ ವಾಽಭಿಷಿಚ್ಯಮಾನಸ್ಯೈಂದ್ರಿಯಂ ವೀರ್ಯಮಪಾಕ್ರಮತ್ | ತತ್ತ್ರೇಧಾಭವತ್ | ಭೃಗುಸ್ತೃತೀಯಮಭವಚ್ಛ್ರಾಯಂತೀಯಂ ಸರಸ್ವತೀ ತೃತೀಯಂ ಪ್ರಾವಿಶತ್ ||"

## ಶುತುದ್ರೀ—ಶುದ್ರಾವಿಣೀ—ಕ್ಷಿಪ್ರದ್ರಾವಿಣ್ಯಾ—ಶು ತುನ್ನೇವ ದ್ರವತೀತಿ ವಾ ||

ಶು ಪದವು ಕ್ಷಿಪ್ರನಾಮದಲ್ಲಿ ಪಠಿತವಾಗಿದೆ. (ನಿಘಂ—೨—೧೫—೧೫) ಶು ಅಂದರೆ ಜಾಗ್ರತೆಯಾಗಿ ಹೋಗುವ ಸ್ವಭಾವವುಳ್ಳದ್ದು. ದ್ರಾವಿಣ ಶಬ್ದಸ್ಥಾನದಲ್ಲಿ ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ತುದ್ರಾದೇಶ ಬಂದಿದೆ. ಅಥವಾ ಕ್ಷಿಪ್ರವಾಗಿ ಇದು ಹೊಡೆದಂತೆ ಹೋಗುತ್ತದೆ. ಪೂರ್ವಪದದಲ್ಲಿ ತುದಧಾತುವಿರುವಾಗ ದಕಾರಕ್ಕೆ ಲೋಪ. ದ್ರುಧಾತುವಿಗೆ ಡಟ್‌ಪ್ರತ್ಯಯ ಟಿತ್ತಾದುದರಿಂದ ಙೀಪ್.

## ಇರಾವತೀ ಪರುಷ್ಣೀತ್ಯಾಹುಃ ||

ಇರಾವತೀ ಎಂದು ಲೋಕಪ್ರಸಿದ್ಧವಾದ ನದಿಯನ್ನು ಮಂತ್ರದೃಷ್ಟೃಗಳಾದ ಋಷಿಗಳು ಈ ಮಂತ್ರದಲ್ಲಿ ಪರುಷ್ಣೀ ಎಂದು ಕರೆದಿರುತ್ತಾರೆ. ಇತಿಯೆಂಬ ನಿಪಾತದಿಂದ ಅಭಿಹಿತವಾದುದರಿಂದ ಕರ್ಮವಿಭಕ್ತಿ ದ್ವಿತೀಯಾ ಬರಲಿಲ್ಲ.

## || ಪರ್ವವತೀ—ಭಾಸ್ವತೀ | ಕುಟಿಲಗಾಮಿನೀ ||

ಪರುಷ್ಣೀಪದದ ನಿರ್ವಚನವನ್ನು ತೋರಿಸುತ್ತಾರೆ. ಪ್ರಕಾಶಮಾನವಾಗಿದ್ದರೂ ಪರ್ವತಗಳಿಂದ ಕೂಡಿರುವುದು. "ಗ್ರಂಥಿರ್ನಾ ಪರ್ವಪರುಷಃ" ಎಂದು ಅಮರ. ಇಲ್ಲಿ ಪರ್ವಪದಕ್ಕೆ ಕೌಟಿಲ್ಯವೆಂದು ಅರ್ಥ. ಅದು ಉಳ್ಳದ್ದು ಮತ್ವರ್ಥದಲ್ಲಿ. ನ ಪ್ರತ್ಯಯ ಗೌರಾದಿಗಣದಲ್ಲಿ ಪಠಿತವಾದುದರಿಂದ ಙೀಷ್ ಕುಟಿಲವಾಗಿ ಹೋಗುವುದೆಂದು ತಾತ್ಪರ್ಯ. ಕೌಟಿಲ್ಯವೇ ಇದರ ಪರ್ವವೆಂದು ತಿಳಿಯಬೇಕು.

**ಅಸಿಕ್ನೀ—ಅಶುಕ್ಲಾ—ಅಸಿತಾ । ಸಿತಮಿತಿ ವರ್ಣನಾಮ । ತತ್ಪ್ರತಿ ಷೇಧೋಽಸಿತಮ್ ॥**

ಅಸಿಕ್ನೀಪದದ ನಿರ್ವಚನವನ್ನು ತೋರಿಸುತ್ತಾರೆ. ಅದು ಬೆಳ್ಳಗಾಗಿರುವುದಿಲ್ಲ. ಸಿತಶಬ್ದ ಬಣ್ಣದ ಹೆಸರು. ಸಿತವೆಂದರೆ ಬಿಳಿಬಣ್ಣ. "ಸಿತಾಸಿತೇ ಯತ್ರ ತರಂಗಚಾಮರೇ" ಎಂದು ಪ್ರಯಾಗವನ್ನು ಅಧಿಕರಿಸಿ ಹೇಳಿದೆ. ಗಂಗಾಯಮುನೆಯರೇ ಸಿತಾಸಿತೆಯರು. 'ಅವದಾತಃ ಸಿತೋ ಗೌರಃ ' ಎಂದು ಅಮರ ಸಿತಕ್ಕೆ ವಿರುದ್ಧವಾದುದು ಅಸಿತ. ಈ ನದಿಯು ಕಪ್ಪಾದ ನೀರಿನಿಂದ ಕೂಡಿರುವುದರಿಂದ ಅಸಿಕ್ನೀ ಎಂದಾಗಿದೆ.

**ಮರುದ್ವೃಧಾಃ ಸರ್ವಾ ನದ್ಯೋ, ಮರುತಏನಾ ವರ್ಧಯಂತಿ ॥**

ಮರುತ್ಪದಕ್ಕೆ ವೃಷ್ಟಿ ವಾಯು ಅರ್ಥವಿದೆ. ಮಳೆನೀರಿನಿಂದ ಅಭಿವೃದ್ಧವಾಗುತ್ತವೆ. ಇದು ಎಲ್ಲಾ ನದಿಗಳಿಗೂ ಪ್ರತ್ಯೇಕ ವಿಶೇಷಣವಾಗುತ್ತದೆ. ನದಿಗಳು ಸಾಮಾನ್ಯವಾಗಿ ವರ್ಷಾಕಾಲದಲ್ಲಿ ತುಂಬಿ ಹರಿಯುತ್ತವೆ. ವೃಧು—ವೃದ್ಧೌ ಧಾತು. ಇಗುಪಧಜ್ಞಾ ಪ್ರೀಕಿರಃ ಕಃ ' ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ.

**ವಿತಸ್ತಾಽವಿದಗ್ಧಾ । ವಿವೃದ್ಧಾ—ಮಹಾಕೂಲಾ ॥**

ವಿಶೇಷದಿಂದ ದಗ್ಧವಾಗದಿರುವುದು ಅವಿದಗ್ಧಾ. ವೈದೇಹಕವೆಂಬ ಅಗ್ನಿಯು ಎಲ್ಲಾ ನದಿಗಳನ್ನು ಸುಟ್ಟುಹಾಕಿತು. ಆದರೆ ಈ ನದಿಯನ್ನು ಮಾತ್ರ ಸುಡಲಿಲ್ಲವೆಂದು ಸಾಮಿಧೇನೀಬ್ರಾಹ್ಮಣದಲ್ಲಿ ವಿವರಿಸಿರುತ್ತಾರೆ. ಅಥವಾ ಅತಿ ವಿಸ್ತೀರ್ಣವಾಗಿರುವುದು. ವಿತಸ್ತಾ ಅತಿವಿಸ್ತಾರವಾದುದರಿಂದಲೇ ದೊಡ್ಡ ದಡಗಳಿಂದ ಕೂಡಿರುತ್ತದೆ. ವೃದ್ಧಾ ಎಂಬುದಕ್ಕೆ ದಗ್ಧಾದೇಶ.

**ಆರ್ಜೀಕೀಯಾಂ ವಿಪಾಳಿತ್ಯಾಹುಃ ॥ ಋಜೀಕಪ್ರಭವಾ ವಾ ॥ ಋಜುಗಾಮಿನೀ ವಾ ॥**

ವಿಪಾಶಾನದಿಗೆ ಮಂತ್ರದಲ್ಲಿ ಆರ್ಜೀಕೀಯಾ ಎಂದು ಹೇಳಿದೆ. 'ವಿಪಾಶಾತು ವಿಪಾಟ್‌ಸ್ತ್ರಿಯಾಂ' ಎಂದು ಅಮರ. ಅಥವಾ ಋಜೀಕವೆಂಬುದು ಪರ್ವತ. ಅದರಿಂದ ಇದು ಹುಟ್ಟುತ್ತದೆ. 'ತತಃ ಪ್ರಭವತಿ' ಎಂದು ಅಣ್‌ಪ್ರತ್ಯಯ ಆರ್ಜೀಕಾ ಎಂದಾಗುತ್ತದೆ. ಇದರಮೇಲೆ ಸ್ವಾರ್ಥದಲ್ಲಿ ಛ ಪ್ರತ್ಯಯ ಅದಕ್ಕೆ ಈಯಾದೇಶ. ಆರ್ಜೀಕೀಯಾ ಅಥವಾ ಸರಳವಾಗಿ (ನೆಟ್ಟಗೆ) ವಕ್ರವಾಗದೆ ಹೋಗುವುದು. ಋಜುಗಾಮಿಯಾದುದರಿಂದ ಆರ್ಜೀಕೀಯಾ ಎಂದಾಗಿದೆ.

**ವಿಪಾಟ್ । ವಿಪಾಟನಾದ್ವಾ । ವಿಪಾಶನಾದ್ವಾ । ವಿಪ್ರಾಪಣಾದ್ವಾ ॥**

ಆರ್ಜೀಕೀಯದ ಪರ್ಯಾಯಪದವಾದ ವಿಪಾಟ್ ಎಂಬುದರ ನಿರ್ವಚನ ತೋರಿಸುತ್ತಾರೆ. ಇದು ಹೋಗುವಾಗ ಭೂಮಿಯನ್ನು ಸೀಳುವುದರಿಂದ ವಿಪಾಟ್ ಎಂದಾಗಿದೆ. ಪಟ—ಭೇದನೇ ಧಾತು, ಕ್ವಿಪ್ ಪ್ರತ್ಯಯ ಅಥವಾ ಪಾಪವಿಮೋಚನದಿಂದ, ಅಥವಾ ಇದರಲ್ಲಿ ವಿಮೋಚನವನ್ನು ನೋಡಿರುವುದರಿಂದ ವಿಪಾಟ್ ಎಂದಾಗಿದೆ. 'ಸತ್ಯಾಪಪಾಶ'—ಸೂತ್ರದಿಂದ ಣಿಜಂತವಾದ ವಿಪಾಶ ಶಬ್ದದಮೇಲೆ ಅಧಿಕರಣಾರ್ಥದಲ್ಲಿ ಕ್ವಿಪ್ ಬರುತ್ತದೆ. ಷತ್ವಾದಿ, ಅಥವಾ ನೀರಿನ ಆಧಿಕ್ಯವನ್ನು ಒಯ್ಯುವುದರಿಂದ ವಿಪಾಟ್. ಎಂದಾಗಿದೆ. ವಿ ಉಪಸರ್ಗ. ಪಟ—ಗತೌಧಾತು. ಇದಕ್ಕೆ ಣಿಜಂತದಮೇಲೆ ಕ್ವಿಪ್ ಉಪಧಾವೃದ್ಧಿ.

ಪಾಶಾ ಅಸ್ಯಾಂ ನಾಪಶ್ಯಂತ ವಸಿಷ್ಠಸ್ಯ ಮುಮೂರ್ಷತ ಸ್ತಸ್ಮಾ
ದ್ವಿಪಾಡಿತ್ಯುಚ್ಯತೇ ||

ವಿಮೋಚನವನ್ನು ಇದರಲ್ಲಿ ನೋಡಿದರೆಂದು ವ್ಯುತ್ಪತ್ತಿ ಹೇಳಿದೆ. ಯಾರ ವಿಮೋಚನವೆಂಬುದನ್ನು ವಿವರಿಸುತ್ತಾರೆ. ಪೂರ್ವದಲ್ಲಿ ವಿಶ್ವಾಮಿತ್ರಮಹರ್ಷಿಯ ಶಾಪದಿಂದ ವಸಿಷ್ಠನ ಪುತ್ರರೆಲ್ಲಾ ನಾಶವಾದಾಗ ವಸಿಷ್ಠರು ಪುತ್ರಶೋಕದಿಂದ ಮರಣವನ್ನು ಬಯಸಿ ಹಗ್ಗಗಳಿಂದ ಕಟ್ಟಿಕೊಂಡು ಈ ವಿಪಾಶನದಿಯಲ್ಲಿ ಮುಳುಗಿದರು. ಆದರೆ ಈ ನದಿಯ ನೀರಿನಿಂದ ಆ ಹಗ್ಗದ ಕಟ್ಟೆಲ್ಲಾ ಬಿಡಿಸಲ್ಪಟ್ಟವು. ನೀರಿನಿಂದ ಬಂಧನವಿಮೋಚನವಾದುದರಿಂದ ಅಂದಿನಿಂದ ವಿಪಾಟ್ ಎಂದು ಹೆಸರಿದೆ.

ಪೂರ್ವಮಾಸೀದುರುಂಜರಾ ||

ಉರುಂಜಿರಾ ಎಂಬುದು ಅದರ ಇನ್ನೊಂದು ಹೆಸರು. ಉರುಜಲಾ ಎಂಬುದು ವರ್ಣವ್ಯತ್ಯಾಸದಿಂದ ಉರುಂಜರಾ ಎಂದಾಗಿದೆ. ಅಧಿಕವಾದ ನೀರುಳ್ಳದ್ದು ಎಂದರ್ಥ.

ಸುಷೋಮಾ= ಸಿಂಧುಃ | ಯದೇನಾಮಭಿ ಪ್ರಸುವಂತಿ ಸದ್ಯಃ |
ಸಿಂಧುಃ ಸ್ಯಂದನಾತ್ ||

ಸಿಂಧು ನದಿಯ ನಾಮಾಂತರವೇ ಸುಷೋಮಾ. ಇದನ್ನು ಇತರ ನದಿಗಳು ಹೊಂದಿ ಜಲಸಮೃದ್ಧಿ ಹೊಂದುತ್ತವೆ. ಷು–ಪ್ರಸವೈಶ್ವರ್ಯಯೋಃ ಧಾತು. ಮನಿನ್‌ಪ್ರತ್ಯಯ ಸನ್ವದ್ಭಾವದಿಂದ ದ್ವಿತ್ವಾದಿಗಳು ಬಂದಿವೆ. ಸಿಂಧು ಶಬ್ದದ ವ್ಯುತ್ಪತ್ತಿಯನ್ನು ತಿಳಿಸುತ್ತಾರೆ. ಸ್ಯಂದನಾತ್ ಸಿಂಧುಃ | ಇದು ವಿಚ್ಛಿತ್ತಿಯಿಲ್ಲದೆ ಹರಿಯುತ್ತಿರುತ್ತಿದೆ. ಸ್ಯಂದೂ–ಪ್ರಸ್ರವಣೇ ಧಾತು 'ಸ್ಯಂದೇಃ ಸಂಪ್ರಸಾರಣಂ ಧಶ್ಚ' ಸೂತ್ರದಿಂದ ಉಪ್ರತ್ಯಯ. ಸಂಪ್ರಸಾರಣಾದಿ.

ಆಪ ಆಪ್ನೋತೇಃ | ತಾಸಾಮೇಷಾ ಭವತಿ || ೨೬ ||

ಕ್ರಮಪ್ರಾಪ್ತವಾದ ಆಪಃ ಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಇದರಿಂದ ಸಕಲವೂ ವ್ಯಾಪ್ತವಾಗಿದೆ. ನೀರಿಲ್ಲದ ವಸ್ತು ಲೋಕದಲ್ಲಿಲ್ಲ. ಆಪ್‌ಲೃ–ವ್ಯಾಪ್ತೌ. ಧಾತು. 'ಆಪ್ನೋತೇರ್ಹ್ರಸ್ವಶ್ಚ' ಸೂತ್ರದಿಂದ ಕ್ವಿಪ್‌ಪ್ರತ್ಯಯ. ಧಾತುವಿಗೆ ಹ್ರಸ್ವ. ಪ್ರಥಮಾ ಬಹುವಚನದಲ್ಲಿ 'ಅಪ್‌ತೃನ್'—ಸೂತ್ರದಿಂದ ದೀರ್ಘ. ಇದು ಯಾವಾಗಲೂ ನಿತ್ಯಬಹುವಚನಾಂತವೂ ಸ್ತ್ರೀಲಿಂಗವೂ ಆಗಿರುತ್ತದೆ. ಮುಂದೆ ಹೇಳುವ ಮಂತ್ರವು ಆಪಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತಾರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತವಿಂಶತಿಃ ಖಂಡಃ

### ಇಪ್ಪತ್ತೇಳನೆಯ ಖಂಡವು

ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ। ದಧಾತನ ಮಹೇ ರಣಾಯ ಚಕ್ಷಸೇ। (ಋ. ಸಂ. ೧೦-೯-೧)। ಆಪೋ ಹಿ ಸ್ಥ ಸುಖೀಭುವಸ್ತಾ ನೋಽನ್ನಾಯ ಧತ್ತ ಮಹತೇ ಚ ನೋ ರಣಾಯ ರಮಣೀಯಾಯ ಚ ದರ್ಶನಾಯೌಷಧಯ ಓಷದ್ಧ-ಯಂತೀತಿ ವೌಷತ್ಯೇನಾ ಧಯಂತೀತಿ ವಾ ದೋಷಂ ಧಯಂತೀತಿ ವಾ ತಾಸಾಮೇಷಾ ಭವತಿ ॥ ೨೭ ॥

ಆಪೋ ಹೀ ಷ್ಠಾ ಮಯೋಭುವಸ್ಥಾನ ಊರ್ಜೇ ದಧಾತನ। ಮಹೇ
ರಣಾಯ ಚಕ್ಷಸೇ ॥

(ಋ. ಸಂ. ೭-೬-೫)

ಜಲಸ್ತುತಿಯನ್ನು ವಿವರಿಸುತ್ತಾರೆ. ಎಲೈ ಅಭಿಮತಫಲದಾಯಕ (ಜಲವನ್ನು ಕುರಿತು ಹೇಳುವುದು.) ನೀವು ಸುಖದಾನಶೀಲರಾದುದರಿಂದ ನಮಗೆ ಅನ್ನಪ್ರಾಪ್ತಿ ಯೋಗ್ಯತೆಯನ್ನು ದಯೆಪಾಲಿಸಿರಿ. ಅನ್ನವನ್ನು ಕೊಡಿರಿ ಎಂದು ತಾತ್ಪರ್ಯ. ನಮ್ಮನ್ನು ಮಹತ್ತಾದ ಮತ್ತು ಸುಂದರವಾದ ಸಮ್ಯಗ್ ಜ್ಞಾನಕ್ಕೆ ಯೋಗ್ಯರನ್ನಾಗಿ ಮಾಡಿರಿ.

ಆಪೋ ಹಿ ಸ್ಥ ಸುಖಭುವಸ್ತಾ ನೋಽನ್ನಾಯ ಧತ್ತ। ಮಹತೇ ಚ
ನೋ ರಣಾಯ ರಮಣೀಯಾಯ ಚ ದರ್ಶನೀಯ ॥

ಮಯ ಎಂಬುದು ಸುಖನಾಮ. (ನಿಘ. ೩-೬-೨) ಸುಖವನ್ನುಂಟುಮಾಡುವವರು. ರಣಪದವು ರಮಣೀಯಾರ್ಥವನ್ನು ತಿಳಿಸುತ್ತದೆ. ಚಕ್ಷಃ-ದರ್ಶನ. ಶ್ರುತ್ಯಾದಿಗಳಿಂದುಂಟಾದ ಸಮ್ಯಗ್ ಜ್ಞಾನ

ಓಷಧಯ ಓಷದ್ದಯಂತೀತಿ ವೌಷತ್ಯೇನಾ ಧಯಂತೀತಿ ವಾ।
ದೋಷಂ ಧಯಂತೀತಿ ವಾ। ತಾಸಾಮೇಷಾ ಭವತಿ ॥ ೨೭ ॥

ಕ್ರಮಪ್ರಾಪ್ತವಾದ ಓಷಧಿಪದದ ನಿರ್ವಚನವನ್ನು ತಿಳಿಸುತ್ತಾರೆ. ಓಷತ್ ಧಯಂತಿ ಇತಿ ಓಷಧಯಃ. ಶರೀರವನ್ನು ಸುಡುವ ಕ್ಷಯಾದಿರೋಗಸಮುದಾಯಕ್ಕೆ ಓಷತ್ ಎಂದು ಹೆಸರು. ಅವುಗಳನ್ನು ನಾಶಮಾಡುವವುಗಳು ಓಷಧಿಗಳು ಉಷ-ದಾಹೇ ಧಾತು ಶತೃಪ್ರತ್ಯಯ. ಓಷತ್ ಧೇಟ್-ಪಾನೇ. ಕಿಪ್ರತ್ಯಯ. ಆತ್ವ ಬಂದಾಗ ಅದಕ್ಕೆ ಲೋಪ. ಓಷತ್‌ಪೂರ್ವಪದ. ದಿಉತ್ತರಪದ ಅಥವಾ ಉದರಾದಿಗಳಲ್ಲಿ ಪೀಡೆಯಾಗುವಾಗ ಇದನ್ನು ಕುಡಿಯುತ್ತಾರೆ ಎಂಬರ್ಥದಲ್ಲಿ ಓಷಧಿಶಬ್ದದ ವ್ಯುತ್ಪತ್ತಿ ತಿಳಿಯಬೇಕು. ರೋಗದಾಹನಿವೃತ್ತಿಗೋಸ್ಕರ ಕುಡಿಯಲ್ಪಡುವವುಗಳು. ಅಥವಾ ವಾತಪಿತ್ತಕಫಾದಿಜನಿತವಾದ ದೋಷವು

ಶರೀರದಲ್ಲಿ ಉಂಟಾದರೆ ಇದನ್ನು ಕುಡಿಯುತ್ತಾರೆ. ಪೂರ್ವೋಕ್ತಧಾತುಗಳಿಂದಲೇ ಕಾರಕ ವ್ಯತ್ಯಾಸದಿಂದ ನಾನಾರ್ಥ ತೋರುತ್ತವೆ. ಮೂರನೆಯ ಅರ್ಥದಲ್ಲಿ ದೋಷದ ಆದಿಯ ದಕಾರಕ್ಕೆ ಲೋಪ ಬರುತ್ತದೆ. ವಾತಾದಿದೋಷನಿವಾರಕಗಳಾದವುಗಳು ಓಷಧಿಗಳು ಮುಂದೆ ಹೇಳುವ ಮಂತ್ರವು. ಓಷಧಿಸ್ತುತಿಯನ್ನು ಪ್ರತಿಪಾದಿಸುತ್ತದೆ.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಾವಿಂಶತಿಃ ಖಂಡಃ

### ಇಪ್ಪತ್ತೆಂಟನೆಯ ಖಂಡವು

ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ । ಮನ್ಯೆ ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ । (ಋ. ಸಂ, ೧೦-೯೭-೧) ಯಾ ಓಷಧಯಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಣಿ ಯುಗಾನಿ ಪುರಾ ಮನ್ಯೇ ನು ತದ್ಬಭ್ರೂಣಾಮಹಂ ಬಭ್ರುವರ್ಣಾನಾಂ ಹರಣಾನಾಂ ಭರಣಾನಾಮಿತಿ ವಾ । ಶತಂ ಧಾಮಾನಿ ಸಪ್ತ ಚ । ಧಾಮಾನಿ ತ್ರಯಾಣಿ ಭವಂತಿ ಸ್ಥಾನಾನಿ ನಾಮಾನಿ ಜನ್ಮಾನೀತಿ ಜನ್ಮಾನ್ಯತ್ರಾಭಿಪ್ರೇತಾನಿ ಸಪ್ತ ಶತಂ ಪುರುಷಸ್ಯ ಮರ್ಮಣಾಂ ತೇಷ್ವೇನಾ ದಧತೀತಿ ವಾ ರಾತ್ರಿರ್ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೨೮ ॥

ಯಾ ಓಷಧೀಃ ಪೂರ್ವಜಾತಾ ದೇವೇಭ್ಯಸ್ತ್ರಿಯುಗಂ ಪುರಾ । ಮನ್ಯೆ
ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ ॥

(ಋ. ಸಂ. ೮-೫-೮)

ಔಷಧಿಯ ಸ್ತುತಿಯನ್ನು ವಿವರಿಸುತ್ತಾರೆ. ಈ ಔಷಧಿಗಳು ದೇವತೆಗಳಿಗಿಂತ ಮೊದಲೇ ಕಲಿದ್ವಾಪರತ್ರೇತಾಯುಗಗಳ ಪೂರ್ವದಲ್ಲಿ ಅಂದರೆ ಕೃತಯುಗದಲ್ಲಿಯೇ ಹುಟ್ಟಿರುತ್ತವೆ. ನಾನೂಕೂಡಾ ಕಪಿಲವರ್ಣಗಳಾದ ಇವುಗಳ ಏಳನೂರು ಉತ್ಪತ್ತಿ ಸ್ಥಾನಾದಿಗಳನ್ನೂ, ಅನುಲೇಪನಾದಿಗಳನ್ನೂ ಕ್ಷಿಪ್ರವಾಗಿ ತಿಳಿದಿರುತ್ತೇನೆ.

ಯಾ ಓಷಧಯಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಣಿಯುಗಾನಿ ಪುರಾ ।
ಮನ್ಯೇ ನು ತದ್ಬಭ್ರೂಣಾಮಹಂ ಬಭ್ರುವರ್ಣಾನಾಂ ಹರಣಾನಾಂ
ಭರಣಾನಾಮಿತಿ ವಾ ॥ 'ಶತಂ ಧಾಮಾನಿ ಸಪ್ತಚ'

**ಧಾಮಾನಿ ತ್ರಯಾಣಿ ಭವಂತಿ—ಸ್ಥಾನಾನಿ—ನಾಮಾನಿ—ಜನ್ಮಾ—ನೀತಿ, ಜನ್ಮಾನ್ಯತ್ರಾಭಿಪ್ರೇತಾನಿ । ಸಪ್ತಶತಂ ಪುರುಷಸ್ಯ ಮರ್ಮಣಾಂ ತೇಷ್ವೇನಾ ದಧಾತೀತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬಭ್ರು ಅಂದರೆ ಕಪಿಲವರ್ಣ. ವರ್ಣವ್ಯತ್ಯಯದಿಂದ ಹರಣ ಅಥವಾ ಭರಣ ಎಂದಾಗುತ್ತದೆ. ಆಗ ಹಸಿವೆ ಮುಂತಾದುವುಗಳನ್ನು ನಾಶಪಡಿಸುವವುಗಳು, ಸರ್ವಭೂತಗ್ರಾಮವನ್ನು ಧರಿಸಿರುವವಗಳೆಂದರ್ಥ. ಈ ಮಂತ್ರದಲ್ಲಿ ಏಳನೂರು ಔಷಧಿಜಾತಿಗಳೆಂದು ಪರಿಗಣಿಸಿದೆ. ಧಾಮಕ್ಕೆ ಸ್ಥಾನ, ನಾಮ, ಜನ್ಮ ಮೂರು ಅರ್ಥ ಪ್ರತೀತವಾದರೂ ಇಲ್ಲಿ ಸ್ಥಾನವೇ ಅಭಿಪ್ರೇತವಾಗಿದೆ. ಪುರುಷನ ಮರ್ಮಸ್ಥಾನಗಳೂ ಏಳುನೂರು. ಅವುಗಳಲ್ಲಿ ಇವುಗಳನ್ನು ಲೇಪನಾದಿಗಳನ್ನು ಮಾಡುತ್ತಾರೆ.

**॥ ರಾತ್ರಿರ್ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೨೮ ॥**

ರಾತ್ರಿ ಎಂಬ ಪದದ ನಿರ್ವಚನವನ್ನು ತೋರಿಸುತ್ತಾರೆ. 'ರಾತೇರ್ವಾಸ್ಯಾದ್ದಾನಕರ್ಮಣಃ' (ನಿಘ—೨-೬-೧) ಎಂದು ಇದು ಹಿಂದೆ ನಾಮ, ಅರ್ಥ ಎರಡರಿಂದಲೂ ವಿವೃತವಾಗಿದೆ. ಪ್ರಾಣಿಗಳಿಗೆ ಶೀತವನ್ನುಂಟುಮಾಡುವುದು. ನಿದ್ರಾದಿಗಳಿಂದ ಸುಖವನ್ನುಂಟುಮಾಡುವುದು. ಮುಂದೆ ಹೇಳುವ ಮಂತ್ರವು ರಾತ್ರಿಯ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕೋನತ್ರಿಂಶತ್ ಖಂಡಃ

## ಇಪ್ಪತ್ತೊಂಬತ್ತನೆಯ ಖಂಡವು

**ಆ ರಾತ್ರಿ ! ಪಾರ್ಥಿವಂ ರಜಃ ಪಿತುರಪ್ರಾಯಿ ಧಾಮಭಿಃ । ದಿವಃ ಸದಾಂಸಿ ಬೃಹತೀ ವಿತಿಷ್ಠಿಸ ಆ ತ್ವೇಷಂ ವರ್ತತೇ ತಮಃ । (ಖೈಲಿಕಂ ಸೂಕ್ತಂ ೨೫) ॥ ಆ ಪೂಪುರಸ್ತ್ವಂ ರಾತ್ರಿ ಪಾರ್ಥಿವಂ ರಜಃ ಸ್ಥಾನೈರ್ಮಧ್ಯಮಸ್ಯ ದಿವಃ ಸದಾಂಸಿ ಬೃಹತೀ ಮಹತೀ ವಿತಿಷ್ಠಿಸ ಆ ವರ್ತತೇ ತ್ವೇಷಂ ತಮೋ ರಜೋಽರಣ್ಯಾನ್ಯರಣ್ಯಸ್ಯ ಪತ್ನ್ಯರಣ್ಯಮಪಾರ್ಣಂ ಗ್ರಾಮಾದರಮಣಂ ಭವತೀತಿ ವಾ ತಸ್ಯಾ ಏಷಾ ಭವತಿ ॥ ೨೯ ॥**

ಆ ರಾತ್ರಿ ! ಪಾರ್ಥಿವಂ ರಜಃ ಪಿತುರಪ್ರಾಯಿ ಧಾಮಭಿಃ । ದಿವಃ ಸದಾಂಸಿ ಬೃಹತೀ ವಿತಿಷ್ಠಸ ಆ ತ್ವೇಷಂವರ್ತತೇ ತಮಃ ॥

ರಾತ್ರಿಯ ಸ್ತುತಿಯನ್ನು ವಿವರಿಸುತ್ತಾರೆ. ರಾತ್ರಿಯೇ ನೀನು ಮಧ್ಯಮದ ಮೇಘಾದಿ ಸ್ಥಾನದೊಡನೆ ಈ ಪೃಥಿವೀಲೋಕವನು ಒಂದುಗೂಡಿಸಿರುವಿ. ಇದೂ ಅಲ್ಲದೆ ದ್ಯುಲೋಕದ ದೇವಸದನಗಳನ್ನೂ ಮಹತ್ತಾಗಿ ನೀನು ಧರಿಸಿರುವಿ.

ಆ ಪೂಪುರಸ್ತ್ವಂ ರಾತ್ರಿ । ಪಾರ್ಥಿವಂ ರಜಃ ಸ್ಥಾನೈರ್ಮಧ್ಯಮಸ್ಯ ದಿವಃ ಸದಾಂಸಿ ಬೃಹತೀ ವಿತಿಷ್ಠಸ ಆವರ್ತತೇ ತ್ವೇಷಂ ತಮೋ ರಜಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ರಾತ್ರಿಯೇ ನೀನು ಮೂರು ಲೋಕಗಳನ್ನೂ ಧರಿಸಿ ಅಲ್ಲಿ ಅಂಧಕಾರವನ್ನು ವ್ಯಾಪಿಸುವಂತೆ ಮಾಡುವಿ. ಆ ನೀನು ನಮಗೆ ಕಲ್ಯಾಣವನ್ನುಂಟುಮಾಡು.

ಅರಣ್ಯಾನ್ಯರಣ್ಯಸ್ಯ ಪತ್ನೀ । ಅರಣ್ಯಮಪಾರ್ಣಂ ಗ್ರಾಮಾತ್ । ಅರಮಣಂ ಭವತೀತಿ ವಾ । ತಸ್ಯಾ ಏಷಾಭವತಿ ॥

ಕ್ರಮಪ್ರಾಪ್ತವಾದ ಅರಣ್ಯಾನೀಪದದ ನಿರ್ವಚನವನ್ನು ತೋರಿಸುತ್ತಾರೆ. ಅರಣ್ಯವನ್ನು ಪಾಲಿಸುವ ಸ್ತ್ರೀದೇವತೆಗೆ ಅರಣ್ಯಾನೀ ಎಂದು ಹೆಸರು. ಕಾತ್ಯಾಯನರಮತದಲ್ಲಿ ಮಹತ್ತಾದ ಅರಣ್ಯವಾಗುತ್ತದೆ. ಗ್ರಾಮದಿಂದ ಅಪಗತವಾದುದರಿಂದ ಅಂದರೆ ದೂರದಲ್ಲಿರುವುದರಿಂದ ಅರಣ್ಯಾನೀ ಎಂದಾಗಿದೆ. ಋ–ಗತೌ ಧಾತುವಿನಿಂದ ಋಣಂ ಎಂದಾಗಿದೆ. ಸಾಲ ಎಂಬರ್ಥದಲ್ಲಿ ಇದು ರೂಢವಾಗಿದ್ದರೂ ಇಲ್ಲಿ ಕೇವಲ ಧಾತ್ವರ್ಥಗಮನ ವಿವಕ್ಷಿತವಾಗಿದೆ. ಅಪ ಋಣ ಎಂಬುದು ಪೃಷೋದರಾದಿಪಠಿತ ವಾದುದರಿಂದ ಅರಣ್ಯಾನೀ ಎಂದಾಗಿದೆ. ಅಥವಾ ಅರಮಣವೆಂಬುದು ಅರಣ್ಯವೆಂದಾಗಿದೆ. ನಞ್ಪೂರ್ವಕರಮ್ ಧಾತುವಿನಿಂದ ಈ ರೂಪವಾಗಿದೆ. ಅರಣ್ಯದಲ್ಲಿ ಸಂತೋಷವುಂಟಾಗುವುದಿಲ್ಲ. ಈ ಅರಣ್ಯದ ಸ್ತುತಿಯನ್ನು ಮುಂದಿನ ಮಂತ್ರವು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಇಪ್ಪತ್ತೊಂಬತ್ತನೆಯ ಖಂಡವು ಸಮಾಪ್ತವು.

---

## ಅಥ ತ್ರಿಂಶತಿಃ ಖಂಡಃ

## ಮೂವತ್ತನೆಯ ಖಂಡವು

ಅರಣ್ಯಾನ್ಯರಣ್ಯಾನ್ಯಸೌ ಯಾ ಪ್ರೇವ ನಶ್ಯಸಿ । ಕಥಾ ಗ್ರಾಮಂ ನ ಪೃಚ್ಛಸಿ ನ ತ್ವಾ ಭೀರಿವ ವಿಂದತೀ ೩ । (ಋ. ಸಂ. ೧೦-೧೪೬-೧) ॥ ಅರಣ್ಯಾನೀತ್ಯೇನಾ ಮಾಮಂ-

ತ್ರಯತೇ ಯಾಸಾವರಣ್ಯಾನಿ ವನಾನಿ ಪರಾಚೀವ ನಶ್ಯಸಿ ಕಥಂ ಗ್ರಾಮಂ ನ ಪೃಚ್ಛಸಿ ನ ತ್ವಾ ಭೀರ್ವಿಂದತೀ ವೇ ತೀವಃ ಪರಿಭಯಾರ್ಥೇ. ವಾ ಶ್ರದ್ಧಾ ಶ್ರದ್ಧಾನಾತ್ತಸ್ಯಾ ಏಷಾ ಭವತಿ ॥ ೩೦ ॥

ಅರಣ್ಯಾನ್ಯರಣ್ಯಾನ್ಯಸೌ ಯೂ ಪ್ರೇವ ನಶ್ಯತಿ। ಕಥಾಗ್ರಾಮಂ ನ
ಪೃಚ್ಛಸಿ ನ ತ್ವಾ ಭೀರಿವ ವಿಂದತೀ ॥

(ಋ. ಸಂ. ೮–೮–೪)

ಅರಣ್ಯಸ್ತುತಿಯನ್ನು ಈ ಮಂತ್ರದಲ್ಲಿ ವಿವರಿಸುತ್ತಾರೆ. ಅರಣ್ಯಾಧಿದೇವತೆಯೇ ನೀನು ಅರಣ್ಯದಲ್ಲಿ ಪರಾಙ್ಮುಖಳಂತೆ ಹಿಂತಿರುಗದೆ ಅದೃಷ್ಟಳಾಗುವಿ. ನಾನು ನೋಡುತ್ತಿರುವಂತೆ ಭಯವಿಲ್ಲದೆ ಅದೃಶ್ಯಳಾಗಿ ಮುಂದೆ ಹೋಗುವಿ. ಗ್ರಾಮವನ್ನು ಕೇಳಿ ಅಲ್ಲಿ ಹೋಗಿ ಏಕೆ ಆನಂದಪಡುವುದಿಲ್ಲ? ನಿಜವಾಗಿಯೂ ನೀನು ಭಯವನ್ನು ಹೊಂದುವುದಿಲ್ಲವೇ?

ಅರಣ್ಯಾನೀತ್ಯೇ ನಾಮಾ ಮಂತ್ರಯತೇ ಯಾಸಾವರಣ್ಯಾನಿ ವನಾನಿ
ಪರಾಚೀವ ನಶ್ಯಸಿ। ಕಥಂ ಗ್ರಾಮಂ ನ ಪೃಚ್ಛಸಿ। ನ ತ್ವಾ
ಭೀರ್ವಿಂದತೀವ। ಇತೀವ ಪರಿಭಯಾರ್ಥೇವಾ ॥

ಅರಣ್ಯಾನಿಯನ್ನು ಕರೆದು ಕೇಳುತ್ತಾರೆ. ಮಹತ್ತಾದ ಅರಣ್ಯದಲ್ಲಿ ಅವಳು ಹಿಂದಿರುಗದಂತೆ ಅದೃಶ್ಯಳಾಗುತ್ತಾಳೆ. ಹೀಗೆ ಮುಂದೆ ಹೋಗುವುದರಿಂದ ಭಯವಾಗುವುದಿಲ್ಲವೇ? ಎಂದು ಕೇಳುತ್ತಾರೆ.

ಶ್ರದ್ಧಾ ಶ್ರದ್ಧಾನಾತ್ । ತಸ್ಯಾ ಏಷಾ ಭವತಿ ॥ ೩೦ ॥

ಕ್ರಮಪ್ರಾಪ್ತವಾದ ಶ್ರದ್ಧಾಪದದ ನಿರ್ವಚನವನ್ನು ತೋರಿಸುತ್ತಾರೆ. ಇಲ್ಲಿ ಸತ್ಯವನ್ನು ಹೇಳುವ ಶ್ರತ್ ಎಂಬುದು ಪೂರ್ವಪದ. ಅದು ಇಲ್ಲಿ ಇಡಲ್ಪಡುತ್ತದೆ—ಎಂಬರ್ಥದಲ್ಲಿ ಶ್ರದ್ಧಾ ಆಗಿದೆ. ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ ವಿಪರ್ಯಯವಿಲ್ಲದ ಯಾವ ಬುದ್ಧಿಯುಂಟಾಗುತ್ತದೆಯೋ ಅದರ ಅಧಿದೇವತೆಗೆ ಶ್ರದ್ಧಾ ಎಂದು ಕರೆಯುತ್ತಾರೆ. ಇದು ಅಗ್ನಿಸಂಬಂಧವಾದ ಸರ್ವವನ್ನೂ ಪ್ರಕಾಶಪಡಿಸುವುದರಿಂದ ಅಗ್ನಿಯೇ ಆಗುತ್ತದೆ. ಮುಂದೆ ಹೇಳುವ ಮಂತ್ರವು ಈ ಶ್ರದ್ಧೆಯ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ಒಂಬತ್ತನೆಯ ಅಧ್ಯಾಯದಲ್ಲಿ
ಮೂವತ್ತನೆಯ ಖಂಡವು ಸಮಾಪ್ತವಾಗಿದೆ.

—. —

## ಅಥ ಏಕತ್ರಿಂಶತಿಃ ಖಂಡಃ

### ಮೂವತ್ತೊಂದನೆಯ ಖಂಡವು

ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ । ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ । (ಋ. ಸಂ. ೧೦-೧೫೧-೧) ಶ್ರದ್ಧಯಾಗ್ನಿಃ ಸಾಧು ಸಮಿಧ್ಯತೇ ಶ್ರದ್ಧಯಾ ಹವಿಃ ಸಾಧು ಹೂಯತೇ ಶ್ರದ್ಧಾಂ ಭಗಸ್ಯ ಭಾಗಧೇಯಸ್ಯ ಮೂರ್ಧನಿ ಪ್ರಧಾನಾಂಗೇ ವಚನೇನಾವೇದಯಾಮಃ ಪೃಥಿವೀ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೩೧ ॥

ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।
ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ ॥

(ಋ. ಸಂ. ೮-೮-೯)

ಶ್ರದ್ಧಾಸ್ತುತಿಯನ್ನು ಈ ಮಂತ್ರದಲ್ಲಿ ವಿವರಿಸುತ್ತಾರೆ, ಆಸ್ತಿಕ್ಯಬುದ್ಧಿಯಿಂದ ಗಾರ್ಹಪತ್ಯಾಗ್ನಿಯು ಪ್ರಜ್ವಲಿತವಾಗುತ್ತದೆ. ಶ್ರದ್ಧೆಯಿಂದಲೇ ಪುರೋಡಾಶಾದಿ ಹವಿಸ್ಸುಗಳು ಆಹವನೀಯಾದಿಗಳಲ್ಲಿ ಹೋಮಿಸಲ್ಪಡುತ್ತವೆ. ಧರ್ಮದ ಪ್ರಧಾನವಾದ ಶಿರಸ್ಸಿನಲ್ಲಿರುವ ನಿನ್ನನ್ನು ಮಂತ್ರವಚನದಿಂದಲೇ ತಿಳಿಯುತ್ತೇವೆ.

ಶ್ರದ್ಧಯಾಽಗ್ನಿಃ ಸಾಧು ಸಮಿಧ್ಯತೇ, ಶ್ರದ್ಧಯಾ ಹವಿಃ ಸಾಧು ಹೂಯತೇ । ಶ್ರದ್ಧಾಂ ಭಗಸ್ಯ ಭಾಗಧೇಯಸ್ಯ ಮೂರ್ಧನಿ ಪ್ರಧಾನಾಂಗೇ ವಚಸೇನಾವೇದಯಾಮಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಾವ ಅಗ್ನಿಯು ಶ್ರದ್ಧೆಯಿಂದ ಪ್ರಜ್ವಲಿಸಲ್ಪಡುವುದೋ ಅದೇ ಶೋಭನವಾದ ಪ್ರಜ್ವಲನ. ಶ್ರದ್ಧೆ ಇಲ್ಲದೆ ಮಾಡಿರುವುದು ಮಾಡದಂತೆಯೇ. ಹಾಗೆಯೇ ಶ್ರದ್ಧೆಯಿಂದ ಹೋಮಿಸಿರುದೇ ಸಾಧುವಾದ ಹೋಮ. ಇತರಕ್ಕೆ ಫಲವೇ ಇರುವುದಿಲ್ಲ. 'ನಾಶ್ರದ್ಧಧಾನಾಯ ಹವಿರ್ಜುಷಂತಿ ದೇವಾಃ' ಎಂದು ಇದನ್ನೇ ವಿವರಿಸಿರುತ್ತಾರೆ. ಭಗವೆಂದರೆ ಭಾಗಧೇಯ ಅಥವಾ ಧರ್ಮ. ಧರ್ಮಶಿರಸ್ಸೇ ಶ್ರದ್ಧೆ. ಇದನ್ನು ಮಂತ್ರದಿಂದಲೇ ತಿಳಿಯಬೇಕು.

ಪೃಥಿವೀ ವ್ಯಾಖ್ಯಾತಾ, ತಸ್ಯಾ ಏಷಾ ಭವತಿ ॥ ೩೧ ॥

ಕ್ರಮಪ್ರಾಪ್ತವಾದ ಪೃಥಿವೀಪದದ ನಿರ್ವಚನವನ್ನು ತೋರಿಸುತ್ತಾರೆ. "ಅಥವೈದರ್ಶನೇನ ಪೃಥುಃ" (ನಿ. ಫೆ. ೧-೪-೩)

ಇತ್ಯಾದಿ ವಾಕ್ಯಗಳಿಂದ ಇದು ಹಿಂದೆ ವ್ಯಾಖ್ಯಾತವಾಗಿದೆ. ಪಾರವಿಲ್ಲದೆ ವಿಸ್ತಾರವಾಗಿರುವುದು ಪೃಥಿವೀ. ಮುಂದಿನಮಂತ್ರವು ಪೃಥಿವೀಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ಒಂಬತ್ತನೆಯ ಅಧ್ಯಾಯದಲ್ಲಿ

ಮೂವತ್ತೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾತ್ರಿಂಶತಿಃ ಖಂಡಃ

## ಮೂವತ್ತಾರನೆಯ ಖಂಡ

ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ । (ಋ. ಸಂ. ೧-೨೨-೧೫) ॥ ಸುಖಾ ನಃ ಪೃಥಿವಿ ಭವಾನೃಕ್ಷರಾ ನಿವೇಶಯನ್ಯೃಕ್ಷರಃ ಕಂಟಕಃ ಕಂತಪೋ ವಾ ಕೃಂತತೇರ್ವಾ ಕಂಟತೇರ್ವಾ ಸ್ಯಾದ್ಗತಿಕರ್ಮಣ ಉದ್ಗತತಮೋ ಭವತಿ ಯಚ್ಛ ನಃ ಶರ್ಮ ಯಚ್ಛಂತು ಶರಣಂ ಸರ್ವತಃ ಪೃಥ್ವಪ್ಸಾ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೩೨ ॥

ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ ।
ಯಚ್ಛಾ ನಃ ಶರ್ಮ ಸಪ್ರಥಃ ॥

(ಋ. ಸಂ- ೧-೨-೬)

ಪೃಥಿವೀಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಪೃಥಿವಿಯೇ ನೀನು ನಮಗೆ ಸುಖಕರಳಾಗು. ನಿಷ್ಕಂಟಕ ನಿವಾಸಯೋಗ್ಯಳಾಗಿ ನಮಗೆ ಎಲ್ಲಾ ಕಡೆಯಿಂದ ಅಧಿಕ ಕಲ್ಯಾಣವನ್ನು ಕೊಡು.

ಸುಖಾ ನಃ ಪೃಥಿವಿ । ಭವಾನೃಕ್ಷರಾ ನಿವೇಶನ್ಯೃಕ್ಷರಃ ಕಂಟಕ ಋಚ್ಛತೇಃ । ಕಂಟಕಃ ಕಂತಪೋ ವಾ, ಕೃಂತತೇರ್ವಾ, ಕಂಟತೇ ರ್ವಾ ಸ್ಯಾದ್ಗತಿಕರ್ಮಣಃ ಉದ್ಗತತಮೋಭವತಿ । ಯಚ್ಛ ನಃ ಶರ್ಮ ಯಚ್ಛಂತು ಶರಣಂ ಸರ್ವತಃ ಪೃಥು ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಋಕ್ಷರವೆಂದರೆ ಕಂಟಕ. (ಮುಳ್ಳು) ಹಿಂಸಾರ್ಥಕವಾದ ಋಚ್ಛಧಾತುವಿಗೆ ಕರಚ್‌ಪ್ರತ್ಯಯ. ಛಕಾರಕ್ಕೆ ಕ್ಷಕಾರಾದೇಶ. ಕಂಟಕ ಪದವು ಉಪಸ್ಥಿತವಾದುದರಿಂದ ಅದರ ವ್ಯುತ್ಪತ್ತಿಯನ್ನು ತೋರಿಸುತ್ತಾರೆ.

ಗತಿಕರ್ಮಕ ಧಾತುಗಳಲ್ಲಿ ಕಂಟತಿ ಪಠಿತವಾಗಿದೆ. (ನಿ.ಘ. ೨-೧೪-೨೦) ಅದರ ಮೇಲೆಣ್ವುಲ್ ಬಂದಾಗ ಅದಕ್ಕೆ ಆಕಾದೇಶ ಇಲ್ಲಿ ಹಿಂಸಾರ್ಥ ತೋರುತ್ತದೆ. ಧಾತುಗಳ ಅರ್ಥವನ್ನು ಆಧುನಿಕರು ನಿರ್ದೇಶಿಸಿರುವುದರಿಂದ ಅನೇಕಾರ್ಥವಿರುವುದರಿಂದಲೂ ಇಲ್ಲಿ ಹೀಗೆ ಹೇಳಬೇಕು. ಅಥವಾ ಕಂತಪ ಅರ್ಥ. ಕಂ ಅಂದರೆ ಸುಖವನ್ನು, ತಪತಿ= ನಾಶಮಾಡುವುದು. ತಪ-ದಾಹೇ. ಪಚಾದಿಯಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ. ಅಥವಾ ಛೇದನಾರ್ಥಕ ಕೃತೀಧಾತುವಿಗೆ ಣ್ವುಲ್‌ಪ್ರತ್ಯಯಬಂದಾಗ ವರ್ಣ ವ್ಯತ್ಯಯದಿಂದ ಋಕಾರಕ್ಕೆ ಅಕಾರ, ತಕಾರಕ್ಕೆ ಕಕಾರ. ಅಥವಾ ಗತ್ಯರ್ಥಕವಾದ ಕಂಟಧಾತುವಿಗೇ ಹಿಂದಿನಂತೆ ಣ್ವುಲ್. ಮುಳ್ಳು ಗಿಡದಲ್ಲಿ ಎತ್ತರವಾಗಿರುತ್ತದೆ. ಬಿಲ್ವಾದಿ ಮರಗಳಲ್ಲಿ ಎಲೆಗಳನ್ನೂ ಭೇದಿಸಿ ಉನ್ನತವಾಗಿ ದುಃಖವನ್ನುಂಟುಮಾಡುವ ಮುಳ್ಳುಗಳಿರುತ್ತವೆ.

**ಅಪ್ವಾ ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೩೨ ॥**

ಅಪ್ವಾಪದದ ನಿರ್ವಚನವನ್ನು ತೋರಿಸುತ್ತಾರೆ. "ಯದೇನಯಾ ವಿದ್ಧೋಽಪವೀಯತೇ ವ್ಯಾಧಿರ್ವಾ ಭಯಂವಾ" (ನಿ.ಘ. ೬-೩-೩) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ. ಇದರಿಂದ ಆವೃತವಾದವರು ರೋಗ ಅಥವಾ ಭಯದಿಂದ ಆವೃತರಾಗುತ್ತಾರೆ. ಪಾಪಾಭಿಮಾನಿ ದೇವತೆಯೆಂದರ್ಥ. ಇದರ ಸ್ತುತಿಯನ್ನು ಮುಂದೆ ಹೇಳುವ ಮಂತ್ರ ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಮೂವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯಸ್ತ್ರಿಂಶತಿಃ ಖಂಡಃ

## ಮೂವತ್ತಮೂರನೆಯ ಖಂಡವು

**ಅಮೀಷಾಂ ಚಿತ್ತಂ ಪ್ರತಿಲೋಭಯಂತೀ ಗೃಹಾಣಾಂಗಾನ್ಯಪ್ವೇ ಪರೇ ಹಿ । ಅಭಿ ಪ್ರೇಹಿ ನಿರ್ದಹ ಹೃತ್ಸು ಶೋಕೈರಂಧೇನಾಮಿತ್ರಾಸ್ತಮಸಾ ಸಚಂತಾಮ್ । (ಋ. ಸ. ೧೦-೧೦೩-೧೨) । ಅಮೀಷಾಂ ಚಿತ್ತಾನಿ ಪ್ರಜ್ಞಾನಾನಿ ಪ್ರತಿಲೋಭಯಮಾನಾ ಗೃಹಾಣಾಂಗಾನ್ಯಪ್ವೇ ಪರೇಹ್ಯಭಿಪ್ರೇಹಿ ನಿರ್ದಹೈಷಾಂ ಹೃದಯಾನಿ ಶೋಕೈರಂಧೇನಾ-ಮಿತ್ರಾಸ್ತಮಸಾ ಸಂಸೇವ್ಯಂತಾ ಮಗ್ನ್ಯಾಯ್ಯಗ್ನೇಃ ಪತ್ನೀ ತಸ್ಯಾ ಏಷಾ ಭವತಿ ॥ ೩೩ ॥**

ಅಮೀಷಾ ಚಿತ್ತಂ ಪ್ರತಿಲೋಭಯಂತೀ ಗೃಹಾಣಾಂಗಾನ್ಯಪ್ವೇ ಪರೇ
ಹಿ । ಅಭಿಪ್ರೇಹಿ ನಿರ್ದಹ ಹೃತ್ಸು ಶೋಕೈರಂಧೇನಾಮಿತ್ರಾ-
ಸ್ತಮಸಾ ಸಚಂತಾವ್ ॥

(ಋ.ಸಂ. ೮-೫-೨೩) (ಯ.ವಾ.ಸಂ ೧೭-೪೪) (ಸಾ.ಸಂ.ಉ.ಅ. ೯-೩-೫೯-)
(ಅ.ಸಂ. ೩-೨-೫)

ಅಪ್ವಾಸ್ತುತಿಯನ್ನು ಈ ಮಂತ್ರವು ಪ್ರತಿಪಾದಿಸುತ್ತದೆ. ಪಾಪಾಭಿಮಾನಿದೇವತೆಯೇ ನಮ್ಮೊಡನೆ ಯುದ್ಧಮಾಡುವ ಶತ್ರುಗಳ ಮನಸ್ಸನ್ನು ವ್ಯಾಮೋಹಪಡಿಸಿ ಅವರ ಅವಯವಗಳನ್ನು ಪ್ರವೇಶಿಸು. ನಿನ್ನ ಪ್ರವೇಶದಿಂದ ಅವರು ನಡುಕದಿಂದ ಸ್ತಬ್ಧರಾಗುತ್ತಾರೆ. ಹೀಗೆಯೇ ಇತರ ಶತ್ರುಗಳನ್ನೂ ಹೋಗಿ ಸೇರು. ಅವರ ಹೃದಯವನ್ನು ದುಃಖದಿಂದ ಸುಡು. ನಿನ್ನಿಂದ ಅವರು ಗಾಢಾಂಧಕಾರದಿಂದ ಮೂಢರಾಗಲಿ.

ಅಮೀಷಾಂ ಚಿತ್ತಾನಿ। ಪ್ರಜ್ಞಾನಾನಿ ಪ್ರತಿಲೋಭಯಮಾನಾ ಗೃಹಾ-
ಣಾಂಗಾನ್ಯಪ್ವೇ ಪರೇಹಿ ಅಭಿಪ್ರೇಹಿ । ಸರ್ವಹ್ಯೈಷಾಂ ಹೃದಯಾಸ
ಶೋಕೈರಂಧೇನಾಮಿತ್ರಾಸ್ತಮಸಾ ಸಂಸೇವ್ಯಂತಾಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪೂರ್ವದಲ್ಲಿ ವ್ಯಾಖ್ಯಾತವಾಗಿದೆ. ಇಲ್ಲಿ ಅಂಧಕಾರವೆಂದರೆ ಬುದ್ಧಿಸಂಮೋಹ. ಏನೂ ಕರ್ತವ್ಯ ತೋರದಿರುವುದು.

ಅಗ್ನಾಯ್ಯಗ್ನೇಃ ಪತ್ನೀ । ತಸ್ಯಾ ಏಷಾ ಭವತಿ ॥ ೩೩ ॥

ಕ್ರಮಪ್ರಾಪ್ತವಾದ ಅಗ್ನಾಯೀಪದದ ನಿರ್ವಚನವನ್ನು ತೋರಿಸುತ್ತಾರೆ. ಅಗ್ನಾಯೀ ಅಗ್ನಿಯ ಪತ್ನಿಯಾದ ಸ್ವಾಹಾದೇವಿ. ಅಥವಾ ಇನ್ನೊಬ್ಬಳಾಗಬಹುದು. "ವೃಷಾಕಪ್ಯಗ್ನಿ–" ಸೂತ್ರದಿಂದ ಅಗ್ನಿಶಬ್ದಕ್ಕೆ ಸ್ತ್ರೀತ್ವತೋರುವಾಗ ಐಕಾರಾದೇಶ. ಙೀಷ್. ಆಯಾದೇಶ. ಮುಂದೆ ಹೇಳುವ ಋಙ್ಮಂತ್ರವು ಅಗ್ನಾಯೀಸ್ತುತಿಯನ್ನು ಪ್ರತಿಪಾದಿಸುತ್ತದೆ

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ
ಮೂವತ್ತಮೂರನೆಯಖಂಡ ಸಮಾಪ್ತವಾಗಿದೆ.

---

## ಅಥ ಚತುಸ್ತ್ರಿಂಶತಿಃ ಖಂಡಃ

## ಮೂವತ್ತನಾಲ್ಕನೆಯ ಖಂಡವು

ಇಹೇಂದ್ರಾಣೀಮುಪ ಹ್ವಯೇ ವರುಣಾನೀಂ ಸ್ವಸ್ತಯೇ । ಅಗ್ನಾಯೀಂ ಸೋಮಪೀತಯೇ । (ಋ. ಸಂ. ೧-೨೨-೧೨) ಇತಿ ಸಾ ನಿಗದವ್ಯಾಖ್ಯಾತಾ ॥ ೩೪ ॥

ಇಹೇಂದ್ರಾಣೀ ಮುಪಹ್ವಯೇ ವರುಣಾನೀಂ ಸ್ವಸ್ತಯೇ । ಅಗ್ನಾ-
ಯೀಂ ಸೋಮಪೀತಯೇ ॥ (ಋ. ಸ. ೧-೨-೬ ೯)

ಅಗ್ನಾಯೀ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಈ ಯಾಗ ಕರ್ಮದಲ್ಲಿ ಅಗ್ನಿ ಪತ್ನಿಯನ್ನು ಸೋಮಪಾನಕ್ಕೋಸ್ಕರ ಆಹ್ವಾನಿಸುತ್ತೇನೆ. ನಮ್ಮ ಕಲ್ಯಾಣಕ್ಕೋಸ್ಕರ ಇಂದ್ರ ಪತ್ನಿಯನ್ನೂ, ವರುಣ ಪತ್ನಿಯನ್ನೂ ಕರೆಯುತ್ತೇನೆ. ಮಂತ್ರಾರ್ಥ ಸುಲಭವಾದುದರಿಂದ ಪಾಠಮಾತ್ರದಿಂದಲೇ ವ್ಯಾಖ್ಯಾತವಾಗಿದೆಯೆಂದು ತಿಳಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ
ಮೂವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

••••••••

# ಅಥ ಪಂಚತ್ರಿಂಶತ್ ಖಂಡಃ

## ಮೂವತ್ತೈದನೆಯ ಖಂಡವು

**ಅಥಾತೋಽಷ್ಟೌ ದ್ವಂದ್ವಾನ್ಯುಲೂಖಲಮುಸಲೇ ಉಲೂಖಲಂ ವ್ಯಾಖ್ಯಾತಂ ಮುಸಲಂ ಮುಹುಃ ಸರಂ ತಯೋರೇಷಾ ಭವತಿ ॥ ೩೫ ॥**

**ಅಥಾತೋಽಷ್ಟೌ ದ್ವಂದ್ವಾನಿ । ಉಲೂಖಲಮುಸಲೇ ॥**

ಪೂರ್ವದಲ್ಲಿ ಪೃಥಿವೀಸ್ಥಾನದ ಅಶ್ವಾದಿಗಳು ವ್ಯಾಖ್ಯಾತವಾಗಿವೆ. ಅವುಗಳಿಂದ ವಿಲಕ್ಷಣವಾದುದರಿಂದ ಈಗ ಅಧಿಕಾರಾಂತರವನ್ನು ಆರಂಭಿಸಿರುತ್ತಾರೆ. ಒಂದೊಂದಾಗಿರುವ ಪದದ ವ್ಯಾಖ್ಯಾನವಾದಮೇಲೆ ಇನ್ನು ಮುಂದೆ ಕ್ರಮವಾಗಿ ಎಂಟು ದ್ವಂದ್ವಗಳನ್ನು ಹೇಳುತ್ತೇವೆ. ದ್ವಂದ್ವಕ್ಕೆ ಅಪವಾದವಾಗಿ ಏಕಶೇಷ ಹೇಳಿರುವುದರಿಂದ ಹವಿರ್ಧಾನೇ ಇತ್ಯಾದಿಗಳಲ್ಲಿ ಏಕಶೇಷ ನಿರ್ದಿಷ್ಟವಾಗಿದ್ದರೂ ಸಾಹಿತ್ಯಸಾದೃಶ್ಯದಿಂದ ಅವುಗಳನ್ನು ಹೇಳಿರುವುದು ಸಮಂಜಸವಾಗಿದೆ. ದ್ವಂದ್ವಗಳು ಅನೇಕವಿರುವುದರಿಂದ ಎಂಟೇ ಎಂದು ಪರಿಸಂಖ್ಯಾವಿಧಿಯಿಂದ ತೋರಿಸಿರುತ್ತಾರೆ. ಉಷಾಸಾನಕ್ತಾ, ದೈವ್ಯಾಹೋತಾರಾ ಇವೆರಡುದ್ವಂದ್ವಗಳು ಆಪ್ರೀತ್ವಸಾಮಾನ್ಯದಿಂದ ಅಲ್ಲಿ ವ್ಯಾಖ್ಯಾತವಾದುದರಿಂದ ಪುನರುಕ್ತಿ ಭಯದಿಂದ ಇಲ್ಲಿ ಪುನಃ ಹೇಳಿಲ್ಲ. ಮಿತ್ರಾವರುಣಾದಿಗಳಿಗೆ ಬೇರೆಬೇರೆಯಾಗಿಯೂ ಸ್ತುತಿಯುಪಪನ್ನವಾದುದರಿಂದ ಹೇಳಿಲ್ಲ. ದಿವಮುಸಲಾದಿಗಳಿಗೆ ಪೃಥಕ್‌ಸ್ತುತಿಯಿಲ್ಲದಿರುವುದರಿಂದ ಅದರ ಸಾಹಚರ್ಯದಿಂದ ಉಲೂಖಲಮುಸಲಾದಿಗಳನ್ನೇ ಹೇಳಿರುತ್ತಾರೆ. ಈ ಎಂಟರಲ್ಲಿ ಉಲೂಖಲಮುಸಲದ್ರವ್ಯವಾದುದರಿಂದ ಮೊದಲು ಪಠಿತವಾಗಿದೆ. ಇವು ಪೃಥಿವ್ಯಾಯತನವೆಂದೂ ಪ್ರಸಿದ್ಧವಾಗಿದೆ. ಉಲೂಖಲಮುಸಲೇ ಎಂದು ಒಂದುಪದ. "ಉಲೂಖಲಂ ಚ ಮುಸಲಂಚ" ಎಂದು ದ್ವಂದ್ವಸಮಾಸಮಾಡಿರುವುದರಿಂದ ದ್ವಿವಚನ ಬಂದಿದೆ.

**ಉಲೂಖಲಂ ವ್ಯಾಖ್ಯಾತಂ । ಮುಸಲಂ ಮುಹುಸರಂ । ತಯೋರೇಷಾ ಭವತಿ ॥**

ಉಲೂಖಲ ಅಂದರೆ ಒರಳು. ಇದು ಹಿಂದೆ (೯-೨೦) ವ್ಯಾಖ್ಯಾತವಾಗಿದೆ. ಮುಸಲವೆಂದರೆ ಒನಕೆ. ಮುಹಸರವೆಂಬುದು

ಮುಸಲವೆಂದಾಗಿದೆ. ಇದು ಭತ್ತ ಮುಂತಾದುವುಗಳನ್ನು ಕುಟ್ಟಲು ಪುನಃ ಪುನಃ ಹೋಗುತ್ತದೆ. ಮುಹುಃ ಎಂಬ ಶಬ್ದವು ಉಪಪದವಾಗಿರುವಾಗ ಸೃ–ಗತೌ ಧಾತುವಿಗೆ ಅಲಚ್‌ಪ್ರತ್ಯಯ. ಮುಹುಃ ಶಬ್ದಕ್ಕೆ ಮುಸಾದೇಶ. ಎತ್ತಿತ್ತಿ ಕೆಡಹುವುದರಿಂದ ಮುಹುಃ ಸರಲಂ ಎಂಬುದು ಮುಸಲವೆಂದಾಗಿದೆ. ಮುಂದೆ ಹೇಳುವ ಮಂತ್ರವು ಉಲೂಖಲಮುಸಲಗಳ ಸ್ತುತಿಯನ್ನು ಪ್ರತಿಪಾದಿತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಮೂವತ್ತೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷಟ್‌ತ್ರಿಂಶತಿಃ ಖಂಡಃ

## ಮೂವತ್ತಾರನೆಯ ಖಂಡವು

ಆಯಜೀ ವಾಜಸಾತಮಾ ತಾ ಹ್ಯು೧ಚ್ಚಾ ವಿಜರ್ಭೃತಃ । ಹರೀ ಇವಾಂಧಾಸಿ ಬಪ್ಸತಾ । (ಋ. ಸಂ. ೧-೨೮-೭) ॥ ಆಯುಷ್ಟವ್ಯೇ ಅನ್ನಾನಾಂ ಸಂಭಕ್ತತಮೇ ತೇ ಹ್ಯುಚ್ಚೈರ್ವಿಹ್ರಿಯೇತೇ ಹರೀ ಇವಾನ್ನಾನಿ ಭುಂಜಾನೇ ಹವಿರ್ಧಾನೇ ಹವಿಷಾಂ ನಿಧಾನೇ ತಯೋರೇಷಾ ಭವತಿ ॥ ೩೬ ॥

ಆಯಜೀ ವಾಜಸಾತಮಾ ತಾ ಹ್ಯು ಚ್ಚಾ ವಿಜರ್ಭೃತಃ । ಹರೀ ಇವಾಂಧಾಂಸಿ ಬಪ್ಸತಾ ॥

(ಋ.ಸಂ. ೧–೨–೨೬)

ಉಲೂಖಲಮುಸಲಸ್ತುತಿ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಈ ಒರಳು ಮತ್ತು ಒನಕೆಗಳು ಅತಿಪೂಜ್ಯವಾಗಿವೆ. ಅನ್ನವನ್ನು ಹೊಂದಿರುತ್ತವೆ. ಅವು ಪ್ರೌಢಧ್ವನಿಯಿಂದ ಶಬ್ದಮಾಡುತ್ತವೆ. ಕುದುರೆಗಳಂತೆ ನಮ್ಮ ಮನೆಗಳಲ್ಲಿ ಅನ್ನವನ್ನು ಸಂಸ್ಕರಿಸಲಿ.

ಆಯುಷ್ಟವ್ಯೇ ಅನ್ನಾನಾಂ ಸಂಭಕ್ತತಮೇ ತೇ ಹ್ಯುಚ್ಚೈರ್ವಿಹ್ರಿಯೇತೇ ಹರೀ ಇವಾನ್ನಾನಿ ಭುಂಜಾನೇ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ಪಷ್ಟಾರ್ಥಕವಾಗಿದೆ.

ಹವಿರ್ಧಾನೇ ಹವಿಷಾಂ ನಿಧಾನೇ । ತಯೋರೇಷಾ ಭವತಿ ॥ ೩೬ ॥

ಹವಿರ್ಧಾನೇ ಎಂಬ ಪದದ ನಿರ್ವಚನವನ್ನು ತೋರಿಸುತ್ತಾರೆ. ಇದೂ ದ್ವಿವಚನಾಂತವಾದಪದ. ದ್ವಂದ್ವಾಪವಾದವಾದ ಏಕ ಶೇಷದಿಂದ ನಿರ್ದಿಷ್ಟವಾದುದರಿಂದ ದ್ವಂದ್ವಮಧ್ಯದಲ್ಲಿ ಇದರ ಪರಿಗಣನವು ಗೌಣವೆಂದು ತಿಳಿಯಬೇಕು. ಸೋಮಲತಾ ಲಕ್ಷಣವಾದ ಹವಿಸ್ಸನ್ನು ಇಡುವ ಪಾತ್ರೆಯ ಹೆಸರು. ಅಧಿಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯ. ಮುಂದೆ ಹೇಳುವ ಮಂತ್ರವು ಹವಿರ್ಧಾನದ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ
ಮೂವತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತತ್ರಿಂಶತಿಖಂಡಃ

## ಮೂವತ್ತೇಳನೆಯ ಖಂಡವು

ಆ ವಾಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾಃ । ಇಹಾದ್ಯ ಸೋಮಪೀತಯೇ । (ಋ. ಸಂ. ೨-೪೧-೨೧) ॥ ಆಸೀದಂತು ವಾಮುಪಸ್ಥ ಮುಪಸ್ಥಾನ-ಮದ್ರೋಗ್ಧವ್ಯೇ ಇತಿ ವಾ ಯಜ್ಞಿಯಾ ದೇವ ಯಜ್ಞಸಂಪಾದಿವಾ ಇಹಾದ್ಯ ಸೋಮ-ಪಾನಾಯ ದ್ಯಾವಾಪೃಥಿವ್ಯಾ ವ್ಯಾಖ್ಯಾತೇ ತಯೋರೇಷಾ ಭವತಿ ॥ ೩೭ ॥

ಆವಾ ಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾ ।
ಇಹಾದ್ಯ ಸೋಮಪೀತಯೇ ॥ (ಋ. ಸಂ. ೨-೮-೧೦)

ಹವಿರ್ಧಾನಪಾತ್ರವಿಶೇಷದ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಹವಿಸ್ಸನ್ನಿಡಲು ಆಶ್ರಯ ವಾದ ದ್ಯಾವಾಪೃಥಿವಿಯರೇ ದ್ರೋಹವರ್ಜಿತವಾದ ನಿಮ್ಮ ಉಪಸ್ಥಾನದಲ್ಲಿ ಯಜ್ಞಾರ್ಹರಾದ ದೇವತೆಗಳು ಈ ಕರ್ಮದ ಹಗಲಿನಲ್ಲಿ ಸೋಮಪಾನಕ್ಕೋಸ್ಕರ ಸನ್ನಿಹಿತರಾಗಿರಲಿ.

ಆಸೀದಂತು ವಾಮುಪಸ್ಥ ಉಪಸ್ಥಾನೇ ಯಜ್ಞಿಯಾ ದೇವಾಃ
ಯಜ್ಞಸಂಪಾದಿನಃ ಇಹಾದ್ಯ ಸೋಮಪಾನಾಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಎಲ್ಲಿ ನೀವು ಬಂದು ಇರುತ್ತೀರೋ ಅದು ಉಪಸ್ಥಾನ. ಯಜ್ಞಿಯಾಃ ಯಜ್ಞಕ್ಕೆ ಅರ್ಹ ರಾದವರು. ಯಜ್ಞವನ್ನು ಸಂಪಾದಿಸಿಕೊಡುವವರೆಂದರ್ಥ.

ದ್ಯಾವಾಪೃಥಿವೌ ವ್ಯಾಖ್ಯಾತೇ । ತಯೋರೇಷಾ ಭವತಿ ॥ ೩೭ ॥

ದ್ಯಾವಾಪೃಥಿವ್ಯೌ ಎಂಬ ದ್ವಂದ್ವವು ಕ್ರಮಪ್ರಾಪ್ತವಾಗಿದೆ. 'ವಾಛಂದಸಿ' ಸೂತ್ರದಿಂದ ಪೂರ್ವಸವರ್ಣಬಂದು ದ್ಯಾವಾಪೃಥಿವೀ ಎಂದಾಗಿದೆ. ದ್ಯೌಶ್ಚ ಪೃಥಿವೀ ಚ ಎಂದು ದ್ವಂದ್ವ ನಿರ್ದಿಷ್ಟವಾದ ಈ ಪದ ಹಿಂದೆ ವ್ಯಾಖ್ಯಾತವಾಗಿದೆ. ದ್ಯುತ್ಯರ್ಥಕ ದಿವ್ ಧಾತುವಿಗೆ ಡಿವಿಪ್ರತ್ಯಯದಿಂದ ದ್ಯೌಃ ಎಂದಾಗಿದೆ. ಪ್ರಕಾಶಿಸುವುದು. ದ್ಯುಲೋಕ. 'ಪ್ರಥೇಃ ಷಿವನ್ ಸಂಪ್ರಸಾರಣಂ ಚ' ಎಂದು ಪ್ರಥಧಾತುವಿಗೆ ಷಿವನ್‌ಪ್ರತ್ಯಯದಿಂದ ಪೃಥಿವೀ ಎಂದಾಗಿದೆ. ಈ ಪೃಥಿವಿಯು ಐವತ್ತುಕೋಟಿಯೋಜನ ವಿಸ್ತೀರ್ಣ ವಾಗಿದೆಯೆಂದು ಪೌರಾಣಿಕರು ಹೇಳುತ್ತಾರೆ. ದ್ಯೌಶ್ಚಪೃಥಿವೀ ಚ ಎಂದು ದ್ವಂದ್ವಮಾಡಿದಾಗ 'ದಿವೋ ದ್ಯಾವಾ' ಸೂತ್ರದಿಂದ ದ್ಯಾವಾದೇಶ. ಮುಂದೆ ಹೇಳುವ ಮಂತ್ರವು ದ್ಯಾವಾಪೃಥಿವಿಯ ಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ
ಮೂವತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಾತ್ರಿಂಶತಿಃ ಖಂಡಃ

## ಮೂವತ್ತೆಂಟನೆಯ ಖಂಡವು

ದ್ಯಾವಾ ನಃ ಪೃಥೀ ಇಮಂ ಸಿಧ್ರಮದ್ಯ ದಿವಿಸ್ಪೃಶಮ್ । ಯಜ್ಞಂ ದೇವೇಷು ಯಚ್ಛತಮ್ । (ಋ. ಸಂ. ೨-೪೧-೨೦) ॥ ದ್ಯಾವಾಪೃಥಿವ್ಯಾ ನ ಇಮಂ ಸಾಧನಮದ್ಯ ದಿವಿಸ್ಪೃಶಂ ಯಜ್ಞಂ ದೇವೇಷು ನಿಯಚ್ಛತಾಂ ವಿಪಾಟ್‌ಶುತುದ್ರ್ಯೌ ವಾಖ್ಯಾತೇ ತಯೋರೇಷಾ ಭವತಿ ॥ ೩೮ ॥

ದ್ಯಾವಾ ನಃ ಪೃಥಿವೀ ಇಮಂ ಸಿಧ್ರಮದ್ಯ ದಿವಿಸ್ಪೃಶಂ । ಯಜ್ಞಂ
ದೇವೀಷು ಯಚ್ಛತಮ್ ॥

(ಋ.ಸಂ. ೨-೮-೧೦)

ದ್ಯಾವಾಪೃಥಿವೀಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ದ್ಯಾವಾಪೃಥಿವಿಯರೇ ನಮಗೆ ಸ್ವರ್ಗ ಸಾಧಕವಾದ ದೇವತೆಗಳವರೆಗೆ ಹೋಗುವ ಈ ಯಜ್ಞವನ್ನು ದೇವತೆಗಳಿಗೋಸ್ಕರ ಒಯ್ದುಕೊಡಿರಿ.

ದ್ಯಾವಾಪೃಥಿವ್ಯಾ ನ ಇಮಂ ಸಾಧನಮದ್ಯ ದಿವಿಸ್ಪೃಶಂ ಯಜ್ಞಂ
ದೇವೇಷು ನಿಯಚ್ಛತಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ದ್ಯುಲೋಕವನ್ನು ಮುಟ್ಟುವುದು ದಿವಿಸ್ಪೃಕ್. ಯಜ್ಞವು ಅಲ್ಲಿಯವರೆಗೆ ವ್ಯಾಪಿಸಿ ದೇವತೆಗಳನ್ನು ಹೊಂದುತ್ತದೆ.

## ವಿಪಾಟ್ಶುತುದ್ರ್ಯೌ ವ್ಯಾಖ್ಯಾತೇ । ತಯೋರೇಷಾ ಭವತಿ ॥ ೩೮ ॥

ವಿಪಾಟ್‌ಚತುದ್ರೀ ಎಂಬ ದ್ವಂದ್ವವು ಕ್ರಮಪ್ರಾಪ್ತವಾಗುತ್ತದೆ. ವಿಪಾಟ್‌ಚಶುತುದ್ರಿಶ್ಚ ಎಂದು ಇದು ಪೂರ್ವದಲ್ಲಿ ವ್ಯಾಖ್ಯಾತ ವಾಗಿದೆ. "ವಿಪಾಟ್‌ಚ ವಿಪಾಟನಾದ್ವಾ" (ನಿ. ೯–೨೬) ಹರಿಯುವಾಗ ಭೂಮಿಯನ್ನು ಸೀಳಿಕೊಂಡು ಹೋಗುವುದರಿಂದ ವಿಪಾಟ್ ಎಂದಾಗಿದೆ. 'ಶುತದ್ರೀ ಶುದ್ರಾವಿಣೀ' (ನಿ. ೯–೨೬) ದುಃಖವನ್ನು ಹೋಗಲಾಡಿಸುವುದು. ಮುಂದೆ ಹೇಳುವ ಮಂತ್ರವು ವಿಪಾಟ್ಶುತುದ್ರೀ ದ್ವಂದ್ವದ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ಮೂವತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕೋನಚತ್ವಾರಿಂಶತ್ ಖಂಡಃ

## ಮೂವತ್ತೊಂಬತ್ತನೆಯ ಖಂಡವು

ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇ ಇವ ವಿಷಿತೇ ಹಾಸಮಾನೇ । ಗಾವೇವ ಶುಭ್ರೇ ಮಾತರಾ ರಿಹಾಣೇ ವಿಪಾಟ್ಛುತುದ್ರೀ ಪಯಸಾ ಜವೇತೇ । (ಋ.ಸ. ೩-೩೩-೧) ॥ ಪರ್ವತಾನಾಮುಪಸ್ಥಾದುಪಸ್ಥಾನಾದುಶಂತ್ಯಸೌ ಕಾಮಯಮಾನೇ ಅಶ್ವೇ ಇವ ವಿಮುಕ್ತೇ ಇತಿ ವಾ ವಿಷಣ್ಣೇ ಇತಿ ವಾ ಹಾಸಮಾನೇ ಹಾಸತಿಃ ಸ್ವರ್ಧಾ-ಯಾಂ ಹರ್ಷಮಾಣೇ ವಾ ಗಾವಾವಿವ ಶುಭ್ರೇ ಶೋಭನೇ ಮಾತರೌ ಸಂರಿಹಾಣೇ ವಿಪಾಟ್ಛುತುದ್ರ್ಯೌ ಪಯಸಾ ಪ್ರಜವೇತೇ ಆತ್ನೀರ್ ಅರ್ತನ್ಯೌ ವಾರಣ್ಯೌ ವಾರಿಷಣ್ಯೌ ವಾ ತಯೋಃರೇಷಾ ಭವತಿ ॥ ೩೯ ॥

ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇಇವ ವಿಷಿತೇಹಾಸಮಾನೇ ।
ಗಾವೇವಶುಭ್ರೇಮಾತರಾ ರಿಹಾಣೇ ವಿಪಾಟ್ಛುತುದ್ರೀ ಪಯಸಾ
ಜವೇತೇ ॥

(ಋ.ಸಂ. ೩–೩–೧೨)

ವಿಪಾಟ್ಛುತುದ್ರಿಯ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ವಾಜಿಶಾಲೆಯಿಂದ ಬಿಡಲ್ಪಟ್ಟ ಅನ್ಯೋನ್ಯ ಸ್ಪರ್ಧೆಯಿಂದ ಸಂತೋಷದಿಂದ ಹೋಗುವ ಕುದುರೆಗಳಂತೆ, ಕರುವನ್ನು ನೆಕ್ಕುವುದಕ್ಕೋಸ್ಕರ ವೇಗವಾಗಿ ಹೋಗುವ ಹಸುಗಳಂತೆ ಈ ವಿಪಾಟ್ಛುತುದ್ರಿ ನದಿಗಳು ಪರ್ವತದ ಮಧ್ಯಪ್ರದೇಶದಿಂದ ಹೊರಟು ಪರಸ್ಪರ ಹೊಂದುವ ಇಚ್ಛೆಯಿಂದ ನೀರಿನಿಂದ ತುಂಬಿ ವೇಗವಾಗಿ ಹರಿಯುತ್ತವೆ. ಅವು ನಮಗೆ ಆಳವಿಲ್ಲದಿರುವವುಗಳಾಗಲಿ.

**ಪರ್ವತಾನಾಮುಪಸ್ಥಾದುಪಸ್ಥಾನಾ ದುಶಂತ್ಯಾ ಕಾಮಯಮಾನೇ ಅಶ್ವೇ ಇವ ವಿಮುಕ್ತೇ ಇತಿ ವಾ ವಿಷಣ್ಣೇ ಇತಿ ವಾ ಹಾಸಮಾನೇ ಹಾಸತಿಃ ಸ್ಪರ್ಧಾಯಾಮ್ । ಹರ್ಷಮಾಣೇ ವಾ ಗಾವಾವಿವ ಶುಭ್ರೇ ಶೋಭನೇ ಮಾತರೌ ಸಂರಿಹಾಣೇ ವಿಪಾಟ್ಛುತುದ್ರ್ಯೌ ಪಯಸಾ ಪ್ರಜವೇತೇ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಒಂದು ಕುದುರೆ ಬಿಟ್ಟಿರುವಾಗ, ಇನ್ನೊಂದು ನೊಗ ಮುಂತಾದವುಗಳಲ್ಲಿ ಕಟ್ಟಿರುವಾಗ ಒಂದನ್ನು ನೋಡಿ ಒಂದು ಹಾಸ್ಯಮಾಡುವಂತೆ ನಗುತ್ತವೆ. ಪರಸ್ಪರ ಸ್ಪರ್ಧೆಯಿಂದಲೂ ಸಂತೋಷವಾಗುತ್ತದೆ. ಶುಭ್ರವೆಂದರೆ ಶುಭವನ್ನುಂಟುಮಾಡುವವುಗಳು. ಜು ಸೌತ್ರಧಾತು. ಗತಿವೇಗಾರ್ಥದಲ್ಲಿ ಪಠಿತವಾಗಿದೆ. ಇದು ಪರಸ್ಮೈಪದಿಯಲ್ಲಿ ಪಠಿತವಾಗಿದ್ದರೂ ವ್ಯತ್ಯಯದಿಂದ ಇಲ್ಲಿ ಆತ್ಮನೇಪದಿಯಾಗಿರುತ್ತದೆ. ಜು–ಗತೌ ಎಂದು ಪಾಠಮಾಡಿರುವ ಕ್ಷೀರಸ್ವಾಮಿಯ ಮತವನ್ನನುಸರಿಸುವುದಾದರೆ ಆಗ ಉಭಯಪದಿಯಾದುದರಿಂದ ಯಾವ ದೋಷವೂ ಇಲ್ಲ.

**ಆರ್ತ್ನೀ—ಅರ್ತನ್ಯೌ ವಾಽರಣ್ಯೌ ವಾಽರಿಷಣ್ಯೌ ವಾ । ತಯೋರೇಷಾ ಭವತಿ ॥ ೩೯ ॥**

ಕ್ರಮಪ್ರಾಪ್ತವಾದ ಆರ್ತ್ನೀಪದದ ನಿರ್ವಚನವನ್ನು ತೋರಿಸುತ್ತಾರೆ. ಬಿಲ್ಲಿನತುದಿಗೆ ಆರ್ತ್ನೀ ಎಂದು ಹೆಸರು. (ಧನುಷ್ಕೋಟಿ) ಗತ್ಯರ್ಥಕಋಧಾತುವಿನಿಂದ ನಿಷ್ಪನ್ನವಾಗಿದೆ. ಬಾಣವನ್ನು ಬಿಲ್ಲಿನಿಂದ ಎಸೆಯುವಂತೆ ಮಾಡುವವುಗಳು. "ವಹಿಶ್ರಿಶ್ರು–" ಸೂತ್ರದಿಂದ ನಿಪ್ರತ್ಯಯಬಂದಾಗ ಧಾತುವಿಗೆ ಆರ್ತ್ ಆದೇಶ. 'ಕೃದಿಕಾರಾತ್–' ಸೂತ್ರದಿಂದ ಙೀಷ್. 'ಗತೇ ಜ್ಯಯಾ ಋಷ್ಯಮಾಣೇ ಸಂಗಚ್ಛೇತೇ ಹಿಂಸಾಸಾಧನೇ ವಾ ಭವತಃ' ಎಂದು ದೇವರಾಜನು ವ್ಯಾಖ್ಯಾನ ಮಾಡಿರುತ್ತಾನೆ. ಮುಂದೆ ಹೇಳುವ ಮಂತ್ರವು ಆರ್ತ್ನೀ ಬಿಲ್ಲಿನ ತುದಿಯ ಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ
ಮೂವತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಚತ್ವಾರಿಂಶತ್ ಖಂಡಃ

### ನಲವತ್ತನೆಯ ಖಂಡವು

ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾಮುಪಸ್ಥೇ । ಅಪ ಶತ್ರೂನ್ವಿಧ್ಯತಾಂ ಸಂವಿದಾನೇ ಆರ್ತ್ನೀ ಇಮೇ ವಿಷ್ಫುರಂತೀ ಅಮಿತ್ರಾನ್ । (ಋ.ಸಂ. ೬-೭೫-೪) ॥ ತೇ ಆಚರಂತ್ಯೌ ಸಮನಸಾವಿವ ಯೋಷೇಮಾತೇವ ಪುತ್ರಂ ಬಿಭೃತಾಮುಪಸ್ಥೇನೇಽಪವಿಧ್ಯತಾಂ ಶತ್ರೂನ್ತ್ಸಂವಿದಾನೇ ಆರ್ತ್ನ್ಯಾವಿಮೇ ವಿಘ್ನತ್ಯಾವ ಮಿತ್ರಾಞ್ಛುನಾಸೀರೌ ಶುನೋ ವಾಯುಃಶು ಏತ್ಯಂತರಿಕ್ಷೇ ಸೀರ ಆದಿತ್ಯಃ ಸರಣಾತ್ತಯೋ ರೇಷಾ ಭವತಿ ॥ ೪೦॥

ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾಮು
ಪಸ್ಥೇ । ಅಪಶತ್ರೂನ್ ವಿಧ್ಯತಾಂ ಸಂವಿದಾನೇ ಆರ್ತ್ನೀ ಇಮೇ
ವಿಷ್ಫುರಂತೀ ಅಮಿತ್ರಾನ್ ॥

(ಋ.ಸಂ. ೫-೧-೧೯) (ಯ.ವಾ.ಸಂ. ೨೯-೪)

ಆರ್ತ್ನೀಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಒಬ್ಬ ಪತಿಯನ್ನು ಕುರಿತು ಇಬ್ಬರು ಪತ್ನಿಯರು ಸಮಾನವಾಗಿ ಆಚರಿಸುವಂತೆ ಎರಡು ಬಿಲ್ಲಿನ ತುದಿಗಳು ಬಿಲ್ಲಾಳು ಬಿಲ್ಲನ್ನು ಎಳೆಯುವಾಗ ಸಮಾನವಾಗಿ ಬಗ್ಗುತ್ತವೆ. ತಾಯಿಯು ಪುತ್ರನನ್ನು ಗರ್ಭದಲ್ಲಿ ಧರಿಸುವಂತೆ ಸೆಳೆಯುವ ರಾಜನನ್ನು ಧರಿಸಿರಲಿ. ಈ ಧನುಷ್ಕೋಟಿಗಳು ಸೆಳೆಯುವಾಗ ಸಂಭಾಷಣ ಮಾಡುವವುಗಳಂತೆ ಪ್ರಕಾಶಿಸುತ್ತಾ ಈ ರಾಜನ ಶತ್ರುಗಳನ್ನು ನಾಶಪಡಿಸಲೆಂದು ಪ್ರಾರ್ಥಿಸುತ್ತೇವೆ.

ತೇ ಆಚರಂತ್ಯೌ ಸಮನಸಾವಿವ ಯೋಷೇ ಮಾತೇವ ಪುತ್ರಂ ಬಿಭೃತಾ
ಮುಪಸ್ಥ ಉಪಸ್ಥಾನೇಽಪವಿಧ್ಯತಾಂ ಶತ್ರೂನ್ ಸಂವಿದಾನೇ
ಆರ್ತ್ನ್ಯಾವಿಮೇ ವಿಘ್ನನ್ತ್ಯಾವಮಿತ್ರಾನ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಮಾನ ಮನಸ್ಕರಾದ ಸ್ತ್ರೀಯರು ಒಂದೇರೀತಿಯಿಂದ ಒಬ್ಬ ಪತಿಯನ್ನು ಸೇವಿಸುವಂತೆ ಈ ಬಿಲ್ಲಿನತುದಿಗಳು ಏಕಕಾಲದಲ್ಲಿ ಬಗ್ಗುತ್ತವೆ. ರಾಜನ ಶತ್ರುಗಳನ್ನು ನಾಶಪಡಿಸಲೆಂದು ಅಧ್ವರ್ಯುನಾಡುವ ಸ್ತುತಿ.

ಶುನಾಸೀರೌ—ಶುನೋ ವಾಯುಃ ಶು ಅಂತರಿಕ್ಷೇ, ಸೀರ ಆದಿತ್ಯಃ
ಸರಣಾತ್, ತಯೋರೇಷಾ ಭವತಿ ॥

ಶುನಾಸೀರೌ ಎಂಬ ದ್ವಂದ್ವವು ಕ್ರಮಪ್ರಾಪ್ತವಾಗಿದೆ. ಇದನ್ನು ಅವಯವಗಳ ನಿರ್ವಚನದಿಂದ ವಿವರಿಸುತ್ತಾರೆ. ಶುನ ಅಂದರೆ ವಾಯು. ಶು ಅಂದರೆ ಆಕಾಶ. ಆದರಲ್ಲಿ (ನಯತಿ) ಹೋಗುವುದು, ಸಂಚರಿಸುವುದು. ಶು ಉಪಪದವಾಗಿರುವಾಗ ಗತ್ಯರ್ಥಕವಾದ ನೀ ಧಾತುವಿಗೆ "ಅನ್ಯೇಷ್ವಪಿ ದೃಶ್ಯತೇ" ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಸೀರ ಅಂದರೆ ಆದಿತ್ಯ. ಸೂರ್ಯ. ನಿತ್ಯವಾಗಿ ಸರಣ ಅಂದರೆ ಗಮನವುಳ್ಳವನು. ಗತ್ಯರ್ಥಕವಾದ ಸೃಧಾತುವಿಗೆ "ಡಿಂಡೀರ. ವಾನೀರ–" ಸೂತ್ರದಿಂದ ರನ್‌ಪ್ರತ್ಯಯ. ಟಿಲೋಪಗಳು (ನಿಪಾತದಿಂದ) ಬರುತ್ತವೆ. ಶುನಶ್ಚ ಎಂದು ದ್ವಂದ್ವಮಾಡಿದಾಗ "ದೇವತಾದ್ವಂದ್ವೇ ಚ" ಸೂತ್ರದಿಂದ ಪೂರ್ವಪದಕ್ಕೆ ಇನಙ. ಶುನಾಸೀರೌ. ವಾಯುಸೂರ್ಯರು. ಮುಂದೆ ಹೇಳುವ ಮಂತ್ರವು ಶುನಾಸೀರರ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ನಲವತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕಚತ್ವಾಂಶತ್ ಖಂಡಃ

## ನಲವತ್ತೊಂದನೆಯ ಖಂಡವು

ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ದಿವಿ ಚಕ್ರಥುಃ ಪಯಃ । ತೇನೇಮಾಮುಪ ಸಿಂಚತಮ್ । (ಋ.ಸಂ. ೪-೫೭-೫) ॥ ಇತಿ ಸಾ ನಿಗದವ್ಯಾಖ್ಯಾತಾ ದೇವೀ ಜೋಷ್ಟ್ರೀ ದೇವ್ಯೌ ಜೋಷಯಿತ್ರ್ಯೌ ದ್ಯಾವಾಪೃಥಿವ್ಯಾವಿತಿ ವಾಹೋರಾತ್ರೇ ಇತಿ ವಾ ಸಸ್ಯಂ ಚ ಸಮಾ ಚೇತಿ ಕಾತ್ಥಕ್ಯಸ್ತಯೋರೇಷ ಸಂಪ್ರೈಷೋ ಭವತಿ ॥ ೪೧ ॥

ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ದಿವಿ ಚಕ್ರಥುಃ
ಪಯಃ । ತೇನೇಮಾಮುಪಸಿ ಸಿಂಚತಮ್ ॥

(ಋ. ಸಂ. ೩-೪೮-೫ ॥ ಯ. ವಾ. ಸಂ. ೧೨-೬೯ ॥ ಆ. ಸಂ. ೩-೧೭-೭) ಶುನಾಸೀರಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ವಾಯು ಸೂರ್ಯರೇ ನೀವು ನಮ್ಮ ಸ್ತುತಿಯನ್ನು ಸೇವಿಸಿರಿ. ನೀವು ನೀರನ್ನು ಅಂತರಿಕ್ಷದಲ್ಲಿ ಧರಿಸಿರುತ್ತೀರಿ. ಆ ನೀರಿನಿಂದ ಭೂಮಿಗೆ ಮಳೆ ಸುರಿಸಿರಿ.

॥ ಇತಿ ಸಾ ನಿಗದವ್ಯಾಖ್ಯಾತಾ ॥

ಮಂತ್ರಾರ್ಥವು ಸುಲಭವಾದುದರಿಂದ ಪಾಠಮಾತ್ರದಿಂದಲೇ ವ್ಯಾಖ್ಯಾನವಾಗಿದೆಯೆಂದು ತಿಳಿಸುತ್ತಾರೆ.

## ॥ ದೇವೀ ಜೋಷ್ಟ್ರೀ—ದೇವ್ಯೌ ಜೋಷಯಿತ್ರ್ಯೌ ॥

ದೇವೀಜೋಷ್ಟ್ರೀ ಎಂದು ದ್ವಂದ್ವದಿಂದ ಒಂದು ಪದವು ನಿರ್ದಿಷ್ಟವಾಗಿದೆ. ದೇವೀಚ ಜೋಷ್ಟ್ರೀ ಚ, ಎಂದು ದ್ವಂದ್ವ ಸಮಾಸ. 'ವಾ ಛಂದಸಿ' ಸೂತ್ರದಿಂದ ಜೌ ಎಂಬ ದ್ವಿವಚನಕ್ಕೆ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬಂದಿದೆ. ದೇವ್ಯೌಪ್ರಕಾಶಮಾನರಾದ ದೇವತೆಗಳು. ಪಚಾದಿಗಣದಲ್ಲಿ ದೇವೇಟ್ ಎಂದು ಪಾಠಮಾಡಿರುವುದಿಂದ ಙ್‌ೀಪ್. ಜೋಷ ಯಿತ್ರ್ಯೌ. ಎಲ್ಲರನ್ನು ತೃಪ್ತಿಪಡಿಸುವವರು. ಜುಷೀ–ಪ್ರೀತಿಸೇವನಯೋಃ. ಧಾತು. ತೃನ್‌ಪ್ರತ್ಯಯ. ಪಿತ್ತಾದುದರಿಂದ ಸ್ತ್ರೀಲಿಂಗದಲ್ಲಿ ಙೀಷ್. ಜೋಷ್ಟ್ರೀ ಎಂದಾಗುತ್ತದೆ.

**ದ್ಯಾವಾಪೃಥಿವ್ಯಾವಿತಿ ವಾ, ಅಹೋರಾತ್ರೇ ಇತಿ ವಾ ಶಸ್ಯಂ ಚ ಸಮಾ ಚೇತಿ ಕಾತ್ಥಕ್ಯಃ । ತಯೋರೇಷಃ ಸಂಪ್ರೈಷೋ ಭವತಿ ॥**

ದೇವೀಜೋಷ್ಟ್ರೀ ಪದದಿಂದ ತೋರುವ ದೇವತೆಗಳನ್ನು ನಿರ್ದೇಶಿಸುತ್ತಾರೆ. ದ್ಯಾವಾಪೃಥಿವಿಗಳೆಂದು ಕೆಲವರ ಮತ. ಅಹೋರಾತ್ರಗಳೆಂದು ಮತ್ತು ಕೆಲವರ ಮತ. 'ಹೇಮಂತಶಿಶಿರಾವಹೋ ರಾತ್ರೇ ಚ ಛಂದಸಿ' ಸೂತ್ರದಿಂದ ಛಾಂದಸವಾಗಿ ರಾತ್ರಿ ಶಬ್ದಕ್ಕೆ ಪೂರ್ವಶಬ್ದದಂತೆ (ಅಹಃ, ನಪುಂಸಕಲಿಂಗ) ಲಿಂಗ ಬಂದಿದೆ. ಸಸ್ಯ ವ್ರೀಹ್ಯಾದಿಧಾನ್ಯಗಳು. ಸಮಾಃ ಸಂವತ್ಸರ. ಇವೆರಡೆಂದು ಕಾತ್ಥಕ್ಯರ ಮತ. ಅಹೋರಾತ್ರಾದ್ಯರ್ಥಗಳಲ್ಲಿ ಏಕಶೇಷಗರ್ಭವಾದ ದ್ವಂದ್ವಸಮಾಸವು ಇಲ್ಲಿ ಅಭಿನುತವಾಗಿದೆ. ಪ್ರಥಮಾ ಬಹುವಚನದಲ್ಲಿ ವಿಕಲ್ಪವಾಗಿ ಪೂರ್ವಸವರ್ಣದೀರ್ಘ. ಮುಂದೆ ಹೇಳುವ ಮಂತ್ರವು ಇವುಗಳ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಒಂಭತ್ತನೆಯ ಅಧ್ಯಾಯದಲ್ಲಿ

ನಲವತ್ತೊಂದನೆಯ ಖಂಡ ಮುಗಿದಿದೆ.

—·—

## ಅಥ ದ್ವಿಚತ್ವಾರಿಂಶತ್ ಖಂಡಃ

## ನಲವತ್ತೆರಡನೆಯ ಖಂಡವು

**ದೇವೀ ಜೋಷ್ಟ್ರೀ ವಸುಧಿತೀ ಯಯೋರನ್ಯಾಘಾ ದ್ವೇಷಾಂಸಿ ಯೂಯುವದಾನ್ಯಾವಕ್ಷದ್ವಸು ವಾರ್ಯಾಣಿ ಯಜಮಾನಾಯ ವಸುವನೇ ವಸುಧೇಯಸ್ಯ ವೀತಾಂ ಯಜ (ಮೈತ್ರಾ. ಸಂ ೪-೧೩-೮ ॥ ತೈ. ಬ್ರಾ. ೩-೬-೧೩) ॥ ದೇವೀ ಜೋಷ್ಟ್ರೀ ದೇವ್ಯೌ ಜೋಷಯಿತ್ರ್ಯೌ ವಸುಧಿತೀ ವಸುಧಾನೌ ಯಯೋರನ್ಯಾಘಾನಿ ದ್ವೇಷಾಂಸ್ಯವಯಾವಯುತ್ಯಾವಹತ್ಯನ್ಯಾ ವಸೂನಿ ವರಣೀಯಾನಿ ಯಜಮಾನಾಯ ವಸುವನನಾಯ ಚ**

ವಸುಧಾನಾಯ ಚ ವೀತಾಂ ಪಿಬೇತಾಂ ಕಾಮಯೇತಾಂ ವಾ ಯಜೇತಿ ಸಂಪ್ರೈಷೋ ದೇವೀ ಊರ್ಜಾಹುತೀ ದೇವ್ಯಾ ಊರ್ಜಾಹ್ವಾನ್ಯೌ ದ್ಯಾವಾಪೃಥಿವ್ಯಾವಿತಿ ವಾಹೋರಾತ್ರೇ ಇತಿ ವಾ ಸಸ್ಯಂ ಚ ಸಮಾ ಚೇತಿ ಕಾತ್ಥಕ್ಯಸ್ತಯೋರೇಷ ಸಂಪ್ರೈಷೋ ಭವತಿ ॥ ೪೨ ॥

ದೇವೀ ಜೋಷ್ಟ್ರೀ ವಸುಧೀತೀ ಯಯೋರನ್ಯಾಘಾ ದ್ವೇಷಾಂಸಿ
ಯೂಯವದ ನ್ಯಾವಕ್ಷದ್ವಸು ವಾರ್ಯಾಣಿ ಯಜಮಾನಾಯ
ವಸುವನೇ ವಸುಧೇಯಸ್ಯ ವೀತಾಂ ಯಜಂ ॥

ದೇವೀಜೋಷ್ಟ್ರೀ ಸಂಪ್ರೈಷ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಈ ದೇವೀಜೋಷ್ಟ್ರೀ ದೇವತೆಯರು ಧನ ಧಾನ್ಯಗಳನ್ನು ಧರಿಸಿರುತ್ತಾರೆ. ಅವರ ಮಧ್ಯದಲ್ಲಿ ಒಬ್ಬಳು ಪಾಪಗಳನ್ನೂ, ದೌರ್ಭಾಗ್ಯವನ್ನೂ ಬೇರೆಯಾಗಿ ಮಾಡುತ್ತಾಳೆ. ಬೇರೊಬ್ಬಳು ಧನವನ್ನು ಧರಿಸುವ ಯಜಮಾನನಿಗೆ ಹೊಂದಲು ಯೋಗ್ಯವಾದ ಭೋಗಯೋಗ್ಯವಾದ ಧನವನ್ನು ಕೊಡುತ್ತಾಳೆ. ಅವರಿಬ್ಬರು ವಸುವಿಶಿಷ್ಟವಾದ ಪೃಷದಾಜ್ಯದ ಸ್ವಾಂಶವನ್ನು ಕುಡಿಯಲಿ. ಹೋತೃವೇ ನೀನು ಇದರಿಂದ ಹೋಮಿಸು.

ದೇವೀಜೋಷ್ಟ್ರೀ — ದೇವ್ಯೌ — ಜೋಷಯಿತ್ರ್ಯೌ ವಸುಧೀತೀ
ವಸುಧಾನ್ಯೌ । ಯಯೋರನ್ಯಾಽಘಾನಿ ದ್ವೇಷಾಂ ಸ್ಯವಯಾ
ಯಾತ್ಯಾವಹತ್ಯನ್ಯಾ ವಸೂನಿ ವನನೀಯಾನಿ ಯಜಮಾನಾಯ
ವಸುವನನಾಯ ಚ ವಸುಧಾನಾಯಚ ವೀತಾಂ ಪಿಬೇತಾಂ
ಕಾಮಯೇತಾಂ ವಾ ಯಜೇತಿ ಸಂಪ್ರೈಷಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ದೇವೀಜೋಷ್ಟ್ರೀ. ಪ್ರಕಾಶಮಾನವಾದ ಸಕಲರಿಂದ ಸೇವಿಸಲ್ಪಡುವ ದೇವತೆಯರು. ಧನ ಧಾನ್ಯವನ್ನು ಧರಿಸುವಂತೆ ಮಾಡುವವರು. ಅದನ್ನು ಅನುಗ್ರಹಿಸುವವರು ಎಂದು ತಾತ್ಪರ್ಯ.

ದೇವೀ ಊರ್ಜಾಹುತೀ—ದೇವ್ಯಾ ಊರ್ಜಾಹ್ವಾನೌ । ದ್ಯಾವಾ
ಪೃಥಿವ್ಯಾವಿತಿ ವಾ, ಅಹೋರಾತ್ರೇ ಇತಿ ವಾ ಶಸ್ಯಂಚ ಸಮಾ
ಚೇತಿ ಕಾತ್ಥಕ್ಯಸ್ತಯೋ ರೇಷಃ ಸಂಪ್ರೈಷೋ ಭವತಿ ॥

ದೇವೀ ಊರ್ಜಾಹುತೀ ಎಂಬುದೂ ದ್ವಂದ್ವನಿರ್ದಿಷ್ಟವಾದ ಒಂದೇ ಪದ. 'ಷಟ್ತ್ರಿಂಶತ್ಪದಾನಿ,' ಮೂವತ್ತಾರು ಪದಗಳೆಂದು ನಿಘಂಟುವಿನಲ್ಲಿ ಹೇಳಿರುವುದರಿಂದ ಬೇರೆ ಬೇರೆ ಪದವೆಂದು ಕಲ್ಪಿಸಬಾರದು. ಇಲ್ಲಿಯೂ ಹಿಂದಿನಂತೆ ನಾನಾರ್ಥಗಳನ್ನು ಹೇಳು

ತ್ತಾರೆ. ದ್ಯಾವಾಪೃಥಿವಿಯೆಂಧೂ, ಅಹೋರಾತ್ರಗಳೆಂದೂ ಹೇಳುತ್ತಾರೆ. ಕಾತ್ಥಕ್ಯರು ಸಸ್ಯಗಳಾದ ವ್ರೀಹ್ಯಾದಿ, ಸಂವತ್ಸರಗಳೆಂದು ಹೇಳುತ್ತಾರೆ. ಮುಂದೆ ಹೇಳುವ ಮಂತ್ರವು ಈ ದೇವೀಊರ್ಜಾಹುತೀ ದೇವಿಯರ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ನಲವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಿಚತ್ವಾರಿಂಶತ್ ಖಂಡಃ

### ನಲವತ್ತಮೂರನೆಯ ಖಂಡವು

ದೇವೀ ಊರ್ಜಾಹುತೀ ಇಷಮೂರ್ಜಮನ್ಯಾವಕ್ಷತ್ಸಗ್ಧಿಂ ಸಪೀತಮನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನ ನವಂ ತಾಮೂರ್ಜಮೂರ್ಜಾ-ಹುತೀ ಊರ್ಜಯಮಾನೇ ಅಧಾತಾಂ ವಸುವನೇ ವಸುಧೇಯಸ್ಯ ವೀತಾಂ ಯಜ। (ಮೈತ್ರಾ. ಸಂ. ೪-೧೩-೮ || ತೈ. ಬ್ರಾ. ೩-೬-೧೩) || ದೇವೀ ಊರ್ಜಾಹುತೀ ದ್ಯಾವಾ ಊರ್ಜಾಹ್ವಾನ್ಯಾವನ್ನಂ ಚ ರಸಂ ಚಾವಹತ್ಯಾವಹತ್ಯನ್ಯಾ ಸಹಜಗ್ಧಿಂ ಚ ಸಹಪೀತಿಂ ಚಾನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನ ನವಂ ತಾಮೂರ್ಜ-ಮೂರ್ಜಾಹುತೀ ಊರ್ಜಾಯಮಾನೇ ಅಧಾತಾಂ ವಸುವನನಾಯ ಚ ವಸುಧಾನಾಯ ಚ ವೀತಾಂ ಪಿಬೇತಾಂ ಕಾಮಯೇತಾಂ ವಾ ಯಜೇತಿ ಸಂಪ್ರೈಷೋ ಯಜೇತಿ ಸಂಪ್ರೈಷಃ || ೪೩ ||

ದೇವೀ ಊರ್ಜಾಹುತೀ ಇಷಮೂರ್ಜ ಮನ್ಯಾವಕ್ಷತ್ಸಗ್ಧಿಂ ಸಪೀತಿ<br>
ಮನ್ಯಾ, ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನಾ<br>
ನವಂ ತಾಮೂರ್ಜ ಮೂರ್ಜಾಹುತೀ ಊರ್ಜಾಯ ಮಾನೇ<br>
ಅಧಾತಾಂ ವಸುವನೇ ವಸುಧೇಯಸ್ಯ ವೀತಾಂ ಯಜ ||

(ಯ.ವಾ ಸಂ. ೨೮–೧೬)

ದೇವೀ ಊರ್ಜಾಹುತೀ ಸಂಪ್ರೈಷಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಕಾಶಮಾನಳಾದ, ಬಹ್ವನ್ನ ನಿಷ್ಪಾದಕಳಾದ ದ್ಯಾವಾಪೃಥಿವೀ ದೇವತೆಯಿರಾ ನಿಮ್ಮಲ್ಲಿ ಒಬ್ಬರು ಅನ್ನಾದಿಗಳನ್ನೂ, ಕ್ಷೀರಾದಿಗಳನ್ನೂ ಧರಿಸಿರುತ್ತಾಳೆ.

ಇನ್ನೂಬ್ಬಳು ಪುತ್ರಪೌತ್ರಾದಿಗಳೊಡನೆ, ಭೋಜನವನ್ನೂ. ಬಂಧುಗಳೊಡನೆ ಪಾನವನ್ನೂ ಅನುಗ್ರಹಿಸುತ್ತಾಳೆ. ನಮಗೆ ಅವುಗಳು ಸಮೃದ್ಧವಾಗಲಿ. ಹಿಂದಿನಿಂದಲೂ ನಾವು ಅದನ್ನು ರಕ್ಷಿಸುಕೊಂಡಿರುವಂತಾಗಲಿ. ಎರಡು ರೀತಿಯಿಂದಲೂ ಗೃಹ ಕೃತ್ಯದಲ್ಲಿ ಸಮೃದ್ಧರಾಗಿ ವ್ಯವಹರಿಸುವಂತಾಗಲಿ. ಅವುಗಳಿಂದ ನಮ್ಮನ್ನು ಬಲವಂತರನ್ನಾಗಿ ಮಾಡಲಿ. ಬಹುಧನಕ್ಕೋಸ್ಕರ ಯಜಮಾನನಿಗೆ ಅನುಗ್ರಹಮಾಡಲಿ. ಬಹುಧನದಿಂದ ಸಾಧಿತವಾದ ಈ ಪೃಷದಾಜ್ಯದಸ್ವಾಂಶವನ್ನು ಈ ದೇವತೆಯರು ಪಾನಮಾಡಲಿ. ಅಥವಾ ಪಾನಮಾಡಲು ಇಚ್ಛಿಸಲಿ.

ದೇವೀ ಊರ್ಜಾಹುತೀಃ—ದೇವ್ಯಾ ಊರ್ಜಾಹ್ವಾನ್ಯಾವನ್ನಂ ಚ ರಸಂ ಚಾವಹತ್ಯಾವಹತ್ಯನ್ಯಾ ಸಹ ಜಗ್ಧಿ ಚ ಸಹಪ್ರೀತಿಂ ಚಾನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮುಪುರಾಣೇನ ನವಂ, ತಾವೂರ್ಜಮೂರ್ಜಾಹುತೀ ಊರ್ಜಯಮಯನೇ ಅಧಾತಾಂ ವಸುವನನಾಯ ಚ ವಸುಧಾನಾಯಚ ವೀತಾಂ ಪಿಬೇತಾಂ ಕಾಮಯೇತಾಂ ವಾ, ಯಜೇತಿ ಸಂಪ್ರೈಷೋ ಯಜೇತಿ ಸಂಪ್ರೈಷಃ ॥ ೪೩ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಊರ್ಕ್ ಅಂದರೆ ಅನ್ನ. ಕೆಲವರು ಊರ್ಜಾ ಎಂದು ಆಕಾರಾಂತವಾಗಿ ಪಠಿಸುತ್ತಾರೆ. ಅನ್ನಕ್ಕೋಸ್ಕರ ಈ ದೇವತೆಯ ಆಹ್ವಾನ ಮಾಡುತ್ತಾರೆ. ಇಷವೆಂಬುದಕ್ಕೆ ಅನ್ನಪಾನಗಳೆರಡೂ ಅರ್ಥ. ದಯಧಾತುವಿಗೆ ಇಲ್ಲಿ ರಕ್ಷಣ ಅರ್ಥ. ದಯ-ದಾನಗತಿರಕ್ಷಣ ಹಿಂಸಾದಾನೇಷು ಧಾತು ತಾಚ್ಛೀಲ್ಯದಲ್ಲಿ ಚಾನಶ್ ಬಂದಿದೆ. ಯಾವಾಗಲೂ ರಕ್ಷಿಸುವ ಸ್ವಭಾವವುಳ್ಳವರು. ಊರ್ಜಯಮಾನೇ ಬಲವಂತರನ್ನಾಗಿಯೂ ಪ್ರಾಣವಂತರನ್ನಾಗಿಯೂ ಮಾಡುವವರು. ಇದು ಮೈತ್ರಾವರುಣನು ಹೋತ್ರನನ್ನು ಕುರಿತು ಹೇಳುವ ಮಾತು. ಈ ಗುಣವಿಶಿಷ್ಟರಾದ ದೇವತೆಯರನ್ನು ಹೋಮದಿಂದ ಸೇವಿಸಿರಿ ಎಂದು ಸಂಪ್ರೈಷವಿಧಿಃ ಪ್ರತಿಜ್ಞಾಭ್ಯಾಸನಿಗಮಲಕ್ಷಣವಾದುದರಿಂದ ಸಂಪ್ರೈಷೋಯಜ ಎಂದು ಅಧ್ಯಾಯದ ಕೊನೆಯಲ್ಲಿ ಅಭ್ಯಾಸ ಅಂದರೆ ದ್ವಿರಾವೃತ್ತಿ ಹೇಳಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಒಂಬತ್ತನೆಯ ಅಧ್ಯಾಯದಲ್ಲಿ

ನಲವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

ಒಂಬತ್ತನೆಯ ಅಧ್ಯಾಯ ಸಮಾಪ್ತವಾಗಿದೆ.

ಅಥಯಾನ್ಯಶ್ವೋ ವೋಳ್ಹಾಮಾನೋಮಿತ್ರಃ ಕನಿಕ್ರದದ್ಭದ್ರಂವದಸಂವತ್ಸರ-ಮುಪಪ್ಲವದಪ್ರಾವಪಾಪ್ರೈತೇವದನ್ತ್ವಮುಂದಾಸ್ಯಜ್ಞಸಂಯೋಗಾದ್ವನಸ್ಪತಉಪಶ್ವಾಸ-ಯುದ ಬಹ್ವೀನಾಮುಹಿರಿವಭೋಗೈರಥೇತಿಷ್ಠಂಧನ್ವನಾಗಾವಕ್ಷ್ಯಂತೀವಸುಪರ್ಣವಸ್ತ ಜಂಘುತಿ ಯಚ್ಛಿದ್ಧಿತ್ವಂ ವೃಷಭೋನ್ಯಕ್ರುಂದಯುನ್ನಿಮುಂತಂಪಿತುನ್ನಿಮುಂಮ ಆಪೋಹಿ-ಯುಓಷಧಾರಾರಾತ್ರ್ಯರಣ್ಯಾನಿಶ್ರದ್ಧಯಾಸ್ಯೋನಾಮೀಷಾಮಿಹೇಂದ್ರಾಣೀ ಮಥಾತೋ-ಷ್ಟಾ ವಾಯುಜೀ ಆವಾಮುಪಸ್ಥದ್ಯಾವಾನಃ ಪ್ರಪರ್ವತಾನಾಂತೇ ಆಚರಂತೀ ಶುನಾಸೀರೋ ದೇವೀ ಜೋಷ್ಟ್ರೀ ದೇಷೀ ಊರ್ಜಾಹುತೀ ತ್ರಿ ಚತ್ವಾರಿಂಶತ್ ||

ಇತಿ ನಿರುಕ್ತೇ (ಉತ್ತರಷಟ್ಕೇ) ತೃತೀಯೋಽಧ್ಯಾಯಃ || ೩ ||

---

# ನಿ ರು ಕ್ತಂ

## ಅಥ ದಶಮಾಧ್ಯಾಯಸ್ಯ ಪ್ರಥಮಃ ಖಂಡಃ

### ಒಂದನೆಯ ಖಂಡವು

ಓಂ ಅಥಾತೋ ಮಧ್ಯಸ್ಥಾನಾ ದೇವತಾಸ್ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ವಾಯುರ್ವಾತೇರ್ವೇತೇರ್ವಾ ಸ್ಯಾದ್ಗತಿಕರ್ಮಣಃ ಏತೇರಿತಿ ಸ್ಥೌಲಾಷ್ಠೀವಿರ-ನರ್ಥಕೋ ವಕಾರಸ್ತಸ್ಯೈಷಾ ಭವತಿ || ೧ ||

ಅಥಾತೋ ಮಧ್ಯಸ್ಥಾನಾ ದೇವತಾಃ ||

ಇದುವರೆಗೆ ಪೃಥಿವೀಸ್ಥಾನದೇವತಾಪದಗಳ ವ್ಯಾಖ್ಯಾನವನ್ನು ಮಾಡಿದಾಯಿತು. ಕ್ರಮಪ್ರಾಪ್ತವಾದ ಮಧ್ಯಮಸ್ಥಾನದೇವ ತಾಪದಗಳ ನಿರ್ವಚನವನ್ನು ಇಲ್ಲಿ ತೋರಿಸುತ್ತಾರೆ. ಇದನ್ನು ಆರಂಭಿಸಲು ಅಥ ಎಂದು ವಿಶೇಷಾಧಿಕಾರಾರ್ಥದ್ಯೋತಕ ಪದವನ್ನು ಹೇಳಿರುತ್ತಾರೆ. ಅತಃ ಎಂಬುದು ಆನಂತರ್ಯವನ್ನು ತಿಳಿಸುತ್ತದೆ. ಮಧ್ಯಂ ಸ್ಥಾನಂ ಏತಾಸಾಮಿತಿ ಮಧ್ಯ ಸ್ಥಾನಾಃ. ಮಧ್ಯಮಸ್ಥಾನವುಳ್ಳವರು. ವಾಯ್ವಾದಿ ದೇವತೆಗಳು ಮುಂದೆ ಹೇಳಲ್ಪಡುತ್ತವೆಯೆಂದರ್ಥ. ಭೇದಪಕ್ಷವನ್ನಾ ಶ್ರಯಿಸಿ ದೇವತಾಃ ಎಂದು ಬಹುವಚನ ಹೇಳಿದೆ ನಿರುಕ್ತಕಾರರು ತಿಸ್ರೋ ದೇವತಾಃ ಎಂದುದರಿಂದ ಮಧ್ಯಮಸ್ಥಾನ

ದೇವತೆಯೊಂದೇ ಎಂದು ಹಿಂದೆ ವಿವೃತವಾಗಿದೆ. ಈ ಮಧ್ಯಮಸ್ಥಾನದ ದೇವತೆಯ ಪರ್ಯಾಯವಚದಗಳಾದ ವಾಯ್ವಾದಿ ರೋದಸ್ಯಂತದವರೆಗೆ ಅರವತ್ತೊಂಭತ್ತು ಆಯಾಯ ಗುಣವಿಶೇಷಗಳಿಂದ ಸಂಭವಿಸುತ್ತವೆ ಹೀಗೆಯೇ ಮುಂದೆ ಉತ್ತಮ ಸ್ಥಾನದೇವತೆಗೂ ತಿಳಿಯಬೇಕು

**ತಾಸಾಂ ವಾಯುಃ ಪ್ರಥಮಗಾಮೀ ಭವತಿ ||**

ಈ ದೇವತೆಗಳಲ್ಲಿ ವಾಯುವೇ ಮೊದಲು ಉಪಸ್ಥಿತನಾಗುತ್ತಾನೆ. ಯದ್ಯಪಿ ಇಂದ್ರನೇ ಮಧ್ಯಮಸ್ಥಾನದ ಪ್ರಥಮಾಭಿಧಾನ ವೆಂದು ಹಿಂದೆ ವಿವರಿಸಿದೆ. ಆದರೂ ಮಧ್ಯಮಸ್ಥಾನವೆಂದರೆ ಮಳೆಗೆ ಉಪಲಕ್ಷಣವಾಗುವುದರಿಂದ ವಾಯುವಿಗೇ ಈ ಅಧಿಕಾರ ವಿರುವುದರಿಂದ ಅವನೇ ಮೊ ಲು ಉಪಸ್ಥಿತನಾಗುತ್ತಾನೆ. ಇಂದ್ರನು ವಾಯ್ವಾತ್ಮನಾಗಿಯೇ ಸಕಲ ದಿಕ್ಕಿನಲ್ಲಿರುವ ನೀರನ್ನು ಸೆಳೆಯುತ್ತಾ, ಮರಗಿಡಬಳ್ಳಿಗಳನ್ನೂ ಜಲಾಶಯಗಳನ್ನೂ ಒಣಗಿಸುತ್ತಾನೆ. ಅಂತರಿಕ್ಷಲೋಕದ ಗರ್ಭಭೂತವಾದ ಉದಕ ವನ್ನು ಅಧಿಕಗೊಳಿಸುತ್ತಾ, ಎಂಟು ಮಾಸಗಳಿಂದ ಕೂಡಿಹಾಕಿದ ಉದಕ ಗರ್ಭವನ್ನು ಪಕ್ವಮಾಡಿ ಪ್ರಸವಿಸುವಂತೆ ಮಾಡು ತ್ತಾನೆ. ಅಂದರೆ ಮಳೆ ಸುರಿಸುವಂತೆ ಮಾಡುತ್ತಾನೆ. ಇದನ್ನೇ—

**" ವಾಂತಿ ಪರ್ಣಶುಷೋ ವಾತಾಸ್ತತಃ ಪರ್ಣಮುಚೋಽಪರೇ |**
**ತತಃ ಪರ್ಣರುಹೋ ವಾಂತಿ ತತೋ ದೇವಃ ಪ್ರವರ್ಷತಿ || "**

ಎಂದು ವಾಯುವಿನ ನಾನಾ ವ್ಯಾಪಾರಗಳನ್ನು ವಿವರಿಸಿರುತ್ತಾರೆ. ಆದುದರಿಂದ ವೃಷ್ಟಿಕರ್ಮಾರಂಭದಲ್ಲಿ ವಾಯುಸ್ವರೂಪ ದಿಂದಲೇ ಮಧ್ಯಮನು ವ್ಯಾಪಿಸುವುದರಿಂದ ವಾಯುವನ್ನು ಮೊದಲು ಹೇಳಿರುವುದು ಸಮಂಜಸವಾಗಿದೆ. ಅದೇ ವಾಯುವು ನೀರನ್ನು ತುಂಬಿದವನಾಗಿ ಮೇಘಸಮುದಾಯದಿಂದ ಆಕಾಶವನ್ನು ವ್ಯಾಪಿಸಿ ಮಧ್ಯಮಸ್ಥಾನದ ವರುಣನಾಗುತ್ತಾನೆ. ಆಮೇಲೆ ಶಬ್ದಮಾಡುವವನಾಗಿ ರುದ್ರನೂ, ನೀರನ್ನು ಕೊಡುತ್ತಾ ಇಂದ್ರನೂ, ಆಮೇಲೆ ಪುನಃ ನೀರನ್ನು ಶೇಖರಿಸುವವನಾಗಿ ಪರ್ಜ ನ್ಯನೂ ಆಗುತ್ತಾನೆ. ಹೀಗೆ ಜಗದನುಗ್ರಹಕ್ಕೋಸ್ಕರ ಮಳೆಗರೆಯಲು ಗುಣೋಪಜನಕ್ರಮ ವಿವರಿಸಿದೆ. ಈ ಕ್ರಮದಿಂದ ವಾಯು, ವರುಣ, ರುದ್ರ, ಇಂದ್ರ, ಪರ್ಜನ್ಯ ಇತ್ಯಾದಿ ದೇವತೆಗಳ ಆನುಪೂರ್ವಿಯು ಇಲ್ಲಿ ವ್ಯಾಖ್ಯಾತವಾಗಿದೆ. ದ್ಯುಸ್ಥಾನ ದಲ್ಲಿಯೂ ಇದೇ ಗುಣೋಪಜನಕ್ರಮದಿಂದ ಸವಿತ್ರಾದಿಗಳನ್ನು ಹೇಳುತ್ತಾರೆ,

**ವಾಯುರ್ವಾತೇರ್ವೇತೇರ್ವಾ ಸ್ಯಾದ್ಗತಿಕರ್ಮಣಃ | ಏತೇರಿತಿ ಸ್ಥೌಲಾಷ್ಠೀವಿ-ರನರ್ಥಕೋ ವಕಾರಃ | ತಸ್ಯೈಷಾ ಭವತಿ || ೧ ||**

ವಾಯು ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ವಾ–ಗತಿಗಂಧನಯೋಃ. ಧಾತು. 'ಕೃವಾಪಾ'—ಉಣಾದಿಸೂತದಿಂದ ಪ್ರತ್ಯಯ ಬಂದಾಗ ಆದಂತಧಾತುವಾದುದರಿಂದ ಯುಗಾಗಮ. ಅಥವಾ ವೀ—ಗತಿವ್ಯಾಪ್ತಿಪ್ರಜನನಕಾಂತ್ಯಸನಖಾದನೇಷು ಧಾತು. ಬಹುಲಗ್ರಹಣದಿಂದ ಇದಕ್ಕೆ ಉಣ್ ಪ್ರತ್ಯಯ ಬಂದಾಗ ಅದು ಣಿತ್ತಾದುದರಿಂದ ವೃದ್ಧಿ ಆಯಾದೇಶ. ಅಥವಾ ಇಣ್–ಗತೌ ಧಾತು. 'ಛಂದಸೀಣಃ' ಸೂತ್ರದಿಂದ ಉಣ್ ಪ್ರತ್ಯಯ ಬಂದಾಗ ಹಿಂದಿನಂತೆ ವೃದ್ಧಿ ಆಯಾದೇಶ ಆಯುಃ.

ವಕಾರೋಪಸಜನದಿಂದ ವಾಯುಃ ಎಂದಾಗುತ್ತದೆ. ವಕಾರಕ್ಕೆ ಯಾವ ಅರ್ಥವೂ ಇಲ್ಲದೆ ಅಧಿಕವಾಗಿ ಬಂದಿದೆ. ಇದು ಸ್ಥೌಲಾಷ್ಠೀವಿಯೆಂಬ ಆಚಾರ್ಯರ ಮತ. ಯಾವಾಗಲೂ ಗಮನವುಳ್ಳವನು ವಾಯು ಬೀಸುತ್ತಿರುತ್ತಾನೆ. ಮುಂದಿನ ಮಂತ್ರವು ಈ ವಾಯುವಿನ ಸ್ತುತಿಯನ್ನು ತಿಳಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿಪ್ರಣೀತ ನಿರುಕ್ತಶಾಸ್ತ್ರದ ಹತ್ತನೆಯ ಅಧ್ಯಾಯದಲ್ಲಿ

ಮೊದಲನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಿತೀಯ ಖಂಡಃ

### ಎರಡನೆಯ ಖಂಡವು.

ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಮ್ । (ಋ. ಸಂ. ೧-೨-೧) ವಾಯವಾಯಾಹಿ ದರ್ಶನೀಯೇಮೇ ಸೋಮಾ ಅರಂಕೃತಾ ಅಲಂಕೃತಾಸ್ತೇಷಾಂ ಪಿಬ ಶೃಣು ನೋ ಹ್ವಾನಮಿತಿ ಕಮನ್ಯಂ ಮಧ್ಯಮಾ-ದೇವಮುವಕ್ಷ್ಯತ್ತಸ್ಯೈಷಾಪರಾ ಭವತಿ ॥ ೨ ॥

ವಾಯವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।
ತೇಷಾಂ ಪಾಹಿ ಶ್ರುಧೀ ಹವಮ್ ॥ ೧ ॥

(ಋ. ಸಂ. ೧-೧-೩)

ವಾಯುಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ದರ್ಶನಾರ್ಹನಾದ ವಾಯುವೇ ನಿನಗೋಸ್ಕರ ಈ ಸೋಮವು ಕುಡಿಯಲು ಪರಿಷ್ಕೃತವಾಗಿದೆ. ನೀನು ನಮ್ಮ ಆಹ್ವಾನವನ್ನು ಕೇಳು. ಕೇಳಿದವನೇ ಬಾ. ಬಂದು ಸೋಮಸಂಬಂಧಿಯಾದ ಸ್ವಾಂಶವನ್ನು ಪಾನಮಾಡಬೇಕೆಂದು ಬಯಸುತ್ತೇವೆ.

ವಾಯವಾಯಾಹಿ ದರ್ಶನೀಯೇಮೇ ಸೋಮಾ ಅರಂಕೃತಾಃ ಅಲಂ-
ಕೃತಾಸ್ತೇಷಾಂ ಪಿಬ, ಶೃಣು ಮೇ ಹ್ವಾನಮ್ ಇತಿ । ಕಮನ್ಯಂ
ಮಧ್ಯಮಾ ದೇವಮುದಕ್ಷ್ಯತ್ । ತಸ್ಯೈಷಾ ಅಪರಾ ಭವತಿ ॥ ೨ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. 'ರಲಯೋರಭೇದಃ' ನ್ಯಾಯದಿಂದ ಅರಂಕೃತಾಃ ಅಂದರೆ ಅಲಂಕೃತವಾಗಿದೆಯೆಂದರ್ಥ. ಅಭಿಷವಾದಿಸಂಸ್ಕಾರವೇ ಇಲ್ಲಿ ಅಲಂಕಾರ. ಪರ್ಯಾಪ್ತವಾಗಿ ಮಾಡಿದೆ ಎಂದೂ ಅರ್ಥವಾಗುತ್ತದೆ. ಇಲ್ಲಿ ವಾಯುಪದದಿಂದ

ಇಂದ್ರನೇ ಅಭಿಹಿತನಾಗಿರುತ್ತಾನೆ. ಮಧ್ಯಮಸ್ಥಾನದ ಇಂದ್ರನನ್ನಲ್ಲದೆ ಬೇರೆ ಯಾರನ್ನು ಹೇಳಬೇಕು? ಮಧ್ಯಮನಾದ ಇಂದ್ರನಿಗೇ ಸೋಮಪಾನವು ಪ್ರಸಿದ್ಧವಾಗಿದೆ. ಅವನಿಗೋಸ್ಕರವೇ ಸೋಮಸಂಸ್ಕಾರಮಾಡುವುದು. ಅವನಿಗೋಸ್ಕರ ಇತರ ಪದಾರ್ಥಗಳನ್ನು ಸಂಸ್ಕರಿಸುವುದಿಲ್ಲ. ಆದುದರಿಂದ ಇಂದ್ರನೇ ವಾಯು. ಆ ಇಂದ್ರನನ್ನೇ ಸ್ತುತಿಸುವ ಮುಂದೆ ಹೇಳುವ ಇನ್ನೊಂದು ಮಂತ್ರವೂ ಪ್ರಸಿದ್ಧವಾಗಿದೆ. ಐಂದ್ರಸೂಕ್ತದಲ್ಲಿ ಇಂದ್ರನಿಗೆ ವಿಶೇಷಣವಾಗಿ ವಾಯುವನ್ನು ಹೇಳಿರುತ್ತಾರೆ. ಇದನ್ನೇ ಮುಂದಿನ ಮಂತ್ರವು ಸ್ಪಷ್ಟಪಡಿಸುತ್ತದೆ.

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ॥**

ಎಲೈ ವಾಯುವೇ, ನಿನ್ನ ಆಕಾರವು ಬಹು ಸುಂದರವಾಗಿರುವುದು. ಈಗ ನಾವು ಈ ಯಜ್ಞದಲ್ಲಿ ಸೋಮ ರಸವನ್ನು ವಿಧ್ಯುಕ್ತವಾಗಿ ಹಿಂಡಿ ತೆಗೆದು ಸ್ತೋತ್ರಶಸ್ತ್ರಮಂತ್ರ ಪಠನಾದಿಗಳಿಂದ ಸಂಸ್ಕಾರಮಾಡಿ ಪಾನಯೋಗ್ಯವಾಗು ವಂತೆ ಸಿದ್ಧಪಡಿಸಿರುವೆವು. ನಾವು ಮಂತ್ರಗಳಿಂದ ಮಾಡುವ ಆಹ್ವಾನವನ್ನು ಕೇಳಿ ಇಲ್ಲಿಗೆ ಬಂದು ಈ ಸೋಮರಸವನ್ನು ಪಾನಮಾಡು.

**ಸೋಮಾಃ**— ವೇದದಲ್ಲಿ ಸೋಮ ವಿಚಾರವಾದ ಅನೇಕ ಮಂತ್ರಗಳಿವೆ. ಒಂಭತ್ತನೆಯ ಮಂಡಲವೆಲ್ಲವೂ ಸೋಮದ ಸ್ತುತಿಯೇ ಆಗಿದೆ. ಅನೇಕ ದೇವತೆಗಳನ್ನು ಆಹ್ವಾನಮಾಡುವ ಕಾಲದಲ್ಲಿ ಸೋಮಪಾನಕ್ಕಾಗಿ ಈ ಯಜ್ಞಕ್ಕೆ ಬರಬೇಕೆಂದು ಕರೆಯಲಾಗಿದೆ. ಸೋಮ ಸಂಬಂಧವಾದ ಅನೇಕ ಯಾಗಗಳಿವೆ. ಅವುಗಳಲ್ಲಿ ಅಗ್ನಿಷ್ಟೋಮ ಯಾಗವೇ ಮುಖ್ಯವಾದುದು. ಈ ಯಾಗದಲ್ಲಿ ಅಗ್ನಿಗೆ ಒಂದು ಪಶುಮಾತ್ರ (ಆಡು). ಸ್ತೋತ್ರಶಸ್ತ್ರಾದಿಮಂತ್ರ ಪಠನದಿಂದ ವಿಧ್ಯುಕ್ತ ವಾಗಿ ಸೋಮವನ್ನು ಮೂರು ಸವನಗಳಲ್ಲಿಯೂ ತೆಗೆದು ಸಂಸ್ಕಾರಮಾಡಿ ಯಜಮಾನನೂ ಋತ್ವಿಜರೂ ಪಾನಮಾಡು ವರು ಇತರ ಸೋಮಯಾಗಗಳಲ್ಲಿಯೂ ಕೆಲವು ವ್ಯತ್ಯಾಸಗಳೊಡನೆ ಇದೇ ಕ್ರಮವು ಅನುಸರಿಸಲ್ಪಡುವುದು.

ಈಗ ಸೋಮವೆಂದರೇನು ಎಂಬುದನ್ನು ವಿಮರ್ಶೆ ಮಾಡಬೇಕಾಗಿದೆ. ಸೋಮವು ಒಂದು ವಿಧವಾದ ಲತಾವಿಶೇ ಷವು (ಬಳ್ಳಿಯು). ಅದರ ರಸವನ್ನು ತೆಗೆಯುವುದಕ್ಕಾಗಿ ಅದನ್ನು ಕಲ್ಲಿನಮೇಲಿಟ್ಟು ಮತ್ತೊಂದು ಕಲ್ಲಿನಿಂದ ಜಜ್ಜುವುದು.; ಕೆಳಗಡೆ ಇರುವ ಕಲ್ಲಿಗೆ ಅದ್ರಿ ಎಂದು ಹೆಸರು. (ಋ.ಸಂ. ೧-೧೩೦-೨; ೧-೧೩೫-೬; ೧-೧೩೭-೧, ೩; ೨-೩೬-೧ ೯-೧೧-೫ ಇತ್ಯಾದಿ) **ಗ್ರಾವಾ** ಎಂತಲೂ ಅನೇಕ ಸಂದರ್ಭಗಳಲ್ಲಿ ಕರೆಯುವುದುಂಟು. (ಋ. ಸಂ. ೧-೨೮-೧ ೧-೮೩-೬; ೩-೪೨-೨; ೯-೮೦-೪; ೯-೮೨-೩ ಇತ್ಯಾದಿ) ಇದಲ್ಲದೆ ಈ ಕೆಳಗಿನ ಕಲ್ಲಿಗೆ ಸಂದರ್ಭಗಳಲ್ಲಿ **ಉಲೂಖಲ** ವೆಂದೂ ಹೇಳುವುದುಂಟು. (ಋ.ಸಂ. ೧-೨೮-೧ ರಿಂದ ೬)

ಕಲ್ಲಿನಿಂದ ಕುಟ್ಟಿದಮೇಲೆ ಲತೆಯಿಂದ ಹೊರಡುವ ರಸವು ಬಭ್ರುವರ್ಣದ್ದಾಗಿರುವುದೆಂತಲೂ (ಋ.ಸಂ. ೯-೧೧-೪; ೯-೩೧-೫; ೯-೩೩-೨; ೯-೬೩-೪; ೯-೯೮-೭; ೯-೧೦೭-೧೯ ಇತ್ಯಾದಿ) ಅರುಣ (ಸ್ವಲ್ಪಕೆಂಪು) ಬಣ್ಣದ್ದಾಗಿರುವುದೆಂತಲೂ (ಋ.ಸಂ. ೯-೪೦-೬; ೯-೪-೫೩; ೯-೭೮-೪; ಇತ್ಯಾದಿ) ಅರುಣವರ್ಣವೆಂತಲೂ (ಋ.ಸಂ. ೯-೬೧-೨೨; ೯-೮೨-೧; ೬-೧೧೧-೧; ಇತ್ಯಾದಿ)ಹರಿದ್ವರ್ಣವೆಂತಲೂ(ಋ.ಸಂ. ೯-೩-೯; ೯-೬೫-೮ ೧೨; ೯-೬೬-೨೬; ೯-೮-೨೧; ೯-೧೧೧-೧ ಇತ್ಯಾದಿ) ಶೋಣವರ್ಣ (ಕೆಂಪು) ವೆಂತಲೂ (ಋ. ಸಂ. ೯-೯೭-೧೩) ಶುಕ್ರ (ಬಿಳಿ) ವರ್ಣವುಳ್ಳದ್ದೆಂತಲೂ (ಋ. ಸಂ. ೯-೯೭-೩೨; ೯-೧೦೯-೩; ಇತ್ಯಾದಿ) ವಿಧವಿಧವಾಗಿ ವರ್ಣಿಸಿರುವರು.

ಇದರ ವಾಸನೆಯ ವಿಚಾರದಲ್ಲಿ ಇದು ಮಧುರ (ಸುರಭಿ) ಋ.ಸಂ. ೯-೯೭-೧೯; ೯-೧೦೭-೩) ಸಿಹಿಯಾಗಿದೆಯೆಂತಲೂ (ಸ್ವಾದಿಷ್ಟ, ಸ್ವಾದು, ಮಧು, ಮಧುವತ್) (ಋ.ಸಂ. ೯-೧-೧; ೯-೨-೯; ೯-೧೮-೨; ೯-೩೦-೫; ೯-೫೬-೪) ವರ್ಣಿಸಲಾಗಿದೆ. ಈ ರಸವನ್ನು ಕೆಲವು ದಿವಸಗಳವರೆಗೆ ಇಟ್ಟಮೇಲೆ ಇದು ಹುಳಿವಾಸನೆಯಿಂದಕೂಡಿ ದುರ್ಗಂಧಯುಕ್ತವಾಗಿ ಆಗುವುದೆಂದು ಶತಪಥಬ್ರಾಹ್ಮಣದಲ್ಲಿ ಹೇಳಿದೆ. (ಶ. ಬ್ರಾ. ೪-೧-೩-೬ ೮) ಮತ್ತು ಹೆಚ್ಚಾಗಿ ಸೇವಿಸಿದಲ್ಲಿ ವಮನವನ್ನು ಕೆಲವುವೇಳೆ ಉಂಟುಮಾಡುವುದೆಂದೂ ಹೇಳಿದೆ ತೈ.ಸಂ. ೨-೩-೨-೬ ಮತ್ತು ಶ. ಬ್ರಾ. ೫-೫-೪-೯; ೧೨-೭-೧-೧೧)

ಪ್ರೊ. ಮ್ಯಾಕ್ಸ್‌ಮುಲ್ಲರವರು ಧೂರ್ತಸ್ವಾಮಿಭಾಷ್ಯಟೀಕಾ ಎಂಬ ಆಯುರ್ವೇದದ ಗ್ರಂಥದಿಂದ ತಿಳಿದು ಬರುವ ಅಂಶವನ್ನು ಹೀಗೆ ಹೇಳುತ್ತಾರೆ. ಈ ಸೋಮವೆಂಬ ಬಳ್ಳಿಯು ಸ್ವಲ್ಪ ಕಪ್ಪಾಗಿಯೂ, ಎಲೆಗಳಿಲ್ಲದ್ದಾಗಿಯೂ ಇರುವುದು. ಇದರ ರಸವು ಹಾಲಿನಂತೆ ಹೊರಡುವುದು. ಈ ಬಳ್ಳಿಯು ಒಂದು ಬೆಟ್ಟುಗಾತ್ರವಿರುವುದು. ಅನೇಕ ಗೆಣ್ಣುಗಳಿಂದ ಕೂಡಿರುವುದು. ಇದನ್ನು ಆಡು ಮುಂತಾದ ಪ್ರಾಣಿಗಳು ತಿನ್ನುವುವು.—ಇತ್ಯಾದಿ. ಇದರ ರಸವು ಹೊಸದಾಗಿ ಹಿಂಡಿದಾಗ ಮಧುರವಾಗಿಯೂ ಸುಗಂಧಯುಕ್ತವಾಗಿಯೂ ಇದ್ದರೂ ಕೆಲವು ದಿನಗಳಲ್ಲಿ ಹುಳಿಯಾಗಿ ದುರ್ಗಂಧವುಳ್ಳದ್ದಾಗುವುದು.

ಈ ಸೋಮಲತೆಯು ಇಂಡಿಯಾದೇಶದಲ್ಲೆಲ್ಲಿಯೂ ಈಗ ದೊರಕುವುದಿಲ್ಲ. (Zend Avasta) ಪರ್ಷಿಯನ್ ಗ್ರಂಥದಲ್ಲಿ ಹೇಳಿರುವ ಹೋಮ (Homa or Haoma) ಎಂಬ ವನಸ್ಪತಿಯು ಈ ಸೋಮವೇ ಆಗಿರಬೇಕು. Schindler ಎಂಬ ಜರ್ಮನ್ ವಿಜ್ಞಾನಶಾಸ್ತ್ರ ಪಂಡಿತನು ಪರ್ಷಿಯಾದಲ್ಲಿ ಪ್ರವಾಸಮಾಡುವಾಗ ಈ ಲತೆಯು ತನ್ನ ಗಮನಕ್ಕೆ ಬಂತೆಂದು ಹೇಳುತ್ತಾನೆ. ಅವನು ಹೇಳುವಂತೆ ಇದು ವಿಶೇಷವಾಗಿ ಪರ್ವತಗಳಲ್ಲಿಯೇ ಬೆಳೆಯುವುದು. ಸುಮಾರು ೭೦೦೦ ಅಡಿಯ ಮಟ್ಟದಲ್ಲಿ ಬೆಳೆದಿರುವುದನ್ನು ಕಂಡಿರುವೆನೆಂದು ಹೇಳುವನು. ಇದು ಸುಮಾರು ೪ ಅಡಿಯ ಎತ್ತರಕ್ಕೆ ಬೆಳೆಯುವುದು. ಇದರ ಕಾಂಡವು ದುಂಡಾಗಿಯೂ ಮೃದುವಾಗಿಯೂ ಬಿಳುಪುಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿಯೂ ಇರುವುದು. ಒಂದು ಬೆಟ್ಟು ಗಾತ್ರ ದಪ್ಪವಾಗಿರುವುದು ಎಲೆಗಳು ಬಹಳ ಸ್ವಲ್ಪ ಮತ್ತು ಬಿಳುಪಾಗಿಯೂ ಸಣ್ಣನಾಗಿಯೂ ಇರುವುವು. ಸಾಧಾರಣವಾಗಿ ಎಲೆಗಳು ಉದುರಿ ಹೋಗುವುವು. ಗಿಡದ ತುದಿಯಲ್ಲಿ ಕೆಲವು ಬೀಜಗಳಿಂದ ಕೂಡಿದ (ಜೋಳದಂತಿರುವ) ಗೊಂಚಲು ಇರುವುದು. ಇದರ ರಸವು ಹಸರುಮಿಶ್ರವಾದ ಬಿಳುಪಾಗಿರುವುದು. ರುಚಿಯಲ್ಲಿ ಸ್ವಲ್ಪ ಸಿಹಿಯಾಗಿರುವುದಾದರೂ ಕೆಲವು ದಿನಗಳ ವರೆಗೆ ಇಟ್ಟದ್ದರೆ ಹುಳಿಯಾಗುವುದು. ಮತ್ತು ರಸದ ಬಣ್ಣವು ಹಳದೀಮಿಶ್ರವಾದ ಕೆಂಪು ಬಣ್ಣ (ಬಭ್ರು)ವುಳ್ಳದ್ದಾಗುವುದು. ದೊಡ್ಡ ಮರದ ಸಮೀಪದಲ್ಲಿ ಬೆಳೆಯುವ ಸಂದರ್ಭದಲ್ಲಿ ಇದು ಲತೆಯಂತೆ ಮರದ ಸುತ್ತಲೂ ಹಬ್ಬಿ ಬೆಳೆಯುವುದು. ಅಲ್ಲಲ್ಲಿ ಗಿಣ್ಣುಗಳಿರುವವು ಇದನ್ನು ಸುಲಭವಾಗಿ ಮುರಿಯಬಹುದು. ಇತ್ಯಾದಿ. ಈ ಜರ್ಮನ್ ಪಂಡಿತನು ಹೇಳುವ ವರ್ಣನೆಗೂ ಪ್ರೊ. ಮ್ಯಾಕ್ಸ್‌ಮುಲ್ಲರ್ ಆಯುರ್ವೇದಗ್ರಂಥದಿಂದ ಹುಡುಕಿ ಕೊಟ್ಟಿರುವ ವರ್ಣನೆಗೂ ವಿಶೇಷ ಸಾದೃಶ್ಯವಿದೆ.

ಈ ಲತೆಯು ಬಯಲುಗಳಲ್ಲಿಯೂ, ನದೀತೀರಗಳಲ್ಲಿಯೂ, ಬೆಟ್ಟಗಳಲ್ಲಿಯೂ ಬೆಳೆಯುವುದು. ಬೆಟ್ಟದಲ್ಲಿ ಬೆಳೆಯುವುದೇ ಹೆಚ್ಚಾಗಿ ರಸವನ್ನು ಕೊಡುವುದು. ಎಷ್ಟೆಷ್ಟು ಎತ್ತರದಲ್ಲಿ ಬೆಳೆದಿದ್ದರೆ ಅಷ್ಟಷ್ಟು ಹೆಚ್ಚು ರಸವನ್ನು ಕೊಡುವುದು. ಆದುದರಿಂದ ಈ ಸೋಮವನ್ನು ಬೆಟ್ಟಗಳಿಂದ ತಂದ ವರ್ಣನೆ ಋಗ್ವೇದದಲ್ಲಿ ಅನೇಕ ಕಡೆ ಇದೆ. (ಋ. ಸಂ. ೧-೯೩-೬; ೩-೪೮-೨; ೫-೩೬-೨, ೫-೪೩-೪; ೫-೮೫-೨; ೯-೧೮-೧; ೯-೪೬-೧; ೯-೭೧-೪; ೯-೮೨-೩; ೬-೮೮-೯. ಅಥರ್ವ ಸಂ. ೩-೨೨-೧೦ ಇತ್ಯಾದಿ) ಮೌಜವತವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧಿಯಾಗಿದೆ. (ಋ. ಸಂ. ೧೦-೩೪-೧; ಅಥ. ಸಂ. ೫-೨೨-೫; ವಾ. ಸಂ. ೩-೬೧; ನಿರುಕ್ತ. ೯-೮; ಶ. ಬ್ರಾ. ೨-೬-೨-೧೭, ೧೮ ಇತ್ಯಾದಿ) ಅವೆಸ್ಟಗ್ರಂಥದಲ್ಲಿಯೂ ಸೋಮವು ಬೆಟ್ಟಗಳಿಂದ ತರಲ್ಪಡುತ್ತಿತ್ತೆಂದು ಹೇಳಿದೆ. ಶರ್ಯಣಾವತ್ ಎಂಬ ಸರೋವರದ ದಡಗಳಲ್ಲಿ ಸೋಮಲತೆಯ

ದೊರೆಯುವುದೆಂದು ಋಗ್ವೇದದಲ್ಲಿ ಅಲ್ಲಲ್ಲಿ ಹೇಳಿದೆ. (ಋ. ಸಂ. ೮-೭-೨೯; ೮-೬೪-೧೧; ೯-೬೫-೨೨; ೯-೧೧೩-೧ ಮತ್ತು ಆರ್ಜೀಕ ಎಂಬ ಸ್ಥಳದಲ್ಲಿಯೂ (ಋ. ಸಂ. ೮-೭-೨೯; ೮-೬೪-೧೧; ೯-೬೫-೨೨; ೯-೧೧೩-೨) ಪಸ್ತ್ಯ ಎಂಬ ದೇಶದಲ್ಲಿಯೂ (ಋ. ಸಂ. ೯-೬೫-೨೧) ಐದು ಪಂಗಡದ ಜನರು ವಾಸಿಸುವ ಸ್ಥಳದಲ್ಲಿಯೂ (ಋ. ಸಂ. ೯-೬೫-೨೩) ಸುಷೋಮ ಎಂಬ ನದಿಯ ಸುತ್ತಮುತ್ತ ಪ್ರದೇಶಗಳಲ್ಲಿಯೂ (ಋ. ಸಂ. ೮-೭-೨೯; ೮-೬೪-೧೧; ೯-೯೨-೩; ೯-೧೦೧-೯) ಸೋಮವು ದೊರೆಯುವುದೆಂದು ಹೇಳಿದೆ. ಕಡೆಯದಾದ ಸುಷೋಮ—ಎಂದರೆ ಸು+ಸೋಮ ಒಳ್ಳೆಯ ಸೋಮವು ಸಿಕ್ಕುವ ಸ್ಥಳವಾದ್ದರಿಂದ ಈ ಪ್ರದೇಶಕ್ಕೆ ಸುಷೋಮವೆಂದು ಹೆಸರು ಬಂದಿರಬಹುದು. ಆದುದರಿಂದ ಋಗ್ವೇದಕಾಲಲ್ಲಿ ಈಗಿನ ಪಂಜಾಬು ದೇಶದ ಬಯಲುಗಳಲ್ಲಿಯೂ ನದೀತೀರಗಳಲ್ಲಿಯೂ ಸೋಮವು ಯಥೇಷ್ಟವಾಗಿ ಬೆಳೆಯುತ್ತಿತ್ತೆಂದು ತಿಳಿದು ಬರುವುದು. ಬಯಲಿನಲ್ಲಿ ಬೆಳೆಯುವ ಲತೆಯಿಂದ ಬೆಟ್ಟದಲ್ಲಿ ಬೆಳೆಯುವ ಲತೆಯಷ್ಟು ರಸವು ದೊರೆಯುತ್ತಿರಲಿಲ್ಲವಾಗಿ ಆ ಲತೆಯನ್ನು ನೀರಿನಲ್ಲಿ ಚೆನ್ನಾಗಿ ನೆನೆಯಿಸಿ ಉಪಯೋಗಿಸುತ್ತಿದ್ದರು. (ಋ. ಸಂ. ೯-೬೩-೪; ೯-೭೪-೯; ೯-೭೯-೪; ೯-೮೦-೫; ೯-೮೨-೫; ೯-೮೩-೫ ಇತ್ಯಾದಿ) ಈ ರೀತಿ ನೀರಿನಿಂದ ನೆನೆಯಿಸುವುದಕ್ಕೆ ಆಪ್ಯಾಯನವೆಂದು ಹೆಸರು. ಲತೆಯಿಂದ ರಸವನ್ನು ಹಿಂಡಿ ತೆಗೆದ ಮೇಲೆ ಅದನ್ನು ಪವಿತ್ರವೆಂಬ ವಂದರಿಯಿಂದ ಶೋಧಿಸುತ್ತಿದ್ದರು. (ಋ. ಸು. ೧-೨೮-೯; ೩-೩೧-೧೬; ೩-೩೬-೭; ೮-೩೩-೧; ೯-೩-೯; ೯-೬-೩ ಇತ್ಯಾದಿ) ಈ ವಂದರಿಗಳಲ್ಲಿ ಕುರಿಯ ತುಬಟವನ್ನು (ಅಣ್ವ) ಉಪಯೋಗಿಸುತ್ತಿದ್ದರು. (ಅಣ್ವ— ಋ.ಸಂ. ೯-೧-೬೨; ಅಣ್ವಾನಿ ಮೇಷ್ಯಃ— ಋ.ಸಂ. ೯-೮೬-೪೭; ೯-೧೦೭-೧೧; ಮೇಷ್ಯ ಋ.ಸಂ. ೯-೮-೫ ಇತ್ಯಾದಿ) ಈ ತುಬಟವನ್ನು ಹೊಸೆದು ಪವಿತ್ರವನ್ನು ಮಾಡುತ್ತಿದ್ದರೆಂಬ ಹ್ವರಾಂಸಿ ಎಂಬ ಶಬ್ದದಿಂದ ವ್ಯಕ್ತವಾಗುವುದು. (ಋ.ಸಂ. ೯-೩-೨; ೯-೬೩-೪; ೬-೧೦೬-೧೩) ಈ ರೀತಿ ಶೋಧಿಸಿದ ಸೋಮರಸವನ್ನು ದನದ ಚರ್ಮದಿಂದ ಮಾಡಿದ ಕೋಶ (ಪಾತ್ರೆ) ಗಳಲ್ಲಿ ಶೇಖರಿಸುತ್ತಿದ್ದರು. ಋ.ಸಂ. ೧-೨೮-೯; ೯-೬೫-೨೫; ೯-೬೬-೨೬; ೯-೭೦-೭; ೯-೭೯-೪; ೯-೧೦೧-೧೬ ಇತ್ಯಾದಿ) ಆ ರಸವನ್ನು ಮತ್ತೆ ಕಲಶಗಳೆಂಬ ಸಣ್ಣ ಸಣ್ಣ ಪಾತ್ರೆಗಳಿಗೆ ತುಂಬಿಡುತ್ತಿದ್ದರು. (ಋ.ಸಂ. ೯-೬೭-೧೪; ೯-೬೭-೧೫; ೯-೭೫-೭ ಇತ್ಯಾದಿ) ಬಳಿಕ ಆ ಸೋಮರಸಕ್ಕೆ ಹೊಸದಾಗಿ ಕರೆದ ಹಸುವಿನ ಹಾಲನ್ನೂ (ಋ. ಸಂ. ೯-೧-೯; ೯-೬-೭; ೯-೧೧-೨, ೫, ೭; ೯-೧೪-೩, ೫, ೬; ೯-೧೬-೬; ೯-೧೯-೨. ೯-೨೨-೭; ೯-೩೧-೫; ೯-೩೩-೨. ೪; ೯-೪೫-೩; ೯-೪೬-೪ ಇತ್ಯಾದಿ) ಅಥವಾ ಮೊಸರನ್ನೂ (ದಧಿ) (ಋ.ಸಂ ೮-೨-೯: ೯-೧೧-೬; ೯-೮೧-೧ ಇತ್ಯಾದಿ) ಅಥವಾ ಯುವ ಎಂಬ ಗೋಧಿಯನ್ನು (ಋ. ಸಂ. ೯-೬೮-೪) ಬೆರಸಿ ಉಪಯೋಗಿಸುತ್ತಿದ್ದರು. ಈ ರೀತಿ ಹಾಲು ಬೆರಸಿದ ಸೋಮರಸಕ್ಕೆ ಗವಾಶಿರಸೋಮವೆಂದೂ (ಋ. ಸಂ. ೧-೧೩೭-೧; ೧-೧೮೭-೯; ೨-೪೧-೩; ೩-೩೨-೨, ೩-೪೨-೧, ೭; ೮-೫೨-೧೦; ೮-೧೦೧-೧೦; ೯-೬೪-೨೮) ಮೊಸರು ಬೆರಸಿದ ಸೋಮರಸಕ್ಕೆ ದಧ್ಯಾಶಿರಸೋಮವೆಂದೂ (ಋ.ಸಂ. ೧-೫-೫; ೧-೧೩೭-೨; ೫-೫೧-೭; ೭-೭೪-೪; ೯-೨೨-೩ ಇತ್ಯಾದಿ) ಯವ ಬೆರಸಿದ ಸೋಮರಸಕ್ಕೆ ಯವಾಶಿರಸೋಮವೆಂದೂ (ಋ. ಸಂ. ೧-೧೮೭-೯; ೨-೨೨-೧; ೩-೩೭-೭; ೮-೯೨-೪) ಬೇರೆ ಬೇರೆ ಹೆಸರುಗಳಿವೆ. ಸೋಮರಸಕ್ಕೆ ಬೆರಸುವ ಹಾಲು ಮೊದಲಾದ ವಸ್ತುಗಳಿಗೆ ಆಶಿರವೆಂದು ಹೆಸರು. (ಋ. ಸಂ. ೧-೧೩೪-೬; ೩-೫೩-೧೪; ೮-೨-೧೦, ೧೧; ೮-೩೧-೫; ೯-೭೦-೧; ೧೦-೪೯-೧೦; ೧೦-೬೭-೬ ಇತ್ಯಾದಿ) ದೇವತೆಗಳಿಗೆ ಸೋಮರಸವನ್ನು ಅರ್ಪಿಸುವ ಪಾತ್ರೆಗೆ ಚಮೂ ಎಂದು ಹೆಸರು. (ಋ.ಸಂ. ೩-೪೮-೪; ೮-೮-೨೭; ೯-೬೨-೧೫, ೧೬; ೯-೬೩-೨; ೯-೯೭-೨೧, ೩೭, ೪೬; ೯-೯೯-೯, ೮; ೧೦-೯೧-೧೫ ಇತ್ಯಾದಿ) ಕೆಲವು ಸಂದರ್ಭದಲ್ಲಿ ಚಮಸವೆಂಬ ಶಬ್ದವನ್ನು ಉಪಯೋಗಿಸಿರುವುದೂ ಕಂಡುಬರುವುದು. (ಋ.ಸಂ. ೪-೩೫-೫; ೮-೮೨-೭; ೧೦-೧೬-೮; ೧೦-೯೬-೯ ಇತ್ಯಾದಿ) ಸೋಮರಸವನ್ನೂ ಆಶಿರ ಎಂಬ ಹಾಲು ಮೊದಲಾದ ವಸ್ತುಗಳನ್ನೂ ಕಲಶವೆಂಬ ಪಾತ್ರೆಗಳಲ್ಲಿ ಬೆರಸುತ್ತಿದ್ದರು. (ಋ. ಸಂ. ೯-೭೨-೧ ಇತ್ಯಾದಿ) ಸೋಮರಸವನ್ನು ಹೇಳುವ ಸೋಮಶಬ್ದವು ಸೋಮ ಎಂದು ಏಕವಚನದಲ್ಲಿಯೂ,

ಸೋಮಾಃ ಅಥವಾ ಸೋಮಾಸಃ ಎಂದು ಬಹು ವಚನದಲ್ಲಿಯೂ ಉಪಯೋಗಿಸುವ ರೂಢಿಯಿದೆ. ಏಕೆಂದರೆ ಸೋಮರಸದ ಜತೆಗೆ ಹಾಲು ಮೊದಲಾದ ಬೇರೆ ಬೇರೆ ದ್ರವ್ಯಗಳನ್ನು ಬೆರಸಿ ಸಿದ್ಧಪಡಿಸುವ ಸೋಮವು ಅನೇಕ ವಿಧವಾಗಿರುವುದರಿಂದ ಸೋಮಾಃ ಎಂದು ಬಹುವಚನವನ್ನು ಉಪಯೋಗಿಸಿರಬಹುದೆಂದು ತೋರುತ್ತದೆ. ಸೋಮಲತೆಯ ಅಥವಾ ಸೋಮರಸದ ವಿಚಾರವಾಗಿ ಹೆಚ್ಚು ವಿವರಣೆಯನ್ನು ಒಂಬತ್ತನೆಯ ಮಂಡಲವನ್ನು ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಕೊಡಲಾಗುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಎರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತೃತೀಯಖಂಡಃ

## ಮೂರನೆಯ ಖಂಡವು

ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ । ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿದಸ್ಯೇತ್ । (ಋ. ಸಂ. ೬-೩೭-೩) ॥ ಆಸಸೃವಾಂಸೋಽಭಿಬಲಾಯಮಾನಮಿಂದ್ರಂ ಕಲ್ಯಾಣಚಕ್ರೇ ರಥೇ ಯೋಗಾಯ ರಥ್ಯಾ ಅಶ್ವಾ ರಥಸ್ಯ ವೋಢಾರ ಋಜ್ಯಂತ ಋಜುಗಾಮಿನೋಽನ್ನಮಭಿವಹೇಯುರ್ನವಂ ಚ ಪುರಾಣಂ ಚ ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತೋ ವಾಯೋಶ್ಚಾಸ್ಯ ಭಕ್ಷೋ ಯಥಾ ನ ವಿದಸ್ಯೇದಿತೀಂದ್ರಪ್ರಧಾನೇತ್ಯೇಕೇ ನೈಘಂಟುಕಂ ವಾಯುಕರ್ಮೋಭಯಪ್ರಧಾನೇತ್ಯಪರಂ ವರುಣೋ ವೃಣೋತೀತಿ ಸತಸ್ತಸ್ಯೈಷಾ ಭವತಿ ॥ ೩ ॥

> ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।
> ಅಭಿಶ್ರವ ಋಜ್ಯಯೋ ವಹೇಯುರ್ನೂಚಿನ್ನು ವಾಯೋ
> ರಮೃತಂ ವಿದಸ್ಯೇತ್ ॥

ವಾಯುವಿಶೇಷಣವುಳ್ಳ ಇಂದ್ರಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಯಾವಾಗಲೂ ಗಮನಸ್ವಭಾವವುಳ್ಳ ರಥವನ್ನು ಎಳೆಯಲು ಸಮರ್ಥವಾದ ಕುದುರೆಗಳು ಶೋಭನಚಕ್ರವುಳ್ಳ ರಥದಲ್ಲಿ ಸಂಬಂಧಹೊಂದಲು ಋಜುಗಾಮಿಗಳಾಗಿ ಬರುತ್ತಾ ಅಧಿಕಬಲವುಳ್ಳ ಇಂದ್ರನಿಗಭಿಮುಖವಾಗಿ ನೂತನವಾದ ಸೋಮರೂಪ ಅನ್ನವನ್ನು ಹೊತ್ತುತರಲಿ ಹಾಗೆಯೇ ಈ ಇಂದ್ರನ ಅಮೃತರೂಪವಾದ ಸೋಮವು ಕ್ಷಿಪ್ರವಾಗಿ ಕ್ಷೀಣಸದಿರಲಿ.

ಆಸಸೃವಾಂಸೋಽಭಿಬಲಾಯಮಾನಮಿಂದ್ರಂ ಕಲ್ಯಾಣಚಕ್ರೇ ರಥೇ ಯೋಗಾಯ ರಥ್ಯಾ ಅಶ್ವಾ ರಥಸ್ಯ ವೋಢಾರಃ ಋಜ್ಯಂತ ಋಜುಗಾಮಿನೋಽನ್ನಮಭಿವಹೇಯುರ್ನವಂ ಚ ಪುರಾಣಂ ಚ। ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತೋ, ವಾಯೋಶ್ಚಾಸ್ಯ ಭಕ್ಷೋ ಯಥಾ ನ ವಿದಸ್ಯೇ ದಿತೀಂದ್ರ ಪ್ರಧಾನೇತ್ಯೇಕೇ ನೈಘಂಟುಕಂ ವಾಯುಕರ್ಮ॥ ಉಭಯುಕರ್ಮ॥ ಉಭಯ-ಪ್ರಧಾನೇತ್ಯಪರಮ್॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಶ್ರವಃ ಎಂಬುದು ಅನ್ನದ ಹೆಸರು (ನಿಘ. ೨-೭-೪) ಶ್ರೂಯತೇ ಇತಿ ಶ್ರವಃ. ಕರ್ಮಣಿಯಲ್ಲಿ ಶ್ರುಧಾತುವಿಗೆ ಅಸುನ್‌ಪ್ರತ್ಯಯ. ಅನ್ನದ ಯಶಸ್ಸು ವರ್ಣಿಸಲ್ಪಡುವುದು ಕೇಳಲ್ಪಡುತ್ತದೆ. ಇದರಿಂದ ಯಶಸ್ಸು ಶ್ರವಸ್ಸಾಗುತ್ತದೆ. ತಾದ್ಧರ್ಮ್ಯದಿಂದ ತಚ್ಛಬ್ದಾರೋಪವೆಂದು ತಿಳಿಯಬೇಕು. ಇದು ಇಂದ್ರಸೂಕ್ತಮಧ್ಯದಲ್ಲಿ ಇಂದ್ರಪ್ರಧಾನವಾದ ಋಕ್ಕಾಗಿರುತ್ತದೆ. ಇಲ್ಲಿ ವಾಯುವೆಂದು ಹೇಳಿರುವುದು ಇಂದ್ರನಿಗೇ ವಿಶೇಷಣವಾಗಿರುತ್ತದೆಯೆಂದು ಕೆಲವರ ಮತ ಭೇದಪಕ್ಷವಾದಿಗಳು ವಾಯು ಇಂದ್ರ ಉಭಯಪ್ರಧಾನವಾಗಿರುತ್ತದೆಂದು ತಿಳಿಯುತ್ತಾರೆ. ನಿಷ್ಕೇವಲ್ಯದಲ್ಲಿ ಇದರ ಉಪಯೋಗವಿರುವುದರಿಂದ ಉಭಯಪ್ರಧಾನವೆನ್ನುವುದು ಯುಕ್ತವಲ್ಲ. ಅಪರಂ ಎಂದುದರಿಂದ ಪರಂ ನ ಎಂದು ವ್ಯಾಖ್ಯಾನ ಮಾಡುವುದರಿಂದ ಅದು ಶ್ರೇಷ್ಠವಾದ ಮತವಲ್ಲವೆಂದು ವ್ಯಕ್ತವಾಗುತ್ತದೆ.

ವರುಣಃ—ವೃಣೋತೀತಿ ಸತಸ್ತಸ್ಯೈಷಾ ಭವತಿ ॥ ೩ ॥

ವರುಣವೆಂಬುದು ಕ್ರಮಪ್ರಾಪ್ತವಾಗಿದೆ. ಮೇಘಸಮುದಾಯದಿಂದ ಆಕಾಶವನ್ನು ಮುಚ್ಚುವವನು ವರುಣ. ವೃಞ್-ವರಣೇ ಧಾತು. 'ಕೃವೃದಾರಿಭ್ಯಉನನ್'ಸೂತ್ರದಿಂದ ಉನನ್ ಪ್ರತ್ಯಯ. ಗುಣ ಣತ್ವ ಬಂದು ವರುಣ ಎಂದಾಗಿದೆ. ಮುಂದೆ ಉದಾಹರಿಸುವ ಮಂತ್ರವು ವರುಣಸ್ತುತಿಯನ್ನು ಪ್ರತಿಪಾದಿಸುತ್ತದೆ.

ಅರಸ್ರಾಣಾಸಃ ಶವಸಾದಮುಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ।
ಅಭಿ ಶ್ರವ ಪುಜ್ಯಂತೋ ವಹೇಯುರ್ನೂ ಚಿನ್ನು ವಾಯುರಮೃತಂ
ವಿ ದಸ್ಯೇತ್ ॥ ೩ ॥

ಸರ್ವತ್ರ ಸಂಚರಿಸುವುವೂ, ರಥಕ್ಕೆ ಸೇರಿಕೊಂಡಿರುವುವೂ ಆದ ಅಶ್ವಗಳು ನೇರವಾದ ಗಮನವುಳ್ಳವಾಗಿ ಉತ್ತಮವಾದ ಚಕ್ರವುಳ್ಳ ರಥದಲ್ಲಿ ಬಲಕ್ಕೆ ಪ್ರತಿನಿಧಿಯಾದ ಇಂದ್ರನನ್ನು ಹವಿಸ್ಸಿಗೆ ಅಭಿಮುಖವಾಗಿ ಕರೆತರಲಿ. ಅಮೃತಕ್ಕೆ ಸಮಾನವಾದ ಸೋಮ ವಾಯುವಿನ ಶಕ್ತಿಯಿಂದ ಶೋಷಿಸಲ್ಪಟ್ಟು ವ್ಯರ್ಥವಾಗದಿರಲಿ.

ಈ ಋಕ್ಕಿನಲ್ಲಿ ಇಂದ್ರನಿಗೂ ವಾಯುವಿಗೂ ಇರುವ ಸಾಹಚರ್ಯವು ವರ್ಣಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಇಂದ್ರನಿಗೂ ವಾಯುವಿಗೂ ಒಂದೇವಿಧವಾದ ವಿಶೇಷಣಗಳಿರುವವು. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

ಅಸಸೃವಾಂಸೋಽಭಿಬಲಾಯಮಾನಮಿಂದ್ರಂ ಕಲ್ಯಾಣಚಕ್ರೇ ರಥೇ ಯೋಗಾಯ ರಥ್ಯಾ ಅಶ್ವಾ ರಥಸ್ಯ ವೋಢಾರ ಋಜ್ಯಂತ ಋಜುಗಾಮಿನೋಽನ್ನಮಭಿವಹೇಯುರ್ನವಂ ಚ ಪುರಾಣಂ ಚ । ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ । ವಾಯೋಶ್ಚಾಸ್ಯ ಭಕ್ಷೋ ಯಥಾ ನ ವಿದಸ್ಯೇದಿತಿ । ಇಂದ್ರಪ್ರಧಾನೇತ್ಯೇಕೇ ನೈಘುಂಟುಕಂ ವಾಯುಕರ್ಮೋಭಯಪ್ರಧಾನೇತ್ಯಪರಂ ॥

)ನಿ ೧೦-೩)

ಎಂದರೆ—ಇಂದ್ರನ ರಥವನ್ನು ಎಳೆಯುವ ಕುದುರೆಗಳು ಯಾವಾಗಲೂ ಸಂಚರಿಸುತ್ತಾ ಉತ್ತಮವಾದ ಚಕ್ರಗಳುಳ್ಳ ರಥದಲ್ಲಿ ಕುಳಿತಿರುವ ಬಹಳ ಬಲಶಾಲಿಯಾದ ಇಂದ್ರನನ್ನು ಹಳೆಯ ಮತ್ತು ಹೊಸದಾದ ಆಹಾರವನ್ನು (ಸೋಮವನ್ನು) ಸೇವಿಸುವುದಕ್ಕಾಗಿ ಕರೆತರುವವು. ಇಂದ್ರನ ಅಶ್ವಗಳು ನೇರವಾಗಿ ಎಂದರೆ—ಅತ್ತಿತ್ತ ಹೋಗದೆ ಅಭಿಮುಖವಾಗಿಯೇ ಸಂಚರಿಸುವ ಸ್ವಭಾವವುಳ್ಳವು. ಇಂದ್ರನಿಗಾಗಿ ಸಿದ್ಧಪಡಿಸಲ್ಪಟ್ಟ ಸೋಮರಸವು ವಾಯುವಿನ ಶೋಷಿಸುವ ಶಕ್ತಿಯಿಂದ ಇಂಗಿಹೋಗಿ ವ್ಯರ್ಥವಾಗದಂತೆ ಇಂದ್ರನನ್ನು ಬೇಗನೆ ಅಶ್ವಗಳು ನೇರವಾಗಿ ಇಲ್ಲಿಗೆ ಕರೆತರಲಿ ಎಂದಭಿಪ್ರಾಯವು. ಶ್ರವಃ ಎಂಬ ಶಬ್ದವು ಅನ್ನನಾಮಗಳ ಪರ್ಯಾಯಪದವಾಗಿರುವುದು, ಅನ್ನವು ಪ್ರಸಿದ್ಧವಾಗಿರುವುದರಿಂದ ಅನ್ನಕ್ಕೆ ಶ್ರವಃ ಎಂದೂ ಹೆಸರು. ವಾಯುವಿನ ಶೋಷಣಶಕ್ತಿಯಿಂದ ಸೋಮವು ಇಂಗಿಹೋಗಿ ವ್ಯರ್ಥವಾಗದಿರಲಿ. ಈ ಋಕ್ಕಿನಲ್ಲಿ ಇಂದ್ರನ ವಿಷಯವು ಪ್ರಧಾನವಾಗಿ ಪ್ರತಿಪಾದಿಸಲ್ಪಟ್ಟಿರುವುದೆಂದು ಕೆಲವರ ಅಭಿಪ್ರಾಯವು. ವಾಯುವಿನ ಕರ್ಮವೇ ಪ್ರತಿಪಾದಿಸಲ್ಪಟ್ಟಿರುವುದೆಂದೂ' ಇಬ್ಬರನ್ನೂ ಸ್ತುತಿಸಿರುವುದೆಂದೂ ಇನ್ನೂ ಕೆಲವರ ಅಭಿಮತವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಮೂರನೆಯ ಖಂಡವು ಸಮಾಪ್ತವು.

———

## ಅಥ ಚತುರ್ಥ ಖಂಡಃ

### ನಾಲ್ಕನೆಯ ಖಂಡವು.

ನೀಚೀನವಾರಂ ವರುಣಃ ಕಬಂಧಂ ಪ್ರ ಸಸರ್ಜ ರೋದಸೀ ಅಂತರಿಕ್ಷಮ್ । ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ॥ (ಋ. ಸಂ. ೫-೮೫-೩) ॥ ನೀಚೀನದ್ವಾರಂ ವರಣಃ ಕಬಂಧಂ ಮೇಘಂ ಕವನಮುದಕಂ ಭವತಿ ತದಸ್ಮಿನ್ಧೀಯತ ಉದಕಮಪಿ ಕಬಂಧಮುಚ್ಯತೇ ಬಂಧಿರನಿಭೃತತ್ವೇ ಕಮನಿಭೃತಂ ಚ ಪ್ರಸೃಜತಿ ದ್ಯಾವಾಪೃಥಿವ್ಯೌ ಚಾಂತರಿಕ್ಷಂ ಚ ಮಹತ್ತ್ವೇನ ತೇ ಸರ್ವಸ್ಯ ಭುವನಸ್ಯ ರಾಜಾ ಯವಮಿವ ವೃಷ್ಟಿರ್ವ್ಯುನತ್ತಿ ಭೂಮಿಂ ತಸ್ಯೈಷಾಪರಾ ಭವತಿ ॥ ೪ ॥

ನೀಚೀನವಾರಂ ವರುಣಃ ಕಬಂಧಂ ಪ್ರಸಸರ್ಜ ರೋದಸೀ ಅಂತರಿಕ್ಷಮ್ । ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂನ ವೃಷ್ಟಿರ್ವ್ಯನತ್ತಿ ಭೂಮ ॥

(ಋ. ಸಂ. ೪-೪-೩೦)

ವರುಣಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಸಕಲ ಭೂತಜಾತಗಳಿಗೂ ಅಥವಾ ಉದಕಕ್ಕೆ ಒಡೆಯನಾದ ಮಧ್ಯಮನಾದ ವರುಣನು ಅಧೋಮುಖವಾಗಿ ಬಿಲವನ್ನು ಮಾಡಿ ನೀರನ್ನು ಬಿಡುತ್ತಾನೆ. ಮೇಘವನ್ನು ಸೀಳಿ ಕೆಳಮುಖವಾಗಿ ಸುರಿಸುತ್ತಾನೆ ಎಂದರ್ಥ. ಅಥವಾ ಮೇಘವನ್ನು ಬಿಡುತ್ತಾನೆ ಎಂದರ್ಥ. ದ್ಯಾವಾಪೃಥಿವೀ ಮತ್ತು ಅಂತರಿಕ್ಷ ಲೋಕಗಳನ್ನು ಮಹತ್ತ್ವದಿಂದ ಸಂಪೂರ್ಣವಾಗಿ ತುಂಬುವನೋ ಎಂಬಂತೆ ನೀರನ್ನು ಸೇಚನಮಾಡುವವನು ಭತ್ತವನ್ನೆಂಬಂತೆ ನಾನಾಪ್ರಕಾರದಿಂದ ಭೂಮಿಯನ್ನು ಒದ್ದೆಮಾಡುತ್ತಾನೆ.

ನೀಚೀನದ್ವಾರಂ ವರುಣಃ ಕಬಂಧಂ ಮೇಘಂ, ಕವನಮುದಕಂ ಭವತಿ । ತದಸ್ಮಿನ್ ಧೀಯತ, ಉದಕಮಪಿ ಕಬಂಧಮುಚ್ಯತೇ । ಬಂಧಿರನಿಭೃತತ್ವೇ ಕಮನಿಭೃತಂ ಚ । ಪ್ರಸೃಜತಿ ದ್ಯಾವಾಪೃಥಿವ್ಯೌ ಚಾಂತರಿಕ್ಷಂ ಚ ಮಹತ್ವೇನ, ತೇನ ಸರ್ವಸ್ಯ ಭುವನಸ್ಯ ರಾಜಾ ಯವಮಿವ ವೃಷ್ಟಿರ್ವ್ಯನತ್ತಿ ಭೂಮಿಂ, ತಸ್ಯೈಷಾಽಪರಾ ಭವತಿ ॥ ೪ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಕಬಂಧ ಪದಕ್ಕೆ ಮೇಘವೆಂದರ್ಥ. ಕವವೆಂದರೆ ಹರಿಯುವಸ್ವಭಾವವುಳ್ಳ ನೀರು. ಅದನ್ನು ಧರಿಸಿರುವುದು ಕಬಂಧ ಮೇಘ. ನೀರಿಗೂ ಕಬಂಧವೆಂಬ ಹೆಸರಿದೆ ಬಂಧಧಾತುವಿಗೆ ಅನಿಭೃತವೆಂದೂ ಅರ್ಥವಿದೆ. ಇಕ್ ಅಥವಾ ಶ್ತಿಪ್‌ನಿಂದ ಧಾತುನಿರ್ದೇಶಮಾಡಬೇಕೆಂದುದರಿಂದ ಬಂಧಿಃ ಎಂದು ನಿರ್ದೇಶಿರುತ್ತಾರೆ. ನಿಭೃತ ಅಂದರೆ ಅಚಲವಾದುದು. ಬಂಧಿಯು ತದ್ವಿಪರೀತಾರ್ಥಕವಾಗಿದೆ. ಚಪಲವೆಂದು ತಾತ್ಪರ್ಯ. ಕಂ, ಚಪಲಂ ಕಬಂಧಂ. ಕ್ಷಣಿಕವಾದ ಸುಖವುಳ್ಳದೆಂದರ್ಥ. ವೃಷ್ಟಿಪದವು ಇಲ್ಲಿ ಅಭಿಷೇಚಿಸುವ ಕರ್ತೃವನ್ನು ಹೇಳುತ್ತದೆ. ಬೀಜಮೊಳಕೆಬರಲು ಭತ್ತ ಮುಂತಾದುವುಗಳನ್ನು ಚೆಲ್ಲಿ ನೀರನ್ನು ಎರಚುತ್ತಿರುತ್ತಾರೆ. ಅದರಂತೆ ಮಧ್ಯಮನಾದ ವರುಣನು ನಾನಾಪ್ರಕಾರವಾಗಿ ಭೂಮಿಯನ್ನು ಒದ್ದೆ ಮಾಡುತ್ತಾನೆ. ವರುಣನು ಮಧ್ಯಮಸ್ಥಾನನೆಂದು ಸ್ಪಷ್ಟವಾಗಿ ಪ್ರತಿಪಾದಿಸುವ ಇನ್ನೊಂದು ಮಂತ್ರವನ್ನು ಉದಾಹರಿಸುತ್ತಾರೆ ಅಲ್ಲಿ ಶಬ್ದದಿಂದಲೇ ವರುಣನೆಂದು ತಿಳಿಯುತ್ತದೆ. ವರುಣನೆಂಬ ಅಭಿಧಾನವು ಸೂರ್ಯನಲ್ಲಿಯೂ ದೃಷ್ಟವಾದುದರಿಂದ ಅದು ಮಧ್ಯಮತ್ವ ನಿರ್ಣಯಕ್ಕೆ ಪ್ರಬಲಸಹಕಾರಿಯಾಗಲಾರದು.

ನೀಚೀನಬಾರಂ ವರುಣಃ ಕಬಂಧಂ ಪ್ರ ಸಸರ್ಜ ರೋದಸೀ ಅಂತರಿಕ್ಷಂ । ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯನತ್ತಿ ಭೂಮ ॥ ೩ ॥

ವರುಣನು ದ್ಯಾವಾಪೃಥಿವಿಗಳಿಗಾಗಿಯೂ, ಅಂತರಿಕ್ಷಕ್ಕಾಗಿಯೂ, ಮೇಘವನ್ನು ಅಧೋಮುಖವಾಗಿ ನೀರನ್ನು ಸುರಿಸುವಂತೆ ಮಾಡಿದನು. ವೃಷ್ಟಿಯು ಯುವಧಾನ್ಯವನ್ನು ಪೂರ್ಣವಾಗಿ ತೋಯಿಸುವಂತೆ, ಸಮಸ್ತವಾದ ಪ್ರಪಂಚಕ್ಕೂ ಪ್ರಭುವಾದ ವರುಣನು ಇದೇ ಉದಕದಿಂದ ಭೂಮಿಯನ್ನು ತೋಯಿಸುತ್ತಾನೆ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

> ನೀಚೀನದ್ವಾರಂ ವರುಣಃ ಕಬಂಧಂ ಮೇಘಂ । ಕವನಮುದಕಂ ಭವತಿ ತದಸ್ಮಿನ್ ಧೀಯತೇ ಉದಕಮಪಿ ಕಬಂಧಮುಚ್ಯತೇ ಬಂಧಿರನಿಭೃತತ್ವೇ ಕಮನಿಭೃತಂ ಚ ಪ್ರಸೃಜತಿ ದ್ಯಾವಾಪೃಥಿವ್ಯೌ ಚಾಂತರಕ್ಷಂ ಚ ಮಹತ್ತ್ವೇನ ತೇನ ಸರ್ವಸ್ಯ ಭುವನಸ್ಯ ರಾಜಾ ಯವಮಿವ ವೃಷ್ಟಿರ್ವ್ಯುನತ್ತಿ ಭೂಮಿಂ ॥ (ನಿ. ೧೦–೪)

ನೀಚೀನಬಾರಂ ಎಂದರೆ ನೀಚೀನದ್ವಾರಂ—ಕೆಳಮುಖವಾಗಿ; ಮೇಘವು ಎತ್ತರವಾದ ಅಂತರಿಕ್ಷದಲ್ಲಿದ್ದು, ಕೆಳಗಿರುವ ಭೂಮಿಯ ಮೇಲೆ ವೃಷ್ಟಿಯನ್ನು ಸುರಿಸುವುದರಿಂದ ಮೇಘದ ಬಾಯಿ ಅಥವಾ ದ್ವಾರವು ಕೆಳಮುಖವಾಗಿರುವುದೆಂದು ವರ್ಣಿಸಿದೆ. ಕವನವೆಂದರೆ ಉದಕವು, ಅಂತಹ ಉದಕವು ಬಂಧಿಸಿ ಇಡಲ್ಪಟ್ಟಿರುವ ಸ್ಥಾನಕ್ಕೆ ಕಬಂಧ ಎಂದರೆ ಮೇಘವೆಂದು ಹೆಸರು. ಅಥವಾ ಕಬಂಧವೆಂದರೆ ಉದಕವೆಂದೂ ಅರ್ಥವಾಗಬಹುದು. ಏಕೆಂದರೆ—ಹರಡುವ ಅಥವಾ ಹರಿದುಹೋಗುವ ಸ್ವಭಾವವಿರುವ ಉದಕವನ್ನು ಬಂಧಿಸಿ ಒಂದುಕಡೆ ಇರುವಂತೆ ಮಾಡುವ ಸ್ಥಿತಿಯಿರುವುದಕ್ಕೆ ಉದಕ ಅಥವಾ ಮೇಘವೆಂದು ಹೆಸರು. ವರುಣನು ಇಂತಹ ಮೇಘದ ಅಧಃಪ್ರದೇಶದಲ್ಲಿ ದ್ವಾರವನ್ನು ಮಾಡಿ, ಅದರ ಉದಕಗಳನ್ನು ಕೆಳಮುಖವಾಗಿ ಭೂಮಿಯ ಮೇಲೆ ಬೀಳುವಂತೆ ಮಾಡುತ್ತಾನೆ. ಇದಲ್ಲದೆ ಅದೇ ವರುಣನು ದ್ಯಾವಾಪೃಥಿವಿಗಳನ್ನೂ ಅಂತರಿಕ್ಷವನ್ನೂ ಸೃಷ್ಟಿಸುತ್ತಾನೆ (ನಿರ್ಮಿಸುತ್ತಾನೆ). ಸಕಲ ಲೋಕಗಳಿಗೂ ಅಧಿಪತಿಯಾದ ಆ ವರುಣನು ತನ್ನ ಮಹಾ ಮಹಿಮೆಯಿಂದಲೇ ಯವಧಾನ್ಯದ ಸಸಿಗಳನ್ನು ಉದಕವು ನೆನೆಸುವಂತೆ ಭೂಮಿಯನ್ನು ಉದಕಗಳಿಂದ ತೋಯಿಸುತ್ತಾನೆ ಎಂದು ಮುಖ್ಯಾಭಿಪ್ರಾಯ.

ಈರೀತಿ ಶ್ರೀ ಯಾಸ್ಕಮುನಿವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚಮ ಖಂಡಃ

## ಐದನೆಯ ಖಂಡವು

**ತಮೂಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ । ನಾಭಾಕಸ್ಯ ಪ್ರಶಸ್ತಿಭಿರ್ಯಃ ಸಿಂಧೂನಾಮುಪೋದಯೇ ಸಪ್ತಸ್ವಸಾ ಸ ಮಧ್ಯಮೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೧-೨) ॥ ತಂ ಸ್ವಭಿಷ್ಟೌಮಿ ಸಮಾನಯಾ ಗಿರಾ ಗೀತ್ಯಾ ಸ್ತುತ್ಯಾ ಪಿತ್ರ್ಯಾಣಾಂ ಚ ಮನನೀಯೈಃ ಸ್ತೋಮೈರ್ನಾಭಾಕಸ್ಯ ಪ್ರಶಸ್ತಿಭಿರ್ಋಷಿರ್ನಾಭಾಕೋ ಬಭೂವ ಯಃ ಸ್ಯಂದಮಾನಾನಾಮಾಸಾಮುಪಾಮುಪೋದಯೇ ಸಪ್ತಸ್ವಸಾರಮೇನಮಾಹ ವಾಗ್ಭಿಃ ಸ ಮಧ್ಯಮ ಇತಿ ನಿರುಚ್ಯತೇಽಥೈಷ ಏವ ಭವತಿ । ನಭಂತಾಮನ್ಯಕೇ ಸಮೇ । ಮಾ ಭೂವನ್ನನ್ಯಕೇ ಸರ್ವೇ ಯೇ ನೋ ದ್ವಿಷಂತಿ ದುರ್ಧಿಯಃ ಪಾಪಧಿಯಃ ಪಾಪ-ಸಂಕಲ್ಪಾ ರುದ್ರೋ ರೌತೀತಿ ಸತೋ ರೋರೂಯಮಾಣೋ ದ್ರವತೀತಿ ವಾ ರೋದಯು-ತೇರ್ವಾ ಯದರುದತ್ತದ್ರುದ್ರಸ್ಯ ರುದ್ರತ್ವಮಿತಿ ಕಾಠಕಂ ಯದರೋದೀತ್ತದ್ರುದ್ರಸ್ಯ ರುದ್ರತ್ವಮಿತಿ ಹಾರಿದ್ರವಿಕಂ ತಸ್ಯೈಷಾ ಭವತಿ ॥ ೫ ॥

ತಮೂಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ ॥
ನಾಭಾಕಸ್ಯ ಪ್ರಶಸ್ತಿಭಿರ್ಯಃ ಸಿಂಧೂನಾಮುಪೋದಯೇ ಸಪ್ತ-
ಸ್ವಸಾ ಸಮಧ್ಯಮೋ ನಭಂತಾಮನ್ಯಕೇ ಸಮೇ ॥

(ಋ. ಸಂ. ೬-೩-೨೬)

ಮಧ್ಯಮನಾದ ವರುಣನನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸಮಾನವಾದ ಸ್ತುತಿಯಿಂದ ಪಿತೃಗಳಿಗೂ ಮನನೀಯವಾದ ನಾಭಾಕನಾದ ನನ್ನ ಸ್ತುತಿಗಳಿಂದ ಆ ವರುಣನನ್ನೇ ಚನ್ನಾಗಿ ಸ್ತುತಿಸುತ್ತೇನೆ. ಯಾವ ವರುಣನು ನದಿಗಳ್ಳ ಮಳೆಯಿಂದ ತುಂಬಿಹರಿಯುವಾಗ ಏಳು ಸಹೋದರಿಯರಿಂದ ಕೂಡಿದವನಾಗಿ ಅಶ್ವಾದಿ ಏಳರಿಂದ ಮಧ್ಯಮನೇ ಆಗಿ ಸ್ತುತಿಸಲ್ಪಡುವನೋ, ಯಾರು ನಮ್ಮನ್ನು ದ್ವೇಷಿಸುವರೋ ಅವರು ಇಲ್ಲದಂತಾಗಲಿ.

ತ್ವಂ ಸ್ವಭಿಷ್ಟೌಮಿ ಸಮಾನಯಾ ಗಿರಾ ಗೀತ್ಯಾ ಸ್ತುತ್ಯಾ, ಪಿತ್ರ್ಯಾಣಾಂ ಚ ಮನನೀಯೈ ಸ್ತೋಮೈರ್ನಾಭಾಕಸ್ಯ ಪ್ರಶಸ್ತಿಭಿಃ । ಋಷಿ-ರ್ನಾಭಾಕೋ ಬಭೂವ । ಸ್ಯಂದಮಾನಾನಾಮಾಸಾಮುಪಾಮು ಪೋದಯೇ ಸಪ್ತಸ್ವಸಾರಮೇನಮಾಹ ವಾಗ್ಭಿಃಸ ಮಧ್ಯಮ ಇತಿ ನಿರುಚ್ಯತೇ, ಅಥೈಷ ಏವ ಭವತಿ ಮಾಭೂವನ್ನನ್ಯಕೇ ಸರ್ವೇ ಯೇ ನೋ ದ್ವಿಷಂತಿ ದುರ್ಧಿಯಃ ಪಾಪಸಂಕಲ್ಪಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ತುತಿ ಮತ್ತು ಪಿತೃಗಳಿಗೆ ಇಷ್ಟವಾದ ಸ್ತೋಮಗಳಿಂದಲೂ ವರುಣನನ್ನು ಸ್ತುತಿಸುತ್ತೇನೆ ಹಿಂದಿನ ಜನ್ಮದಲ್ಲಿಯೂ ನಾಭಾಕನಾದವನೇ ಈ ಜನ್ಮದಲ್ಲಿಯೂ ನಾಭಾಕಋಷಿಯೇ ಆಗಿರುತ್ತಾನೆ. ಆದುದರಿಂ. ನಾಭಾಕನ ಸ್ತುತಿಗಳಿಂದ ನಾಭಾಕನಾದ ನಾನು ಸ್ತುತಿಸುತ್ತೇನೆ ಎಂದು ಹೇಳಿರುವುದು ಸಂಗತವಾಗುತ್ತದೆ. ನೀರು ನದಿಗಳಲ್ಲಿ ಮಳೆಯಿಂದ ಅಧಿಕವಾದಾಗ ವರುಣನನ್ನು ಇಂದ್ರಪರ್ಯಾಯದಿಂದಲೇ ಹೇಳಿರುತ್ತಾರೆ.

ರುದ್ರೋ ರೌತೀತಿ ಸತೋ, ರೋರೂಯಮಾಣೋ ದ್ರವತೀತಿ ವಾ । ರೋದಯತೇ ರ್ವಾ । 'ಯದರುದತ್ತದ್ರುದ್ರಸ್ಯ ರುದ್ರತ್ವಂ' ಇತಿ ಕಾಠಕಮ್ । ಯದರುದತ್ತದ್ರುದ್ರಸ್ಯ ರುದ್ರತ್ವಂ ಇತಿ ಹಾರಿದ್ರವಿಕಮ್ । ತಸ್ಯೈಷಾಽಪರಾ ಭವತಿ ॥

ಕ್ರಮಪ್ರಾಪ್ತವಾದ ರುದ್ರಪದದ ನಿರ್ವಚನವನ್ನು ತೋರಿಸುತ್ತಾರೆ. ಶಬ್ದಮಾಡುವುದರಿಂದ ರುದ್ರಎಂದಾಗಿದೆ. ರು-ಶಬ್ದೇ-ಧಾತು. ಇದಕ್ಕೆ ಕ್ವಿಪ್‌ಪ್ರತ್ಯಯ ಬಂದಾಗ ತುಗಾಗಮ. ರುತ್ ಎಂದಾಗುತ್ತದೆ. ಮೇಘಗರ್ಜನೆಯನ್ನು ಮಾಡುವವನು ಎಂದರ್ಥ. ಆಮೇಲೆ ವೃಷ್ಟಿಯಿಂದ ನೀರನ್ನು ಕೊಡುತ್ತಾನೆ ಎಂಬರ್ಥದಲ್ಲಿ ರಾದಾನೇ ಧಾತುವಿಗೆ ಕಪ್ರತ್ಯಯ. ಕಿತ್ತಾದುದರಿಂದ ಆಕಾರಕ್ಕೆ ಲೋಪ. ರುದ್ರಃ ಶಬ್ದ ಮಾಡಿ ಮಳೆ ಕೊಡುವವನು ಅಥವಾ ರೋರೂಯಮಾಣಃ= ಅಧಿಕಶಬ್ದಮಾಡುತ್ತಾ ದ್ರವತಿ—ನೀರುಮಾಡುವವನು. ರೋರೂಯಮಾಣವೆಂಬ ಉಪಪದಕ್ಕೆ ಛಾಂದಸವಾಗಿ ರು ಆದೇಶ. ದ್ರು ಧಾತುವಿಗೆ ಡಪ್ರತ್ಯಯ ಬಂದಾಗ ಉಕಾರಲೋಪ. ಅಥವಾ 'ರೋದೇರ್ಣಿಲುಕ್ಚ' ಸೂತ್ರದಿಂದ ರುದಧಾತುವಿಗೆ ರಕ್‌ಪ್ರತ್ಯಯ. ಶತ್ರುಗಳ ಸ್ತ್ರೀಯರನ್ನು ಅಳುವಂತೆ ಮಾಡುವವನು. ಶತ್ರುಸಂಹಾರಕನೆಂದು ತಾತ್ಪರ್ಯ. ಅಥವಾ (ಪ್ರೇರಣಾರ್ಥ ಬಿಟ್ಟು) ತಾನಾಗಿ ಅಳುವವನು ರುದ್ರ. "ಇಂದ್ರಃ ಕಿಲ ಪಿತರಂ ಪ್ರಜಾಪತಿಮಿಷುಣಾ ಚಿಚ್ಛೇದ ತಮನುಶೋಚನ್ನರುದತ್ ಯದರುದತ್ತದ್ರುದ್ರಸ್ಯ ರುದ್ರತ್ವಂ" (ಬೃ. ಆ. ೩-೯-೪) ಎಂದು ಕಾಠಕಪ್ರವಚನ ಬ್ರಾಹ್ಮಣದಲ್ಲಿ ಹೇಳಿದೆ. ಇಂದ್ರನು ಹಿಂದೆ ತಂದೆಯಾದ ಪ್ರಜಾಪತಿಯನ್ನು ಬಾಣದಿಂದ ಕತ್ತರಿಸಿದನು. ಆಮೇಲೆ ತಾನು ಮಾಡಿದ ಕೃತ್ಯದಿಂದ ಪಶ್ಚಾತ್ತಾಪಹೊಂದಿ ಅತ್ತುದರಿಂದ ಅವನಿಗೆ ರುದ್ರನೆಂದು ಹೆಸರಾಯಿತು. ಹರಿದ್ರವವೆಂಬುದು ಒಂದು ಶಾಖಾಭೇದ. ಅಲ್ಲಿಯೂ ಪೂರ್ವೋಕ್ತವಾದ ವಿಷಯವೇ ವಿವೃತವಾಗಿದೆ. ಹೀಗೆ ಶಾಖಾಂತರಗಳಿಂದಲೂ ನಿರ್ವಚನವನ್ನು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ರುದ್ರನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ತಮೂ ಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ ।
ನಾಭಾಕಸ್ಯ ಪ್ರಶಸ್ತಿಭಿರ್ಯ ಸಿಂಧೂನಾಮುಪೋದಯೇ ಸಪ್ತಸ್ವಸಾ
ಸ ಮಧ್ಯಮೋ ನಭಂತಾಮನ್ಯಕೇ ಸಮೇ ॥ ೨ ॥

ಸಮಾನವಾದ ಸ್ತುತಿಯಿಂದ ಆ ವರುಣನನ್ನೇ ಸ್ತುತಿಸುತ್ತೇನೆ. ಪಿತೃಗಳಿಂದ ನಿರ್ಮಿತವಾದ ಸ್ತುತಿಗಳಿಂದಲೂ ನಾಭಾಕನಿಂದ ನಿರ್ಮಿತವಾದ ಸ್ತುತಿಗಳಿಂದಲೂ ಸ್ತುತಿಸುತ್ತೇನೆ. ಪ್ರವಹಿಸುವ ನದಿಗಳ ಸಮೀಪದಲ್ಲಿ ಯಾರು ಉದಯಿಸುವನೋ, ಸಪ್ತಸಂಖ್ಯಾಕವಾದ ಸೋದರಿಯರುಳ್ಳ ಅವನೇ ಮಧ್ಯಮಲೋಕದವನೆಂದು ವರ್ಣಿತನಾಗಿದ್ದಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ತಂ ಸ್ವಭಿಷ್ಟೌಮಿ ಸಮಾನಯಾ ಗಿರಾ ಗೀತ್ಯಾ ಸ್ತುತ್ಯಾ ಪಿತೄಣಾಂ ಚ ಮನನೀಯೈಃ ಸ್ತೋಮೈರ್ನಾಭಾಕಸ್ಯ ಪ್ರಶಸ್ತಿಭಿಃ । ಋಷಿರ್ನಾಭಾಕೋ ಬಭೂವ ಯಃ ಸ್ಯಂದಮಾನಾನಾಮಾಸಾಮಪಾಮುಪೋದಯೇ ಸಪ್ತಸ್ವಸಾರಮೇನಮಾಹ ವಾಗ್ಭಿಃ ಸ ಮಧ್ಯಮ ಇತಿ ನಿರುಚ್ಯತೇಽಥೈಷ ಏವ ಭವತಿ

ನಭಂತಾಮನ್ಯಕೇ ಸಮೇ ಮಾ ಭೂವನ್ಯಕೇ ಸರ್ವೇ ಯೇ ನೋ ದ್ವಿಷಂತಿ ದುರ್ಧಿಯಃ ಪಾಪಧಿಯಃ ಪಾಪಸಂಕಲ್ಪಾಃ ||

(ನಿ. ೧೦-೫)

ಈ ವರುಣದೇವನನ್ನು ಉತ್ತಮವಾದ ಸ್ತುತಿವಾಕ್ಯಗಳಿಂದ ಅಥವಾ ಗಾನಾರ್ಹವಾದ ವಾಕ್ಯಗಳಿಂದ ಪ್ರಶಂಸಿಸಿ ಸ್ತುತಿಸುತ್ತೇನೆ. ಹೇಗೆಂದರೆ, ಹಿಂದೆ ನಮ್ಮ ಪಿತೃಗಳೇ ಮೊದಲಾದ ಹಿರಿಯರು ಯಾವ ರೀತಿ ವರುಣನನ್ನು ಸ್ತುತಿಸಿದರೋ ಅಂತಹ ವಾಕ್ಯಗಳಿಂದಲೇ, ಆ ಪಿತೃಗಳ ಸ್ತುತಿವಾಕ್ಯಗಳಿಗೆ ಸಮನಾದ ವಾಕ್ಯಗಳಿಂದಲೇ ಸ್ತುತಿಸುತ್ತೇನೆ. ಮತ್ತು ನಾಭಾಕನೆಂಬ ತನ್ನ ಪ್ರಶಂಸಾಪೂರ್ವಕವಾದ ವಾಕ್ಯಗಳಿಂದಲೂ ಸ್ತುತಿಸುತ್ತೇನೆ. ನಾಭಾಕನೆಂಬುವನು ಒಬ್ಬ ಮಂತ್ರದ್ರಷ್ಟೃವಾದ ಋಷಿಯು. ಆ ಋಷಿಯು, ನದಿಗಳಾಗಿ ಹರಿಯುವ ಉದಕಗಳಿಗೆ ಉದ್ಗಮಸ್ಥಾನವಾದ ಅಂತರಿಕ್ಷದಲ್ಲಿ ಏಳುಮಂದಿ ಭಗಿನಿಯರೊಡಗೂಡಿದ ವರುಣನನ್ನು ವಾಕ್ಯಗಳಿಂದ ಸ್ತುತಿಸುತ್ತಾನೆ. ಇಲ್ಲಿ ವರುಣನು ಮಧ್ಯಮಸ್ಥಾನ (ಅಂತರಿಕ್ಷ) ದೇವತೆಯು. ಏಳು ಮಂದಿ ಭಗಿನಿಯರೆಂದರೆ ಏಳು ಮುಖ್ಯವಾದ ಗಂಗಾದಿ ನದಿಗಳು ಅಥವಾ ಸಪ್ತಾಶ್ವಗಳು. ವರುಣನೆಂದರೆ ಸೂರ್ಯನೆಂದೂ ಅರ್ಥವಾಗುವುದರಿಂದ ಸೂರ್ಯನ ಏಳು ಕುದುರೆಗಳು ಇಲ್ಲಿ ಸೂಚಿತವಾಗಿರಬಹುದು. ಅವುಗಳ ಮಧ್ಯದಲ್ಲಿರುವ ವರುಣನು ಎಂಬ ಅರ್ಥವು ಭಾಸವಾಗುವುದು. ಈ ಋಕ್ಕಿನ ನಭಂತಾಮನ್ಯಕೇ ಸಮೇ ಎಂಬ ಕೊನೆಯ ವಾಕ್ಯಕ್ಕೆ ಪಾಪಪ್ರವೃತ್ತಿಯುಳ್ಳ ಎಂದರೆ ಯಾವಾಗಲೂ ಕೆಟ್ಟಕೆಲಸದಲ್ಲಿಯೇ ಆಸಕ್ತರಾಗಿರುವ, ಮತ್ತೂ ನಮ್ಮನ್ನು ದ್ವೇಷಿಸುವ ದುಷ್ಟರು ಎಂದರೆ ಶತ್ರುಗಳೆಲ್ಲರೂ ಏಕಕಾಲದಲ್ಲಿ ನಾಶವಾಗಲಿ ಎಂದರ್ಥವು.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಐದನೆಯ ಖಂಡವು ಸಮಾಪ್ತವು.

---

## ಅಥ ಷಷ್ಠಃ ಖಂಡಃ

## ಆರನೆಯ ಖಂಡವು

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ । ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ । (ಋ. ಸಂ. ೭-೪೬-೧) || ಇಮಾ ರುದ್ರಾಯ ದೃಢಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯಾನ್ನವತೇಽಷಾಢಾಯಾನ್ಯೈಃ ಸಹಮಾನಾಯ ವಿಧಾತ್ರೇ ತಿಗ್ಮಾಯುಧಾಯ ಭರತ ಶೃಣೋತು ನಸ್ತಿಗ್ಮಂ ತೇಜತೇರುತ್ಸಾಹಕರ್ಮಣ ಆಯುಧಮಾಯೋಧನಾತ್ತಸ್ಯೈಷಾಪರಾ ಭವತಿ || ೬ ||

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾನ್ನೇ । ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾ-ಯುಧಾಯ ಭರತಾ ಶೃಣೋತು ನಃ ॥

(ಯ. ಸಂ. ೨-೪-೧೩)

ರುದ್ರಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಮ್ಮ ಸ್ತೋತ್ರಕರ್ತರೇ ನೀವು ಈ ಸ್ತುತಿಗಳನ್ನು, ದೃಢವಾದ ಬಿಲ್ಲುಳ್ಳ ಶೀಘ್ರಗಾಮಿ ಬಾಣಗಳುಳ್ಳ ದಾನಾದಿಗುಣದಿಂದ ಕೂಡಿದ, ಅನ್ನವುಳ್ಳ, ಯಾರಿಂದಲೂ ತಿರಸ್ಕೃತನಾಗದಿರುವ- ಶತ್ರುಗಳನ್ನು ನಿತ್ಯವೂ ತಿರಸ್ಕರಿಸುವ, ಸೃಷ್ಟಿಕರ್ತನಾದ, ತೀಕ್ಷ್ಣವಾದ ಆಯುಧಗಳಿಂದ ಕೂಡಿದ ರುದ್ರನಾಮಕದೇವನಿಗೋಸ್ಕರ ಧರಿಸಿರಿ. ಆ ರುದ್ರನು ನಮ್ಮ ಸ್ತುತಿಗಳನ್ನು ಕೇಳಲೆಂದು ಪ್ರಾರ್ಥಿಸುತ್ತೇವೆ.

ಇಮಾ ರುದ್ರಾಯ ದೃಢಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯಾನ್ನವತೇಽಷಾಢಾಯಾನ್ಯೈಃ ಸಹಮಾನಾಯ ವಿಧಾತ್ರೇ ತಿಗ್ಮಾ-ಯುಧಾಯ ಭರತ ಶೃಣೋತು ನಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ವಧಾ ಅನ್ನಪರ್ಯಾಯದಲ್ಲಿ ಹೇಳಿದೆ. (ನಿಘ. ೨-೭-೧೭) ಷಹ-ಮರ್ಷಣೇ. ಧಾತು-ಶಾನಚ್. ಸಹಮಾನಾಯ ಮರ್ಷಣಕ್ಕೆ ಸಹನೆ, ತಿರಸ್ಕಾರ ಎರಡೂ ಅರ್ಥವಿರುವುದರಿಂದ ಇಲ್ಲಿ ಶತ್ರುಗಳನ್ನು ತಿರಸ್ಕರಿಸುವವನು ಎಂದರ್ಥ ವಿವರಿಸಿದೆ.

## ತಿಗ್ಮಂ ತೇಜತೇರುತ್ಸಾಹ ಕರ್ಮಣಃ ॥

ತಿಗ್ಮಾಯುಧಾಯ ಎಂದು ಮಂತ್ರದಲ್ಲಿ ಹೇಳಿದೆ. ಅಲ್ಲಿರುವ ತಿಗ್ಮಪದದ ವ್ಯುತ್ಪತ್ತಿಯನ್ನು ತೋರಿಸಿರುತ್ತಾರೆ. ತಿಜ-ನಿಶಾನೇ ಧಾತು 'ಯುಜಿರುಜಿತಿಜಾಂ ಕುಕ್ ಚ' ಸೂತ್ರದಿಂದ ಮಕ್‌ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಇಲ್ಲಿ ಧಾತುವಿಗೆ ಉತ್ಸಾಹಾರ್ಥವನ್ನಂಗೀಕರಿಸುತ್ತಾರೆ. ತೀಕ್ಷ್ಣವಾದ ಆಯುಧವು ಯುದ್ಧಮಾಡುವವರಿಗೆ ಉತ್ಸಾಹವನ್ನು ಕೊಡುತ್ತದೆ.

## ಆಯುಧ ಮಾಯೋಧನಾತ್ ॥

ತಿಗ್ಮಪದದ ವ್ಯುತ್ಪತ್ತಿಯನ್ನು ತಿಳಿಸಿ ಉತ್ತರಪದವಾದ ಆಯುಧಪದದ ಅರ್ಥವನ್ನು ವಿವರಿಸುತ್ತಾರೆ. ಆಯುಧ್ಯತೇ ಅನೇನ ಇತಿ ಆಯುಧಂ. ಯುದ್ಧಕ್ಕೆ ಸಾಧನವಾದದು. ಯುಧ-ಸಂಪ್ರಹಾರೇ ಧಾತು. 'ಘಞರ್ಥೇ ಕವಿಧಾನಂ' ಎಂಬುದರಿಂದ ಕರಣಾರ್ಥದಲ್ಲಿ ಕ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಆಙ್ ಉಪಸರ್ಗ. ಅಥವಾ ಕರ್ತ್ರರ್ಥದಲ್ಲಿಯೇ 'ಇಗುಪಧ ಜ್ಞಾಪ್ರೀಕಿರಃ ಕಃ' ಸೂತ್ರದಿಂದ ಕ ಪ್ರತ್ಯಯ. ಶತ್ರುಗಳನ್ನು ಹೊಡೆಯುವುದು ಆಯುಧ.

## ತಸ್ಯೈಷಾಽಪರಾ ಭವತಿ ॥

ಮುಂದೆ ಹೇಳುವ ಮಂತ್ರವು ರುದ್ರನ ಸ್ತುತಿಯನ್ನು ತಿಳಿಸುತ್ತದೆ. ಪೂರ್ವೋಕ್ತವಾದ ಮಂತ್ರದಲ್ಲಿ 'ಸಹಮಾನಾಯ' ಎಂದು ಹೇಳಿದೆ. ಶತ್ರುತಿರಸ್ಕಾರ ಬಲವಂತನಿಂದಲೇ ಸಾಧ್ಯವಾದುದರಿಂದ ಬಲವುಳ್ಳವನು ಮಧ್ಯಮನಾದ ಇಂದ್ರನೆಂದೇ ವ್ಯಕ್ತವಾದ ಮೇಲೆ ಪುನಃ ಉದಾಹರಣೆಕೊಡುವ ಉದ್ದೇಶವೇನು ? ಎಂದು ಆಶಂಕೆ ಬರುತ್ತದೆ. ಆದರೆ ಅಲ್ಲಿ ವಿಧಾತ್ರೇ ಎಂದೂ ಹೇಳಿರು

ವುದರಿಂದ ಅವನು ಏನು ಸೃಷ್ಟಿಮಾಡಿರುವುದು? ಎಂದು ಆಕಾಂಕ್ಷಿತವಾದುದರಿಂದ ಅದನ್ನು ತಿಳಿಸಲು ಎರಡನೆಯ ಮಂತ್ರ ಹೇಳಿದೆಯೆಂದು ತಿಳಿಯಬೇಕು.

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।
ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋ-
ತು ನಃ ॥ ೧ ॥

ಎಲೈ ಸ್ತೋತೃಗಳೇ, ಈ ಸ್ತುತಿಗಳನ್ನು ದೃಢವಾದ ಧನುಸ್ಸುಳ್ಳವನೂ ವೇಗವಾಗಿ ಹೋಗುವ ಬಾಣವುಳ್ಳವನೂ, ಅನ್ನವಂತನೂ, ಅಪ್ರತಿಹತನೂ, ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನೂ, ಜಗನ್ನಿರ್ಮಾಪಕನೂ, ತೀಕ್ಷ್ಣವಾದ ಆಯುಧಗಳುಳ್ಳವನೂ, ದೇವತಾತ್ಮನೂ ಆದ ರುದ್ರನಿಗೆ ನಿರ್ಮಿಸಿ ಅರ್ಪಿಸಿ. ಅದೇ ರುದ್ರನು ನಮ್ಮ ಸ್ತುತಿಗಳನ್ನು ಕೇಳಲಿ ರುದ್ರಶಬ್ದನಿರ್ವಚನವನ್ನು ಯಾಸ್ಕರು ಈ ರೀತಿ ವಿವರಿಸಿದ್ದಾರೆ—

ರುದ್ರೋ ರೌತೀತಿ ಸತಃ । ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ । ಯದರುದತ್ತದ್ರುದ್ರಸ್ಯ ರುದ್ರತ್ವಂ ಇತಿ ಕಾಠಕಂ । ಯದರೋದೀತ್ತದ್ರುದ್ರಸ್ಯ ರುದ್ರತ್ವಂ ಇತಿ ಹಾರಿದ್ರವಿಕಂ । ತಸ್ಯೈಷಾ ಭವತಿ ॥

(ನಿ. ೧೦-೬)

ರುದ್ರ ಶಬ್ದವು ಘಟ್ಟಿಯಾಗಿ ಕಿರಿಚು, ಕೂಗು ಎಂಬರ್ಥವುಳ್ಳ ರೌತಿ ಎಂಬ ಧಾತುವಿನಿಂದಾಗಲಿ, ಕಿರಿಚುತ್ತಾ ಓಡು ಎಂಬ ಅರ್ಥವುಳ್ಳರುಪೂರ್ವಕವಾದ ದ್ರವತಿ ಧಾತುವಿನಿಂದಾಗಲಿ ಅಥವಾ ಘರ್ಜಿಸು ಎಂಬರ್ಥವುಳ್ಳ ರುದ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ವಿಷಯದಲ್ಲಿ ಯದರುದತ್ತದ್ರುದ್ರಸ್ಯ ರುದ್ರತ್ವಂ— ಈ ದೇವನು ಘಟ್ಟಿಯಾಗಿ ಗರ್ಜನೆ ಮಾಡಿದ್ದರಿಂದ ಇವನಿಗೆ ರುದ್ರನೆಂಬ ಹೆಸರು ಬಂದಿತು ಎಂಬರ್ಥವುಳ್ಳ ಕಾಠಕಶ್ರುತಿಯು ಉದಾಹರಣೆಯಾಗಿದೆ. ಮತ್ತು ಇವನು ಗರ್ಜನೆ ಮಾಡಿದ್ದರಿಂದ ಈ ದೇವನಿಗೆ ರುದ್ರನೆಂಬ ಹೆಸರು ಬಂದಿತು. ಗರ್ಜನೆ ಮಾಡುವುದು ಇವನ ಸ್ವಭಾವಗುಣವು ಎಂಬರ್ಥವುಳ್ಳ ಯದರೋದೀತ್ತದ್ರುದ್ರಸ್ಯ ರುದ್ರತ್ವಂ ಎಂಬ ಹಾರಿದ್ರವಿಕೀ ಶ್ರುತಿವಾಕ್ಯವೂ ಈ ವಿಷಯದಲ್ಲಿ ಪ್ರಮಾಣವನ್ನಾಗಿ ಉದಾಹರಿಸಬಹುದಾಗಿದೆ. ಋಗ್ವೇದದಲ್ಲಿ ಈ ರುದ್ರದೇವನ ವಿಷಯವನ್ನು ತಿಳಿಸುವ ಋಕ್ಕನ್ನು ಇಲ್ಲಿ ಉದಾಹರಣೆಗಾಗಿ ಕೊಡಲಾಗಿದೆ—

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।
ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥

(ಋ. ಸಂ. ೭-೪೬-೧)

ಇಮಾ ರುದ್ರಾಯ ದೃಢಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯಾನ್ನವತೇಽಷಾಢಾಯಾನ್ಯೈಃ ಸಹಮಾನಾಯ ವಿಧಾತ್ರೇ ತಿಗ್ಮಾಯುಧಾಯ ಭರತ ಶೃಣೋತು ನಃ ॥
ತಿಗ್ಮಂ ತೇಜತೇರುತ್ಸಾಹಕರ್ಮಣಃ । ಆಯುಧಮಾಯೋಧನಾತ್ । ತಸ್ಯೈಷಾ ಪರಾಭವತಿ ॥

(ನಿ. ೧೦-೭)

ಈ ಸ್ತುತಿವಾಕ್ಯಗಳನ್ನು ರುದ್ರದೇವನಿಗೆ ಅರ್ಪಿಸಿರಿ. ಈ ದೇವನ ಧನುಸ್ಸು ದೃಢವಾಗಿರುವುದು. ಇವನ ಧನುಸ್ಸಿನಿಂದ ಹೊರ ಹೊರಡುವ ಬಾಣಗಳು ಬಹಳ ವೇಗಗಮನವುಳ್ಳವು. ಈ ದೇವನು ಬಹಳ ಅನ್ನಯುಕ್ತನಾಗಿರುವನು ಎಂದರೆ ತನ್ನನ್ನು ಸ್ತುತಿಸುವವರಿಗೆ ಕೊಡುವುದಕ್ಕಾಗಿ ಈ ದೇವನ ಬಳಿ ಬಹಳ ಅನ್ನಾದ್ಯಾಹಾರಗಳಿರುವವು. ಈ ದೇವನು ತನ್ನ ಶತ್ರುಗಳನ್ನು ಹಿಂಸಿಸುವನು. ಆದರೆ ಇವನು ಮಾತ್ರ ಅಪ್ರತಿಹತನು. ಜನಗಳು ಮಾಡುವ ಕರ್ಮಗಳಿಗೆ ನಿಯಾಮಕನು. ಇವನ ಆಯುಧವು ಅತಿ ತೀಕ್ಷ್ಣ (ಹರಿತ) ವಾಗಿರುವುದು. ಇಂತಹ ಈ ದೇವನು ನಮ್ಮ ಸ್ತುತಿವಾಕ್ಯಗಳನ್ನು ಆಲಿಸಿ ಕೇಳಲಿ ಎಂದು ನಿರ್ವಚನಾಭಿಪ್ರಾಯವು.

ತಿಗ್ಮ ಶಬ್ದವು ತಿಜ್=ಹರಿತಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಬಹಳ ಹರಿತವಾದ ಎಂಬರ್ಥವುಳ್ಳದ್ದಾಗಿರುವುದು. ಆಯುಧ ವೆಂದರೆ ಯುದ್ಧಮಾಡಿ ಶತ್ರುಗಳನ್ನು ಕೊಲ್ಲುವ ಸಾಧನವು ಎಂದರ್ಥವು. ಈ ರುದ್ರದೇವನ ವಿಷಯದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡಲಾಗುವುದು. (ಈ ಸೂಕ್ತದ ಮೂರನೆಯ ಋಕ್ಕಿನ ವಿಶೇಷವಿಷಯಗಳನ್ನು ನೋಡಿ),

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಹತ್ತನೆಯ ಅಧ್ಯಾಯದಲ್ಲಿ
ಆರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತಮಖಂಡಃ

### ಏಳನೆಯ ಖಂಡವು

ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ | ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾ ನಸ್ತೋಕೇಷು ತನಯೇಷು ರೀರಿಷಃ | (ಋ.ಸಂ. ೭-೪೬-೩) || ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ದಿವೋಽಧಿ ದಿದ್ಯುದ್ದ್ಯವತೇರ್ವಾ ದ್ಯುತೇರ್ವಾ ದ್ಯೋತತೇರ್ವಾ ಕ್ಷ್ಮಯಾ ಚರತಿ ಕ್ಷ್ಮಾ ಪೃಥಿವೀ ತಸ್ಯಾಂ ಚರತಿ ತಯಾ ಚರತಿ ವಿಕ್ಷ್ಮಾಪಯಂತೀ ಚರತೀತಿ ವಾ ಪರಿವೃಣಕ್ತು ನಃ ಸಾ ಸಹಸ್ರಂ ತೇ ಸ್ವಾಪ್ತವಚನ ಭೈಷಜ್ಯಾನಿ ಮಾ ನಸ್ತ್ವಂ ಪುತ್ರೇಷು ಚ ಪೌತ್ರೇಷು ಚ ರೀರಿಷಸ್ತೋಕಂ ತುದ್ಯತೇ ಸ್ತನಯಂ ತನೋತೇರಗ್ನಿರಪಿ ರುದ್ರ ಉಚ್ಯತೇ ತಸ್ಯೈಷಾ ಭವತಿ || ೭ ||

ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿಸಾ
ವೃಣಕ್ತು ನಃ | ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾನಸ್ತೋ-
ಕೇಷು ತನಯೇಷು ರೀರಿಷಃ ||

(ಋ. ಸಂ. ೫-೪-೧೩)

ವಿಧಾತೃತ್ವಗುಣವಿಶಿಷ್ಟನಾದ ರುದ್ರನ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಪೂಜ್ಯನಾದ ರುದ್ರನೇ ನಿನ್ನ ಜ್ವರಾತೀಸಾರಾದಿರೋಗರೂಪವಾದ ಆಯುಧವು ದ್ಯುಲೋಕದಿಂದ ಬಿಡಲ್ಪಟ್ಟುದಾಗಿ, ಭೂಮಿಯಲ್ಲಿ ಅನ್ನ ಪಾನಾದಿಭಾವವನ್ನು ಹೊಂದಿ ಸರ್ವತ್ರ ಪ್ರಸರಿಸಿ ಪ್ರಾಣಿಗಳನ್ನು ನಾಶಪಡಿಸುತ್ತಾ ನಮ್ಮನ್ನು ಬಿಟ್ಟು ಬಿಡಲಿ. ತಡೆಯಿಲ್ಲದ ಆಜ್ಞೆಯುಳ್ಳವನೇ ನಿನ್ನ ಅಸಂಖ್ಯಾಕವಾದ ಔಷಧಿಗಳನ್ನು ನಮಗೆ ಕೊಡು. ನಮ್ಮ ಮಕ್ಕಳುಮರಿಗಳಲ್ಲಿ ಹಿಂಸೆಯನ್ನು ಮಾಡಬೇಡ.

**ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ-ದಿವೋಧಿ, ದಿದ್ಯುತ್‌ದ್ಯತೇರ್ವಾ ದ್ಯುತೇರ್ವಾ ದ್ಯೋತತೇ ರ್ವಾ ||**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮೊದಲು ದಿದ್ಯುತ್‌ಪದದ ನಿರ್ವಚನವನ್ನು ತೋರಿಸುತ್ತಾರೆ. ದೋಽವಖಂಡನೇ-ಧಾತು. ಇದಕ್ಕೆ ಕ್ವಿಪ್ರತ್ಯಯ ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಸಾಧುವಾಗುತ್ತದೆ. ಶತ್ರುಗಳನ್ನು ಖಂಡಿಸುವುದು ಎಂದರ್ಥ. ಅಥವಾ ದ್ಯು-ಅಭಿಗಮನೇ ಧಾತು. ಕ್ವಿಪ್. ದ್ವಿತ್ವ. ಅಭ್ಯಾಸಕ್ಕೆ ಸಂಪ್ರಸಾರಣಾದಿ. ಪ್ರಾಣಿಗಳನ್ನು ಕುರಿತು ಹೋಗುವುದೆಂದರ್ಥ. ಅಥವಾ ದ್ಯುತ-ದೀಪ್ತೌ. ಧಾತು. ಹಿಂದಿನಂತೆ ಕ್ವಿಬಾದಿ. ಪ್ರಕಾಶಿಸುವುದೆಂದರ್ಥ.

**ಕ್ಷ್ಮಯಾ ಚರತಿ-ಕ್ಷ್ಮಾ ಪೃಥಿವೀ ತಸ್ಯಾಂ ಚರತಿ | ವಿಕ್ಷ್ಮಾಪಯಂತೀ ಚರತೀತಿ ವಾ, ಪರಿವೃಣಕ್ತು ನಃ ಸಾ | ಸಹಸ್ರಂ ತೇ ಸ್ವಾಪ್ತವಚನ ಭೇಷಜ್ಯಾನಿ | ಮಾ ನಸ್ತ್ವಂ ಪುತ್ರೇಷು ಚ ಪೌತ್ರೇಷು ಚ ರೀರಿಷಃ | ತೋಕಂ ತುದ್ಯತೇಃ | ತನಯಂ ತನೋತೇಃ ||**

ಕ್ಷ್ಮಯಾ ಎಂಬಲ್ಲಿ ಸಹಾರ್ಥದಲ್ಲಿ ತೃತೀಯಾ ಬಂದಿದೆ. ಅನ್ನಪಾನಾದಿಗಳೊಡನೆ ಬೆರತು ಎಂದರ್ಥ. ಸಪ್ತಮ್ಯರ್ಥ ಹೇಳಿದರೆ ಭೂಮಿಯಲ್ಲಿ ಎಂದರ್ಥವಾಗುತ್ತದೆ ಅಥವಾ 'ವಿಕ್ಷ್ಮಾಪಯಂತೀ ಚರತೀ' ಎಂದು ಅನ್ವಯ. ವಿ ಎಂಬ ಉಪಸರ್ಗ ಮಂತ್ರ ದಲ್ಲಿಲ್ಲದಿದ್ದರೂ ಧಾತ್ವರ್ಥದಲ್ಲಿ ಅತಿಶಯ ತಿಳಿಸಲು ಹೇಳಿದೆ. ಕ್ಷ್ಮಾಯೀ–ವಿಧೂನನೇ. ಧಾತು. ಣಿಜಂತದಮೇಲೆ ಕ್ವಿಪ್ ಬಂದಾಗ ಧಾತು ಯಕಾರಕ್ಕೆ ಲೋಪ. ಆಗಮಶಾಸ್ತ್ರ ಅನಿತ್ಯವಾದುದರಿಂದ ಪುಗಾಗಮ ಬರಲಿಲ್ಲ. 'ಅಪತ್ಯಂ ತೋಕಂ ತಯೋಃ ಸಮೇ' ಅಮರ. ತೋಕಂ ನಪುಂಸಕಪದ. ಪುತ್ರಪುತ್ರಿಯರನ್ನು ತಿಳಿಸುತ್ತದೆ. ತುದ–ವ್ಯಥನೇ. ಧಾತು ಸಂಜ್ಞಾತೋರುವಾಗ ಘ ಪ್ರತ್ಯಯ ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ದಕಾರಕ್ಕೆ ಕಕಾರ ಬಂದಿದೆ. ಲಘೂಪದ ಗುಣ, ವಿನಯವನ್ನು ಶಿಕ್ಷಿಸುವ ತಂದೆಯಿಂದ ನಿತ್ಯವೂ ಪುತ್ರನು ಇದನ್ನು ಮಾಡು, ಇದನ್ನು ಮಾಡಬೇಡವೆಂದೂ ಶಿಕ್ಷಿಸಲ್ಪಡು ವುದರಿಂದ ವ್ಯಥೆ ಹೊಂದುತ್ತಾನೆ. ತನಯಂ ಎಂಬುದು ದ್ವಿತಿಯಾಂತಪದ, ತನು–ವಿಸ್ತಾರೇ. ಧಾತು. 'ವಲಿ ಮಲಿ ತನಿಭ್ಯಃ ಕಯನ್' ಸೂತ್ರದಿಂದ ಕಯನ್ ಪ್ರತ್ಯಯ. ಕುಲವನ್ನು ವಿಸ್ತಾರಮಾಡುವವನು ಪುತ್ರನು. ತೋಕಂ ಎಂಬುದರಿಂದ ಪುತ್ರನು ಸಂಗ್ರಹೀತನಾದರೂ ವಿಶೇಷಾರ್ಥ ಪ್ರತಿಪತ್ತಿಗೋಸ್ಕರ ಪುನಃ ಹೇಳಿದೆ. ಹೀಗೆಯೇ ಮುಂದೆಯೂ ಸಮಾನಾರ್ಥಕ ಪದಗಳೆರಡೂ ಬಂದಾಗ ಒಂದಕ್ಕೆ ವಿಶೇಷಾರ್ಥವನ್ನು ಕಲ್ಪಿಸಬೇಕು.

**ಅಗ್ನಿರಪಿ ರುದ್ರಉಚ್ಯತೇ ತಸ್ಯೈಷಾ ಭವತಿ ||**

ಅಗ್ನಿಯೂಕೂಡಾ ರುದ್ರಶಬ್ದದಿಂದ ಕೆಲವು ಸ್ಥಳದಲ್ಲಿ ಹೇಳಿದೆ. ಆದುದರಿಂದ ಸಂಕರವಾಗಿ ಅಲ್ಲಲ್ಲಿ ಹೇಳುತ್ತಾರೆ. ಮುಂದೆ ಹೇಳುವ ಮಂತ್ರವು ರುದ್ರಪದದಿಂದ ಅಗ್ನಿಯ ಸ್ತುತಿಯನ್ನು ಪ್ರತಿಪಾದಿಸುತ್ತಿದೆ.

**ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ ।**
**ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾನಸ್ತೋಕೇಷು ತನಯೇಷು ರೀರಿಷಃ ॥**

ಎಲೈ ರುದ್ರದೇವನೇ, ನಿನಗೆ ಸೇರಿದುದೂ, ಅಂತರಿಕ್ಷದಿಂದ ಬಿಡಲ್ಪಟ್ಟುದೂ ಆದ ಯಾವ ವಿದ್ಯುದ್ರೂಪವಾದ ಆಯುಧವು ಪೃಥ್ವಿಯಮೇಲೆ ಸಂಚರಿಸುವುದೋ ಅದೇ ಶಕ್ತಿ ರೂಪವಾದ ಆಯುಧವು ನಮ್ಮನ್ನು ಬಿಟ್ಟುಬಿಡಲಿ. ಕಲ್ಯಾಣ ಕಾರಕವಾದ ವ್ಯವಹಾರವುಳ್ಳ ಎಲೈ ರುದ್ರನೇ, ನಿನ್ನಲ್ಲಿ ಅನೇಕ ವಿಧವಾದ ಔಷಧಿಗಳು ಇರುತ್ತವೆ. ನಮ್ಮ ಪುತ್ರರಿಗೂ, ತತ್ಪುತ್ರರಿಗೂ ಹಿಂಸೆಯನ್ನುಂಟುಮಾಡಬೇಡ.

ರುದ್ರಶಬ್ದದ ನಿಷ್ಪತ್ತಿಯನ್ನೂ ಅರ್ಥವನ್ನೂ ವಿವರಿಸುವಾಗ ಯಾಸ್ಕರು ಈ ಋಕ್ಕನ್ನು ಉದಾಹರಣೆಯಾಗಿ ತೆಗೆದು ಕೊಂಡು ಇದಕ್ಕೂ ನಿರುಕ್ತವನ್ನು ಹೇಳಿದಾರೆ—

ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ದಿವೋಽಧಿ । ದಿದ್ಯುತ್ ದ್ಯತೇರ್ವಾ, ದ್ಯುತೇರ್ವಾ, ದ್ಯೋತತೇರ್ವಾ । ಕ್ಷ್ಮಯಾ ಚರತಿ ಕ್ಷ್ಮಾ ಪೃಥಿವೀ ತಸ್ಯಾಂ ಚರತಿ ತಯಾ ಚರತಿ ವಿಕ್ಷ್ಮಾಪ-ಯಂತೀ ಚರತೀತಿ ವಾ, । ಪರಿವೃಣಕ್ತು ನಃ ಸಾ ಸಹಸ್ರಂ ತೇ ಸ್ವಾಪ್ತವಚನ ಭೈಷಜ್ಯಾನಿ ಮಾ ನಸ್ತ್ವಂ ಪುತ್ರೇಷು ಚ ಪೌತ್ರೇಷು ಚ ರೀರಿಷಃ

ತೋಕಂ ತುದ್ಯತೇಃ । ತನಯಂ ತನೋತೇಃ ॥

ಅಗ್ನಿರಪಿ ರುದ್ರ ಉಚ್ಯತೇ । ತಸ್ಯೈಷಾ ಭವತಿ ।

ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ ।

ಸ್ತೋಮಂ ರುದ್ರಾಯ ದೃಶೀಕಂ ॥ ಜರಾ ಸ್ತುತಿ.......ದರ್ಶನೀಯಂ ॥

(ನಿ. ೧೦- ೭)

ಎಲೈ ರುದ್ರದೇವನೇ, ಸ್ವರ್ಗಲೋಕದ ಮೇಲಿನಿಂದ ಎಸೆಯಲ್ಪಡುವ ಪ್ರಕಾಶಮಾನವಾದ ನಿನ್ನ ಆಯುಧವು ನಮ್ಮನ್ನು ತಾಕದಿರಲಿ. ದಿದ್ಯುತ್ ಎಂಬ ಶಬ್ದವು ಕತ್ತರಿಸು ಎಂಬರ್ಥವುಳ್ಳ ದ್ಯತಿಧಾತುವಿನಿಂದಾಗಲಿ, ಪ್ರಯೋಗಿಸು, ಹಿಂಸಿಸು ಎಂಬರ್ಥವುಳ್ಳ ದ್ಯುತಿ ಧಾತುವಿನಿಂದಾಗಲಿ, ಅಥವಾ ಪ್ರಕಾಶಿಸು ಎಂಬರ್ಥವುಳ್ಳ ದ್ಯುತ್ (ದ್ಯೋತತಿ) ಧಾತುವಿನಿಂದಾ ಗಲಿ ನಿಷ್ಪನ್ನವಾಗಬಹುದು. ಈ ಶಬ್ದಕ್ಕೆ ಪ್ರಕಾಶಿಸುವ ಎಂಬರ್ಥವಿರುವುದು. ಕ್ಷ್ಮಯಾಚರತಿ । ಕ್ಷ್ಮಾ ಎಂದರೆ ಪೃಥಿವಿಯು. ಕ್ಷ್ಮಯಾಚರತಿ ಎಂದರೆ ಪೃಥಿವಿಯಮೇಲೆ ಅಥವಾ ಪೃಥಿವಿಯೊಡನೆ ಚಲಿಸುವುದು ಎಂದರ್ಥವು. ಅಥವಾ ಚಲಿಸುತ್ತಾ ನಾಶವನ್ನುಂಟುಮಾಡುವುದು ಎಂದೂ ಅರ್ಥವು. ಇಂತಹ ರುದ್ರದೇವನ ವಿನಾಶಕರವಾದ ಆಯುಧವು ನಮಗೆ ಹಿಂಸೆ ಯನ್ನುಂಟುಮಾಡದೆ, ನಮಗೆ ತಾಕದೆ ನಮ್ಮ ಮೇಲೆ ಹಾದುಹೋಗಲಿ. (ಸ್ವಪಿವಾತ = ಸ್ವಾಪ್ತವಾಚನ) ಹಿತಕರವಾದ ವಾಕ್ಯಗಳುಳ್ಳ ಎಲೈ ರುದ್ರನೇ, ನಿನ್ನ ಬಳಿ ಸಾವಿರಾರು ಔಷಧಗಳಿವೆ. ನೀನು ನಮ್ಮ ಪುತ್ರರನ್ನೂ, ಪೌತ್ರರನ್ನೂ ಹಿಂಸಿಸ ಬೇಡ. ತೋಕಂ ಎಂಬ ಶಬ್ದವು ಇದನ್ನು ಮಾಡು, ಪ್ರೇರಿಸು, ಎಂಬರ್ಥವುಳ್ಳ ತುದ್ (ನೂಕು, ತಳ್ಳು, ಪ್ರೇರಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿ ಪುತ್ರನು ಎಂಬರ್ಥವುಳ್ಳದ್ದಾಗಿದೆ. ತಂದೆಯಿಂದ ಇಂತಹ ಕೆಲಸವನ್ನು ಮಾಡು ಎಂದು

ಪ್ರೇರಿತನಾಗುವ ಪುತ್ರನು ಎಂದರ್ಥವು. ತನಯ ಶಬ್ದವು ತನು ವಿಸ್ತಾರೇ—ವೃದ್ಧಿಪಡಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿ ಪೌತ್ರನು ಅಥವಾ ಮೊಮ್ಮಗನು ಎಂದರ್ಥವುಳ್ಳದ್ದಾಗಿರುವುದು. ಕುಲವನ್ನು ವಿಸ್ತಾರಮಾಡಿ ಅಭಿವೃದ್ಧಿಪಡಿಸುವವನು ಎಂದಭಿಪ್ರಾಯವು.

ಅಗ್ನಿಯೂ ಕೆಲವು ಸಂದರ್ಭಗಳಲ್ಲಿ ರುದ್ರನೆಂದು ಕರೆಯಲ್ಪಡುವನು. ಈ ವಿಷಯದಲ್ಲಿ—ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಂ ಎಂಬ ಋಕ್ಕೇ ಉದಾಹರಣೆಯಾಗಿರುವುದು ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಏಳನೆಯ ಖಂಡವು ಸಮಾಪ್ತವಾಗಿದೆ.

## ಅಥ ಅಷ್ಟಮಖಂಡಃ

## ಎಂಟನೆಯ ಖಂಡವು

ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಮ್ । (ಋ. ಸಂ. ೧-೨೭-೧೦) ॥ ಜರಾ ಸ್ತುತಿರ್ಜರತೇಃ ಸ್ತುತಿಕರ್ಮಣಸ್ತಾಂ ಬೋಧಿ ತಯಾ ಬೋಧಯಿತಿರಿತಿ ವಾ ತದ್ವಿವಿಡ್ಢಿ ತತ್ಕುರು ಮನುಷ್ಯಸ್ಯ ಯಜಮಾನಾಯ ಸ್ತೋಮಂ ರುದ್ರಾಯ ದರ್ಶನೀಯಮಿಂದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ದಾರಯುತ ಇತಿ ವೇರಾಂ ಧಾರಯುತ ಇತಿ ವೇಂದವೇ ದ್ರವತೀತಿ ವೇದಾಂ ದದಾತೀತಿ ವೇಂದಾ ರಮತ ಇತಿ ವೇನ್ಸೇ ಭೂತಾನೀತಿ ವಾ ತದ್ಯದೇನಂ ಪ್ರಾಣೈ ಸಮೈಂಧತ ತದಿಂದ್ರಸ್ಯೇಂದ್ರತ್ವಮಿತಿ ವಿಜ್ಞಾಯತ ಇದಂ ಕರಣಾದಿತ್ಯಾಗ್ರಾಯಣ ಇದಂ ದರ್ಶನಾದಿತ್ಯೌಪಮನ್ಯವ ಇಂದ್ರತೇರ್ವೈಶ್ವರ್ಯಕರ್ಮಣ ಇಙ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾವಾದರಯಿತಾ ಚ ಯಜ್ವನಾಂ ತಸ್ಯೈಷಾ ಭವತಿ ॥ ೮ ॥

ಜರಾ ಬೋಧಿ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಮ್ ॥

ರುದ್ರಪದ ಬೋಧ್ಯನಾದ ಅಗ್ನಿಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಪೂಜ್ಯನಾದ ಅಗ್ನಿಯೇ ನಮ್ಮ ಸ್ತುತಿಯನ್ನು ತಿಳಿ. ಅಥವಾ ಸ್ತುತಿಯನ್ನು ದೇವತೆಗಳಿಗೆ ತಿಳಿಸು. ನಿನ್ನ ಕರ್ತವ್ಯವನ್ನು ಯಜ್ಞಸಂಪಾದಕರಾದ ಮನುಷ್ಯರಿ

ಗೋಸ್ಕರ ಮಾಡು. ದೇವತೆಗಳನ್ನು ಸ್ತುತಿಸುವ ಅಗ್ನಿಗೆ ಮನುಷ್ಯನು (ಯಜಮಾನನು) ಶ್ರವಣೀಯವಾದ ಸ್ತೋತ್ರವನ್ನು ಪಠಿಸುತ್ತಾನೆ.

ಜರಾ ಸ್ತುತಿರ್ಜರತೇಃ ಸ್ತುತಿಕರ್ಮಣಃ | ತಾಂ ಬೋಧ | ತಯಾ ಬೋಧಯಿತರಿತಿ ವಾ | ತದ್ವಿವಿಡ್ಢಿ-ತತ್ಕುರು | ಮನುಷ್ಯಸ್ಯ ಯಜಮಾನಾಯ ಸ್ತೋಮಂ ರುದ್ರಾಯ ದರ್ಶನೀಯಮ್ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಂತ್ರದಲ್ಲಿ ಜರಾ ಬೋಧ ಎಂದು ಎರಡು ಪದಗಳೆಂದು ಅಂಗೀಕರಿಸಿದರೆ ಆಗ ಜರಾ ಪದಕ್ಕೆ ಸ್ತುತಿಯೆಂದರ್ಥ. ಜ್ಯಷ್–ವಯೋ–ಹಾನೌ. ಧಾತು, ಧಾತುಗಳಿಗೆ ಅನೇಕಾರ್ಥವನ್ನು ಅಂಗೀಕರಿಸಿರುವುದರಿಂದ ಸ್ತುತ್ಯರ್ಥ ಇಲ್ಲಿ ವಿವಕ್ಷಿತವಾಗಿದೆ. ಅದಕ್ಕೆ ಅಜ್‌ಪ್ರತ್ಯಯ ಬಂದಾಗ ಗುಣ. ಸ್ತ್ರೀತ್ವದಲ್ಲಿ ಟಾಪ್. ನಮ್ಮ ಸ್ತುತಿಯನ್ನು ತಿಳಿ ಎಂದರ್ಥ. ಒಂದೇಪದವೆಂದು ಅಂಗೀಕರಿಸುವುದಾದರೆ ನಮ್ಮ ಸ್ತುತಿಯನ್ನು ದೇವತೆಗಳಿಗೆ ತಿಳಿಸುವವನೆಂದರ್ಥ. ಮನುಷ್ಯಸ್ಯ ಎಂಬಲ್ಲಿ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ.

ಇಂದ್ರ ಇರಾಂ ದೃಣಾತೀತಿ ವಾ, ಇರಾಂ ದದಾತೀತಿ ವಾ ಇರಾಂ ದಧಾತೀತಿ ವಾ, ಇರಾಂ ದಾರಯತ ಇತಿ ವಾ, ಇರಾಂ ಧಾರಯತ ಇತಿ ವಾ ||

ಕ್ರಮಪ್ರಾಪ್ತವಾದ ಇಂದ್ರಪದದ ನಿರ್ವಚನವನ್ನು ನಾನಾರೀತಿಯಿಂದ ಮಾಡಿ ತೋರಿಸುತ್ತಾರೆ. ಇರಾ ಅಂದರೆ ಅನ್ನ. (ನಿಘ ೨–೭–೧೨) ವ್ರೀಹ್ಯಾದಿಗಳನ್ನು ಅಂಕುರೋದ್ಭೇದದಿಂದ ವಿಕಾಸಗೊಳಿಸುತ್ತಾನೆ. ಅಥವಾ ಕೊಡುತ್ತಾನೆ. ಅಥವಾ ಧರಿಸುತ್ತಾನೆ. ಇರಾಶಬ್ದ ಉಪಪದವಾಗಿರುವಾಗ ವಿದಾರಣಾರ್ಥಕದೃಧಾತುವಿಗೆ, ಅಥವಾ ದಾನಾರ್ಥಕ ದಾ ಧಾತುವಿಗ್ದೆ ಅಥವಾ ಧಾರಣಾರ್ಥಕ ಧಾತುವಿಗೆ 'ಋಜ್ರೇಂದ್ರ'–ಸೂತ್ರದಿಂದ ರಕ್‌ಪ್ರತ್ಯಯ. ನಿಪಾತದಿಂದ ಇಂದ್ರ, ಎಂದು ರೂಪಸಿದಿ, ಯಾಗುತ್ತದೆ. 'ಇರಾದ ಇರಾಧೋ ವಾ ಸನ್ನಿಂದ್ರಃ' ಎಂದು ಪರೋಕ್ಷವಾಗಿ ಹೇಳುತ್ತಾರೆ. ದೇವತೆಗಳು ಪರೋಕ್ಷಪ್ರಿಯ ರೆಂದು ಪ್ರಸಿದ್ಧವಾಗಿದೆ. ವೃಷ್ಟಿಮೂಲಕವಾಗಿ ಇವನು ಅನ್ನವನ್ನು ಕೊಡುತ್ತಾನೆ. ಇರಾ ಎಂಬುದು ಪೂರ್ವಪದ. ದೃಣಾತಿ ಮುಂತಾದುವುಗಳು ಉತ್ತರಪದವೆಂದು ತಿಳಿಯಬೇಕು.

ಇಂದ ವೇದ್ರವತೀತಿ ವಾ, ಇಂದೌರಮತ ಇತಿವಾ ||

ಅಥವಾ ಇಂದು ಶಬ್ದ ಪೂರ್ವಪದ. ದ್ರವತಿ ಅಥವಾ ರಮತೇ ಉತ್ತರಪದ. ಇಂದು ಅಂದರೆ ಸೋಮ. ಅದನ್ನು ಉದ್ದೇಶಿಸಿ ಕುಡಿಯಲು ಅವನು ಹೋಗುತ್ತಾನೆ. ಇಂದುದ್ರವ ಎಂಬುದು ಇಂದ್ರ ಎಂದಾಗಿದೆ. ಅಥವಾ ಅತಿಪ್ರಿಯವಾದುದರಿಂದ ಇವನು ಇಂದುವಿನಲ್ಲಿ ಅಂದರೆ ಸೋಮದಲ್ಲಿ ರಮಿಸುತ್ತಾನೆ. ಇಂದುರಮಃ ಎಂಬುದು ಇಂದ್ರ ಎಂದಾಗ್ತಿದೆ.

ಇಂಧೇ ಭೂತಾನೀತಿ ವಾ 'ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಂ' ಇತಿ ವಿಜ್ಞಾಯತೇ ||

ಅಥವಾ ಸಕಲ ಭೂತಗಳನ್ನು ಪ್ರಕಾಶಿಸುವವನು ಇಂದ್ರನು. ಞಿಇನ್ಧೀದೀಪ್ತೌ. ಧಾತು. ಇದಕ್ಕೆ ರಕ್‌ಪ್ರತ್ಯಯ. ಇವನು ಅನ್ನವನ್ನು ಉತ್ಪಾದನೆ ಮಾಡುವುದರ ಮೂಲಕ, ಅಧಿದೈವಸ್ಥನೂ, ಅಧ್ಯಾತ್ಮಸ್ಥನೂ ಆಗಿ ಪ್ರಾಣಿಗಳಿಗೆ ತಿನ್ನಿಸುತ್ತಾ ಅವುಗಳನ್ನು ಬೆಳಗಿಸುತ್ತಾನೆ. ಇಂಧಃ ಎಂಬುದು ಇಂದ್ರ ಎಂದಾಗಿದೆ. ಶರೀರದ ಮಧ್ಯದಲ್ಲಿರುವ ಇವನನ್ನು ಪ್ರಾಣಾಧಿದೇವತೆಗಳು ಪ್ರಾಣಭಾವದಿಂದ ಸುತ್ತಿ ಪ್ರಕಾಶಪಡಿಸಿದವು. ಎಂದು ಬ್ರಾಹ್ಮಣದಲ್ಲಿಯೂ ಹೇಳಿದೆ. ಆಗ ಕರ್ಮಣಿಯಲ್ಲಿ ರಕ್‌ಪ್ರತ್ಯಯ. ಪೂರ್ವವ್ಯುತ್ಪತ್ತಿಯಲ್ಲಿ ಕರ್ತರಿಯಲ್ಲಿ ರಕ್‌ಪ್ರತ್ಯಯ.

## ॥ ಇದಂ ಕರುಣಾ ದಿತ್ಯಾಗ್ರಾಯಣಃ ॥

ಆಗ್ರಾಯಣಾಚಾರ್ಯರು ಇವನೇ ಎಲ್ಲವನ್ನೂ ಮಾಡಿರುವನೆಂದು ಇದಂಕರಃ ಎಂಬುದು ಇಂದ್ರ ಎಂದಾಗಿದೆಯೆಂದು ನಿರ್ವಚನ ಮಾಡಿರುತ್ತಾರೆ. ಇದಂಶಬ್ದವೇ ಪೂರ್ವಪದ. ಕೃಧಾತು ಉತ್ತರಪದ.

## ॥ ಇದಂದರ್ಶನಾದಿತ್ಯೌಪಮನ್ಯವಃ ॥

ಇವನು ಎಲ್ಲವನ್ನೂ ನೋಡಿರುವನು. ಎಂಬ ವ್ಯುತ್ಪತ್ತಿಯಿಂದ ಇದಂದರ್ಶೀ ಎಂಬುದು ಇಂದ್ರ ಎಂದಾಗಿದೆಯೆಂದು ಉಪಮನ್ಯು ಪುತ್ರರಾದ ಋಷಿಗಳು ಹೇಳುತ್ತಾರೆ.

## ಇಂದತೇ ರ್ವಾ ಐಶ್ವರ್ಯಕರ್ಮಣಃ । ಇಂದಞ್ಛತ್ರೂಣಾಂದಾರಯಿತಾವಾ, ದ್ರಾವಯಿತಾ ವಾ ಆದರಯಿತಾ ಚ ಯಜ್ವನಾಂ ॥ ತಸ್ಯೈಷಾ ಭವತಿ ॥ ೮ ॥

ಇದಿ–ಪರಮೈಶ್ವರ್ಯೇ. ಧಾತು. ಇದಕ್ಕೆ ಶತೃಪ್ರತ್ಯಯ ಬಂದರೆ ಇಂದ್ ಎಂದಾಗುತ್ತದೆ. ಈಶ್ವರ ಎಂದರ್ಥ. ಈಶ್ವರನಾಗಿ ಶತ್ರುಗಳನ್ನು ಸೀಳುವವನು, ಅಥವಾ ಓಡಿಸುವವನು, ಅಥವಾ ಯಾಗಮಾಡುವವರಲ್ಲಿ ಅತಿಶಯ ಆದರವನ್ನು ಮಾಡುವವನು. ಇಂದದಾದರ ಎಂಬುದು ಇಂದ್ರ ಎಂದಾಗಿದೆ. ಈ ರೀತಿಯಾಗಿ ಇಂದ್ರಶಬ್ದದ ವ್ಯುತ್ಪತ್ತಿಯನ್ನು ನಾನಾ ರೀತಿಯಾಗಿ ಆಯಾಯ ಋಷಿಗಳು ವಿವರಿಸಿರುತ್ತಾರೆ. ಮುಂದೆ ಹೇಳುವ ಮಂತ್ರವು ಇಂದ್ರಸ್ತುತಿಯನ್ನು ಅಂದರೆ ರಸಾನುಪ್ರಧಾನ, ವೃತ್ರವಧ ಮುಂತಾದ ಮಹಿಮೆಯನ್ನು ತಿಳಿಸುತ್ತದೆ. ॥

## ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯದೃಶೀಕಂ ॥ ೧೦ ॥

ಸ್ತುತಿವೇದ್ಯನಾದ ಎಲೈ ಅಗ್ನಿಯೇ, ಯಜ್ಞಕರ್ತನಾದ ಪ್ರತಿಯೊಬ್ಬ ಮಾನವನ ಯಜ್ಞಸಿದ್ಧಿಗಾಗಿಯೂ ನೀನು ದೇವಯಜ್ಞಪ್ರದೇಶವನ್ನು ಪ್ರವೇಶಿಸು. ಆ ಯಜಮಾನನೂ ಸಹ ಭಯಂಕರವಾದ ರೂಪವುಳ್ಳ ನಿನಗೆ ಸಂತೋಷದಾಯಕವಾದ ಸ್ತೋತ್ರವನ್ನು ಅರ್ಪಿಸುತ್ತಾನೆ.

ಅಪ್ತೋರ್ಯಾಮವೆಂಬ ಸೋಮಯಾಗದಲ್ಲಿ ಹೋತೃವು ಅತಿರಿಕ್ತೋಕ್ಥವೆಂಬ ಶಸ್ತ್ರಮಂತ್ರಪಠನಕಾಲದಲ್ಲಿ ಜರಾಬೋಧ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಯಸ್ಯ ಪಶವೋನೋಪಧಾರಾಧೇರನ್ ಎಂಬ ಖಂಡದಲ್ಲ ಅತಿರಿಕ್ತೋಕ್ತಾನಿ ಜರಾಬೋಧ ತದ್ವಿವಿಡ್ಢಿ ಎಂಬ ಸೂತ್ರದಿಂದ ವಿವೃತವಾಗಿರುವುದು. (ಅ. ೯–೦೧)

**ಜರಾಬೋಧ**— ಜರಯಾ ಸ್ತುತ್ಯಾ ಬೋಧಮಾನ। ಸ್ತೋತ್ರದಿಂದ ಎಚ್ಚರಗೊಳಿಸಲ್ಪಡುವವನು. ಯಜ್ಞ ಭೂಮಿಯಲ್ಲಿ ಯಜ್ಞನಿರ್ವಹಣೆಗಾಗಿ ಅಗ್ನಿಯನ್ನು ಪ್ರಾತಃಕಾಲದಲ್ಲಿ ಎಬ್ಬಿಸುವುದಕ್ಕಾಗಿ ಸ್ತೋತ್ರವನ್ನು ಪಠಿಸುವರು. ಆ ಕಾಲದಲ್ಲಿ ಜರಾಬೋಧ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅಗ್ನಿಪ್ರಬೋಧನಮಾಡುವುದಕ್ಕಾಗಿ ಪಠಿಸಬೇಕು.

**ವಿವಿಡ್ಢಿ**— ಪ್ರವಿಶ। ಪ್ರವೇಶಮಾಡು,

**ವಿಶೇವಿಶೇ**— ಪ್ರತಿ ಪ್ರಜೆಗಾಗಿ ಎಂದರೆ ಪ್ರಜಾರೂಪದಿಂದಿರುವ ಅಥವಾ ಪ್ರಜೆಗಳಾದ ಪ್ರತಿ ಯಜಮಾನನಿಗಾಗಿಯೂ,

**ಯಜ್ಞಿಯಾಯ**— ಯಜ್ಞಾನುಷ್ಠಾನಸಿದ್ಧಿಗಾಗಿ, ಯಜ್ಞವು ಸಾಂಗವಾಗಿ ನೆರವೇರುವುದಕ್ಕಾಗಿ.

**ರುದ್ರಾಯ**—ಕ್ರೂರಯಾಗ್ನಯೇ। ಕ್ರೂರಸ್ವಭಾವವುಳ್ಳ ಅಗ್ನಿಗೆ, ಅಗ್ನಿಯು ಎಲ್ಲವನ್ನೂ ದಹಿಸುವ ಸ್ವಭಾವವುಳ್ಳವನಾದುದರಿಂದ ರುದ್ರಾಯ ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ರೇಭಃ ಜರಿತಾ ಎಂದು ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ ರುದ್ರಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ರುದ್ರಾಯ ಎಂದರೆ ಸ್ತೋತ್ರಮಾಡುವವನಾಗಿ ಎಂಬರ್ಥವನ್ನು ಹೇಳಬಹುದು. ಇಲ್ಲಿ ಸ್ತೋತ್ರಪ್ರಿಯಾನ ಅಥವಾ ಸ್ತೋತ್ರಗಳಿಂದ ಸ್ತುತಿಸಲ್ಪಡುವ ಅಗ್ನಿಗಾಗಿ ಎಂಬರ್ಥವನ್ನು ಹೇಳಬಹುದು.

**ದೃಶೀಕಂ**—ದರ್ಶನೀಯಂ, ಸಮೀಚೀನಂ। ಸುಂದರವಾದ, ಉತ್ತಮವಾದ, ಸ್ತೋತ್ರವನ್ನು ಯಜಮಾನಃ ಕರೋತಿ— ಯಜಮಾನನು ಮಾಡುವನು ಎಂಬ ಶಬ್ದಗಳನ್ನೂ ಅಧ್ಯಾಹಾರ ದೂಡಿಕೊಳ್ಳಬೇಕು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡ ಸಮಾಪ್ತವಾಗಿದೆ.

## ಅಥ ನವಮಖಂಡಃ

### ಒಂಬತ್ತನೆಯ ಖಂಡವು.

**ಅದರ್ದರುತ್ಸಮಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾ ಅರಮ್ಣಾಃ। ಹುಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ದಾನವಂ ಹನ್। (ಋ. ಸಂ. ೫-೩೨-೧)॥ ಅದೃಣಃ ಫಲುತ್ಸಮುತ್ಸ ಉತ್ಸದನಾದ್ವೋತ್ಸ್ಯಂದನಾದ್ವೋ-ನತ್ತೇರ್ವಾ ವ್ಯಸೃಜೋಽಸ್ಯ ಖಾನಿ ತ್ವಮರ್ಣವಾನರ್ಣಸ್ವತ ಏತಾನ್ಮಾಧ್ಯಮಿಕಾನ್ಸಂ-ಸ್ತ್ಯಾಯಾನ್ಬಾಬಧ್ಯಮಾನಾನರಮ್ಣಾ ರಮ್ಣಾತಿಃ ಸಂಯಮನಕರ್ಮಾ ವಿಸರ್ಜನಕರ್ಮಾ**

ವಾ ಮಹಾಂತಮಿಂದ್ರ ಪರ್ವತಂ ಮೇಘಂ ಯದ್ವ್ಯವೃಣೋರ್ವ್ಯಸೃಜೋಽಸ್ಯ ಧಾರಾ ಅವಹನ್ನೇನಂ ದಾನವಂ ದಾನಕರ್ಮಾಣಂ ತಸ್ಯೈಷಾಪರಾ ಭವತಿ ॥ ೯ ॥

ಅದರ್ದರುತ್ಸಮಸೃಜೋ ವಿಖಾನಿ ತ್ವಮರ್ಣವಾನ್ಬದ್ಬಧಾನಾಂ ಅರಮ್ಣಾಃ ॥
ಮಹಾಂತಮಿಂದ್ರ ಪರ್ವತಂವಿಯದ್ವಃ ಸೃಜೋವಿಧಾರಾ ಅವ ದಾನವಂ-
ಹನ್ ॥

(ಋ.ಸಂ. ೪-೧೯೩೭) (ಸಾ.ಸಂ.ಉ.ಆ. ೪-೧-೩-೩)

ಇಂದ್ರಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಇಂದ್ರನೇ ನೀನು ಸುರಿಸುವ ಮೇಘವನ್ನು ಸೀಳಿರುವಿ. ಸೀಳಿ ಅದರಲ್ಲಿ ಬಿಲಗಳನ್ನು ಮಾಡಿರುವಿ. ಹೀಗೆ ನೀರುಳ್ಳ ಮೇಘಗಳನ್ನು ಸಕಾಲದಲ್ಲಿ ನೀರುಸುರಿಯುವಂತೆ ಮಾಡಿರುವಿ. ಮೇಘಗಳನ್ನು ಅಧಿಕಗೊಳಿಸಿ ಅವುಗಳಿಂದ ಜಲಧಾರೆಗಳನ್ನು ಸೃಷ್ಟಿಸಿರುವಿ. ವೃತಾಸುರನನ್ನು ಅಥವಾ ಮೇಘವನ್ನು ಹೊಡೆದಿರುವಿ.

ಅದೃಣಾ ಉತ್ಸಮುತ್ಸ ಉತ್ಸರಣಾದ್ವೋತ್ಸದನಾದ್ವೋತ್ಸ್ಯಂ ದನಾದ್ವೋನ ತ್ತೇರ್ವಾ, ವ್ಯಸೃಜೋಽಸ್ಯ ಖಾನಿ, ತ್ವಮರ್ಣವಾನರ್ಣಸ್ವತ ಏತಾನ್ಮಾಧ್ಯಮಿ ಕಾನ್ ಸಂಸ್ತ್ಯಾಯಾನ್ ಬಾಬಧ್ಯಮಾನಾನರಮ್ಣಾಃ । ರಮ್ಣಾತಿಃ ಸಂಯು ಮನಕರ್ಮಾ। ವಿಸರ್ಜನಕರ್ಮಾ ವಾ । ಮಹಾಂತಮಿಂದ್ರ ಪರ್ವತಂ ಮೇಘಂಯದ್ವ್ಯವೃಣೋರ್ವ್ಯಸೃಜೋಽಸ್ಯ ಧಾರಾಃ । ಅವಹನ್ನೇನಂದಾನ-ವಂ ದಾನಕರ್ಮಾಣಂ, ತಸ್ಯೈಷಾಽಪರಾ ಭವತಿ ॥ ೯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅದೃಣಾಃ ಎಂಬಲ್ಲಿ ಭೃಶಾರ್ಥ ಅಂದರೆ ಅತಿಶಯಾರ್ಥ ಅಂತರ್ಭೂತವಾಗಿದೆ. ಅತಿ ಶಯವಾಗಿ ಸೀಳಿರುವಿಯೆಂದರ್ಥ. ಉತ್ಸಂ ಎಂಬುದು ಪ್ರತೀಕಧಾರಣೆ. ಉತ್ಸಶಬ್ದದ ವ್ಯುತ್ಪತ್ತಿಯನ್ನು ನಾನಾರೀತಿಯಾಗಿ ತೋರಿಸುತ್ತಾರೆ. ಉತ್‌ಉಪಸರ್ಗಪೂರ್ವದಲ್ಲಿರುವಾಗ ಸೃ-ಗತೌ, ಅಥವಾ ಸ್ಯಂದೂ-ಪ್ರಸ್ರವಣೇ, ಧಾತುವಿಗೆ ಡಪ್ರತ್ಯಯ. ಟಿಲೋಪ. ಸ್ಯಂದ್‌ಧಾತುವಿನ ಯಕಾರಕ್ಕೆಲೋಪ. ಇದರಿಂದ ನೀರು ಹರಿದು ಹೋಗುತ್ತದೆ. ಅಥವಾ ಮೇಲಕ್ಕೆ ಹೋಗಿ ಅವಸಾನ ಹೊಂದುತ್ತದೆ. ಮೇಘವು ಆಕಾಶದಲ್ಲಿ ಪರಿಚ್ಛಿನ್ನಪರಿಮಾಣವಷ್ಟು ಎತ್ತರದಲ್ಲಿರುತ್ತದೆ. ಅದಕ್ಕಿಂತಲೂ ಮೇಲಕ್ಕಾಗಲೀ ಕೆಳಗಾಗಲೀ ಸಂಚರಿಸುವುದಿಲ್ಲ. ಆದುದರಿಂದಲೇ ಕಾಳಿದಾಸಾದಿ ಕವಿಗಳು ಹಿಮಾಲಯದ ಮಧ್ಯದವರೆಗೇ ಮೇಘ ಸಂಚಾರವೆಂದು ವರ್ಣಿಸಿರುತ್ತಾರೆ. ಅಥವಾ ಉಂದೀ ಕ್ಲೇದನೇ ಎಂಬ ಧಾತುವಿನಿಂದ ಉತ್ಸ ಎಂದು ರೂಪವಾಗಿದೆ. ಬಹುಲಗ್ರಹಣದಿಂದ ಸಪ್ರತ್ಯಯ. ಒದ್ದೆಮಾಡುವ ಸ್ವಭಾವವುಳ್ಳದ್ದು ಮೇಘ. ಅರಮ್ಣಾಃ. ರಮು-ಕ್ರೀಡಾಯಾಂ. ಧಾತು. ಲೋಕದಲ್ಲಿ ಕ್ರೀಡಾರ್ಥಪ್ರಸಿದ್ಧವಾಗಿದ್ದರೂ ಇಲ್ಲಿ ಸಂಯಮನ ಅಂದರೆ ನಿಯಂತ್ರಣಾರ್ಥ ತೋರುತ್ತದೆ. ಇದು ವಧಾರ್ಥದಲ್ಲಿ (ನಿಘ. ೨-೨೦-೩೪) ಪಠಿತವಾದರೂ ವಧವು ನಿಯಂತ್ರಣಪೂರ್ವಕವಾಗುವುದರಿಂದ ಸಾಮ್ಯದಿಂದ ನಿಯಂತ್ರಣಾರ್ಥಹೇಳಿದೆ. ಮಂತ್ರದಲ್ಲಿ ಮೇಘಸಂಬಂಧದಿಂದ ವಿಸರ್ಜನಕ್ರಿಯಾ ಅರ್ಥವಾಗುತ್ತದೆ. ಪರ್ವತ ಮೇಘ ಪರ್ಯಾಯದಲ್ಲಿ (ನಿಘ. ೧-೧೦-೯)

ಹೇಳಿದೆ. ಬಲಕೃತಿ ಇಂದ್ರನಕರ್ಮವೆಂದುದರಿಂದ ಅದನ್ನು ಪ್ರತಿಪಾದನೆಮಾಡಲು ಮುಂದೆ ಹೇಳುವ ಇನ್ನೊಂದು ಮಂತ್ರವು ಉದಾಹೃತವಾಗಿದೆ

ಅದರ್ದರುತ್ಸಮಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾ ಅರಮ್ಣಾಃ |
ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವದಾ
ನವಂ ಹನ್ ॥ ೧ ॥

ಎಲೈ ಇಂದ್ರನೇ, ನೀನು ಜಲಸೇಚಕವಾದ ಮೇಘವನ್ನು ಸೀಳಿರುವೆ. ಮೇಘಾಂತರ್ಗತವಾದ ಉದಕಗಳಿಗೆ ದ್ವಾರಗಳನ್ನು ಬಿಡಿಸಿರುವೆ. ಪ್ರತಿಬಂಧಿಸಲ್ಪಟ್ಟಿರುವ ಉದಕಗಳನ್ನು ಪ್ರವಹಿಸುವಂತೆ ಮಾಡಿರುವೆ. ನೀನು ಯಾವಾಗ ಪ್ರಭೂತವಾದ ಮೇಘವನ್ನು ಸೀಳಿದೆಯೋ, ಉದಕ ಧಾರೆಗಳನ್ನು ಪ್ರವಹಿಸುವಂತೆ ಬಿಡಿಸಿದೆಯೋ ಆಗ ದನುಪುತ್ರನಾದ ವೃತ್ರಾಸುರನನ್ನು ಕೊಂದಿರುವೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ಒಂಬತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದಶಮ ಖಂಡಃ

### ಹತ್ತನೆಯ ಖಂಡವು.

ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ | ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥ (ಋ. ಸಂ. ೨-೧೨-೧) ॥ ಯೋ ಜಾಯಮಾನ ಏವ ಪ್ರಥಮೋ ಮನಸ್ವೀ ದೇವೋ ದೇವಾನ್ ಕ್ರತುನಾ ಕರ್ಮಣಾ ಪರ್ಯಭವತ್ಪರ್ಯಗೃಹ್ಣಾತ್ಪರ್ಯರಕ್ಷದತ್ಯಕ್ರಾಮದಿತಿ ವಾ ಯಸ್ಯ ಬಲಾತ್ ದ್ಯಾವಾಪೃಥಿವ್ಯಾವಪ್ಯಬಿಭೀತಾಂ ನೃಮ್ಣಸ್ಯ ಮಹ್ನಾ ಬಲಸ್ಯ ಮಹತ್ತ್ವೇನ ಸ ಜನಾಸ ಇಂದ್ರ ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ ಪರ್ಜನ್ಯಸ್ತೃಷೇ ರಾದ್ಯಂತವಿಪರೀತಸ್ಯ ತರ್ಪಯಿತಾ ಜನ್ಯಃ ಪರೋ ಜೇತಾ ವಾ ಜನಯಿತಾ ವಾ ಪ್ರಾರ್ಜಯಿತಾ ವಾ ರಸಾನಾಂ ತಸ್ಯೈಷಾ ಭವತಿ ॥ ೧೦ ॥

ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯ-ಭೂಷತ್ ॥ ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸಜನಾಸ ಇಂದ್ರಃ ॥

(ಋ. ಸಂ. ೨-೬-೭)

ಇಂದ್ರನ ಬಲಕೃತಿಯನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ರಾಕ್ಷಸರೇ, ಯಾವನು ಹುಟ್ಟಿದೊಡನೆಯೇ ದೇವತೆಗಳಲ್ಲಿ ಪ್ರಥಮನಾಗಿ ಮೇಧಾವಿಯೂ ಆಗಿ ಪ್ರಕಾಶಿಸುತ್ತಾ, ವೃತ್ರವಧಾದಿಲಕ್ಷಣಕರ್ಮದಿಂದ ಇತರ ಯಾಗದೇವತೆಗಳನ್ನು ಸ್ವಾಧೀನವಾಗಿ ಮಾಡಿಕೊಂಡನೋ, ಯಾವನ ಶಾರೀರಬಲದಿಂದ ದ್ಯಾವಾಪೃಥಿವಿಗಳು ನಡುಗಿದವೋ, ಅಂತಹ ಬಲದಿಂದ ಕೂಡಿರುವವನೇ ಇಂದ್ರನು.

ಯೋ ಜಾಯಮಾನ ಏವ ಪ್ರಥಮೋ ಮನಸ್ವೀ ದೇವೋ ದೇವಾನ ಕ್ರತುನಾ ಕರ್ಮಣಾ ಪರ್ಯಭವತ್ ಪರ್ಯಗೃಹ್ಣಾತ್ ಪರ್ಯರಕ್ಷತ್ । ಅತ್ಯಕ್ರಾ-ಮದಿತಿ ವಾ । ಯಸ್ಯ ಬಲಾದ್ಯಾವಾಪೃಥಿವ್ಯಾವಪ್ಯಬಿಭೀತಾಂ ನೃಮ್ಣಸ್ಯ ಮಹ್ನಾ ಬಲಸ್ಯ ಮಹತ್ತ್ವೇನ । ಸ ಜನಾಸ ಇಂದ್ರ ಇತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇಂದ್ರನು ತನ್ನ ವೃತ್ರವಧಾದಿಕರ್ಮಗಳಿಂದ ಸಕಲ ದೇವತೆಗಳನ್ನೂ ಸ್ವಾಧೀನಪಡಿಸಿಕೊಂಡು ಸ್ವಾಮಿಯಾದನು. ಅಥವಾ ರಕ್ಷಿಸಿದನು. ಅಥವಾ ಬಲಾತಿಶಯದಿಂದ ಅತಿಕ್ರಮಿಸಿದನು. ಕ್ರತು ಕರ್ಮಪರ್ಯಾಯದಲ್ಲಿ (ನಿಘ. ೨-೧-೧೧) ಹೇಳಿದೆ. ನೃಮ್ಣ ಬಲನಾಮದಲ್ಲಿ (ನಿಘ, ೨-೯) ಹೇಳಿದೆ.

ಋಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ ॥

ಇಂದ್ರನ ಮೈತ್ರಿಯನ್ನು ಸಂಪಾದಿಸಿ ಅವನ ಮಿತ್ರನಾಗಿರುವ ಗೃತ್ಸಮದನೆಂಬ ಮಹರ್ಷಿಯ ಸ್ತುತಿಯಾಗುತ್ತದೆ. ಇದಕ್ಕೆ ಇತಿಹಾಸ ಸಂಬಂಧವೂ ಪ್ರಸಿದ್ಧವಾಗಿದೆ. 'ಮಂತ್ರಾಣಾಮೈತಿಹಾಸಿಕೋಪ್ಯರ್ಥ ಉಪೇಕ್ಷಿತವ್ಯೋಽಸಾವಪಿ ತೇಷಾಂ ವಿಷಯಃ' ಎಂದು ಮುಂದೆ ವಿವರಿಸುತ್ತಾರೆ. ದೇವತಾ ಸಾಕ್ಷಾತ್ಕಾರ ಪಡೆಯಲು ನೈರಂತರ್ಯಸಮಾಧಿಯಿಂದ ತಿಳಿದು, ಭಾವಿತಾಂತಃಕರಣವುಳ್ಳ ಮಹರ್ಷಿಯ ಸಂತೋಷದ ಮಾತನ್ನು ಈ ಮಂತ್ರ ತಿಳಿಸುತ್ತದೆ. ಮಂತ್ರಗಳಿಗೂ ಇತಿಹಾಸಸಂಬಂಧವಿರುತ್ತದೆ. ಗೃತ್ಸಮದನೆಂಬ ಮಹರ್ಷಿಯ ಯಜ್ಞದಲ್ಲಿ ಏಕಾಕಿಯಾಗಿ ಬಂದಿರುವ ಇಂದ್ರನನ್ನು ನೋಡಿ ಅಸುರರು ಮುತ್ತಿಗೆ ಹಾಕಿದರು. ಆಗ ಇಂದ್ರನು ಗೃತ್ಸಮದ ರೂಪದಿಂದ ಯಜ್ಞಶಾಲೆಯಿಂದ ಹೊರಗೆ ಹೋಗಿ ಸ್ವರ್ಗಕ್ಕೆ ಹೋದನು. ಇಂದ್ರನು ವಿಲಂಬ ಮಾಡಿದನೆಂದು ತಿಳಿದು ಅಸುರರು ಒಳಗೆ ನುಗ್ಗಿದರು. ಅಲ್ಲಿ ಗೃತ್ಸಮದನನ್ನು ನೋಡಿ ಅವನು ಆಗಲೇ ಹೊರಗೆ ಹೋಗಿರುವನು. ಇವನು ಇಂದ್ರನೇ ಆಗಿರುತ್ತಾನೆ. ನಮಗೆ ಹೆದರಿ ಈ ರೂಪವನ್ನು ಧರಿಸಿರುತ್ತಾನೆಂದು ಹಿಡಿಯಲು ಹೋದರು. ಆಗ ಗೃತ್ಸಮದ ಋಷಿಯು ನಾನು ಇಂದ್ರನಲ್ಲ, ಇಂದ್ರನ ಸ್ವರೂಪ ಹೀಗೆದೆಯೆಂದು ವರ್ಣಿಸಿದನು. ಅದನ್ನೇ ಈ ಮಂತ್ರ ವಿವರಿಸುತ್ತದೆ.

## ಪರ್ಜನ್ಯಸ್ತೃಪೇರಾದ್ಯಂತವಿಪರೀತಸ್ಯ । ತರ್ಪಯಿತಾಜನ್ಯಃ ॥

ಕ್ರಮಪ್ರಾಪ್ತವಾದ ಪರ್ಜನ್ಯಪದದ ನಿರ್ವಚನವನ್ನು ತಿಳಿಸುತ್ತಾರೆ. ಇದು ತೃಪ—ತೃಪ್ತೌ, ಧಾತುವಿನಿಂದ ನಿಷ್ಪನ್ನವಾಗಿದೆ ತರ್ಪಯತಿ ಇತಿ ತೃಪ್, ಣಿಜಂತಾರ್ಥ ಅಂತರ್ಭೂತವಾಗಿದೆ. ಕ್ವಿಪ್ ಪ್ರತ್ಯಯ ಆದ್ಯಂತ ವರ್ಣವ್ಯತ್ಯಾಸದಿಂದ ಪ್ರಕೃತ ರೂಪಸಿದ್ಧಿಯಾಗುತ್ತದೆ. ತೃಪ್ತಿಪಡಿಸುವವನೆಂದರ್ಥ. ಅವನೇ ಜನ್ಯನು ಅಂದರೆ ಜನರಿಗೆ ಹಿತನಾದವನು. ಹಿತಾರ್ಥದಲ್ಲಿ ಜನಶಬ್ದದಮೇಲೆ ಯತ್. ಜನ್ಯ· ತೃಪ್ ಚಾಸೌ ಜನ್ಯಶ್ಚ. ತೃಪ್ ಎಂಬುದಕ್ಕೆ ಪರ್ ಆದೇಶ. ಸಕಲ ದೇಶಗಳಿಗೆ ಮಳೆಯಿಂದ ತೃಪ್ತಿಪಡಿಸುವವನೆಂದರ್ಥ.

## ಪರೋ ಜೇತಾ ವಾ, ಜನಯಿತಾ ವಾ, ಪ್ರಾರ್ಜಯಿತಾ ವಾ ರಸಾನಾಮ್ । ತಸ್ಯೈಷಾ ಭವತಿ ॥ ೧೦ ॥

ಅಥವಾ ಪ್ರಕೃಷ್ಟವಾಗಿ ಜಯಿಸುವವನು ಪರ ಉಪಪದವಾಗಿರುವಾಗ ಜಿಧಾತುವಿಗೆ ಯತ್ ಪ್ರತ್ಯಯ. ಅನಜಾದೇಶ ಪರ ಪದದ ಅಂತ್ಯಕ್ಕೆ ಲೋಪ. ಪರ್ಜನ್ಯ ಅಥವಾ ಅತಿಶಯವಾಗಿ ಸಂತೋಷವನ್ನುಂಟುಮಾಡುವವನು ಪರ್ಜನ್ಯ. ಆಗ ಪರ ಉಪಪದವಾಗಿರುವಾಗ ಜನೀ— ಪ್ರಾದುರ್ಭಾವೇ. ಧಾತುವಿಗೆ ಹಿಂದಿನಂತೆ ಯತ್. ಣಿಚ್‌ಗೆ ಲೋಪ. ಈ ಕಾರ್ಯಗಳೆಲ್ಲವೂ ನಿಪಾತದಿಂದ ಸಿದ್ಧವಾಗುತ್ತವೆ. ಅಥವಾ ನೀರನ್ನು ಅತಿಶಯವಾಗಿ ಸಂಗ್ರಹಿಸುವವನು ಪರ್ಜನ್ಯನು. ಆಗ ಪ್ರ ಉಪಪದ ವಾಗಿರುವಾಗ ಅರ್ಜ ಧಾತುವಿಗೆ ಯತ್ ಬಂದು ಪೂರ್ವಕ್ತವಾದ ರೂಪಸಿದ್ಧಿಯಾಗುತ್ತದೆ. ಪರ ಅಥವಾ ಪ್ರ ಎಂಬುದು ಪೂರ್ವಪದವೆಂದೂ, ಜಿ, ಜನ್ ಅಥವಾ ಅರ್ಜಧಾತು ಉತ್ತರಪದವೆಂದು ತಿಳಿಯಬೇಕು. ಮುಂದೆ ಉದಾಹರಿಸುವ ಮಂತ್ರವು ಪರ್ಜನ್ಯಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ಹತ್ತನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕಾದಶಖಂಡಃ

## ಹನ್ನೊಂದನೆಯ ಖಂಡವು

ವಿ ವೃಕ್ಷಾನ್ ಹಂತ್ಯುತ ಹಂತಿ ರಕ್ಷಸೋ ವಿಶ್ವಂ ಬಿಭಾಯ ಭುವನಂ ಮಹಾವಧಾತ್ । ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯ ಸ್ತನಯನ್ಹಂತಿ ದುಷ್ಕೃತಃ । (ಋ. ಸಂ. ೫-೮೩-೨) ॥ ವಹಂತಿ ವೃಕ್ಷಾನ್ ವಿಹಂತಿ ಚ ರಕ್ಷಾಂಸಿ ಸರ್ವಾಣಿ ಚಾಸ್ಮಾದ್ಭೂತಾನಿ ಬಿಭ್ಯತಿ ಮಹಾವಧಾನ್ಮಹಾನ್ ಹ್ಯಸ್ಯ ವಧೋಽಪ್ಯನ- ಪರಾಧೋ ಭೀತಃ ಪಲಾಯತೇ ವರ್ಷಕರ್ಮವತೋ ಯತ್ಪರ್ಜನ್ಯಃ ಸ್ತನಯನ್

ಹಂತಿ ದುಷ್ಕೃತಃ ಪಾಪಕೃತೋ ಬೃಹಸ್ಪತಿರ್ಬೃಹತಃ ಪಾತಾ ವಾ ಪಾಲಯಿತಾ ವಾ ತಸ್ಯೈಷಾ ಭವತಿ ॥ ೧೧ ॥

ವಿ ವೃಕ್ಷಾನ್ಹನ್ತ್ಯುತ ಹಂತಿ ರಕ್ಷಸೋ ವಿಶ್ವಂ ವಿಭಾಯ ಭುವನಂ ಮಹಾವಧಾತ್ ॥ ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯಃ ಸ್ತನಯನ್ಹಂತಿ ದುಷ್ಕೃತಃ ॥

(ಋ. ಸಂ. ೪-೪-೨೭)

ಪರ್ಜನ್ಯಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಮೇಘಾಧಿಷ್ಠಾತೃದೇವತೆಯಾದ ಮಧ್ಯಮ ಸ್ಥಾನವಾದ ವಾಯುವು ಸಿಡಿಲಿನಿಂದ ಮರಗಳನ್ನು ನಾಶಮಾಡುತ್ತಾನೆ. ಮತ್ತು ರಾಕ್ಷಸರನ್ನೂ ಸಂಹರಿಸುತ್ತಾನೆ. ಇವನ ವಿನಾಶಕೃತ್ಯವು ಪ್ರಬಲವಾಗಿದೆಯೆಂದು ಪ್ರಪಂಚವೇ ಹೆದರುತ್ತದೆ. ಅಪರಾಧವಿಲ್ಲದಿದ್ದರೂ ಮಳೆಸುರಿಸುವ ಇವನ ಮಹತ್ಕರ್ಮವನ್ನು ನೋಡಿ ಹೆದರಿ ಓಡಿಹೋಗುತ್ತಾರೆ. ಇವನು ಸಿಡಿಲುಗರ್ಜನೆ ಮಾಡುತ್ತಾ ನಮ್ಮನ್ನು ಕೊಲ್ಲುತ್ತಾನೆಂದು ಭೀತರಾಗುತ್ತಾರೆ. ಇವನು ಪಾಪಿಷ್ಠರನ್ನು ನಾಶಗೊಳಿಸುತ್ತಾ ನಮಗೆ ವೃಷ್ಟಿಯನ್ನನುಗ್ರಹಿಸಲಿ.

ವಿಹಂತಿ ವೃಕ್ಷಾನ್ ವಿಹಂತಿ ಚ ರಕ್ಷಾಂಸಿ, ಸರ್ವಾಣಿ ಚಾಸ್ಮಾದ್ಭೂತಜಾತಾನಿ ಬಿಭ್ಯತಿ ಮಹಾವಧಾತ್ । ಮಹಾನ್ ಹಿ ಅಸ್ಯವಧಃ । ಭೀತ ಪಲಾಯತೇ ವರ್ಷಕರ್ಮವತೋ ಯತ್ಪರ್ಜನ್ಯಃ ಸ್ತನಯನ್ ಹಂತಿ ದುಷ್ಕೃತಃ ಪಾಪಕೃತಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಈಷ-ಗತಿಹಿಂಸಾದರ್ಶನೇಷು. ಧಾತು. ಛಾಂದಸವಾದುದರಿಂದ ಪದವ್ಯತ್ಯಯ ಬಂದಿದೆ. ವಿಹಂತಿ= ನಾನಾ ರೀತಿಯಿಂದ ನಾಶಮಾಡುತ್ತಾನೆ.

ಬೃಹಸ್ಪತಿ ರ್ಬೃಹತಃ ಪಾತಾ ವಾ ಪಾಲಾಯಿತಾ ವಾ, ತಸ್ಯೈಷಾ ಭವತಿ ॥ ೧೧ ॥

ಕ್ರಮಪ್ರಾಪ್ತವಾದ ಬೃಹಸ್ಪತಿ ಪದದ ನಿರ್ವಚನವನ್ನು ತೋರಿಸುತ್ತಾರೆ. ಬೃಹತಃ ಪಾತಾ. ಬೃಹತ್ ಅಂದರೆ ಮಹತ್ತಾದ ಜಗತ್ತು, ಅಥವಾ ಅಧಿಕ ಜಲವನ್ನು ರಕ್ಷಿಸುವವನು. ಪಾಲಯಿತಾ ಅಂದರೂ ರಕ್ಷಿಸುವವನು ಎಂದರ್ಥ. ಒಂದೇ ಅರ್ಥವಾದರೂ ಧಾತುಗಳೆರಡರಿಂದ ನಿಷ್ಪನ್ನವಾಗುತ್ತದೆಂದು ತೋರಿಸಲು ಹೇಳಿದೆ. ಪಾತಾ ಎಂಬುದಕ್ಕೆ ಕೆಲವರು ಪಾನಮಾಡುವವನು ಎಂದರ್ಥ ಹೇಳುತ್ತಾರೆ. ಸಮುದ್ರದಿಂದ ಅಥವಾ ಮಹಾಜಲಾಶಯಗಳಿಂದ ನೀರನ್ನು ಸೆಳೆದು ಆಮೇಲೆ ಮಳೆಯಾಗಿ ಸುರಿಸುತ್ತಾನೆಂದು ಪ್ರಸಿದ್ಧಿಯಿದೆ. ಪಾರಸ್ಕರಾದಿಗಣದಲ್ಲಿ ಪಠಿತವಾದುದರಿಂದ ಸುಡಾಗಮ, ತಕಾರಲೋಪಗಳು ಬರುತ್ತವೆ. ಪಾ ಅಥವಾ ಪಾಲಧಾತುವಿಗೆ ಡತಿಪ್ರತ್ಯಯ ಬಂದು ಪತಿಯೆಂದು ರೂಪವಾಗಿದೆ. ಮುಂದೆ ಹೇಳುವ ಮಂತ್ರವು ಬೃಹಸ್ಪತಿ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ವಿ ವೃಕ್ಷಾನ್ ಹಂತ್ಯುತ ಹಂತಿ ರಕ್ಷಸೋ ವಿಶ್ವಂ ಬಿಭಾಯ ಭುವನಂ ಮಹಾ
ವಧಾತ್ ।
ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯಃ ಸ್ತನಯನ್ ಹಂತಿ
ದುಷ್ಕೃತಃ ॥ ೨ ॥

ಪರ್ಜನ್ಯನು ವೃಕ್ಷಗಳನ್ನು ಉರುಳಿಸುತ್ತಾನೆ. ಮತ್ತು ರಾಕ್ಷಸರನ್ನು ನಾಶಪಡಿಸುತ್ತಾನೆ. ತನ್ನ ಮಹತ್ತಾದ ಆಯುಧದಿಂದ ಸಕಲ ಲೋಕವನ್ನೂ ಗದರಿಸುತ್ತಾನೆ. ಯಾವಾಗ ಪರ್ಜನ್ಯನು ಗರ್ಜನಮಾಡುತ್ತಾ ಪಾಪಿಗಳನ್ನು ಕೊಲ್ಲುವನೋ ಆಗ ವೃಷ್ಟಿಕಾರಕನಾದ ಈ ಪರ್ಜನ್ಯನಿಂದ ನಿರಪರಾಧಿಗಳೂ ಸಹ ಬೆದರಿ ಓಡುತ್ತಾರೆ.
ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ವಿಹಂತಿ ವೃಕ್ಷಾನ್ ವಿಹಂತಿ ಚ ರಕ್ಷಾಂಸಿ ಸರ್ವಾಣಿ ಚಾಸ್ಮದ್ಭೂತಾನಿ ಬಿಭ್ಯತಿ ಮಹಾವಧಾನ್ಮಹಾನ್ ಹ್ಯಸ್ಯ ವಧೋಽಪ್ಯನಪರಾಧೋ ಭೀತಃ ಪಲಾಯತೇ ವರ್ಷಕರ್ಮವತಃ ಯತ್ಪರ್ಜನ್ಯಃ ಸ್ತನಯನ್ ಹಂತಿ ದುಷ್ಕೃತಃ ಪಾಪಕೃತಃ ॥

(ನಿ. ೧೦–೧೧)

ಈ ಪರ್ಜನ್ಯದೇವನು ವೃಕ್ಷಗಳನ್ನು ಹೊಡೆದು ಉರುಳಿಸುತ್ತಾನೆ. ಮತ್ತು ರಾಕ್ಷಸರನ್ನೂ ಪ್ರಹರಿಸುತ್ತಾನೆ. ಈ ವಿಧವಾದ ವಿಧ್ವಂಸನವನ್ನು (ನಾಶಕರ್ಮವನ್ನು) ನೋಡಿ ಸಮಸ್ತ ಪ್ರಾಣಿಗಳೂ ಭಯಪಡುತ್ತವೆ. ಈ ಹನನ ಕರ್ಮವು ಬಹಳ ಭಯಂಕರವಾಗಿರುವುದು. ನಿರಪರಾಧಿಯೂ ಸಹ ಬಹಳ ಭಯದಿಂದ ಈ ಭಯಂಕರ ಕಾರ್ಯವನ್ನು ನೋಡಿ ಓಡಿಹೋಗುವನು. ಈ ಪರ್ಜನ್ಯನ ಮುಖ್ಯ ಕಾರ್ಯವು ವೃಷ್ಟಿಯನ್ನು ಸುರಿಸುವುದೇ ಆಗಿದೆ. ವೃಷ್ಟಿಯನ್ನು ಸುರಿಸುವಾಗ ಸಿಡಿಲು ಮಿಂಚುಗಳೊಡನೆ ಮಹಾ ಆರ್ಭಟದಿಂದ ಭಯಂಕರನಾಗಿ ಗೋಚರಿಸುತ್ತಾ ಪಾಪಕರ್ಮಮಾಡುವವರನ್ನು ಹೊಡೆದು ಕೊಲ್ಲುತ್ತಾನೆ ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಸಿಡಿಲು, ವೃಕ್ಷಗಳಿಗೂ, ಪ್ರಾಣಿಗಳಿಗೂ ತಗಲಿ ಅವುಗಳು ನಾಶವಾಗುವುದರಿಂದ ಈ ವಿಷಯವನ್ನೇ ಇಲ್ಲಿ ಪರ್ಜನ್ಯನು ಪಾಪಕರ್ಮಿಗಳನ್ನು ಹೊಡೆದು ಕೊಲ್ಲುತ್ತಾನೆ ಎಂಬ ವಾಕ್ಯದಿಂದ ವರ್ಣಿಸಲಾಗಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಾದಶಖಂಡಃ

## ಹನ್ನೆರಡನೆಯ ಖಂಡವು

ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಂ ನ ದೀನ ಉದನಿ ಕ್ಷಿಯಂತಮ್ ।
ನಿಷ್ಟಜ್ಜಭಾರ ಚಮಸಂ ನ ವೃಕ್ಷಾದ್ಬೃಹಸ್ಪತಿರ್ವಿರವೇಣಾ ವಿಕೃತ್ಯ ॥ (ಋ- ಸಂ.

೧೦-೬೮-೮) ॥ ಅಶನವತಾ ಮೇಘೇನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಮಿವ ದೀನ ಉದಕೇ ನಿವಸಂತಂ ನಿರ್ಜಹಾರ ತಚ್ಚಮಸಮಿವ ವೃಕ್ಷಾಚ್ಚಮಸಃ ಕಸ್ಮಾಚ್ಚಮಂತ್ಯ-ಸ್ಮಿನ್ನಿತಿ ಬೃಹಸ್ಪತಿರ್ವಿರವೇಣ ಶಬ್ದೇನ ವಿಕೃತ್ಯ ಬೃಹ್ಮಣಸ್ಪತಿಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ತಸ್ಯೈಷಾ ಭವತಿ ॥ ೧೨ ॥

ಅಶ್ನಾಽಪಿನದ್ಧಂ ಮಧು ಪರ್ಯಪಶ್ಯನ್ ಮತ್ಸ್ಯಂ ನದೀನ ಉದನಿ
ಕ್ಷಿಯಂತಮ್ । ನಿಷ್ಟಜ್ಜಭಾರ ಚಮಸಂ ನ ವೃಕ್ಷಾದ್ ಬೃಹಸ್ಪತಿ-
ರ್ವಿರವೇಣಾ ವಿ ಕೃತ್ಯ ॥

(ಋ. ಸಂ. ೮-೨-೧೮)

ಬೃಹಸ್ಪತಿ ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಬೃಹಸ್ಪತಿಯು ವ್ಯಾಪಿಸಿರುವ ಮೇಘದಿಂದ ಇತರರಿಗೆ ತೋರದಿರುವ ನೀರನ್ನು ಮೀನು ಹಿಡಿಯುವವನು ಬತ್ತಿಹೋಗುತ್ತಿರುವ ಕೊಳದ ತಳದಲ್ಲಿ ಮೀನನ್ನು ಕಂಡುಹಿಡಿಯುವಂತೆ, ಸುತ್ತಲೂ ನೋಡಿದನು. ಆಮೇಲೆ ಭಯಂಕರ ಧ್ವನಿಯಿಂದ ವಿಕಲವಾದ ಮೇಘವನ್ನು ಚೂರುಮಾಡಿ ನೀರನ್ನು ಹೊರ ತೆಗೆದನು. ಕುಶಲ ಶಿಲ್ಪಿಯು ಮರದಿಂದ ಚಮಸಪಾತ್ರವನ್ನು ರಚಿಸುವಂತೆ ಉದಕವನ್ನು ಮೇಘದಿಂದ ತೆಗೆದು ಸುರಿಸುತ್ತಾನೆ. ಈ ವೃಷ್ಟಿಕರ್ಮದಿಂದ ಇವನು ಮಧ್ಯಮ ದೇವನೆಂದು ನಿರ್ಣೀತವಾಗುತ್ತದೆ.

ಅಶನವತಾ ಮೇಘೇನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯ-
ಮಿವ ದೀನ ಉದಕೇ ನಿವಸಂತಂ ನಿರ್ಜಹಾರ । ಚಮಸಮಿವ
ವೃಕ್ಷಾತ್ । ಚಮಸಃ ಕಸ್ಮಾತ್ ? ಚಮಂತ್ಯಸ್ಮಿನ್ನಿತಿ । ಬೃಹಸ್ಪತಿ-
ರ್ವಿರವೇಣ ಶಬ್ದೇನ ವಿಕೃತ್ಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಧು ಪದಕ್ಕೆ ಮೇಘಮಧ್ಯದಲ್ಲಿರುವ ನೀರು ಎಂದು ವ್ಯಾಖ್ಯಾನಮಾಡಿರುತ್ತಾರೆ. ಗತ್ಯರ್ಥಕವಾದ ಧಮಧಾತುವಿನಿಂದ ನಿಷ್ಪನ್ನವಾಗಿದೆ. ಮೇಘದಿಂದ ಹೊರಗೆ ತೆಗೆಯಲ್ಪಡುವುದೆಂದರ್ಥ ಚಮಸಪದದ ನಿರ್ವಚನವನ್ನು ತೋರಿಸುತ್ತಾರೆ. ಚಮಂತಿ ಅಸ್ಮಿನ್. ಇದರಲ್ಲಿ ಸೋಮವನ್ನು ತಿನ್ನುತ್ತಾರೆ. ಯಜ್ಞದ ಪಾತ್ರವಿಶೇಷ. ಚಮು—ಅದನೇ. ಧಾತು. ಅತ್ಯವಿಚ—ಸೂತ್ರದಿಂದ ಅಧಿಕರಣಾರ್ಥದಲ್ಲಿ ಅಸಚ್ ಪ್ರತ್ಯಯ.

ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ । ತಸ್ಯೈಷಾ
ಭವತಿ ॥ ೧೨ ॥

ಕ್ರಮಪ್ರಾಪ್ತವಾದ ಬ್ರಹ್ಮಣಸ್ಪತಿಪದದ ನಿರ್ವಚನವನ್ನು ತೋರಿಸುತ್ತಾರೆ. ಬ್ರಹ್ಮನನ್ನು ರಕ್ಷಿಸುವವನು ಬ್ರಹ್ಮಣಸ್ಪತಿ. ಬ್ರಹ್ಮಪದ ಜನ್ಮಪರ್ಯಾಯದಲ್ಲಿ ಹೇಳಿದೆ. (ನಿಘ. ೨-೭-೨೫) ಧನಪರ್ಯಾಯದಲ್ಲಿಯೂ ಹೇಳಿದೆ. (ನಿಘ. ೨-೧೦-೨೪) ಋಗಾದಿಗಳು ಬ್ರಾಹ್ಮಣರ ಧನ, ವೇದಧನರು ಬ್ರಾಹ್ಮಣರೆಂದು ಪ್ರಸಿದ್ಧವಾಗಿದೆ. ಇವೆರಡನ್ನು ಇವನು ಮಳೆಯಮೂಲಕ

ಓಷಧಿವನಸ್ಪತಿಗಳನ್ನು ಅಭಿವೃದ್ಧಿಪಡಿಸಿ ರಕ್ಷಿಸುತ್ತಾನೆ. ಮಳೆಯಿಲ್ಲದೇ ಹೋದರೆ ಇವೆಲ್ಲಾ ನಾಶವಾಗುತ್ತವೆ, ಅನ್ನವಿಲ್ಲದೆ ಅಂದರೆ ಭೋಜನಮಾಡದೆ ಬ್ರಾಹ್ಮಣನು ವೇದಾಧ್ಯಯನಮಾಡಲು ಸಮರ್ಥನಾಗಲಾರನು. ಆದುದರಿಂದ ಅಲ್ಲಿಯೂ ಮಳೆಯು ಕಾರಣವಾಗುತ್ತದೆ. ಮುಂದೆ ಹೇಳುವ ಮಂತ್ರವು ಬ್ರಹ್ಮಣಸ್ಪತಿಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಂ ನ ದೀನ ಉದನಿ ಕ್ಷಿಯಂತಂ ।
ನಿಷ್ಟಜ್ಜಭಾರ ಚಮಸಂ ನ ವೃಕ್ಷಾದ್ಬೃಹಸ್ಪತಿರ್ವಿರವೇಣಾ ವಿಕೃತ್ಯ ॥೮॥

ಶುಷ್ಕವಾದ ನೀರುಳ್ಳ ಕೊಳದಲ್ಲಿ ವಾಸಿಸುವ ಮೀನನ್ನು ಸುಲಭವಾಗಿ ನೋಡುವಂತೆ ಸುತ್ತಲೂ ಶಿಲೆಯಿಂದ ಮುಚ್ಚಲ್ಪಟ್ಟ ಗೋವನ್ನು ಬೃಹಸ್ಪತಿಯು ನೋಡಿದನು. ವೃಕ್ಷವನ್ನು ಕತ್ತರಿಸಿ ಅದರಿಂದ ಚಮಸಪಾತ್ರೆಯನ್ನು ಸಿದ್ಧಪಡಿಸುವಂತೆ ತನ್ನ ಘರ್ಜನೆ ಶಬ್ದದಿಂದ ವಲನನ್ನು ಸೀಳಿ ಗೋರೂಪವಾದ ಮಧುವನ್ನು ಹೊರಕ್ಕೆ ಬರಮಾಡಿದನು.

ಸಾಯಣರು ಈ ಋಕ್ಕಿಗೆ ವಿವರಿಸಿರುವ ಅರ್ಥಕ್ಕೂ ವ್ಯತ್ಯಾಸವಿರುವುದು. ಯಾಸ್ಕರು ಬೃಹಸ್ಪತಿಶಬ್ದದ ನಿರ್ವಚನವನ್ನು ಹೇಳುತ್ತಾ—

ಬೃಹಸ್ಪತಿಃ । ಬೃಹಸ್ಪತಿರ್ಬೃಹತಃ ಪಾತಾ ವಾ ಪಾಲಯಿತಾ ವಾ । ತಸ್ಯೈಷಾ ಭವತಿ । ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಂ ನ ದೀನ ಉದನಿಕ್ಷಿಯಂತಂ । ನಿಷ್ಟಜ್ಜಭಾರ ಚಮಸಂ ನ ವೃಕ್ಷಾದ್ಬೃಹಸ್ಪತಿರ್ವಿರವೇಣಾ ವಿಕೃತ್ಯ ॥ ಅಶನವತಾ ಮೇಘೇನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಮಿವ ದೀನ ಉದಕೇ ನಿವಸಂತಂ ನಿರ್ಜಹಾರ ತಚ್ಚಮಸಮಿವ ವೃಕ್ಷಾತ್ । ಚಮಸಃ ಕಸ್ಮಾತ್ ಚಮಂತ್ಯಸ್ಮಿನ್ನಿತಿ । ಬೃಹಸ್ಪತಿರ್ವಿರವೇಣ ಶಬ್ದೇನ ವಿಕೃತ್ಯ ॥

(ನಿ. ೧೦-೧೨)

ಎಂದರೆ ದೊಡ್ಡದಾದ ಈ ಜಗತ್ತಿಗೆ ಅಥವಾ ಉದಕಕ್ಕೆ ಪಾಲಕನಾದುದರಿಂದ ಇವನಿಗೆ ಬೃಹಸ್ಪತಿಯೆಂಬ ಹೆಸರು. ಇವನ ಕರ್ಮವನ್ನು ವಿವರಿಸುವ ಅಶ್ನಾಪಿನದ್ಧಂ ಎಂಬ ಋಕ್ಕಿನ ವಿವರಣೆಯು ಈ ರೀತಿ ಇರುವುದು. ಸರ್ವತ್ರ ವ್ಯಾಪಿಸಿರುವ ಈ ಮೇಘದಿಂದ ( ತನ್ನ ಒಳಭಾಗದಲ್ಲಿ ಅಥವಾ ಮಧ್ಯದಲ್ಲಿ ) ಬಂಧಿತವಾಗಿರುವ ಎಂದರೆ ಯಾರಿಗೂ ಕಾಣದಂತೆ ಆಚ್ಛಾದಿತವಾಗಿರುವ ಉದಕವನ್ನು (ಮಧು) ಈ ಬೃಹಸ್ಪತಿಯು ನೋಡಿದನು. ಹೇಗೆ ನೋಡಿದನು ಎಂದರೆ ಆಳವಿಲ್ಲದ ನೀರಿನಲ್ಲಿ ಇರುವ ಮೀನನ್ನು ಯಾವರೀತಿ ಸುಲಭವಾಗಿ ನೋಡಬಹುದೋ ಅದರಂತೆ ಮೇಘಮಧ್ಯದಲ್ಲಿರುವ ಮಧುವನ್ನು ಎಂದರೆ ನೀರನ್ನು ಬೃಹಸ್ಪತಿಯು ನೋಡಿದನು ಮತ್ತು ವೃಕ್ಷದಿಂದ (ಮರದಿಂದ) ಚಮಸ ಪಾತ್ರೆಯನ್ನು ನಿರ್ಮಿಸಿ ತರುವಂತೆ ಮೇಘಮಧ್ಯದಲ್ಲಿದ್ದ ನೀರನ್ನು ಭಯಂಕರವಾದ ಶಬ್ದದಿಂದ (ಘರ್ಜನೆ ಅಥವಾ ಉಚ್ಚಧ್ವನಿಯಲ್ಲಿ ಪಠಿಸುವ ಮಂತ್ರಗಳಿಂದ) ಭೂಮಿಯಮೇಲೆ ತಂದನು ಎಂದರೆ ವೃಷ್ಟಿರೂಪದಿಂದ ಬೀಳುವಂತೆ ಮಾಡಿದನು. ಇಲ್ಲಿ ಚಮಸವೆಂದರೇನು ಎಂದರೆ ಚಮಸಶಬ್ದವು ಚಮ್ ಭಕ್ಷಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು. ಈ ಚಮಸ ಪಾತ್ರೆಯಲ್ಲಿ ಸೋಮರಸವನ್ನು ಭಕ್ಷಿಸುವುದರಿಂದ ಎಂದರೆ ಪಾನಮಾಡುವುದರಿಂದ ಇದಕ್ಕೆ ಚಮಸವೆಂಬ ಹೆಸರು ಬಂದಿದೆ ಎಂದು ನಿರ್ವಚನಾಭಿಪ್ರಾಯವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ಹನ್ನೆರಡನೆಯ ಖಂಡವು ಮುಗಿದಿದೆ.

# ಅಥ ತ್ರಯೋದಶಖಂಡಃ
## ಹದಿಮೂರನೆಯ ಖಂಡವು

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾ ತೃಣತ್ । ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಮ್ । (ಋ. ಸಂ. ೨-೨೪-೪) ॥ ಅಶನವಂತ ಮಾಸ್ಯಂದನ ವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾ ಬಲೇನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥ ೧೨ ॥

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿ ರ್ಮಧುಧಾ ಮಭಿ ಯಮೋಜಸಾತೃಣತ್ ।
ತಮೇವವಿಶ್ವೇಪಪಿರೇಸ್ವರ್ದೃಶೋ ಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥
(ಋ.ಸಂ. ೨-೭-೧)

ಬ್ರಹ್ಮಣಸ್ಪತಿಸ್ತುತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಮಧ್ಯಮದೇವನಾದ ಬೃಹ್ಮಣಸ್ಪತಿಯು ಕಲ್ಲಿನಂತೆ ದೃಢವಾದ ಮುಖವುಳ್ಳ, ನೀರನ್ನು ಸುರಿಸುವ, ಅವಾಙ್ಮುಖವಾದ ಮೇಘವನ್ನು ಬಲದಿಂದ ಸುತ್ತಲೂ ಹೊಡೆದನು. ಅದೇಮೇಘವನ್ನು ಸೂರ್ಯರಶ್ಮಿಗಳು ಸೆಖೆಗಾಲದಲ್ಲಿ ಪಾನಮಾಡಿದವು. ಮಳೆಗಾಲವಲ್ಲಿ ಅದೇರಶ್ಮಿಗಳು ಉದಕವಿಶಿಷ್ಟವಾದ ಮೇಘವನ್ನು ದ್ವಿಗುಣಿತವಾಗಿ ಅಭಿಷೇಚನಮಾಡಿದವು.

ಅಶನವಂತ ಮಾಸ್ಯಂದನವಂತ ಮವಾತೀತಂ, ಬ್ರಹ್ಮಣಸ್ಪತಿರ್ಮಧುಧಾರಮಭಿ
ಯಮೋ ಜಸಾ ಬಲೇನಾಭ್ಯತೃಣತ್ । ತಮೇವಸರ್ವೇ ಪಿಬಂತಿರಶ್ಮಯಃ ।
ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತಿ । ಉತ್ಸಮುದ್ರಿಣಮುದಕ
ವಂತಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಶ್ಮಾಸ್ಯಪದಕ್ಕೆ ಅಶನವಂತಂ. ಆಸ್ಯಂದನವಂತಂ ಎಂದು ವ್ಯಾಖ್ಯಾನ. ವ್ಯಾಪನವುಳ್ಳವನು. ಆಸೇಚನಕ್ರಿಯಾವುಳ್ಳವನು. ಅಥವಾ ಉದಕವ್ಯಾಪನಕ್ರಿಯೆಯಿಂದ ಕೂಡಿರುವವನು, ನೀರನ್ನುಸುರಿಸುವ ಸ್ವಭಾವವುಳ್ಳವನೆಂದರ್ಥ. ಸ್ವರ್ದೃಶಃ = ಸೂರ್ಯನಂತೆ ತೋರುವವರು.

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।
ತಮೇವವಿಶ್ವೇಪಪಿರೇ ಸ್ವರ್ದೃಶೋಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥ ೪ ॥

ಶಿಲೆಯಂತೆ ಕಠಿಣವಾದುದೂ, ಉದಕದಿಂದ ಪೂರ್ಣವಾದುದೂ, ಅಧೋಮುಖವಾಗಿ ತೂಗುತ್ತಿದ್ದುದೂ ಆದ ಯಾವ ಮೇಘವನ್ನು ಬ್ರಹ್ಮಣಸ್ಪತಿಯು ತನ್ನ ಬಲದಿಂದ ಬಿಡಿಸಿ ಭಾಗಮಾಡಿದನೋ ಅದೇ ಮೇಘದಲ್ಲಿ ಅಡಕವಾಗಿದ್ದ ಉದಕವನ್ನೆಲ್ಲಾ ಬೇಸಿಗೆಯಲ್ಲಿ ಸಮಸ್ತವಾದ ಸೂರ್ಯರಶ್ಮಿಗಳೂ ಪಾನಮಾಡುತ್ತವೆ. ಪುನಃ ವರ್ಷಾಕಾಲದಲ್ಲಿ ಪ್ರವಾಹ ರೂಪವಾದುದೂ, ಉದಕದಿಂದ ಪೂರ್ಣವಾದುದೂ ಆದ ವೃಷ್ಟಿಯನ್ನು ಎಲ್ಲವು ಒಟ್ಟಿಗೆ ಸೇರಿ ಪ್ರಭೂತವಾಗಿ ಸುರಿಸುತ್ತವೆ.

ಅಶ್ಮಾಸ್ಯಂ—ಅಶ್ಮವದ್ದೃಢತರಾಸ್ಯಂ । ಕಲ್ಲಿನಂತೆ ಬಹು ದೃಢವಾದ ಎಂದು ಸಾಯಣರ ವಿವರಣೆಯು. ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು—

ಅಶನವಂತಮಾಸ್ಯಂದನವಂತಮವಾತೀತಂ । (ನಿ. ೧೦೧೩) ಎಂದು ವಿವರಿಸಿದ್ದಾರೆ. ಎಂದರೆ—ವ್ಯಾಪನವಂತಮಾಸೇಚನವಂತಮಿತಿ ತಸ್ಯಾರ್ಥಃ । ಉದಕದಿಂದ ವ್ಯಾಪ್ತವಾಗಿಯೂ, ವೃಷ್ಟಿಯನ್ನು ಸುರಿಸುವುದಾಗಿಯೂ ಇರುವ ಮೇಘವೆಂದು ಅಭಿಪ್ರಾಯವು ಮತ್ತು ಈ ಋಕ್ಕಿಗೆ

ಅಶನವಂತಮಾಸ್ಯಂದನವಂತಮವತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇನಾಭ್ಯತೃಣತ್ ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯವಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥ ನಿ ೧೦-೧೩ ॥

ಎಂದು ನಿರ್ವಚನವನ್ನು ಹೇಳಿದ್ದಾರೆ—ಈ ಬ್ರಹ್ಮಣಸ್ಪತಿಯು ಉದಕದಿಂದ ಪೂರ್ಣವಾಗಿ ಶಿಲೆಯಂತೆ ಕಠಿಣವಾದ ಮೇಘವನ್ನು ತನ್ನ ಶಕ್ತಿಯಿಂದ ಪ್ರಹರಿಸಿ ಆ ಮೇಘವು ಮಧುರವಾದ ಉದಕವನ್ನು ಅಧೋಮುಖವಾಗಿ ಭೂಮಿಯಮೇಲೆ ವೃಷ್ಟಿಸುವಂತೆ ಮಾಡಿದನು. ಆ ಉದಕವನ್ನೇ ಎಂದರೆ ಭೂಮಿಯಮೇಲೆ ಇರುವ ಉದಕವನ್ನೇ ಸೂರ್ಯನ ರಶ್ಮಿಗಳು ಪಾನಮಾಡಿ (ಹೀರಿ) ಅದನ್ನು ಮತ್ತೆ ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸುವವು ಎಂದು ಮುಖ್ಯಾಭಿಪ್ರಾಯವು. ಭೂಮಿಯಮೇಲಿರುವ ಸಮುದ್ರ, ನದಿಗಳು, ಸರೋವರಗಳು, ಇತರ ಜಲಾಶಯಗಳು ಇವುಗಳಮೇಲೆ ಸೂರ್ಯನ ತೀಕ್ಷ್ಣವಾದ ಕಿರಣಗಳು ಬೀಳುವುದರಿಂದ ಆ ಜಲಾಶಯಗಳ ಉದಕಗಳಲ್ಲಿ ಕೆಲವು ಭಾಗವು ಕಿರಣಗಳ ಶಾಖದಿಂದ ಕಾದು ಆವಿಯ ರೂಪದಿಂದ ಅಂತರಿಕ್ಷದಲ್ಲಿ ಹರಡಿ ಮೇಘರೂಪದಿಂದ ಗೋಚರಿಸುವುದು. ಈ ಮೇಘವು ತನ್ನಲ್ಲಿರುವ ಉದಕವನ್ನು ಮತ್ತೆ ಭೂಮಿಯ ಮೇಲೆ ಮಳೆಗರೆಯುವುದು ಎಲ್ಲರಿಗೂ ತಿಳಿದ ವಿಷಯವು. ಆಧುನಿಕ ವಿಜ್ಞಾನವೂ ಇದನ್ನೇ ಸಮರ್ಥಿಸುವುದು. ಆದುದರಿಂದ ಇಲ್ಲಿ ಹೇಳಿರುವ ಮೇಘೋತ್ಪತ್ತಿ ಮತ್ತು ವೃಷ್ಟಿಕಾರಣಗಳು ಅನುಭವಕ್ಕೂ ವಿಜ್ಞಾನಕ್ಕೂ ಅನುಸಾರವಾಗಿಯೇ ಇದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

—. —

## ಅಥ ತ್ರಯೋದಶಖಂಡಃ

### ಹದಿಮೂರನೆಯ ಖಂಡವು

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾ ತೃಣತ್ । ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಮ್ । (ಋ. ಸಂ. ೨-೨೪-೪) ॥ ಅಶನವಂತ ಮಾಸ್ಯಂದನ ವಂತಮವಾತಿತಂ ಬ್ರಹ್ಮಣಸ್ಪತಿ-ರ್ಮಧುಧಾರಮಭಿ ಯಮೋಜಸಾ ಬಲೇನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕ-ವಂತಂ ॥ ೧೩ ॥

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿ ರ್ಮಧುಧಾ ಮಭಿ ಯಮೋಜಸಾತೃಣತ್ ।
ತಮೇವವಿಶ್ವೇಪಪಿರೇಸ್ವರ್ದೃಶೋ ಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥
(ಋ.ಸಂ. ೨-೭-೧)

ಬ್ರಹ್ಮಣಸ್ಪತಿಸ್ತುತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಮಧ್ಯಮದೇವನಾದ ಬೃಹ್ಮಣಸ್ಪತಿಯು ಕಲ್ಲಿನಂತೆ ದೃಢವಾದ ಮುಖವುಳ್ಳ, ನೀರನ್ನು ಸುರಿಸುವ, ಅವಾಙ್ಮುಖವಾದ ಮೇಘವನ್ನು ಬಲದಿಂದ ಸುತ್ತಲೂ ಹೊಡೆದನು. ಅದೇಮೇಘವನ್ನು ಸೂರ್ಯರಶ್ಮಿಗಳು ಸೆಖೆಗಾಲದಲ್ಲಿ ಪಾನಮಾಡಿದವು. ಮಳೆಗಾಲದಲ್ಲಿ ಅದೇರಶ್ಮಿಗಳು ಉದಕವಿಶಿಷ್ಟವಾದ ಮೇಘವನ್ನು ದ್ವಿಗುಣಿತವಾಗಿ ಅಭಿಷೇಚನಮಾಡಿದವು.

ಅಶನವಂತ ಮಾಸ್ಯಂದನವಂತ ಮವಾತೀತಂ, ಬ್ರಹ್ಮಣಸ್ಪತಿರ್ಮಧುಧಾರಮಭಿ
ಯಮೋ ಜಸಾ ಬಲೇನಾಭ್ಯತೃಣತ್ । ತಮೇವಸರ್ವೇ ಪಿಬಂತಿರಶ್ಮಯಃ ।
ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತಿ । ಉತ್ಸಮುದ್ರಿಣಮುದಕ
ವಂತಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಶ್ಮಾಸ್ಯಪದಕ್ಕೆ ಅಶನವಂತಂ, ಆಸ್ಯಂದನವಂತಂ ಎಂದು ವ್ಯಾಖ್ಯಾನ. ವ್ಯಾಪನವುಳ್ಳವನು. ಆಸೇಚನಕ್ರಿಯಾವುಳ್ಳವನು. ಅಥವಾ ಉದಕವ್ಯಾಪನಕ್ರಿಯೆಯಿಂದ ಕೂಡಿರುವವನು, ನೀರನ್ನುಸುರಿಸುವ ಸ್ವಭಾವವುಳ್ಳವನೆಂದರ್ಥ. ಸ್ವರ್ದೃಶಃ = ಸೂರ್ಯನಂತೆ ತೋರುವವರು.

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।
ತಮೇವವಿಶ್ವೇಪಪಿರೇ ಸ್ವರ್ದೃಶೋಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥ ೪ ॥

ಶಿಲೆಯಂತೆ ಕಠಿಣವಾದುದೂ, ಉದಕದಿಂದ ಪೂರ್ಣವಾದುದೂ, ಅಧೋಮುಖವಾಗಿ ತೂಗುತ್ತಿದ್ದುದೂ ಆದ ಯಾವ ಮೇಘವನ್ನು ಬ್ರಹ್ಮಣಸ್ಪತಿಯು ತನ್ನ ಬಲದಿಂದ ಬಿಡಿಸಿ ಭಾಗಮಾಡಿದನೋ ಅದೇ ಮೇಘದಲ್ಲಿ ಅಡಕವಾಗಿದ್ದ ಉದಕವನ್ನೆಲ್ಲಾ ಬೇಸಿಗೆಯಲ್ಲಿ ಸಮಸ್ತವಾದ ಸೂರ್ಯರಶ್ಮಿಗಳೂ ಪಾನಮಾಡುತ್ತವೆ. ಪುನಃ ವರ್ಷಾಕಾಲದಲ್ಲಿ ಪ್ರವಾಹ ರೂಪವಾದುದೂ, ಉದಕದಿಂದ ಪೂರ್ಣವಾದುದೂ ಆದ ವೃಷ್ಟಿಯನ್ನು ಎಲ್ಲವು ಒಟ್ಟಿಗೆ ಸೇರಿ ಪ್ರಭೂತವಾಗಿ ಸುರಿಸುತ್ತವೆ.

ಅಶ್ಮಾಸ್ಯಂ—ಅಶ್ಮವದ್ದೃಢತರಾಸ್ಯಂ । ಕಲ್ಲಿನಂತೆ ಬಹು ದೃಢವಾದ ಎಂದು ಸಾಯಣರ ವಿವರಣೆಯು. ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು—

ಅಶನವಂತಮಾಸ್ಯಂದನವಂತಮವಾತೀತಂ । (ನಿ. ೧೦೧೩) ಎಂದು ವಿವರಿಸಿದ್ದಾರೆ. ಎಂದರೆ—ವ್ಯಾಪನವಂತಮಾಸೇಚನನಂತಮಿತಿ ತಸ್ಯಾರ್ಥಃ । ಉದಕದಿಂದ ವ್ಯಾಪ್ತವಾಗಿಯೂ, ವೃಷ್ಟಿಯನ್ನು ಸುರಿಸುವುದಾಗಿಯೂ ಇರುವ ಮೇಘವೆಂದು ಅಭಿಪ್ರಾಯವು ಮತ್ತು ಈ ಋಕ್ಕಿಗೆ

> ಅಶನವಂತಮಾಸ್ಯಂದನವಂತಮವತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇನಾಭ್ಯತೃಣತ್ ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥ ನಿ ೧೦-೧೩ ॥

ಎಂದು ನಿರ್ವಚನವನ್ನು ಹೇಳಿದ್ದಾರೆ—ಈ ಬ್ರಹ್ಮಣಸ್ಪತಿಯು ಉದಕದಿಂದ ಪೂರ್ಣವಾಗಿ ಶಿಲೆಯಂತೆ ಕಠಿಣವಾದ ಮೇಘವನ್ನು ತನ್ನ ಶಕ್ತಿಯಿಂದ ಪ್ರಹರಿಸಿ ಆ ಮೇಘವು ಮಧುರವಾದ ಉದಕವನ್ನು ಅಧೋಮುಖವಾಗಿ ಭೂಮಿಯಮೇಲೆ ವೃಷ್ಟಿಸುವಂತೆ ಮಾಡಿದನು. ಆ ಉದಕವನ್ನೇ ಎಂದರೆ ಭೂಮಿಯಮೇಲೆ ಇರುವ ಉದಕವನ್ನೇ ಸೂರ್ಯನ ರಶ್ಮಿಗಳು ಪಾನಮಾಡಿ (ಹೀರಿ) ಅದನ್ನು ಮತ್ತೆ ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸುವವು ಎಂದು ಮುಖ್ಯಾಭಿಪ್ರಾಯವು. ಭೂಮಿಯಮೇಲಿರುವ ಸಮುದ್ರ, ನದಿಗಳು, ಸರೋವರಗಳು, ಇತರ ಜಲಾಶಯಗಳು ಇವುಗಳಮೇಲೆ ಸೂರ್ಯನ ತೀಕ್ಷ್ಣವಾದ ಕಿರಣಗಳು ಬೀಳುವುದರಿಂದ ಆ ಜಲಾಶಯಗಳ ಉದಕಗಳಲ್ಲಿ ಕೆಲವು ಭಾಗವು ಕಿರಣಗಳ ಶಾಖದಿಂದ ಕಾದು ಆವಿಯ ರೂಪದಿಂದ ಅಂತರಿಕ್ಷದಲ್ಲಿ ಹರಡಿ ಮೇಘರೂಪದಿಂದ ಗೋಚರಿಸುವುದು. ಈ ಮೇಘವು ತನ್ನಲ್ಲಿರುವ ಉದಕವನ್ನು ಮತ್ತೆ ಭೂಮಿಯ ಮೇಲೆ ಮಳೆಗರೆಯುವುದು ಎಲ್ಲರಿಗೂ ತಿಳಿದ ವಿಷಯವು. ಆಧುನಿಕ ವಿಜ್ಞಾನವೂ ಇದನ್ನೇ ಸಮರ್ಥಿಸುವುದು. ಆದುದರಿಂದ ಇಲ್ಲಿ ಹೇಳಿರುವ ಮೇಘೋತ್ಪತ್ತಿ ಮತ್ತು ವೃಷ್ಟಿಕಾರಣಗಳು ಅನುಭವಕ್ಕೂ ವಿಜ್ಞಾನಕ್ಕೂ ಅನುಸಾರವಾಗಿಯೇ ಇದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

—. —

# ಅಥ ಚತುರ್ದಶಖಂಡಃ

## ಹದಿನಾಲ್ಕನೆಯ ಖಂಡವು.

**ಕ್ಷೇತ್ರಸ್ಯಪತಿಃ ॥ ಕ್ಷೇತ್ರಂ ಕ್ಷಿಯತೇರ್ನಿವಾಸಕರ್ಮಣಃ । ತಸ್ಯ ಪಾತಾ ವಾ ಪಾಲಯಿತಾ ವಾ । ತಸ್ಯೈಷಾ ಭವತಿ ॥ ೧೪ ॥**

ಕ್ರಮಪ್ರಾಪ್ತವಾದ ಕ್ಷೇತ್ರಸ್ಯಪತಿ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಕ್ಷೇತ್ರಸ್ಯ ಎಂಬುದ ಪೂರ್ವಪದ. ಮಂತ್ರದಲ್ಲಿ ಸಮಾಸಮಾಡದೇ ಹೇಳಿರುವುದರಿಂದ ಇಲ್ಲಿಯೂ ಬೇರೆಯಾಗಿಯೇ ಹೇಳಿದೆ. ನಿವಾಸಾರ್ಥಕ ಕ್ಷಿಧಾತುವಿಗೆ ತ್ರನ್‌ಪ್ರತ್ಯಯ ಬಂದು ಕ್ಷೇತ್ರವೆಂದಾಗಿದೆ. ತುನ್‌ನಿಮಿತ್ತವಾಗಿ ಗುಣ. ಗದ್ದೆಮನೆಗಳಾಗುತ್ತವೆ. ಇದನ್ನು ಆಶ್ರಯಿಸಿಯೇ ಜನರು ಗ್ರಾಮದಲ್ಲಿ ಸಂಸಾರಿಗಳಾಗಿರುತ್ತಾರೆ. ಇದನ್ನು ಕಾಪಾಡುವವನೇ ಕ್ಷೇತ್ರಸ್ಯಪತಿ. ಮಧ್ಯಮ ಸ್ಥಾನದೇವತೆ. ಇವನು ಮಳೆ ಸುರಿಸಿದರೇ ಕ್ಷೇತ್ರಕ್ಕೆ ಕ್ಷೇತ್ರತ್ವಧರ್ಮ ಉಳಿಯುತ್ತದೆ. ಮಳೆಯಿಲ್ಲವಾದರೆ ಗದ್ದೆಮುಂತಾದುವುಗಳು ಇದ್ದರೂ ಅವು ಜನರ ನಿವಾಸಕ್ಕೆ ಕಾರಣವಾಗುವುದಿಲ್ಲ. ಮಳೆಯಿದ್ದರೇ ಕ್ಷೇತ್ರದ ಸಾಫಲ್ಯ. ಮುಂದೆ ಉದಾಹರಿಸುವ ಮಂತ್ರವು ಕ್ಷೇತ್ರಸ್ಯಪತಿಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಹದಿನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

# ಅಥ ಪಂಚದಶಖಂಡಃ

## ಹದಿನೈದನೆಯ ಖಂಡವು

**ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ । ಗಾಮಶ್ವಂಪೋಷಯಿತ್ನ್ವಾ ಸ ನೋ ಮೃಳಾತೀದೃಶೇ । (ಋ.ಸಂ. ೪-೫೭-೧) ॥ ಕ್ಷೇತ್ರಸ್ಯ ಪತಿನಾ ವಯಂ ಸುಹಿತೇನೇವ ಜಯಾಮೋ ಗಾಮಶ್ವಂ ಪುಷ್ಟಂ ಪೋಷಯಿತೃ ಚಾಹರೇತಿ । ಸ ನೋ ಮೃಳಾತೀದೃಶೇ । ಬಲೇನ ವಾ ಧನೇನ ವಾ ಮೃಳತಿರ್ದಾನಕರ್ಮಾ ತಸ್ಯೈಷಾಪರಾ ಭವತಿ ॥ ೧೫ ॥**

ಕ್ಷೇತ್ರಸ್ಯಪತಿನಾ ವಯಂ ಹಿತೇನೇವ ಜಯಾಮಸಿ ॥ ಗಾಮಶ್ವಂ ಪೋಷಯಿತ್ನ್ವಾ ಸನೋ ಮೃಳಾತೀದೃಶೇ ॥

(ಋ.ಸಂ. ೩-೮-೯)

ಕ್ಷೇತ್ರಪತಿ ಮಧ್ಯಮದೇವಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ನಾವು ಆಪ್ತ ಮಿತ್ರನಿಂದ ಎಂಬಂತೆ ಕ್ಷೇತ್ರಸ್ಯಪತಿಯೆಂಬ ಮಧ್ಯಮದೇವನ ಸಂಬಂಧಪಡೆದು ಅಂದರೆ ಅವನ ಸಹಾಯ ಹೊಂದಿ ಸರ್ವೋತ್ಕರ್ಷ ಹೊಂದುತ್ತೇವೆ. ಅನ್ನಾದಿ ಸಮೃದ್ಧಿಯಿಂದ ಸುಖಿಗಳಾಗುತ್ತೇವೆ. ಪುಷ್ಟರಾಗಿ ಗವಾಶ್ವಲಕ್ಷಣದಿಂದಕೂಡಿದ ಧನವನ್ನು ತನ್ನಿರೆಂದು ಪರಿಚಾರಕರಿಗೆ ಆಜ್ಞಾಪಿಸುತ್ತೇವೆ. ಆ ಕ್ಷೇತ್ರಸ್ಯಪತಿದೇವನು ಧನಲಾಭಭೋಗಾದಿಗಳನ್ನು ನಮಗೆ ಕೊಡಲಿ.

ಕ್ಷೇತ್ರಸ್ಯ ಪತಿನಾ ವಯಂ ಸುಹಿತೇನೇವ ಜಯಾಮೋ ಗಾಮಶ್ವಂ ಪುಷ್ಟಿ ಪೋಷಯಿತ್ನ ಚಾಹರೇತಿ । ಸನೋ ಮೃಳಾತೀದೃಶೇ । ಬಲೇನ ವಾ ಧನೇನ ವಾ । ಮೃಳತಿರ್ದಾನಕರ್ಮಾ, ಪೂಜಾಕರ್ಮಾ ವಾ । ತಸ್ಯೈಷಾಽ ಪರಾ ಭವತಿ ॥ ೧೫ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸುಷ್ಠುಹಿತ; ಸುಹಿತ;, ತೇನ. ಮಂತ್ರದಲ್ಲಿ ಸು ಉಪಸರ್ಗವಿಲ್ಲದಿದ್ದರೂ ಉಪಸೃಷ್ಟಾರ್ಥವೇ ವಿವಕ್ಷಿತವಾಗಿದೆ. ಧಾತುವಿಗೇ ಹಾಗೆ ಅರ್ಥಹೇಳಬೇಕೆಂದು ತಾತ್ಪರ್ಯ. ಆ ಎಂದು ಮಂತ್ರದಲ್ಲಿ ಹೇಳಿದೆ. ಉಪಸರ್ಗವಾದುದರಿಂದ ಯೋಗ್ಯಕ್ರಿಯಾಧ್ಯಾಹಾರ ಮಾಡಿಕೊಳ್ಳಬೇಕೆಂದು ಆಹರ ಕ್ರಿಯಾಪದವನ್ನು ಇಲ್ಲಿ ಅಧ್ಯಾಹಾರ ಮಾಡಿರುತ್ತಾರೆ. ಸಂಪತ್ತು ಅಧಿಕವಾಗಿರುವಾಗ ಸೇವಕರಿಗೆ ಆಜ್ಞಾಪಿಸುವುದು ಲೋಕ ಪ್ರಸಿದ್ಧವಾಗಿದೆ. ಪೋಷಯಿತ್ನು ಪದಕ್ಕೆ ತಂತ್ರಾವೃತ್ತಿಯಿಂದ ಪುಷ್ಟಂ, ಪೋಷಯಿತ್ನ ಎಂದು ಎರಡು ಅರ್ಥ ವಿವೃತವಾಗಿದೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಮೃಳಧಾತುವಿಗೆ ಅರ್ಥಭೇದ ಹೇಳಿದೆ. ಕ್ಷೇತ್ರಪತಿಯು ಧನದಿಂದ ಅಥವಾ ಬಲದಿಂದ ನಮ್ಮನ್ನು ಸತ್ಕರಿಸಲಿ. ಅಥವಾ ನಮಗೆ ಅನುಗ್ರಹಿಸಲಿ ಎಂದರ್ಥ. ಮುಂದೆಹೇಳುವ ಇನ್ನೊಂದು ಮಂತ್ರವು ಕ್ಷೇತ್ರ ಪತಿಯ ಸ್ತುತಿಯನ್ನು ಪ್ರತಿಪಾದಿಸುತ್ತದೆ. ಇವನು ವೃಷ್ಟ್ಯಾದಿಲಿಂಗದಿಂದ ಮಧ್ಯಮದೇವನೆಂದು ಹೇಳಿದೆ. ಆದರೆ ಈ ಮಂತ್ರದಲ್ಲಿ ಮಧ್ಯಮದೇವತ್ವಸಾಧಕವಾದ ಯಾವ ಲಿಂಗವೂ ಹೇಳಿಲ್ಲವಾದುದರಿಂದ ಆದನ್ನು ತಿಳಿಸಲು ಇನ್ನೊಂದು ಮಂತ್ರ ಹೇಳಿದೆಯೆಂದು ತಿಳಿಯಬೇಕು.

ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ । ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥ ೧ ॥

ಯಜ್ಞಕರ್ತರಾದ ನಾವು ನಮಗೆ ಮಿತ್ರಭೂತನಂತಿರುವ ಕ್ಷೇತ್ರಪತಿದೇವನ ಸಹಾಯದಿಂದ ಜಯವನ್ನು ಪಡೆಯುತ್ತೇವೆ. ಆದೇ ದೇವನು ನಮಗೆ ಪುಷ್ಟಿಕಾರಕವಾದ ಗೋವುಗಳನ್ನೂ, ಅಶ್ವಗಳನ್ನೂ ತಂದೊದಗಿಸಲಿ. ಈ ವಿಧವಾದ ದಾನಗಳಿಂದ ಅವನು ನಮ್ಮನ್ನು ಸುಖಪಡಿಸುತ್ತಾನೆ.

ಪ್ರಕೃತವಾದ ಸೂಕ್ತದಲ್ಲಿ ಕ್ಷೇತ್ರಪತಿ, ಶುನ, ಶುನಾಸೀರ, ಸೀತಾ ಎಂಬ ನಾಲ್ಕು ದೇವತಾಕವಾದ ಪ್ರಶಂಸೆ ಇರುತ್ತದೆ. ಈ ಸೂಕ್ತದಲ್ಲಿ ಒಟ್ಟು ೮ ಋಕ್ಕುಗಳಿವೆ. ಮೊದಲನೆಯ ಮೂರೂ ಕ್ಷೇತ್ರಪತಿಯನ್ನುದ್ದೇಶಿಸಿರುವವು. ನಾಲ್ಕನೆಯದು ಶುನ ದೇವತಾಕವಾದುದು. ಐದು ಮತ್ತು ಎಂಟನೆಯವು ಶುನಾಸೀರ ದೇವತಾಕವು. ಆರು ಮತ್ತು ಏಳನೆಯವು, ಸೀತಾ ದೇವತಾಕವು.

ಇವುಗಳಲ್ಲಿ ಮೊದಲನೆಯ ಮಂತ್ರವು ಕ್ಷೇತ್ರಸ್ಯ ಪತಿನಾ ವಯಂ ಎಂಬ ಆನುಪೂರ್ವಿಯೊಡನೆ ಪ್ರಾರಂಭವಾಗುತ್ತದೆ. ಈ ಮಂತ್ರಕ್ಕೆ ಭಾಷ್ಯವನ್ನು ಪ್ರಾರಂಭಿಸುವಾಗ ಸಾಯಣರು ಕ್ಷೇತ್ರಸ್ಯ ಪತಿನಾ ಎಂಬ ಶಬ್ದಗಳಿಗೆ ಅರ್ಥವೇನು ? ಕ್ಷೇತ್ರಪತಿಯು ಯಾರು ? ಎಂಬ ವಿಷಯವನ್ನು ವಿವರಿಸಲು ಪ್ರಯತ್ನಿಸಿ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದಕ್ಕಾಗದೆ "ರುದ್ರಂ ಕ್ಷೇತ್ರಪತಿಂ ಪ್ರಾಹುಃ ಕೇಚಿದಗ್ನಿಮಥಾಪರೇ । ಸ್ವತಂತ್ರ ಏವ ವಾ ಕಶ್ಚಿತ್ಕ್ಷೇತ್ರಸ್ಯ ಪತಿರುಚ್ಯತೇ" ಕೆಲವರು ಕ್ಷೇತ್ರಪತಿಯೆಂದರೆ ರುದ್ರನೆಂದರ್ಥಮಾಡುತ್ತಾರೆ. ಇನ್ನು ಕೆಲವರು ಅಗ್ನಿಯೆಂದೇ ಅರ್ಥಮಾಡುತ್ತಾರೆ. ಅಥವಾ ಕ್ಷೇತ್ರಪತಿಯೆಂಬ ಸ್ವತಂತ್ರವಾದ ದೇವತೆಯನ್ನೇ ನಿರ್ದೇಶಿಸುವ ಪದವಿದು ಎಂದು ಹೇಳುವ ಮತವೂ ಇರುತ್ತದೆ. ಎಂಬುದಾಗಿ ಮತಾಂತರಗಳನ್ನು ತಿಳಿಸಿದ್ದಾರೆ. ಅಲ್ಲದೇ, 'ಕ್ಷೇತ್ರಸ್ಯ ಪತಿನಾ' ನಿರುಕ್ತವಾಕ್ಯವನ್ನುದಾಹರಿಸಿ ಅದರಲ್ಲಿ ಈ ಪದದ ವಿವರಣೆಯಿರುತ್ತದೆಂದು ಸೂಚಿಸಿದ್ದಾರೆ. ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುತ್ತಾ ಈ ರೀತಿ ತಿಳಿಸಿದ್ದಾರೆ.

ಕ್ಷೇತ್ರಸ್ಯ ಪತಿಃ । ಕ್ಷೇತ್ರಂ ಕ್ಷಿಯತೇಃ ನಿವಾಸಕರ್ಮಣಃ । ತಸ್ಯ ಪಾತಾ ವಾ ಪಾಲಯಿತಾ ವಾ ।
ತಸ್ಯೈಷಾ ಭವತಿ ।

(ನಿ. ೧೦–೧೫)

ಕ್ಷೇತ್ರಶಬ್ದಕ್ಕೆ ವಾಸಸ್ಥಾನವೆಂದರ್ಥ. ಅದರ ಪಾಲಕನಾದುದರಿಂದ ಕ್ಷೇತ್ರಪತಿಯೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ಈ ಶಬ್ದದ ನಿರ್ವಚನವನ್ನು ತಿಳಿಸಿ ಪ್ರಕೃತವಾದ ಮಂತ್ರವನ್ನೇ ಉದಾಹರಿಸಿದ್ದಾರೆ.

ಕ್ಷೇತ್ರಸ್ಯ ಪತಿನಾ—ಕ್ಷೇತ್ರಪತಿ ಎಂಬ ದೇವತೆಯು ಯಾರು ಎಂಬ ವಿಷಯದಲ್ಲಿ ಭಾಷ್ಯಕಾರರು—

ರುದ್ರಂ ಕ್ಷೇತ್ರಪತಿಂ ಪ್ರಾಹುಃ ಕೇಚಿದಗ್ನಿಮಥಾಪರೇ ।
ಸ್ವತಂತ್ರ ಏವ ವಾ ಕಶ್ಚಿತ್ ಕ್ಷೇತ್ರಸ್ಯ ಪತಿರುಚ್ಯತೇ ॥

ಎಂದು ಹೇಳಿರುವರು. ಎಂದರೆ ಕೆಲವರು ರುದ್ರನನ್ನೇ ಕ್ಷೇತ್ರಪತಿಯೆಂದು ಹೇಳುವರು. ಕೆಲವರು ಅಗ್ನಿಯೆಂದೂ, ಮತ್ತೆ ಕೆಲವರು ಕ್ಷೇತ್ರಪತಿ ಎಂಬ ದೇವತೆಯು ಸ್ವತಂತ್ರವಾದ ಪ್ರತ್ಯೇಕ ದೇವತೆಯೆಂದೂ ಹೇಳುವರು. ಉದಾಹರಣೆಗೆ ಯಾಸ್ಕರು ಈ ಋಕ್ಕಿಗೇ ನಿರ್ವಚನವನ್ನು ಹೇಳಿರುವರು—

ಕ್ಷೇತ್ರಸ್ಯ ಪತಿಃ । ಕ್ಷೇತ್ರಂ ಕ್ಷಿಯತೇರ್ನಿವಾಸಕರ್ಮಣಸ್ತಸ್ಯ ಪಾತಾ ವಾ ಪಾಲಯಿತಾ ವಾ ।

(ನಿ. ೧೦–೧೪)

ಕ್ಷಿ(ಕ್ಷಯ್) ವಾಸಮಾಡು ಎಂಬ ಧಾತುವಿನಿಂದ ನಿಷ್ಪನ್ನವಾದ ಕ್ಷೇತ್ರಶಬ್ದಕ್ಕೆ ನಿವಾಸಸ್ಥಾನವೆಂದರ್ಥವು. ಆ ನಿವಾಸಸ್ಥಾನಕ್ಕೆ ಸ್ವಾಮಿ ಅಥವಾ ಅದನ್ನು ರಕ್ಷಿಸುವವನಿಗೆ ಕ್ಷೇತ್ರಪತಿ ಎಂದು ಹೆಸರು.

ತಸ್ಯೈಷಾ ಭವತಿ ।
ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।
ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥

(ಋ. ಸಂ. ೪–೫೭–೧)

ಕ್ಷೇತ್ರಸ್ಯ ಪತಿನಾ ವಯಂ ಸುಹಿತೇನೇವ ಜಯಾಮೋ ಗಾಮಶ್ವಂ ಪುಷ್ಟಂ ಪೋಷಯಿತ್ರ ಚಾಹರೇತಿ । ಸ ನೋ ಮೃಳಾತೀದೃಶೇ । ಬಲೇನ ವಾ ಧನೇನ ವಾ । ಮೃಳತಿರ್ದಾನಕರ್ಮಾ ಪೂಜಾಕರ್ಮಾ ವಾ ।

(ನಿ· ೧೪–೧೫)

ನಮಗೆ ಪ್ರಿಯಪಾತ್ರನಾದ ಸ್ನೇಹಿತನಿಂದ ಪಡೆಯುವಂತೆ ಕ್ಷೇತ್ರಪತಿಯಿಂದ ನಾವು ಧನಾದಿಗಳನ್ನು ಪಡೆಯುವೆವು. ಎಲೈ ಪೋಷಕನಾದ ಕ್ಷೇತ್ರಪತಿಯೇ, ಪುಷ್ಟಿಯುತವಾದ ಗೋವನ್ನೂ, ಅಶ್ವವನ್ನೂ ನಮಗೆ ತಂದುಕೊಡು· ಅವನು ನಮಗೆ ಬಲವನ್ನೂ, ಧನವನ್ನೂ ಕೊಟ್ಟು ಈ ವಿಧವಾಗಿ ಸುಖವನ್ನುಂಟುಮಾಡುವನು. ಮೃಳತಿಧಾತುವಿಗೆ ದಾನಮಾಡುವುದು ಅಥವಾ ಪೂಜೆಮಾಡುವುದು ಎಂದರ್ಥವಿರುವುದು. ಈಗ ಇನ್ನೊಂದು ಉದಾಹರಣೆಯನ್ನು ಕೊಡುವರು—

ತಸ್ಯೈಷಾಪರಾ ಭವತಿ ।

ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।

ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥

(ಋ. ಸಂ. ೪–೫೭–೨)

ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋಽಸ್ಮಾಸು ಧುಕ್ಷ್ವೇತಿ ಮಧುಶ್ಚುತಂ ಘೃತಮಿವೋದಕಂ ಸುಪೂತಮೃತಸ್ಯ ನಃ ಪಾತಾರೋ ವಾ ಪಾಲಯಿತಾರೋ ವಾ ಮೃಳಯಂತು ಮೃಳಯತಿರುಪದಯಾಕರ್ಮಾ ಪೂಜಾಕರ್ಮಾ ವಾ ॥

(ನಿ· ೧೦–೧೬)

ಎಲೈ ನಿವಾಸಸ್ಥಾನಗಳಿಗೆ ಅಧಿಪತಿಯಾದ ಕ್ಷೇತ್ರಪತಿಯೇ, ಹಸುವು ನಮಗೆ ಹಾಲನ್ನು ಕರೆದು ಒದಗಿಸಿಕೊಡುವಂತೆ ಜೇನು ತುಪ್ಪದಂತೆ ಮಧುರವಾಗಿರುವುದೂ, ಘೃತದಂತೆ ಶುದ್ಧವಾಗಿರುವುದೂ ಆದ ಶ್ರೇಷ್ಠವಾದ ಉದಕವನ್ನು ನಮಗೆ ಒದಗಿಸಿಕೊಡು· ನೀನು ಉದಕಕ್ಕೆ ಪಾಲಕನು· ಇಲ್ಲಿ ಉಪಯೋಗಿಸಿರುವ ಮೃಳಯತಿ ಧಾತುವಿಗೆ ರಕ್ಷಿಸು ಅಥವಾ ಪೂಜಿಸು ಎಂಬರ್ಥ ವಿರುವುದು·

ತದ್ಯತ್ಸಮಾನ್ಯಾಮೃಚಿ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯೇಕಂ ಮಧುಮಂತಂ ಮಧುಶ್ಚುತಮಿತಿ ಯಥಾ । ಯದೇವ ಸಮಾನೇ ಪಾದೇ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯಪರಂ—ಹಿರಣ್ಯರೂಪಃ ಸ ಹಿರಣ್ಯಸಂದೃಕ್ ಇತಿ ಯಥಾ । ಯಥಾ ಕಥಾ ಚ ವಿಶೇಷೋ ಜಾಮಿ ಭವತೀತ್ಯಪರಂ—ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ಇತಿ ಯಥಾ ॥

(ನಿ· ೧೦–೧೬)

ಮೇಲಿನ ಉದಾಹರಣೆಯಲ್ಲಿ ಋಕ್ಕಿನ ಪೂರ್ವಾರ್ಧದಲ್ಲಿ **ಮಧುಮಂತಂ** ಎಂಬ ಶಬ್ದವಿರುವುದು. ಉತ್ತರಾರ್ಧದಲ್ಲಿ **ಮಧುಶ್ಚುತಂ** ಎಂಬ ಶಬ್ದವಿರುವುದು. ಈ ರೀತಿ ಸಮಾನಾರ್ಥವುಳ್ಳ (ಒಂದೇ ಅರ್ಥವುಳ್ಳ) ಎರಡು ಶಬ್ದಗಳುಳ್ಳ ಋಕ್ಕಿಗೆ ಅಥವಾ ಮಂತ್ರಕ್ಕೆ ಜಾಮಿ (ಸಂಬಂಧ) ಎಂದು ಹೆಸರು ಎಂದು ಕೆಲವರು ಹೇಳುವರು. ಮತ್ತೆಕೆಲವರು ಒಂದೇ ಪಾದದಲ್ಲಿ ಒಂದೇ ಅರ್ಥವುಳ್ಳ ಎರಡು ಶಬ್ದಗಳಿದ್ದರೆ ಅದು ಜಾಮಿಯೆಂದು ಹೇಳುವರು· ಹಿರಣ್ಯರೂಪಃ ಸ ಹಿರಣ್ಯಸಂದೃಕ್ ಎಂಬ

ಪಾದದಲ್ಲಿರುವಂತೆ. ಮತ್ತೆ ಕೆಲವರು ಒಂದು ಋಕ್ಕಿನಲ್ಲಿ ಅಥವಾ ಒಂದು ಪಾದದಲ್ಲಿ ಸಮಾನಾರ್ಥವಿರುವ (ಒಂದೇ ಅರ್ಥವಿರುವ) ಬೇರೆ ಬೇರೆ ಶಬ್ದಗಳಿದ್ದರೂ ಅಥವಾ ಒಂದೇ ವಿಧವಾದ ಶಬ್ದಗಳ ಪುನರಾವರ್ತಿ ಇದ್ದರೂ ಅದು ಜಾಮಿಯಾಗುವುದಿಲ್ಲ. ಎಂದರೆ, ಸಮಾನಾರ್ಥವನ್ನು ಸೂಚಿಸುವುದಿಲ್ಲ. ಹೇಗೆಂದರೆ— **ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ** ಎಂಬ ಋಕ್ಕಿನಲ್ಲಿರುವಂತೆ. ಇಲ್ಲಿ ಸಮಾನಾರ್ಥ ಶಬ್ದಗಳ ಪುನರಾವರ್ತಿ ಇದ್ದರೂ ಈ ಪುನರಾವರ್ತಿಯು (ಅಭ್ಯಾಸವು) ವಾಕ್ಯದ ಅಭಿಪ್ರಾಯವನ್ನು ಒತ್ತಿ ಹೇಳುವುದಕ್ಕಾಗಿ ಪ್ರಯುಕ್ತವಾಗಿರುವುದು ಎಂದು ಮತ್ತೆ ಕೆಲವರ ಮತವು.

'ಕ್ಷೇತ್ರಸ್ಯಪತಿ' ಎಂಬ ದೇವತೆಯೂ ವಾಸ್ತೋಷ್ಪತಿಯ ಜಾತಿಗೆ ಸೇರಿದುದು. ಈ ದೇವತೆ ಭೂರಕ್ಷಕ ೪-೫೭ನೆಯ ಸೂಕ್ತದ ಮೊದಲನೆಯ ಮೂರು ಮಂತ್ರಗಳಲ್ಲಿ ಈತನಿಂದ, ಗೋವುಗಳು, ಅಶ್ವಗಳು ಮತ್ತು ಭೂವ್ಯಾಕಾಶಗಳು, ವೃಕ್ಷಗಳು, ನೀರು ಇವುಗಳಲ್ಲಿ ಮಾಧುರ್ಯ ಮೊದಲಾದುವುಗಳು ಅಪೇಕ್ಷಿತವಾಗಿವೆ. ವಿಶ್ವೇದೇವತಾಕವಾದ ಸೂಕ್ತವೊಂದರಲ್ಲಿ (೭-೩೫-೧೦) ಸವಿತೃ, ಉಷೋದೇವಿಯರು, ಪರ್ಜನ್ಯ, ಇವರೊಡನೆ ಈತನೂ ಸಮೃದ್ಧಿದಾಯಕನಾಗಬೇಕೆಂದು ಪ್ರಾರ್ಥಿತನಾಗಿದಾನೆ. ೧೦-೬೬-೧೩ ಇಲ್ಲಿ ಆರಾಧಕರು ಈತನನ್ನು ತಮ್ಮ ನೆರೆಯಲ್ಲಿರಬೇಕೆಂದು ಆಶಿಸಿದ್ದಾರೆ. ಭೂಮಿಯನ್ನು ಉಳುವುದಕ್ಕೆ ಪ್ರಾರಂಭಿಸುವಾಗ ಈ ದೇವತೆಯನ್ನು ಪೂಜಿಸಬೇಕು ಅಥವಾ ದೇವತೆಯನ್ನುದ್ದೇಶಿಸಿ ಹೋಮಮಾಡಬೇಕೆಂದು ಹೇಳಿದೆ. (ಆ ಗೃ ಸೂ ೨-೧೦-೪ ; ಶಾಂ. ಗೃ. ಸೂ. ೪-೧೩-೫) ವ್ಯವಸಾಯ ಸಂಬಂಧವಾದ ದೇವತೆಗಳನ್ನು ಸ್ತುತಿಸುವ ಸೂಕ್ತವೊಂದರಲ್ಲಿ (೪-೫೭-೬) ಸೀತಾ (ನೇಗಿಲುಗೆರೆ) ಎಂಬ ದೇವತೆಯಿಂದ ಉತ್ತಮವಾದ ಬೆಳೆಯು ಪ್ರಾರ್ಥಿತವಾಗಿದೆ. ಪಾರಸ್ಕರ ಗೃಹ್ಯಸೂತ್ರದಲ್ಲಿ (ಪಾ. ಗೃ. ಸೂ. ೨-೧೭-೯) ಇದೇ ಸೀತೆಯು ಇಂದ್ರನ ಪತ್ನಿಯೆಂದೂ ಮತ್ತು ಅವಳಿಗೆ ತಂದೆಯ ಹೆಸರಿನ ಆಧಾರದ ಮೇಲೆ ಸಾವಿತ್ರೀ ಎಂದು ಹೆಸರೆಂದೂ (ತೈ. ಬ್ರಾ. ೨-೩-೧೦-೧) ಹೇಳಿದೆ. ಇದೇ ಪಾರಸ್ಕರ ಗೃಹ್ಯಸೂತ್ರದಲ್ಲಿ ಉರ್ವರಾ (ವ್ಯವಸಾಯಕ್ಕೆ ಅನುಕೂಲವಾಗಿರುವ ಜಮೀನು) ಎಂಬೊಂದು ದೇವತೆ ಉಕ್ತವಾಗಿದೆ.

ನಿರುಕ್ತಕಾರರ ನಿರ್ವಚನದಂತೆ ಕ್ಷೇತ್ರಪತಿಯು ಗೃಹಪತಿಯೂ ಆಗಬಹುದಾದುದರಿಂದ ಅಗ್ನಿಯೆಂದೂ ಅರ್ಥವಾಗಬಹುದು. ಆದರೆ ಕ್ಷೇತ್ರ ಶಬ್ದದ ಪ್ರಯೋಗವು ಕೃಷಿ ಸಂಬಂಧವಾಗಿಯೇ ಪ್ರಕೃತವಾದ ಮಂತ್ರದಲ್ಲಿರುವುದರಿಂದ ಕ್ಷೇತ್ರಪತಿ ಶಬ್ದವು ಪ್ರತ್ಯೇಕವಾದ ದೇವತೆಯೆಂದೇ ಅರ್ಥಮಾಡುವುದು ಉಚಿತವಾಗಿರುತ್ತದೆ. ಕೆಲವೆಡೆಗಳಲ್ಲಿ ಸಾಯಣರ ಭಾಷ್ಯವೂ ಈ ಅರ್ಥವನ್ನೇ ಸಮರ್ಥಿಸುತ್ತದೆ. ಉದಾಹರಣೆಗೆ—

**ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ ।**
**ಕ್ಷೇತ್ರಸ್ಯ ಪತಿಂ ಪ್ರತಿವೇಶಮೀಮಹೇ ವಿಶ್ವಾನ್ದೇವಾ ಅಮೃತಾ ಅಪ್ರಯುಚ್ಛತಃ ॥**

(ಋ, ಸಂ. ೧೦-೬೬-೧೩)

ದೇವತಾತ್ಮರೂ, ಹೋತೃರೂಪರೂ ಆದ ಅಗ್ನ್ಯಾದಿತ್ಯರನ್ನೂ, ಯಜ್ಞಮಾರ್ಗವನ್ನೂ ಸಹ ನಾನು ಅನುಸರಿಸುತ್ತೇನೆ. ಕ್ಷೇತ್ರಪತಿಯನ್ನೂ, ಪ್ರಮಾದರಹಿತರಾದ ಇತರ ಎಲ್ಲಾ ದೇವತೆಗಳನ್ನೂ ನಾನು ಧನಾರ್ಥವಾಗಿ ಪೂಜಿಸುತ್ತೇನೆ. ಎಂಬರ್ಥವುಳ್ಳ ಈ ಮಂತ್ರದಲ್ಲಿ ಕ್ಷೇತ್ರಸ್ಯ ಪತಿಂ ಎಂಬುದಕ್ಕೆ ಸಾಯಣರು ಏತನ್ನಾಮಾನಂ ಎಂದು ವಿವರಿಸಿ ಇದು ಪ್ರತ್ಯೇಕವಾದ ದೇವತೆಯ ಹೆಸರೆಂದೇ ತಿಳಿಯಬೇಕು ಎಂದು ಹೇಳಿದ್ದಾರೆ. ಇದರಂತೆಯೇ,

**ಶಂ ನೋ ದೇವಃ ಸವಿತಾ ತ್ರಾಯಮಾಣಃ ಶಂ ನೋ ಭವಂತೂಷಸೋ ವಿಭಾತೀಃ ।**
**ಶಂ ನಃ ಪರ್ಜನ್ಯೋ ಭವತು ಪ್ರಜಾಭ್ಯಃ ಶಂ ನಃ ಕ್ಷೇತ್ರಸ್ಯ ಪತಿರಸ್ತು ಶಂಭುಃ ॥**

(ಋ. ಸಂ. ೭-೩೫-೧)

ಎಂಬ ಮಂತ್ರದಲ್ಲಿಯೂ ಕ್ಷೇತ್ರಪತಿ ಶಬ್ದಕ್ಕೆ ಇದೇ ಅರ್ಥವನ್ನು ಹೇಳಬೇಕು. ಈ ಮಂತ್ರದ ಹಿಂದಿನ ಮಂತ್ರದಲ್ಲಿ ಅಗ್ನಿ, ಇಂದ್ರ, ಸೂರ್ಯ ಇತ್ಯಾದಿ ಇತರ ದೇವತೆಗಳ ನಾಮನಿರ್ದೇಶವು ಸ್ಪಷ್ಟವಾಗಿರುವುದರಿಂದ ಇದು ಬೇರೆ (ಪ್ರತ್ಯೇಕ) ದೇವತೆಯ ನಾಮವನ್ನು ತಿಳಿಸುವುದಾಗಿದೆಯೆಂದು ಹೇಳಬಹುದು.

ಬೃಹದ್ದೇವತಾಕಾರರು ಇದೇ ಕ್ಷೇತ್ರಪತಿಯು ಇಂದ್ರನ ವಿಭೂತಿವಿಶೇಷವೆಂದು ಒಂದು ಕಡೆಯೂ, ಅಗ್ನಿಯ ವಿಭೂತಿವಿಶೇಷವೆಂದು ಇನ್ನೊಂದು ಕಡೆಯೂ ತಿಳಿಸಿದ್ದಾರೆ.

ಇಂದ್ರಾಶ್ರಯಸ್ತು ಪರ್ಜನ್ಯೋ ರುದ್ರೋ ವಾಯುರ್ಬೃಹಸ್ಪತಿಃ ||
ವರುಣಃ ಕಶ್ಚ ಮೃತ್ಯುಶ್ಚ ದೇವಶ್ಚ ಬ್ರಹ್ಮಣಸ್ಪತಿಃ ||
ಮನುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ||

(ಬೃ.ದೇ. ೧–೧೨೨–೧೨೩)

ಪರ್ಜನ್ಯ, ರುದ್ರ, ವಾಯು, ಬೃಹಸ್ಪತಿ. ವರುಣ, ಕ, ಮೃತ್ಯು, ಬ್ರಹ್ಮಣಸ್ಪತಿ, ಮನ್ಯು, ವಿಶ್ವಕರ್ಮಾ, ಮಿತ್ರ, ಕ್ಷೇತ್ರಪತಿ, ಯಮ ತಾರ್ಕ್ಷ್ಯ ಇತ್ಯಾದಿ ಸಕಲದೇವತೆಗಳೂ ಇಂದ್ರಾಂತರ್ಗತರು ಎಂದು ಒಂದು ಕಡೆ ಹೇಳಿದೆ. ಅಲ್ಲದೆ,

ಅನ್ನಂ ಕ್ಷಿತಿಭ್ಯೋ ವಿದಧತ್ ಯದೃತುಷ್ವವಿಶತ್ಕ್ಷಿತೌ |
ತೇನೈನಮಾಹ ಕ್ಷೇತ್ರಸ್ಯ ವಾಮದೇವಃ ಸ್ತುವನ್ಪತಿಂ ||

(ಬೃ.ದೇ. ೨–೨೧)

ಋತುಕಾಲಗಳಿಗನುಗುಣವಾಗಿ ಇದೇ ಅಗ್ನಿಯು ಪೃಥ್ವಿಯಲ್ಲಿ (ಕ್ಷಿತೌ) ಅಂತರ್ಗತನಾಗಿ, ಪೃಥ್ವಿಯ ಸಕಲ ಪ್ರದೇಶಗಳಿಗೂ ಅನ್ನವನ್ನು ಹಂಚುವವನಾದುದರಿಂದ ವಾಮದೇವಋಷಿಯು ಇವನನ್ನು ಕ್ಷೇತ್ರಪತಿಯೆಂದು ಪ್ರಶಂಸಿಸಿದನು ಎಂದು ತಿಳಿಸಿದೆ. ಈ ವಿವರಣವು "ಕೇಚಿದಗ್ನಿಮಥಾಪರೇ" ಎಂದು ಸಾಯಣರು ತಿಳಿಸಿರುವ ಅರ್ಥಕ್ಕೆ ಹೊಂದಿಕೊಳ್ಳುತ್ತದೆ.

**ಶುನ, ಸೀರ, ಲಾಂಗಲ, ಫಾಲ, ಸೀತಾ** ಇತ್ಯಾದಿ ಪದಗಳ ಪ್ರಯೋಗಗಳು ಕೃಷಿಯ ಸ್ವರೂಪವನ್ನೇ ಪೂರ್ಣವಾಗಿ ವರ್ಣಿಸುವುದರಿಂದ ಪ್ರಕೃತದಲ್ಲಿ ಕ್ಷೇತ್ರಪತಿಯೆಂಬುದಕ್ಕೆ ಕೃಷಿಗೆ ಉಪಯುಕ್ತವಾದ ಕ್ಷೇತ್ರಗಳಿಗೆ ಪಾಲಕನಾದ ದೇವತಾವಿಶೇಷವೆಂದೇ ಅರ್ಥಮಾಡುವುದು ಉಚಿತವಾಗಿರುತ್ತದೆ. **ಶುನ, ಸೀರ** ಎಂಬ ಪದಗಳಿಗೂ ಸಹ ನೇಗಿಲು, ಗುಳ ಇತ್ಯಾದಿಯಾಗಿ ಕೃಷಿಸಾಧನಗಳೆಂದೇ ಅರ್ಥಮಾಡಿದರೂ ತಪ್ಪಾಗಲಾರದು. ಆದರೆ **ಶುನ, ಸೀರ** ಎಂಬ ಪದಗಳ ಪ್ರತ್ಯೇಕವಾದ ಪ್ರಯೋಗವೂ, **ಶುನಾಸೀರಾ** ಎಂಬ ದ್ವಂದ್ವ ರೂಪದ ಪ್ರಯೋಗವೂ ವಿಶೇಷವಾಗಿರುವುದರಿಂದ ಆಯಾ ಸಂದರ್ಭಗಳಿಗನುಗುಣವಾಗಿ ಈ ಪದಗಳ ನಿಷ್ಕೃಷ್ಟವಾದ ತಾತ್ಪರ್ಯವೇನೆಂಬುದನ್ನು ಪರಿಶೀಲಿಸಬೇಕು.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಹದಿನೈದನೆಯ ಖಂಡವು ಸಮಾಪ್ತವು.

## ಅಥ ಷೋಡಶಃ ಖಂಡಃ

## ಹದಿನಾರನೆಯ ಖಂಡವು

ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ । ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು । (ಋ. ಸಂ. ೪-೫೭-೨) ॥ ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋಽಸ್ಮಾಸು ಧುಕ್ಷ್ವೇತಿ ಮಧುಶ್ಚುತಂ ಘೃತಮಿವೋದಕಂ ಸುಪೂತಮೃತಸ್ಯ ನಃ ಪಾತಾರೋ ವಾ ಪಾಲಯಿತಾರೋ ವಾ ಮೃಳಯಂತು ಮೃಳಯತಿರುಪದ-ಯಾಕರ್ಮಾ ಪೂಜಾಕರ್ಮಾ ವಾ ತದ್ಯತ್ಸಮಾನ್ಯಾಮೃಚಿ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯೇಕಂ ಮಧುಮಂತಂ ಮಧುಶ್ಚುತಮಿತಿ ಯಥಾ ಯದೇವ ಸಮಾನೇ ಪಾದೇ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯಪರಂ ಹಿರಣ್ಯ ರೂಪಃ ಸ ಹಿರಣ್ಯಸಂದೃಗಿತಿ ಯಥಾ ಯಥಾಕಥಾಚ ವಿಶೇಷೋಽಜಾಮಿ ಭವ-ತೀತ್ಯಪರಂ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವೇತಿ ಯಥಾ । ವಾಸ್ತೋಷ್ಪತಿರ್ವಾಸತೇರ್ನಿವಾಸಕರ್ಮಣಸ್ತಸ್ಯ ಪಾತಾ ವಾ ಪಾಲಯಿತಾ ವಾ ತಸ್ಯೈಷಾ ಭವತಿ ॥ ೧೬ ॥

> ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು
> ಧುಕ್ಷ್ವ ॥ ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ
> ಮೃಳಯಂತು ॥
>
> (ಋ. ಸಂ. ೩-೮೭-೯)

ಮಧ್ಯಮದೇವನೆಂದು ತಿಳಿಸಲು ಕ್ಷೇತ್ರಸ್ಯಪತಿಯ ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಕ್ಷೇತ್ರ ಪತಿಯೇ, ಮಾಧುರ್ಯದಿಂದ ಕೂಡಿರುವ, ಜೇನಿನಂತೆ ಹನಿಹನಿಯಾಗಿ ಸುರಿಯುವ, ನಿರ್ಮಲವಾದ ತುಪ್ಪದಂತಿರುವ ಉದಕ ಧಾರೆಯನ್ನು, ಹಸುವು ಹಾಲು ಕರೆಯುವಂತೆ ನಮಗೋಸ್ಕರ ಸುರಿಸು. ಉದಕರಕ್ಷಕರಾದ ಕ್ಷೇತ್ರಪತಿ ಮುಂತಾದ ಮಾಧ್ಯ ಮಿಕ ದೇವತೆಗಳು ನಮಗೆ ಸುಖವನ್ನು ಕೊಡಲಿ.

> ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋಽಸ್ಮಾಸು
> ಧುಕ್ಷ್ವೇತಿ । ಮಧುಶ್ಚುತಂ ಘೃತಮೇವೋದಕಂ ಸುಪೂತಮೃತಸ್ಯ ನಃ

**ಪಾತಾರೋ ವಾ ಪಾಲಯಿತಾರೋ ವಾ ಮೃಳಯಂತು । ಮೃಳಯತಿರುಪ-ದಯಾ ಕರ್ಮಾ ಪೂಜಾಕರ್ಮಾ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಋತ ಶಬ್ದವು ಉದಕ ಪರ್ಯಾಯದಲ್ಲಿ (ನಿಘ. ೧-೧೨-೬೮) ಹೇಳಿದೆ. ಪ್ರದಾನೇನ (ಕೊಡುವುದರಿಂದ) ಎಂದು ಅಧ್ಯಾಹಾರ ಮಾಡಿಕೊಂಡು ಋತಸ್ಯ ಎಂಬಲ್ಲಿ ಅನ್ವಯ ಹೇಳಬೇಕು. ನೀರನ್ನು ಕೊಡುವುದರ ಮೂಲಕ ರಕ್ಷಿಸುವವರು ಅದಕ್ಕನುಗುಣವಾಗಿ ಮಧುಶ್ಚುತಂ ಎಂಬುದನ್ನೂ ಷಷ್ಠ್ಯಂತವಾಗಿ ವಿಪರಿಣಾಮಮಾಡಿಕೊಳ್ಳಬೇಕು, ಮಂತ್ರದ ಪೂರ್ವಾರ್ಧದಿಂದ ಪ್ರತ್ಯಕ್ಷಸ್ತುತಿಯೂ, ಉತ್ತರಾರ್ಧದಿಂದ ಪರೋಕ್ಷಸ್ತುತಿಯೂ ಅಭಿಹಿತವಾಗಿದೆ. ಉಪದಯಾ ಕರ್ಮಾ ಎಂಬುದಕ್ಕೆ ರಕ್ಷಣೆಯೆಂದರ್ಥ.

**ತದ್ಯತ್ಸಮಾನ್ಯಾಮೃಚಿ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯೇಕಂ, 'ಮಧುಮಂತಂ ಮಧುಶ್ಚುತಂ' ಇತಿ ಯಥಾ ॥**

ಪ್ರಕೃತ ಮಂತ್ರದಲ್ಲಿರುವ ಪದಗಳ ಜಾಮಿತ್ವ, ಅಜಾಮಿತ್ವ ವಿಚಾರವನ್ನು ಮುಂದಿನ ಮಂತ್ರಗಳಲ್ಲಿಯೂ ತಿಳಿಯಲು ವಿವರಿಸುತ್ತಾರೆ. ಪುನರುಕ್ತವಾದುದಕ್ಕೆ ಜಾಮಿ ಎಂದು ಸಂಜ್ಞಾ. ಒಂದೇ ಋಕ್ಕಿನಲ್ಲಿ ಸಮಾನ ಶಬ್ದಗಳು ಬಂದರೆ ಅದು ಜಾಮಿಯಾಗುತ್ತದೆ. ಪ್ರಕೃತ ಮಧುಮಂತಂ, ಮಧುಶ್ಚುತಂ, ಎಂದು ಸಮಾನಾರ್ಥಕ ಪದಗಳು ಬಂದುದರಿಂದ ಜಾಮಿತಾದೋಷ ಬರುತ್ತದೆ. 'ಜಾಮಿ ವಾ ಏತದ್ಯಜ್ಞೇ ಕ್ರಿಯತೇ, ಯನ್ಮರುತ್ವತೀಯೋ ಗ್ರಹೋ ಗೃಹ್ಯತೇ ಮರುತ್ವತೀಯಂ ಶಂಸ್ಯತೇ' ಎಂದು ಇದು ನಿಗಮದಲ್ಲಿಯೇ ವಿವೃತವಾಗಿದೆ. ಸಮಾನಶಬ್ದಾರ್ಥ, ಅಸಮಾನಶಬ್ದಾರ್ಥವೆಂದು ಪುನರುಕ್ತವು ಎರಡುರೀತಿಯಾಗಿರುತ್ತದೆ. ಒಂದೇ ಪದವು ಏಕಾರ್ಥವಾಗಿ ಒಂದೇ ವಾಕ್ಯದಲ್ಲಿ ಬರುವುದು ಸಮಾನಶಬ್ದಾರ್ಥಪೌನರುಕ್ತ್ಯ. ಪ್ರಕೃತ ಮಂತ್ರದಲ್ಲಿ ಹಿಂದೆ ಹೇಳಿದಂತೆ ಎರಡು ಸಮಾನಾರ್ಥಕಪದಗಳು ಬಂದುದರಿಂದ ಅದು ಇದಕ್ಕೆ ಉದಾಹರಣೆಯಾಗುತ್ತದೆ. ಬೇರೆ ಬೇರೆ ಅರ್ಥಗಳುಳ್ಳ ಸಮಾನಪದಗಳು ಎರಡು ಬಂದರೆ ಅಸಮಾನಶಬ್ದಾರ್ಥಪೌನರುಕ್ತ್ಯವಾಗುತ್ತದೆ ಇದೇ ಅಜಾಮಿಯೂ ಆಗುತ್ತದೆ. ಅಸಮಾನ ಶಬ್ದಗಳು ಸಮಾನಾರ್ಥಕವಾಗಿ ಹೇಳಿದರೆ ಆಗ ಕ್ಲೇಶದಿಂದ ಅದನ್ನು ಸರಿಪಡಿಸಬೇಕಾಗುತ್ತದೆ. ಪ್ರಕೃತ ಹಾಗೆ ಇರುವುದರಿಂದ ಈ ವಿಷಯವನ್ನು ಪ್ರಸ್ತಾಪಿಸಿದೆ.

**ಯದೇವ ಸಮಾನೇ ಪಾದೇ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯಪರಂ—"ಹಿರಣ್ಯರೂಪಃ ಸ ಹಿರಿಣ್ಯಸಂದೃಗ್" ಇತಿ ಯಥಾ ॥**

ಜಾಮಿತಾದೋಷಕ್ಕೆ ಉದಾಹರಣೆ ತೋರಿಸುತ್ತಾರೆ. ನಾನಾರ್ಥಕ ಪದಗಳುಳ್ಳ ಋಕ್ಕಿನಲ್ಲಿ ಸಮಾನಾರ್ಥಕ ಪದಗಳಿದ್ದರೂ ಅಸಮಾನ ಪಾದಾಂತರ ವ್ಯವಧಾನದಿಂದ ಪ್ರಕೃತಾರ್ಥವನ್ನು ಜ್ಞಾಪಿಸಲು ಪುನಃ ಹೇಳುವುದರಿಂದ ಜಾಮಿತಾದೋಷ ಬರುವುದಿಲ್ಲ. ಸಮಾನವಾದ ಪಾದದಲ್ಲಿಯೇ ಪದಾಂತರದಿಂದ ವ್ಯವಹಿತವಾಗಿ ಸಮಾನಾರ್ಥಕ ಪದಗಳನ್ನು ಹೇಳುವುದಾದರೆ, ಅವಿಚ್ಛಿನ್ನಪದಾನುಸ್ಮೃತಿ ಇರುವುದರಿಂದ ಅದು ಜಾಮಿತಾದೋಷವಾಗುತ್ತದೆ, ಇಲ್ಲಿ ಹಿರಣ್ಯರೂಪನು ಯಾರೋ ಅವನು ಹಿರಣ್ಯಸಂದೃಗಾದುದರಿಂದ ಎರಡುಸಾರಿ ಹೇಳಿದುದು ದೋಷಕ್ಕೆ ಆಸ್ಪದವಾಗಿದೆ.

ಯಥಾಕಥಾ ಚ ವಿಶೇಷೋಽಜಾಮಿ ಭವತೀತ್ಯಪರಮ್ ||
'ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ' ಇತಿ ಯಥಾ ||

ಅಲ್ಲಿ ಪುನರುಕ್ತವಾಗಿದ್ದರೂ (ಹೇಗಾದರೂ) ಸ್ವಲ್ಪ ಅರ್ಥವಿಶೇಷವನ್ನು ಕಲ್ಪಿಸುವಂತಿದ್ದರೆ ಜಾಮಿತಾದೋಷ ಬರುವುದಿಲ್ಲ. ವೇದಾರ್ಥವು ಗಹನವಾದುದರಿಂದ ಬಹುಪ್ರಯತ್ನದಿಂದ ಅರ್ಥ ತಿಳಿಯಬೇಕಾಗುತ್ತದೆ. ಆದುದರಿಂದ ಪೌನರುಕ್ತ್ಯವೆಂದು ಸುಮ್ಮನೆ ಬಿಡಬಾರದು. ಹೇಗಾದರೂ ಅರ್ಥೋನ್ನಯನ ಮಾಡಬೇಕೆಂದು ಆಚಾರ್ಯರ ಅಭಿಪ್ರಾಯ. ಪ್ರಕೃತ ಮಂಡೂಕಾಃ ಅಂದರೆ ಕಪ್ಪೆಗಳು ನೀರಿಲ್ಲದಿದ್ದರೆ ಸ್ವತಂತ್ರವ್ಯಾಪಾರವಿಲ್ಲದೆ ಶಬ್ದವಿಲ್ಲದೆ ಇರುವಂತೆ ನಾನಿಲ್ಲದಿದ್ದರೆ ನೀವು ಹಾಗಾಗಬೇಡಿ. ಇಲ್ಲಿ ಮಾತಿಲ್ಲದಿರುವಲ್ಲಿ ವಿದ್ವಾಂಸರಿಗೆ ಮಂಡೂಕಗಳು ಉಪಮಾನವಾಗುತ್ತವೆ. ಇನ್ನೊಂದು ವಾಕ್ಯದಲ್ಲಿ ನೀರಿಲ್ಲದಿದ್ದರೆ ಕಪ್ಪೆಗಳು ಹೇಗೆ ಇರುವುದೇ ಇಲ್ಲವೋ ಅದರಂತೆ ನಾನಿಲ್ಲದಿದ್ದರೆ ನೀವು ಹಾಗೆ ಆಗಬೇಡಿ ಎಂದರ್ಥ ಕಲ್ಪಿಸುವುದರಿಂದ ಉದಕ ಉಪಮಾನ ವಾಗಿರುತ್ತದೆ. ಹೀಗೆ ವಿಶೇಷವು ಪ್ರಕೃತಮಂತ್ರದಲ್ಲಿಯೂ ತೋರುವುದರಿಂದ ಜಾಮಿತಾದೋಷಕ್ಕೆ ಅವಕಾಶವಿಲ್ಲ. ಮಧುವಿನಂತೆ ಸುಂದರವಾಗಿರಬಹುದು ಆದರೆ ಅದು ಪುನಃ ಪುನಃ ತೊಟ್ಟಿಕ್ಕುತ್ತಿರುತ್ತದೆಯೆಂದು ನಿಯಮವಿಲ್ಲ. ಅಥವಾ ಚಿನ್ನ ದಂತೆ ಇರಬಹುದು. ಆದರೆ ಚಿನ್ನದಂತೆ ಪ್ರಿಯವಾಗಿರಬೇಕೆಂದು ನಿಯಮವಿಲ್ಲ. ಕಾಯಿಸಿದ ಕಬ್ಬಿಣದ ಉಂಡೆ ಚಿನ್ನದಂತೆ ಇದ್ದರೂ ಅದು ಪ್ರಿಯವಲ್ಲ. ಹೀಗೆ ಎರಡು ಪದಗಳಿಗೂ ಅಲ್ಪವ್ಯತ್ಯಾಸ ವಿರುತ್ತದೆ.

ವಾಸ್ತೋಷ್ಪತಿಃ—ವಾಸ್ತುರ್ವಸತೇರ್ನಿವಾಸಕರ್ಮಣಃ | ತಸ್ಯ ಪಾತಾ ವಾ ಪಾಲಯಿತಾ ವಾ || ತಸ್ಯೈಷಾ ಭವತಿ || ೧೭ ||

ಕ್ರಮಪ್ರಾಪ್ತವಾದ ವಾಸ್ತೋಷ್ಪತಿಪದದ ನಿರ್ವಚನವನ್ನು ತೋರಿಸುತ್ತಾರೆ. ಇವನೂ ರುದ್ರಸ್ವರೂಪದಿಂದ ಮಧ್ಯಮನಾಗು ತ್ತಾನೆ. ಇಲ್ಲಿ ವಾಸ್ತು ಎಂಬುದು ಪೂರ್ವಪದ. ವಸನಿವಾಸೇ. ಧಾತು. 'ವಸ್ತೇಸ್ತುನ್ ಣಿಚ್ಚ' ಸೂತ್ರದಿಂದ ತುನ್ ಪ್ರತ್ಯಯ. ಣಿತ್ತಾದುದರಿಂದ ಆದಿವೃದ್ಧಿ. ವಾಸ್ತು ಎಂದರೆ ಅಂತರಿಕ್ಷ. ಅದನ್ನು ಕಾಪಾಡುವವನು. ವಾಸ್ತು ಗೃಹನಾಮವೂ ಆಗುತ್ತದೆ. ಗೃಹಾಧಿದೇವತೆಯಾದ ರುದ್ರನೇ ವಾಸ್ತೋಷ್ಪತಿಯಾಗುತ್ತಾನೆ. ಗೃಹಾಧಿದೇವತಾಭಾವದಿಂದ ರುದ್ರರೂಪಿ ಯಾದುದರಿಂದ ಮಧ್ಯಮಸ್ಥಾನದಲ್ಲಿ ಹೇಳಿದೆ. ಮುಂದೆ ಉದಾಹರಿಸುವ ಮಂತ್ರವು ವಾಸ್ತೋಷ್ಪತಿ ಸ್ತುತಿಯನ್ನು ಪ್ರತಿಪಾದಿ ಸುತ್ತದೆ. ಆದರಲ್ಲಿ ಬಲಕೃತಿಯಿರುವುದರಿಂದಲೂ ಇವನು ಮಧ್ಯಮನೆಂದು ತಿಳಿಯಬೇಕು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ಹತ್ತನೆಯ ಅಧ್ಯಾಯದಲ್ಲಿ
ಹದಿನಾರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತದಶಖಂಡಃ

## ಹದಿನೇಳನಯು ಖಂಡವು

ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ | ಸಖಾ ಸುಶೇವ ಏಧಿನಃ | (ಋ ಸಂ ೭-೫೫-೧) || ಅಮ್ಯಮನಹಾ ವಾಸ್ತೋಷ್ಪತೇ ಸರ್ವಾಣಿ ರೂಪಾಣ್ಯಾವಿಶನ್ತ್ಸಖಾ ನಃ ಸುಸುಖೋ ಭವ ಶೇವ ಇತಿ ಸುಖನಾಮ ಶಿಷ್ಯತೇರ್ವಕಾರೋ ನಾಮಕರಣೋಽಂತಸ್ಥಾಂತರೋಪಲಿಂಗೀ ವಿಭಾಷಿತಗುಣಃ ಶೇವಮಿತ್ಯಪ್ಯಸ್ಯ ಭವತಿ ಯದ್ಯದ್ರೂಪಂ ಕಾಮಯತೇ ತತ್ತದ್ದೇವತಾ ಭವತಿ | ರೂಪಂ ರೂಪಂ ಮಘವಾ ಬೋಭವೀತ್ಯಪಿ ನಿಗಮೋ ಭವತಿ | ವಾಚಸ್ಪತಿರ್ವಾಚಃ ಪಾತಾ ವಾ ಪಾಲಯಿತಾವಾ ತಸ್ಯೈ ಷಾ ಭವತಿ || ೧೭ ||

ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ || ಸಖಾ
ಸುಶೇವ ಏಧಿ ನಃ || (ಋ. ಸಂ. ೫-೪-೨೨)

ವಾಸ್ತೋಷ್ಪತಿ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಪೂಜ್ಯನಾದ ಗೃಹಾಧಿದೇವತೆಯಾದ ವಾಸ್ತೋಷ್ಪತಿಯೇ ರೋಗವನ್ನು ನಾಶಮಾಡುವ ನೀನು ಸಕಲ ರೂಪಗಳನ್ನು ಪ್ರವೇಶಿಸಿ ನಮಗೆ ಉಪದ್ರವಕಾರಿಗಳನ್ನು ನಾಶಮಾಡಿ, ಮಿತ್ರನಾಗಿ ಸುಖಕರನಾಗು.

ಅಭ್ಯಮನಹಾ ವಾಸ್ತೋಷ್ಪತೇ | ಸರ್ವಾಣಿ ರೂಪಾಣ್ಯಾವಿಶನ್ ಸಖಾ
ನಃ ಸುಸುಖೋ ಭವ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಮೀವಾ ರೋಗನಾಮದಲ್ಲಿ (ನಿ. ಘ. ೬-೧೨) ಹೇಳಿದೆ. ಅಭ್ಯಮನವೆಂದು ಅದರ ವ್ಯಾಖ್ಯಾನ. ರೋಗವ್ಯಾಪಾರವೆಂದರ್ಥ. ಅದನ್ನು ನಾಶಪಡಿಸುವವನು. ಸುಶೇವಃ= ಅಧಿಕ ಸುಖವನ್ನುಂಟುಮಾಡುವವನು.

ಶೇವ ಇತಿ ಸುಖನಾಮ | ಶಿಷ್ಯತೇರ್ವಕಾರೋ ನಾಮಕರಣೋಽಂತ-
ಸ್ಥಾಂತರೋಪಲಿಂಗೀ ವಿಭಾಷಿತಗುಣಃ | ಶೇವಮಿತ್ಯಪ್ಯಸ್ಯ ಭವತಿ ||

ಸುಶೇವಾ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಶೇವವೆಂದರೆ ಸುಖ. ಶಿಷ್—ಅಸರ್ವೋಪಯೋಗೇ. ಚುರಾದಿಯಾದರೂ ದಿವಾದಿಗಣವು ಆಕೃತಿಗಣವೆಂದುದರಿಂದ ಶ್ಯನ್‌ವಿಕರಣದಿಂದ ನಿರ್ದೇಶಿಸಿರುತ್ತಾರೆ. ಇದಕ್ಕೆ ಸಂಜ್ಞಾಬೋಧಕವಾಗಿ ವಪ್ರತ್ಯಯ ಬರುತ್ತದೆ. ಆ ವಪ್ರತ್ಯಯವು ಕೊನೆಯ ವರ್ಣದ ಲೋಪಕ್ಕೆ ಕಾರಣವಾಗುತ್ತದೆ. ಪಕಾರಲೋಪ ಬರುತ್ತದೆಂದು

ತಾತ್ಪರ್ಯ: ವಕಾರವು ವಿಕಲ್ಪವಾದ ಗುಣಕ್ಕೆ ಕಾರಣವಾಗುವುದರಿಂದ ಗುಣ ಬಂದರೆ ಶೇವ ಎಂದೂ, ಗುಣ ಬಾರದಿದ್ದರೆ ಶಿವ ಎಂದೂ ರೂಪವಾಗುತ್ತದೆ.

ಯದ್ಯದ್ರೂಪಂ ಕಾಮಯತೇ ತತ್ತದ್ದೇವತಾ ಭವತಿ । "ರೂಪಂ ರೂಪಂ ಮಘವಾ ಬೋಭವೀತಿ" ಇತ್ಯಪಿ ನಿಗಮೋ ಭವತಿ ॥

ವಾಸ್ತೋಷ್ಪತಿಯು ಸಕಲ ರೂಪಗಳನ್ನೂ ಪ್ರವೇಶಿಸಿರುವನು ಎಂದು ಪೂರ್ವೋಕ್ತಮಂತ್ರದಲ್ಲಿ ಪ್ರಸಕ್ತವಾದುದರಿಂದ ದೇವತೆಗಳಿಗೆ ಆ ಸಾಮರ್ಥ್ಯವಿದೆಯೆಂದು ತಿಳಿಸಲು ಇತರ ಮಂತ್ರದೃಷ್ಟಾಂತದಿಂದ ವ್ಯಕ್ತಪಡಿಸುತ್ತಾರೆ. ದೇವತೆಗಳಿಗೆ ಮಹದೈಶ್ವರ್ಯವಿರುವುದರಿಂದ ಅವರು ಏನುಏನು ಬಯಸುತ್ತಾರೋ ಅದನ್ನು ಅನಾಯಾಸವಾಗಿ ಮಾಡುತ್ತಾರೆ. ಪ್ರಕೃತ ವಾಸ್ತೋಷ್ಪತಿಯೂ ಈ ಸಾಮರ್ಥ್ಯದಿಂದ ಸಕಲರೂಪ ಪ್ರವೇಶಮಾಡಿರುವುದು ಸಂಗತವಾಗಿದೆ. ದೇವತೆಗೆ ಸಾಮರ್ಥ್ಯಾಭಿವ್ಯಂಜಕವಾದ ಮಂತ್ರವು ಹೀಗಿದೆ.

ರೂಪಂ ರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನ-
ಸ್ತನ್ವಂ ಪರಿ ಸ್ವಾಂ । ತ್ರಿರ್ಯದ್ದಿವಃ ಪರಿ ಮುಹೂರ್ತಮಾಗಾತ್
ಸ್ವೈರ್ಮಂತ್ರೈರನೃತುಪಾ ಋತಾವಾ ॥

(ಋ. ಸಂ. ೩-೩-೨೦೩)

ಅಧಿಕೈಶ್ವರ್ಯವುಳ್ಳ ಇಂದ್ರನು ಯಾವ ಯಾವ ರೂಪವನ್ನು ಹೊಂದಬೇಕೆಂದು ಬಯಸುತ್ತಾನೋ ಆಯಾಯರೂಪವನ್ನು ಅತಿಶಯವಾಗಿ ಹೊಂದುತ್ತಾನೆ. ಅನೇಕ ರೂಪಗ್ರಹಣ ಸಾಮರ್ಥ್ಯದಿಂದ ಕೂಡಿದವನಾಗಿ ಈರೀತಿಯಾಗುತ್ತೇನೆ. ಈರೀತಿಯಾಗುತ್ತೇನೆಂದು ತನ್ನ ಶರೀರದಿಂದಲೇ ನಾನಾಶರೀರಗಳನ್ನು ಸೃಷ್ಟಿಸುತ್ತಾನೆ. ಇದನ್ನೇ "ಇಂದ್ರೋ ಮಾಯಾಭಿಃ ಪುರುರೂಪ ಈಯತೇ" ಇತ್ಯಾದಿ ಮಂತ್ರವರ್ಣಗಳು ಸ್ಪಷ್ಟಪಡಿಸುತ್ತವೆ ಇವನು ತನ್ನ ಶರೀರದಿಂದಲೇ ನಾನಾಶರೀರಗಳನ್ನು ನಿರ್ಮಾಣಮಾಡಿಕೊಂಡು, ತನ್ನ ಸ್ತುತಿರೂಪ ಆಹ್ವಾನದಿಂದ ಸಕಲ ಯಜಮಾನರ ಯಜ್ಞಗೃಹಗಳಲ್ಲಿ ಸನ್ನಿಹಿತನಾಗಿ ಯಾವಾಗಲೂ ಸೋಮಪಾನ ಮಾಡುತ್ತಾನೆ. ಹೀಗೆ ಯಜ್ಞ (ಸತ್ಯ) ವಿಶಿಷ್ಟನಾದ ಇಂದ್ರನು ದ್ಯುಲೋಕದಿಂದ ಒಂದೇ ಕ್ಷಣದಲ್ಲಿ ನಾನಾದೇಶಗಳಲ್ಲಿ ಆಗುವ ಯಜ್ಞಗಳಲ್ಲಿ ಸವನತ್ರಯದಲ್ಲಿಯೂ ಉಪಸ್ಥಿತನಾಗುತ್ತಾನೆ. ಹೀಗೆ ಅಚಿಂತ್ಯಪ್ರಭಾವನಾದುದರಿಂದ ಸರ್ವಕಾಲದಲ್ಲಿ, ಸರ್ವದೇಶಗಳಲ್ಲಿ, ಸಕಲರೂಪಗಳಲ್ಲಿ ಸನ್ನಿಹಿತನಾಗಲು ಯಾವ ಬಾಧಕವೂ ಇಲ್ಲ.

ವಾಚಸ್ಪತಿ ರ್ವಾಚಃ ಪಾತಾ ವಾ ಪಾಲಯಿತಾ ವಾ । ತಸ್ಯೈಷಾ ಭವತಿ ॥ ೧೭ ॥

ಕ್ರಮಪ್ರಾಪ್ತವಾದ ವಾಚಸ್ಪತಿಪದದ ನಿರ್ವಚನವನ್ನು ತೋರಿಸುತ್ತಾರೆ. ವಾಕ್‌ಪೂರ್ವಪದ. ಪತಿಃ ಉತ್ತರಪದ. ಪ್ರಾಣಸ್ವರೂಪದಿಂದ ವಾಕ್ಕನ್ನು ರಕ್ಷಿಸುವ ಇಂದ್ರನಿಗೆ ವಾಚಸ್ಪತಿಯೆಂದು ಹೆಸರು. ಮುಂದೆ ಉದಾಹರಿಸುವ ಮಂತ್ರವು ವಾಚಸ್ಪತಿ ಸ್ತುತಿಪ್ರತಿಪಾದಕವಾಗುತ್ತದೆ.

ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ॥ ೧ ॥

ಎಲೈ ವಾಸ್ತೋಷ್ಪತಿದೇವನೇ, ರೋಗನಾಶಕನಾದ ನೀನು ಅನೇಕ ವಿಧವಾದ ಸ್ವರೂಪಗಳನ್ನು ಹೊಂದುತ್ತ ನಮಗೆ ಮಿತ್ರನಾಗಿಯೂ, ಸುಖಕಾರಕನಾಗಿಯೂ ಆಗಿರು.

ವಾಸ್ತೋಷ್ಪತಿ ಶಬ್ದದ ನಿರ್ವಚನವನ್ನು ವಿವರಿಸುವದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ.

ವಾಸ್ತೋಷ್ಪತಿಃ । ವಾಸ್ತುರ್ವಸತೇರ್ನಿವಾಸಕರ್ಮಣಸ್ತಸ್ಯ ಪಾತಾ ವಾ ಪಾಲಯಿತಾ ವಾ ॥ ತಸ್ಯೈಷಾ ಭವತಿ ॥ ಅಮೀವಹಾ ವಾಸ್ತೋಷ್ಪತೇ ವಿಶ್ವಾರೂಪಾಣ್ಯಾವಿಶನ್ । ಸಖಾ ಸುಶೇವ ಏಧಿನಃ ॥

ಅಭ್ಯಮನಹಾ ವಾಸ್ತೋಷ್ಪತೇ ಸರ್ವಾಣಿ ರೂಪಾಣ್ಯಾವಿಶನ್ ಸಖಾ ನಃ ಸುಸುಖೋ ಭವ । ಶೇವ ಇತಿ ಸುಖನಾಮ ಶಿಷ್ಯತೇರ್ವಕಾರೋ ನಾಮಕರಣೋಽನ್ತಸ್ಥಾನ್ತರೋಪಲಿಂಗೀ । ವಿಭಾಷಿತಗುಣಃ ಶಿವಮಿತ್ಯಪ್ಯಸ್ಯ ಭವತಿ । ಯದ್ರೂಪಂ ಕಾಮಯತೇ ತತ್ತದ್ದೇವತಾ ಭವತಿ । ರೂಪಂ ರೂಪಂ ಮಘವಾ ಬೋಭವೀತಿ ಇತ್ಯಪಿ ನಿಗಮೋ ಭವತಿ ॥

(ನಿ· ೧೦-೧೭)

**ವಾಸ್ತು** ಶಬ್ದವು **ವಸ್**—ವಾಸಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಶಬ್ದಕ್ಕೆ ವಾಸಮಾಡುವ ಗೃಹವೆಂದರ್ಥವಿರುವುದು. ಪತಿಃ ಎಂದರೆ ಸ್ವಾಮಿಯು ಅಥವಾ ರಕ್ಷಕನು. ಆದ್ದರಿಂದ ವಾಸ್ತೋಷ್ಪತಿ ಯೆಂದರೆ ವಾಸಮಾಡುವ ಗೃಹಕ್ಕೆ ಸ್ವಾಮಿಯು ಅಥವಾ ಆದರ ಸಂರಕ್ಷಕನು ಎಂದರ್ಥವು. ಈ ಶಬ್ದದ ಪ್ರಯೋಗವನ್ನು ವಿವರಿಸುವುದಕ್ಕಾಗಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿರುವರು.

ಎಲೈ ಗೃಹಾಧಿಪತಿಯೇ, ನೀನು ರೋಗಗಳ ನಾಶಕನು. ನೀನು ನಾನಾ ರೂಪಗಳನ್ನು ಧರಿಸಲು ಶಕ್ತನಾಗಿದ್ದೀಯೆ. ನೀನು ನಮಗೆ ಯಾವಾಗಲೂ ಸುಖಕರನಾದ ಎಂದರೆ ಹಿತಕಾರಿಯಾದ ಸ್ನೇಹಿತನಾಗಿರು ಎಂದು ಈ ಮಂತ್ರದ ಅರ್ಥವು. **ಶೇವ** ಎಂಬ ಶಬ್ದಕ್ಕೆ ಸುಖವೆಂದರ್ಥವು. ಈ ಶಬ್ದವು **ಶಿಷ್** ಎಂಬ ಧಾತುವಿಗೆ **ವ** ಎಂಬ ಪ್ರತ್ಯಯವು ಸೇರಿ **ಶಿವ** ಎಂದಾಗಿ ಅನಂತರ ಶಿಕಾರಕ್ಕೆ ಗುಣ ಬಂದು **ಶೇ** ಎಂದಾಗಿರುವುದು. ಎಂದರೆ **ಶೇವ** ಎಂಬ ರೂಪವು ಸಿದ್ಧಿಸುವುದು. **ಶಿವ** ಎಂಬ ಶಬ್ದವೂ ಇದೇ ಧಾತುವಿನಿಂದ ನಿಷ್ಪನ್ನವಾಗಿದೆ.

ಈ ವಾಸ್ತೋಷ್ಪತಿಯಾದ ದೇವನು ಯಾರು ಎಂದರೆ ಈ ದೇವನಿಗೆ ರೋಗರುಜಿನಗಳನ್ನು ಗುಣಪಡಿಸುವ ಶಕ್ತಿಯಿರುವುದರಿಂದ ವಾಸ್ತೋಷ್ಪತಿಯೆಂದರೆ ರುದ್ರನೆಂದು ಕೆಲವರು ಹೇಳುವರ. ದೇವತೆಗಳು ತಮಗೆ ಯಾವ ರೂಪವನ್ನು ಧರಿಸಬೇಕೆಂದು ಇಷ್ಟಬಂದರೆ ಆಯಾ ರೂಪಗಳನ್ನು ಧರಿಸಬಲ್ಲರು. ಈ ವಿಷಯದಲ್ಲಿ **ರೂಪಂರೂಪಂ ಮಘವಾ ಬೋಭವೀತಿ** ಎಂಬ ಶ್ರುತಿವಾಕ್ಯವೇ ಉದಾಹರಣೆಯಾಗಿರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡವು ಸಮಾಪ್ತವಾಗಿದೆ.

◆◆◆◆◆◆◆◆

## ಅಥ ಅಷ್ಟದಶಖಂಡಃ

### ಹದಿನೆಂಟನೆಯ ಖಂಡವು

ಪುನರೇಹಿ ವಾಚಸ್ಪತೇ ದೇವೇನ ಮನಸಾ ಸಹ । ವಸ್ತೋೇಷ್ಪತೇ ನಿರಾಮಯ ಮಯ್ಯೇವ ತನ್ವಂ ೧ ಮಮ ॥ ಇತಿ ಸಾ ನಿಗದವ್ಯಾಖ್ಯಾತಾಪಾಂನಪಾತ್ತನೂನಪ್ತ್ರಾ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೧೮ ॥

ಪುನರೇಹಿ ವಾಚಸ್ಪತೇ ದೇವೇನ ಮನಸಾ ಸಹ ॥ ವಾಸ್ತೋೇಷ್ಪತೇ
ನಿರಾಮಯ ಮಯ್ಯೇವ ತನ್ವಂ ಮಮ ॥ ಇತಿ ನಿಗದವ್ಯಾ-
ಖ್ಯಾತಾ॥

(ಅ. ಸಂ. ೧-೧-೨) ((ಋ. ಸಂ. ೧೦-೬-೧೩-೭)

ವಾಚಸ್ಪತಿಸ್ತುತಿ ಪ್ರತಿಪಾದಕ ಮಂತ್ರವನ್ನು ಉದಹರಿಸುತ್ತಾರೆ. ಪ್ರಾಣದಿಂದ ವಿಯೋಗಹೊಂದುವವನಂತಿರುವ ತನ್ನನ್ನು ನೋಡಿ ಸ್ತುತಿಸುವವನೊಬ್ಬನು ಪ್ರಾಣಾತ್ಮನಾದ ವಾಚಸ್ಪತಿಯನ್ನು ಕುರಿತು ಪ್ರಾರ್ಥಿಸುತ್ತಾನೆ. ವಾಚಕಸ್ಪತಿಯೇ ಪ್ರಾಣ ದೇವನೇ ಸರ್ವೇಂದ್ರಿಯ ವ್ಯಾಪಾರಪ್ರಕಾಶಕವಾದ ಮನಸ್ಸಿನೊಡನೆ ತಿರುಗಿ ನನ್ನ ಶರೀರವನ್ನು ಪ್ರವೇಶಿಸು. ವಾಸ್ತೋೇಷ್ಪತಿಯೇ ಅನ್ನಧನಾಧಿಪನೇ ನನ್ನಲ್ಲಿಯೇ ಇದ್ದು ಈ ನನ್ನ ಶರೀರವನ್ನು ಉಲ್ಲಾಸಗೊಳಿಸು. ನನ್ನ ಶರೀರವನ್ನು ಪ್ರವೇಶಿಸು. ನನ್ನನ್ನು ಬಿಟ್ಟು ಹೋಗಬೇಡ. ಪಾಠಮಾತ್ರದಿಂದಲೇ ಅರ್ಥವಾಗುವುದರಿಂದ ಅರ್ಥವನ್ನು ವಿವರಿಸಿಲ್ಲ.

ಅಪಾನ್ನಪಾತ್ ತನೂನಪ್ತ್ರಾ ವ್ಯಾಖ್ಯಾತಃ । ತಸ್ಯೈಷಾ ಭವತಿ ॥ ೧೮ ॥

ಕ್ರಮಪ್ರಾಪ್ತವಾದ ಅಪಾನ್ನಪಾತ್‌ಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ತನೂನಪ್ತೃಶಬ್ದದಿಂದ ವ್ಯಾಖ್ಯಾತ ವಾಗಿದೆ. ಮುಂದೆ ಹೇಳುವ ಮಂತ್ರವು ತನೂನಪಾತ್ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಹದಿನೆಂಟನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕೋನವಿಂಶತಿ ಖಂಡಃ

### ಹತ್ತೊಂಬತ್ತನೆಯ ಖಂಡವು

ಯೋ ಅನಿಧ್ಮೋ ದೀದಯದಪ್ಸ್ವಂ ೧ ತರ್ಯಂ ವಿಪ್ರಾಸ ಈಳತೇ ಅಧ್ವರೇಷು । ಅಪಾಂನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ

(ಋ. ಸಂ. ೧೦-೩೦-೪) ॥ ಯೋಽನಿಧ್ಮೋ ದೀದಯದ್ದ್ವೀ ಪ್ಯತೇಽಭ್ಯಂತರಮಪ್ಸು ಯಂ ಮೇಧಾವಿನಃ ಸುವಂತಿ ಯಜ್ಞೇಷು ಸೋಽಪಾಂನಪಾನ್ಮಧುಮತಾಪೋ ದೇಹ್ಯಭಿಷ-ವಾಯ ಯಾಭಿರಿಂದ್ರೋ ವರ್ಧತೇ ವೀರ್ಯಾಯ ವೀರಕರ್ಮಣೇ ಯಮೋ ಯಚ್ಛ-ತೀತಿ ಸತಸ್ತಸ್ಯೈಷಾ ಭವತಿ ॥ ೧೯ ॥

> ಯೋ ಅನಿಧ್ಮೋ ದೀದಯದ ಪ್ಸ್ವಂತರ್ಯಂ ವಿಪ್ರಾಸ ಈಳತೇ
> ಅಧ್ವರೇಷು ॥ ಅಪಾನ್ನಪಾನ್ಮಧುಮತೀರಪೋದಾ ಯಾಭಿ-
> ರಿಂದ್ರೋ ವಾವೃಧೇ ವೀರ್ಯಾಯ ॥
>
> (ಋ. ಸಂ. ೭-೭-೨೪)

ತನೂನಪಾತ್ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ತನೂನಪಾದ್ದೇವತೆಯೇ ನೀನು ಮೇಘ ಸ್ಥಾನದಲ್ಲಿ ಕಟ್ಟಿಗೆ ಇಲ್ಲದೆ ವಿದ್ಯುತ್ ಪ್ರಕಾಶವನ್ನುಂಟುಮಾಡುವಿ. ಮೇಧಾವಿಗಳಾದ ಋತ್ವಿಗ್‌ಜನರು ಯಜ್ಞದಲ್ಲಿ ಸ್ತುತಿಸುತ್ತಾರೆ. ಮಧುರಸದಿಂದ ಕೂಡಿದ ನೀರನ್ನು ನಮಗೆ ಕೊಡು. ಸೋಮಮಿಶ್ರಿತವಾದ ನೀರಿನಿಂದ ಈಶ್ವರನಾದ ನೀನು ವೀರಕರ್ಮಕ್ಕೋಸ್ಕರ ಅಭಿವೃದ್ಧನಾಗು.

> ಯೋಽನಿಧ್ಮೋ ದೀದಯದ್ದೀಪ್ಯಸೇಽಭ್ಯಂತರಮಪ್ಸು ಯಂ ಮೇಧಾ-
> ವಿನಃ ಸ್ತುವಂತಿ । ಯಜ್ಞೇಷು ಸೋಽಪಾನ್ಮಪಾನ್ನಧುಮತೀರಪೋ
> ದೇಹ್ಯಭಿಷವಾಯ । ಯಾಭಿರಿಂದ್ರೋ ವರ್ಧತೇ ವೀರ್ಯಾಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಪಾನ್ನಪಾತ್ ಇಂದ್ರಪರ್ಯಾಯದಿಂದ ಸ್ಪಷ್ಟವಾಗಿ ಹೇಳಿರುತ್ತಾರೆ.

> ಯಮೋ ಯಚ್ಛತೀತಿ ಸತಸ್ತಸ್ಯೈಷಾ ಭವತಿ ॥ ೧೯ ॥

ಕ್ರಮಪ್ರಾಪ್ತವಾದ ಯಮಪದದ ನಿರ್ವಚನವನ್ನು ತೋರಿಸುತ್ತಾರೆ. ಯಮ ಉಪರಮೇ ಧಾತು. ಇವನು ಸಕಲಪ್ರಾಣಿಗಳನ್ನು ಜೀವಿತದಿಂದ ಶಾಂತಿಗೊಳಿಸುತ್ತಾನೆ. ಜೀವನವ್ಯಾಪಾರವನ್ನು ಕೊನೆಗಾಣಿಸುತ್ತಾನೆ. ಪಚಾದಿಗಣದಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಈ ಕಾರ್ಯ ಬಲವಂತನಿಗೆ ಸಾಧ್ಯವಾದುದರಿಂದ ಬಲಕೃತಿ ಇಂದ್ರನ ಕಾರ್ಯವೆಂದು ಪ್ರಸಿದ್ಧವಾದುದರಿಂದ ಮಧ್ಯಮನಾಗುತ್ತಾನೆ. ಕೆಲವರು ಸ್ತುತಿಸುವವರ ಇಷ್ಟಾರ್ಥವನ್ನು ಕೊಡುವವನೆಂದು ಅವಯವಾರ್ಥವನ್ನು ಹೇಳುತ್ತಾರೆ. ಮುಂದೆ ಹೇಳುವ ಮಂತ್ರವು ಯಮಸ್ತುತಿಯನ್ನು ಪ್ರತಿಪಾದಿಸುತ್ತದೆ.

> ಯೋ ಅನಿಧ್ಮೋ ದೀದಯದಪ್ಸ್ವಂತರ್ಯಂ ವಿಪ್ರಾಸ ಈಳತೇ ಅಧ್ವರೇಷು ।
> ಅಪಾಂ ನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ ॥ ೪ ॥

ಎಲೈ ಅಪಾಂನಪಾತ್ಸಂಜ್ಞಕನಾದ ದೇವನೇ, ಯಾವ ನೀನು ಉದಕಗಳ ನಡುವೆ (ಮೇಘಪ್ರದೇಶದಲ್ಲಿ) ಕಟ್ಟಿಗೆಗಳಾವುವೂ ಇಲ್ಲದೆ ಪ್ರಕಾಶಿಸುವೆಯೋ ಮತ್ತು ಯಾವ ನಿನ್ನನ್ನು ಮೇಧಾವಿಗಳಾದ ಋತ್ವಿಕ್ಕುಗಳು ಯಜ್ಞಗಳಲ್ಲಿ ಸ್ತುತಿಸುವರೋ ಅಂತಹ ನೀನು ಇಂದ್ರನಿಗೆ ವೀರ್ಯಕರ್ಮವನ್ನಾಚರಿಸಲು ಪುಷ್ಟಿಯನ್ನು ಕೊಡತಕ್ಕದ್ದೂ, ಮಾಧುರ್ಯದಿಂದ ಕೂಡಿದ ದೂ ಸೋಮಕ್ಕೆ ಸೇರಿಸಲು ಯೋಗ್ಯವಾದುದೂ ಆದ ಉದಕಗಳನ್ನು ನಮಗೆ ಕೊಡು.

ಅಪಾಂನಪಾತ್ ಶಬ್ದದ ನಿರ್ವಚನವನ್ನು ಹೇಳುವಾಗ ಅದಕ್ಕೆ ಉದಾಹರಣೆಯಾಗಿ ಈ ಋಕ್ಕಿನ ನಿರುಕ್ತವನ್ನು ಹೇಳಿದ್ದಾರೆ.

ಯೋಽನಿಧ್ಮೋ ದೀದಯದಪ್ಸ್ವಂತರ್ಯಂ ವಿಪ್ರಾಸ ಈಳತೇ ಅಧ್ವರೇಷು ... 

(ನಿ. ೧೦-೧೯)

ಅಪಾಂನಪಾತ್ ಎಂದರೆ ನೀರಿನ ಮಧ್ಯದಲ್ಲಿರುವ ಅಥವಾ ಉತ್ಪನ್ನವಾಗುವ ಅಗ್ನಿಯು ಅಥವಾ ಅಗ್ನಿಯರೂಪಾಂತರವು. ಈ ಅಪಾಂನಪಾತ್ ಎಂಬ ದೇವನು ನೀರಿನ ಮಧ್ಯದಲ್ಲಿ ಇಧ್ಮಾದಿಗಳ (ಕಟ್ಟಿಗೆ ಅಥವಾ ಕಾಷ್ಠಗಳ) ಸಹಾಯವಿಲ್ಲದೆ ಬೆಳಗುತ್ತಾನೆ. ಇಂತಹ ಗುಣವಿಶಿಷ್ಟನಾದ ದೇವನನ್ನು ಮೇಧಾವಿಗಳಾದ ಋತ್ವಿಗಾದಿಜನರು ಯಜ್ಞಾದಿಗಳಗೆ ಸ್ತುತಿಸುತ್ತಾರೆ. ಎಲೈ ಅಪಾಂನಪಾದ್ದೇವತೆಯೇ, ಇಂದ್ರನ ಶಕ್ತಿವೃದ್ಧಿಗಾಗಿ ನಾವು ಸೋಮರಸವನ್ನು ಹಿಂಡುವವರಾಗಿದ್ದೇವೆ. ಅದಕ್ಕಾಗಿ ನಮಗೆ ಸಿಹಿಯಾದ ಮತ್ತು ಮಧುವಿನಂತೆ ರುಚಿಕರವಾದ ಉದಕಗಳನ್ನು ಅನುಗ್ರಹಿಸು ಎಂದು ನಿರ್ವಚನಾಭಿಪ್ರಾಯವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ಹತ್ತನೆಯ ಅಧ್ಯಾಯದಲ್ಲಿ
ಹತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ವಿಂಶತಿಖಂಡಃ

## ಇಪ್ಪತ್ತನೆಯ ಖಂಡವು

ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಮ್ । ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ (ಋ. ಸಂ. ೧೦-೧೪-೧) ॥ ಪರೇಯಿವಾಂಸಂ ಪರ್ಯಾಗತವಂತಂ ಪ್ರವತ ಉದ್ವತೋ

ನಿವತ ಇತ್ಯವತಿರ್ಗತಿಕರ್ಮಾ ಬಹುಭ್ಯಃ ಪಂಥಾನಮನುಪಸ್ಪಾಶಾನಂ ದುವಸ್ಯೇತಿ ದುವಸ್ಯತೀ ರಾಧ್ನೋತಿಕರ್ಮಾಗ್ನಿರಪಿ ಯಮ ಉಚ್ಯತೇ ತಮೇತಾ ಋಚೋಽನುಪ್ರವದಂತಿ ॥ ೨೦॥

ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನು-
ಪಸ್ಪಶಾನಮ್ । ವೈವಸ್ವತಂ ಸಂಗಮನಂ ಜನಾನಾಂ ಯಮಂ
ರಾಜಾನಂ ಹವಿಷಾ ದುವಸ್ಯ ॥

(ಋ. ಸು. ೭-೬-೧೪)

ಯಮಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಅಂತರಾತ್ಮನೇ ಅಥವಾ ಯಜಮಾನನೇ ಪಿತೃಸ್ವಾಮಿಯಾದ, ಪ್ರಕೃಷ್ಟಗತಿಯುಳ್ಳ ಮನುಷ್ಯರನ್ನೂ ಊರ್ಧ್ವದೇಶಗಾಮಿಗಳಾದ ದೇವತೆಗಳನ್ನೂ ಅಧೋಗಾಮಿಯಾದ ತಿರ್ಯಕ್‌ಜಂತು ಗಳನ್ನೂ ಮರಣಾನಂತರ ಆಯಾಯಭೋಗೋಚಿತಲೋಕಕ್ಕೆ ಒಯ್ಯುವ, ಪುಣ್ಯವಂತರನ್ನೂ ಪಾಪಿಷ್ಠರನ್ನೂ ಕರ್ಮೋಚಿತ ಮಾರ್ಗಗಳಲ್ಲಿ ಯಾವಭೇಧವಿಲ್ಲದೆ ಹೋಗುವಂತೆ ಮಾಡುವ, ಹುಟ್ಟಿದೊಡನೆಯೇ ಪ್ರಾಣಿಯಕರ್ಮವನ್ನು ತಿಳಿಯುವ; ಸೂರ್ಯಪುತ್ರನಾದ ಯಮನನ್ನು ಪುರೋಡಾಶಾದಿಗಳಿಂದ ಸೇವಿಸಿರಿ.

ಪರೇಯಿವಾಂಸಂ ಪರ್ಯಾಗತವಂತಂ ಪ್ರವತ ಉದ್ವತೋ ನಿವತ
ಇತ್ಯವತಿರ್ಗತಿಕರ್ಮಾ ಬಹುಭ್ಯಃ ಪಂಥಾನಮನು ಪಸ್ಪಾಶಯ-
ಮಾನಂ ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ
ಹವಿಷಾ ದುವಸ್ಯೇತಿ । ದುವಸ್ಯತೀ ರಾಧ್ನೋತಿಕರ್ಮಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪ್ರವತಃ ಎಂಬಲ್ಲಿ ಉದ್ವತೇ, ನಿವತಃ ಎಂದು ಅಧ್ಯಾಹಾರಮಾಡಿಕೊಂಡಿರುತ್ತಾರೆ. ಅವ ಧಾತುವಿಗೆ ರಕ್ಷಣಗತಿ ಕಾಂತಿ ಪ್ರೀತ್ಯಾದಿ ಇಪ್ಪತ್ತು ಅರ್ಥ ಹೇಳಿವೆ. ಇಲ್ಲಿ ಗತ್ಯರ್ಥ ಅಂಗೀಕೃತವಾಗಿದೆ. ಛಾಂದಸವಾಗಿ ಆದಿಯ ಅಕಾರಕ್ಕೆ ಲೋಪ ಬಂದಿದೆ. ಪ್ರಕೃಷ್ಟಗಮನವುಳ್ಳವರು ಎಂದರೆ ಮೇಲೆ ಹೋಗುವ ದೇವತೆಗಳು, ಕೆಳಗೆಹೋಗುವ ತಿರ್ಯಕ್‌ಪ್ರಾಣಿಗಳೆಂದರ್ಥ. ಅನುಪಸ್ಪಶಾನಂ, ಉಪ ಉಪಸರ್ಗ. ಸ್ಪಶ-ಬಾಧನಸ್ಪರ್ಶನಯೋಃ ಧಾತು. ಲಟ್‌ಬಂದಾಗ ಅದಕ್ಕೆ ಶಾನಜಾದೇಶ. ನಞಾಸಮಾಸದಲ್ಲಿ ನುಡಾಗಮ. ರಾಧ್ನೋತಿಕರ್ಮಾ ಅಂದರೆ ಪರಿಚರಣಾರ್ಥವೆಂದರ್ಥ.

ಅಗ್ನಿರಪಿ ಯಮ ಉಚ್ಯತೇ । ತಮೇತಾ ಋಚೋಽನು
ಪ್ರವದಂತಿ ॥ ೨೦ ॥

ಶಬ್ದಸಾರೂಪ್ಯದಿಂದ ಅಥವಾ ಪ್ರಸಂಗಾನುಸಾರವಾಗಿ ವಿಚಾರಾಂತರವನ್ನು ವಿವರಿಸುತ್ತಾರೆ. ಯಮಶಬ್ದದಿಂದ ಅಗ್ನಿಯೂ ಅಭಿಹಿತನಾಗುತ್ತಾನೆ. ಅಗ್ನಿಯೂ ಯಮಶಬ್ದದಿಂದ ವಾಚ್ಯನಾಗುತ್ತಾನೆಂಬುದರಲ್ಲಿ ಮುಂದೆ ಹೇಳುವ ಋಙ್ಮಂತ್ರವು ಪ್ರತಿ ಪಾದಿಸುತ್ತದೆ.

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ। ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥ ೧ ॥**

ಎಲೈ ಯಜಮಾನನೇ, ಉತ್ಕೃಷ್ಟವಾದ ಕರ್ಮಗಳನ್ನಾಚರಿಸಿದ ಪುರುಷರನ್ನು ಆಯಾ ಉತ್ತಮ ಪ್ರದೇಶಗಳಿಗೆ ಮರಣಾನಂತರ ಕರೆದೊಯ್ಯುವವನೂ, ಅನೇಕ ಪುಣ್ಯಕರ್ಮಿಗಳಿಗೆ ಸ್ವರ್ಗಾದಿ ಮಾರ್ಗಗಳನ್ನು ಹಿಂಸೆಯಿಲ್ಲದೇ ಉಂಟುಮಾಡ ತಕ್ಕವನೂ, ವಿವಸ್ವಂತನ ಪುತ್ರನೂ, ಪಾಪಿಗಳನ್ನು ಅವರಿಗೆ ಯೋಗ್ಯವಾದ ಸ್ಥಾನಕ್ಕೆ ಸೇರಿಸುವವನೂ, ಪಿತೃಗಳಿಗೆಪ್ರಭುವೂ ಆದ ಯಮನನ್ನು ಹವಿಸ್ಸುಗಳಿಂದ ಉಪಚರಿಸು.

ಋಮಂ— ಯಮನು ಯಾರು, ಅವನ ಕರ್ತವ್ಯವೇನು ಎಂಬ ವಿಷಯವನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಯಾಸ್ಕರು ಯಮ ಶಬ್ದದ ಅರ್ಥವನ್ನು ವಿವರಿಸುತ್ತಾ—

**ಯಮಃ । ಯಮೋ ಯಚ್ಛತೀತಿ ಸತಃ । ತಸ್ಯೈಷಾ ಭವತಿ ।**

(ನಿ. ೧೦–೨೦)

ನಿಯಮಿಸು, ಹತೋಟಿಯಲ್ಲಿಡು ಎಂಬರ್ಥವುಳ್ಳ ಯಮ್ ಧಾತುವಿನಿಂದ ಯಮ ಶಬ್ದವು ನಿಷ್ಪನ್ನವಾಗಿದೆ. ಯಮನು ಪಿತೃ ಲೋಕಕ್ಕೆ ಪಾಲಕನಾಗಿ ತನಗೆ ಸೇರಿದ ಪಿತ್ರಾದಿಗಳನ್ನು ನಿಯಮಿಸಿ ಅಂಕೆಯಲ್ಲಿಟ್ಟುಕೊಳ್ಳುವವನು. ಆದ್ದರಿಂದ ಇವನಿಗೆ ಯಮನೆಂದು ಹೆಸರು ಎಂದು ನಿರ್ವಚನವನ್ನು ಹೇಳಿದಾರೆ. ಆದರೆ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು, ಯಮ ಶಬ್ದಕ್ಕೆ ಬೇರೆ ಅರ್ಥವನ್ನು ಮಾಡಿದಾರೆ— **ಯಮಃ । ಯಚ್ಛತಿ ಉಪರಮಯತಿ ಜೀವಿತಾತ್ ಸರ್ವಂ ಭೂತಗ್ರಾಮಮಿತಿ ಯಮಃ ।** ಭೂಮಿಯ ಮೇಲಿರುವ ಸರ್ವ ಪ್ರಾಣಿಗಳ ಜೀವಿತವನ್ನು ಕೊನೆಗಾಣಿಸುವವನಾದ್ದರಿಂದ ಎಂದರೆ— ಅವರಿಗೆ ಮರಣವನ್ನುಂಟುಮಾಡುವವನಾದ್ದರಿಂದ ಇವನಿಗೆ ಯಮನೆಂದು ಹೆಸರು ಎಂದು ಅರ್ಥ ವಿವರಣೆ ಮಾಡಿದಾರೆ. ಈ ಯಮಶಬ್ದವಿರುವ ಋಕ್ಕನ್ನು ಉದಾಹರಣೆಗಾಗಿ ಕೊಡುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಆರಿಸಿಕೊಂಡು ಅದಕ್ಕೆ ನಿರ್ವಚನವನ್ನು ಹೇಳಿದಾರೆ—

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।**
**ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥**

**ಪರೇಯಿವಾಂಸಂ ಪರ್ಯಾಗತವಂತಂ ಪ್ರವತ ಉದ್ವತೋ ನಿವತ ಇತಿ । ಅವತಿರ್ಗತಿಕರ್ಮಾ । ಬಹುಭ್ಯಃ ಪಂಥಾನಮನುಪಸ್ಪಾಶಯಮಾನಂ ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯೇತಿ । ದುವಸ್ಯತೀ ರಾಧ್ನೋತಿಕರ್ಮಾ ॥**

(ನಿ. ೧೦–೨೦)

ಈ ಋಕ್ಕಿನಲ್ಲಿ ಋಷಿಯು ಯಜಮಾನನನ್ನು ಅಥವಾ ತನ್ನ ಅಂತರಾತ್ಮನನ್ನು ಉದ್ದೇಶಿಸಿ ಈ ರೀತಿ ಹೇಳುವನು—ಎಲೈ ಯಜಮಾನನೇ, ಯಮನನ್ನುದ್ದೇಶಿಸಿ ಹವಿಸ್ಸನ್ನರ್ಪಿಸಿ ಪರಿಚರಿಸು. ಈ ಯಮನು ಸುತ್ತಲೂ ಬರುವನು ಎಂದರೆ ಪ್ರಾಣಿಗಳು ಎಲ್ಲೇ ಇರಲಿ ಅಲ್ಲಿಗೆಲ್ಲಾ ಮರಣಕಾಲದಲ್ಲಿ ಬಂದೇ ಬರುವನು. ಮತ್ತು ಈ ಋಕ್ಕಿನಲ್ಲಿ ಪ್ರವತಃ ಎಂಬ ಶಬ್ದವು ಮಾತ್ರ

ಇರುವುದರಿಂದ ಇದಕ್ಕೆ ಸಂಬಂಧಿಸಿದಂತೆ **ಉದ್ವತಃ ನಿವತಃ** ಎಂಬ ಎರಡು ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪ್ರವತಃ ಎಂದರೆ ಮನುಷ್ಯರು, ಉದ್ವತಃ ಎಂದರೆ ದೇವತೆಗಳು, ನಿವತಃ ಎಂದರೆ ತಿರ್ಯಗ್ಜಂತುಗಳು. ಈ ದೇವಮನುಷ್ಯ ತಿರ್ಯಗ್ಜಂತುಗಳನ್ನು ಅವರವರ ಕರ್ಮಾನುಸಾರವಾಗಿ ಅವರು ಹೊಂದಲು ಯೋಗ್ಯವಾದ ಸ್ಥಾನಗಳನ್ನು (ಲೋಕಗಳನ್ನು) ಸೇರಿಸುವುದಕ್ಕಾಗಿ ಮರಣಾನಂತರ ಅವರ ಪ್ರೇತಶರೀರಗಳನ್ನು ಕೊಂಡೊಯ್ಯುವನು. **ಅನುಪಸ್ಪಶಾನಂ** ಎಂದರೆ, ಈ ಪ್ರಾಣಿಗಳು ಇಂತಹ ಕರ್ಮವನ್ನಾಚರಿಸಿರುವುದರಿಂದ ಇವರಿಗೆ ತಕ್ಕ ಫಲವನ್ನು ಕೊಡುವುದಕ್ಕಾಗಿ ಅವರಿಗೆ ನಾನಾವಿಧ ರೋಗಾದಿಗಳ ಮೂಲಕ ಮರಣವನ್ನುಂಟುಮಾಡಿ ಮೃತರಾದಮೇಲೆ ಅವರ ಪ್ರೇತ ಶರೀರಗಳನ್ನು ಪಾಶದಿಂದ ಬಿಗಿದು ಪುಣ್ಯ ಮಾಡಿದರೆ ಸ್ವರ್ಗಾದಿ ಉತ್ತಮ ಲೋಕಗಳಿಗೂ, ಪಾಪ ಮಾಡಿದ್ದರೆ ನರಕಾದಿ ಸ್ಥಾನಗಳಿಗೂ ನಾನಾವಿಧ ಮಾರ್ಗಗಳಿಂದ ಒಯ್ಯುವನು ಎಂದರ್ಥವು. **ಸಂಗಮನಂ ಜನಾನಾಂ** ಎಂದರೆ ಜನರ ವಿಷಯದಲ್ಲಿ ಪಕ್ಷಪಾತ ಮಾಡದೆ ಅವರ ಕರ್ಮಾನುಗುಣವಾಗಿ ಅವರಿಗೆ ಫಲವನ್ನು ಕೊಡುವವನು. ಇಂತಹ **ಯಮಂ ರಾಜಾನಂ** ಪಿತೃಗಳ ರಾಜನಾದ ಯಮನನ್ನು ಹವಿರಾದಿಗಳಿಂದ ಉಪಚರಿಸಿ ಸೇವಿಸು ಎಂದು ನಿರ್ವಚನದ ಅಭಿಪ್ರಾಯವು

**ಅಗ್ನಿರಪಿ ಯಮ ಉಚ್ಯತೇ । ತನೇತಾ ಋಚೋಽನುಪ್ರವದಂತಿ ।** (ನಿ. ೧೦-೨೦)

ಕೆಲವು ಸಂದರ್ಭಗಳಲ್ಲಿ ಅಗ್ನಿಯನ್ನು ಯಮನೆಂದು ಕರೆಯುವ ರೂಢಿ ಇದೆ. ಈ ವಿಷಯದಲ್ಲಿ ಈ ಕೆಳಗಿನ ಋಕ್ಕುಗಳು ಈ ಅಭಿಪ್ರಾಯವನ್ನು ಸ್ಪಷ್ಟಪಡಿಸುವವು ಎಂದು ಹೇಳಿ ಉದಾಹರಣೆಗಾಗಿ ಸೇನೇವ ಸೃಷ್ಟಾ ಎಂಬ ಋ. ಸಂ. ೧-೬೬-೭ ಮತ್ತು ೮ ನೇ ಋಕ್ಕುಗಳನ್ನು ಕೊಟ್ಟು ಅವುಗಳಿಗೂ ನಿರ್ವಚನವನ್ನು ಹೇಳಿದಾರೆ.

**ಪರೇಯಿವಾಂಸಂ**— ಈ ಶಬ್ದಕ್ಕೆ ಯಾಸ್ಕರು ಮಾಡಿರುವ ಅರ್ಥವಿವರಣೆಗೂ ಭಾಷ್ಯಕಾರರು ಮಾಡಿರುವ ಅರ್ಥ ವಿವರಣೆಗೂ ಬಹಳ ವ್ಯತ್ಯಾಸವಿದೆ. ಯಾಸ್ಕರು ಮಾಡಿರುವ ಅರ್ಥವನ್ನು ಈ ಋಕ್ಕಿನ ನಿರುಕ್ತದಲ್ಲಿ ವಿವರಿಸಲಾಗಿದೆ. ಅಲ್ಲಿ **ಪರೇಯಿವಾಂಸಂ** ಎಂದರೆ **ಪರ್ಯಾಪ್ತವಂತಂ**— ಸುತ್ತಲೂ ಎಂದರೆ ಎಲ್ಲಿದ್ದರೆ ಅಲ್ಲಿಂದ ಕರೆದುಕೊಂಡು ಹೋಗಿ ತಲಪಿಸುವ ಎಂಬರ್ಥವು ವಿವೃತವಾಗಿದೆ. ಆದರೆ ಭಾಷ್ಯಕಾರರು–**ಕ್ರಮೇಣ ಮರಣಾದೂರ್ಧ್ವಂ ಪ್ರಾಪಿತವಂತಂ** ಎಂದರೆ, ಮರಣಾನಂತರ ಮೃತಶರೀರದಿಂದ ಹೊರಟುಬರುವ ಪ್ರೇತವನ್ನು ಪರಲೋಕಕ್ಕೆ ಒಯ್ಯುವ ಎಂದು ಅರ್ಥವಿವರಣೆಮಾಡಿದ್ದಾರೆ.

ಇಲ್ಲಿ ಒಂದು ಸಂಶಯವು ತಲೆದೋರುವುದು. ಒಬ್ಬ ಪುರುಷನು ಮೃತನಾದ ಮೇಲೆ ಅವನನ್ನು ಪರಲೋಕಕ್ಕೆ ಕರೆದುಕೊಂಡು ಹೋಗುವುದೆಂದರೇನು ? ಶರೀರವೇ ನಾಶವಾದಾಗ ಕರೆದುಕೊಂಡುಹೋಗುವುದು ಯಾರನ್ನು ಎಂಬ ಪ್ರಶ್ನೆ ಏಳುವುದು. ಅದಕ್ಕೆ ಸಮಾಧಾನವೇನೆಂದರೆ-ಪುರುಷನು ಅಥವಾ ಪ್ರಾಣಿಯು ಮೃತವಾದ ಮೇಲೆ ಅವನ ಶರೀರ ಕ್ರಿಯೆಗಳೆಲ್ಲಾ ನಿಂತುಹೋಗಿ ಶರೀರವು ನಿಶ್ಚೇಷ್ಟಿತವಾಗುವುದು. ಅದು ಕ್ರಮೇಣ ಪಂಚಭೂತಗಳಾದ ಪೃಥಿವ್ಯಾದಿಗಳಲ್ಲಿ ಸೇರಿ ಹೋಗುವುದು. ಎಂದರೆ ಪಂಚಭೂತಗಳ ಸಂಯೋಗದಿಂದಲೇ ಉಂಟಾದ ಶರೀರವು ಕೊನೆಗೆ ಪಂಚಭೂತಗಳಲ್ಲಿಯೇ ಸೇರಿ ಹೋಗಿ ಅಂತರ್ಗತವಾಗುವುದು. ಪಂಚಭೂತಗಳೆಂದರೆ ಪೃಥಿವೀ, ಅಪ್ಪು, ತೇಜಃ, ವಾಯು, ಆಕಾಶ ಇವುಗಳಿಗೆ ಕ್ರಮವಾಗಿ ಘಟ್ಟಿ ಪದಾರ್ಥ, ದ್ರವರೂಪವಾದ ವಸ್ತು, ಶಾಖ, ಗಾಳಿ, ಅವಕಾಶ ಎಂಬರ್ಥಗಳನ್ನು ಇಲ್ಲಿ ಹೊಂದಿಸಿಕೊಳ್ಳಬೇಕು. ಈ ಐದು ವಿಧವಾದ ವಸ್ತುಗಳು ದೇಹದಲ್ಲಿರುವುದು ಎಲ್ಲರಿಗೂ ತಿಳಿದೇ ಇದೆ. ಚರ್ಮ, ಮಾಂಸ, ಮೂಳೆ, ಉಗುರು ಮೊದಲಾದ ಘಟ್ಟಿ ಪದಾರ್ಥಗಳು ಪೃಥಿವಿಯ ಅಂಶಗಳು. ಮರಣಾನಂತರ ಅವು ಮಣ್ಣಿನಲ್ಲಿಯೇ ಸೇರಿ ಮಣ್ಣೇ ಆಗುವುವು.

ರಕ್ತ, ಜೊಲ್ಲು ಮೊದಲಾದ ದ್ರವರೂಪದಲ್ಲಿರುವ ವಸ್ತುಗಳು ಅಪ್ಪಿನ (ಉದಕದ) ಅಂಶಗಳು. ಅವುಗಳು ಜಲದಲ್ಲಿ ಲೀನವಾಗುವುವು. ಶರೀರದಲ್ಲಿ ಮರಣಕಾಲದವರೆಗೂ ಇರುವ ಶಾಖವು (ಅಗ್ನಿಯು) ತೇಜಸ್ಸಿನಲ್ಲಿ ಅಥವಾ ಅಗ್ನಿಯಲ್ಲಿ ಬೆರೆತುಹೋಗುವುದು. ಆದ್ದರಿಂದ ಮೃತಶರೀರದಲ್ಲಿ ಶಾಖವಿರುವುದಿಲ್ಲ. ತಣ್ಣಗಿರುವುದು. ಮರಣಾನಂತರ ಉಚ್ಛ್ವಾಸನಿಃಶ್ವಾಸರೂಪವಾದ ವಾಯುಚಲನೆಯು ನಿಂತುಹೋಗಿ ಪ್ರಾಣಾದಿಪಂಚವಾಯುಗಳು ವಾಯುತತ್ತ್ವದಲ್ಲಿ ಎಂದರೆ ಬಾಹ್ಯಕಾಶದಲ್ಲಿ ಲೀನವಾಗುವುದು ಯಾರಿಗೂ ಗೋಚರವಾಗುವುದಿಲ್ಲ. ಈ ರೀತಿ ಮೃತ ಶರೀರದ ಭಾಗಗಳೆಲ್ಲಾ ಆಯಾತತ್ತ್ವಗಳಲ್ಲಿ ಸೇರಿಹೋದಮೇಲೆ ಏನೂ ಉಳಿಯುವುದಿಲ್ಲವೇ ಎಂದರೆ, ಉಳಿಯುತ್ತದೆ. ಪ್ರಾಣಿಯು ಅಥವಾ ಪುರುಷನು ಜೀವಿಸುತ್ತಿದ್ದ ಕಾಲದಲ್ಲಿ ಅವನ ಕ್ರಿಯಾ ವ್ಯಾಪಾರಗಳನ್ನು ಪ್ರೇರಿಸುತ್ತಾ ಚಕ್ಷುರಾದಿಜ್ಞಾನೇಂದ್ರಿಯಗಳ ವ್ಯಾಪಾರಾದಿಗಳನ್ನು ಗಮನಿಸುತ್ತಾ ಇದ್ದ ಚೇತನಾತ್ಮಕವಾದ ವಸ್ತುವೊಂದಿದ್ದಿತು. ವಸ್ತು ಎಂದರೆ ಇಲ್ಲಿ ಇಂದ್ರಿಯಗೋಚರವಾದ ಪಾರ್ಥಿವ ವಸ್ತುವಲ್ಲ. ಪಾರ್ಥಿವ ವಸ್ತುಗಳಿಗಿಂತ ಅತಿ ಸೂಕ್ಷ್ಮವಾಗಿ ಶರೀರವು ನಾಶವಾದರೂ ತಾನು ಮಾತ್ರ ನಾಶವಾಗದೇ ಇರುವುದು. ಇದನ್ನು ಆತ್ಮನೆಂದು ಕರೆಯುವರು, ಈ ಆತ್ಮನಿಗೆ ಪಾರ್ಥಿವಶರೀರನಾಶಾನಂತರ ಸೂಕ್ಷ್ಮವಾದ ಬೇರೊಂದು ಶರೀರವು ಪ್ರಾಪ್ತವಾಗುವುದು. ಪ್ರಾರಂಭ ದೆಶೆಯಲ್ಲಿ ಇದನ್ನು ಪ್ರೇತ ಶರೀರವೆಂದು ಕರೆಯುವರು. ಅದು ಸೂಕ್ಷ್ಮವಾಗಿರುವುದರಿಂದ ಅದನ್ನು ಬಾಹ್ಯಚಕ್ಷುಸ್ಸಿನಿಂದ ನೋಡಲಾಗುವುದಿಲ್ಲ. ಈ ಸೂಕ್ಷ್ಮ ಶರೀರದಲ್ಲಿ ಕರ್ಮೇಂದ್ರಿಯಗಳಿಲ್ಲದಿದ್ದರೂ ಜ್ಞಾನೇಂದ್ರಿಯ ಅಂಶಗಳಿರುವುವು. ಎಂದರೆ ಸುಖದುಃಖಾದಿಗಳ ಅನುಭವವಾಗುವುದು. ಭೂಮಿಯಮೇಲೆ ಜೀವಿಸಿದ್ದ ಕಾಲದಲ್ಲಿ ತಾನು ಅನುಭವಿಸಿದ ಸುಖದುಃಖಗಳ ಮತ್ತು ಬಂಧುಬಾಂಧವರ ವಿಷಯವಾದ ಪ್ರೀತಿದ್ವೇಷಗಳ ವಾಸನೆಯು (ವಾಸನೆಯೆಂದರೆ–ಸೂಕ್ಷ್ಮಾಂಶವು) ಈ ಶರೀರಕ್ಕೆ ಇದ್ದೇ ಇರುವುದು. ಆತ್ಮನು ಕೆಲವು ಕಾಲದವರೆಗೆ ಎಂದರೆ ಮೃತಶರೀರಕ್ಕೆ ಮಾಡುವ ಅಪರ ಕರ್ಮಾದಿಗಳು ಸಮಾಪ್ತಿಯಾಗುವವರೆಗೆ ಈ ಪ್ರೇತಶರೀರದಲ್ಲಿದ್ದು ಅನಂತರ ತನ್ನ ಕರ್ಮಾನುಸಾರವಾಗಿ ಬೇರೆಲೋಕಕ್ಕೆ ಹೋಗುವನು. ಆಗ ಈ ಪ್ರೇತಶರೀರಕ್ಕಿಂತಲೂ ಇನ್ನೂ ಸೂಕ್ಷ್ಮವಾದ ಶರೀರವು ಪ್ರಾಪ್ತಿಯಾಗುವುದು. ಆಯಾ ಲೋಕಗಳು ಯಾವರೀತಿ ಇರುವವೋ, ಅದರಲ್ಲಿ ವಾಸಿಸುವ ಪ್ರಾಣಿಗಳೂ ಅದೇ ವಿಧವಾದ ವಸ್ತುವಿನಿಂದ ನಿರ್ಮಿತವಾದ ಶರೀರವುಳ್ಳವುಗಳಾಗಿರುವುವು. ಪೃಥಿವಿಯಲ್ಲಿರುವಾಗ ಪೃಥಿವೀಸಂಬಂಧವಾದ ಸ್ಥೂಲ ವಸ್ತುಮಯವಾದ ಶರೀರಗಳೇ ಪ್ರಾಣಿಗಳಿರುವುವು. ಸ್ವರ್ಗನರಕಾದಿಗಳಲ್ಲಿಯೂ ಹಾಗೆಯೇ. ಸ್ವರ್ಗಲೋಕವು ಅತಿಸೂಕ್ಷ್ಮ ವಸ್ತು ನಿರ್ಮಿತವಾಗಿರುವುದರಿಂದ ಅಲ್ಲಿ ವಾಸಿಸುವ ದೇವ ಮನುಷ್ಯಾದಿಗಳಿಗೂ ಅತಿ ಸೂಕ್ಷ್ಮವಾದ ಶರೀರಾದಿಗಳಿರುವವು. ಭೂಮಿಯ ಮೇಲಿರುವ ಜನರು ಸ್ಥೂಲವಸ್ತುಗಳನ್ನು ಮಾತ್ರ ತಮ್ಮ ಕಣ್ಣುಗಳಿಂದ ನೋಡಬಲ್ಲವರಾದ್ದರಿಂದ ಸೂಕ್ಷ್ಮರೂಪದಿಂದಿರುವ ದೇವಲೋಕವನ್ನಾಗಲಿ, ದೇವತೆಗಳನ್ನಾಗಲಿ ನೋಡಲು ಸಾಧ್ಯವಿಲ್ಲ. ದೇವಲೋಕವು ಎಲ್ಲಿರುವುದು ಎಂದರೆ— **ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್** (ತೈ. ಸಂ. ೬–೧–೧–೧–೨) ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಈ ಮನುಷ್ಯ ಲೋಕದೊಡನೆಯೇ ಓತಪ್ರೋತವಾಗಿ ಎಂದರೆ ಪರಸ್ಪರ ಅಂತರ್ಗತವಾಗಿರುವುದು. ಸ್ವರ್ಗದ ಕೆಲವು ಭಾಗವು ನಮ್ಮ ಸುತ್ತಮುತ್ತಲಿರುವ ವಾತಾವರಣದಲ್ಲಿದ್ದರೂ ನಾವು ಅದನ್ನು ನೋಡಿ ತಿಳಿಯಲಾಗುವುದಿಲ್ಲ. ಸೂಕ್ಷ್ಮರೂಪದಲ್ಲಿರುವ ವಿದ್ಯುತ್ಪ್ರವಾಹವು ತಂತಿಗಳಲ್ಲಿ ಪ್ರವಹಿಸುತ್ತಿದ್ದರೂ ಅದನ್ನು ನೋಡಲಾಗುವುದಿಲ್ಲವಷ್ಟೆ. ಅದರಂತೆ ನಮ್ಮ ಈ ಸ್ಥೂಲಶರೀರದ ಅವಯವಗಳಿಂದ ಸೂಕ್ಷ್ಮರೂಪದಿಂದಿರುವ ಸ್ವರ್ಗವನ್ನೂ ಸ್ವರ್ಗವಾಸಿಗಳನ್ನೂ ನೋಡಲಾರೆವು. ಆದರೆ ಸ್ವರ್ಗವಾಸಿಗಳು ಇಷ್ಟಬಂದರೆ ನಮ್ಮನ್ನು ನೋಡಬಲ್ಲರು. ಪ್ರಕೃತಸೂಕ್ತದಲ್ಲಿಯೂ ಮುಂದಿನ ಕೆಲವು ಸೂಕ್ತಗಳಲ್ಲಿಯೂ ಮೃತನಾದ ಪುರುಷನನ್ನುದ್ದೇಶಿಸಿ ಹೇಳುವ ವಾಕ್ಯಗಳು ಮರಣಾನಂತರ ಪ್ರಾಪ್ತವಾಗುವ ಪ್ರೇತಶರೀರದಲ್ಲಿರುವ ಜೀವವನ್ನುದ್ದೇಶಿಸಿ ಹೇಳಿರುವುದೆಂದು ತಿಳಿಯಬೇಕು.

ಪ್ರವತಃ — ಪ್ರಕೃಷ್ಟಕರ್ಮವತೋ ಭೂಲೋಕವರ್ತಿಭೋಗಸಾಧನಂ ಪುಣ್ಯಮನುಷ್ಠಿತವತಃ ಪುರುಷಾನ್ | ಉತ್ತಮವಾದ ಯಜ್ಞಾದಿಕರ್ಮಗಳನ್ನು ಮಾಡಿ ಭೂಲೋಕದಲ್ಲಿ ಅನುಭವಿಸುವ ಭೋಗಗಳಿಗೆ ಸಾಧನಭೂತವಾದ ಪುಣ್ಯವನ್ನು ಗಳಿಸಿಕೊಂಡಿರುವ ಪುರುಷರನ್ನು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದ್ದಾರೆ. ಎಂದರೆ ಪುಣ್ಯಪ್ರದವಾದ ಸತ್ಕರ್ಮಗಳನ್ನು ಮಾಡಿ ಮರಣಾನಂತರ ಆ ಸತ್ಕರ್ಮಗಳ ಫಲರೂಪವಾದ ಸ್ವರ್ಗಾದಿಗಳನ್ನು ಬಯಸುತ್ತಿರುವ ಪುರುಷರನು ಎಂದರ್ಥವು. ಯಾಸ್ಕರು ಈ ವಿಷಯದಲ್ಲಿ ಇನ್ನೂ ಮುಂದೆ ಹೋಗಿ ಪ್ರವತಃ ಉದ್ವತಃ ನಿವತಃ ಮನುಷ್ಯರು, ದೇವತೆಗಳು, ತಿರ್ಯಗ್ಜಂತುಗಳು ಎಂದು ಅರ್ಥವಿವರಣೆಮಾಡಿದ್ದಾರೆ. ಮನುಷ್ಯರಲ್ಲಿ ಎರಡು ವಿಧ. ಸತ್ಕರ್ಮಾಚರಣೆಮಾಡಿದವರು, ಪಾಪಮಾಡಿದವರು ಎಂದು. ಇವರುಗಳಿಗೆ ಪ್ರಾಪ್ತವಾಗುವ ಲೋಕವೂ ಬೇರೆಬೇರೆಯಾಗಿರುವುದು.

ಬಹುಭ್ಯಃ ಪಂಥಾಂ ಅನುಪಸ್ಪಶಾನಂ—ಮೇಲೆ ಹೇಳಿದಂತೆ ಪರಲೋಕಗಳಿಗೆ ಹೋಗುವ ಮಾರ್ಗಗಳೂ ಬಹುವಾಗಿರುವುವು. ಎಂದರೆ ಸ್ವರ್ಗಾದಿಗಳಿಗೆ ಹೋಗುವ ಮಾರ್ಗವೇ ಬೇರೆ, ದುಷ್ಟರು ಅನುಭವಿಸುವ ಶಿಕ್ಷೆಗೆ ಅರ್ಹವಾಗಿರುವ ಲೋಕಗಳ ಮಾರ್ಗವೇ ಬೇರೆ. ಇತ್ಯಾದಿ ಅವರವರ ಕರ್ಮಾನುಸಾರವಾದ ಲೋಕಗಳಿಗೆ ಇರುವ ಅನೇಕ ಮಾರ್ಗಗಳಿಂದ ಜೀವರುಗಳನ್ನು ಆಯಾಲೋಕಗಳಿಗೆ ಒಯ್ಯುವವನು ಎಂದರ್ಥವು.

ವೈವಸ್ವತಂ—ವಿವಸ್ವಂತನ ಪುತ್ರನಿಗೆ ವೈವಸ್ವತನೆಂದು ಹೆಸರು. ವಿವಸ್ವಂತನು ದೇವಮಾತೆಯಾದ ಅದಿತಿಯ ಪುತ್ರನು ಈ ವಿಷಯದಲ್ಲಿ—

ಅಷ್ಟೌ ಪುತ್ರಾಸೋ ಅದಿತೇಃ | ... ... ತಾನನುಕ್ರಮಿಷ್ಯಾಮಃ | ಮಿತ್ರಶ್ಚ ವರುಣಶ್ಚ | ಧಾತಾ ಚಾರ್ಯಮಾ ಚ | ಅಗ್ಂಶಶ್ಚ ಭಗಶ್ಚ | ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ ||

(ತೈ. ಆ. ೧–೧೩–೩)

ಎಂದು ತೈತ್ತಿರೀಯಾರಣ್ಯಕದಲ್ಲಿ ಹೇಳಿರುವಂತೆ ಅದಿತಿಗೆ ಎಂಟು ಮಂದಿ ಪುತ್ರರು. ಮಿತ್ರ, ವರುಣ, ಧಾತಾ, ಆರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಮಂದಿ ಪುತ್ರರು ಎಂದು ಹೇಳಿದೆ. ಇಲ್ಲಿ ಎಂಟನೆಯವನಾದ ವಿವಸ್ವಾನ್ ಎಂಬುವನೂ ಇಂದ್ರನೂ ಇಬ್ಬರೂ ಅವಳೀ ಮಕ್ಕಳು.

ಈ ವಿವಸ್ವಂತನ ಪುತ್ರನೇ ಯಮನು. ಇವನನ್ನು ರಾಜನೆಂದು ಕರೆಯುವ ರೂಢಿ ಇದೆ. ಪಿತೃಲೋಕಕ್ಕೆ ಯಮನು ಪ್ರಭುವಾದ್ದರಿಂದಲೂ ವರುಣನೂ ಅಲ್ಲಿಯೇ ಇರುವನೆಂದು ವಿವರಣೆ ಇರುವುದರಿಂದಲೂ ಯಮನನ್ನೂ ವರುಣನನ್ನೂ ರಾಜರೆಂದು ಕರೆಯುವುದು ಬಳಕೆಯಲ್ಲಿದೆ.

ಸಂಗಮನಂ ಜನಾನಾಂ ಮೃತರಾದ ಜೀವರುಗಳನ್ನು ತನ್ನ ಲೋಕಕ್ಕೆ ಕೊಂಡೊಯ್ದು ಅವರನ್ನು ಅಲ್ಲಿ ಒಂದೆಡೆ ಸೇರಿಸಿ ಇರುವವನಾದ್ದರಿಂದ ಜನರನ್ನು ಒಂದೆಡೆ ಒಟ್ಟಿಗೆ ಸೇರಿಸಿಡುವವನೆಂಬ ಅರ್ಥವುಳ್ಳ ಸಂಗಮನಂ ಜನಾನಾಂ ಎಂಬ ಶಬ್ದಗಳಿಂದ ಯಮನನ್ನು ವರ್ಣಿಸಲಾಗಿದೆ. ಸಂಗಮನಂ ಎಂದರೆ ಗಂತವ್ಯಸ್ಥಾನಂ–ಜೀವರು ಹೋಗಿ ಸೇರಬೇಕಾದ

ಪ್ರದೇಶ. ಇದು ಸ್ವರ್ಗವಾದರೂ ಆಗಬಹುದು, ನರಕವಾದರೂ ಆಗಬಹುದು. ಪುಣ್ಯವಂತರ ವಿಷಯದಲ್ಲಿ ಸ್ವರ್ಗವೂ ಪಾಪಿಷ್ಠರ ವಿಷಯದಲ್ಲಿ ನರಕವೂ ಎಂದು ತಿಳಿಯಬೇಕು.

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕವಿಂಶತಿಖಂಡಃ

### ಇಪ್ಪತ್ತೊಂದನೆಯ ಖಂಡವು

ಸೇನೇವ ಸೃಷ್ಟಾಮಂ ದಧಾತ್ಯಸ್ತುರ್ನ ದಿದ್ಯುತ್ತ್ವೇಷಪ್ರತೀಕಾ । ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ ಪತಿರ್ಜನೀನಾಂ । (ಋ. ಸಂ. ೧-೬೬-೪) ॥ ತಂ ವಶ್ಚರಾಥಾ ವಯಂ ವಸತ್ಯಾಸ್ತಂ ನ ಗಾವೋ ನಕ್ಷಂತ ಇದ್ಧಂ । (ಋ. ಸಂ. ೧-೬೬-೫) ॥ ಇತಿ ದ್ವಿಪದಾಃ ಸೇನೇವ ಸೃಷ್ಟಾ ಭಯಂ ವಾ ಬಲಂ ವಾ ದಧಾತ್ಯಸ್ತುರಿವ ದಿದ್ಯುತ್ತ್ವೇಷಪ್ರತೀಕಾ ಭಯಪ್ರತೀಕಾ ಬಲಪ್ರತೀಕಾ ಯಶಃಪ್ರತೀಕಾ ಮಹಾಪ್ರತೀಕಾ ದೀಪ್ತಪ್ರತೀಕಾ ವಾ । ಯಮೋ ಹ ಜಾತ ಇಂದ್ರೇಣಸಹಸಂಗತಃ । ಯಮಾವಿಹೇಹ ಮಾತರೇತ್ಯಪಿ ನಿಗಮೋ ಭವತಿ । ಯಮ ಇವಜಾತೋ ಯಮೋ ಜನಿಷ್ಯಮಾಣೋ ಜಾರಃ ಕನೀನಾ ಜರಯಿತಾ ಕನ್ಯಾನಾಂ ಪತಿರ್ಜನೀನಾಂ ಪಾಲಯಿತಾ ಜಾಯಾನಾಂ ತತ್ಪ್ರಧಾನಾ ಹಿ ಯಜ್ಞಸಂಯೋಗೇನ ಭವಂತಿ । ತೃತೀಯೋ ಅಗ್ನಿಷ್ಟೇ ಪತಿರಿತ್ಯಪಿ ನಿಗಮೋ ಭವತಿ । ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯೌಷಧಾಹುತ್ಯಾಸ್ತಂ ಯಥಾ ಗಾವ ಆಪ್ನುವಂತಿ ತಥಾಪ್ನುಯಾಮೇದ್ಧಂ ಸಮಿದ್ಧಂ ಭೋಗೈರ್ವಿತ್ರಂ ಪ್ರಮಿತೇಸ್ತ್ರಾಯತೇಃ ಸಂಮಿನ್ವಾನೋ ದ್ರವತೀತಿ ವಾ ಮೇದಯತೇರ್ವಾ ತಸ್ಯೈಷಾ ಭವತಿ ॥ ೨೧ ॥

'ಸೇನೇವ ಸೃಷ್ಟಾಮಂ ದಧಾತ್ಯಸ್ತುರ್ನ ದಿದ್ಯುತ್ತ್ವೇಷ ಪ್ರತೀಕಾ ।'
ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ ಪತಿ
ರ್ಜನೀನಾಮ್ ॥

ತಂ ವಶ್ಚರಾಥಾವಯಂ ವಸತ್ಯಾಸ್ತಂ ನ ಗಾವೋ ನಕ್ಷಂತ ಇದ್ಧಂ ||

(ಋ.ಸಂ. ೧-೫-೧೦, ೭-೮-೯)

ಯಮಶಬ್ದದಿಂದ ವಾಚ್ಯವಾದ ಅಗ್ನಿಯನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸೇನಾಪತಿಯಿಂದ ಪ್ರೇರಿತರಾದ ಸೇನೆಯಂತೆ ಈ ಅಗ್ನಿಯು ಭಯವನ್ನು ಅಥವಾ ಬಲವನ್ನು ಧರಿಸುತ್ತಾನೆ. ವಜ್ರವು (ದಿದ್ಯುತ್ ವಜ್ರಪರ್ಯಾಯದಲ್ಲಿ ನಿ ಘ. ೨-೨೦-೧) ಹೇಗೆ ಧರಿಸಿದವನಿಗೆ ಬಲವನ್ನು ಕೊಡುವುದೋ ಅದರಂತೆ ದರ್ಶನಮಾತ್ರದಿಂದಲೇ ಶತ್ರುಗಳಿಗೆ ಭಯವನ್ನುಂಟುಮಾಡುತ್ತಾನೆ. ಯಮನೂ ಈ ಅಗ್ನಿಯೇ. ಸಕಲಭಾವಗಳೂ ಆಹುತಿಮೂಲಕ ಅಗ್ನ್ಯಧೀನಗಳಾದುದರಿಂದ ಜಾತವಾದವುಗಳೂ, ಮುಂದೆ ಉತ್ಪನ್ನಗಳಾಗುವವುಗಳೂ ಎಲ್ಲವೂ ಯಮನೆ. ಈ ಅಗ್ನಿಯೇ ಕನ್ನಿಕೆಯರ ಕನ್ಯಾಭಾವವನ್ನು ಹೋಗಲಾಡಿಸುವವನು. ಮದುವೆಯಾದವರನ್ನು ಪಾಲಿಸುವವನು. ಎಲೈ ಅಗ್ನಿಯೇ ಋತ್ವಿಜರಾದ ನಾವು ದೀಪ್ತನಾದ, ಸಕಲಭೋಗದಾಯಕನಾದ, ನಿನ್ನನ್ನು ಜಂಗಮಸ್ಥಾವರರೂಪ ಹವಿಸ್ಸಿನಿಂದ, ಹಸುಗಳು ಸಾಯಂಕಾಲ ಮನೆಯನ್ನು ಸೇರಿ ವ್ಯಾಪಿಸುವಂತೆ ಪೂಜಿಸುತ್ತೇವೆ. ನಿನ್ನ ಸಂಬಂಧವನ್ನು ಹೊಂದುತ್ತೇವೆ.

ಇತಿ-ದ್ವಿಪದಾಃ | ಸೇನೇವ ಸೃಷ್ಟಾ ಭಯಂ ವಾ ಬಲಂ ವಾ, ದಧಾತ್ಯಸ್ತುರಿವ | ದಿದ್ಯುತ್ತ್ವೇಷಪ್ರತೀಕಾ—ಭಯಪ್ರತೀಕಾ ಬಲಪ್ರತೀಕಾ, ಮಹಾಪ್ರತೀಕಾ, ದೀಪ್ತಪ್ರತೀಕಾ ವಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇವು ದ್ವಿಪದಗಳಾದ ವಿರಾಟ್‌ಛಂದಸ್ಕಗಳು. ಪ್ರಥಮ ದ್ವಿಪದದ ವ್ಯಾಖ್ಯಾನ ಇಲ್ಲಿ ತೋರಿಸಿದೆ. ಅಮ ಪದಕ್ಕೆ ಭಯ ಅಥವಾ ಬಲವೆಂದರ್ಥ. ಶತ್ರುಗಳಿಗೆ ಭಯವೆಂದೂ, ತನ್ನವರಿಗೆ ಬಲವೆಂದೂ ತಿಳಿಯಬೇಕು. ದಿದ್ಯುತ್ ವಜ್ರನಾಮವಾದರೂ ಇಲ್ಲಿ ಆಯುಧ ಸಾಮಾನ್ಯವೆಂದರ್ಥ. ಅಸ್ತುಃ. ಅಸುಕ್ಷೇಪಣೇ. ಧಾತು. ತೃಚ್ ಪ್ರತ್ಯಯ. ಆಯುಧ ಎಸೆಯುವವನಿಗೆ ಆಯುಧವು ಬಲಕೊಡುವಂತೆ ಎಂದು ದೃಷ್ಟಾಂತ. ತ್ವೇಷ ಪ್ರತೀಕಾಪದಕ್ಕೆ ನಾನಾರ್ಥ ಸಂಭವಿಸುತ್ತವೆ. ಜ್ವಾಲೆಯ ದರ್ಶನಮಾತ್ರದಿಂದಲೇ ಭಯಾನಕವಾಗಿರುತ್ತದೆ. ಅಥವಾ ಜ್ವಲಿಸುವುದರಿಂದ ದೀಪ್ತದರ್ಶನವುಳ್ಳದ್ದಾಗಿರುತ್ತದೆ. ಅಥವಾ ಮಹತ್ತಾದ ದರ್ಶನವುಳ್ಳದ್ದು, ಅಥವಾ ಬಲಿಷ್ಠವಾದ ಅಂಗವುಳ್ಳದ್ದು ಎಂದರ್ಥ. ಇಂದ್ರಾಗ್ನಿಗಳು ಏಕಕಾಲದಲ್ಲಿ ಹುಟ್ಟಿರುವುದರಿಂದ ಅಗ್ನಿಯೇ ಯಮನಾಗುತ್ತಾನೆ.

ಯಮೋ ಹ ಜಾತ ಇಂದ್ರೇಣ ಸಹ ಸಂಗತಃ || ಯಮಾ ವಿ ಹೇಹ ಮಾತಾರಾ ||

ಇತ್ಯಪಿ ನಿಗಮೋ ಭವತಿ ||

(ಋ.ಸಂ. ೪-೮-೨೫-೧)

ಇಂದ್ರಾಗ್ನಿಗಳು ಏಕಕಾಲದಲ್ಲಿ ಉತ್ಪನ್ನರಾಗಿರುತ್ತಾರೆ ಎಂಬುದರಲ್ಲಿ ಬ್ರಾಹ್ಮಣವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾರೆ. ಇಂದ್ರನೊಡನೆ ಯಮನೂ ಉತ್ಪನ್ನನಾಗಿರುತ್ತಾನೆ. ಇವರಿಬ್ಬರೂ ಯಾವಾಗಲೂ ಒಟ್ಟಿಗೆ ಹೇಳಲ್ಪಡುತ್ತಾರೆ. ಇದಕ್ಕೆ ಮಂತ್ರಪ್ರಮಾಣ ತೋರಿಸುತ್ತಾರೆ. ಬಳಿತ್ಥಾ ಮಹಿಮಾ ವಾ ಮಿಂದ್ರಾಗ್ನೀ ಪನಿಷ್ಠ ಆ | ಸಮಾನೋ ವಾಂ ಜನಿತಾ

ಭ್ರಾತರೌ ಯುವಂ– ಎಂದು ಮಂತ್ರದ ಆದಿ. ಇಂದ್ರಾಗ್ನಿಯರೇ ನಿಮ್ಮಿಬ್ಬರ ಮಹಿಮೆಯು ಈ ರೀತಿಯಾಗಿರುತ್ತದೆ. ನಿಜವಾಗಿಯೂ ಅತಿಶಯ ಸ್ತುತ್ಯವಾಗಿರುತ್ತದೆ. ನೀವಿಬ್ಬರೂ ಏಕಪಿತೃಕರಾಗಿ, ಯಮಳರಾಗಿ ಈ ಪೃಥಿವಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಇರುತ್ತೀರಿ. ನೀವು ಸಕಲಲೋಕ ನಿರ್ಮಾತೃಗಳೂ ಆಗಿರುವಿರಿ. ನಿಮಗೆ ಸೂರ್ಯನು ಒಬ್ಬನೇ ಪಿತೃವಾಗಿರುತ್ತಾನೆ. ಹೀಗೆ ಮಂತ್ರ ಪ್ರತಿಪಾದಿಸುವುದರಿಂದ ಯಮನೆಂದರೆ ಅಗ್ನಿಯೇ ಆಗುತ್ತಾನೆ.

**ಯಮು ಏವ ಜಾತೋಯಮೋ ಜನಿಷ್ಯಮಾಣೋ ಜಾರಃ ಕನೀನಾಂ-**
**ಜರಯಿತಾ ಕನ್ಯಾನಾಂ ಪತಿರ್ಜನೀನಾಂ-ಪಾಲಯಿತಾ ಜಾಯಾನಾಂ**
**ತತ್ಪ್ರಧಾನಾ ಹಿ ಯಜ್ಞಸಂಯೋಗೇನ ಭವಂತಿ ||**

ಎರಡನೆಯ ದ್ವಿಪದದ ಅರ್ಥವನ್ನು ವಿವರಿಸುತ್ತಾರೆ. ಕನ್ಯಾ ಶಬ್ದದಲ್ಲಿ ಸಂಪ್ರಸಾರಣ ಪೂರ್ವರೂಪ ಬಂದಿದೆ. ಜನೀನಾಂ– ಜನೀ–ಪ್ರಾದುರ್ಭಾವೇ. ಧಾತು. ಇನ್‌ಪ್ರತ್ಯಯ. ಇವರಲ್ಲಿ ಪ್ರಜೆಗಳು ಹುಟ್ಟುತ್ತಾರೆ ಎಂದರ್ಥ. ವಿವಾಹದಮೇಲೆ ಅಗ್ನಿಸೇವೆಯಿಂದ ಅಗ್ನಿಪರತಂತ್ರರಾಗಿರುತ್ತಾರೆ. ಇದರಿಂದ ಅಗ್ನಿಪ್ರಧಾನರೆಂದು ಹೇಳಿದೆ.

**ತೃತೀಯೋ ಅಗ್ನಿಷ್ಟೇ ಪತಿರಿತ್ಯಪಿ ನಿಗಮೋ ಭವತಿ ||**

(ಋ.ಸಂ. ೮–೩–೨೭–೫)

ಸ್ತ್ರೀಯರು ಅಗ್ನಿಪ್ರಧಾನರೆಂಬ ವಿಷಯದಲ್ಲಿ ಮಂತ್ರಪ್ರಮಾಣವನ್ನು ತೋರಿಸುತ್ತಾರೆ. ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ | ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ || ಎಂದು ಪೂರ್ಣಮಂತ್ರ. ಕನ್ನಿಕೆಯನ್ನು ಮೊದಲು ಚಂದ್ರನು ಹೊಂದುತ್ತಾನೆ. ಆ ಮೇಲೆ ವಿಶ್ವಾವಸುವು ಹೊಂದುತ್ತಾನೆ. ವಿವಾಹ ಯೋಗ್ಯಳಾದ ಅವಳನ್ನು ಮೂರನೆಯವನಾಗಿ ಅಗ್ನಿಯು ಪಡೆಯುತ್ತಾನೆ. ವಿವಾಹವಾದಮೇಲೆ ನಾಲ್ಕನೆಯವನಾಗಿ ಮಾನವನು ಹೊಂದುತ್ತಾನೆ. ಹೀಗೆ ಅಗ್ನಿಯೂ ಕನ್ನಿಕೆಯ ಕನ್ಯಕಾ ಭಾವವನ್ನು ಅಪಹರಿಸುತ್ತಾನೆಂದು ಹೇಳಿರುವುದರಿಂದ ಯಮನೆಂದರೆ ಅಗ್ನಿಯೇ ಆಗುತ್ತಾನೆ.

**ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯಾಷ-**
**ಧಾಹುತ್ಯಾಽಸ್ತ್ರಂ ಯಥಾ ಗಾವ ಆಪ್ನುವಂತಿ ತಥಾಪ್ನುಯಾಮೇದ್ಧಂ**
**ಸಮಿದ್ಧಂ ಭೋಗ್ಯೈಃ ||**

ಮೂರನೆಯ ದ್ವಿಪದಾರ್ಥವನ್ನು ವಿವರಿಸುತ್ತಾರೆ, ಚರಾಥಾ. ಗತ್ಯರ್ಥಕ ಚರಧಾತುವಿಗೆ ಅಥಕ್ ಪ್ರತ್ಯಯ. ಸಂಚರಿಸುವುದು. ಪಶ್ವಾದಿಜಂಗಮರೂಪವಾದ ಆಹುತಿ. ವಸತ್ಯಾ ನಿವಾಸಾರ್ಥಕ ವಸಧಾತುವಿಗೆ ಅತಿಪ್ರತ್ಯಯ. ಚಲಿಸದೆ ಒಂದು ಕಡೆ ಇರುವುದು. ಸ್ಥಾವರಗಳಾದ ಓಷಧಿವನಸ್ಪತ್ಯಾದಿರೂಪ ಆಹುತಿಯೆಂದರ್ಥ.

**ಮಿತ್ರಃ— ಪ್ರಮೀತೇಸ್ತ್ರಾಯತೇ | ಸಂಮಿನ್ವಾನೋ ದ್ರವತೀತಿ ವಾ |**
**ಮೇದಯತೇ ರ್ವಾ | ತಸ್ಯೈಷಾ ಭವತಿ || ೨೧ ||**

ಕ್ರಮಪ್ರಾಪ್ತವಾದ ಮಿತ್ರಪದದ ನಿರ್ವಚನವನ್ನು ನಾನಾರೀತಿಯಾಗಿ ತೋರಿಸುತ್ತಾರೆ. ಪ್ರಮೀತಿಃ= ಮರಣ. 'ಮೃತ ಪ್ರಮೀತೌ ತ್ರಿಷ್ವೇತೇ' ಎಂದು ಅಮರ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ ಸಕಲಲೋಕಗಳನ್ನು ಮರಣದಿಂದ ವೃಷ್ಟ್ಯಾದಿಗಳನ್ನು ಕೊಟ್ಟು ಕಾಪಾಡುವವನು. ತ್ರೈಙ್–ಪಾಲನೇ· ಧಾತುವಿಗೆ ಕಪ್ರತ್ಯಯ. "ಆತೋಲೋಪಃ" ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ· ಪ್ರಮೀತಪದಕ್ಕೆ ಮಿದಾವೇಶ. ಅಥವಾ ಸಂ= ಸುತ್ತಲೂ, ಚನ್ನಾಗಿ, ಮಿನ್ವಾನಃ= ಮಳೆಯನ್ನು ಸುರಿಸುತ್ತಾ, ದ್ರವತಿ–ಅಂತರಿಕ್ಷಲೋಕದಲ್ಲಿ ದ್ರವಿಸುವವನು ಮಿತ್ರನು· ಡುಮಿಞ್–ಪ್ರಕ್ಷೇಪಣೇ. ಅಥವಾ ಸೇಚನಾರ್ಥಕ ಮಿವಿಧಾತುವಿಗೆ ಲಟ್ ಬಂದಾಗ ಶಾನಚಾದೇಶ. ಡಪ್ರತ್ಯಯಾಂತವಾದ ದ್ರವಧಾತುವಿಗೆ ತ್ರಾದೇಶ ಮಿನ್ವಾನಃ ಎಂಬುದಕ್ಕೆ ಹಿಂದಿನಂತೆ ಮಿದ್ಭಾವ. ಅಥವಾ ಎಲ್ಲವನ್ನೂ ಮಳೆಯಿಂದ ವದ್ದೆಮಾಡುವವನು ಮಿತ್ರನು. ಞಿಮಿದಾ–ಸ್ನೇಹನೇ. ಇದಕ್ಕೆ ತ್ರನ್ ಪ್ರತ್ಯಯ. ಹೀಗೆ ನಾನಾವಿಧವ್ಯುತ್ಪತ್ತಿಯಿಂದ ನಾನಾರ್ಥಗಳು ತೋರುತ್ತವೆ. ಮುಂದೆ ಹೇಳುವ ಮಂತ್ರವು ಮಿತ್ರಸ್ತುತಿಯನ್ನು ಪ್ರತಿಪಾದಿಸುತ್ತದೆ.

**ಸೇನೇವ ಸೃಷ್ಟಾಮಂ ದಧಾತ್ಯಸ್ತುರ್ನ ದಿದ್ಯುತ್ತ್ವೇಷಪ್ರತೀಕಾ |**
**ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ ಪತಿ-**
**ರ್ಜನೀನಾಂ || ೭ || ೮ ||**

ಅಗ್ನಿಯು ಮತ್ತು ಇಂದ್ರನು ಏಕಕಾಲದಲ್ಲಿ ಉತ್ಪನ್ನರಾದುದರಿಂದ, ಅಥವಾ ಸ್ತೋತೃಗಳ ಇಷ್ಟಾರ್ಥದಾಯಕರಾದುದರಿಂದ ಉತ್ಪನ್ನವಾದ ಮತ್ತು ಉತ್ಪನ್ನವಾಗುವ ಸಕಲಭೂತಸಂಘಗಳೂ ಅಗ್ನಿಯೇ. ಇವನು ಕನ್ನಿಕೆಯರ ಕನ್ಯಾತ್ವವನ್ನು ಹೋಗಲಾಡಿಸುವವನು· ಸ್ತ್ರೀಯರಿಗೆ ಪತಿದಾತೃವು. ಇಂತಹ ಅಗ್ನಿಯು ಯಜಮಾನನಿಂದ ಪ್ರೇರಿತವಾದ ಸೇನೆಯಂತೆ ಅಥವಾ ಯೋಧನಿಂದ ಪ್ರಯುಕ್ತವಾದ ಬಾಣದಂತೆ ಶತ್ರುಗಳಿಗೆ ಭಯವನ್ನುಂಟುಮಾಡಲಿ.

**ಸೃಷ್ಟಾ ಸೇನೇವ ಅಮಂ ದಧಾತಿ—ಇನೇನ ಸಹ ವರ್ತತೆ ಇತಿ ಸೇನಾ ಸ್ವಾಮಿನಾ ಸಹ ವರ್ತಮಾನಾ ಪ್ರೇರಿತಾ ಭಟಸಂಹತಿರಿವ ಆಯಮಗ್ನಿಃ ಶತ್ರೂಣಾಂ ಭಯಂ ಕರೋತಿ | ಯದ್ವಾ ಸೇನೇವ ಬಲಂ ದಧಾತಿ | ಸಾ ಯಥಾ ಬಲವತೀ ತದ್ವದಗ್ನಿರಪಿ ಬಲವಾನಿತ್ಯರ್ಥಃ |** ಯಜಮಾನನಿಂದ ಪ್ರೇರಿತವಾದ ಸೇನೆಯು ಯಜಮಾನನೊಡನೆ ಇರುತ್ತಾ ಶತ್ರುಜನರಿಗೆ ಭಯವನ್ನು ಉಂಟುಮಾಡುವ ಹಾಗೆ ಅಗ್ನಿಯು ಶತ್ರುಗಳಿಗೆ ಭಯವನ್ನು ಉಂಟುಮಾಡುವನು· ಅಥವಾ ಯಜಮಾನನೊಡನೆ ಇರುವ ಸೇನೆಯು ಶಕ್ತಿಯಿಂದ ಕೂಡಿ ಇರುವ ಹಾಗೆ ಅಗ್ನಿಯೂ ಕೂಡ ಬಲವುಳ್ಳವನಾಗಿರುವನು ಎಂದು ಅಮ ಶಬ್ದಕ್ಕೆ ಭಯ ಮತ್ತು ಬಲವೆಂಬುದಾಗಿ ಎರಡು ವಿಧವಾದ ಅರ್ಥವನ್ನು ಸಾಯಣರು ವಿವರಿಸಿರುವರು.

ಸ್ಕಂದಸ್ವಾಮಿಗಳು ಅಮಶಬ್ದವು ಭಯವನ್ನು ಹೇಳುವುದಾಗಿ ಇರುತ್ತದೆ. **ಅಮಶಬ್ದೋಽತ್ರ ಭಯವಚನಃ ದ್ಯಾವಾ ಜಜ್ಞಾನಃ ಪೃಥಿವೀ ಅಮೇ ಧಾಃ** (ಋ· ವೇ· ೧–೬೩೧) ಎಂದು ಹೇಳಿ ಭಯವನ್ನು ಶತ್ರುಗಳಿಗೆ ಉಂಟುಮಾಡುವ ಸೇನೆಯಂತೆ ಅಗ್ನಿಯೂ, ರಾಕ್ಷಸರಿಗಾಗಲಿ, ಜಗತ್ತಿಗಾಗಲಿ ಭಯಜನಕನು ಎಂದು ಒಂದು ವಿಧವಾದ ಅರ್ಥವನ್ನು ಮಾತ್ರ ಹೇಳಿರುತ್ತಾರೆ.

ಅಸ್ತುರ್ನ ವಿದ್ಯುತ್ಸೇಷಪ್ರತೀಕಾ—ದಿದ್ಯುದಿತಿ ವಜ್ರನಾಮ । ದಿದ್ಯುತ್ ಎಂದರೆ ವಜ್ರಾಯುಧವು ಎಂದು ಅರ್ಥವು. ದಿದ್ಯುತ್ ಎಂಬ ಅರ್ಥವು ಹದಿನೆಂಟು ವಜ್ರಾಯುಧನಾಮಗಳ ಮಧ್ಯದಲ್ಲಿ (ನಿ ೩-೧೧) ಪಠಿತವಾಗಿರುತ್ತದೆ. ದ್ಯೋತತ ಇತಿ-ಬಹಳ ಕಾಂತಿಯಿಂದ ಹೊಳೆಯುವುದರಿಂದ ಆಯುಧವು ದಿದ್ಯುತ್ ಎನಿಸಿಕೊಳ್ಳುವುದು. ಇದರಿಂದ ಯೌಗಿಕಾರ್ಥವನ್ನು ಅಂಗೀಕರಿಸಿ ಬಾಣವೆಂದು ಅರ್ಥಮಾಡಿ ಬಾಣವು ಹೊಳೆಯುತ್ತಿರುವ ಮುಖವುಳ್ಳದ್ದಾಗಿರುವುದದರಿಂದ ಯಜಮಾನನಿಂದ ಬಿಡಲ್ಪಟ್ಟ ಬಾಣವು, ಇತರರನ್ನು ಭಯಗೊಳಿಸುವುದು. ಇದರಂತೆಯೇ ಅಗ್ನಿಯೂ ಕೂಡ ರಾಕ್ಷಸರೇ ಮೊದಲಾದವರನ್ನು ಭಯಗೊಳಿಸುತ್ತಾನೆ ಎಂದು ಅರ್ಥವು. ಇಲ್ಲಿ ಯಾಸ್ಕರು 'ಸೇನೇವ ಸೃಷ್ಟಾ ಭಯಂ ವಾ ಬಲಂ ವಾ ದಧಾತ್ಯಸ್ತುರಿವ ದಿದ್ಯುತ್ಸೇಷಪ್ರತೀಕಾ' (ನಿ. ೧೦-೨೧) ಇತ್ಯಾದಿ ಎಂಬ ವಚನವನ್ನು ಹೇಳಿರುವರು.

ಯಮೋ ಹ ಜಾತೋ ಯಮೋ ಜನಿತ್ವಂ—ಯಚ್ಛತಿ ದದಾತಿ ಸ್ತೋತೃಭ್ಯಃ ಕಾಮಾನಿತಿ ಯಮೋಽಗ್ನಿರುಚ್ಯತೇ । ಯದ್ವಾ ಇಂದ್ರಾಗ್ನ್ಯೋರ್ಯುಗಪದುತ್ಪನ್ನತ್ವಾದಗ್ನೇರ್ಯಮತ್ವಂ । ಅಗ್ನಿಯು ತನ್ನನ್ನು ಸ್ತೋತ್ರ ಮಾಡುವವರಿಗೆ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದರಿಂದ ಯಮನೆಂದು ಹೆಸರು ಹೊಂದಿರುವನು. ಅಥವಾ ಇಂದ್ರನೂ ಅಗ್ನಿಯೂ ಕೂಡ ಏಕಕಾಲದಲ್ಲಿ ಉತ್ಪನ್ನರಾದಕಾರಣ ಅಗ್ನಿಯೂ ಯಮನಾಗಿರುವನು. ಯಾಸ್ಕರು ಈ ಅರ್ಥದಲ್ಲಿ ಪ್ರಮಾಣವಾಗಿ "ಯಮೋ ಹ ಜಾತ ಇಂದ್ರೇಣ ಸಹ ಸಂಗತಃ । ಯಮಾವಿವೇಹ ಮಾತರೇತ್ಯಪಿ ನಿಗಮೋ ಭವತಿ" (ನಿ. ೧೦-೨೧) ಇತಿ ಎಂಬುದಾಗಿ ಈ ವಾಕ್ಯವನ್ನು ಉದಾಹರಿಸಿರುವರು. ಇಂದ್ರನೊಡನೆ ಏಕೀಕರಿಸಿ ಇರುವುದರಿಂದ ಅಗ್ನಿಯು ಯಮಶಬ್ದದ ಅರ್ಥವಾದ ಸರ್ವಕಾಮ ಪೂರಯಿತೃತ್ವರೂಪ ಧರ್ಮವುಳ್ಳವನಾದ ಕಾರಣ ಇಂದ್ರಾಗ್ನಿಗಳಿಬ್ಬರೂ ಯಮಶಬ್ದದಿಂದ ಬೋಧ್ಯರಾಗಿರುವರು ಮತ್ತು ಲೋಕ ನಿರ್ಮಾತೃಗಳಾಗಿರುವರು ಎಂದು ನಿರುಕ್ತದ ವಾಕ್ಯಕ್ಕೆ ಅರ್ಥವು.

ಉತ್ಪನ್ನವಾಗಿರುವ ಮತ್ತು ಮುಂದೆ ಉತ್ಪನ್ನವಾಗುವ ಪ್ರಾಣಿಗಳ ಸಮುದಾಯವು ಇವೆರಡೂ ಕೂಡ ಯಮಶಬ್ದದಿಂದ ಬೋಧ್ಯವಾದ ಅಗ್ನಿಯೇ ಆಗಿರುವುದು. ಉತ್ಪತ್ತಿಯನ್ನು ಹೊಂದುವ ಪ್ರಾಣಿಗಳೆಲ್ಲಕ್ಕೂ ಕೂಡ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸುವುದರ ಮೂಲಕವಾಗಿ ಉತ್ಪತ್ತಿಯು ಉಂಟಾಗುವುದು. ಅಗ್ನಿಗೆ ಅಧೀನವಾಗಿರುವುದರಿಂದ ಜಾತ ಮತ್ತು ಜಾಯಮಾನಗಳೆಂಬ ಎರಡೂ ಯಮಶಬ್ದವಾಚ್ಯನಾದ ಅಗ್ನಿಯೇ ಆಗಿರುತ್ತದೆ ಎಂದು ಅರ್ಥವು.

ಜಾರಃ ಕನೀನಾಂ—ಕನ್ಯಕಾನಾಂ ಜರಯಿತಾ । ಅಗ್ನಿಯಿಂದಲೇ ಕನ್ಯೆಯರ ಕನ್ಯಾಭಾವವು ಹೋಗುವುದು. ವಿವಾಹ ಕಾಲದಲ್ಲಿ ಅರಳುಗಳನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದಲೂ ಇತರ ದ್ರವ್ಯಗಳನ್ನು ಆಯಾಯ ಮಂತ್ರಗಳಿಂದ ಹೋಮಮಾಡುವುದರಿಂದಲೂ ಕೂಡ ಕನ್ಯಾಭಾವವು ನಿವೃತ್ತವಾಗುವುದು. ಈ ಕಾರಣದಿಂದ ಅಗ್ನಿಯು ಕನ್ಯಾಭಾವನಿವರ್ತಕನಾಗಿರುವನು.

ಪತಿರ್ಜನೀನಾಂ—ಜಾಯಾನಾಂ ಕೃತವಿವಾಹಾನಾಂ ಪತಿಃ ಭರ್ತಾ । ಅಗ್ನಿಯು ವಿವಾಹಕಾಲದಲ್ಲಿ ಪತಿಯಾಗುವ ಮನುಷ್ಯನಿಗೆ ಕನ್ಯೆಯನ್ನು ಅವಳಿಗೆ ಆ ಜನ್ಮದಲ್ಲಿ ಮುಂದೆ ಉಂಟಾಗುವ ಧನ ಮತ್ತು ಪುತ್ರಾದಿಗಳೊಡನೆ ಅನುಗ್ರಹಿಸುವನು. ಆದ್ದರಿಂದ ಅಗ್ನಿಯು ಕನ್ಯೆಯರಿಗೆ ಪತಿಯಾಗಿಯೂ ಇರುವನು. ಪುರುಷನ ಸಹವಾಸದಿಂದ ಇರುತ್ತಾ ಪುರುಷಸಂಭೋಗೇಚ್ಛೆಯನ್ನು ಹೊಂದದೆ ಇರುವ ಕನ್ಯೆಯನ್ನು ಸೋಮನು ಮೊದಲು ಹೊಂದುವನು. ಅವನಿಂದ ಕೊಂಚಮಟ್ಟಿನ ಭೋಗೇಚ್ಛೆಯು ಕನ್ಯೆಯರಿಗೆ ಹೋಗಿ ಯೌವನವು ಉಂಟಾಗುವುದು. ಈ ಪ್ರಕಾರವಾದ ಸ್ಥಿತಿಯುಳ್ಳ ಸ್ತ್ರೀಯನ್ನು ಸೋಮನು ವಿಶ್ವಾವಸುವೆಂಬ ಗಂಧರ್ವನಿಗೆ ಒಪ್ಪಿಸುವನು. ಆ ಗಂಧರ್ವನು ವಿವಾಹಕಾಲದಲ್ಲಿ

ಅಗ್ನಿಗೆ ಕೊಡುವನು. ಅಗ್ನಿಯು ಅವಳಿಗೆ ಪತಿಯಾಗುವ ಮನುಷ್ಯನಿಗೆ ಅನುಗ್ರಹಿಸುವನು. ಎಂದು ಶಾಸ್ತ್ರಸಮ್ಮತಿಯು ಇರುವುದು. '' ಸೋಮೋಽದದದ್ಗಂಧರ್ವಾಯ ಗಂಧರ್ವೋಽ ದದದಗ್ನಯೇ । ರಯಿಂ ಚ ಪುತ್ರಾಂಶ್ಚಾದಾದಗ್ನಿ ರ್ಮಹ್ಯಮಥೋ ಇಮಾಂ '' (ಋ. ಸಂ. ೧೦–೮೫೪೧) ಇತಿ । ಎಂಬ ಋಗ್ವೇದ ಮಂತ್ರವು ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಬೋಧಿಸುತ್ತದೆ.

ಇದರಿಂದ ಕೃತವಿವಾಹರಾದ (ವಿವಾಹಕಾಲದಲ್ಲಿ ವಿವಾಹವೆಂಬ ಸಂಸ್ಕಾರವನ್ನು ಹೊಂದುವ ಸ್ತ್ರೀಯರಿಗೆ) ಸೋಮ, ಗಂಧರ್ವ, ಅಗ್ನಿ ಎಂಬ ಮೂರು ದೇವತೆಗಳು ಅವರ ಶರೀರದಲ್ಲಿ ಉಂಟಾಗಬಹುದಾದ ಸೌಖ್ಯಕ್ಕೆ ತಕ್ಕ ಬದಲಾವಣೆಗಳನ್ನು ಉಂಟುಮಾಡಿ ಧನಪುತ್ರಾದಿಗಳನ್ನು ಅನುಭವಿಸುವಂತೆ ಅನುಗ್ರಹಿಸುವಕಾರಣ ಪತಿಗಳಾಗುವರು. ಮನುಷ್ಯನು ನಾಲ್ಕನೆಯವನಾಗುವ ಕಾರಣ "ತುರಿಯಸ್ತೇ ಮನುಷ್ಯಜಾಃ" ಎಂದು ಒಂದು ಮಂತ್ರವು ಹೇಳುವುದು.

ಯಾಸ್ಕರು "ತೃತಿಯೋ ಅಗ್ನಿಷ್ಟೇ ಪತಿರಿತ್ಯಪಿ ನಿಗಮೋ ಭವತಿ" (ನಿ. ೧೦–೨೧) ಎಂದು ಈ ಅಭಿಪ್ರಾಯ ವನ್ನೇ ಹೇಳಿರುವರು.

**ಯದ್ವಾ—ಜನೀನಾಂ ಪಾಲಯಿತಾ ಯತೋಽಯಮನುಷ್ಠಿತೈಃ ಯಾಗೈಃ ಫಲಂ ಪ್ರಯಚ್ಛತಿ ।** ಪತಿ ಶಬ್ದವು ಪಾಲನಾರ್ಥದಲ್ಲಿ ಇರುವುದರಿಂದ ಅಗ್ನಿಯು ಅವರವರು ಆಚರಿಸಿದ ಯಜ್ಞಗಳಿಗೆ ಅನುಸಾರವಾದ ಫಲವನ್ನು ಅನು ಗ್ರಹಿಸಿ ಆಯಾಯ ಪ್ರಾಣಿಗಳನ್ನು ರಕ್ಷಿಸುವನು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳುವರು.

ಸ್ಕಂದಸ್ವಾಮಿಗಳು – ಪತಿರ್ಜನೀನಾಂ ಎಂಬ ವಾಕ್ಯಕ್ಕೆ ಜನಯಂತ್ಯಪತ್ಯಾನಿ ಇತಿ ಜನಯಃ ಭಾರ್ಯಾಃ ತಾಸಾಂ ಪತಿಃ ಮಕ್ಕಳುಗಳನ್ನು ಹೆರುವವರಾದಕಾರಣ ಭರಣಯೋಗ್ಯರಾದ ಸ್ತ್ರೀಯರು ಜನಯಃ ಎಂಬ ಶಬ್ದವಾಚ್ಯರಾಗಿರು ವರು. ಅಗ್ನಿಯು ಇವರಿಗೆ ಮೊದಲು ಪತಿಯಾಗಿರುವನು. ಅನಂತರದಲ್ಲಿ ಮನುಷ್ಯನು ಪತಿಯಾಗುವನು. "ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ । ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ''। (ಋ. ವೇ. ೧೦–೮೫–೪೦) ಇತಿ । ಈ ಮಂತ್ರವು ಸೋಮ, ಗಂಧರ್ವ, ಅಗ್ನಿ ಎಂಬ ಮೂರು ಜನರು ಪತಿಯಾದನಂತರ ಮನುಷ್ಯನು ಪತಿಯಾಗುವನು ಎಂದು ಅರ್ಥವನ್ನು ಹೇಳುವುದು ಆದ್ದರಿಂದ ಈ ವಚನವನ್ನು ಪ್ರಮಾಣವಾಗಿ ಉದಾಹರಿಸಿರು ವರು. ಅಗ್ನಿಯು ಜಾರಯಿತಾ ಪಾಲಯಿತಾ ಎಂಬುದಾಗಿ ಪ್ರಸಿದ್ಧನಾಗಿರುವುದರಿಂದ ಕನಧಾತುವು ಕಾಂತಿಕರ್ಮಾರ್ಥದಲ್ಲಿ ಪ್ರಯುಕ್ತವಾಗಿ ಕಮನೀಯಃ ಕನಯ ಓಷಧಯಃ ಎಂದು ಅರ್ಥವನ್ನು ಬೋಧಿಸುವ ಕಾರಣ ಅಗ್ನಿಯು ಅವುಗಳ ಫಲ ಪರಿಪಾಕವಾದ ಸ್ಥಿತಿಯನ್ನು ಉಂಟುಮಾಡುವ ಕಾರಣ ಜಾರನಾಗಿರುವನು. ಮತ್ತು ಪಾಲನಮಾಡುವುದರಿಂದ ಪತಿ ಯಾಗಿರುವನು ಎಂದು ಅರ್ಥವನ್ನು ಮಾಡಿರುವರು.

**ತಂ ವಶ್ಚರಾಥಾ ವಯಂ ವಸತ್ಯಾಸ್ತ ನ ಗಾವೋ ನಕ್ಷಂತ ಇದ್ಧಂ ।**
**ಸಿಂಧುರ್ನ ಕ್ಷೋದಃ ಪ್ರ ನೀಚೈರೈನೋನ್ನವಂತ ಗಾವಃ । ಸ್ವರ್ದೃ-**
**ಶೀಕೇ ॥ ೯ ॥ ೧೦ ॥**

ಎಲೈ ಅಗ್ನಿಯೇ, ನಾವು ಚರವಾದ ಪ್ರಾಣಿಸಂಬಂಧವಾದ, (ತುಪ್ಪದಿಂದಲೂ) ಮತ್ತು ಸ್ಥಾವರವಾದ ವ್ರೀಹ್ಯಾದಿ ಸಂಬಂಧವಾದ ಸೋಮದ್ರವ್ಯಯುಕ್ತರಾಗಿಯೂ, ಗೋವುಗಳು ಹೇಗೆ ಮನೆಯನ್ನು ಸೇರುತ್ತವೆಯೋ ಹಾಗೇ, ನಿನ್ನ ಬಳಿಗೆ

ಬರುತ್ತೇವೆ, ನಿಮ್ಮ ಪ್ರದೇಶಕ್ಕೆ ಉದಕವು ಪ್ರವಹಿಸುವಂತೆ, ದಹ್ಯವಾದ ಪದಾರ್ಥಗಳ ಕಡೆಗೆ ಜ್ವಾಲೆಗಳು ನುಗ್ಗುತ್ತವೆ. ಮತ್ತು ಹೀಗೆ ಜ್ವಲಿಸುತ್ತಿರುವ ಅಗ್ನಿಯ ಪ್ರಕಾಶವು ಅಂತರಿಕ್ಷದಲ್ಲಿ ಬಹಳದೂರ ಕಾಣಿಸುತ್ತದೆ.

**ಅಸ್ತಂ ನ ಗಾವಃ**— ಅಸ್ತಮಿತಿ ಗೃಹನಾಮ ಯಥಾಗಾವೋ ಗೃಹಂ ವ್ಯಾಪ್ನುವಂತಿ ತದ್ವತ್ ವಯಂ ಪ್ರದೀಪ್ತಮಗ್ನಿಂ ವ್ಯಾಪ್ನುಯಾಮ । ಅಸ್ತ ಶಬ್ದವು ಇಪ್ಪತ್ತೆರಡು ಗೃಹದಾಮಗಳ ಮಧ್ಯದಲ್ಲಿ (ನಿ. ೩–೧೩) ಪಠಿತವಾಗಿರುವುದು ಗೋವುಗಳು ಮನೆಯನ್ನು ಸೇರುವಂತೆ ನಾವು ಚೆನ್ನಾಗಿ ಪ್ರಕಾಶಿಸುತ್ತಿರುವ ಅಗ್ನಿಯ ಸಮೀಪಕ್ಕೆ ಹೋಗೋಣ ಎಂದು ಅರ್ಥವು.

**ಚರಾಥಾ**— ಚರತೀತಿ ಚರಥಃ ಪಶುಃ । ತತ್ಸಂಭವೈಃ ಹೃದಯಾದಿ ಭಿರಾಹುತಿರಪಿ ಚರಥಾ ಇತ್ಯುಚ್ಯತೇ । ಉಪಚಾರಾತ್ ಕಾರ್ಯೇ ಕಾರಣಶಬ್ದಃ । ಸಂಚರಿಸುವಕಾರಣ ಚರಥ ಎಂಬ ಶಬ್ದಕ್ಕೆ ಪಶುವೆಂದು ಅರ್ಥವು. ಪಶುವನ್ನು ಯಾಗದಲ್ಲಿ ಉಪಯೋಗಿಸುವುದರಿಂದ ಈ ಪಶುವಿನ ಹೃದಯವೇ ಮೊದಲಾದ ಆಹುತಿದ್ರವ್ಯಗಳೂ ಚರಥ ಎಂಬ ಶಬ್ದದಿಂದ ವ್ಯವಹರಿಸಲ್ಪಡುತ್ತವೆ. ಆಹುತಿರೂಪವಾದ ಕಾರ್ಯಕ್ಕೆ ಕಾರಣವಾದ ಚರಥಶಬ್ದವೂ ಕೂಡ ಉಪಚಾರದಿಂದ ಇಲ್ಲಿ ಪ್ರಯುಕ್ತವಾಗಿರುವುದು.

**ವಸತ್ಯಾ**—ವಸತಿ ನಿವಸತೀತಿ ಸ್ಥಾವರೋ ವ್ರೀಹ್ಯಾದಿರ್ವಸತಿಃ । ಪೂರ್ವವತ್ ತತ್ಸಾಧ್ಯಾಹುತಿರ್ಲಕ್ಷ್ಯತೇ । ಒಂದು ಕಡೆಯಲ್ಲಿ ಸ್ಥಿರವಾಗಿ ಇರುವುದರಿಂದ ವ್ರೀಹಿಯೇ ಮೊದಲಾದ ಧಾನ್ಯಗಳೂ ವಸತಿ ಶಬ್ದಕ್ಕೆ ಅರ್ಥವಾಗಿರುವುದು. ಚರಥ ಶಬ್ದದ ಅರ್ಥವನ್ನು ಹೇಳುವಾಗ ಹೇಳಿರುವ ಕ್ರಮದಂತೆಯೇ ಇಲ್ಲಿಯೂ ಆಹುತಿಯು ವಸತಿ ಶಬ್ದದಿಂದ ಬೋಧ್ಯವಾಗಿರುತ್ತದೆ. ಪಶುವಿನ ಹೃದಯವೇ ಮೊದಲಾದ ಆಹುತಿಗಳಿಂದಲೂ ಪುರೋಡಾಶವೇ ಮೊದಲಾದ ಆಹುತಿಗಳಿಂದಲೂ ಅಗ್ನಿಯನ್ನು ಹಸುಗಳು ಆಹಾರದ ನಿಮಿತ್ತವಾಗಿ ಮನೆಯನ್ನು ಬಂದು ಸೇರುವ ಹಾಗೆ ಸೇವಿಸೋಣವೆಂದು ಅರ್ಥವು. ಯಾಸ್ಕರು "ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯಾಷಧಾಹುತ್ಯಾಸ್ತಂ ಯಥಾ ಗಾವಃ ಅಪ್ನುವಂತಿ ತಥಾಪ್ನುಯಾಮ'' । (ನಿ. ೧೦–೨೧) ಇತಿ । ಎಂದು ವಚನವನ್ನು ಪ್ರಮಾಣವಾಗಿ ಉದಾಹರಿಸುವರು.

**ನೀಚೀಃ**—ನಿತರಾಮಂಚಂತೀಃ ಇತಸ್ತತೋ ನಿತರಾಮೋದ್ಗಚ್ಛಂತೀ ಜ್ವಾಲಾಃ । ಅಗ್ನಿಯ ಜ್ವಾಲೆಗಳು ಸರ್ವತೋಮುಖವಾಗಿ, ಹೊಳೆಯ ನೀರು ತಗ್ಗಾದ ಪ್ರದೇಶಗಳಲ್ಲಿ ಹರಿಯುವಂತೆ, ಸುಡಬೇಕಾಗಿರುವ ವಸ್ತುವಿನ ವಿಷಯದಲ್ಲಿ ಪ್ರವರ್ತಿಸುತ್ತವೆ ಎಂದು ಅರ್ಥವು.

ಸ್ಕಂದಸ್ವಾಮಿಗಳು ನವಂತ ಗಾವಃ ಎಂಬ ಪದಗಳಲ್ಲಿ ಗಾವಃ ಎಂಬ ಪದವು ಸ್ತುತಯಃ ಸ್ತುತಿಗಳು, ಅಥವ ಸ್ತೋತಾರಃ–ಸ್ತೋತ್ರಮಾಡುವವರು ಎಂದು ಅರ್ಥವನ್ನು ವಿವರಿಸಿ 'ಗೋಭಿರ್ಯದೀಮನ್ಯೇ ಅಸ್ಮತ್' (ಋ. ಸಂ. ೮–೨–೬) "ಗೋಭಿಃ ಕ್ರಾಣಾ ಅಭಿದ್ಯವಃ" (ಋ. ಸಂ. ೧–೧೩೪–೨) ಎಂಬ ವಾಕ್ಯಗಳನ್ನು ಪ್ರಮಾಣವಾಗಿ ಉದಾಹರಿಸಿರುವರು. ಮತ್ತೂ—'ಯಲುಗ್ರಾ ಅರ್ಕಮಾನೃಚುಃ' (ಋ. ಸಂ. ೧ ೧೯–೪). 'ಅರ್ಚನ್ನತ್ರ ಮರುತಃ' (ಋ. ಸಂ. ೧–೫೨–೧೫) ಎಂಬ ಋಕ್ಕುಗಳನ್ನು ಶಾಕಪಾಣಿಯೆಂಬುವರು ಉದಾಹರಣೆಯನ್ನು ಕೊಟ್ಟು ಮರುದ್ದೇವತೆಗಳೂ

ಸ್ತೋತ್ರಗಳಾಗಿರುವ ಕಾರಣ ಗಾವಃ ಎಂಬ ಶಬ್ದಕ್ಕೆ ಮರುದ್ದೇವತೆಗಳು ಎಂದು ಅರ್ಥವನ್ನು ಹೇಳಿರುವರು. ಮರುದ್ದೇವತೆಗಳೂ ಅಗ್ನಿಯನ್ನು ಸ್ತೋತ್ರಮಾಡುವರೆಂದು ತಾತ್ಪರ್ಯವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಾವಿಂಶತಿಖಂಡಃ

### ಇಪ್ಪತ್ತೆರಡನೆಯ ಖಂಡವು.

ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಮ್ | ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ (ಋ. ಸಂ. ೭-೫೯-೧) ಮಿತ್ರೋ ಜನಾನ್ಯಾಯತಯತಿ ಪ್ರಬ್ರುವಾಣಃ ಶಬ್ದಂ ಕುರ್ವನ್ ಮಿತ್ರ ಇವ ಧಾರಯತಿ ಪೃಥಿವೀಂ ಚ ದಿವಂ ಮಿತ್ರಃ ಕೃಷ್ಟೀರನಿಮಿಷನ್ನಭಿವಿಪಶ್ಯತೀತಿ ಕೃಷ್ಟಯದೇಹಾ ವಾ ಮಿತ್ರಾಯ ಹವ್ಯಂ ಘೃತವಜ್ಜುಹೋತೇತಿ ವ್ಯಾಖ್ಯಾತಂ ಜುಹೋ-ತಿರ್ದಾನಕರ್ಮಾ ಕಃ ಕಮನೋ ವಾ ಕ್ರಮಣೋ ವಾ ಸುಖೋ ವಾ ತಸ್ಯೈಷಾ ಭವತಿ || ೨೨ ||

ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ
ಪೃಥಿವೀಮುತದ್ಯಾಂ || ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ
ಮಿತ್ರಾಯ ಹವ್ಯಂ ಘೃತವಜ್ಜುಹೋತ ||

(ಋ. ಸಂ. ೩-೪-೫)

ಮಿತ್ರಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಿತ್ರನಾದ ಮಾಧ್ಯಮಿಕ ದೇವನು ಮೇಘಗರ್ಜನೆಮಾಡುತ್ತಾ ಕೃಷಿಕ ಮುಂತಾದ ಜನರನ್ನು ಕೃಷ್ಯಾದಿಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತಾನೆ. ವೃಷ್ಟಿಮೂಲಕ ಔಷಧ್ಯಾದಿಗಳನ್ನು ಬೆಳೆಸುತ್ತಾ ಆ ಮಿತ್ರನು ಪೃಥಿವಿಯಲ್ಲಿರುವ ಸಕಲಪ್ರಾಣಿಗಳನ್ನೂ ಮತ್ತು ದ್ಯುಲೋಕವಾಸಿಗಳನ್ನು ಧರಿಸುತ್ತಾನೆ. ಈ ರೀತಿಯಾಗಿ ಅನುಗ್ರಹಿಸುತ್ತಾ ಮನುಷ್ಯರನ್ನು ಸ್ನೇಹದಿಂದ ನೋಡುತ್ತಾನೆ. ಸಕಲಲೋಕಕ್ಕೆ ಉಪಕಾರಪ್ರವೃತ್ತನಾದ ಈ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿಸ್ಸನ್ನು ಕೊಡಿರಿ.

ಮಿತ್ರೋ ಜನಾನ್ಯಾತಯತಿ, ಪ್ರಬ್ರುವಾಣಃ ಶಬ್ದಂ ಕುರ್ವನ್ ಮಿತ್ರ ಏವ ಧಾರಯತಿ ಪೃಥಿವೀಂ ದಿವಂ ಚ ಮಿತ್ರಃ ಕೃಷ್ಟೀರನಿಮಿಷನ್ನಭಿವಿಪಶ್ಯತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯತೀ–ಪ್ರಯತ್ನೇ. ಧಾತು. ಣಿ ಜಂತರೂಪ. ಕೃಷಿಕರು ಸ್ವತಃ ಯತ್ನಿಸುತ್ತಾರೆ. ಅವರ ಪ್ರಯತ್ನಕ್ಕೆ ಮಿತ್ರನು ಪ್ರೇರಕನಾಗುತ್ತಾನೆ.

ಕೃಷ್ಟಯ ಇತಿ ಮನುಷ್ಯನಾಮ ಕರ್ಮವಂತೋ ಭವಂತಿ, ವಿಕೃಷ್ಟದೇಹಾ ವಾ ॥

ಕೃಷ್ಟಿ ಎಂಬುದು ಮನುಷ್ಯನಾಮದಲ್ಲಿ ಹೇಳಿದೆ. (ನಿಘ. ೨–೩–೭) ಕರ್ಷಣ ಅಂದರೆ ಉಳುವುದು ಕರ್ಮವಿಶೇಷಪ್ರತೀತವಾದರೂ ಇಲ್ಲಿ ಕರ್ಮಸಾಮಾನ್ಯವೂ ವಿವಕ್ಷಿತವಾಗಿದೆ. ಕೃಷ–ವಿಲೇಖನೇ ಧಾತು. ಭಾವಾರ್ಥದಲ್ಲಿ ಕ್ತ ಪ್ರತ್ಯಯ. ಕೃಷ್ಟ ಅಂದರೆ ಕರ್ಮ. ಅದು ಉಳ್ಳವರು ಎಂಬರ್ಥದಲ್ಲಿ 'ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ' ಎಂಬ ಸೂತ್ರದಿಂದ ಇಕಾರರೂಪ ಪ್ರತ್ಯಯ. ಕರ್ಮದಿಂದ ಕೂಡಿರುವವರು. ಮನುಷ್ಯನು ಏನಾದರೂ ಕಾರ್ಯಮಾಡುತ್ತಿರುತ್ತಾನೆ. 'ನ ಹಿ ಕಶ್ಚಿತ್‌ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' ಎಂದು ಗೀತೆಯಲ್ಲಿಯೂ ಹೇಳಿದೆ. ಅಥವಾ ಕೇವಲ ವಿಲೇಖನಾರ್ಥಪ್ರತಿಪಾದಕ ಕೃಷಧಾತುವಿಗೆ ವಿ ಉಪಸರ್ಗಪೂರ್ವವಾಗಿರುವಾಗ ತೋರುವ ಅರ್ಥದಲ್ಲಿ ಕರ್ಮಣಿಯಲ್ಲಿ ಕ್ತಪ್ರತ್ಯಯ. ವಿವಿಧಂ ಕೃಷ್ಟಃ. ವಿಕ್ಷಿಪ್ತಕಂಡೂಯನಾದಿ (ನವೆ ತುರಿಯುವುದು) ಅಭಿಲಷಿತಕ್ರಿಯಾನುಷ್ಠಾನ ಸಮರ್ಥವಾದುದು ದೇಹ. ಅದು ಉಳ್ಳವರು ಎಂಬರ್ಥದಲ್ಲಿ ಹಿಂದಿನಂತೆ ಮತ್ವರ್ಥದಲ್ಲಿ ಇಕಾರರೂಪಪ್ರತ್ಯಯ. ಪಶುಪಕ್ಷಿ ಮುಂತಾದುವುಗಳ ಶರೀರ ಸಂಕೃಷ್ಟವಾಗಿರುತ್ತದೆ. ಸ್ವೇಚ್ಛೆಯಿಂದ ಅವು ತಮ್ಮ ಅವಯವಗಳನ್ನು ಪ್ರಸರಿಸಲು ಸಮರ್ಥವಾಗುವುದಿಲ್ಲ. ಮನುಷ್ಯನು ಇಚ್ಛೆ ಬಂದಂತೆ ಚಲಿಸಲು ಸಮರ್ಥನಾದುದರಿಂದ ವಿಕೃಷ್ಟದೇಹವುಳ್ಳವನಾಗುತ್ತಾನೆ.

ಮಿತ್ರಾಯ ಹವ್ಯಂ ಘೃತವಜ್ಜುಹೋತ-ಇತಿ ವ್ಯಾಖ್ಯಾತಮ್ । ಜುಹೋತಿರ್ದಾನಕರ್ಮಾ ॥

ಮಂತ್ರದ ನಾಲ್ಕನೆಯಪಾದವು ಪಾಠಮಾತ್ರದಿಂದಲೇ ವ್ಯಾಖ್ಯಾತವಾದಂತೆ ಎಂದು ಅದನ್ನೇ ತೋರಿಸಿರುತ್ತಾರೆ. ಹು–ದಾನಾದನಯೋಃ, ಧಾತು. ಇಲ್ಲಿ ದಾನಾರ್ಥದಲ್ಲಿ ಲೋಟ್‌ಬಂದಾಗ ಅದಕ್ಕೆ ತಬಾದೇಶ. ದಾನವೆಂದರೆ ಪ್ರಕ್ಷೇಪ. ಅದೂ ಕೂಡಾ ವಿಧಿವತ್ತಾದ ಹೋಮಕುಂಡದಲ್ಲಿ ಎಂದು ಸಾಮರ್ಥ್ಯದಿಂದಲೇ ವ್ಯಕ್ತವಾಗುತ್ತದೆ.

ಕಃ ಕಮನೋ ವಾ ಕ್ರಮಣೋ ವಾ। ಸುಖೋ ವಾ। ತಸ್ಯೈಷಾ ಭವತಿ ॥ ೨೨ ॥

ಕ್ರಮಪ್ರಾಪ್ತವಾದ ಕ ಪದದ ನಿರ್ವಚನವನ್ನು ತೋರಿಸುತ್ತಾರೆ. ಕ ಅಂದರೆ ಆತ್ಮಾ. ಪ್ರಾಣಬುದ್ಧಿಸತತ್ವನಾದ ಸರ್ವಾತ್ಮನೆಂದು ತಾತ್ಪರ್ಯ. 'ಅಥೈನಂ ಮಹಾಂತಮಾತ್ಮಾನಂ' ಎಂದು ಅಧಿಕರಿಸಿ ಕ ಈಷತೇ ತುಜ್ಯತ (ಋ.ಸಂ. ೧–೬–೮–೨)

ಎಂದು ಋಗ್ವೇದದಲ್ಲಿಯೇ ಹೇಳಿರುತ್ತಾರೆ. ಇವನು ಮಧ್ಯಮನಾಗುವುದು ಹೇಗೆ? ಎಂದು ಶಂಕೆ ಬರುತ್ತದೆ. ಆದರೆ 'ಪ್ರಜಾಪತಿರ್ವೈಕಃ' ಇತ್ಯಾದಿ ಮಂತ್ರವರ್ಣಗಳಿಂದ ಪ್ರಜಾಪತಿ ಮಧ್ಯಮನೇ ಕಪದವಾಚ್ಯನಾಗುತ್ತಾನೆ. ರಾಜನ ಅಭಿಷೇಕವನ್ನಧಿಕರಿಸಿ ಅಶ್ವಮೇಧದಲ್ಲಿ ಪ್ರಜಾಪತಿಶ್ಚರತಿ ಗರ್ಭೇ ಅಂತಃ ಎಂದು ಹೇಳಿರುವುದರಿಂದ ಇವನು ಮಧ್ಯಮನೆಂದು ವ್ಯಕ್ತವಾಗುತ್ತದೆ. ಕಮನಃ= ಕಾಮಿಗಳ ಇಷ್ಟಾರ್ಥದಲ್ಲಿ ಸಾಧನನಾದವನು ಕದೇವನಾಗುತ್ತಾನೆ. ಅಥವಾ ಕ್ರಮಣ ಎಂಬುದು ಕ ಆಗಿದೆ. ಕ್ರಮಣಸಾಧನ ಅಥವಾ ತಾನಾಗಿ ಕ್ರಮಣಮಾಡುವವನೆಂದರ್ಥ. ಕಮು-ಕಾಂತೌ, ಅಥವಾ ಕ್ರಮು-ಪಾದವಿಕ್ಷೇಪೇ ಧಾತುಗಳಿಗೆ ಡ ಪ್ರತ್ಯಯ. ಅದು ಡಿತ್ತಾದುದರಿಂದ ಧಾತುವಿನ ಟಿಗ್ (ಅಮ್) ಲೋಪ. ಬಹುಲಗ್ರಹಣದಿಂದ ಕ್ರಮು ಧಾತುವಿನ ರೇಫಕ್ಕೆ ಲೋಪ. 'ಪ್ರಜಾಪತಿರಕಾಮಯತ' ಎಂದು ಹೇಳಿರುವುದರಿಂದ ಬಹುಕಾಮವುಳ್ಳವನು ಕದೇವ. ಪ್ರಜಾಪತಿಯೆಂದರ್ಥ. 'ಕಃ ಪ್ರಜಾಪತಿರುದ್ದಿಷ್ಟಃ' ಎಂದು ಕೋಶದಲ್ಲಿಯೂ ಹೇಳಿದೆ.

ಕೋ ಬ್ರಹ್ಮಣಿ ಸಮೀರಾತ್ಮಯಮದಕ್ಷೇಷು ಭಾಸ್ಕರೇ ।
ಮಯೂರೇಽಗ್ನೌ ಚ ಪುಂಸಿ ಸ್ಯಾತ್ಸುಖಶೀರ್ಷಜಲೇಷು ಕಮ್ ॥

ಎಂದು ಮೇದಿನೀಕೋಶದಲ್ಲಿ ಕಪದಕ್ಕೆ ನಾನಾರ್ಥ ಹೇಳಿದೆ. ಅಥವಾ ಸುಖವನ್ನುಂಟುಮಾಡುವವನು ಸುಖನು. ಸುಖ ಎಂಬುದು ಕ ಎಂದಾಗಿದೆ. ವೃಷ್ಟಿಪ್ರದಾನಾದಿಗಳಿಂದ ಸುಖವನ್ನುಂಟುಮಾಡುತ್ತಾನೆ. ಮತ್ವರ್ಥದಲ್ಲಿ ಆಕಾರರೂಪಪ್ರತ್ಯಯ ಸುಖ ಶಬ್ದದಮೇಲೆ ಬಂದಿದೆ. ಮುಂದೆ ಹೇಳುವ ಮಂತ್ರವು ಕಪದವಾಚ್ಯಪ್ರಜಾಪತಿಯ ಸ್ತುತಿಯನ್ನು ತಿಳಿಸುತ್ತದೆ.

ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀ-
ಮುತ ದ್ಯಾಂ ।
ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥

ಸ್ತೋತೃಗಳಿಂದ ಸ್ತುತನಾಗತಕ್ಕ ಮಿತ್ರನು ಪ್ರಜೆಗಳನ್ನು ಅವರವರ ಕರ್ಮಗಳಿಗೆ ಪ್ರೇರಿಸುತ್ತಾನೆ. ಅದೇ ಮಿತ್ರನು ಪೃಥಿವಿಯನ್ನೂ ಮತ್ತು ದ್ಯುಲೋಕವನ್ನೂ ಧರಿಸಿದ್ದಾನೆ. ಅದೇ ಮಿತ್ರನು ಅನುಗ್ರಾಹಕವಾದ ದೃಷ್ಟಿಯಿಂದ ಸಕಲ ಪ್ರಜೆಗಳನ್ನೂ ಸುತ್ತಲೂ ನೋಡುತ್ತಾನೆ. ಎಲೈ ಋತ್ವಿಕ್ಕುಗಳೇ, ಘೃತದಿಂದ ಯುಕ್ತವಾದ ಹವಿಸ್ಸನ್ನು ಆ ಮಿತ್ರನನ್ನುದ್ದೇಶಿಸಿ ಆಹುತಿರೂಪದಲ್ಲರ್ಪಿಸಿರಿ.

ಈ ಮಂತ್ರಕ್ಕೆ ನಿರುಕ್ತಕಾರರು ತಾತ್ಪರ್ಯವನ್ನು ವಿವರಿಸಿದ್ದಾರೆ.

ಮಿತ್ರಃ ಜನಾನ್ ಆಯಾತಯತಿ ಪ್ರಬ್ರುವಾಣಃ । ಶಬ್ದಂ ಕುರ್ವನ್ । ಮಿತ್ರ ಏವ ಧಾರಯತಿ ಪೃಥಿವೀಂ ಚ ದಿವಂ ಚ । ಮಿತ್ರಃ ಕೃಷ್ಟೀಃ ಅನಿಮಿಷನ್ ಅಭಿವಿಪಶ್ಯತಿ ಇತಿ । ಕೃಷ್ಟಯಃ ಇತಿ ಮನುಷ್ಯನಾಮ । ಕರ್ಮವಂತಃ ಭವಂತಿ । ವಿಕೃಷ್ಟದೇಹಾ ವಾ .. .... ॥

(ನಿ. ೧೦—೨೨)

ಮಿತ್ರನು ಉತ್ತೇಜಕವಾದ ಶಬ್ದವನ್ನು ಮಾಡುತ್ತಾ ಪ್ರಜೆಗಳನ್ನು ಸತ್ಪಥದಲ್ಲಿ ಒಯ್ಯುತ್ತಾನೆ. ದ್ಯಾವಾಪೃಥಿವಿಗಳೆರಡನ್ನೂ ಮಿತ್ರನೊಬ್ಬನೇ ಧರಿಸಿ ರಕ್ಷಿಸುತ್ತಾನೆ. ಎಲ್ಲೆಯನ್ನು ಮುಟ್ಟದೇ ಪ್ರಜೆಗಳನ್ನೆಲ್ಲಾ ಪೂರ್ಣವಾಗಿ ವೀಕ್ಷಿಸುತ್ತಾನೆ. ಇಲ್ಲಿ ಕೃಷ್ಟಿ

ಶಬ್ದವು ಮಾನವರಿಗೆ ಪರ್ಯಾಯಪದವು. ದೇಹವು ಯಾವಾಗಲೂ ಕ್ರಿಯಾನ್ವಿತವಾಗಿರುವುದರಿಂದಲೂ ಮತ್ತು ದೀರ್ಘವಾಗಿರುವುದರಿಂದಲೂ ಈ ವಿಶೇಷಣವಾಕ್ಯವಾದ ಪದವು.

ಮಿತ್ರ ಶಬ್ದವು ಸೂರ್ಯನಿಗೆ ಪರ್ಯಾಯಪದವಾಗಿರುವುದೆಂದು ಸಾಯಣರ ಮತ. ಮಿ ಮತ್ತು ತ್ರಾ ಎಂಬ ಎರಡು ಧಾತುಗಳೂ ಸೇರಿ ಮಿತ್ರ ಶಬ್ದವು ನಿಷ್ಪನ್ನವಾಗಿವೆಯೆಂದು ಈ ಪದದ ಅವಯವಾರ್ಥವನ್ನು ಬಿಡಿಸಿ ತೋರಿಸಿದ್ದಾರೆ. ಪ್ರಕರ್ಷೇಣ ಸರ್ವೈರ್ಮೀಯತೇ ಜ್ಞಾಯತೇ ತಥಾ ಸರ್ವಾನ್ ವೃಷ್ಟಿಪ್ರದಾನೇನ ತ್ರಾಯತ ಇತಿ ವಾ ಮಿತ್ರಃ ಸೂರ್ಯಃ। ಎಲ್ಲರಿಂದಲೂ ಪೂರ್ಣವಾಗಿ ತಿಳಿಯಲ್ಪಡುತ್ತಾನೆ. ಮತ್ತು ಎಲ್ಲರನ್ನೂ ರಕ್ಷಿಸುತ್ತಾನೆ. ಈ ಎರಡು ಗುಣಗಳೂ ಇರುವುದರಿಂದ ಸೂರ್ಯನು ಮಿತ್ರಶಬ್ದವಾಚ್ಯನಾಗಿದ್ದಾನೆ.

ಈ ಮಂತ್ರದಲ್ಲಿ ನಿರ್ದಿಷ್ಟವಾಗಿರುವ ಮೂರು ಕ್ರಿಯೆಗಳೂ ಸಹ ಜಗಚ್ಚಕ್ಷುವಾದ ಸೂರ್ಯನಿಗೆ ಸೇರಿದುದರಿಂದ ಸೂರ್ಯಪರವಾದ ಅರ್ಥವು ಸಾಧುವಾಗಿರುತ್ತದೆ. ಮಾನವರನ್ನು ಅವರವರ ಕರ್ಮಗಳಿಗೆ ಪ್ರೇರಿಸುವುದು, ದ್ಯಾವಾಪೃಥಿವಿಗಳನ್ನೆಲ್ಲಾ ಧರಿಸಿರುವುದು ಮತ್ತು ಸಮಸ್ತವನ್ನೂ ತನ್ನ ಪ್ರಭಾವರೂಪದಿಂದ ಪೂರ್ಣವಾಗಿ ನೋಡುವುದು. ಇದೇ ಈ ಮೂರು ಕಾರ್ಯಗಳು.

ಅವತ ಇತ್ಯೇಷ ಹೀದಗ್ಂ ಸರ್ವಮವತಿ।

(ಶ. ಬ್ರಾ. ೮-೭-೩-೧೩)

"ಈ ಸೂರ್ಯನೇ ಸಕಲ ಲೋಕವನ್ನೂ ಚೇತನಾತ್ಮಕವಾಗಿ ಮಾಡುತ್ತಾನೆ.'' ಇತ್ಯಾದಿಯಾಗಿ ವರ್ಣಿತವಾಗಿರುವ ಸೂರ್ಯ ಶಕ್ತಿಯು ಇಲ್ಲಿ ಯಾತಯತಿ ಎಂಬ ಪದದಿಂದ ಸೂಚಿತವಾಗಿದೆ. ಅಲ್ಲದೇ, ಸವಿತಾ ಸರ್ವಸ್ಯ ಪ್ರಸವಿತಾ ಇತ್ಯಾದಿ ಸ್ತುತಿಗಳೂ ಪ್ರಸಿದ್ಧವಾಗಿವೆ. ಮತ್ತು,

> ಅದಿತ್ಯಾಸ್ತ್ವಾ ಪೃಷ್ಠೇಸಾದಯಾಮೀತಿ । ಇಯಂ ವಾ ಅದಿತಿರಸ್ಯಾಮೇವೈನಮೇತತ್ಪ್ರತಿಷ್ಠಾಯಾಂ ಪ್ರತಿಷ್ಠಾಪಯತ್ಯಂತರಿಕ್ಷಸ್ಯ ಧರ್ತ್ರೀಂ ವಿಷ್ಟಂಭನೀಂ ದಿಶಾಮಧಿಪತ್ನೀಂ ಭುವನಾನಾಮಿತ್ಯಂತರಿಕ್ಷಸ್ಯ ಹ್ಯೇಷ ಧರ್ತಾ ವಿಷ್ಟಂಭನೋ ದಿಶಾಮಧಿಪತಿರ್ಭುವನಾನಾಮೂರ್ಮಿರ್ದ್ರಪ್ಸೋಽಪಾಮಸೀತಿ-ರಸಃ........ ॥

(ಶ. ಬ್ರಾ. ೮-೨-೧-೧೦)

ಆದಿತ್ಯಾದಿ ವಾಕ್ಯಗಳಲ್ಲಿ ಮೇಲೆ ಹೇಳಿರುವ ಸೂರ್ಯನ ಸಕಲ ಗುಣಗಳೂ ಒಟ್ಟಿಗೆ ಹೇಳಲ್ಪಟ್ಟಿವೆ. ಸರ್ವಾಧಾರಕವಾದ ಅದಿತಿಯ ಪುತ್ರನೇ, ವಿಶ್ವಜ್ಯೋತೀರೂಪನಾದ ಈ ಆದಿತ್ಯನು. ಈ ಆದಿತ್ಯನು ಅಂತರಿಕ್ಷಾದಿ ಸಕಲ ಲೋಕಗಳನ್ನೂ ಧರಿಸಿರುವವನು, ವಿಶ್ವಪ್ರಭುವಾದ ಪ್ರಜಾಪತಿಯು, ಜಗಚ್ಚಕ್ಷುವು ಇತ್ಯಾದಿಯಾಗಿ ಸಕಲ ಗುಣಗಳೂ ವರ್ಣಿತವಾಗಿವೆ.

ಕೃಷ್ಟೀಃ—ಕೃಷ್ಟಿಶಬ್ದಕ್ಕೆ ಕರ್ಮವಂತಃ ಮನುಷ್ಯಾನ್। ಕ್ರಿಯಾಯುಕ್ತರಾದ ಮನುಷ್ಯರನ್ನು ಎಂದರ್ಥ ಮಾಡಿವೆ. ದ್ಯಾವಾಪೃಥಿವಿಗಳೆರಡನ್ನೂ ಸೂರ್ಯರೂಪನಾದ ಮಿತ್ರನು ಧರಿಸಿದ್ದಾನೆ ಎಂದು ವರ್ಣಿತವಾಗಿರುವುದರಿಂದ ಕೃಷ್ಟಿ ಶಬ್ದಕ್ಕೆ ದೇವಮಾನವಾಗಿ ಸಕಲ ಪ್ರಜೆಗಳನ್ನು ಎಂದು ಹೇಳಿದರೂ ತಪ್ಪಾಗಲಾರದು.

ಯಸ್ಯೇಕ್ಷ್ವಾಕುರುಪ ವ್ರತೇ ರೇವಾನ್ಮರಾಯ್ಯೇಧತೇ ದಿವೀವ ಪಂಚ ಕೃಷ್ಟಯಃ।

(ಋ. ಸಂ. ೧೦-೬೦-೪)

ಇತ್ಯಾದಿ ಸ್ಥಳಗಳಲ್ಲಿ ಪಾರ್ಥಿವವಾದ ಪಂಚಕೃಷ್ಟಿಗಳಿಗೂ ಮತ್ತು ದ್ಯುಲೋಕದ ಪಂಚಕೃಷ್ಟಿಗಳಿಗೂ ಸಾಮ್ಯವನ್ನು ಹೇಳಿದೆ. ಅಲ್ಲದೆ, ಪಂಚಕೃಷ್ಟಿಗಳು ಯಾರೆಂದು ತಿಳಿಸುವಾಗ ಮನುಷ್ಯಾಃ ಪಿತರೋ ದೇವಾಗಂಧರ್ವೋರಗರಾಕ್ಷಸಾಃ (ಬೃ. ದೇ. ನಿ. ೬೮) ದೇವಮನುಷ್ಯಾದಿ ಐದು ಪಂಗಡಗಳೂ ಸೇರಿ ಪಂಚಕೃಷ್ಟಿಗಳಾಗಿರುವರು ಎಂದು ಹೇಳಿರುವುದರಿಂದಲೂ ಸಹ ಇಲ್ಲಿ ಮೇಲಿನ ಅರ್ಥವನ್ನು ಹೇಳುವುದರಲ್ಲಿ ದೋಷವಿರಲಾರದು.

ಅಭಿಚಷ್ಟೇ—ಚಕ್ಷ್ ಧಾತುವಿಗೆ ಅಭಿ ಎಂಬ ಉಪಸರ್ಗದೊಡನೆ ಸೇರಿದಾಗ ಸುತ್ತಲೂ ನೋಡು ಎಂಬರ್ಥವೂ ಮತ್ತು ಸುತ್ತಲೂ ಸರ್ವರಿಗೂ ಕಾಣಿಸಿಕೊಳ್ಳುವಂತೆ ಪ್ರಕಾಶಿಸು ಎಂಬರ್ಥವೂ ಆಗುತ್ತದೆ. ನಿರುಕ್ತಕಾರರು ಚಕ್ಷಸೇ ಎನ್ನುವ ಪದಕ್ಕೆ ದರ್ಶನಾಯ (ನಿ. ೯–೨೬) ನೋಡುವುದಕ್ಕಾಗಿ ಎಂದೂ ಅಭಿಚಷ್ಟೇ ಎನ್ನುವ ಪದಕ್ಕೆ ಅಭಿಪಶ್ಯತಿ (ನಿ. ೧೦-೨೨) ಸರ್ವತಃ ಪಶ್ಯತಿ । ಸುತ್ತಲೂ ಚೆನ್ನಾಗಿ ನೋಡುತ್ತಾನೆ ಎಂದೂ ತಾತ್ಪರ್ಯವನ್ನು ಹೇಳಿದ್ದಾರೆ. ಮಹೇ ರಣಾಯ ಚಕ್ಷಸೇ (೧೦–೯–೧) ಇತ್ಯಾದ್ಯುದಾಹರಣೆಗಳಲ್ಲಿ ಮೇಲಿನ ಅರ್ಥವಿದೆ, ಮತ್ತು,

ಮಹತ್ತೇ ವಿಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।
(ಋ. ಸಂ. ೮–೪೨೬)

ಎಂಬಲ್ಲಿ ಅಭಿಚಕ್ಷ್ಯ ಶಬ್ದಕ್ಕೆ ಪ್ರಕಾಶ್ಯ ಎಂದರೆ ಇತರರು ಪೂರ್ಣವಾಗಿ ನೋಡಲು ಸಹಾಯವಾಗುವಂತೆ ಪ್ರಕಾಶಪಡಿಸಿ ಕಾಣಿಸಿಕೊಳ್ಳುವುದು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನೆಲ್ಲಾ ಧರಿಸಿರುವ ಆದಿತ್ಯನು ಎರಡು ವಿಧವಾದ ಶಕ್ತಿಗಳನ್ನು ಹೊಂದಿದ್ದಾನೆಂದು ಹೇಳಬಹುದು. ಜಗತ್ತನ್ನೆಲ್ಲಾ ಬೆಳಗಿಸುವ ಶಕ್ತಿಯೂ ಜಗಚಕ್ಷುವಾಗಿರುವ ಶಕ್ತಿಯೂ ಇವನೊಬ್ಬನಲ್ಲೇ ಇರುತ್ತದೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।
ಅಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥
(ಋ. ಸಂ. ೧–೧–೪–೧)

ಇತ್ಯಾದಿ ಮಂತ್ರಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಸಮಸ್ತ ಗುಣಗಳೂ ಒಟ್ಟಿಗೆ ವರ್ಣಿತವಾಗಿವೆ. ಇದೇ ಮಂತ್ರವು ತೈತ್ತಿರೀಯಸಂಹಿತೆಯಲ್ಲಿ ಕೊಂಚ ವ್ಯತ್ಯಸ್ತವಾಗಿದೆ. ಅಲ್ಲಿಯ ಕ್ರಮವೇನೆಂದರೆ—

ಮಿತ್ರೋ ಜನಾನ್ಯಾತಯತಿ ಪ್ರಜಾನನ್ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।
ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಸತ್ಯಾಯ ಹವ್ಯಂ ಘೃತವದ್ವಿಧೇಮ ॥
(ತೈ. ಸಂ, ೩–೪೧–೧–೫)

ಪ್ರಕೃತವಾದ ಋಕ್ಕಿನಲ್ಲಿ ಬ್ರುವಾಣಃ ಎಂಬುದಕ್ಕೆ ಬದಲಾಗಿ ತೈತ್ತಿರೀಯಸಂಹಿತೆಯಲ್ಲಿ ಪ್ರಜಾನನ್ ಎಂದೂ, ಉತ್ತರಾರ್ಧದಲ್ಲಿ ಮಿತ್ರಾಯ ಎನ್ನುವುದಕ್ಕೆ ಬದಲಾಗಿ ಸತ್ಯಾಯ ಎಂದೂ ಉಕ್ತವಾಗಿದೆ. ಉದಾಹೃತವಾಗಿರುವ ಮಂತ್ರದಲ್ಲಿ ಪೂರ್ವಾರ್ಧದಲ್ಲಿ ಪ್ರಜಾನನ್ ಎಂದಿರುವುದರಿಂದ ಅಭಿಚಷ್ಟೇ ಎಂಬ ಪದಕ್ಕೆ ಪ್ರಕಾಶಯತಿ ಎಲ್ಲವನ್ನೂ ಪ್ರಕಾಶಿಸುವಂತೆ ಮಾಡುತ್ತಾನೆ ಎಂಬರ್ಥವು ಹೊಂದಿಕೊಳ್ಳುತ್ತದೆ. ಮತ್ತು ಸತ್ಯಾಯ ಹವ್ಯಂ ಎಂದು ಮಿತ್ರ ಶಬ್ದಕ್ಕೆ ಸತ್ಯ ಶಬ್ದವು ಪರ್ಯಾಯಪರವಾಗಿರುವುದೂ ಸಹಜವಾಗಿದೆ. ದೇವಸುವಾಂ ಹವಿಷ್ಷು ಮಿತ್ರಸ್ಯ .... .... ದೇವಸೂ ಎಂಬ

ಯಾಗದಲ್ಲಿ ಸತ್ಯಾತ್ಮಕನಾದ ಮಿತ್ರನನ್ನುದ್ದೇಶಿಸಿ ಅರ್ಪಿಸಲ್ಪಡತಕ್ಕದ್ದು ಎಂದು ವಿಧಿಯು ಈ ಅಭೇದವನ್ನು ತೋರಿಸುತ್ತದೆ. ಈ ವಿಷಯವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೆರಡನೆಯ ಖಂಡವು ಸಮಾಪ್ತವು.

---

# ಅಥ ತ್ರಯೋವಿಂಶತಿಖಂಡಃ

## ಇಪ್ಪತ್ತಮೂರನೆಯ ಖಂಡವು

ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸದಾಧಾರ' ಪೃಥಿವೀಂ ದ್ಯಾಮುತೇಮಾ ಕಸ್ಮೈ ದೇವಾಯ ಹವಿಷಾ ವಿಧೇಮ (ಋ. ಸಂ. ೧೦-೧೨೧-೧) ॥ ಹಿರಣ್ಯಗರ್ಭಃ ಹಿರಣ್ಯಮಯೋ ಗರ್ಭೋ$^{\prime}$ ಹಿರಣ್ಯಮಯೋ ಗರ್ಭೋ$^{\prime}$ಽಸ್ಯೇತಿ ವಾ ಗರ್ಭೋ ಗೃಭೇರ್ಗೃಣಾತ್ಯರ್ಥೇ ಗಿರತ್ಯನರ್ಥಾನಿತಿ ವಾ ಯದಾ ಹಿ ಸ್ತ್ರೀ ಗುಣಾನ್ ಗೃಹ್ಣಾತಿ ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ ಸಮಭವದಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ ಸ ಧಾರಯತಿ ಪೃಥಿವೀಂ ಚ ದಿವಂ ಚ ಕಸ್ಮೈ ದೇವಾಯ ಹವಿಷಾ ವಿಧೇಮೇತಿ ವ್ಯಾಖ್ಯಾತಂ ವಿಧತಿರ್ದಾನಕರ್ಮಾ ಸರಸ್ವಾನ್ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೨೩ ॥

ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।
ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ
ಹವಿಷಾ ವಿಧೇಮ ॥

(ಋ. ಸಂ. ೮–೭–೩)

ಕ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಹಿರಣ್ಮಯವಾದ ಪ್ರಪಂಚಗರ್ಭವುಳ್ಳ ಸೂತ್ರಾತ್ಮನು ಪ್ರಪಂಚೋತ್ಪತ್ತಿಗಿಂತಲೂ ಮೊದಲು ಪರಮಾತ್ಮನಿಂದ ಉಂಟಾದನು. ಅವನು ಹುಟ್ಟಿದೊಡನೆಯೇ ಅದ್ವಿತೀಯನಾಗಿ ಈ ಜಗತ್ತಿಗೆ ಈಶ್ವರನಾದನು. ಅವನು ಅಂತರಿಕ್ಷಲೋಕ, ದ್ಯುಲೋಕ, ಭೂಲೋಕಗಳನ್ನೂ ಇಂದಿಗೂ ಧರಿಸಿರುತ್ತಾನೆ. ಈ ರೀತಿ ಮಾಹಾತ್ಮ್ಯವುಳ್ಳ ಆ ಪ್ರಜಾಪತಿ ದೇವನನ್ನು ಹವಿಸ್ಸಿನಿಂದ ಸೇವಿಸೋಣ.

## ಹಿರಣ್ಯಗರ್ಭೋ ಹಿರಣ್ಮಯೋ ಗರ್ಭೋ, ಹಿರಣ್ಮಯೋ ಗರ್ಭೋಽಸ್ಯೇತಿ ವಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ, ಹಿರಣ್ಮಯಃ—ವಿಜ್ಞಾನಮಯನೆಂದರ್ಥ. ಗರ್ಭವೆಂದರೆ ಮಧ್ಯಭಾಗ ಹೃದಯ ಸರ್ವಪ್ರಾಣಿಗಳ ಅಂತಃಪ್ರಕಾಶವು ಇದರಿಂದಲೇ ಆಗುತ್ತದೆ. ಹಿರಣ್ಮಯಶ್ಚಾಸೌ ಗರ್ಭಶ್ಚ ವಿಜ್ಞಾನಸ್ವರೂಪನೆಂದೇ ಅರ್ಥ ಅಥವಾ ಹಿರಣ್ಮಯರೂಪಗರ್ಭವುಳ್ಳವನು ಹಿರಣ್ಯಗರ್ಭನು. ಈ ಪರಮಾತ್ಮನಿಂದಲೇ ಶರೀರೇಂದ್ರಿಯಬುದ್ಧ್ಯಾದಿಗಳು ಪ್ರಕಾಶಿಸುವುದು. ಲೋಕದಲ್ಲಿ ಹಿರಣ್ಯ (ಚಿನ್ನ) ವೇ ಸರ್ವವಿಶೇಷವನ್ನು ಹೊಂದಿರುವುದರಿಂದ ತತ್ಪ್ರತಿಕೃತಿಯನ್ನಾಗಿ ಹೇಳಿರುತ್ತಾರೆ.

## ಗರ್ಭೋ—ಗೃಭೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ ॥

ನಿಗಮಪ್ರಸಕ್ತವಾದ ಗರ್ಭಪದದ ವ್ಯುತ್ಪತ್ತಿಯನ್ನು ತಿಳಿಸುತ್ತಾರೆ. ಗೃಣಾತಿಯೆಂಬುದು ಸ್ತುತ್ಯರ್ಥದಲ್ಲಿ (ನಿಘ. ೩–೧೪–೩) ಹೇಳಿದೆ, ಸ್ತುತ್ಯರ್ಥಕವಾದ ಗೃಭ ಧಾತುವಿಗೆ 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' ಸೂತ್ರದಿಂದ ಕರ್ಮಣಿಯಲ್ಲಿ ಘ ಪ್ರತ್ಯಯ, ಗುಣ. ಸರ್ವಸ್ತುತ್ಯವಾದುದು ಗರ್ಭ. ಅಥವಾ ಸಕಲ ಅನರ್ಥಗಳನ್ನು ನುಂಗುವುದು ನಾಶಪಡಿಸುವುದು ಗರ್ಭ ಕರ್ತ್ರರ್ಥದಲ್ಲಿ ಗೃ ಧಾತುವಿಗೆ ಭ ಪ್ರತ್ಯಯ ಬಂದಾಗ ಗುಣ. ಮಧ್ಯಭಾಗವೆಂದು ತಾತ್ಪರ್ಯ.

## ಯದಾ ಹಿ ಸ್ತ್ರೀ ಗುಣಾನ್ಗೃಹ್ಣಾತಿ, ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ ॥

ಸ್ತ್ರೀಗರ್ಭ ಉತ್ಪತ್ತಿಯನ್ನು ತಿಳಿಸುತ್ತಾರೆ. ಸ್ತ್ರೀ ಶಬ್ದದಿಂದ ಅವಳ ಉದರದಲ್ಲಿರುವ ರಕ್ತವು ವಿವಕ್ಷಿತವಾಗಿದೆ. ಯಾವಾಗ ಇವಳು ಪುರುಷನ ಶುಕ್ರಾವಸ್ಥೆಯಲ್ಲಿರುವ ಗುಣಗಳನ್ನು ಅಂದರೆ ಅಸ್ಥಿಸ್ನಾಯುಮಜ್ಜಾಗಳನ್ನು ಹೊಂದುತ್ತಾಳೋ, ಆಗ ಅವುಗಳಿಂದ ತನ್ನದನ್ನು ಸೇರಿಸುತ್ತಾಳೆ. ಇವಳ ರಕ್ತದಲ್ಲಿ ತ್ವಕ್, ಮಾಂಸ, ಶೋಣಿತರೂಪ ಗುಣಗಳಿರುತ್ತವೆ. ಇವುಗಳು ಪುರುಷನ ಶುಕ್ರಗಳೊಡನೆ ಕಲೆಯುತ್ತವೆಯೆಂದರ್ಥ. ಹೀಗೆ ಇತರೇತರ ಕೋಶಗ್ರಹಣ ಸಂಬಂಧವಾದಾಗ ಸ್ತ್ರೀಯು ಗರ್ಭವನ್ನು ಧರಿಸುತ್ತಾಳೆ. ಅಥವಾ ಪುರುಷನ ಪ್ರೇಮದಿಂದ ಇವಳು ಗುಣಗಳನ್ನು ಹೊಂದುತ್ತಾಳೆ. ಇವಳ ಗುಣಗಳು ಪುರುಷನಿಂದ ಗೃಹೀತವಾಗುತ್ತವೆ, ಪರಸ್ಪರ ಗುಣಗ್ರಹಣದಿಂದ ಅತಿಶಯ ಹರ್ಷವಾಗುತ್ತದೆ. ಅತಿಶಯ ಸಂತೋಷಗೊಂಡು ಇವರು ಸಂಪರ್ಕಹೊಂದಿದಾಗ ಗರ್ಭಗ್ರಹಣವಾಗುತ್ತದೆ. ಪರಸ್ಪರ ಗ್ರಹಣದಿಂದ ಗರ್ಭವಾಗುವುದರಿಂದ ಗ್ರಹಧಾತುವಿನಿಂದ ಈರೂಪವೆಂದು ತಿಳಿಯಬೇಕು. ಪೃಷೋದರಾದಿಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ.

## ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ ಸ ಧಾರಯತಿ ಪೃಥಿವೀಂ ಚ ದಿವಂ ಚ ತಸ್ಮೈದೇವಾಯ ಹವಿಷಾ ವಿಧೇಮೇತಿ ವ್ಯಾಖ್ಯಾತಂ । ವಿದಧತಿರ್ದಾನಕರ್ಮಾ ॥

ಚಕಾರದಿಂದ ಅಂತಿರಿಕ್ಷಲೋಕವು ಸಂಗೃಹೀತವಾಗುತ್ತದೆ. ಪಾಠಮಾತ್ರದಿಂದಲೇ ಸ್ಪಷ್ಟಾರ್ಥ ತಿಳಿಯುತ್ತದೆ. ವಿಧ–ವಿಧಾನೇ ಎಂದು ವಿಧಾನಾರ್ಥದಲ್ಲಿ ಪಠಿತವಾದರೂ ಇಲ್ಲಿ ದಾನಾರ್ಥ ಹೇಳಬೇಕು. ಲಿಡುತ್ತಮಪುರುಷ ಬಹುವಚನರೂಪ.

ಸರಸ್ವಾನ್ ವ್ಯಾಖ್ಯಾತಃ । ತಸ್ಯೈಷಾ ಭವತಿ ॥ ೨೩ ॥

ಕ್ರಮಪ್ರಾಪ್ತವಾದ ಸರಸ್ವಾನ್‌ಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ಸರಸ್ವತೀ ಪದದ ನಿರ್ವಚನದಿಂದ (ನಿಘ. ೨-೨೩ ಗತಾರ್ಥವಾಗುತ್ತದೆ. ಇಲ್ಲಿ ಲಿಂಗ ಮಾತ್ರ ವ್ಯತ್ಯಾಸ ತಿಳಿಯಬೇಕು. ಗತ್ಯರ್ಥಕ ಸೃ ಧಾತುವಿಗೆ ಅಸುನ್ ಪ್ರತ್ಯಯ ಬಂದಾಗ ಸರಃ ಎಂದಾಗುತ್ತದೆ. ಇದರಮೇಲೆ ಮತ್ವರ್ಥದಲ್ಲಿ ಮತುಪ್‌ಪ್ರತ್ಯಯ ಸರಃ – ನೀರು. ಅದರಿಂದ ಕೂಡಿದವನು ಸರಸ್ವಾನ್ ಮಾಧ್ಯಮಿಕದೇವತೆ. ಮುಂದೆ ಹೇಳುವ ಮಂತ್ರವು ಸರಸ್ವಾನ್ ದೇವನ ಸ್ತುತಿಯನ್ನು ಪ್ರತಿ ಪಾದಿಸುತ್ತದೆ.

ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।
ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥ ೧ ॥

ಹಿರಣ್ಯಗರ್ಭನಾಮಧೇಯನಾದ ಪ್ರಜಾಪತಿಯು ಪ್ರಪಂಚಸೃಷ್ಟಿಗೆ ಪೂರ್ವದಲ್ಲಿ ತಾನೇತಾನಾಗಿ (ತಾನೊಬ್ಬನು ಮಾತ್ರ) ಇದ್ದನು. ಅನಂತರ ಇವನು ಉತ್ಪನ್ನನಾದ ಕೂಡಲೇ ತನ್ನ ಅಂಶದಿಂದಲೇ ಸೃಷ್ಟವಾದ ಬ್ರಹ್ಮಾಂಡಾದಿ ಸಕಲ ಜಗತ್ತಿಗೂ ತಾನೇ ಏಕಮಾತ್ರ ಪ್ರಭುವಾಗಿದ್ದನು. ಆ ಹಿರಣ್ಯಗರ್ಭನು ವಿಸ್ತಾರವಾದ ಸ್ವರ್ಗಲೋಕವನ್ನೂ ಈ ಭೂಮಿಯನ್ನೂ ಅಂತರಿಕ್ಷವನ್ನೂ ತನ್ನ ಸಾಮರ್ಥ್ಯದಿಂದ ಧರಿಸುತ್ತಾನೆ. ಎಂದರೆ ಇವನ ಆಶ್ರಯದಿಂದಲೇ ಈ ಪೃಥಿವ್ಯಾದಿ ಲೋಕಗಳು ಸ್ಥಾಪಿತವಾಗಿವೆ. ದಾನಾದಿ ಗುಣಯುಕ್ತವಾದ ಪ್ರಜಾಪತಿಯನ್ನೇ ವಪಾಪುರೋಡಾಶ ಹವಿಸ್ಸುಗಳಿಂದ ಉಪಚರಿಸೋಣ. (ಸೇವಿಸೋಣ,

ಹಿರಣ್ಯಗರ್ಭಃ ಸಂ ಅವರ್ತತ ಅಗ್ರೇ— ಹಿರಣ್ಯಗರ್ಭಶಬ್ದಕ್ಕೆ ಭಾಷ್ಯಕಾರರು ಎರಡು ಮೂರುವಿಧ ಅರ್ಥಗಳನ್ನು ಹೇಳಿರುವರು. ಹಿರಣ್ಯಗರ್ಭನೇ ಪ್ರಜಾಪತಿಯೆಂದು ಪ್ರಜಾಪತಿರ್ವೈ ಹಿರಣ್ಯಗರ್ಭಃ ತೈತ್ತಿರೀಯಸಂಹಿತೆಯಲ್ಲಿ (ತೈ.ಸಂ. ೫-೫-೧-೨) ಹೇಳಿದೆ. ಹಿರಣ್ಯಗರ್ಭಃ ಎಂದರೆ ಹಿರಣ್ಮಯಸ್ಯಾಂಡಸ್ಯಗರ್ಭಭೂತಃ ಪ್ರಜಾಪತಿರ್ಹಿರಣ್ಯಗರ್ಭಃ— ಸೃಷ್ಟಿಗೆ ಪೂರ್ವದಲ್ಲಿ ಸಮಸ್ತವಿಶ್ವವೂ ಒಂದು ಅಂಡಾಕಾರ (ಕೋಳೀ ಮೊಟ್ಟೆಯ ಆಕಾರ) ದಲ್ಲಿದ್ದು ಅದು ಪ್ರಜಾಪತಿಯ ಉದರದಲ್ಲಿ ಅಂತರ್ಗತವಾಗಿದ್ದಿತು. ಆ ಅಂಡವು ಚಿನ್ನದಂತೆ ಥಳಥಳಿಸುತ್ತಾ ಪ್ರಕಾಶಮಾನವಾಗಿದ್ದಿತು. ಅಂತಹ ಹಿರಣ್ಯರೂಪವಾದ ಅಂಡವನ್ನು ತನ್ನ ಉದರದಮಧ್ಯದಲ್ಲಿ ಇಟ್ಟುಕೊಂಡಿರುವ ಪ್ರಜಾಪತಿಯನ್ನು ಹಿರಣ್ಯಗರ್ಭನೆಂದು ಕರೆಯುವ ಪದ್ಧತಿ ಇದೆ: ಇದಲ್ಲದೆ ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮನು ಅವ್ಯಕ್ತಾವಸ್ಥೆ (ಸೂಕ್ಷ್ಮಾವಸ್ಥೆಯಲ್ಲಿದ್ದಾಗ) ಕಣ್ಣಿಗೆ ಕಾಣಿಸುತ್ತಿರುವ ಈಜಗದಾದಿಗಳೊಂದೂ ಇರಲಿಲ್ಲ. ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯು ಪರಮಾತ್ಮನಲ್ಲಿ ಉಂಟಾದಾಗ ಅವ್ಯಕ್ತಸ್ವರೂಪವು ವ್ಯಕ್ತರೂಪವನ್ನು ಹೊಂದಿತು ಇದನ್ನೇ—

ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ಇದಗ್‌ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ ॥

(ತೈ. ಉ. ೨-೬)

ಎಂಬ ಉಪನಿಷದ್ವಾಕ್ಯವು ಪ್ರತಿಪಾದಿಸುವುದು. ಆ ಪರಬ್ರಹ್ಮವು (ಅಥವಾ ಪರಮಾತ್ಮನು) ವ್ಯಕ್ತಸ್ವರೂಪ ಹೊಂದುವಾಗ ಅವನಲ್ಲಿ ಸೂಕ್ಷ್ಮರೂಪದಿಂದ ಲೀನವಾಗಿದ್ದ ಜಗದಾದಿಗಳನ್ನೇ ಇಲ್ಲಿ ಅಂಡರೂಪದಿಂದ ಇದ್ದಿತೆಂದು ಹೇಳಲಾಗಿದೆ. ಒಂದು ವಸ್ತುವಿನ ಮಧ್ಯದಲ್ಲಿ ಅಂತರ್ಗತವಾಗಿರುವ ಮತ್ತೊಂದು ವಸ್ತುವಿಗೆ ಗರ್ಭವೆಂದು ಹೇಳಲ್ಪಡುವುದು. ಆದ್ದರಿಂದ ಪರಮಾತ್ಮನಲ್ಲಿ ಅವ್ಯಕ್ತರೂಪದಿಂದ (ಸೂಕ್ಷ್ಮರೂಪದಿಂದ) ಲೀನವಾಗಿದ್ದ ಜಗದಾದಿಗಳನ್ನು ಇಲ್ಲಿ ಅಂಡ ಅಥವಾ ಗರ್ಭವೆಂದು ಹೇಳಲಾಗಿದೆ. ಇದು ಹಿರಣ್ಯ (ಸುವರ್ಣ) ದಂತೆ ಪ್ರಕಾಶಮಾನವಾಗಿರುವುದೆಂದು ವರ್ಣಿಸಿ, ಇಂತಹ ಹಿರಣ್ಯಾಂಡವನ್ನು ಗರ್ಭ ಮಧ್ಯದಲ್ಲಿಟ್ಟುಕೊಂಡಿರುವ ಈ ಪರಮಾತ್ಮ ಅಥವಾ ಪ್ರಜಾಪತಿಯನ್ನು ಹಿರಣ್ಯಗರ್ಭನೆಂದು ಸ್ತುತಿಸಲಾಗಿದೆ. ಹಿರಣ್ಯಗರ್ಭನು (ಅಥವಾ ಪ್ರಜಾಪತಿಯು) ಸೃಷ್ಟಿಗೆ ಪೂರ್ವದಲ್ಲಿ ತಾನೊಬ್ಬನೇ ಇದ್ದನು. ಸೃಷ್ಟಿಯಾಗಿರಲಿಲ್ಲವಾದ್ದರಿಂದ ಆಗ ಈ ಪ್ರಜಾಪತಿಯು ಹೊರತು ಮತ್ತಾರೂ ಇರಲಿಲ್ಲ.

**ಭೂತಸ್ಯ ಜಾತಃ ಪತಿಃ ಏಕಃ ಆಸೀತ್**— ಸೃಷ್ಟಿಗೆ ಪೂರ್ವದಲ್ಲಿ ಈ ಹಿರಣ್ಯಗರ್ಭನು ಒಬ್ಬನೇ ಇದ್ದನೆಂದು ಹೇಳಿದೆಯಷ್ಟೆ. ಆಗ ಇತರ ಚರಾಚರ ವಸ್ತುಗಳು ಇರಲಿಲ್ಲವೆಂದಾಯಿತು. ಹಾಗಾದರೆ **ಭೂತಸ್ಯ ಪತಿಃ** ಸಮಸ್ತ ಭೂತವರ್ಗಕ್ಕೆ ಪ್ರಾಣಿಗಳಿಗೆ ಇವನು ಹೇಗೆ ಸ್ವಾಮಿಯು ? ಪ್ರಾಣಿಗಳೇ ಇಲ್ಲದಿದ್ದಾಗ ಪ್ರಾಣಿಗಳಿಗೆ ಪತಿಯೆನ್ನುವುದು ಅಸಂಭವವಲ್ಲವೇ ಎಂದರೆ, ಆ ಸಮಸ್ತ ಭೂತಗಳು ಎಂದರೆ ಸಮಸ್ತ ಬ್ರಹ್ಮಾಂಡಗಳನ್ನು ಒಳಗೊಂಡ ವಿಶ್ವವು ಈ ಹಿರಣ್ಯಗರ್ಭನಿಂದಲೇ ಉತ್ಪನ್ನವಾಯಿತು. ಹಾಗೆ ಸಮಸ್ತ ಜಗತ್ತೂ (ಅವುಗಳಲ್ಲಿರುವ ಪ್ರಾಣಿಗಳೂ) ಉತ್ಪನ್ನವಾದಕೂಡಲೇ ಅವುಗಳಿಗೆಲ್ಲಾ ಈ ಹಿರಣ್ಯಗರ್ಭನು ಅಥವಾ ಪ್ರಜಾಪತಿಯು ಏಕಮಾತ್ರ ಪ್ರಭುವಾಗಿದ್ದನು. ಇವನನ್ನು ಬಿಟ್ಟು ಬೇರೊಬ್ಬ ಪ್ರಭುವಿರಲಿಲ್ಲ. ಸಮಸ್ತವೂ ಇವನಾಜ್ಞೆಗೆ ಒಳಪಟ್ಟಿದ್ದಿತು ಎಂದಭಿಪ್ರಾಯವು.

**ಸಃ ದಾಧಾರ ಪೃಥಿವೀಂ ದ್ಯಾಂ ಉತ ಇಮಾಂ**— ಈ ಪ್ರಜಾಪತಿಯ ಅಂಶದಿಂದಲೇ ಉತ್ಪತ್ತಿಯಾದ ಪೃಥಿವ್ಯಂತರಿಕ್ಷ ಸ್ವರ್ಗಲೋಕಗಳಿಗೆ ಇವನೇ ಆಧಾರಭೂತವಾಗಿ, ತನ್ನ ಅತಿಶಯವಾದ ಶಕ್ತಿಸಾಮರ್ಥ್ಯಗಳಿಂದ ಅವುಗಳ ಸ್ಥಿತಿಗೆ ಕಾರಣಭೂತನಾಗಿದ್ದನು. ಇವನ ಶಕ್ತಿಸಾಮರ್ಥ್ಯಗಳಿಂದಲೇ ಪೃಥಿವ್ಯಾದಿ ಲೋಕಗಳು ಅವುಗಳ ನಿರ್ದಿಷ್ಟಸ್ಥಾನಗಳಲ್ಲಿ ಸ್ಥಾಪಿತವಾಗಿ ತಮ್ಮ ತಮ್ಮ ಕರ್ತವ್ಯ ಕರ್ಮನಿರ್ವಹಣೆಯಲ್ಲಿ ಸಮರ್ಥವಾಗಿರುವವು,

**ಕಸ್ಮೈ ದೇವಾಯ ಹವಿಷಾ ವಿಧೇಮ**— ಕಃ ಎಂಬ ಶಬ್ದಕ್ಕೆ ಎರಡು ಮೂರು ಅರ್ಥಗಳನ್ನು ಹೇಳಬಹುದು. ಕಿಂ ಶಬ್ದಕ್ಕೆ ಏನು ಎಂದು ಅನಿರ್ಜ್ಞಾತವಾದ ಅರ್ಥವಿರುವುದು. ಏನು, ಯಾವುದು ಎಂದು ಕೇಳುವಾಗ ಅದರ ಸ್ವರೂಪವು ತಿಳಿದಿರುವುದಿಲ್ಲ. ಅದರಂತೆ ಕಸ್ಮೈ ಎಂದು ಹೇಳುವಾಗ ಈ ಪ್ರಜಾಪತಿಯ ಸ್ವರೂಪವು ಅಥವಾ ಸಾಮರ್ಥ್ಯವು ಸಾಧಾರಣ ಜನರಿಗೆ ತಿಳಿಯದು ಎಂದು ಹೇಳಬಹುದು. ಎಂದರೆ, ಯಾರಿಂದಲೂ ಸಂಪೂರ್ಣವಾಗಿ ತಿಳಿಯಲಸಾಧ್ಯವಾದ ಸ್ವರೂಪವುಳ್ಳ ಎಂಬರ್ಥವನ್ನು ಹೇಳಬಹುದು. ಅಥವಾ ಕಂ ಎಂದರೆ ಸುಖವು. ಕಸ್ಮೈ ಎಂದರೆ ಸುಖಸ್ವರೂಪನಾದ ಎಂದು ಅರ್ಥವನ್ನೂ ಹೇಳಬಹುದು. **ಆನಂದೋ ಬ್ರಹ್ಮೇತಿ ವ್ಯಜಾನಾತ್** ಎಂಬ ಶ್ರುತಿವಾಕ್ಯದಂತೆ, ಬ್ರಹ್ಮನು (ಅಥವಾ ಪ್ರಜಾಪತಿಯು) ಆನಂದ ಅಥವಾ ಸುಖಸ್ವರೂಪನಾಗಿರುವನು. ಅಥವಾ ಈ ಸೂಕ್ತದ ಪೀಠಿಕೆಯಲ್ಲಿ ಹೇಳಿರುವ ಉಪಾಖ್ಯಾನದಂತೆ ಪ್ರಜಾಪತಿಗೆ ಕಃ ಎಂಬ ಹೆಸರು ಕಾರಣಾಂತರದಿಂದ ಪ್ರಾಪ್ತವಾಗಿರುವುದು. **ಪ್ರಜಾಪತಿರ್ವೈ ಕಃ** (ತೈ. ಬ್ರಾ. ೨-೨-೫ ೫) ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಪ್ರಜಾಪತಿಗೆ ಕಃ ಎಂಬ ಹೆಸರಿರುವುದು ಎಂದು ಹೇಳಿದೆ. ಇಂತಹ ಸುಖಸ್ವರೂಪನಾದ ಹಿರಣ್ಯಗರ್ಭನನ್ನು ಅಥವಾ ಪ್ರಜಾಪತಿಯನ್ನು ಚರುಪುರೋಡಾಶಾದಿ ಹವಿರ್ದ್ರವ್ಯಗಳಿಂದ ಉಪಚರಿಸಿ ಸೇವಿಸೋಣ

ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ಋಕ್ಕಿನಲ್ಲಿರುವ ಕಃ ಎಂಬ ಶಬ್ದದ ಅರ್ಥವಿವರಣೆ ಮಾಡುತ್ತಾ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಕಃ । ಕಃ ಕಮನೋ ವಾ ಕ್ರಮಣೋ ವಾ ಸುಖೋ ವಾ । ತಸ್ಯೈಷಾ ಭವತಿ ॥** (ನಿ. ೧೦-೨೨)

ಕಃ ಎಂದರೆ—ಕಮನೋ ವಾ । ಕಮ್—ಪ್ರೀತಿಸು ಎಂಬ ಧಾತುವಿನಿಂದ ಕಃ ಎಂಬ ಶಬ್ದವು ನಿಷ್ಪನ್ನವಾಗಿದೆ. ಪ್ರೀತಿಸುವವನು ತಾನು ಸೃಷ್ಟಿಸಿದ ಸಮಸ್ತ ಪ್ರಾಣಿಗಳನ್ನು ಪ್ರೀತಿಸುವವನು ಎಂದರ್ಥವು; ಅಥವಾ ಕಃ ಎಂದರೆ ಕ್ರಮಣೋ ವಾ– ಅತಿಕ್ರಮಿಸುವವನು. ಎಲ್ಲವನ್ನು ತನ್ನ ಶಕ್ತಿಸಾಮರ್ಥ್ಯಗಳಿಂದ ಅತಿಕ್ರಮಿಸುವವನು, ಎಲ್ಲರಿಗಿಂತಲೂ ಅಧಿಕನಾದವನು ಎಂದರ್ಥವು; ಅಥವಾ ಕಃ ಸುಖೋ ವಾ– ಕಂ ಎಂದರೆ ಸುಖವು. ಸುಖಸ್ವರೂಪನಾದವನು ಎಂದೂ ಅರ್ಥವು. ಈ ಶಬ್ದದ ಪ್ರಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।**

**ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ತಸ್ಮೈ ದೇವಾಯ ಹವಿಷಾ ವಿಧೇಮ ॥**

**ಹಿರಣ್ಯಗರ್ಭೋ ಹಿರಣ್ಮಯೋ ಗರ್ಭೋ ಹಿರಣ್ಯಮಯೋ ಗರ್ಭೋಽಸ್ಯೇತಿ ವಾ । ಗರ್ಭೋ ಗೃಭೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ ॥ ಯದಾ ಹಿ ಸ್ತ್ರೀ ಗುಣಾನ್ ಗೃಹ್ಣಾತಿ ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ ಸಮಭವದಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ ಸ ಧಾರಯತಿ ಪೃಥಿವೀಂ ಚ ದಿವಂ ಚ ಕಸ್ಮೈ ದೇವಾಯ ಹವಿಷಾ ವಿಧೇಮೇತಿ ವ್ಯಾಖ್ಯಾತಂ । ವಿಧತಿರ್ದಾನಕರ್ಮಾ ॥**

(ನಿ. ೧೦-೨೩)

ಹಿರಣ್ಯಗರ್ಭಃ ಹಿರಣ್ಮಯೋ ಗರ್ಭೋ ಹಿರಣ್ಯಮಯೋ ಗರ್ಭೋಽಸ್ಯೇತಿ ವಾ— ಹಿರಣ್ಯ (ಚಿನ್ನ) ಮಯವಾದ, ಸುವರ್ಣಸದೃಶವಾದ ಅಥವಾ ಸುವರ್ಣಮಯವಾದ ಗರ್ಭವುಳ್ಳವನು ಹಿರಣ್ಯಗರ್ಭನು. ಎಂದರೆ ಇವನ ಗರ್ಭವು (ಅಂತಃಪ್ರದೇಶದಲ್ಲಿರುವ ಜಗದಾದಿಗಳು) ಸುವರ್ಣದಂತೆ ಪ್ರಕಾಶಮಾನವಾದುದು. ಇಂತಹ ಗರ್ಭವನ್ನು ತನ್ನ ಶರೀರಮಧ್ಯದಲ್ಲಿ ಧರಿಸಿರುವವನು ಹಿರಣ್ಯಗರ್ಭನೆನಿಸುವನು.

ಗರ್ಭೋ ಗೃಭೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ—ಗರ್ಭ ಶಬ್ದವು ಸ್ತುತಿಸು. ಪ್ರಶಂಸಿಸು ಎಂಬರ್ಥವುಳ್ಳ ಗೃಭ್ ಧಾತುವಿನಿಂದ ನಿಷ್ಪನ್ನವಾಗಿದೆ. ಇದನ್ನು ಸರ್ವರೂ ಪ್ರಶಂಸಿಸುವರು ಎಂದರ್ಥವು. ಅಥವಾ ನಾಶಮಾಡು ಎಂಬರ್ಥವುಳ್ಳ ಗಿರತಿ ಧಾತುವಿನಿಂದಲೂ ನಿಷ್ಪನ್ನವಾಗಬಹುದು, ಗಿರತ್ಯನರ್ಥಾನ್– ಸಮಸ್ತ ಅನರ್ಥಗಳನ್ನು (ಉಪಯೋಗವಿಲ್ಲದ ವಸ್ತುಗಳನ್ನು) ನಾಶಮಾಡುವುದರಿಂದ ಇದಕ್ಕೆ ಗರ್ಭವೆಂದು ಹೆಸರು ಎಂದು ಗರ್ಭ ಶಬ್ದಕ್ಕೆ ಎರಡುವಿಧ ಅರ್ಥಗಳನ್ನು ಹೇಳಿರುವರು.

ಯದಾ ಹಿ ಸ್ತ್ರೀ ಗುಣಾನ್ ಗೃಹ್ಣಾತಿ ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ— ಗರ್ಭವು ಹೇಗೆ ಉಂಟಾಗುವುದು ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಸ್ತ್ರೀಯು ಸಂಭೋಗ ಕಾಲದಲ್ಲಿ ಪುರುಷನ ಶುಕ್ರಾವಸ್ಥೆಯಲ್ಲಿರುವ (ವೀರ್ಯದಲ್ಲಿರುವ) ಗುಣಗಳನ್ನು ತನ್ನ ಯೋನಿಯ ಮೂಲಕ ಸ್ವೀಕರಿಸುತ್ತಾಳೆ. ಮತ್ತು ಎಲಬು, ಸ್ನಾಯು (ನರ) ಮಜ್ಜ ಮೊದಲಾದ ಸ್ತ್ರೀ ಅವಯವಗಳ ರಕ್ತಾವಸ್ಥೆಯಲ್ಲಿರುವ ಗುಣಗಳು ಪುರುಷನ ವೀರ್ಯದಿಂದ ಹೀರಲ್ಪಡುತ್ತವೆ. ಆದ್ದರಿಂದ

ಪುರುಷನ ವೀರ್ಯದಲ್ಲಿರುವ ಗುಣಗಳೂ, ಸ್ತ್ರೀಯ ಅವಯವಗಳಲ್ಲಿರುವ ರಕ್ತದ ಗುಣಗಳೂ ಎಂದರೆ ರಕ್ತಶುಕ್ರಗಳು (ಸ್ತ್ರೀಯ ರಕ್ತ, ಪುರುಷನ ವೀರ್ಯ ಇವೆರಡೂ) ಸೇರಿ ಸ್ತ್ರೀಯ ಶರೀರದಲ್ಲಿ ಗರ್ಭವು ಉತ್ಪತ್ತಿಯಾಗುವುದು. ಅಥವಾ ಸ್ತ್ರೀ ಪುರುಷರೇ ತಮ್ಮಲ್ಲಿರುವ ಗುಣಗಳಿಂದ ಆಕರ್ಷಿತರಾಗಿ ಒಬ್ಬರನೊಬ್ಬರು ಪ್ರೀತಿಸುವಾಗ ಇವರಿಬ್ಬರಿಗೂ ಸಂತೋಷವುಂಟಾಗಿ, ಇವರ ಸಂಪರ್ಕದಿಂದ ಗರ್ಭೋತ್ಪತ್ತಿಯಾಗುವುದು ಎಂದು ಇಲ್ಲಿ ವಿವರಿಸಲಾಗಿದೆ. ಇದನ್ನು ಲಕ್ಷ್ಮಣಸರೂಪ್ ಎಂಬ ವಿದ್ವಾಂಸರು ಈ ರೀತಿ ವಿವರಿಸಿದ್ದಾರೆ.

Durga describes the process of fertilization as follows—

When a woman receives from a man the life-germs. i e, the essence of the marrow of his bones &c in the form of seminal fluid and brings them (i. e. spermatozoa) in contact with her life-germs, i. e. the essence of her ficsh and blood in the form of her germinating fluid, then by the mutual contact of the male and female fluid in ine interior of the uterus which is capable of receiving them, fertilization of a woman takes place. Or when a woman admires the qualities of a man, on account of her love for him, and a man a woman, the result o their mutual admiration, passionate and intercourse produces ferlization.

**ಸಮಭವದಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ**—ಆ ಹಿರಣ್ಯಗರ್ಭನು ಸೃಷ್ಟಿಗೆ ಪೂರ್ವದಲ್ಲಿ ಒಬ್ಬನೇ ಇದ್ದನು. ಮತ್ತು ಅನಂತರ ತನ್ನಿಂದಲೇ ಉತ್ಪನ್ನವಾದ ಸಮಸ್ತ ಜಗತ್ತಿಗೂ ಪ್ರಾಣಿಗಳಿಗೂ ಏಕಮಾತ್ರ ಪ್ರಭುವಾಗಿದ್ದನು.

**ಸ ಧಾರಯತಿ ಪೃಥಿವೀಂ ಚ ದಿವಂ ಚ**—ಆ ಹಿರಣ್ಯಗರ್ಭನು (ಅಥವಾ ಪ್ರಜಾಪತಿಯು) ಈ ಪೃಥಿವಿಯನ್ನೂ, ಅಂತರಿಕ್ಷವನ್ನೂ, ಸ್ವರ್ಗವನ್ನೂ ಒಳಗೂ ಹೊರಗೂ ವ್ಯಾಪಿಸಿ, ಅವುಗಳಿಗೆ ಬೇಕಾದ ವೃಷ್ಟ್ಯಾದಿಗಳಿಂದ ಅವುಗಳನ್ನು ಪೋಷಿಸುತ್ತಾ ಅವುಗಳನ್ನು ಧರಿಸಿ ರಕ್ಷಿಸುತ್ತಾನೆ. ಇವನ ಶಕ್ತಿ ಸಾಮರ್ಥ್ಯಗಳಿಂದಲೇ ಜಗದಾದಿಗಳ ಧಾರಣ ಪೋಷಣ ಸಂರಕ್ಷಣೆಗಳು ನಡೆಯುತ್ತವೆ.

**ಕಸ್ಮೈ ದೇವಾಯ ಹವಿಷಾ ವಿಧೇಮ**— ಇಂತಹ ಸರ್ವಗುಣವಿಶಿಷ್ಟನಾದ (ಅಥವಾ ಸುಖಸ್ವರೂಪನಾದ) ಹಿರಣ್ಯಗರ್ಭನಿಗಾಗಿ ಅಥವಾ ಪ್ರಜಾಪತಿಗಾಗಿ ಚರುಪುರೋಡಾಶಾದಿ ಹವಿಸ್ಸುಗಳನ್ನು ಅರ್ಪಿಸೋಣ ಎಂದು ಮುಖ್ಯಾಭಿಪ್ರಾಯವು.

**ವಿಧತಿರ್ದಾನಕರ್ಮಾ**— ವಿಧತಿ ಧಾತುವಿಗೆ ಕೊಡುವುದು, ಅರ್ಪಿಸುವುದು ಎಂದರ್ಥವಿರುವುದು. ಆದ್ದರಿಂದ ಇಲ್ಲಿರುವ ವಿಧೇಮ ಎಂಬ ಶಬ್ದಕ್ಕೆ ಅರ್ಪಿಸೋಣ ಅಥವಾ ಹವಿರಾದಿಗಳಿಂದ ಉಪಚರಿಸಿ ಸೇವಿಸೋಣ ಎಂದರ್ಥವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ಮೂರನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತುರ್ವಿಂಶತಿ ಖಂಡಃ

### ಇಪ್ಪತ್ತನಾಲ್ಕನೆಯ ಖಂಡವು

ಯಾ ತೇ ಸರಸ್ವ ನ್ನೂರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿ-ರ್ನೋಽವಿತಾ ಭವ (ಋ. ಸಂ. ೭-೯೬-೫) ॥ ಇತಿ ಸಾ ನಿಗದವ್ಯಾಖ್ಯಾತಾ ॥ ೨೪ ॥

ಯಾ ತೇ ಸರಸ್ವನ್ನೂರ್ಮಯೋ ಮಧುಮಂತೋ ಘೃತಶ್ಚುತಃ ।
ತೇಭಿರ್ನೋಽವಿತಾ ಭವ ॥

(ಋ. ಸಂ. ೫-೩-೨೦)

ಸರಸ್ವಾನ್‌ಮಾಧ್ಯಮಿಕದೇವಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸರಸ್ವಾನ್ದೇವನೇ ಯಾವ ಅಲೆಗಳಿಂದ ಆಕಾಶವನ್ನೆಲ್ಲಾ ಮುಚ್ಚಿಬಿಡುವೆಯೋ ಆ ಅಲೆಗಳೆಲ್ಲಾ ನೀರಿನಿಂದ ತುಂಬಿದ್ದು ನೀರನ್ನು ಸುರಿಸುತ್ತಿರುತ್ತವೆ. ಮಧು ಘೃತ ಪದಗಳು ಉದಕಪರ್ಯಾಯದಲ್ಲಿ ಹೇಳಿವೆ. (ನಿ ಘ. ೨-೧೨-೧೧, ೨-೧೨-೧೦) ಅವುಗಳಿಂದ ನೀರು ಸುರಿಸಿ ನೀನು ನಮಗೆ ತೃಪ್ತಿಯನ್ನುಂಟುಮಾಡು.

ಇತಿ ಸಾ ನಿಗದ ವ್ಯಾಖ್ಯಾತಾ ॥ ೨೪ ॥

ಈ ಮಂತ್ರವು ಸುಲಭಾರ್ಥಕವಾದುದರಿಂದ ಪಠನಮಾತ್ರದಿಂದ ವ್ಯಾಖ್ಯಾತವಾಗಿವೆಯೆಂದು ವಿವರಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ. ಹತ್ತನೆಯ ಅಧ್ಯಾಯದಲ್ಲಿ ಎರಡನೆಯ ಪಾದವೂ
ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚವಿಂಶತಿ ಖಂಡಃ

### ಇಪ್ಪತ್ತೈದನೆಯ ಖಂಡವು

ವಿಶ್ವಕರ್ಮಾ ಸರ್ವಸ್ಯ ಕರ್ತಾ ತಸ್ಯೈಷಾ ಭವತಿ ॥ ೨೫ ॥

ವಿಶ್ವಕರ್ಮಾ—ಸರ್ವಸ್ಯ ಕರ್ತಾ । ತಸ್ಯೈಷಾ ಭವತಿ ॥

ಕ್ರಮಪ್ರಾಪ್ತವಾದ ವಿಶ್ವಕರ್ಮಪದದ ನಿರ್ವಚನವನ್ನು ತೋರಿಸುತ್ತಾರೆ. ಇವನು ಯಾವುದೇ ಆಗಲಿ ಹಿಂದೆ ಆದ ಅಥವಾ ಮುಂದೆ ಮಾಡಲ್ಪಡುವ ಈಗ ಮಾಡಲ್ಪಡುವ ಸಕಲವನ್ನೂ ಮಾಡುತ್ತಾನೆ. ವಾಯುರೂಪದಿಂದ ಇದ್ದು ಸಕಲ ಚೇಷ್ಟಾ

ಸಂಪಾದಕನಾಗಿರುತ್ತಾನೆ. ಪಾರ್ಥಿವ ಜಲಧಾತುಗಳು ತೇಜಸ್ಸಿನಿಂದ ಪಕ್ವವಾಗಿ ವಾಯುವ್ಯೂಹದಿಂದ ಸರ್ವ ಭಾವವನ್ನು ಪ್ರವೇಶಿಸಿ ತಿರುಗುತ್ತವೆ. ಈ ಅತ್ಯದ್ಭುತಜಗತ್ತನ್ನು ನಿರ್ಮಿಸುವುದರಿಂದ ಇವನು ಮಧ್ಯಮನಾಗುತ್ತಾನೆ. ವಿಶ್ವವನ್ನು ಮಾಡುವುದರಿಂದ ವಿಶ್ವಕರ್ಮನಾಗಿರುತ್ತಾನೆ. ಮಧ್ಯಮಸ್ಥಾನವಾದ ವಾಯುವೇ ವಿಶ್ವಕರ್ಮನು. ಇವನು ವೃಷ್ಟಿಯ ಮೂಲಕ ಸರ್ವಕರ್ತೃವೂ, ಸಕಲ ಚೇಷ್ಟಾಪ್ರೇರಕನೂ ಆಗಿರುತ್ತಾನೆ. ವಿಶ್ವಪದ ಉಪಪದವಾಗಿರುವಾಗ ಕೃಞಧಾತುವಿಗೆ ಮನಿನ್‌ಪ್ರತ್ಯಯ ಬಂದು ವಿಶ್ವಕರ್ಮ ಎಂದಾಗಿದೆ. ಮುಂದೆ ಹೇಳುವ ಮಂತ್ರವು ವಿಶ್ವಕರ್ಮಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೈದನೆಯ ಖಂಡವು ಮುಗಿದಿದೆ.

## ಅಥ ಷಡ್ವಿಂಶತಿ ಖಂಡಃ

## ಇಪ್ಪತ್ತಾರನೆಯ ಖಂಡವು

ವಿಶ್ವಕರ್ಮಾ ವಿಮನಾ ಆದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ । ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರಾ ಸಪ್ತಋಷೀನ್ಪರ ಏಕಮಾಹುಃ । (ಋ. ಶಂ. ೧೦-೮೨-೨) ॥ ವಿಶ್ವಕರ್ಮಾ ವಿಭೂತಮನಾ ವ್ಯಾಪ್ತಾ ಧಾತಾ ಚ ವಿಧಾತಾ ಚ ಪರಮಶ್ಚ ಸಂದ್ರಷ್ಟಾ ಭೂತಾನಾಂ ತೇಷಾಮಿಷ್ಟಾನಿ ವಾ ಕಾಂತಾನಿ ವಾ ಕ್ರಾಂತಾನಿ ವಾ ಗತಾನಿ ವಾ ಮತಾನಿ ವಾ ನತಾನಿ ವಾದ್ಭಿಃ ಸಹ ಸಂಮೋದಂತೇ ಯತ್ರೈತಾನಿ ಸಪ್ತಋಷೀಣಾನಿ ಜ್ಯೋತೀಂಷಿ ತೇಭ್ಯಃ ಪರ ಆದಿತ್ಯಸ್ತಾನ್ಯೇತಸ್ಮಿನ ಕಂ ಭವಂತೀತ್ಯಧಿದೈವತಮಥಾಧ್ಯಾತ್ಮಂ ವಿಶ್ವಕರ್ಮಾ ವಿಭೂತಮನಾ ವ್ಯಾಪ್ತಾ ಧಾತಾಚ ವಿಧಾತಾ ಚ ಪರಮಶ್ಚ ಸಂದರ್ಶಯಿತೇಂದ್ರಿಯಾಣಾಮೇಷಾಮಿಷ್ಟಾನಿ ವಾ ಶಾಂತಾನಿ ವಾ ಕ್ರಾಂತಾನಿ ವಾ ಗತಾನಿ ವಾ ಮತಾನಿ ವಾನ್ನೇನ ಸಹ ಸಂಮೋದಂತೇ ಯತ್ರೇ-ಮಾನಿ ಸಪ್ತಋಷೀಣಾನೀಂದ್ರಿಯಾಣೀಭ್ಯಃ ಪರ ಆತ್ಮಾ ತಾನ್ಯೇತಸ್ಮಿನ್ನೇಕಂ ಭವಂತೀ-ತ್ಯಾತ್ಮಗತಿಮಾಚಷ್ಟೇ ತತ್ರೇತಿಹಾಸಮಾಚಕ್ಷತೇ ವಿಶ್ವಕರ್ಮಾ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ ಸ ಆತ್ಮಾನಮಪ್ಯಂತತೋ ಜುಹವಾಂಚಕಾರ ತದಭಿವಾದಿನ್ಯೇಷರ್ಗ್ಭವತಿ । ಯ ಇಮಾ ವಿಶ್ವಾ ಭುವನಾನಿ ಜುಹ್ವದಿತಿ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೨೬ ॥

ವಿಶ್ವಕರ್ಮಾ ವಿಮನಾ ಆದ್ವಿಹಾಯಾ ಧಾತಾ ವಿಧಾತಾ ಪರಮೋತ
ಸಂದೃಕ್ । ತೇಷಾಮಿಷ್ಟಾನಿ ಸಮಿಷಾ ಮದಂತಿಯತ್ರಾ ಸಪ್ತ-
ಋಷೀನ್ಪರ ಏಕಮಾಹುಃ ॥

(ಋ. ಸಂ. ೮–೩–೧೭)

ವಿಶ್ವಕರ್ಮಸ್ತುತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಈ ಮಂತ್ರಕ್ಕೆ ಅಧಿದೈವತ, ಅಧ್ಯಾತ್ಮಭೇದದಿಂದ ಭಾಷ್ಯಕಾರರು ಎರಡುರೀತಿಯಾಗಿ ವ್ಯಾಖ್ಯಾನಮಾಡಿರುತ್ತಾರೆ. ಮೊದಲು ಅಧಿದೈವತವನ್ನಧಿಕರಿಸಿ ಹೀಗೆ ವಿವರಿಸಿರುತ್ತಾರೆ. ಬಹುವಿಧ ಪ್ರಕಾಶವೃಷ್ಟಪ್ರದಾನಾದಿ ಕಾರ್ಯವನ್ನು ಮಾಡುವ ಆದಿತ್ಯನು ಸರ್ವತ್ರ ಅಪ್ರತಿಹತವಾದ ಪ್ರಜ್ಞಾನವುಳ್ಳವನು ನಾನಾರೀತಿ ಯಾದ ವ್ಯಾಪ್ತಿಯಿಂದ ಕೂಡಿರುತ್ತಾನೆ. ಮಹಾತ್ಮನೆಂದು ತಾತ್ಪರ್ಯ. ಸರ್ವಭೂತಗಳನ್ನು ಹುಟ್ಟಿಸುವವನು ಹಾಗೆ ಹುಟ್ಟಿಸಿ ಜೀವನವನ್ನೂ ನಡೆಸುತ್ತಾನೆ. ಸಾಧು ಅಸಾಧು ಕಾರ್ಯಗಳಲ್ಲಿ ನಿರತರಾದ ಜೀವಿಗಳನ್ನು ಚನ್ನಾಗಿ ನೋಡುತ್ತಾನೆ, ಈ ಆದಿತ್ಯನಲ್ಲಿ ಸಕಲಭೂತಗಳ ಪ್ರಿಯಗಳನ್ನೂ ಹೊಂದಿರುತ್ತವೆ. ಇವನಲ್ಲಿ ಶಾಂತವಾದ, ಪ್ರಸರಣಸ್ವಭಾವವಿರುವ, ಜಲ ವನ್ನು ಆಕರ್ಷಿಸುವ ರಶ್ಮಿಗಳು ಅನ್ನದಿಂದ ಅಥವಾ ಉದಕದಿಂದ ಮಿಶ್ರವಾಗಿ ಸುಖವಾಗಿ ನೆಲೆಸಿರುತ್ತವೆ.

ವಿಶ್ವಕರ್ಮಾ ವಿಭೂತಮನಾಃ ವ್ಯಾಪ್ತಾ ಧಾತಾ ಚ ವಿಧಾತಾ ಚ
ಚ ಪರಮಶ್ಚ ಸಂದ್ರಷ್ಟಾ ಭೂತಾನಾಂ ತೇಷಾಮಿಷ್ಟಾನಿವಾ
ಕಾಂತಾನಿ ವಾ ಕ್ರಾಂತಾನಿ ವಾ, ಗತಾನಿ ವಾ, ಮತಾನಿ ವಾ,
ನತಾನಿ ವಾಽದ್ಭಿಃ ಸಹ ಸಂಮೋದಂತೇ ಯತ್ರೈತಾನಿ ಸಪ್ತ-
ಋಷೀಣಾನಿ ಜ್ಯೋತೀಂಷಿ, ತೇಭ್ಯಃ ಪರ ಅದಿತ್ಯಸ್ತಾನ್ಯೇತ-
ಸ್ಮಿನ್ನೇಕಂ ಭವಂತೀತ್ಯಧಿ ದೈವತಂ ॥

ಅಧಿದೈವತಭಾವದಿಂಪ ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿಭೂತಮನಾಃ ಇಲ್ಲಿ ಮನಃಶಬ್ದದಿಂದ ಪ್ರಜ್ಞಾನವನ್ನು ತೆಗೆದು ಕೊಳ್ಳಬೇಕು. ಸರ್ವತ್ರ ಅಪ್ರತಿಹತವಾದ ಪ್ರಜ್ಞಾನವುಳ್ಳವನೆಂದರ್ಥ. ಇಷ್ಟಾನಿ. ಆದಿತ್ಯನ ರಶ್ಮಿಗಳು ಸಕಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುತ್ತವೆ. ದೈವೀಸಂಪತ್ತನ್ನು ಹೊಂದಿರುವುದರಿಂದ ಕಾಂತವಾಗಿರುತ್ತವೆ. ಅಥವಾ ಅಂತರಿಕ್ಷ ಲೋಕ ವನ್ನತಿಕ್ರಮಿಸಿರುತ್ತವೆ. ಅಥವಾ ಸಕಲರಿಗೂ ಅಭಿಮತವಾಗಿರುತ್ತವೆ. ಅಥವಾ ರಶ್ಮಿಗಳು ವಿಶ್ವಕರ್ಮನನ್ನು ಕುರಿತು ನಮ್ರವಾಗಿರುತ್ತವೆ ಎಂದು ನಾನಾರ್ಥ ಹೇಳಲು ಸಾಧ್ಯವೆಂದು ವಿವರಿಸುತ್ತಾರೆ. ಸಪ್ತರ್ಷಿಗಳಿಂದ ಆದಿತ್ಯನು ಉತ್ಕೃಷ್ಟ ನಾಗಿರುತ್ತಾನೆ. ಸಪ್ತರ್ಷಿಸಂಬಂಧವಾದ ಜ್ಯೋತಿಗಳು ವಿಶ್ವಕರ್ಮನಾದ ಆದಿತ್ಯನಲ್ಲಿ ಅವಿಭಾಗದಿಂದ ಬಂದು ಸೇರಿರುತ್ತವೆ. ಆದಿತ್ಯಮಂಡಲದಲ್ಲಿ ಸೇರಿಹೋದುದರಿಂದ ಬೇರೆಯಾಗಿ ತೋರುವುದಿಲ್ಲ. ಹೀಗೆ ದೇವತೆಯನ್ನಧಿಕರಿಸಿ ವ್ಯಾಖ್ಯಾನಮಾಡಿರುತ್ತಾರೆ.

ಅಥಾಧ್ಯಾತ್ಮಂ— ವಿಶ್ವಕರ್ಮಾ ವಿಭೂತಮನಾ ವ್ಯಾಪ್ತಾಧಾತಾ ಚ
ವಿಧಾತಾ ಚ ಪರಮಶ್ಚ ಸಂದರ್ಶಯಿತೇಂದ್ರಿಯಾಣಾ ಮೇಷಾ-
ಮಿಷ್ಟಾನಿ ವಾ, ಕಾಂತಾನಿ ವಾ, ಕ್ರಾಂತಾನಿ ವಾ, ಗತಾನಿ ವಾ,

ಮತಾನಿ ವಾ, ನತಾನಿವಾಽನ್ನೇನ ಸಹ ಸಂಮೋದಂತೇ, ಯತ್ರೇ-
ಮಾನಿ ಸಪ್ತ ಋಷೀಣಾನೀಂದ್ರಿಯಾಣಿ, ತೇಭ್ಯಃ ಪರ ಆತ್ಮಾ,
ತಾನ್ಯೇತಸ್ಮಿನ್ನೇಕಂ ಭವಂತೀತ್ಯಾತ್ಮ ಗತಿಮಾ ಚಷ್ಟೇ ||

ಅಧ್ಯಾತ್ಮನನ್ನಧಿಕರಿಸಿ ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿಶ್ವಕರ್ಮಾ ಅಂದರೆ ಸರ್ವಕರ್ತೃವಾದ ಪರಮಾತ್ಮನು. ಕ್ಷೇತ್ರಜ್ಞರೂಪದಿಂದ ಪ್ರತಿ ಶರೀರದಲ್ಲಿಯೂ ಇರುತ್ತಾನೆ. ಇವನ ಒಂದುಪ್ರೇರಣೆಯಿಂದಲೇ ವಾಯು ಮುಂತಾದವರ ಚಲನ ವಾಗುತ್ತದೆ. ಇವನು ಪ್ರಾಣಪ್ರಕಾಶಗಳಿಂದ ಕೂಡಿದವನಾಗಿ ಬಹುಕರ್ಮವುಳ್ಳವನಾಗುತ್ತಾನೆ. ಸರ್ವಕ್ರಿಯಾವಂತನಲ್ಲದೆ ಸರ್ವಪ್ರಜ್ಞಾನಮಯನೂ ಆಗಿರುತ್ತಾನೆ. ಸರ್ವತೋಮುಖವಾದ ವಿಶೇಷವಿಜ್ಞಾನಶಕ್ತಿಗಳಿಂದ ಮಹಾನಾತ್ಮನಾಗಿರುತ್ತಾನೆ. ವಿಶೇಷವಾಗಿ ಸುಕೃತದುಷ್ಕೃತಗಳ ಫಲವನ್ನು ಕೊಡುತ್ತಾನೆ. ಸ್ವಶಕ್ತಿವಿಶೇಷವನ್ನು ಪ್ರದರ್ಶಿಸುವವನೂ, ತದ್ಯೋಗ್ಯ ವಿಷಯಗಳನ್ನು ಸೃಷ್ಟಿಸುವವನೂ ಆಗಿರುತ್ತಾನೆ. ಉತ್ಕೃಷ್ಟನಾಗಿದ್ದು ಇಂದ್ರಿಯಗಳಿಗೆ ವಿಷಯಗ್ರಾಹಕನಾಗಿರುತ್ತಾನೆ. ಈ ಕ್ಷೇತ್ರಜ್ಞನ ವಿಭೂತಿವಿಶೇಷಗಳು ಪ್ರಿಯವಾಗಿರುತ್ತವೆ. ಹಿಂದಿನಂತೆ ನಾನಾ ರೀತಿಯಿಂದ ವರ್ಣಿಸಬಹುದು. ಪರಮಾತ್ಮ ಜ್ಞಾನಶ್ರದ್ಧಾ ಉಪಾಸನಾದಿಗಳಿಂದ ನಷ್ಟವಾದ ಕಲ್ಮಷವುಳ್ಳ ಪ್ರಸರಣಸ್ವಭಾವವುಳ್ಳ ಇಂದ್ರಿಯಗಳು ಅಧಿಷ್ಠಾತೃವಾದ ಪರಮಾತ್ಮನಲ್ಲಿ ಅನ್ನದೊಡನೆ ಸಂತೃಪ್ತವಾಗಿರುತ್ತವೆ. ಈ ಇಂದ್ರಿಯಗಳಿಗಿಂತ ಪರನಾದವನು ಅಂದರೆ ಇಂದ್ರಿಯಾತೀತನು ಪರಮಾತ್ಮನು. ಆ ಇಂದ್ರಿಯಗಳೆಲ್ಲಾ ವಿಶ್ವಕರ್ಮವಾದ ಪರಮಾತ್ಮನಲ್ಲಿ ಅವಿಭಾಗದಿಂದ ಸೇರಿರುತ್ತವೆ. ಬುದ್ಧಿತತ್ತ್ವಸಹಿತ ವಾಗಿ ಅವನಲ್ಲಿಯೇ ಲೀನವಾಗುತ್ತವೆ. ಈ ಪರಮಾತ್ಮನು ಒಬ್ಬನೆಂದೇ ಹೇಳುತ್ತಾರೆ. ಈ ರೀತಿಯಿಂದ ವರ್ಣಿಸುವ ಈ ಮಂತ್ರವು ಅಧ್ಯಾತ್ಮನನ್ನೇ ಪ್ರಕಾಶಪಡಿಸುತ್ತದೆ.

ತತ್ರೇತಿಹಾಸಮಾಚಕ್ಷತೇ ||

ಪೂರ್ವೋಕ್ತವಾದ ಋಙ್ಮಂತ್ರವು ಆತ್ಮಗತಿಯನ್ನೇ ಹೇಳುತ್ತದೆಯೆಂಬುದರಲ್ಲಿ ಆತ್ಮಜ್ಞಾನಿಗಳು ಪುರಾವೃತ್ತವನ್ನು ಹೇಳುತ್ತಾರೆ. ಈ ಇತಿಹಾಸವು ಅವಿವಕ್ಷಿತ ಸ್ವಾರ್ಥವುಳ್ಳದ್ದಾಗಿ ತಿಳಿಯಲಪೇಕ್ಷಿಸುವವರಿಗೆ ಉಪದೇಶಿಸುತ್ತದೆ.

ವಿಶ್ವಕರ್ಮಾ ಹ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚ-
ಕಾರ ಸ ಆತ್ಮಾನಮಪ್ಯಂತತೋ ಜುಹವಾಂಚಕಾರ ||

ಹ ಎಂಬ ಪದವು ಹಿಂದೆ ನಡೆದುದನ್ನು ತಿಳಿಸುತ್ತದೆ. ಭುವನ ಮಹರ್ಷಿಯ ಪುತ್ರನಾದ ಭೌವನನೆಂಬ ಋಷಿಯು ಸರ್ವಮೇಧ ವೆಂಬ ಕರ್ಮದಲ್ಲಿ ಸರ್ವಭೂತಗಳನ್ನೂ ಹೋಮಿಸಿ ಕೊನೆಯಲ್ಲಿ ತನ್ನನ್ನೂ ಹೋಮಿಸಿದನು. ಮೇಧವೆಂಬುದನ್ನು ಯಜ್ಞ ಪರ್ಯಾಯದಲ್ಲಿ (ನಿಘ. ೩–೪–೧೭) ಹೇಳಿರುತ್ತಾರೆ. ಸ ಏಷ ಸರ್ವಸ್ಯ ವಿದುಷಃ ಸರ್ವಃ ಸರ್ವಹುತ್ ಯಜ್ಞಃ ಸರ್ವಭಾ ವಾಯ ಸಂಪದ್ಯತೇ ದರ್ಶನಾತ್' ಎಂದು ಸರ್ವಮೇಧವನ್ನು ವಿವರಿಸಿರುತ್ತಾರೆ. ಅಹರ್ಗಣಸಾಧ್ಯವಾದ ಕ್ರತುವಿಗೂ ಸರ್ವ ಮೇಧವೆಂಬ ಹೆಸರಿದೆ. ಇಲ್ಲಿ ಆತ್ಮಹೋಮವಿಹಿತವಾದುದರಿಂದ ಲೋಕವ್ಯವಹಾರದಿಂದ ಸಂಗತವಾಗುವುದಿಲ್ಲ. ಆತ್ಮಗತಿ ಯಿಂದ ಸಮಂಜಸವಾಗುತ್ತದೆ. ಸರ್ವಭೂತ (ಗಳನ್ನೂ) ವಿಶೇಷಗಳನ್ನು ಸಾಮಾನ್ಯಾತ್ಮನಲ್ಲಿ ನೋಡುವುದೇ ಆತ್ಮಹೋಮ.

ಹೀಗೆ ಸರ್ವಾತ್ಮದೃಷ್ಟಿಯಿಂದ ನೋಡುವವನೇ ಆತ್ಮಯಾಜಿಯಾಗುತ್ತಾನೆ. ಶ್ರುತಿಯಲ್ಲಿ—ಆತ್ಮಯಾಜಿ ದೇವಯಾಜಿಗಳಲ್ಲಿ ಶ್ರೇಷ್ಠರು ಯಾರೆಂದು ಪ್ರಶ್ನಿಸಿ ಆತ್ಮಯಾಜಿಯೇ ಸರ್ವಶ್ರೇಷ್ಠನೆಂದು ವರ್ಣಿಸಿದೆ.

**ತದಭಿವಾದಿನ್ಯೇಷರ್ಗ್ ಭವತಿ—'ಯ ಇಮಾ ವಿಶ್ವಾ ಭುವನಾನಿ ಜುಹ್ವತ್' ಇತಿ ||**

(ಋ. ಸಂ. ೮-೩-೧೬-೧).

ವಿಶ್ವಕರ್ಮಾ—ಮಂತ್ರವು ಆತ್ಮಗತಿಯನ್ನು ವಿವರಿಸುವಂತೆ ಅದನ್ನೇ ವ್ಯಕ್ತಪಡಿಸುವ ಮಂತ್ರಾಂತರವನ್ನು ಉದಾಹರಿಸುತ್ತಾರೆ, ಈ ಮಂತ್ರದ ಶೇಷಭಾಗ—

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನ್ಯಸೀದತಿಪಿತಾ ನಃ |**
**ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾಂ ಆವಿವೇಶ ||**

ಯಾವ ವಿಶ್ವಕರ್ಮನಾದ ಪರಮೇಶ್ವರನು ಪ್ರಲಯಕಾಲದಲ್ಲಿ ಪೃಥಿವ್ಯಾದಿಗಳು ಲೋಕಗಳನ್ನು ತನ್ನಲ್ಲಿಯೇ ಆಹುತಿಪ್ರಕ್ಷೇಪದಂತೆ ಉಪಸಂಹಾರಮಾಡುತ್ತಾ ಸರ್ವಜ್ಞನಾಗಿ. ಸಂಹಾರರೂಪ ಹೋಮಕರ್ತೃವಾಗಿ. ನಮಗೆ ಪಿತೃ ಆಗಿ ಇದ್ದನು. ಪ್ರಲಯ ಕಾಲದಲ್ಲಿ ಸಕಲಸಂಹಾರಕನಾದುದರಿಂದ ನಮ್ಮನ್ನೂ ಸಂಹರಿಸಿ ಪುನಃ ಸೃಷ್ಟಿಮಾಡುತ್ತಾ ಪರಮೇಶ್ವರನು ಒಬ್ಬನೇ ಆಗಿರುತ್ತಾನೆ. ಇದು ಉಪನಿಷತ್ತುಗಳಲ್ಲಿ ಆತ್ಮಾ ವಾ ಇದಮಗ್ರ ಏಕ ಆಸೀತ್ | ತದೇವ ಸೋಮ್ಯೇದಮಗ್ರ ಆಸೀತ್ | ಎಂದು ವಿವರಿಸಿದೆ ಆ ಪರಮೇಶ್ವರನು ಪುನಃ ನಾನಾರೀತಿಯಾಗಿ ಉತ್ಪಾದಿಸಬೇಕೆಂದು ಸೃಷ್ಟಿಯ ಇಚ್ಛೆಯಿಂದ, ಧನೋಪಲಕ್ಷಿತ ಜಗದ್ಭೋಗವನ್ನು ಬಯಸಿ ಮುಖ್ಯವಾದ ಪಾರಮಾರ್ಥಿಕರೂಪವನ್ನು ಆಚ್ಛಾದನೆಮಾಡಿ, ತನ್ನಿಂದ ಸೃಷ್ಟವಾದ ಪ್ರಾಣಿ ಹೃದಯಪ್ರದೇಶವನ್ನು ಜೀವರೂಪದಿಂದ ಪ್ರವೇಶಿಸಿದನು. ಈ ವಿಷಯವೂ ಶ್ರುತಿಯಲ್ಲಿ ಚನ್ನಾಗಿ ಪ್ರತಿಪಾದಿಸಿದೆ—ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ | ಸ ತಪೋಽತಪ್ಯತ | ಸ ತಪಸ್ತಪ್ತ್ವಾ ಇದಂ ಸರ್ವಮಸೃಜತ ಯದಿದಂ ಕಿಂಚ, ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ (ತೈ. ಉ.).

**ತಸ್ಯೋತ್ತರಾ ಭೂಯಸೇ ನಿರ್ವಚನಾಯ || ೨೬ ||**

ಮಂತ್ರಾರ್ಥದುರಧಿಗಮವಾದುದರಿಂದಲೂ, ವೇದಾಂತವಿದ್ಯೆ ಪುನಃ ಪುನಃ ಅನುಸಂಧಾನಮಾಡಬೇಕಾದುದರಿಂದಲೂ, ಆತ್ಮಗತಿಯನ್ನು ಪುನಃ ಪುನಃ ನಾನಾಮಂತ್ರಗಳಿಂದ ತೋರಿಸುತ್ತಾರೆ. ಮುಂದಿನ ಮಂತ್ರವೂ ವಿಶ್ವಕರ್ಮನಾದ ಪರಮೇಶ್ವರನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ಹತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತವಿಂಶತಿಖಂಡಃ

### ಇಪ್ಪತ್ತೇಳನೆಯ ಖಂಡವು

ವಿಶ್ವಕರ್ಮನ್ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಮ್ । ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು । (ಋ. ಸಂ. ೧೧-೮೧-೬) ॥ ವಿಶ್ವಕರ್ಮನ್ಹವಿಷಾ ವರ್ಧಯಮಾನಃ ಸ್ವಯಂ ಯಜಸ್ವ ಪೃಥಿವೀಂ ಚ ದಿವಂ ಚ ಮುಹ್ಯಂತ್ವನ್ಯೇ ಅಭಿತೋ ಜನಾಃ ಸಪತ್ನಾ ಇಹಾಸ್ಮಾಕಂ ಸೂರಿರಸ್ತ್ತು ಪ್ರಜ್ಞಾತಾ ತಾರ್ಕ್ಷ್ಯಸ್ತ್ವಷ್ಟ್ರಾ ವ್ಯಾಖ್ಯಾತಸ್ತೀರ್ಣೇಽಂತರಿಕ್ಷೇ ಕ್ಷಿಯತಿ ರಕ್ಷತ್ಯಶ್ನೋತೇರ್ವಾ ತಸ್ಯೈಷಾ ಭವತಿ ॥ ೨೭ ॥

ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀ-
ಮುತದ್ಯಾವಂ । ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ
ಮಘವಾ ಸೂರಿರಸ್ತು ॥

(ಯ. ಸಂ. ೧೭-೨೨) (ಋ. ಸಂ. ೮-೩-೧೬)

ವಿಶ್ವಕರ್ಮವ್ಯಾಪಾರ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವಿಶ್ವವಿಷಯಕ ವ್ಯಾಪಾರನಿರತ ಪರಮೇಶ್ವರನೇ ಸರ್ವಮೇಧದರ್ಶನ ಸಂಪಜಾದಿಗಳಿಂದ ಕೂಡಿದ ಹವಿಸ್ಸಿನಿಂದ ನೀನು ವಿಶ್ವಕರ್ಮವ್ಯಾಪಾರವನ್ನು ಹೊಂದುತ್ತಾ ಫಲವಿಪರಿಣಾಮ ಕಾಲದಲ್ಲಿ ನೀನೇ ಸರ್ವತ್ರ ವ್ಯಾಪಿಸು. ಪೃಥಿವ್ಯಾದಿ ಸಕಲಲೋಕಗಳನ್ನು ವ್ಯಾಪಿಸುವವನಾಗು. ನಿನ್ನ ಉಪಾಸನೆಯಲ್ಲಿ ಪರಾಙ್ಮುಖರಾದ ಇತರ ಜನರು ನಿನ್ನ ಈ ಮಹಿಮೆಯಲ್ಲಿ ಮೋಹಗೊಂಡವರಾಗಿ ಇತರರನ್ನು ಈಶ್ವರನನ್ನಾಗಿ ಬಯಸುತ್ತಾರೆ ನಿನ್ನ ದರ್ಶನೋಪಾಸನೆಗಳಲ್ಲಿಯೇ ವ್ಯಗ್ರರಾದ ನಮಗೆ ಸರ್ವೈಶ್ವರ್ಯಸಂಪನ್ನನಾದ, ಮೇಧಾವಿಯಾದ ನೀನೇ ಈಶ್ವರನಾಗಿರು. ಯದ್ಯಪಿ ತ್ವಷ್ಟೃಪ್ರಜಾಪತಿಯೇ ವಿಶ್ವಕರ್ಮನೆಂದು ಇತಿಹಾಸಾದಿಗಳಲ್ಲಿ ಪ್ರಸಿದ್ಧಿ ಆದರೂ ಯೌಗಿಕಾರ್ಥಪ್ರಸಿದ್ಧಿಯಿಂದ ಆಯಾಯ ದೇವತೆಗಳಲ್ಲಿ ಸಮನ್ವಯ ಮಾಡಿದರೂ ವಿರೋಧವಿಲ್ಲವೆಂದು ತಿಳಿಯಬೇಕು.

ವಿಶ್ವಕರ್ಮನ್ । ಹವಿಷಾ ವರ್ಧಮಾನಃ ಸ್ವಯಂ ಯಜಸ್ವ ಪೃಥಿವೀಂ
ಚ ದಿವಂ ಚ, ಮುಹ್ಯಂತ್ವನ್ಯೇ ಅಭಿತೋ ಜನಾಃ ಸಪತ್ನಾ
ಇಹಾಸ್ಮಾಕಂ ಮಘವಾ ಸೂರಿರಸ್ತು ಪ್ರಜ್ಞಾತಾ ॥

ವರ್ಧಯಮಾನಃ ಎಂದು ಣಿಜಂತವಾಗಿ ಹೇಳಿದೆ. ಆಗ ವೃದ್ಧಿಗೊಳಿಸುವವನು ಎಂದರ್ಥವಾಗುತ್ತದೆ. ಪರಮೇಶ್ವರನೇ ಸರ್ವಾತ್ಮಭಾವವನ್ನು ಹೊಂದಿರುವುದರಿಂದ ತಾನೇ ವೃದ್ಧಿಹೊಂದುವನೆಂದು ಫಲಿತವಾಗುತ್ತದೆ. ಆಗ ಣಿಜರ್ಥ ಅವಿವಕ್ಷಿತ ವೆಂದು ತಿಳಿಯಬೇಕು. ಇತರ ಮಂತ್ರಾರ್ಥ ವ್ಯಾಖ್ಯಾತವಾಗಿದೆ.

ತಾರ್ಕ್ಷ್ಯಃ-ತ್ವಷ್ಟ್ರಾ ವ್ಯಾಖ್ಯಾತಃ । ತೀರ್ಣೇ ಅಂತರಿಕ್ಷೇ ಕ್ಷಿಯತಿ । ತೂರ್ಣಮರ್ಥಂ ರಕ್ಷತಿ । ಅಶ್ನೋತೇರ್ವಾ । ತಸ್ಯೈಷಾ ಭವತಿ ॥ ೨೭ ॥

ಕ್ರಮಪ್ರಾಪ್ತವಾದ ತಾರ್ಕ್ಷ್ಯಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ತ್ವಷ್ಟೃಪದದಿಂದ ವ್ಯಾಖ್ಯಾತವಾಗಿದೆ. ತೀರ್ಣೇ= ಸರ್ವತ್ರವ್ಯಾಪ್ತವಾದ, ಅಂತರಿಕ್ಷೇ= ಆಕಾಶದಲ್ಲಿ, ಕ್ಷಿಯತಿ= ವಾಸಮಾಡುವವನು ತಾರ್ಕ್ಷ್ಯದೇವತೆ. ಅಥವಾ ತೂರ್ಣವೆಂದರೆ ಉದಕ. (ನಿ. ಘ. ೪-೨-೬೦) ಉದಕ ರೂಪಾರ್ಥವನ್ನು ರಕ್ಷಿಸುವವನು ತಾರ್ಕ್ಷ್ಯನು. ಅಥವಾ ಅಶ್ನೋತಿ ಉತ್ತರಪದಕವಾದ ಪದ. ತೀರ್ಣ ಅಥವಾ ತೂರ್ಣಪದ ಉಪಪದವಾಗಿರುವಾಗ ಅಶಧಾತುವಿಗೆ ಯತ್‌ಪ್ರತ್ಯಯ ತಮಸ್ಸನ್ನು ವ್ಯಾಪಿಸುವವನೆಂದರ್ಥ. ಮುಂದೆ ಹೇಳುವ ಮಂತ್ರವು ತಾರ್ಕ್ಷ್ಯಸ್ತುತಿ ಪ್ರತಿಪಾದಕವಾಗುತ್ತದೆ.

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟವಿಂಶತಿ ಖಂಡಃ

### ಇಪ್ಪತ್ತೆಂಟನೆಯ ಖಂಡವು

ತ್ಯಮೂಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ । ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ (ಋ. ಸಂ. ೧೦-೧೭೮-೧) ॥ ತಂ ಭೃಶಮನ್ನವಂತಂ ಜೂತಿರ್ಗತಿಃ ಪ್ರೀತಿರ್ವಾ ದೇವಜೂತಂ ದೇವ ಗತಂ ದೇವಪ್ರೀತಂ ವಾ ಸಹಸ್ವಂತಂ ತಾರಯಿತಾರಂ ರಥಾನಾಮರಿಷ್ಟನೇಮಿಂ ಪೃತನಾಜಿತಮಾಶುಂ ಸ್ವಸ್ತಯೇ ತಾರ್ಕ್ಷ್ಯ ಮಿಹ ಹ್ವಯೇಮೇತಿ ತಮನ್ಯಂ ಮಧ್ಯ-ಮಾದೇವಮವಕ್ಷ್ಯತ್ತಸ್ಯೈಷಾಪರಾ ಭವತಿ ॥ ೨೮ ॥

ತ್ಯಮೂಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ । ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ ॥ (ಋ. ಸಂ. ೮-೮-೩೬)

ತಾರ್ಕ್ಷ್ಯಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಾವು ಪ್ರಸಿದ್ಧನಾದ ಮಧ್ಯಮ ದೇವನಾದತಾರ್ಕ್ಷ್ಯನನ್ನು ಈ ಕರ್ಮದಲ್ಲಿ ನಮ್ಮ ಕ್ಷೇಮಕ್ಕೋಸ್ಕರ ಅಧಿಕವಾಗಿ ಆಹ್ವಾನಿಸೋಣ. ಇವನು ಶತ್ರುಗಳಿಗೆ ಭಯವನ್ನುಂಟುಮಾಡುವವನೂ, ಬಲವಂತನೂ ಅನ್ನವಂತನೂ ಆಗಿರುತ್ತಾನೆ. ದೇವತೆಗಳಲ್ಲಿ ಇವನೇ ಉತ್ಕೃಷ್ಟನೆಂದು ತಿಳಿಯುತ್ತಾರೆ. ಅತಿ ಬಲಶಾಲಿಯು. ಇದರಿಂದಲೇ ಇವನು ಮಧ್ಯಮ ದೇವನೆಂದು ವ್ಯಕ್ತವಾಗುತ್ತದೆ. ಸಕಲ ಭೂತಗಳನ್ನೂ ಉತ್ತಾರಣಗೊಳಿಸುತ್ತಾನೆ. ಯಾರಿಂದಲೂ ಅಪ್ರತಿಹತವಾದ ವೀರ್ಯವುಳ್ಳವನಾಗಿ, ವೇಗವಂತನಾಗಿ, ಸೇನೆಗಳನ್ನು ಜಯಿಸುತ್ತಾನೆ.

**ತಂ ಭೃಶಮುನ್ನವಂತಂ, ಜೂತಿರ್ಗತಿಃ ಪ್ರೀತಿರ್ವಾ-ದೇವಜೂತಂ ದೇವಗತಂ ದೇವಪ್ರೀತಂ ವಾ । ಸಹಸ್ವಂತಂ, ತಾರಯಿತಾರಂ ರಥಾನಾಂ, ಅರಿಷ್ಟನೇಮಿಂ ಪೃತನಾಜಿತಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹ ಹ್ವಯೇಮೇತಿ । ಕಮನ್ಯಂ ಮಧ್ಯಮಾದೇವ ಮವಕ್ಷ್ಯತ್ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ತ್ಯಚ್ಛಬ್ದಕ್ಕೆ ತಚ್ಛಬ್ದಸಮಾನಾರ್ಥವೆಂದು ತಂ ಎಂದು ಹೇಳಿರುತ್ತಾರೆ. (ಅಪ್ರಸಿದ್ಧನೆಂದರ್ಥ) ಅಜಿಗೆ ಭೃಶಾರ್ಥತೋರುತ್ತದೆ. ಇದಕ್ಕೆ ಹ್ವಯೇಮ ಎಂಬ ಕ್ರಿಯಾಪದದಲ್ಲಿ ಅನ್ವಯ ಎಂಬುದಕ್ಕೆ ವೇಜಿನವಂತಂ ಎಂದು ಅರ್ಥವಿವಕ್ಷಾಮಾಡಿದರೆ ಶತ್ರುಗಳಿಗೆ ಭಯವನ್ನುಂಟುಮಾಡಿ ನಡುಗಿಸುವವನೆಂದರ್ಥ. ಜ್ಯೂತಿಪದಕ್ಕೆ ಪ್ರೀತ್ಯರ್ಥಹೇಳಿದರೆ ದೇವತೆಗಳೊಡನೆ ಸಮಾನಪ್ರೀತನೆಂದರ್ಥ. ಗತ್ಯರ್ಥ ಹೇಳಿದರೆ ಗತ್ಯರ್ಥಕಧಾತುಗಳಿಗೆ ಜ್ಞಾನಾರ್ಥ ವಿರುವುದರಿಂದ ದೇವತೆಗಳಲ್ಲಿ ಉತ್ಕೃಷ್ಟನೆಂದು ಜ್ಞಾತನಾದವನೆಂದರ್ಥ. ಅರಿಷ್ಟನೇಮಿಂ–ಯಾರಿಂದಲೂ ವಜ್ರಾಘಾತ ಹೊಂದದಿರುವವನು. ನೇಮಿಶಬ್ದ ವಜ್ರಪರ್ಯಾಯದಲ್ಲಿ ಹೇಳಿದೆ. ( ನಿಘ ೨–೩–೨೫ ) ತಾರ್ಕ್ಷ್ಯ–ಅಂದರೆ ಗರುಡನೆಂದು ಪ್ರಸಿದ್ಧನಾಗಿರುವಾಗ ಅವನನ್ನು ಈ ಮಂತ್ರವು ಸ್ತುತಿಸಬಹುದೆಂದು ಬರುವ ಶಂಕೆಗೆ ಸಮಾಧಾನತೋರಿಸುತ್ತಾರೆ. ಪೂರ್ವೋಕ್ತ ವಿಶೇಷಣಗಳಿರುವುದರಿಂದ ಮಧ್ಯಮನಾದ ವಾಯುದೇವನಲ್ಲದೆ ಇನ್ನಾವದೇವನನ್ನು ಸಮರ್ಥಿಸುತ್ತದೆ ? ಬಲಾದಿಕಾರ್ಯಗಳೆಲ್ಲವೂ ಇಂದ್ರನದ್ದೇ ಆದುದರಿಂದ ವಾಯುದೇವನೇ ಪ್ರತಿಪಾದಿತನಾಗಿರುತ್ತಾನೆ ಎಂದರ್ಥ.

**ತಸ್ಯೈಷಾ ಅಪರಾ ಭವತಿ ॥ ೨೮ ॥**

ಇದು ಮಧ್ಯಮನಾದ ತಾರ್ಕ್ಷ್ಯನಸ್ತುತಿಯಲ್ಲದೆ ಗರುಡನ ಸ್ತುತಿಯಲ್ಲವೆಂಬುದರಲ್ಲಿ ಮುಂದೆ ಹೇಳುವ ಇನ್ನೊಂದು ಮಂತ್ರವೂ ಪ್ರಮಾಣವಾಗುತ್ತದೆ. ಪೂರ್ವಮಂತ್ರದಲ್ಲಿ ಬಲಕೃತಿ ಹೇಳಿರುವುದರಿಂದ ಸಂದೇಹಾಸ್ಪದವಾಗುತ್ತದೆ. ಇಂದ್ರನಂತೆ ಪಕ್ಷಿರಾಜನೂ ಬಲವಂತನೆಂದು ಪ್ರಸಿದ್ಧನಾಗಿರುತ್ತಾನೆ. ಮುಂದಿನ ಮಂತ್ರದಲ್ಲಿ ತಾರ್ಕ್ಷ್ಯನ ವೃಷ್ಟಿಕರ್ಮವು ಪ್ರತಿಪಾದಿತ ವಾಗುವುದರಿಂದ ಅದು ಮಧ್ಯಮದೇವನ ಲಿಂಗವಾಗುವುದರಿಂದ ತಾರ್ಕ್ಷ್ಯ ಅಂದರೆ ಇಲ್ಲಿ ವಾಯುದೇವನೆಂದೇ ಸ್ಪಷ್ಟ ವಾಗುತ್ತದೆ.

**ತ್ಯಮೂ ಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ । ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ ॥**

ಅತ್ಯಂತ ಪ್ರಸಿದ್ಧನೂ ಶಕ್ತಿಯುತನೂ ಸೋಮಾಹರಣಕ್ಕಾಗಿ ದೇವತೆಗಳಿಂದ ಪ್ರಾರ್ಥಿತನಾದವನೂ ಅಥವಾ ದೇವತೆಗಳ ಪ್ರೀತಿಗೆ ಪಾತ್ರನಾದವನೂ, ಶತ್ರುಗಳನ್ನು ಸೋಲಿಸುವವನೂ ಯುದ್ಧದಲ್ಲಿ ಶತ್ರುಗಳ ರಥವನ್ನು ಜಯಿಸುವವನೂ, ಅಹಿಂಸಿತವಾದ ಎಂದರೆ ತಡೆಯಿಲ್ಲದ ರಥ ಅಥವಾ ಆಯುಧವುಳ್ಳವನೂ ಅಥವಾ ಅರಿಷ್ಟನೇಮಿಯೆಂಬುವನ ತಂದೆಯಾದವನೂ, ಶತ್ರುಸೇನೆಗಳನ್ನು ಜಯಿಸುವವನೂ, ಶೀಘ್ರಗಮನವುಳ್ಳವನೂ ತಾರ್ಕ್ಷ್ಯನೆಂಬ ಅಥವಾ ತೃಕ್ಷಪುತ್ರನೂ ಆದ ಸುವರ್ಣನೆಂಬ ದೇವನನ್ನು ನಮ್ಮ ಕ್ಷೇಮಾಭ್ಯುದಯಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ.

ತಾರ್ಕ್ಷ್ಯಶಬ್ದನಿರ್ವಚನವನ್ನು ನಾವು ಇದೇ ಮಂಡಲದ ೧೮೪ ನೇ ಸೂಕ್ತದ ಪೀಠಿಕೆಯಲ್ಲಿ ವಿವರಿಸಿದೇವೆ. ಈ ಋಕ್ಕಿಗೆ ಯಾಸ್ಕರು ಹೇಳಿರುವ ನಿರ್ವಚನವು ಈ ರೀತಿ ಇದೆ—

> ತಂ. ಭೃತಮನ್ನವಂತಂ। ಜೂತಿರ್ಗತಿಃ ಪ್ರೀತಿರ್ವಾ। ದೇವಗತಂ ದೇವಪ್ರೀತಂ ವಾ। ಸಹಸ್ವಂತಂ ತಾರಾಯಿತಾರಂ ರಥಾನಾಮರಿಷ್ಟನೇಮಿಂ ಪೃತನಾಜಿತಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹ ಹ್ವಯೇಮೇತಿ। ಕಮನ್ಯಂ ಮಧ್ಯಮಾದೇವಮವಕ್ಷ್ಯತ್ ॥
>
> (ನಿ. ೧೦-೨೮)

ಯಾಸ್ಕರು ಹೇಳಿರುವ ಅರ್ಥಕ್ಕೂ ಸಾಯಣರ ವಿವರಣೆಗೂ ಏನೂ ವ್ಯತ್ಯಾಸವಿಲ್ಲದ್ದರಿಂದ ನಿರುಕ್ತದ ಅರ್ಥವನ್ನು ವಿವರಿಸಬೇಕಾದ ಅವಶ್ಯಕತೆ ಇರುವುದಿಲ್ಲ ಇದರ ಅರ್ಥವು ನಾವು ಬರೆದಿರುವ ಪ್ರತಿಪದಾರ್ಥದಂತೇ ಇದೆ. ಈ ದೇವತೆಯ ವಿಷಯವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಸೂಕ್ತದ ಮೂರನೆಯ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೂ ನಿರ್ವಚನವನ್ನು ಹೇಳಿರುವರು. ಅದನ್ನು ಮೂರನೆಯ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಇಪ್ಪತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

—. —

## ಅಥ ಏಕೋನತ್ರಿಂಶತಿಖಂಡಃ

## ಇಪ್ಪತ್ತೊಂಬತ್ತನೆಯ ಖಂಡವು

ಸದ್ಯಶ್ಚಿದ್ಯಃ ಶವಸಾ ಪಂಚಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ। ಸಹಸ್ರಸಾಃ ಶತಸಾ ಅಸ್ಯ ರಹಿರ್ನ ಸ್ಮಾ ವರಂತೇ ಯುವತಿಂ ನ ಶರ್ಯಾಂ (ಋ. ಸಂ. ೧೦-೧೭೮-೩) ॥ ಸದ್ಯೋಪಿ ಯಃ ಶವಸಾ ಬಲೇನ ತನೋತ್ಯಪಃ ಸೂರ್ಯ ಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾನಿನೀ ಶತಸಾನಿತ್ಯಸ್ಯ ಸಾ ಗತಿರ್ನ ಸ್ಮೈನಾಂ ವಾರಯಂತಿ ಪ್ರ ಯುವತೀಮಿವ ಶರಮಯೀಮಿಷುಂ ಮನ್ಯುರ್ಮನ್ಯತೇ

ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ ಮನ್ಯಂತ್ಯಸ್ಮಾದಿಷವಸ್ತ-ಸ್ಯೈಷಾ ಭವತಿ ॥ ೨೯ ॥

ಸದ್ಯಶ್ಚಿದ್ಯಃ ಶವಸಾ ಪಂಚಕೃಷ್ಟೀಃ ಸೂರ್ಯ ಇವ ಜ್ಯೋತಿಷಾ-
ಪಸ್ತತಾನ । ಸಹಸ್ರಸಾಃ ಶತಸಾ ಅಸ್ಯ ರಂಹಿರ್ನಸ್ಮಾ ವರಂತೇ
ಯುವತಿಂ ನ ಶರ್ಯಾಂ ॥

(ಋ. ಸಂ. ೮-೮-೬೬)

ವೃಷ್ಟ್ಯಾದ್ಯಸಾಧಾರಣ ಕರ್ಮಗಳಿಂದ ತಾರ್ಕ್ಷ್ಯಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಹರಿಸುತ್ತಾರೆ. ಸೂರ್ಯನು ವರ್ಷಾಕಾಲದಲ್ಲಿ ತನ್ನ ತೇಜಸ್ಸಿನಿಂದ ಮೊದಲು ಆಕರ್ಷಿಸಿರುವ ನೀರನ್ನು ವಿಸ್ತರಿಸುವಂತೆ ಪ್ರಸಿದ್ಧನಾದ ಈ ಮಧ್ಯಮದೇವನಾದ ತಾರ್ಕ್ಷ್ಯನು ಉಪಯುಕ್ತಕಾಲದಲ್ಲಿ ತನ್ನ ಬಲದಿಂದ ನಿಷಾದಪಂಚಮರಾಗಿರುವ ಚತುರ್ವರ್ಣಮನುಷ್ಯರ ಹಿತಕ್ಕೋಸ್ಕರ ನೀರನ್ನು ಅಧಿಕವಾಗಿ ಸುರಿಸುತ್ತಾನೆ. ಈ ತಾರ್ಕ್ಷ್ಯನ ಗತಿಯು ನಾನಾವಿಧವಾಗಿರುತ್ತವೆ. ಈ ಗತಿಯನ್ನು ತಡೆಯಲು ಯಾರೂ ಸಮರ್ಥರಾಗುವುದಿಲ್ಲ. ಬಿಲ್ಲಿನಿಂದ ಬಿಡಲ್ಪಟ್ಟ ಬಾಣವು ಲಕ್ಷ್ಯವನ್ನು ಸೇರಿದಾಗ ತಪ್ಪಿಸಲು ಹೇಗೆ ಅಸಾಧ್ಯವೋ ಅದರಂತೆ ಇವನ ಗತಿ ಅಪ್ರತಿಹತವಾಗಿರುತ್ತದೆ.

ಸದ್ಯೋಽಪಿ ಯಃ ಶವಸಾ ಬಲೇನ ತನೋತ್ಯಪಃ ಸೂರ್ಯ ಇವ
ಜ್ಯೋತಿಷಾ ಪಂಚಮನುಷ್ಯಜಾತಾನಿ, ಸಹಸ್ರಸಾನಿನೀ ಶತ-
ಸಾನಿನ್ಯಸ್ಯ ಸಾ ಗತಿರ್ನ ಸ್ಮೈನಾಂ ವಾರಯಂತಿ ಪ್ರಯುವತೀಮಿವ
ಶರಮಯೀಮಿಷುಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. 'ಜಾತಿರ್ಜಾತಂ ಚ ಸಾಮಾನ್ಯಂ' ಎಂದು ಅಮರ. ಪಂಚಮನುಷ್ಯಜಾತಾನಿ. ಆಯಾಯ ಜಾತಿಯಿಂದ ವಿಭಕ್ತರಾದ ಮನುಷ್ಯರೆಂದರ್ಥ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದರೂಪ ಐದು ರೀತಿಯಾದ ಜನರೆಂದು ತಾತ್ಪರ್ಯ. ಸಹಸ್ರಸಾನಿನೀ, ಶತಸಾನಿನೀಯೆಂದು ಣಿಸಂತದಿಂದ. ವ್ಯಾಖ್ಯಾನಮಾಡಿರುವುದರಿಂದ ನಾನಾಪ್ರಕಾರದ ಬಹುಗತಿ ಸ್ವಾಭಾವಿಕವೆಂದು ವ್ಯಕ್ತವಾಗುತ್ತದೆ. ಯಾವಾಗಲೂ ಈ ನಾನಾಗತಿಯಿಂದ ಚಲಿಸುವುದು ಅವನ ಸ್ವಭಾವ.

ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧ
ಕರ್ಮಣೋ ವಾ ಮನ್ಯಂತ್ಯಸ್ಮಾದಿಷವಃ । ತಸ್ಯೈಷಾ ಭವತಿ ॥ ೨೯ ॥

ಕ್ರಮಪ್ರಾಪ್ತವಾದ ಮನ್ಯುಪದದ ನಿರ್ವಚನವನ್ನು ತಿಳಿಸುತ್ತಾರೆ. ದೀಪ್ತ್ಯರ್ಥವಾದ ಮನ ಧಾತುವಿಗೆ ಯುಚ್ ಪ್ರತ್ಯಯ. ಬಹುಲಗ್ರಹಣದಿಂದ ಅನಾದೇಶ ಬರುವುದಿಲ್ಲ. ಅಧಿಕ ದೀಪ್ತನಾದವನು ಅಧಿಕ ಕೋಪವುಳ್ಳವನು ಅಥವಾ ಕೊಲ್ಲುವವನು ಈ ಮಧ್ಯಮದೇವನಾದ ಮನುವಿನಿಂದ ಬಾಣದಂತೆ ಉದಕಧಾರೆಗಳು ಹೊರಡುತ್ತವೆ. ಇವು ಶತ್ರುಗಳನ್ನು ಹಿಂಸಿಸುತ್ತವೆ ಮುಂದೆ ಹೇಳುವ ಮಂತ್ರವು ಮನ್ಯು ದೇವತೆಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಸದ್ಯಶ್ಚಿದ್ಯಃ ಶವಸಾ ಪಂಚ ಕೃಷ್ಟೀಃ ಸೂರ್ಯಇವ ಜ್ಯೋತಿಷಾಪಸ್ತತಾನ ।
ಸಹಸ್ರಸಾಃ ಶತಸಾ ಅಸ್ಯ ರಂಹಿರ್ನ ಸ್ಮಾ ವರಂತೇ ಯುವತಿಂ ನ ಶರ್ಯಾಂ ॥

ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ಭೂಮಿಯಮೇಲೆ ವೃಷ್ಟಿರೂಪದಿಂದ ಹರಡುವಂತೆ ಯಾವ ತಾರ್ಕ್ಷ್ಯದೇವನು ತನ್ನ ಶಕ್ತಿಯಿಂದ ಪಂಚವಿಧ ಜನರ ಅನುಕೂಲಕ್ಕಾಗಿ ಉದಕಗಳನ್ನು ಭೂಮಿಯ ಮೇಲೆ ವಿಸ್ತರಿಸಿ ಹರಡುವನೋ ಅಂತಹ ತಾರ್ಕ್ಷ್ಯದೇವನ ಆಗಮನವು ನಮಗೆ ನೂರಾರು, ಸಾವಿರಾರು ಪಾಲಿನಷ್ಟು ಧನವನ್ನು ಕೊಡುವುದು. ಬಿಲ್ಲಿನಿಂದ ಹೊರಹೊರಟ ಬಾಣವು ತನ್ನ ಗುರಿಮುಟ್ಟುವುದನ್ನು ಹೇಗೆ ತಡೆಯಲಾಗುವುದಿಲ್ಲವೋ ಅದರಂತೆ ತಾರ್ಕ್ಷ್ಯದೇವನು ನಮಗೆ ಕೊಡಲಿರುವ ದಾನವನ್ನು ಯಾರೂ ತಡೆಗಟ್ಟಲಾರರು (ಅಡ್ಡಿಪಡಿಸಲಾರರು).

ಪಂಚ ಕೃಷ್ಟೀಃ—ಪಂಚವಿಧ ಜನರು. ಐದು ಗುಂಪುಗಳ ಜನರು. ಬ್ರಾಹ್ಮಣಾದಿ ನಾಲ್ಕು ವರ್ಣದ ಜನರು ಮತ್ತು ಬೇಡರೂ ಸೇರಿ ಐದು ವಿಧವಾದ ಜನರು. ಈ ಪಂಚಜನರ ವಿಷಯವಲ್ಲಿ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ ೧೩–407. ೧೮–710 ಪುಟಗಳಲ್ಲಿರುವುದನ್ನು ನೋಡಿ.

ಯಾಸ್ಕರು ಈ ಋಕ್ಕಿಗೆ ನಿರ್ವಚನಮ್ನು ಹೇಳಿದಾರೆ—

> ಸದ್ಯೋಽಪಿ ಯಃ ಶವಸಾ ಬಲೇನ ತನೋತ್ಯಪಃ ಸೂರ್ಯಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾನಿನೀ ಶತಸಾನಿನ್ಯಸ್ಯ ಸಾ ಗತಿರ್ನ ಸ್ಮೈನಾಂ ವಾರಯಂತಿ ಪ್ರಯುವತೀಮಿವ ಶರಮಯೀಮಿಷುಂ ॥ (ನಿ. ೧೮–೨೯)

ನಾವು ವಿವರಿಸಿರುವ ಸಾಯಣಭಾಷ್ಯದ ಅರ್ಥಕ್ಕೂ ಯಾಸ್ಕರ ವಿವರಣೆಗೂ ಏನೂ ವ್ಯತ್ಯಾಸವಿಲ್ಲದಿರುವುದರಿಂದಿ ಇದನ್ನು ಪುನಃ ವಿವರಿಸುವ ಅವಶ್ಯಕತೆ ಇರುವುದಿಲ್ಲ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ಇಪ್ಪತ್ತೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಿಂಶತಿ ಖಂಡಃ

## ಮೂವತ್ತನೆಯ ಖಂಡವು

ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋಽಧೃಷಿತಾ ಮರುತ್ವಃ॥ ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ (ಋ. ಸಂ. ೧೦–೮೪–೧ ॥ ತ್ವಯಾ ಮನ್ಯೋ ಸರಥಮಾರುಹ್ಯ ರುಜಂತೋ ಹರ್ಷ-

ಮಾಣಾನರೋ ಅಗ್ನಿರೂಪಾ ಅಗ್ನಿಕರ್ಮಾಣಃ ಸಂನದ್ಧಾಃ ಕವಚಿನ ಇತಿ ವಾ ದಧಿಕ್ರಾ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೩೦ ॥

ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋಽಧೃಷಿತಾ ಮರುತ್ವಃ । ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿಪ್ರಯಂತು ನರೋ ಅಗ್ನಿರೂಪಾಃ ॥

(ಅ. ಸಂ. ೮-೩೧-೧) ಋ ಸಂ. (೮-೩-೧೯-೧)

ಮನ್ಯುದೇವತಾಸ್ತುತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಮರುತ್ವತ್ ಶಬ್ದ ಇಂದ್ರವಾಚಕವೆಂದು ಪ್ರಸಿದ್ಧಿ. ಇಲ್ಲಿ ವಾಯುವನ್ನೇ ತಿಳಿಸುತ್ತದೆಂದು ತಿಳಿಯಬೇಕು. ಎಲೈ ಮನ್ಯುದೇವನೇ, ಮಧ್ಯಮನಾದ ವಾಯುವೇ, ನಿನ್ನೊಡನೆ ಒಂದೇ ರಥವನ್ನು ಏರಿ ಶತ್ರುಗಳನ್ನು ತಿರಸ್ಕರಿಸುತ್ತಾ ಸಂತುಷ್ಟರಾಗಿ, ನಿನ್ನ ಆಶ್ರಯದಿಂದ ಅಧಿಕ ಬಲಿಷ್ಠರಾಗಿ ಶತ್ರುಗಳಿಂದ ತಿರಸ್ಕರಿಸಲ್ಪಡದೆ ಹರಿತವಾದ ಬಾಣವುಳ್ಳವರಾಗಿ ಆಯುಧಗಳ ವ್ಯಾಪಾರವನ್ನು ಹೊಂದುತ್ತಾ ಅಂದರೆ ಬಾಣಗಳಿಂದ ತುಂಡರಿಸುತ್ತಾ, ನಾನಾ ಆಯುಧಗಳಿಂದ ಶತ್ರುಗಳನ್ನು ನಾಶಪಡಿಸುತ್ತಾ, ಈ ಭಟರು ಅಗ್ನಿಯಂತೆ ಶತ್ರುಸೇನೆಯನ್ನು ಸುಡುತ್ತಾ, ಕವಚಾದಿಗಳಿಂದ ಅಗ್ನಿಯಂತೆಯೇ ಇದ್ದು ಯುದ್ಧಕ್ಕೆ ಹೋಗಲಿ.

ತ್ವಯಾ ಮನ್ಯೋ! ಸರಥಮಾರುಹ್ಯ ರುಜಂತೋ ಹರ್ಷಮಾಣಾಸೋಽಧೃಷಿತಾ ಮರುತ್ವಃ! ತಿಗ್ಮೇಷವ ಆಯುಧಾನಿ ಸಂಶಿಶ್ಯಮಾನಾ ಅಭಿಪ್ರಯಂತು ನರೋಽಗ್ನಿರೂಪಾ ಅಗ್ನಿಕರ್ಮಾಣಃ । ಸನ್ನದ್ಧಾಃ ಕವಚಿನ ಇತಿ ವಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ಫುಟಾರ್ಥಪ್ರತಿಪಾದಕವಾಗಿದೆ.

ದಧಿಕ್ರಾ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೩೦ ॥

ಕ್ರಮಪ್ರಾಪ್ತವಾದ ದಧಿಕ್ರಾ ಪದದ ನಿರ್ವಚನವನ್ನು ತೋರಿಸುತ್ತಾರೆ. ದಧತ್ ಕ್ರಾಮತೀ (ನಿಘ-೨-೨೭) ಎಂದು ಇದು ಅಶ್ವನಾಮ ಮಧ್ಯದಲ್ಲಿ ವ್ಯಾಖ್ಯಾತವಾಗಿದೆ. ಇಲ್ಲಿ ಮಧ್ಯಮದೇವನನ್ನು ಪ್ರತಿಪಾದಿಸುತ್ತದೆ. ಬಲಕೃತಿ, ವೃಷ್ಟಿಕರ್ಮ ಮುಂದೆ ವಿವರಿಸುವುದರಿಂದ ಇದು ಮಧ್ಯಮನೆಂದು ನಿಶ್ಚಿತವಾಗುತ್ತದೆ. ಅಂತರಿಕ್ಷದಲ್ಲಿ ನೀರನ್ನು ಧರಿಸಿ ಸುತ್ತಲೂ ಚಲಿಸುತ್ತಾನೆಂದರ್ಥ. ಮುಂದೆ ಹೇಳುವ ಮಂತ್ರವು ದಧಿಕ್ರಾದೇವನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಮೂವತ್ತನೆಯ ಖಂಡವು ಸಮಾಪ್ತವು.

## ಅಥ ಏಕತ್ರಿಂಶತಿ ಖಂಡಃ

## ಮೂವತ್ತೊಂದನೆಯ ಖಂಡವು

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ । ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ । (ಋ. ಸಂ. ೪-೩೮-೧೦) ॥ ಆತನೋತಿದಧಿಕ್ರಾಃ ಶವಸಾ ಬಲೇನಾಪಃ ಸೂರ್ಯ ಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾಃ ಶತಸಾ ವಾಜೀ ವೇಜನವಾನರ್ವೇರಣವಾನ್ಸಂ-ಪೃಣಕ್ತು ನೋ ಮಧುನೋದಕೇನ ವಚನಾನೀಮಾನೀತಿ ಮಧು ಧಮತೇರ್ವಿಪರೀತಸ್ಯ ಸವಿತಾ ಸರ್ವಸ್ಯ ಪ್ರಸವಿತಾ ತಸ್ಯೈಷಾ ಭವತಿ ॥ ೩೧ ॥

ಆ ದಧಿಕ್ರಾಃ ಶವಸಾ ಪಂಚಕೃಷ್ಟೀಃ ಸೂರ್ಯ ಇವ ಜ್ಯೋತಿಷಾ
ಪಸ್ತತಾನ । ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ
ಸಮಿಮಾ ವಚಾಂಸಿ ॥

(ಋ. ಸಂ. ೩-೭-೧೨)

ದಧಿಕ್ರಾಮಧ್ಯಮದೇವನ ಸ್ತುತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸೂರ್ಯನು ತೇಜಸ್ಸಿನಿಂದ ಜಗತ್ತನ್ನು ಆವರಿಸುವಂತೆ ಈ ದಧಿಕ್ರಾನಾಮಕಮಧ್ಯಮದೇವನು ಬಲದಿಂದ ಐದುವಿಧ ಮನುಷ್ಯರಿಗೋಸ್ಕರ ನೀರನ್ನು ವಿಸ್ತರಿಸಿ ಕೊಡುತ್ತಾನೆ. ನಾನಾರೀತಿಯಾಗಿ ನೀರನ್ನು ಕೊಡುತ್ತಾ ಅತಿಶಯವೇಗವುಳ್ಳ, ಸದಾಚಲಿಸುವ ಈ ದೇವನು ನಮ್ಮ ಈ ಸ್ತುತಿಲಕ್ಷಣವಾದ ಮಾತನ್ನು ನೀರಿನೊಡನೆ ಸೇರಿಸಲಿ. ಸ್ತುತಿಯನ್ನು ಕೇಳಿದೊಡನೆಯೇ ನೀರನ್ನು ಸುರಿಸಲಿ.

ಆತನೋತಿ ದಧಿಕ್ರಾಃ ಶವಸಾ—ಬಲೇನಾಪಃ ಸೂರ್ಯ ಇವ
ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾಃ ಶತಸಾ ವಾಜೀ
ವೇಜನವಾನರ್ವೇರಣವಾನ್ ಸಂಪೃಣಕ್ತು ನೋ ಮಧುನೋದ ಕೇನ
ವಚನಾನೀಮಾನೀತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ದೇವ, ಮನುಷ್ಯ, ಅಸುರ, ರಕ್ಷಃ ಪಿತೃರೂಪ ಐದು ಜಾತಿಯನ್ನಾಗಲೀ ಹಿಂದೆ ಹೇಳಿದಂತೆ ನಿಷಾದ ಪಂಚಮ ಜಾತಿಯನ್ನಾಗಲೀ ತಿಳಿಯಬೇಕು. ಜಾತಪದಕ್ಕೆ ಜಾತಿಯೆಂದರ್ಥ.

ಮಧು ಧಮತೇರ್ವಿಪರೀತಸ್ಯ ॥

ಮಂತ್ರದಲ್ಲಿರುವ ಮಧುಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಗತ್ಯರ್ಥಕ ಧಮ ಧಾತುವಿಗೆ ಔಣಾದಿಕ ಉ ಪ್ರತ್ಯಯ. ಆದ್ಯಂತ ವರ್ಣಗಳಿಗೆ ವಿಪರ್ಯಯ ಬಂದಿದೆ. ಮೇಘದಿಂದ ಹೊರಗೆ ಹಾಕಲ್ಪಡುವುದು ನೀರು ಎಂದರ್ಥ.

ಸವಿತಾ ಸರ್ವಸ್ಯ ಪ್ರಸವಿತಾ । ತಸ್ಯೈಷಾ ಭವತಿ ॥ ೩೧ ॥

ಕ್ರಮಪ್ರಾಪ್ತವಾದ ಸವಿತಾಪದದ ನಿರ್ವಚನ ತೋರಿಸುತ್ತಾರೆ. ಇದು— 'ಇಮಮೇವಾಗ್ನಿಂ ಸವಿತಾರಮಾಹ' ಎಂಬಲ್ಲಿ ವ್ಯಾಖ್ಯಾತವಾದರೂ ವೃಷ್ಟಿಕರ್ಮ ಸಂಬಂಧದಿಂದ ಮಧ್ಯಮತ್ವವಿರುವುದರಿಂದ ಪುನಃ ಹೇಳಿದೆ. ಇವನು ವೃಷ್ಟಿಪ್ರದಾನಾದಿ ಕರ್ಮದಿಂದ ಸಕಲ ಕರ್ಮಗಳಿಗೆ ಪ್ರೇರಕನಾಗಿರುತ್ತಾನೆ. ಷು—ಪ್ರಸವೈಶ್ವರ್ಯಯೋಃ ಧಾತು. ತೃನ್ ಪ್ರತ್ಯಯ ಬಂದಾಗ ಗುಣ ಅವಾದೇಶ. ಪ್ರಸವವೆಂದರೆ ಅಭ್ಯನುಜ್ಞಾನ. ಮುಂದೆ ಹೇಳುವ ಮಂತ್ರವು ಸವಿತೃದೇವತಾಸ್ತುತಿಯನ್ನು ತಿಳಿಸುತ್ತದೆ.

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯಇವ ಜ್ಯೋತಿಷಾಪಸ್ತತಾನ।
ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ ॥

ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ಸರ್ವತ್ರ ವಿಸ್ತರಿಸಿ ಹರಡುವಂತೆ, ದಧಿಕ್ರಾದೇವನು ತನ್ನ ಶಕ್ತಿಯಿಂದ ದೇವಮಾನವಾದಿ ಐದು ವಿಧವಾದ ಪ್ರಜೆಗಳನ್ನೂ ಆಯಾ ಪ್ರದೇಶಗಳಲ್ಲಿ ವಿಸ್ತರಿಸಿ ಹರಡಿದ್ದಾನೆ. ಸಹಸ್ರಾರು ವಿಧಗಳಲ್ಲಿಯೂ, ನೂರಾರು ರೂಪಗಳಲ್ಲಿಯೂ ದಾನಮಾಡುವವನೂ, ವೇಗಯುಕ್ತನೂ, ಅಶ್ವರೂಪನೂ ಆದ ಈ ದೇವನು ನಮ್ಮ ಈ ಸ್ತುತಿ ವಚನಕ್ಕೆ ಪ್ರತಿಯಾಗಿ ಮಾಧುರ್ಯಯುಕ್ತವಾದ ಫಲಗಳನ್ನು ಅನುಗ್ರಹಿಸಿ ಕೊಡಲಿ.

ದಧಿಕ್ರಾವ್ಣೋ ಅಕಾರಿಷಂ ಎಂಬ ಈ ಆರನೆಯ ಋಕ್ಕನ್ನು ಪವಿತ್ರೇಷ್ಟಿಯಲ್ಲಿ ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ದಧಿಕ್ರಾವ್ಣೋ ಅಕಾರಿಷಮಾ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಎಂಬ ಸೂತ್ರದಿಂದ (ಆ. ೨-೧೨) ವಿವೃತವಾಗಿರುವುದು. ಮತ್ತು ದಧಿದ್ರಪ್ಸಭಕ್ಷಣದಲ್ಲಿಯೂ ಸಹ ಉಪಯೋಗಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ—ದಧಿಕ್ರಾವ್ಣೋ ಅಕಾರಿಷಮಿತ್ಯಾಗ್ನೀಧ್ರೀಯೇ ದಧಿದ್ರಪ್ಸಾನ್ ಭಕ್ಷಯಂತಿ ಎಂಬ ಸೂತ್ರದಿಂದ (ಆ. ೬-೧೨) ವಿವೃತವಾಗಿರುವುದು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತೊಂದನೆಯ ಖಂಡವು ಮುಗಿದಿದೆ.

## ಅಥ ದ್ವಾತ್ರಿಂಶತಿ ಖಂಡಃ

## ಮೂವತ್ತೆರಡನೆಯ ಖಂಡವು

ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಮ್ । (ಋ. ಸಂ. ೧೦-೧೪೯-೧೨) ॥ ಸವಿತಾ ಯಂತ್ರೈಃ ಪೃಥಿವೀಮರಮಯದನಾರಂಭಣೇಽಂತರಿಕ್ಷೇ

ಸವಿತಾ ದ್ಯಾಮದೃಂಹದಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತಿವಾ ತ್ವರಮಾಣ ಇತಿ ವಾ ಸವಿತಾ ಸಮುದಿತಾರಾಮಿತಿಕಮನ್ಯಂ ಮಧ್ಯಮಾದೇವಮವಕ್ಷ್ಯದಾದಿತ್ಯೋಽಪಿ ಸವಿತೋಚ್ಯತೇ ತಥಾ ಚ ಹೈರಣ್ಯಸ್ತೂಪೇ ಋಷಿರಿದಂ ಸೂಕ್ತಂ ಪ್ರೋವಾಚ ತದಭಿವಾದಿನ್ಯೇಷರ್ಗ್ಭವತಿ || ೩೨ ||

ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭೇನ ಸವಿತಾ ದ್ಯಾಮ-
ದೃಂಹತ್ | ಅಶ್ವಾಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ
ಬದ್ಧಂ ಸವಿತಾ ಸಮುದ್ರಂ ||

(ಋ. ೧೦. ೮-೮-೭)

ಸವಿತೃಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸರ್ವಪ್ರೇರಕನಾದ ಮಧ್ಯಮದೇವನು ವೃಷ್ಟಿಪ್ರದಾನಾದಿ ಉಪಾಯಗಳಿಂದಲೂ ವಾಯುಸಂಬಂಧಿ ಪಾಶಗಳಿಂದ ಈ ಭೂಮಿಯನ್ನು ಸ್ಥಿರವನ್ನಾಗಿ ಮಾಡಿದನು. ಈ ಸವಿತೃದೇವನು ಯಾವ ಆಶ್ರಯವಿಲ್ಲದಿರುವ ಅಂತರಿಕ್ಷದಲ್ಲಿ ದ್ಯುಲೋಕವನ್ನು ಸ್ಥಿರವಾಗಿಟ್ಟನು. ಹೀಗೆಯೇ ಅಂತರಿಕ್ಷವನ್ನೂ ವ್ಯವಸ್ಥಾ ಪಡಿಸಿದನು. ಗಮನಯೋಗ್ಯವಾದ ಆಕಾಶದಲ್ಲಿ ವಾಯುಪಾಶಗಳಿಂದ ಬದ್ಧವಾದ ಮೇಘಗಳನ್ನು ನೀರು ಸುರಿಸಲು ಕುದುರೆ ಯನ್ನು ಪ್ರೇರೇಪಿಸಲು ಹೊಡೆಯುವಂತೆ ಹೊಡೆದು ನಡುಗಿಸಿದನು.

ಸವಿತಾ ಯಂತ್ರೈಃ ಪೃಥಿವೀಮರಮಯದನಾರಂಭಣೇಂತರಿಕ್ಷೇ ಸವಿತಾ
ದ್ಯಾಮದೃಂಹದಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧ-
ಮಮೂರ್ತೇ ಬದ್ಧಮತೂರ್ಣಂ ಇತಿ ವಾಽತ್ವರಮಾಣ ಇತಿ ವಾ
ಸವಿತಾ ಸಮುದಿತಾರಮಿತಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬೀಳದಂತೆ ತಡೆಹಿಡಿಯುವುದು. ಸ್ಕಂಭನ. ಅದು ಇಲ್ಲದಿರುವುದು ಅಸ್ಕಂಭನ ಅಂದರೆ ಅಂತರಿಕ್ಷ. ಸಮುದ್ರ ಎಂಬುದಕ್ಕೆ ಸಮುದಿತಾರಂ ಎಂದು ವ್ಯಾಖ್ಯಾನ. ನೀರಿನಿಂದ ಒದ್ದೆಮಾಡುವುದು ಮೇಘ. ಉಂದೀ-ಕ್ಲೇದನೇ–ಧಾತು. ಸಮ್ ಪೂರ್ವದಲ್ಲಿರುವಾಗ ರಕ್‌ಪ್ರತ್ಯಯ. ಕಿತ್ತಾದುದರಿಂದ ನಕಾರಕ್ಕೆ ಲೋಪ. ಮಳೆಯಿಂದ ಭೂಮಿಯನ್ನು ಒದ್ದೆಮಾಡುವುದೆಂದರ್ಥ.

ಕಮನ್ಯಂ ಮಧ್ಯಮಾದೇವಮವಕ್ಷ್ಯತ್ ? ||

ಮೇಘವನ್ನು ಕಂಪಿಸಿದನು ಎಂದು ಹೇಳಿದೆ. ಬಲಕೃತಿ ವೃಷ್ಟ್ಯಾದಿಕರ್ಮ ಇವೆರಡೂಹೇಳಿರುವಾಗ ಇದನ್ನು ಮಾಡಿದವನು ಮಧ್ಯಮದೇವನಲ್ಲದೆ ಇನ್ನು ಬೇರೆ ಯಾರು ಆಗಲು ಸಾಧ್ಯ? ಸಂಶಯಕ್ಕೆ ಕಾರಣವೇನು? ಅಂದರೆ ಸವಿತೃದೇವನು ಮಧ್ಯಮ ನಲ್ಲದೆ ಬೇರೊಬ್ಬನನ್ನು ಹೇಳುವುದರಿಂದ ಇವನು ಯಾರೆಂಬ ಸಂದೇಹಕ್ಕೆ ಅವಕಾಶವಾಗಿದೆ.

ಆದಿತ್ಯೋಽಪಿ ಸವಿತಾ ಉಚ್ಯತೇ ॥ ಇತಿ ॥ ತಥಾ ಚ ಹೈರಣ್ಯಸ್ತೂಪೇ
ಸುತೋಽರ್ಚನ್ ಹಿರಣ್ಯಸ್ತೂಪ ಋಷಿರಿದಂ ಸೂಕ್ತಂ ಪ್ರೋವಾಚ ।
ತದಭಿವಾದಿನ್ಯೇಷರ್ಗ ಭವತಿ ॥

ದ್ಯುಲೋಕಸ್ಥಾನನಾದ ಆದಿತ್ಯನೂ ಸವಿತೃಪದದಿಂದ ವಾಚ್ಯನಾಗುವುದರಿಂದ ಸಂದೇಹಬರುತ್ತದೆ. ಹೈರಣ್ಯಸ್ತೂಪವೆಂಬ ಸೂಕ್ತದಲ್ಲಿ ಸವಿತೃಸ್ತುತಿಪ್ರತಿಪಾದಿತವಾಗಿದೆ. ಅರ್ಚನ್ ಎಂಬ ಋಷಿಗೆ ಹಿರಣ್ಯಸ್ತೂಪವೆಂಬ ಹೆಸರಿದೆ. 'ಆತ್ಮಾ ವಾ ಜಾಯತೇ ಪುತ್ರಃ' ಎಂದು ಶ್ರುತಿಯಿರುವುದರಿಂದ ಅವನ ಮಗನೂ ಹಿರಣ್ಯಸ್ತೂಪನೇ ಆಗುತ್ತಾನೆ. ತದ್ವ್ರತವುಳ್ಳವನೂ ಆಗಬಹುದು. ಅವನು ಈ ಸೂಕ್ತವನ್ನು ಹೇಳಿರುವುದರಿಂದ ಇದಕ್ಕೆ ಹೈರಣ್ಯಸ್ತೂಪವೆಂಬ ಹೆಸರು ಬಂದಿದೆ. ಮುಂದೆ ಹೇಳುವ ಋಙ್ಮಂತ್ರವು ಆ ಸವಿತೃದೇವನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।
ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥ ೧ ॥

ಸರ್ವಪ್ರಾಣಿಗಳನ್ನೂ ಪ್ರೇರಿಸುವ ಅಥವಾ ಉತ್ಪತ್ತಿಮಾಡುವ ಈ ಸವಿತೃದೇವನು ಈ ವಿಸ್ತಾರವಾದ ಭೂಮಿಯನ್ನು ವಾಯುಗಳೆಂಬ ಪಾಶಗಳಿಂದ (ಅಥವಾ ವೃಷ್ಟಿಪ್ರದಾನಾದಿ ಸಾಧನಗಳಿಂದ) ಬಲವಾಗಿ ಬಿಗಿದು ದೃಢವಾಗಿ ಅಲುಗಾಡದಂತೆ ಸ್ಥಾಪಿಸಿದ್ದಾನೆ. ಯಾವ ಆಧಾರವೂ ಇಲ್ಲದ ಅಂತರಿಕ್ಷದಲ್ಲಿ ದ್ಯುಲೋಕವನ್ನು ಕೆಳಕ್ಕೆ ಬೀಳದಂತೆ ನಿಲ್ಲಿಸಿದ್ದಾನೆ. ನಡುಗುತ್ತಿರುವ ಅಶ್ವದಂತೆ ಯಾವ ಆಶ್ರಯವೂ ಇಲ್ಲದೆ ನಿರ್ಬಾಧಿತವಾದ ಆಕಾಶದಲ್ಲಿ ವಾಯುವೆಂಬ ಹಗ್ಗದಿಂದ ಬಿಗಿದು ನಿಂತಿರುವ ಮೇಘದಿಂದ ಈ ಸವಿತೃವದೇವನು ವೃಷ್ಟ್ಯುದಕವನ್ನು ಭೂಮಿಯ ಮೇಲೆ ಬೀಳುವಂತೆ ಕರೆಯುತ್ತಾನೆ.

ಸವಿತೃಶಬ್ದದ ರೂಪನಿಷ್ಪತ್ತಿಯನ್ನು ಹೇಳುತ್ತಾ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ—

ಸವಿತಾ । ಸವಿತಾ ಸರ್ವಸ್ಯ ಪ್ರಸವಿತಾ ॥　　　　( ನಿ. ೧೦–೩೧ )

ಸವಿತಾ ಎಂದರೆ ಸಮಸ್ತವನ್ನೂ ಉತ್ಪತ್ತಿಮಾಡುವ ಅಥವಾ ಸಮಸ್ತಪ್ರಾಣಿಗಳ ಉತ್ಪತ್ತಿಗೆ ಕಾರಣನಾದ ದೇವನು.

ತಸ್ಯೈಷಾ ಭವತಿ ॥ ಸವಿತಾ ಯಂತ್ರೈಃ ಪೃಥಿವೀಮರಮಯದನಾರಂಭಣೇಽನ್ತರಿಕ್ಷೇ ಸವಿತಾ ದ್ಯಾಮದೃಂಹದಶ್ವಮಿವಾದುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತಿ ವಾತ್ವರಮಾಣ ಇತಿ ವಾ ಸವಿತಾ ಸಮುದಿತಾರಮಿತಿ ॥

ಸವಿತಾ ಯಂತ್ರೈಃ ಎಂಬ ಪ್ರಕೃತ ಋಕ್ಕು ಈ ಸವಿತೃದೇವತೆಯನ್ನು ಸ್ತುತಿಸುವುದು. ಇಲ್ಲಿ ಯಂತ್ರಶಬ್ದವು ನಿಯಮನ ಮಾಡು, ಅಧೀನದಲ್ಲಿಟ್ಟುಕೋ ಎಂಬರ್ಥವಿರುವ ಯಮ್ ಧಾತುವಿನಿಂದ ನಿಷ್ಪನ್ನವಾಗಿದೆ. ಯಂತ್ರವೆಂದರೆ ನಿಯಮನ, ವಶ, (Control) ಅಧೀನ ಎಂದರ್ಥವು.

ಸವಿತಾ ಯಂತ್ರೈಃ ಪೃಥಿವೀಂ ಅರಮ್ಣಾತ್—ಸವಿತಾ ಯಂತ್ರೈಃ ಪೃಥಿವೀಮರಮಯತ್ । ಈ ವಿತೃದೇವತೆಯು ಈ ಭೂಮಿಯನ್ನು ಕೆಲವು ಸಾಧನೋಪಾಯಗಳಿಂದ ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ ಮತ್ತು ಅದನ್ನು

ದೃಢವಾಗಿ ಸ್ಥಾಪಿಸಿದಾನೆ. ಸಾಧನೋಪಾಯಗಳೆಂದರೇನು, ಎಂದರೆ ವೃಷ್ಟಿಪ್ರಧಾನ, ಪ್ರಕಾಶನ, ಇತ್ಯಾದಿ. ಬೆಳಕು ಮತ್ತು ಮಳೆ ಇಲ್ಲದಿದ್ದರೆ ಭೂಮಿಯ ಮೇಲಿರುವಪ್ರಾಣಿಗಳು ಜೀವಿಸುವುದಕ್ಕಾಗುವುದಿಲ್ಲ. ವೃಷ್ಟಿಕರ್ಮವು ಸೂರ್ಯನ ರಶ್ಮಿಗಳ ಅಧೀನಕ್ಕೆ ಒಳಪಟ್ಟಿರುವುದರಿಂದ ವೃಷ್ಟಿಯನ್ನಪೇಕ್ಷಿಸುವ ಭೂಮಿಯೂ ಸವಿತೃವಿನ ಅಧೀನಕ್ಕೆ ಒಳಪಟ್ಟಂತಾಯಿತು. ಇಂತಹ ಭೂಮಿಯು ಅಲುಗಾಡದಂತೆ ನಿಶ್ಚಲವಾಗಿ ಎಂದರೆ ಸ್ಥಿರವಾಗಿ ಇರುವಂತೆ ಆ ಸವಿತೃದೇವನೇ ಮಾಡಿರುವನು.

**ಅನಾರಂಭಣೇಽನ್ತರಿಕ್ಷೇ ಸವಿತಾದ್ಯಾಮದೃಂಹತ್**—ಈ ಸವಿತೃದೇವನು ದ್ಯುಲೋಕವನ್ನು ಯಾವ ಆಧಾರವೂ ಇಲ್ಲದ ಆಕಾಶದಲ್ಲಿ ದೃಢವಾಗಿರುವಂತೆ ಸ್ಥಾಪಿಸಿದನು. ಆಕಾಶದಲ್ಲಿ ಯಾವ ವಸ್ತುವನ್ನೂ ಇಡುವುದಕ್ಕಾಗುವುದಿಲ್ಲ. ಒಂದು ಹುಲ್ಲುಕಡ್ಡಿಯನ್ನು ಆಕಾಶದಲ್ಲಿ ಹಾಕಿದರೆ ಅದು ಅಲ್ಲಿ ನಿಲ್ಲದೆ ತಕ್ಷಣ ಕೆಳಕ್ಕೆ ಬೀಳುವುದು. ಹೀಗಿರುವಾಗ ಇಷ್ಟು ದೊಡ್ಡದಾಗಿರುವ ದ್ಯುಲೋಕವು ಕೆಳಕ್ಕೆ ಬೀಳದಂತೆ ಯಾವ ಆಧಾರವೂ ಇಲ್ಲದೆ ಆಕಾಶದಲ್ಲಿ ದೃಢವಾಗಿ ಈ ಸವಿತೃದೇವನು ಸ್ಥಾಪಿಸಿರುವನು.

**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತಿ ವಾತ್ವರಮಾಣ ಇತಿ ವಾ ಸವಿತಾ ಸಮುದಿತಾರಮಿತಿ**—ಅತೂರ್ತೇ ಎಂದರೆ ಅಹಿಂಸಿತೇ, ನಿರ್ಬಾಧಿತವಾದ ಸ್ಥಳದಲ್ಲಿ. ಆಕಾಶದಲ್ಲಿ ಯಾವುದು ಬೇಕಾದರೂ ನಿರ್ಬಾಧಕವಾಗಿ ಸಂಚರಿಸಬಹುದು ಅದನ್ನು ಅಲ್ಲಿ ತಡೆಗಟ್ಟುವ ವಸ್ತುವು ಯಾವುದೂ ಇರುವುದಿಲ್ಲ. ಭೂಮಿಯ ಮೇಲೆ ಒಂದು ಪ್ರಾಣಿಯು ಸಂಚರಿಸುವಾಗ ದಾರಿಗೆ ಅಡ್ಡಲಾಗಿ ಸಿಕ್ಕುವ ಪರ್ವತ, ವೃಕ್ಷ, ನದಿ ಮೊದಲಾದವು ಆ ಪ್ರಾಣಿಯ ಗತಿಯನ್ನು ತಡೆಗಟ್ಟಬಲ್ಲದು. ಆದರೆ ಆಕಾಶದಲ್ಲಿ (ಪಕ್ಷ್ಯಾದಿಗಳು) ಸಂಚರಿಸುವಾಗ ಅದನ್ನು ಅಲ್ಲಿ ತಡೆಗಟ್ಟುವ ಯಾವ ವಸ್ತುವೂ ಇರುವುದಿಲ್ಲ. ಆದ್ದರಿಂದ ಅತೂರ್ತೇ ಎಂದರೆ ಅಹಿಂಸಿತವಾದ, ನಿರ್ಬಾಧಕವಾದ, ತಡೆ ಇಲ್ಲದ ಎಂದರ್ಥವು ಇಂತಹ ಆಕಾಶವಲ್ಲಿ ವಾಯುವಿನಿಂದ ಬಂಧಿಸಲ್ಪಟ್ಟ ಮೇಘಗಳಲ್ಲಿರುವ ಉದಕವನ್ನು ಈ ಸವಿತೃವು ವೃಷ್ಟಿರೂಪದಲ್ಲಿ ಕರೆಯು ವನು. ಇದಕ್ಕೆ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿದೆ. ಅಶ್ವಮಿವ—ಕುದುರೆಯಂತೆ. ಕುದುರೆಯು ತನ್ನ ಮೈಮೇಲಿರುವ ಧೂಳನ್ನು ಕಂಪನದಿಂಧ (ಶರೀರವನ್ನು ಅಲುಗಾಡಿಸುವುದರಿಂದ) ಕೆಳಕ್ಕೆ ಬೀಳುವಂತೆ ಮಾಡುವುದು. ಅದರಂತೆ ಮೇಘ ಗಳಲ್ಲಿರುವ ಉದಕಗಳನ್ನು ಸವಿತೃವು ಮಳೆಯ ಹನಿಗಳಾಗಿ ಭೂಮಿಯ ಮೇಲೆ ಬೀಳುವಂತೆ ಮಾಡುವನು ಎಂದಭಿಪ್ರಾಯವು.

> **ಕಮನ್ಯಂ ಮಧ್ಯಮಾದೇವಮವಕ್ಷ್ಯತ್ । ಆದಿತ್ಯೋಽಪಿ ಸವಿತೋಚ್ಯತೇ । ತಥಾ ಚ ಹೈರಣ್ಯಸ್ತೂಪೇ ಸ್ತುತೋಽರ್ಚನ್ ಹಿರಣ್ಯಸ್ತೂಪಋಷಿರಿದಂ ಸೂಕ್ತಂ ಪ್ರೋವಾಚ ॥** (ನಿ.೧೦-೩೨)

ಮಧ್ಯಮಸ್ಥಾನ ದೇವತೆಯಾದ ಈ ಸವಿತೃವನ್ನಲ್ಲದೆ ಬೇರೆ ಯಾವ ದೇವತೆಯನ್ನು ಈ ಸೂಕ್ತದಲ್ಲಿ ಋಷಿಯು ಸ್ತುತಿಸಿರಬಹುದು? ಆದಿತ್ಯನಿಗೂ ಸವಿತೃವೆಂದು ಹೆಸರು. ಹಿರಣ್ಯಸ್ತೂಪನೆಂಬ ಋಷಿಯು ಸವಿತೃದೇವನನ್ನು ಸ್ತುತಿಸುವಾಗ ಈ ಸೂಕ್ತದಲ್ಲಿರು ವುದನ್ನೇ ಹೇಳಿರುವನು. ಮುಂದಿನ ಋಕ್ಕಿನಲ್ಲಿ (ಈ ಸೂಕ್ತದ ೫ ನೇ ಋಕ್ಕು) ಈ ವಿಷಯದ ಪ್ರಸ್ತಾಪವಿರುವುದು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತೆರಡನೆಯ ಖಂಡವು ಸಮಾಪ್ತವು.

———

# ಅಥ ತ್ರಯಸ್ತ್ರಿಂಶತ್ ಖಂಡಃ

## ಮೂವತ್ತಮೂರನೆಯ ಖಂಡವು

ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ । ಏವಾ ತ್ವಾರ್ಚನ್ನವಸೇ ವಂದಮಾನ ಸೋಮಸ್ಯೇವಾಂಶುಂ ಪ್ರತಿ ಜಾಗರಾಹವಂ (ಋ. ಸಂ. ೧೦-೧೪೯-೫) ॥ ಹಿರಣ್ಯಸ್ತೂಪೋ ಹಿರಣ್ಯಮಯಃ ಸ್ತೂಪೋ ಹಿರಣ್ಯಮಯಃ ಸೂಪೋ ಸ್ಯೇತಿ ವಾ ಸ್ತೂಪಃ ಸ್ತ್ಯಾಯತೇಃ ಸಂಘಾತಃ ಸಕತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇಽನ್ನೇಽಸ್ಮಿನ್ನೇವಂ ತ್ವಾರ್ಚನ್ನವನಾಯ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ-ಜಾಗರ್ಮ್ಯಹಂ ತ್ವಷ್ಟಾ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೩೩ ॥

ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ । ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇ-ವಾಂಶುಂ ಪ್ರತಿ ಜಾಗರಾಹವಂ ॥

(ಋ. ಸಂ. ೮-೮-೭)

ಸವಿತೃಸ್ತುತಿಪ್ರತಿಪಾದಕ ಹೈರಣ್ಯಸ್ತೂಪ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಸರ್ವಪ್ರೇರಕ ಸವಿತೃದೇವನೇ ಹೇಗೆ ನಿನ್ನನ್ನು ನನ್ನ ತಂದೆಯಾದ ಅಂಗಿರಸ್ಪುತ್ರನಾದ ಹಿರಣ್ಯಸ್ತೂಪನು ಅನ್ನಕ್ಕೋಸ್ಕರ ಯಾಗಕರ್ಮದಲ್ಲಿ ಆಹ್ವಾನಮಾಡಿದನೋ ಅದರಂತೆ ಅರ್ಚನ್ ಎಂಬ ಹೆಸರುಳ್ಳ ನಾನು ರಕ್ಷಣೆಗೋಸ್ಕರ ನಿನ್ನನ್ನು ಸ್ತುತಿಸುತ್ತಾ ಕರೆಯುತ್ತೇನೆ. ಹೀಗೆ ಕರೆದು ಯಜಮಾನನು ಸೋಮರಸವನ್ನು ಯಾಗಪರ್ಯಂತ ರಕ್ಷಿಸುವುದರಲ್ಲಿ ಜಾಗೃತನಾಗಿರುವಂತೆ ನಾನು ಯಾಗ ಮುಗಿಯುವವರೆಗೆ ಉಪಾಸಿಸುತ್ತೇನೆ.

ಹಿರಣ್ಯಸ್ತೂಪೋ ಹಿರಣ್ಯಮಯಸ್ತೂಪೋ ವಾ । ಸ್ತೂಪಃ ಸ್ತ್ಯಾಯ-ತೇಃ ಸಂಘಾತಃ । ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅನ್ನೇ ಅಸ್ಮಿನ್, ಏವಂ ತ್ವಾರ್ಚನ್ನವನಾಯ ವಂದಮಾನಃ ಸೋಮಸ್ಯೇವಾಂಶುಂ ಪ್ರತಿಜಾಗರ್ಮ್ಯಹಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಹಿರಣ್ಯಮಯವಾದ ಸ್ತೂಪವುಳ್ಳವನು ಹಿರಣ್ಯಸ್ತೂಪನು. ಸ್ತೂಪಪದಕ್ಕೆ ಸಂಘಾತ ವೆಂದರ್ಥ. ಸ್ತ್ಯೈ-ಶಬ್ದಸಂಘಾತಯೋಃ-ಧಾತು ಪಪ್ರತ್ಯಯ ಬಂದಾಗ ಧಾತುವಿಗೆ ಸ್ತೂ ಆದೇಶ. ಕಿತ್ತ್ವವಿರುವುದರಿಂದ ಗುಣಬರುವುದಿಲ್ಲ.

## ತ್ವಷ್ಟಾ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೩೩ ॥

ಕ್ರಮಪ್ರಾಪ್ತವಾದ ತ್ವಷ್ಟೃಪದದ ನಿರ್ವಚನವನ್ನು ತಿಳಿಸುತ್ತಾರೆ. 'ತ್ವಷ್ಟಾ ತೂರ್ಣಮಶ್ನುತ' (ನಿ. ೮–೧೩) ಎಂಬಲ್ಲಿ ಇದು ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಮಂತ್ರವು ತ್ವಷ್ಟೃದೇವತೆಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

**ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ । ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ॥ ೫ ॥**

ಸರ್ವಪ್ರೇರಕನಾದ ಎಲೈ ಸವಿತೃದೇವನೇ, ಅಂಗಿರಸ ಋಷಿಯ ಪುತ್ರನಾದ ಹಿರಣ್ಯಸ್ತೂಪನೆಂಬ ನನ್ನ ತಂದೆಯು ಅನ್ನಾದ್ಯಾಹಾರನಿಮಿತ್ತವಾಗಿ ನಿನ್ನನ್ನು ಪ್ರಾರ್ಥಿಸಿ ಕರೆದಂತೆ, ನಾನೂ ನನ್ನ ರಕ್ಷಣೆಗಾಗಿ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ ಯಜ್ಞದಲ್ಲಿ ಯಜಮಾನರು ಸೋಮಲತೆಗಳನ್ನು ಯಾವ ರೀತಿ ಬಹು ಎಚ್ಚರಿಕೆಯಿಂದ ಕಾಪಾಡುವರೋ, ಅದರಂತೆ ನಾನೂ ನಿನ್ನ ಶುಶ್ರೂಷೆಯ (ಸ್ತುತಿಸುವ) ವಿಷಯದಲ್ಲಿ ಬಹು ಎಚ್ಚರಿಕೆಯಿಂದ ಇರುತ್ತೇನೆ.

ಪ್ರಸಿದ್ಧ ಅಂಗಿರಾ ಋಷಿಯ ಪುತ್ರನಾದ ಹಿರಣ್ಯಸ್ತೂಪನೆಂಬ ಋಷಿಗೆ ಈ ಸೂಕ್ತದ್ರಷ್ಟೃವಾದ ಅರ್ಚನ್ ಎಂಬ ಋಷಿಯು ಪುತ್ರನು. ಎಂದರೆ ಅಂಗಿರಾ ಋಷಿಗೆ ಅರ್ಚನ್ ಋಷಿಯು ಮೊಮ್ಮಗನು. ಈ ಋಷಿಯು ಪ್ರಕೃತ ಋಕ್ಕಿನಲ್ಲಿ ತನ್ನ ತಂದೆಯಾದ ಹಿರಣ್ಯಸ್ತೂಪ ಋಷಿಯು ಋಗ್ವೇದ ಸಂಹಿತೆಯ ಒಂದನೆಯ ಮಂಡಲದ ಮೂವತ್ತೈದನೇ ಸೂಕ್ತದಲ್ಲಿ ಸವಿತೃ ದೇವತೆಯನ್ನು ಸ್ತುತಿಸಿರುವುದನ್ನು ಇಲ್ಲಿ ಪ್ರಸ್ತಾಪ ಮಾಡಿದಾನೆ. ಅಂಗಿರಾ ಋಷಿಯ ವಂಶವು ಬಹು ದೊಡ್ಡದು. ಮತ್ತು ಪ್ರಸಿದ್ಧವಾದುದು. ಋಗ್ವೇದದಲ್ಲಿ ಸೂಕ್ತ ದ್ರಷ್ಟೃಗಳಾಗಿರುವ ಈ ಋಷಿಯ ವಂಶದವರು ನಲವತ್ತನಾಲ್ಕುಮಂದಿ ಇರುವರು. ಪ್ರಕೃತ ಸೂಕ್ತದ ದ್ರಷ್ಟೃವಾದ ಅರ್ಚನ್ ಎಂಬ ಋಷಿಯ ತಂದೆಯಾದ ಹಿರಣ್ಯಸ್ತೂಪನು ಇವರಲ್ಲಿ ಒಬ್ಬನು. ಈ ಹಿರಣ್ಯಸ್ತೂಪಋಷಿದೃಷ್ಟವಾದ ಸೂಕ್ತಗಳು—ಒಂದನೇ ಮಂಡಲದಲ್ಲಿ ೩೧–೩೫ ಸೂಕ್ತಗಳು (೭೧ ಋಕ್ಕುಗಳು); ೯ನೇ ಮಂಡಲದಲ್ಲಿ ನಾಲ್ಕನೇ ಸೂಕ್ತ (೧೦ ಋಕ್ಕುಗಳು); ೬೯ನೇ ಸೂಕ್ತ (೧೦ ಋಕ್ಕುಗಳು); ಅಂತು ಒಟ್ಟು ಏಳು ಸೂಕ್ತಗಳು (ಒಟ್ಟು ೯೧ ಋಕ್ಕುಗಳು). ಪ್ರಕೃತ ಸೂಕ್ತದ ಅರ್ಚನ್ ಎಂಬ ಋಷಿದೃಷ್ಟವಾದ ಸೂಕ್ತವು ಇದೊಂದೇ ಎಂದರೆ ೫ ಋಕ್ಕುಗಳುಳ್ಳ ೧೦ನೇ ಮಂಡಲದ ೧೪೯ನೇ ಸೂಕ್ತ ಮಾತ್ರ,

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಹಿರಣ್ಯಸ್ತೂಪೋ ಹಿರಣ್ಮಯಸ್ತೂಪೋ ಹಿರಿಣ್ಮಯಃಸ್ತೂಪೋಽಸ್ಯೇತಿ ವಾ । ಸ್ತೂಪಃ ಸ್ತ್ಯಾಯತೇಃ ಸಂಘಾತಃ । ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ನೇವಂ ತ್ವಾರ್ಚನ್ನವನಾಯ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರ್ಮ್ಯಹಂ ॥**

(ನಿ. ೧೦–೩೩)

ಹಿರಣ್ಯ ಎಂದರೆ ಚಿನ್ನದ ಅಥವಾ ಚಿನ್ನದಂತೆ ಥಳಥಳಿಸುವ, ಸ್ತೂಪವೆಂದರೆ ಕೇಶಸಮೂಹ, ಜುಟ್ಟು. ಸ್ತೈ—ಒಂದಾಗಿ ಸೇರಿಸು ಎಂಬ ಧಾತುವಿನಿಂದ ಸ್ತೂಪ ಶಬ್ದವು ನಿಷ್ಪನ್ನವಾಗಿದೆ. ಶಿರಸ್ಸಿನಲ್ಲಿರುವ ಕೇಶಗಳನ್ನು ಒಟ್ಟಾಗಿ ಸೇರಿಸಿ ಗಂಟುಹಾಕಿ

ರುವುದಕ್ಕೆ ಜುಟ್ಟೆಂದು ಹೆಸರು. ಸ್ತೂಪವೆಂದರೆ ಜುಟ್ಟು. ಈ ಹಿರಣ್ಯಸ್ತೂಪನೆಂಬ ಋಷಿಗೆ ಇದ್ದ ಜುಟ್ಟು ಚಿನ್ನದಂತೆ ಥಳಥಳಿಸುತ್ತಿದ್ದುದರಿಂದ ಈ ಋಷಿಗೆ ಈ ಹೆಸರು ಬಂದಿದೆ. ಎಲೈ ಸವಿತೃವೇ, ಈಗ ನಾನು ಈ ಯಜ್ಞದಲ್ಲಿ ಸಿದ್ಧಪಡಿಸಿರುವ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ. ಯಜ್ಞ ಮಾಡುವಾಗ ಯಜಮಾನನು ಸೋಮಲತೆಗಳನ್ನು ಬಹು ಎಚ್ಚರಿಕೆಯಿಂದ ನೋಡಿಕೊಳ್ಳುವನಷ್ಟೆ. ಅದರಂತೆ ನಾನು ನಿನ್ನನ್ನು ರಕ್ಷಣಾರ್ಥವಾಗಿ ಸ್ತುತಿಸಿ ಪ್ರಾರ್ಥಿಸುವ ವಿಷಯದಲ್ಲಿ ಬಹು ಜಾಗರೂಕನಾಗಿರುತ್ತೇನೆ ಎಂದು ಇಲ್ಲಿ ಋಷಿಯು ಹೇಳಿರುವನು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತುಸ್ತ್ರಿಂಶತ್ ಖಂಡಃ

## ಮೂವತ್ತನಾಲ್ಕನೆಯ ಖಂಡವು

ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ ಜಜಾನ । ಇಮಾಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾ ಮಸುರತ್ವಮೇಕಂ । (ಋ. ಸಂ. ೨-೫೫-೧೯) ॥ ದೇವಸ್ತ್ವಷ್ಟಾ ಸವಿತಾ ಸರ್ವರೂಪಃ ಪೋಷತಿ ಪ್ರಜಾಃ ರಸಾನುಪ್ರದಾನೇನ ಬಹುಧಾ ಚೇಮಾ ಜನಯತಿ ಇಮಾನಿ ಚ ಸರ್ವಾಣಿ ಭೂತಾನ್ಯುದಕಾನ್ಯಸ್ಯ ಮಹಾಚ್ಚಾಸ್ಮೈ ದೇವಾನಾಮುಸುರತ್ವಮೇಕಂ ಪ್ರಜ್ಞಾವತ್ತ್ವಂ ವಾನವತ್ತ್ವಂ ವಾಪಿ ವಾಸುರಿತಿ ಪ್ರಜ್ಞಾನಾ ಮಾಸ್ಯತ್ಯನರ್ಥಾನ ಸ್ತಾಶ್ಚಾಸ್ಯಾಮರ್ಥಾ ಅಸುರತ್ವಮಾದಿಲುಪ್ತಂ ವಾತೋ ವಾತೀತಿ ಸತಸ್ತಸ್ಯೈಷಾ ಭವತಿ ॥ ೩೪ ॥

ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ
ಜಜಾನ । ಇಮಾ ಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾಮುಸುರ-
ತ್ವಮೇಕಂ ॥

(ಋ. ಸಂ. ೩-೩-೩೧)

ತ್ವಷ್ಟೃಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಅಂತರ್ಯಾಮಿರೂಪದಿಂದ ಸಕಲ ಪ್ರೇರಕನೇ ಅಥವಾ ಸರ್ವಭೂತಜಾತವನ್ನು ಪ್ರಸವಿಸಿದ ಮಧ್ಯಮನಾದ ತ್ವಷ್ಟೃದೇವನೇ ನೀನು ನಾನಾವಿಧರೂಪವುಳ್ಳವನಾಗಿ ನಾನಾವಿಧ ಪ್ರಜೆಗಳನ್ನು ಸೃಷ್ಟಿಮಾಡುವಿ. ಹಾಗೆ ಸೃಜಿಸಿ ರಸಾದಿದಾನದಿಂದ ಪೋಷಿಸುತ್ತಿರುವಿ. ಈ ಸಕಲ ವಿಧವಾದ ಜಲವೆಲ್ಲಾ ಆ

ತ್ವಷ್ಟೃದೇವ ಸಂಬಂಧಿಯಾಗಿರುತ್ತದೆ. ಈ ಜಲದಿಂದಲೇ ಉತ್ಪತ್ತಿ ಸ್ಥಿತಿ ಲಯ ರೂಪವಾದ ಮುಖ್ಯವಾದ ಪ್ರಭೂತ ಪ್ರಾಬಲ್ಯವನ್ನು ಹೊಂದಿರುವಿ.

**ದೇವಸ್ತ್ವಷ್ಟಾ ಸವಿತಾ ಸರ್ವರೂಪಃ ಪೋಷಯತಿ ಪ್ರಜಾ ರಸಾನುಪ್ರದಾನೇನ ಬಹುಧಾ ಚೇಮಾ ಜನಯತಿ, ಇಮಾನಿ ಚ ಸರ್ವಾಣಿ ಭೂತಾನಿ, ಉದಕಾನ್ಯಸ್ಯ, ಮಹಚ್ಚಾಸ್ಮೈ ದೇವಾನಾಮಸುರತ್ವಮೇಕಂ, ಪ್ರಜ್ಞಾವತ್ತ್ವಂ ವಾಽನವತ್ವತಂ ವಾಽಪಿ ವಾಽಸುರಿತಿ ಪ್ರಜ್ಞಾನಾಮಾಸ್ಯತ್ಯನರ್ಥಾನಸ್ತಾಶ್ಚಾಸ್ಯಾಮರ್ಥಾ ಅಸುರತ್ವಮಾದಿಲುಪ್ತಂ ||**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಭೂತಾನಿ ಎಂಬುದು ಭುವನಾನಿ ಪದದ ವ್ಯಾಖ್ಯಾನ, ಇಲ್ಲಿ ಉದಕವೆಂದರ್ಥ. ಭುವನವೆಂಬುದು ಉದಕನಾಮದಲ್ಲಿ ಪಠಿತವಾಗಿದೆ. (ನಿಘ. ೧-೧೨-೪೯) ಅಸ್ಯ ಎಂಬಲ್ಲಿ ಷಷ್ಠಿಗೆ ಸ್ವಸ್ವಾಮಿಭಾವ ಸಂಬಂಧ ಅರ್ಥ. ಯಾವಾಗ ಇವನದ್ದೇ ಈ ಭೂತಜಾತವಾಯಿತೋ ಆಗ ಅದನ್ನು ಸೃಷ್ಟಿಸಿರುವುದಲ್ಲದೆ ಪೋಷಿಸಿ ಬೆಳಸುತ್ತಾನೆ ಅಸ್ಮೈ ಎಂದು ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ. ದೇವತೆಗಳಿಗೆ ಇದೇ ಒಂದು ಮುಖ್ಯಬಲವಾದುದರಿಂದ ಅವರಿಗೆ ಮಹತ್ತ್ವ ಬಂದಿದೆ. ಅಸುರತ್ವವೆಂಬುದಕ್ಕೆ ಪ್ರಜ್ಞಾವತ್ತ್ವಂ ಎಂದು ವ್ಯಾಖ್ಯಾನಮಾಡಿರುತ್ತಾರೆ. ಅಸುಃ ಎಂಬುದು ಪ್ರಜ್ಞಾನಾಮದಲ್ಲಿ (ನಿಘ. ೩-೯-೬) ಪಠಿತವಾಗಿದೆ. ಪ್ರಜ್ಞಾ ಇರುವುದರಿಂದಲೇ ಕ್ಲೇಶಾದಿಗಳನ್ನು ದೂರಮಾಡಿಕೊಳ್ಳುತ್ತಾರೆ. ಅಸು–ಕ್ಷೇಪಣೇ ಧಾತು ಔಣಾದಿಕ ಉಪ್ರತ್ಯಯ. ಅಸು ಉಳ್ಳವನು ಅಸುರನು, ಮತ್ವರ್ಥದಲ್ಲಿ ರಪ್ರತ್ಯಯ ಬಂದಿದೆ. ಅಥವಾ ಈ ಪ್ರಜ್ಞೆಯಲ್ಲಿ ಸಕಲ ಪ್ರಯೋಜನಗಳೂ ಕ್ಷಿಪ್ತವಾಗಿವೆ. ಪ್ರಜ್ಞಾಶಾಲಿಗಳೇ ಲೋಕದಲ್ಲಿ ಸಕಲ ಪ್ರಯೋಜನ ಹೊಂದುತ್ತಾರೆ. ಹೀಗೆ ದೇವತೆಗಳು ಈ ಪ್ರಜ್ಞೆಯಿಂದಲೂ ಉದಕದಿಂದಲೂ ಉತ್ಪಾದನಾದಿ ಶಕ್ತಿಯನ್ನು ಹೊಂದಿರುತ್ತಾರೆ. ಪ್ರಜ್ಞೆಯಿಲ್ಲದವನು ಎಷ್ಟು ಸಾಧನ ಸಂಪತ್ತಿಯಿದ್ದರೂ ಸಾಫಲ್ಯ ಹೊಂದಲಾರನು. ಅಸುಃ ಎಂದರೆ ಪ್ರಾಣ. ಪುಂಸಿ ಭೂಮ್ನ್ಯಸವಃ ಪ್ರಾಣಾಃ ಎಂದು ಅಮರ. ಪ್ರಾಣದಿಂದ ಕೂಡಿರುವವರು. ಹಿಂದಿನಂತೆ ಮತ್ವರ್ಥದಲ್ಲಿ ರಪ್ರತ್ಯಯ ಉದಕಾದಿಗಳಿಂದ ಅನ್ನವುಳ್ಳವರೆಂದೂ ಕೆಲವರು ವ್ಯಾಖ್ಯಾನಮಾಡುತ್ತಾರೆ. ಕೆಲವರು ವಸುರತ್ವಂ ಎಂಬಲ್ಲಿ ಆದಿವರ್ಣಲೋಪದಿಂದ ಅಸುರತ್ವಂ ಎಂದಾಗಿದೆಯೆಂದು ವ್ಯಾಖ್ಯಾನಮಾಡುತ್ತಾರೆ. ವಸು ಅಂದರೆ ರಶ್ಮಿ. (ಧನ ಇಲ್ಲಿ ಅಪ್ರಕೃತವಾಗಿದೆ). ಉದಕದಿಂದ ರಶ್ಮಿಯುಳ್ಳವರೆಂದು ತಾತ್ಪರ್ಯ. ಈ ಎಲ್ಲಾ ಶಕ್ತಿಗಳಿಂದ ತ್ವಷ್ಟೃದೇವನು ಸಂಪನ್ನನಾಗಿರುತ್ತಾನೆ.

**ವಾತಃ—ವಾತೀತಿ ಸತಃ | ತಸ್ಯೈಷಾ ಭವತಿ || ೩೪ ||**

ಕ್ರಮಪ್ರಾಪ್ತವಾದ ವಾತಪದದ ನಿರ್ವಚನವನ್ನು ತೋರಿಸುತ್ತಾರೆ. ಸತತವಾದ ಸಂಚಲನವುಳ್ಳವನು. ವಾ–ಗತಿಗಂಧನಯೋಃ ಧಾತು. ಔಣಾದಿಕ ತನ್ಪ್ರತ್ಯಯ. ಸತಃ ಎಂಬುದರಿಂದ ಧಾತುಕಾರಕಾವಧಾರಣ ವ್ಯಕ್ತವಾಗುತ್ತದೆ. ವಾಯುವೆಂಬುದು ವಾತ, ಪಿತ್ತ, ಕಫಗಳೆಂಬ ಧಾತುತ್ರಯದ ವಿಕಲ್ಪದಿಂದ ಆಗಿದೆ. ಇದುಮಾತ್ರ ಕೇವಲ ವಾತದಿಂದ ಆಗಿದೆಯೆಂದು ತಿಳಿಯಬೇಕು. ಮುಂದೆ ಹೇಳುವ ಋಙ್ಮಂತ್ರವು ವಾತಸ್ತುತಿಯನ್ನು ಪ್ರತಿಪಾದಿಸುತ್ತದೆ.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

## ಅಥ ಪಂಚತ್ರಿಂಶತ್‌ಖಂಡಃ

## ಮೂವತ್ತೈದನೆಯ ಖಂಡವು

ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ । ಪ್ರ ಣ ಆಯೂಂಷಿ ತಾರಿಷತ್ ( ಋ. ಸಂ. ೧೦-೧೮೬-೧ ) ॥ ವಾತ ಆವಾತು ಭೈಷಜ್ಯಾನಿ ಶಂಭು ಮಯೋಭು ಚ ನೋ ಹೃದಯಾಯ ಪ್ರವರ್ಧಯ ಚ ನ ಆಯುರಗ್ನಿರ್ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೩೫ ॥

ವಾತ ಆವಾತು ಭೇಷಜಂ ಶಂಭುಮಯೋಭುನೋ ಹೃದೇ । ಪ್ರ ಣ
ಆಯೂಂಷಿ ತಾರಿಷತ್ ॥

(ಋ. ಸಂ. ೮-೮-೪೪) (ಸಾಂ. ಸಂ. ಛ. ಆ. ೨-೨-೪-೧೦).

ವಾತಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವಾತ ಮಧ್ಯಮದೇವನಾದ ವಾಯುವೇ ನಮ್ಮನ್ನು ಕುರಿತು ಯಾವ ಯಾವ ಔಷಧವು ಪಥ್ಯವಾಗಿದೆಯೋ ಅದನ್ನು ತೆಗೆದುಕೊಂಡು ಬೀಸು. ಅದು ನಮ್ಮ ರೋಗವನ್ನು ನಾಶಪಡಿಸಲಿ. ನಮ್ಮ ಹೃದಯಕ್ಕೆ ಸುಖವನ್ನುಂಟುಮಾಡುವವುಗಳಾಗಲಿ. ನಮ್ಮ ಆಯಸ್ಸೂ ನಿಯತಜೀವಿತಕಾಲದವರೆಗೆ ವೃದ್ಧಿಹೊಂದಲಿ.

ವಾತ ಆವಾತು ಭೈಷಜ್ಯಾನಿ ಶಂಭು ಮಯೋಭು ಚ ನೋ
ಹೃದಯಾಯ । ಪ್ರವರ್ಧಯತು ಚ ನ ಆಯುಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅರ್ಥಸೌಷ್ಠವಕ್ಕೋಸ್ಕರ ಭೈಷಜ್ಯಾನಿ, ಆಯುಃ ಎಂಬಲ್ಲಿ ವಚನಭೇದ ಹೇಳಿದೆ ಭೇಷಜಮೇವ ಭೈಷಜ್ಯಂ. ಸ್ವಾರ್ಥದಲ್ಲಿ ಷ್ಯಞ್ ಪ್ರತ್ಯಯ 'ಭೇಷಜೌಷಧ ಭೈಷಜ್ಯಾನ್ಯಗದೋ ಜಾಯರಿತ್ಯಪಿ' ಎಂದು ಅಮರ. ನಾನಾವಿಧವಾಗಿರುವ ಗಿಡಮೂಲಿಕೆಗಳಿಂದ ಬೀಸುವುದರಿಂದ ಅವುಗಳ ಸಾರವನ್ನೊಳಕೊಂಡಿರುತ್ತಾನೆ. ಅದರ ಸೇವನೆಯಿಂದಲೇ ರೋಗಶಮನವಾಗುತ್ತದೆ.

ಅಗ್ನಿರ್ವ್ಯಾಖ್ಯಾತಃ—ತಸ್ಯೈಷಾ ಭವತಿ ॥ ೩೫ ॥

ಕ್ರಮ ಪ್ರಾಪ್ತವಾದ ಅಗ್ನಿಶಬ್ದದ ನಿರ್ವಚನ ತೋರಿಸುತ್ತಾರೆ ಅಗ್ರಣೀಃ ಭವತಿ ಇತ್ಯಾದಿಗಳಿಂದ (ನಿ. ೭-೧೪) ಇದು ಹಿಂದೆ ವ್ಯಾಖ್ಯಾತವಾಗಿದೆ. ಇಲ್ಲಿ ಮಾತ್ರ ಅವನು ಮಧ್ಯಮಸ್ಥಾನದೇವನೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ಅಗ್ನಿ ಸ್ತುತಿಪ್ರತಿಪಾದಕವಾಗುತ್ತದೆ.

ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ ।
ಪ್ರ ಣ ಆಯೂಂಷಿ ತಾರಿಷತ್ ॥ ೧ ॥

ನಮ್ಮ ಮನಸ್ಸಿಗೆ ಸಂತೋಷವುಂಟಾಗುವುದಕ್ಕೋಸ್ಕರ ವಾಯುವು ರೋಗಶಮನಕರವಾದುದೂ ಮನಸ್ಸಿಗೆ ಸುಖ ವನ್ನುಂಟುಮಾಡುವುದೂ ಆದ ಹಿತಕರವಾದ ಔಷಧಿಯನ್ನು ನಮ್ಮ ಬಳಿಗೆ ಬೀಸುತ್ತ ಬರಲಿ ಮತ್ತು ಆ ವಾಯುವು ನಮ್ಮ ಆಯಸ್ಸನ್ನು ಹೆಚ್ಚಿಸಲಿ ಎಂದರೆ ನಾವು ಬಹುಕಾಲ ಜೀವಿಸುವಂತೆ ಮಾಡಲಿ.

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

ವಾತ ಆ ವಾತು ಭೈಷಜ್ಯಾನಿ ಶಂಭು ಮಯೋಭು ಚ ನೋ ಹೃದಯಾಯ ಪ್ರವರ್ಧಯತು ಚ ನ ಆಯುಃ ॥ ( ನಿ. ೧೦-೩೫ )

ಶಂಭು ಎಂದರೆ ಶರೀರಕ್ಕೆ ಸುಖವನ್ನುಂಟುಮಾಡುವುದು ಎಂದರೆ ರೋಗಪರಿಹಾರಕವಾದುದು. ಮಯೋಭು ಎಂದರೆ ಮನಸ್ಸಿಗೆ ಹಿತವನ್ನು ಎಂದರ ಸಂತೋಷವನ್ನುಂಟುಮಾಡುವುದು. ಈ ಎರಡುವಿಧವಾದ ಔಷಧಿಗಳನ್ನು ಎಂದರೆ ಸುಖಸಾಧನ ಗಳನ್ನು ವಾಯುವು ನಮ್ಮ ಮನಸ್ಸಿಗೆ ಸಂತೋಷವುಂಟಾಗುವುದಕ್ಕಾಗಿ ಬೀಸುತ್ತಾ ನಮ್ಮ ಬಳಿಗೆ ಬರಲಿ ಎಂದರೆ ನಮ್ಮ ಬಳಿಗೆ ಬೀಸಿತರಲಿ. ಮತ್ತು ನಮ್ಮ ಆಯುಃಪ್ರಮಾಣವನ್ನು ಹೆಚ್ಚಿಸಲಿ

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷಟ್‌ತ್ರಿಂಶತಿಖಂಡಃ

## ಮೂವತ್ತಾರನೆಯ ಖಂಡವು

ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರ ಹೂಯಸೇ । ಮರುದ್ಭಿರಗ್ನ ಆಗಹಿ । ( ಋ. ಸಂ. ೧-೧೯-೧ ) ॥ ತಂ ಪ್ರತಿ ಚಾರುಮಧ್ವರಂ ಸೋಮಪಾನಾಯ ಪ್ರಹೂಯಸೇ ಸೋಽಗ್ರೇ ಮರುದ್ಭಿಃ ಸಹಾಗಚ್ಛೇತಿ ಕಮನ್ಯಂ ಮಧ್ಯಮಾದೇವಮ-ವಕ್ಷ್ಯೇತ್ತಸ್ಯೈಷಾಪರಾ ಭವತಿ ॥ ೩೭ ॥

ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರಹೂಯಸೇ ।
ಮರುದ್ಭಿರಗ್ನ ಆಗಹಿ ॥

(ಋ. ಸಂ. ೧-೧-೩೬-೧)

ಮಧ್ಯಮದೇವನಾದ ಅಗ್ನಿಯ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಅಗ್ನಿಯೇ ಪ್ರಸಿದ್ಧ ವಾದ ಅಂಗವೈಕಲ್ಯವಿಲ್ಲದಿರುವ ಯಜ್ಞವನ್ನು ಹೊಂದಿ ಸೋಮಪಾನಕ್ಕೋಸ್ಕರ ನಮ್ಮಿಂದ ಅತಿಶಯವಾಗಿ ಆಹ್ವಾನಿಸಲ್ಪಡುವಿ. ಇದನ್ನು ತಿಳಿದು ಮರುದ್ದೇವತೆಗಳೊಡನೆ ಬನ್ನಿರಿ.

**ತಂ ಪ್ರತಿ ಚಾರುಮಧ್ವರಂ ಸೋಮಪಾನಾಯ ಪ್ರಹೂಯಸೇ ಸೋಽಗ್ನೇ ಮರುದ್ಭಿಃ ಸಾಹಾಗಚ್ಛೇತಿ ಕಮನ್ಯಂ ಮಧ್ಯಮಾದೇವ ಮವಕ್ಷ್ಯತ್ । ತಸ್ಯೈಷಾಽಪರಾ ಭವತಿ ॥ ೩೬ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ, ಅಗ್ನಿದೇವನು ಭೂಸ್ಥಾನನೆಂದು ಪ್ರಸಿದ್ಧಿ ಇರುವುದಾದರೂ ಇಲ್ಲಿ ಸೋಮಪಾನಕ್ಕೋಸ್ಕರ ಆಹ್ವಾನಿಸುವುದರಿಂದಲೂ ಮರುದ್ದೇವತೆಗಳ ಸಾಹಿತ್ಯ ಹೇಳಿರುವುದರಿಂದಲೂ ಅದು ಮಧ್ಯಮಸ್ಥಾನದ ದೇವತೆಯಾದ ಇಂದ್ರನ ಲಿಂಗವಾದುದರಿಂದ ಮಧ್ಯಮದೇವನಲ್ಲದೆ ಬೇರೆಯಾರೂ ಆಗುವುದಿಲ್ಲ. ಈ ಮಂತ್ರದಲ್ಲಿ ಗೋಪೀಥಾಯ ಪದದಿಂದ ಸೋಮ ಪಾನವು ಅಭಿಹಿತವಾದುದರಿಂದ ಅವ್ಯಕ್ತಲಿಂಗವೆಂದು, ಸ್ಪಷ್ಟಲಿಂಗವನ್ನು ತೋರಿಸಲು ಮುಂದಿನ ಮಂತ್ರವನ್ನು ಹೇಳುತ್ತಾರೆ. ಅಲ್ಲಿ ಸೋಮವಿಷಯವೇ ಪ್ರತಿಪಾದಿಸಲ್ಪಡುವುದರಿಂದ ಮಧ್ಯಮದೇವನೇ ಅಗ್ನಿಯೆಂದು ವ್ಯಕ್ತವಾಗುತ್ತದೆ.

**ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರ ಹೂಯಸೇ ।**
**ಮರುದ್ಭಿರಗ್ನ ಆ ಗಹಿ ॥ ೧ ॥**

ಎಲೈ ಅಗ್ನಿಯೇ, ನ್ಯೂನಾತಿರಿಕ್ತಲೋಪದೋಷಗಳಿಲ್ಲದೆ ಆಚರಿಸಲ್ಪಡುವ ಪ್ರತಿಯೊಂದು ಉತ್ತಮವಾದ ಯಜ್ಞ ದಲ್ಲಿಯೂ ಸೋಮಪಾನಾರ್ಥವಾಗಿ ನೀನು ಆಹ್ವಾನಿಸಲ್ಪಡುವೆ. ಆದುದರಿಂದ ಈಗ ಮರದ್ದೇವತೆಗಳಿಂದ ಸಹಿತನಾಗಿ ಇಲ್ಲಿಗೆ ಬಾ.

ಈ ಋಕ್ಕಿಗೆ ಯಾಸ್ಕರು ನಿರುಕ್ತದಲ್ಲಿ ಅರ್ಥವಿವರಣೆ ಮಾಡಿದಾರೆ. ಆ ವಿವರಣೆಯು ಭಾಷ್ಯಕಾರರು ಹೇಳಿರುವಂತೆಯೇ ಇದೆ. ವ್ಯತ್ಯಾಸವೇನೂ ಇಲ್ಲ.

ತ್ಯಂ–ತಂ—ಇದು ಸರ್ವನಾಮಶಬ್ದವು. ವ್ಯತ್ಯಯದಿಂದ ತಂ ಎನ್ನುವುದಕ್ಕೆ ಬದಲಾಗಿ ತ್ಯಂ ಎಂದಿರುವುದು. ತ್ಯಂ ಶಬ್ದಕ್ಕೆ ತಂ ಎಂಬ ಅರ್ಥವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಕೊಡುತ್ತೇವೆ—

**ತ್ಯಂ ಚಿದತ್ರಿಮೃತಜುರಮರ್ಥಮಶ್ವಂ ನ ಯಾತವೇ ।**
(ಋ. ಸಂ. ೧೦–೧೪೩–೧)

**ತ್ಯಂ ಸುಮೇಷಂ ಮಹಯಾ ಸ್ವರ್ವಿದಂ ಶತಂ ಯಸ್ಯ ಸುಭ್ವಃ ಸಾಕಮೀರತೇ ।**
(ಋ. ಸಂ. ೧–೫೨–೧)

**ತ್ಯಮೂಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ ।**
(ಋ. ಸಂ. ೧೦–೧೭೮–೧)

**ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ॥**
(ಋ. ಸಂ. ೧–೫೦–೧)

ಇತ್ಯಾದಿ. ಈ ಋಕ್ಕುಗಳಲ್ಲಿರುವ ತ್ಯಂ ಎಂಬ ಶಬ್ದಕ್ಕೆ ತಂ ಎಂದೇ ಅರ್ಥವು.

ಗೋಪೀಥಾಯ—ಗೋಶಬ್ದಕ್ಕೆ, ಗೋವು, ಉದಕ, ರಶ್ಮಿ, ಸ್ತೋತೃ, ಸೋಮ. ವಾಕ್ ಮೊದಲಾದ ಅನೇಕ ಅರ್ಥಗಳಿದ್ದರೂ ಇಲ್ಲಿ ಭಾಷ್ಯಕಾರರು ಸೋಮವೆಂದು ಅರ್ಥಮಾಡಿರುವರು. ವೇದಾರ್ಥಯತ್ನಕಾರರೂ ಮತ್ತೆ ಕೆಲವರೂ ಗೋಶಬ್ದಕ್ಕೆ ಹಾಲು ಅಥವಾ ಆಜ್ಯವೆಂದು ಅರ್ಥಮಾಡಿರುವರು. ಇದು ಅಷ್ಟು ಸಮಂಜಸವಾಗಿಲ್ಲ, ಭಾಷ್ಯಕಾರರು ಹೇಳಿರುವ ಸೋಮವೆಂಬ ಅರ್ಥವೇ ಸರಿಯಾಗಿರುವುದು.

ಈ ಸೂಕ್ತದ ಪ್ರತಿ ಋಕ್ಕಿನ ಕೊನೆಯ ಪಾದವು ಮರುದ್ಭಿರಗ್ನ ಆ ಗಹಿ ಎಂದು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ಮೂವತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತತ್ರಿಂಶತಿ ಖಂಡಃ

## ಮೂವತ್ತೇಳನೆಯ ಖಂಡವು

ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂ ಮಧು ಮರುದ್ಭಿರಗ್ನ ಆಗಹಿ (ಋ. ಸಂ ೧-೧೯-೯) ‖ ಅಭಿಸೃಜಾಮಿ ತ್ವಾ ಪೂರ್ವಪೀತಯೇ ಪೂರ್ವಪಾನಾಯ ಸೋಮ್ಯಂ ಮಧು ಸೋಮಮಯಂ ಸೋಽಗ್ನೇ ಮರುದ್ಭಿಃ ಸಹಾಗಚ್ಛೇತಿ ‖ ೩೭ ‖

ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂಮಧು ।
ಮರುದ್ಭಿರಗ್ನ ಆ ಗಹಿ ‖

(ಋ. ಸಂ. ೧-೧-೩೬-೪) (ಸಾ. ಸಂ. ಛಂ. ಆ ೩-೨ ೨-೪).

ಮಧ್ಯಮದೇವ ಅಗ್ನಿಯನ್ನು ಸ್ಪಷ್ಟವಾಗಿ ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಆಗ್ನಿಯೇ ಪೂರ್ವದಲ್ಲಿಯೇ ಪ್ರವೃತ್ತವಾದ ಯಾಗಕೋಸ್ಕರ ನಿನಗೆ ಇಷ್ಟವಾದ ಸೋಮಸಂಬಂಧಿಯಾದ ಮಧುರರಸವನ್ನು ಎಲ್ಲಾ ಕಡೆಯಿಂದಲೂ ಸಂಪಾದಿಸುತ್ತೇನೆ. ಆದುದರಿಂದ ನೀವು ಮರುದ್ದೇವತೆಗಳೊಡನೆ ಬನ್ನಿರಿ.

ಅಭಿಸೃಜಾಮಿ ತ್ವಾ ಪೂರ್ವಪೀತಯೇ ಪೂರ್ವಪಾನಾಯ ಸೋಮ್ಯಂ ಮಧು ಸೋಮಮಯಂ ಸೋಽಗ್ನೇ । ಮರುದ್ಭಿಃ ಸಹಾಗಚ್ಛೇತಿ ‖ ೩೭ ‖

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪದಗಳೆಲ್ಲವೂ ಸ್ಪಷ್ಟಾರ್ಥಕಗಳಾಗಿವೆ. ಇಲ್ಲಿ ಸೋಮವನ್ನು ನಿನಗೋಸ್ಕರ ಸಂಪಾದಿಸುತ್ತೇನೆ ಎಂದುದರಿಂದ ಇದು ಮಧ್ಯಮದೇವನ ಅಸಾಧಾರಣ ಲಿಂಗವಾಗುತ್ತದೆ.

**ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂ ಮಧು ।**
**ಮರುದ್ಭಿರಗ್ನ ಆ ಗಹಿ ॥ ೯ ॥**

ಎಲೈ ಅಗ್ನಿಯೇ, ಎಲ್ಲರಿಗಿಂತಲು ಮೊದಲು ನಿನಗೆ ಪಾನಮಾಡುವುದಕ್ಕಾಗಿ ರುಚಿಕರವಾದ ಸೋಮರಸವನ್ನು ಪಾತ್ರೆಗೆ ಹಾಕಿ ಸಿದ್ಧಪಡಿಸುವೆನು. ಆದುದರಿಂದ ಮರುದ್ದೇವತೆಗಳಿಂದ ಸಹಿತನಾಗಿ ಇಲ್ಲಿಗೆ ಬಾ.

ಪೂರ್ವಪೀತಯೇ—ಎಲ್ಲರಿಗಿಂತಲೂ ಮೊದಲು ಪಾನಮಾಡುವುದಕ್ಕಾಗಿ. ಈ ಶಬ್ದಕ್ಕೆ Wilson ಪಂಡಿತನು as old of—ಹಿಂದಿನಂತೆ ಎಂದು ತಪ್ಪಾದ ಅರ್ಥಮಾಡಿರುವನು. ಭಾಷ್ಯಕಾರರು ಹೇಳಿರುವ ಎಲ್ಲರಿಗಿಂತಲೂ ಮೊದಲು ಎಂಬ ಅರ್ಥವೇ ಸಮಂಜಸವಾಗಿರುವುದು.

ಅಭಿಸೃಜಾಮಿ—ಸರ್ವತಃ ಸಂಪಾದಯಾಮಿ—ಪಾತ್ರೆಗೆ ಹಾಕಿ ಸಿದ್ಧಪಡಿಸುವೆನು.

ಸೋಮ್ಯಂ—ಸೋಮಮರ್ಹತಿ ಯಃ—ಸೋಮಕ್ಕೆ ಅರ್ಹವಾದ, ಸೋಮಸಂಬಂಧವಾದ.

ಮಧು—ಮಧುರವಾದ, ರುಚಿಕರವಾದ, ಸೋಮ್ಯಂ ಮಧು ಎಂದರೆ ರುಚಿಕರವಾದ ಸೋಮರಸ ವೆಂದಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟತ್ರಿಂಶತಿ ಖಂಡಃ

## ಮೂವತ್ತೆಂಟನೆಯ ಖಂಡವು

**ವೇನೋ ವೇನತೇಃ ಕಾಂತಿಕರ್ಮಣಸ್ತಸ್ಯೈಷಾ ಭವತಿ ॥ ೩೮ ॥**

ಕ್ರಮಪ್ರಾಪ್ತವಾದ ವೇನಪದದ ನಿರ್ವಚನವನ್ನು ತೋರಿಸುತ್ತಾರೆ. ಕಾಂತ್ಯರ್ಥಕವಾದ ವೇನಧಾತುವಿಗೆ ಅಚ್ ಪ್ರತ್ಯಯದಿಂದ ಈ ರೂಪಸಿದ್ಧವಾಗಿದೆ. ಇದು ಕಾಂತ್ಯರ್ಥಧಾತುಗಳಲ್ಲಿ ಪಠಿತವಾಗಿದೆ. (ನಿ. ಘ. ೨-೬-೪) ಮಧ್ಯಮದೇವನು ಸಕಲಲೋಕ

ಕಾಂತನಾಗಿರುತ್ತಾನೆ. ಎಲ್ಲರಿಗೂ ಉಪಕಾರವನ್ನು ಮಾಡುವುದರಿಂದ ಇಚ್ಛಾವಿಷಯನೆಂದು ತಾತ್ಪರ್ಯ. ಮುಂದೆ ಹೇಳುವ ಮಂತ್ರವು ವೇನಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ಮೂವತ್ತೆಂಟನೆಯ ಖಂಡವು ಮುಗಿದಿದೆ.

---

## ಅಥ ಏಕೋನಚತ್ವಾರಿಂಶತ್ ಖಂಡಃ

### ಮೂವತ್ತೊಂಬತ್ತನೆಯ ಖಂಡವು

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಜ್ಯೋತಿರ್ಜರಾಯೂ ರಜಸೋ ವಿಮಾನೇ । ಇಮಮಪಾಂ ಸಂಗಮೇ ಸೂರ್ಯಸ್ಯ ಶಿಶುಂ ನ ವಿಪ್ರಾ ಮತಿಭೀ ರಿಹಂತಿ (ಋ. ಸಂ. ೧೦-೧೨೩-೧) ॥ ಅಯಂ ವೇನಶ್ಚೋದಯತ್ಪೃಶ್ನಿಗರ್ಭಾಃ ಪ್ರಾಸ್ಪವರ್ಣ-ಗರ್ಭಾ ಆಪ ಇತಿ ವಾ ಜ್ಯೋತಿರ್ಜರಾಯುರ್ಜ್ಯೋತಿರಸ್ಯ ಜರಾಯುಸ್ಥಾನೀಯಂ ಭವಿತಿ ಜರಾಯುರ್ಜರಯಾ ಗರ್ಭಸ್ಯ ಜರಯಾ ಯೂಯತ ಇತಿ ವೇಮಮಪಾಂ ಚ ಸಂಗಮನೇ ಸೂರ್ಯಸ್ಯ ಚ ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ಶಿಶುಃ ಶಂಸನೀಯೋ ಭವತಿ ಶಿಶೀತೇರ್ವಾ ಸ್ಯಾದ್ದಾನಕರ್ಮಣಶ್ಚಿರಲಬ್ಧೋ ಗರ್ಭೋ ಭವತ್ಯಸುನೀತಿರಸೂನ್ನಯತಿ ತಸ್ಯೈಷಾ ಭವತಿ ॥ ೩೯ ॥

ಅಯಂ ವೇನಶ್ಚೋದಯತ್ ಪೃಶ್ನಿಗರ್ಭಾ ಜ್ಯೋತಿರ್ಜರಾಯೂ
ರಜಸೋ ವಿಮಾನೇ । ಇಮಮಪಾಂ ಸಂಗಮೇ ಸೂರ್ಯಸ್ಯ
ಶಿಶುಂ ನ ವಿಪ್ರಾ ಮತಿಭೀ ರಿಹಂತಿ ॥

ವೇನಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಕಾಂತಮಧ್ಯಮದೇವನಾದ ವೇನನು ವಿದ್ಯುತ್ತಿನಿಂದ ಪ್ರಕಾಶಮಾನವಾದ ಮೇಘದ ಮಧ್ಯದಲ್ಲಿ ಗರ್ಭದಂತಿರುವವನಾಗಿ, ನೀರನ್ನುಂಟುಮಾಡುವ ಅಂತರಿಕ್ಷದಲ್ಲಿದ್ದು, ಸೂರ್ಯನ ಕಿರಣದಲ್ಲಿ ಸೇರಿರುವ ನೀರನ್ನು ವರ್ಷಾಕಾಲದಲ್ಲಿ ಭೂಮಿಗೆ ಸುರಿಯುವಂತೆ ಪ್ರೇರೇಪಿಸುತ್ತಾನೆ. ಈ ವೇನನನ್ನು ಅಂತರಿಕ್ಷದಲ್ಲಿರುವ ನೀರು ಮತ್ತು ಸೂರ್ಯರಶ್ಮಿಯ ಸಂಗಮಸ್ಥಾನದಲ್ಲಿರುವವನನ್ನು ತಂದೆತಾಯಿಗಳು ಶಿಶುವನ್ನೆಂಬಂತೆ ಮೇಧಾವಿಗಳಾದ ಸ್ತೋತೃಗಳು ತಮ್ಮ ಸ್ತುತಿಗಳಿಂದ ಪೂಜಿಸುತ್ತಾರೆ.

ಅಯಂ ವೇನಶ್ಚೋದಯತ್ ಪೃಶ್ನಿಗರ್ಭಾಃ ಪ್ರಾಸ್ಪವರ್ಣಾ ಗರ್ಭಾ
ಅಪ ಇತಿ ವಾ ಜ್ಯೋತಿರ್ಜರಾಯುಃ ಜ್ಯೋತಿರಸ್ಯ ಜರಾಯು-
ರ್ಜರಯಾ ಜಾಯತ ಇತಿ ವಾ । ಇಮಮಪಾಂ ಚ ಸಂಗಮನೇ
ಸೂರ್ಯಸ್ಯ ಚ, ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ
ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪೃಶ್ನಿಗರ್ಭಾಃ ಎಂಬುದಕ್ಕೆ ಪ್ರಾಸ್ಪವರ್ಣಾ ಎಂದು ವ್ಯಾಖ್ಯಾನ. ಪ್ರಕೃಷ್ಟವಾದ ವರ್ಣವನ್ನು ಹೊಂದಿರುವವುಗಳು ಸೂರ್ಯರಶ್ಮಿಗಳು. ಮಾಸಾಷ್ಟಕದವರೆಗೆ ಧರಿಸಿರುವ ನೀರು ಗರ್ಭದಂತೆ ಮಧ್ಯದಲ್ಲಿ ಹೊಂದಿರುತ್ತವೆ. ಜರಾಯುಃ ಗರ್ಭವನ್ನು ಸುತ್ತಿರುವ ಚೀಲ. ಗರ್ಭವು ಬೆಳೆಯುತ್ತಿದ್ದಂತೆ ಇದು ಉತ್ಪನ್ನವಾಗುತ್ತದೆ. ಪ್ರಸವವಾದಮೇಲೆ ಗೋವಿನಿಂದ ಅಥವಾ ಸ್ತ್ರೀಯಿಂದ ಕೆಳಗೆ ಬೀಳುವ ಮಾಂಸವಿಶೇಷದ ತುಂಡಿಗೆ ಜರಾ ಎಂದು ಲೋಕದಲ್ಲಿ ವ್ಯವಹಾರ. ರಿಹ ಧಾತುವು ಪೂಜಾರ್ಥಕ ಧಾತುಪರ್ಯಾಯದಲ್ಲಿ (ನಿಘ-೩-೧೪-೧೧) ಪಠಿತವಾಗಿದೆ.

ಶಿಶುಃ ಶಂಸನೀಯೋ ಭವತಿ । ಶಿಶೀತೇರ್ವಾ ಸ್ಯಾದ್ದಾನ ಕರ್ಮಣಃ
ಚಿರಲಬ್ಧೋ ಗರ್ಭ ಇತಿ ॥

ನಿಗಮಪ್ರಸಕ್ತವಾದ ಶಿಶುಶಬ್ದದ ವ್ಯುತ್ಪತ್ತಿಯನ್ನು ತಿಳಿಸುತ್ತಾರೆ. ಪಿತ್ರಾದಿಗಳಿಂದ ಪ್ರಶಂಸನೀಯನಾದವನು. ಅಥವಾ ಹೊಸ ಉಡುಪುಗಳಿಂದ ಆಗಾಗ ಅಲಂಕರಿಸಲ್ಪಡುವವನು. ಮಗುವನ್ನು ನಾನಾ ರೀತಿಯಾಗಿ ವೇಷಭೂಷಾದಿಗಳನ್ನು ತೊಡಿಸಿ ಸಂತೋಷ ಹೊಂದುತ್ತಾರೆ. ಅಥವಾ ದಾನಾರ್ಥಕವಾದ ಶೋ ಧಾತುವಿನಿಂದ ಈ ರೂಪವಾಗದೆ. ಪುರುಷನಿಂದ ಸ್ತ್ರೀಗೆ ಗರ್ಭರೂಪದಿಂದ ಧರಿಸಲು ಕೊಡಲ್ಪಡುತ್ತದೆ. ಬಹುಕಾಲದಿಂದ ಗರ್ಭಹೊಂದಿದೆನು ಎಂದು ಸ್ತ್ರೀಯರಲ್ಲಿ ಪರಸ್ಪರಾಲಾಪವು ಲೋಕಪ್ರಸಿದ್ಧವಾಗಿರುತ್ತದೆ.

ಅಸುನೀತಿಃ ಅಸೂನ್ನಯತಿ । ತಸ್ಯೈಷಾ ಭವತಿ ॥

ಕ್ರಮಪ್ರಾಪ್ತವಾದ ಅಸುನೀತಿಪದದ ವ್ಯುತ್ಪತ್ತಿಯನ್ನು ವಿವರಿಸುತ್ತಾರೆ. ಮಧ್ಯಮ ಇಂದ್ರಸ್ವರೂಪಿಯಾದ ಪ್ರಾಣನಿಗೆ ಅಸುನೀತಿ ಎಂದು ಹೆಸರು. ಇವನು ಶರೀರವನ್ನು ಬಿಟ್ಟುಹೋಗುವಾಗ ಇವರ ಪ್ರಾಣಗಳನ್ನೂ ಅಂದರೆ ಇಂದ್ರಿಯಗಳನ್ನೂ ತನ್ನೊಡನೆ ಬೇರೆ ಶರೀರಕ್ಕೆ ಒಯ್ಯುತ್ತಾನೆ. 'ಪ್ರಾಣಮುತ್ಕ್ರಾಮಂತಂ ಸರ್ವೇ ಪ್ರಾಣಾ ಉತ್ಕ್ರಾಮಂತಿ' ಎಂದು ಈ ಅರ್ಥವನ್ನು ಶ್ರುತಿಯು ವಿವರಿಸುತ್ತದೆ. ಮುಂದಿನ ಮಂತ್ರವು ಈ ಅಸುನೀತಿದೇವನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಜ್ಯೋತಿರ್ಜರಾಯೂ
ರಜಸೋ ವಿಮಾನೇ । ಇಮಮಪಾಂ ಸಂಗಮೇ ಸೂರ್ಯಸ್ಯ ಶಿಶುಂ
ನ ವಿಪ್ರಾ ಮತಿಭೀ ರಿಹಂತಿ ॥

ಮೇಘಮಧ್ಯದಲ್ಲಿ ಪ್ರಕಾಶಮಾನನಾಗಿ ಅಡಗಿರುವ ವೇನನೆಂಬ ಈ ದೇವನು ಅಂತರಿಕ್ಷದಲ್ಲಿದ್ದುಕೊಂಡು ಅಲ್ಲಿರುವ (ಸೂರ್ಯರಶ್ಮಿಗಳ ಗರ್ಭಭೂತನಾದ ಎಂದರೆ ಮೇಘಮಧ್ಯದಲ್ಲಿರುವ) ಉದಕಗಳನ್ನು ವೃಷ್ಟಿರೂಪದಲ್ಲಿ ಭೂಮಿಯಮೇಲೆ ಬೀಳುವಂತೆ ಪ್ರೇರಿಸುತ್ತಾನೆ. ಉದಕಗಳಿಗೂ ಸೂರ್ಯನಿಗೂ ಮಧ್ಯದಲ್ಲಿ ಅಂತರಿಕ್ಷದಲ್ಲಿರುವ ಈ ದೇವನನ್ನು ಮೇಧಾವಿಗಳಾದ ಸ್ತೋತೃಜನರು, ತಂದೆತಾಯಿಗಳು ತಮ್ಮ ಮಗುವನ್ನು ಆದರಿಸಿ ಲಾಲಿಸುವಂತೆ ತಮ್ಮ ಸ್ತುತಿಗಳಿಂದ ಸ್ತುತಿಸಿ ಪೂಜಿಸುತ್ತಾರೆ.

**ಜ್ಯೋತಿರ್ಜರಾಯುಃ**—ಪ್ರಕಾಶಮಾನವಾದ ಮೇಘವು ಜರಾಯುವೆಂದರೆ ಉದರೇ ಗರ್ಭೋ ಯೇನ ವೇಷ್ಟಿತೋಽವತಿಷ್ಠತೇ ತಜ್ಜರಾಯುಃ । ತನ್ನ ಉದರದಲ್ಲಿ ಯಾವುದಾದರೂ ವಸ್ತುವನ್ನು ಗರ್ಭದಂತೆ ಎಂದರೆ ಒಳಗಿರುವಂತೆ ಧರಿಸಿರುವುದಕ್ಕೆ ಜರಾಯು ಎಂದು ಹೆಸರು. ಇಲ್ಲಿ ಮೇಘವು ತನ್ನ (ತನ್ನ ಉದರದ) ಮಧ್ಯದಲ್ಲಿ ಉದಕವನ್ನು ಗರ್ಭದಲ್ಲಿ ಧರಿಸಿರುವುದರಿಂದ ಈ ಮೇಘವನ್ನು ಜರಾಯುವೆಂದು ಕರೆದಿದೆ. ಪ್ರಕೃತ ಸಂದರ್ಭದಲ್ಲಿ ಜ್ಯೋತಿರ್ಜರಾಯುಃ ಎಂಬ ಶಬ್ದಕ್ಕೆ ಮೇಘ ಮಧ್ಯದಲ್ಲಿ ಗರ್ಭ ಭೂತವಾದ ಉದಕವಿರುವಂತೆ, ಪ್ರಕಾಶಮಾನವಾದ ಈ ವೇನದೇವನು ಮೇಘಮಧ್ಯದಲ್ಲಿರುವನು ಎಂದಭಿಪ್ರಾಯವು.

**ವಿಮಾನೇ**—ವಿಮೀಯಂತೇ ನಿರ್ಮೀಯಂತೇ ಅಸ್ಮಿನ್ನಾಪ ಇತಿ ವಿಮಾನಮಂತರಿಕ್ಷಂ । ಸೂರ್ಯ ರಶ್ಮಿಗಳ ಸಹಾಯದಿಂದ ಸಮುದ್ರವೇ ಮೊದಲಾದ ಜಲಾಶಯಗಳ ನೀರು ಆವಿಯ ರೂಪದಲ್ಲಿ ಮೇಲಕ್ಕೆ ಆಕರ್ಷಿಸಲ್ಪಟ್ಟು, ಅಲ್ಲಿ ಎಂದರೆ ಅಂತರಿಕ್ಷದಲ್ಲಿ ಆ ಆವಿಯು ನೀರಿನಿಂದ ಕೂಡಿದ ಮೇಘಗಳಾಗಿ ಪರಿವರ್ತಿಸಲ್ಪಡುವುದರಿಂದ (ನಿರ್ಮಿಸಲ್ಪಡುವುದರಿಂದ) ಅಂತರಿಕ್ಷಕ್ಕೆ ವಿಮಾನವೆಂದು ಹೆಸರು.

**ಪೃಶ್ನಿಗರ್ಭಾಃ**—ಪೃಶ್ನಿರಾದಿತ್ಯಃ ತಸ್ಯ ಗರ್ಭಭೂತಾಃ । ಪೃಶ್ನಿಯೆಂದರೆ ಆದಿತ್ಯನು (?) ಅವನ ಗರ್ಭಭೂತವಾದ ಎಂದರೆ ಅವನ ಕ್ರಿಯೆಯಿಂದ ಉತ್ಪನ್ನವಾದ ಉದಕಗಳನ್ನು ಪೃಶ್ನಿ ಅಥವಾ ಆದಿತ್ಯನ ಗರ್ಭಭೂತವಾದವು ಎಂದು ಹೇಳಿದೆ. ಅಥವಾ ಪೃಶ್ನಯಃ ಸಪ್ತೋಜ್ಜ್ವಲವರ್ಣಾಃ ಸೂರ್ಯರಶ್ಮಯಃ ತೇಷಾಂ ಗರ್ಭಭೂತ ಅಂತರಿಕ್ಷಸ್ಥಾ ಅಪಃ । ಸೂರ್ಯನ ನಾನಾವಿಧ ಎಂದರೆ ಏಳುವಿಧ ರಶ್ಮಿಗಳು ಅಂತರಿಕ್ಷದಲ್ಲಿ ಹರಡಿರುವುವು. ಅವುಗಳ ಮಧ್ಯದಲ್ಲಿ ಮೇಘರೂಪದಿಂದ ಇರುವ ಉದಕಗಳನ್ನು ಪೃಶ್ನಿಗರ್ಭಾಃ ಎಂದು ಕರೆಯಲಾಗಿದೆ.

**ಶಿಶುಂ ನ ವಿಪ್ರಾ ಮತಿಭಿಃ ರಿಹಂತಿ**—ಲಿಹಂತಿ ಎಂಬ ಶಬ್ದಕ್ಕೆ ಎರಡು ವಿಧ ಅರ್ಥಗಳನ್ನು ಹೇಳಬಹುದು. ಲಕಾರಕ್ಕೆ ಬದಲಾಗಿ ರಕಾರ ಪ್ರಯೋಗವೇ ಋಗ್ವೇದದಲ್ಲಿ ವಿಶೇಷವಾಗಿರುವುದರಿಂದ (ಅಲಂಕೃತಃ ಎನ್ನುವುದಕ್ಕೆ ಬದಲಾಗಿ ಅರಂಕೃತಃ ಎಂಬ ಶಬ್ದವಿರುವಂತೆ) ಇಲ್ಲಿ ರಿಹಂತಿ ಎಂದರೆ ಲಿಹಂತಿ ಎಂದರ್ಥವು. ಲಿಹ ಆಸ್ವಾದನೇ ಎಂಬ ಧಾತುವಿನ ಅರ್ಥದಂತೆ ಲಿಹಂತಿ ಎಂದರೆ ನೆಕ್ಕುತ್ತಾರೆ, ಮುದ್ದಿಡುತ್ತಾರೆ ಎಂದರ್ಥವು. ತಾಯಿ ತಂದೆಗಳು ಅಥವಾ ಬಂಧುಬಾಂಧವರು ತಮ್ಮ ಮಗುವನ್ನು ಯಾವರೀತಿ ಪ್ರೀತಿ ವಿಶ್ವಾಸಗಳಿಂದ ಮುದ್ದಿಸಿ ಲಾಲಿಸುತ್ತಾರೆಯೋ ಅದರಂತೆ ಮೇಧಾವಿಗಳಾದ ಸ್ತೋತೃ ಜನರು ಈ ವೇನನನ್ನು ಅತ್ಯಾದರದಿಂದ ಪೂಜಿಸುತ್ತಾರೆ. ಇಲ್ಲಿ ರಿಹತಿರರ್ಚತಿಕರ್ಮಾ ಎಂಬ ನಿರುಕ್ತವಚನದಂತೆ ಪೂಜಿಸುತ್ತಾರೆ ಎಂಬರ್ಥವನ್ನು ಹೇಳಬಹುದು.

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಅಯಂ ವೇನಶ್ಚೋದಯತ್ಪೃಶ್ನಿಗರ್ಭಾಃ ಪ್ರಾಷ್ಟವರ್ಣಗರ್ಭಾ ಆಪ ಇತಿ ವಾ ಜ್ಯೋತಿರ್ಜರಾಯು- ರ್ಜ್ಯೋತಿರಸ್ಯ ಜರಾಯುಸ್ಥಾನೀಯಂ ಭವತಿ । ಜರಾಯುರ್ಜರಯಾ ಗರ್ಭಸ್ಯ ಜರಯಾ ಯೂಯತ** 

ಇತಿ ವೇನಮುಮಪಾಂ ಚ ಸಂಗಮನೇ ಸೂರ್ಯಸ್ಯ ಚ ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ॥ ಶಿಶುಃ ಶಂಸನೀಯೋ ಭವತಿ । ಶಿಶೀತೇರ್ವಾ ಸ್ಯಾದ್ದಾನಕರ್ಮಣಃ । ಚಿರಲಬ್ಧೋ ಗರ್ಭೋ ಭವತಿ ॥ (ನಿ. ೧೦—೩೯)

ಅಯಂ ವೇನಶ್ಚೋದಯತ್ ಪೃಶ್ನಿಗರ್ಭಾಃ ಪಾರ್ಶ್ವವರ್ಣಗರ್ಭಾ ಆಪ ಇತಿ ವಾ—ಪೃಶ್ನಿ ಎಂದರೆ ಆದಿತ್ಯನು. ಈ ಸೂರ್ಯನ ಉತ್ಕೃಷ್ಟವಾದ ವರ್ಣ ಅಥವಾ ರಶ್ಮಿಗಳಿಂದ ( ಆಸ್ಪಃ—ಪ್ರಾಪ್ತಃ ) ಹೀರಲ್ಪಟ್ಟ ಉದಕಗಳು ಎಂದು ಪೃಶ್ನಿಗರ್ಭಾ—ಎಂಬ ಶಬ್ದದ ಅರ್ಥವು. ರಶ್ಮ್ಯಂತರ್ಗತಾಃ ಪರಿಪಕ್ವಾಃ ಆಪೋ ಮಾಸಾಷ್ಟಕೇನ ಸಂಭೃತಾಃ ತಾಃ ವೇನಶ್ಚೋದಯತಿ ಪ್ರಾವೃಷಿ ವರ್ಷಭಾವೇನ ಪ್ರೇರಯತಿ—ಸೂರ್ಯರಶ್ಮಿಗಳಿಂದ ಹೀರಲ್ಪಟ್ಟ ಜಲಾಶಯಾದಿಗಳ ಉದಕಗಳು ಆವಿಯರೂಪದಲ್ಲಿ ಅಂತರಿಕ್ಷಕ್ಕೆ ಒಯ್ಯಲ್ಪಟ್ಟು ಅಲ್ಲಿ ಎಂಟು ತಿಂಗಳವರೆಗೂ ಪರಿಪಕ್ವವಾಗಿ ಎಂದರೆ. ಮೇಘ ರೂಪವಾಗಿ ಪರಿವರ್ತಿಸಲ್ಪಟ್ಟು ಆ ಉದಕಗಳನ್ನು ವರ್ಷಾಕಾಲದಲ್ಲಿ (ಮಳೆಗಾಲದಲ್ಲಿ) ವೃಷ್ಟಿರೂಪದಲ್ಲಿ ಭೂಮಿಯ ದುೀಲೆ ಬೀಳುವಂತ ವೇನನು ಪ್ರೇರಿಸುತ್ತಾನೆ ಎಂದು ವಾಕ್ಯಾಭಿಪ್ರಾಯವು.

ಜ್ಯೋತಿರ್ಜರಾಯುರ್ಜ್ಯೋತಿರಸ್ಯ ಜರಾಯುಸ್ಥಾನೀಯಂ ಭವತಿ । ಜರಾಯುರ್ಜರಯಾ ಗರ್ಭಸ್ಯ ಜರಯಾ ಯೂಯತ ಇತಿ ವಾ —ಜ್ಯೋತಿಃ ಎಂದರೆ ವಿದ್ಯುದಾಖ ಜ್ಯೋತಿಯು (ಮಿಂಚು). ಇಂತಹ ಜ್ಯೋತಿಯನ್ನು ಗರ್ಭರೂಪದಲ್ಲಿ ಹೊಂದಿರುವ (ವೇನನು). ಇಲ್ಲಿ ಜರಾಯುವೆಂದರೇನು ? ಜರಯಾ ಗರ್ಭಸ್ಯ—ಗರ್ಭವು ಮೊದಲು ಸಣ್ಣದಾಗಿದ್ದು ಕ್ರಮಕ್ರಮವಾಗಿ ಬೆಳೆಯುತ್ತಿರುವುದನ್ನು ಜರಾಯುವೆಂದು ಹೇಳುವರು. ಅಥವಾ ಪ್ರಸೂತಾಯಾ ಗೋಃ ಸ್ತ್ರಿಯಾ ವಾ ಪಶ್ಚಾತ್ ಪತತಿ ಸಾ ಜರೇತ್ಯುಚ್ಯತೇ । ತಯಾ ಚ ಯೂಯತೇ ಮಿಶ್ರ್ಯತೇ ತಜ್ಜರಾಯ್ವಿತ್ಯುಚ್ಯತೇ—ಗೋವಿನ ಅಥವಾ ಸ್ತ್ರೀಯ ಉದರದಿಂದ ಪ್ರಸವಕಾಲದಲ್ಲಿ ಯಾವದು ಈಚೆಗೆ ಬೀಳುವುದೋ ಅದಕ್ಕೆ ಜರಾ ಎಂದು ಹೆಸರು ಎಂದರೆ ಗರ್ಭವು. ಆ ಗರ್ಭದಿಂದ ಕೂಡಿರುವ ವಸ್ತುವಿಗೆ (ಪ್ರಾಣಿಗೆ) ಜರಾಯುವೆಂದು ಹೆಸರು. ಗರ್ಭದಿಂದ ಕೂಡಿರುವ ಪ್ರಾಣಿಗೆ ಜರಾಯುವೆಂದು ಹೆಸರು. ಪ್ರಕೃತ ಋಕ್ಕಿನಲ್ಲಿ ಜ್ಯೋತಿಯೇ (ಮಿಂಚೇ) ಮೇಘದ ಗರ್ಭರೂಪದಲ್ಲಿ ರುವುದು ಎಂದರೆ ಪ್ರಕಾಶಾತ್ಮಕನೂ ಮಿಂಚಿನ ರೂಪದಲ್ಲಿರುವವನೂ ಆದ ವೇನನು ಮೇಘಗಳ ಗರ್ಭರೂಪದಲ್ಲಿರುವನು ಎಂದಭಿಪ್ರಾಯವು.

ಇಮಮಪಾಂ ಚ ಸಂಗಮನೇ ಸೂರ್ಯಸ್ಯ ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ—ಅಪಾಂ ಚ ಸೂರ್ಯಸ್ಯ ಚ ಸಂಗಮನೇ ಎಂದರೆ ಆವಿಯ ರೂಪದಲ್ಲಿರುವ ಉದಕಗಳ ಮತ್ತು ಸೂರ್ಯನ ಸಮಾಗಮನ ಸ್ಥಾನದಲ್ಲಿ ಎಂದರೆ ಇವು ಎರಡೂ (ನೀರು ಮತ್ತು ಸೂರ್ಯ ಇವೆರಡೂ) ಒಟ್ಟಿಗೆ ಸೇರುವ ಪ್ರದೇಶದಲ್ಲಿ ಎಂದರೆ ಅಂತರಿಕ್ಷದಲ್ಲಿ ಎಂದರ್ಥವು. ಶಿಶುಮಿವ ರಿಹಂತಿ ಎಂದರೆ ಸಣ್ಣ ಮಗುವನ್ನು ಜನರು ಯಾವ ರೀತಿ ಒಳ್ಳೆಯ ಮಾತುಗಳಿಂದ ಮುದ್ದಿಸಿ ಲಾಲಿಸಿ ಹೊಗಳುವರೋ ಅದರಂತೇ ಎಂದರ್ಥವು. ಸೂರ್ಯ ಮತ್ತು ಉದಕಗಳ ಸಮಾಗಮನಸ್ಥಾನವಾದ ಅಂತರಿಕ್ಷದಲ್ಲಿ ಮೇಘಮಧ್ಯದಲ್ಲಿ ಜ್ಯೋತೀರೂಪದಿಂದ ನೆಲಸಿರುವ ಈ ವೇನದೇವನನ್ನು ಮೇಧಾವಿಗಳಾದ ಜನರು ಮಕ್ಕಳನ್ನು ಮುದ್ದಿಸಿ ಲಾಲಿಸಿ ಪ್ರಶಂಸಿಸುವಂತೆ ತಮ್ಮ ಸ್ತುತಿವಾಕ್ಯಗಳಿಂದ ಪ್ರಶಂಸೆಮಾಡುತ್ತಾರೆ, ಸ್ತುತಿಸುತ್ತಾರೆ, ಪ್ರವೃದ್ಧಮಾನನನ್ನಾಗಿ ಮಾಡುತ್ತಾರೆ ಅಥವಾ ಪೂಜಿಸುತ್ತಾರೆ ಎಂದು ಮುಖ್ಯಾಭಿಪ್ರಾಯವು.

ಶಿಶುಃ ಶಂಸನೀಯೋ ಭವತಿ । ಶಿಶೀತೇರ್ವಾ ಸ್ಯಾದ್ದಾನಕರ್ಮಣಃ । ಚಿರಲಬ್ಧೋ ಗರ್ಭೋ ಭವತಿ—ಒಳ್ಳೆಯ ಮಾತನ್ನಾಡಿ ಹೊಗಳುವುದರಿಂದ ಅಥವಾ ಸಮಾಧಾನ ಮಾಡುವುದರಿಂದ ಮಗುವಿಗೆ ಶಿಶುವೆಂದು ಹೆಸರು. ಅಥವಾ

ಶಿಶೀತಿಧಾತುವಿಗೆ ಕೊಡು ಎಂಬರ್ಥವಿರುವುದು, ದೀಯತೇ ಹಿ ಸ ಪುರುಷೇಣ ಸ್ತ್ರಿಯೈ ಧಾರಣಾಯೆ—ಪುರುಷನಿಂದ ಸ್ತ್ರೀಯ ಗರ್ಭದಲ್ಲಿ ಧರಿಸಿರುವುದಕ್ಕಾಗಿ ಸ್ತ್ರೀಗೆ ಕೊಡುವುದರಿಂದ ಮಗುವಿಗೆ ಶಿಶುವೆಂಬ ಹೆಸರು. ಗರ್ಭವು ಬಹುಕಾಲದವರೆಗೆ ಉದರದಲ್ಲಿದ್ದು ಹೊರಬರುವುದು ಎಂದು ನಿರುಕ್ತಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ
ಮೂವತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತ್ವಾರಿಂಶತ್ ಖಂಡಃ

## ನಲವತ್ತನೆಯ ಖಂಡವು

ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸುಪ್ರತಿರಾನ ಆಯುಃ। ರಾರಂಧಿ ನಃ ಸೂರ್ಯಸ್ಯ ಸಂದೃಶಿ ಘೃತೇನ ತ್ವಂ ತನ್ವಂ ವರ್ಧಯಸ್ವ (ಋ, ಸಂ. ೧೯-೫೯-೫)॥ ಅಸುನೀತೇ ಮನೋಽಸ್ಮಾಸು ಧಾರಯ ಚಿರಂ ಜೀವನಾಯ ಪ್ರವರ್ಧಯ ಚ ನ ಆಯೂ ರಂಧಯ ಚ ನಃ ಸೂರ್ಯಸ್ಯ ಸಂದರ್ಶನಾಯ ರಧ್ಯತಿರ್ವಶಗಮನೇಽಪಿ ದೃಶ್ಯತೇ । ಮಾ ರಧಾಮ ದ್ವಿಷತೇ ಸೋಮ ರಾಜನ್ನಿತ್ಯಪಿ ನಿಗಮೋ ಭವತಿ । ಘೃತೇನ ತ್ವಮಾತ್ಮಾನಂ ತನ್ವಂ ವರ್ಧಯಸ್ವತೋರ್ಣ ವಾಖ್ಯಾತಸ್ತಸ್ಯೈಷಾ ಭವತಿ ॥ ೪೦ ॥

ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸುಪ್ರತಿರಾ
ನ ಆಯುಃ॥ ರಾರಂಧಿ ನಃ ಸೂರ್ಯಸ್ಯ ಸಂದೃಶಿ ಘೃತೇನ
ತ್ವಂ ತನ್ವಂ ವರ್ಧಯಸ್ವ ॥

(ಋ. ಸಂ. ೮–೨೨–೨)

ಅಸುನೀತಿ ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಪ್ರಾಣನೇ ಮನಸ್ಸು ಮುಂತಾದ ಪ್ರಾಣಗಳನ್ನು ನಮ್ಮ ಶರೀರದಲ್ಲಿ ನಿನ್ನ ಸ್ಥಿತಿಯಿಂದ ಸ್ಥಿರಗೊಳಿಸು. ಶರೀರದಿಂದ ಉತ್ಕ್ರಮಣ ಮಾಡಬೇಡ. ಚಿರಕಾಲ ಜೀವನಕ್ಕೋಸ್ಕರ ನಮ್ಮ ಜೀವಿತಕಾಲವನ್ನು ಅತಿಶಯವಾಗಿ ಹೆಚ್ಚಿಸು. ಸೂರ್ಯನನ್ನು ನೋಡುತ್ತಿರುವಂತೆ ದಿವ್ಯಚಕ್ಷುಸ್ಸನ್ನು ದಯಪಾಲಿಸು. ನೀನೂ ಉದಕದಿಂದ ಸ್ವಕೀಯ ದೇಹವನ್ನು ಪುಷ್ಟಿಗೊಳಿಸು.

ಅಸುನೀತೇ ಮನಃ ಅಸ್ಮಾಸು ಧಾರಯ ಚಿರಂಜೀವನಾಯ ಪ್ರವ-
ರ್ಧಯ ಚ ನ ಆಯೂ ರಂಧಯ ಚ ನಃ ಸೂರ್ಯಸ್ಯ
ಸಂದರ್ಶನಾಯ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮುಖ್ಯಪ್ರಾಣನು ಇದ್ದರೆ ಇತರ ಮನಸ್ಸು ಮುಂತಾದ ಇಂದ್ರಿಯಗಳು ಇರುತ್ತವೆ. ಅವನು ಉತ್ಕ್ರಾಂತಿ ಹೊಂದಿದರೆ ಅವುಗಳೂ ಶರೀರವನ್ನು ತ್ಯಜಿಸಿ ಅವನನ್ನು ಹಿಂಬಾಲಿಸುತ್ತವೆ. ರಾರಂಧಿ ಎಂಬಲ್ಲಿ ಭೃಶಂ ಎಂದು ಸೇರಿಸಿಕೊಳ್ಳಬೇಕು. ಉಂಟುಮಾಡು ಎಂದರ್ಥ. ರಧ–ಹಿಂಸಾಸಂರಾದ್ಧ್ಯೋಃ ಧಾತು. ಸಂರಾದ್ಧಿಯೆಂದರೆ ನಿಷ್ಪತ್ತಿ. ಣಿಜಂತದಮೇಲೆ ಲೋಟ್ ಬಂದಿದೆ. ಯಙಲುಗಂತರೂಪ. ಸಂದೃಶಿ ಎಂಬುದು ಭಾವಕ್ವಿಬಂತಶಬ್ದ. ಸಂದರ್ಶನಕ್ಕೋಸ್ಕರ ವೆಂದರ್ಥ.

ರಧ್ಯತಿರ್ವಶಗಮನೇಽಪಿ ದೃಶ್ಯತೇ || ಮಾ ರಧಾಮ ದ್ವಿಷತೇ ಸೋಮ
ರಾಜನ್ ಇತ್ಯಪಿ ನಿಗಮೋ ಭವತಿ ||

ರಧಧಾತುವಿಗೆ ನಿಷ್ಪತ್ತ್ಯರ್ಥ ಹಿಂದೆ ಹೇಳಿದೆ. ಇದಕ್ಕೆ ವಶಪಡಿಸಿಕೊಳ್ಳುವುದು ಎಂಬರ್ಥವೂ ಇದೆ. ನಮ್ಮನ್ನು ವಶ ಪಡಿಸಿಕೊಳ್ಳು ಎಂದರ್ಥವಾಗುತ್ತದೆ. ಈ ಅರ್ಥದಲ್ಲಿ ನಿಗಮಪ್ರಮಾಣವನ್ನು ತೋರಿಸುತ್ತಾರೆ. 'ದೇವೀ ಷಳುರ್ವೀ ರುರುನಃ ಕೃಣೋತ ವಿಶ್ವೇದೇವಾಸ ಇಹ ವೀರಯಧ್ವಮ್ । ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿಃ ಮಾ ರಧಾಮ ದ್ವಿಷತೇ ಸೋಮ ರಾಜನ್' (ಋ. ಸಂ ೮–೬–೧–೫೫) ಎಂದು ಪೂರ್ಣ ಮಂತ್ರ. ಸ್ವಾಮಿಯೇ ನಮಗೆ ಅಪ್ರೀತಿಯನ್ನುಂಟುಮಾಡುವ ಶತ್ರುವಿಗೆ ನಾವು ವಶರಾಗದಂತೆ ಅನುಗ್ರಹಿಸು. ಅವರೇ ನಮ್ಮ ಸೇವಕರಾಗಲಿ ಎಂದು ತಾತ್ಪರ್ಯ.

ಘೃತೇನ ತ್ವಮಾತ್ಮಾನಂ ತನ್ವಂ ವರ್ಧಯಸ್ವ

ಮಂತ್ರದ ನಾಲ್ಕನೇ ಪಾದದ ವ್ಯಾಖ್ಯಾನವನ್ನು ತೋರಿಸುತ್ತಾರೆ. ತನ್ವಂ ಎಂಬುದಕ್ಕೆ ಆತ್ಮಾನಂ ಎಂದು ವ್ಯಾಖ್ಯಾನ. 'ಸ್ತ್ರಿಯಾಂ ಮೂರ್ತಿಸ್ತನುಸ್ತನೂಃ' ಎಂದು ಅಮರ. ಸ್ವಶರೀರವನ್ನು ನೀರಿನಿಂದ ಅಭಿವೃದ್ಧಿಹೊಂದಿಸಿಕೊಳ್ಳು ಎಂದರ್ಥ.

ಋತೋ ವ್ಯಾಖ್ಯಾತಸ್ತಸ್ಯೈಷಾ ಭವತಿ || ೪೦ ||

ಕ್ರಮಪ್ರಾಪ್ತವಾದ ಋತಪದದ ನಿರ್ವಚನವನ್ನು ವಿವರಿಸುತ್ತಾರೆ. ಇಲ್ಲಿ ಋತಪದದಿಂದ ಮಧ್ಯಮದೇವನೇ ಅಭಿಹಿತ ನಾಗಿರುತ್ತಾನೆ. ಉದಕನಾಮದಲ್ಲಿ ಋತಪದವು ಹೇಳಿದೆ. ಅದನ್ನು ಅನುಸರಿಸಿರುವವನು. ಮುಂದೆ ಹೇಳುವ ಮಂತ್ರವು ಋತಸ್ತುತಿಪ್ರತಿಪಾದಕವಾಗುತ್ತದೆ.

ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತ್ಮವೇ ಸು ಪ್ರ
ತಿರಾ ನ ಆಯುಃ । ರಾರಂಧಿ ನಃ ಸೂರ್ಯಸ್ಯ ಸಂದೃಶಿ ಘೃತೇನ ತ್ವಂ
ತನ್ವಂ ವರ್ಧಯಸ್ವ || ೫ ||

ಪ್ರಾಣಗಳ ನೇತ್ರಿಯಾದ ಎಲೈ ಅಸುನೀತಿದೇವಿಯೇ, ನಮಗೆ ಕಳೆದುಹೋದ ಚೇತನವನ್ನು ಪುನಃ ಕೊಡು. ನಾವು ದೀರ್ಘಕಾಲ ಜೀವಿಸಲು ನಮ್ಮ ಆಯುಸ್ಸನ್ನು ಅಧಿಕವಾಗಿ ಬೆಳೆಯುವಂತೆ ಮಾಡು, ನಾವು ಅನೇಕಕಾಲ ಸೂರ್ಯನನು ನೋಡುವಂತೆ ಮಾಡು. ನಮ್ಮಿಂದ ಅರ್ಪಿತವಾದ ಘೃತದಿಂದ ನೀನು ಶರೀರವನ್ನು ಬೆಳೆಸು.
ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಅಸುನೀತೇ ಮನಃ ಅಸ್ಮಾಸು ಧಾರಯ ಚಿರಂ ಜೀವನಾಯ ಪ್ರವರ್ಧಯ ಚ ನ ಆಯೂ ರಂಧಯ ಚ ನಃ ಸೂರ್ಯಸ್ಯ ಸಂದರ್ಶನಾಯ । ರಧ್ಯತಿರ್ವಶಗಮನೇಽಪಿ ದೃಶ್ಯತೇ । ಮಾರಧಾಮ ದ್ವಿಷತೇ ಸೋಮ ರಾಜನ್ । ಇತ್ಯಪಿ ನಿಗಮೋ ಭವತಿ । ಘೃತೇನ ತ್ವಮಾತ್ಮಾನಂ ತನ್ವಂ ವರ್ಧಯಸ್ವ ॥

ಎಲೈ ಅಸುನೀತಿಯೆಂಬ ದೇವಿಯೇ, ನಮ್ಮ ಶರೀರದಲ್ಲಿರುವ ಮನಸ್ಸನ್ನು (ಇಲ್ಲಿ ಮನಸ್ಸೆಂದರೆ ಪ್ರಾಣ ಅಥವಾ ಆತ್ಮಾ ಎಂಬರ್ಥವು ಸೂಚಿತವಾಗುವುದು). ಬಹುಕಾಲ ಜೀವಿಸಿರುವುದಕ್ಕಾಗಿ ಸ್ಥಿರವಾಗಿ ನೆಲಸುವಂತೆ ಮಾಡು. ಮತ್ತು ನಮ್ಮ ಆಯುಸ್ಸನ್ನೂ ವೃದ್ಧಿಪಡಿಸು. ಅದನ್ನು ನಮ್ಮ ವಶವಾಗುವಂತೆ ಮಾಡು. ನಾವು ಬಹುಕಾಲ ಜೀವಿಸಿದ್ದು ಸೂರ್ಯನನ್ನು ನೋಡುತ್ತಿರುವಂತಾಗಲಿ. ಇಲ್ಲಿ ರಧ್ ಧಾತುವಿಗೆ ವಶಮಾಡು ಎಂಬರ್ಥವಿರುವುದು. ಮಾ ರಧಾಮ ದ್ವಿಷತೇ ಸೋಮ ರಾಜನ್ ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು. ನಾವು ಅರ್ಪಿಸುವ ಘೃತದಿಂದ ಎಲೈ ಅಸುನೀತಿಯೇ, ನಿನ್ನ ಶರೀರವನ್ನು ಪುಷ್ಟಿಗೊಳಿಸು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಸೂರ್ಯಸ್ಯ ಸಂದೃಶಿ—ಸೂರ್ಯನನ್ನು ಯಾವಾಗಲೂ ನೋಡುತ್ತಿರುವುದು ಎಂದರೆ ಬಹುಕಾಲ ಜೀವಿಸಿರುವುದು ಎಂದರ್ಥವು. ಈ ಅರ್ಥದಲ್ಲಿ ಜ್ಯೋಕ್ ಚ ಸೂರ್ಯಂ ದೃಶೇ ಇತ್ಯಾದಿ ಶ್ರುತಿವಾಕ್ಯಗಳಿರುವವು.

ಘೃತೇನ ತ್ವಂ ತನ್ವಂ ವರ್ಧಯಸ್ವ—ಈ ವಾಕ್ಯಕ್ಕೆ ಸಾಯಣರು ತ್ವಂ ಚ ಅಸ್ಮಾಭಿರ್ದತ್ತೇನ ಘೃತೇನ ಶರೀರಂ ವರ್ಧಯ ನಾವು ನಿನಗೆ ಅರ್ಪಿಸುವ ಘೃತದಿಂದ ನಿನ್ನ ಶರೀರವನ್ನು ಪುಷ್ಟಿಗೊಳಿಸು ಎಂದು ಹೇಳಿದಾರೆ. ಈ ವಿಷಯ ದಲ್ಲಿ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು—ಘೃತೇನ ಉದಕೇನ ತ್ವಮಾತ್ಮಾನಂ ಯಥಾಕಾಲಂ ವರ್ಧಯಸ್ವ । ತ್ವಯ್ಯುದಕಂ ದದತಿ ಸರ್ವಮಿದಂ ಭವತಿ । ಅಹವಿರ್ಭಾಕ್ತ್ವಾದಸುನೀತೇರ್ಘೃತಮಿತ್ಯುದಕನಾಮೇತ್ಯತ್ರೋಪ‐ ಪದ್ಯತೇ ॥ ಘೃತಶಬ್ದಕ್ಕೆ ಉದಕವೆಂದು ಅರ್ಥಮಾಡಿದಾರೆ. ಅಸುನೀತಿದೇವತೆಯು ಹವಿಸ್ಸನ್ನು ಭುಜಿಸುವುದಿಲ್ಲವಾದ್ದರಿಂದ ಇಲ್ಲಿ ಘೃತಶಬ್ದಕ್ಕೆ ಉದಕವೆಂದು ಅರ್ಥಮಾಡುವುದು ಸಮಂಜಸವಾಗಿದೆ ಎಂದು ಹೇಳಿದಾರೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ನಲವತ್ತನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಏಕಚತ್ವಾರಿಂಶತ್ ಖಂಡಃ

## ನಲವತ್ತೊಂದನೆಯ ಖಂಡವು

ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ | ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ (ಋ. ಸಂ. ೪-೨೩-೮) || ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಪ್ರಜ್ಞಾ ವರ್ಜನೀಯಾನಿ ಹಂತಿ ಋತಸ್ಯ ಶ್ಲೋಕೋ ಬಧಿರಸ್ಯಾಪಿ ಕರ್ಣಾವಾತೃಣತ್ತಿ ಬಧಿರೋ ಬದ್ಧಶ್ರೋತ್ರಃ ಕರ್ಣೌ ಬೋಧಯನ್ ದೀಪ್ಯಮಾನಶ್ಚಾಯೋರಯನಸ್ಯ ಮನುಷ್ಯಸ್ಯ ಜ್ಯೋತಿಷೋ ವೋದಕಸ್ಯ ವೇಂದುರಿಂಧೇರುನತ್ತೇರ್ವಾ ತಸ್ಯೈಷಾ ಭವತಿ || ೪೧ ||

ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜನಾನಿ
ಹಂತಿ || ಋತಸ್ಯ ಶ್ಲೋಕೋ ಬಧಿರಾತತರ್ದ ಕರ್ಣಾ ಬುಧಾನಃ
ಶುಚಮಾನ ಆಯೋಃ ||

ಋತಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಋತದೇವನಾದ ಮಧ್ಯಮನ ಪೂರ್ವಕಾಲದಿಂದಲೂ ಸಂಚಿತವಾದ ಪ್ರಕಾಶವುಳ್ಳ ನೀರು ಅಧಿಕವಾಗಿರುತ್ತವೆ. ಋತದೇವ ಸಂಬಂಧಿಯಾದ ಪ್ರಜ್ಞೆ ಅಥವಾ ಸ್ತುತಿಯು ಸಕಲಲೋಕದ ಪಾಪಗಳನ್ನು ನಾಶಮಾಡುತ್ತದೆ. ಪ್ರಕಾಶಿಸುತ್ತಿರುವ ಋತದೇವನ ಸ್ತುತಿರೂಪವಾದ ಮೇಘಗರ್ಜನೆಯು ಕಿವುಡಾದ ಮನುಷ್ಯನ ಕಿವಿಗಳನ್ನೂ ಭೇದಿಸುತ್ತವೆ.

ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯಪ್ರಜ್ಞಾವರ್ಜನಿಯಾನಿ
ಹಂತಿ | ಋತಸ್ಯ ಶ್ಲೋಕೋ ಬಧಿರಸ್ಯಾಪಿ ಕರ್ಣಾವಾತೃಣತ್ತಿ |
ಬಧಿರೋ ಬದ್ಧಶ್ರೋತ್ರಃ | ಕರ್ಣೌಭೋಧಯನ್ ದೀಪ್ಯಮಾನ-
ಶ್ಚಾಯೋರಯನಸ್ಯ ಮನುಷ್ಯಸ್ಯ, ಜ್ಯೇತಿಷೋ ವೋದಕಸ್ಯ ವಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಂತರಿಕ್ಷದಲ್ಲಿ ಸಂಚರಿಸುವವನು ಋತನು. ಗತ್ಯರ್ಥಕ ಋಧಾತುವಿಗೆ ಕರ್ತರಿಯಲ್ಲಿ ಕ್ತ ಪ್ರತ್ಯಯ. ಮಧ್ಯಮದೇವನಿಗೆ ಋತನೆಂದು ಹೆಸರು. ಜ್ಯೋತಿಷೋ ವಾ ಉದಕಸ್ಯ ವಾ ಶ್ಲೋಕಃ ಎಂದು ಅನ್ವಯ. ಶ್ಲೋಕೃ–ಸಂಘಾತೇ. ಧಾತು. ಅಚ್‌ಪ್ರತ್ಯಯ. ಶಬ್ದಸಂಘಾತವೆಂದರ್ಥ. ಋತದೇವ ಸಂಬಂಧಿಯಾದ ಉದಕ ಅಥವಾ ದೀಪ್ತಿಸಂಬಂಧವಾದ ಶಬ್ದಸಂಘಾತವು ಕಿವುಡ ಮನುಷ್ಯನ ದುರ್ಭೇದ್ಯ ಕಿವಿಗಳನ್ನು ಕೊರೆಯುತ್ತವೆ. ಆಯುಪದವು ಮನುಷ್ಯ ಪರ್ಯಾಯದಲ್ಲಿ ಪಠಿತವಾಗಿದೆ. (ನಿ. ಘ. ೨–೩–೧೭).

ಇಂದುರಿಂಧೇರುನತ್ತೇರ್ವಾ । ತಸ್ಯೈಷಾ ಭವತಿ ॥ ೪೧ ॥

ಕ್ರಮಪ್ರಾಪ್ತವಾದ ಇಂದು ಪದದ ನಿರ್ವಚನವನ್ನು ತೋರಿಸುತ್ತಾರೆ. ಮಧ್ಯಮದೇವನಾದ ಚಂದ್ರನೆಂದರ್ಥ. ದೀಪ್ತ್ಯರ್ಥಕ ವಾದ ಇನ್ಧ್‌ಧಾತುವಿನಿಂದ ಅಥವಾ ಕ್ಲೇದನಾ (ಒದ್ದೆ) ರ್ಥಕವಾದ ಉಂದೀಧಾತುವಿನಿಂದ ನಿಷ್ಪನ್ನವಾಗಿದೆ. ದೀಪ್ತಿ ಅಥವಾ ಕ್ಲೇದನ ಎರಡು ಅರ್ಥಗಳೂ ಚಂದ್ರನಲ್ಲಿ ಉಪಪನ್ನವಾಗಿದೆ. ನೀರಿನಿಂದ ಇವನು ಭೂಮಿಯನ್ನು ವದ್ದೆಮಾಡುತ್ತಾನೆ. ಔಣಾದಿಕ ಉಪ್ರತ್ಯಯ ಬಂದಾಗ ವರ್ಣವ್ಯತ್ಯಯದಿಂದ ಇಂದು ಶಬ್ದವಾಗಿದೆ. ಮುಂದೆ ಹೇಳುವ ಋಙ್ಮಂತ್ರವು ಇಂದು ಸ್ತುತಿಯನ್ನು ಪ್ರತಪಾದಿಸುತ್ತದೆ.

ಋತದೇವನಿಗೆ ಸಂಬಂಧಿಗಳಾದ ಉದಕಗಳು ಬಹುಪ್ರಕಾರವಾಗಿವೆಯೆಂದು ಪ್ರಸಿದ್ಧವಾಗಿವೆ. ಋತದೇವನನ್ನು ದ್ದೇಶಿಸಿದುದೂ, ಪ್ರಜ್ಞಾಪೂರಿತವಾದುದೂ, ಪ್ರಕಾಶಮಾನವಾದುದೂ ಆದ ಸ್ತುತಿಯು ಮಾನವನ ಕಿವುಡಾದ ಕಿವಿಗಳನ್ನು ತೆರೆದು ಅವುಗಳಿಗೆ ಶ್ರವಣಶಕ್ತಿಯನ್ನು ಕೊಡುತ್ತದೆ.

ಈ ಋಕ್ಕಿನ ಭಾಷ್ಯದಲ್ಲಿ ಸಾಯಣರು—ಅತ್ರ ಋತಶಬ್ದೇನೇಂದ್ರೋ ವಾದಿತ್ಯೋ ವಾ ಸತ್ಯಂ ವಾ ಯಜ್ಞೋ ವೋಚ್ಯತೇ । ಋತ ಸತ್ಯಂ ವಾ ಯಜ್ಞಂ ವಾ ಎಂದು ನಿರ್ವಚನವನ್ನು ಹೇಳಿರುವರು. ಇಲ್ಲಿ ಉದಕ, ವೃಷ್ಟಿ, ಅನ್ನ, ಸ್ತುತಿ ಮೊದಲಾದ ವಿಷಯಗಳು ಪ್ರಸಕ್ತವಾಗಿರುವುದರಿಂದ ಇವೆಲ್ಲವೂ ಮೇಲೆ ಹೇಳಿದ ಯಾವ ದೇವತೆಗಾದರೂ ಅನ್ವಯಿಸಬಹುದು.

ಋತಪೇಯವೆಂಬ ಒಂದು ದಿವಸದ ಮಟ್ಟಿಗೆ ಮಾಡುವ ಯಾಗದಲ್ಲಿ ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರ ಮಂತ್ರಗಳ ಪಠನಕ್ಕೆ ಪ್ರಾರಂಭದಲ್ಲಿ ನಿವಿತ್ಸೂಕ್ತವನ್ನು ಪಠಿಸುವರು. ಆ ನಿವಿತ್ಸೂಕ್ತಕ್ಕೆ ಪೂರ್ವಭಾವಿಯಾಗಿ ಋತಸ್ಯ ಹಿ ಎಂದು ಮೊದಲಾದ ಈ ಸೂಕ್ತದ ಎರಡು ಋಕ್ಕುಗಳನ್ನು ( ಈ ಸೂಕ್ತದ ೮-೯ ನೇ ಋಕ್ಕುಗಳನ್ನು ) ಕ್ರಮವಾಗಿ ಎಂದರೆ ಒಂದೊಂದು ನಿವಿದ್ಧಾನೀಯಸೂಕ್ತಕ್ಕೆ ಮೊದಲು ಒಂದೊಂದು ಋಕ್ಕಿನಂತೆ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಋತಸ್ಯ ಹಿ ಶುರುಧಃ ಸಂತಿ ಪೂರ್ವೀರಿತಿ ಸೂಕ್ತಮುಖೀಯೇ ಎಂಬ ಸೂತ್ರದಿಂದ (ಆ. ೯-೭) ವಿವೃತವಾಗಿರುವುದು

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ
ನಲವತ್ತೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಿಚತ್ವಾರಿಂಶತ್ ಖಂಡಃ
## ನಲವತ್ತೆರಡನೆಯ ಖಂಡವು

ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮರೇಜತಿ ರಕ್ಷೋಹಾ ಮನ್ಮ ರೇಜತಿ । ಸ್ವಯಂ ಸೋ ಅಸ್ಮದಾನಿದೋ ವಧೈರಜೇತ ದುರ್ಮತಿಂ ।

ಅವ ಸ್ರವೇದಘಶಂಸೋಽವತರಮವ ಕ್ಷುದ್ರಮಿವ ಸ್ರವೇತ್ (ಋ. ಸಂ. ೧-೧೨೯-೬) ॥ ಪ್ರಬ್ರವೀಮಿ ತದ್ಭವ್ಯಾಯೇಂದವೇ ಹವನಾರ್ಹ ಇವ ಯ ಇಷವಾನನ್ನವಾನ್ವಾಮಾನ್ವಾ ಮನನಾನಿ ಚ ನೋ ರೇಜಯತಿ ರಕ್ಷೋಹಾ ಚ ಬಲೇನ ರೇಜಯತಿ ಸ್ವಯಂ ಸೋಽಸ್ಮ-ದಭಿನಿಂದಿತಾರಂ । ವಧೈರಜೇತ ದುರ್ಮತಿಂ । ಅವಸ್ರವೇದಘಶಂಸಸ್ತತಶ್ಚಾವತರಂ ಕ್ಷುದ್ರಮಿವಾವಸ್ರವೇದಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀ-ಯಾಹೋ ದರ್ಶನೀಯೇತಿ ತತ್ಪರುಚ್ಛೇಪಸ್ಯ ಶೀಲಂ ಪರುಚ್ಛೇಪ ಋಷಿಃ ಪರ್ವವಚ್ಛೇಪಃ ಪರುಷಿ ಪರುಷಿ ಶೇಪೋಽಸ್ಯೇತಿ ವೇತೀಮಾನಿ ಸಪ್ತವಿಂಶತಿರ್ದೇವತಾನಾಮಧೇಯಾನ್ಯನು-ಕ್ರಾಂತಾನಿ ಸೂಕ್ತಭಾಂಜಿ ಹವಿರ್ಭಾಂಜಿ ತೇಷಾಮೇತಾನ್ಯಹವಿರ್ಭಾಂಜಿ ವೇನೋಽಸು-ನೀತಿರ್ಋತ ಇಂದು ಪ್ರಜಾಪತಿಃ ಪ್ರಜಾನಾಂ ಪಾತಾ ವಾ ಪಾಲಯಿತಾ ವಾ ತಸ್ಯೈಷಾ ಭವತಿ ॥ ೪೨ ॥

> ಪ್ರ ತದ್ವೋ ಚೇಯಂ ಭವ್ಯಾಯೇಂದವೇ ಹವ್ಯೋ ನಯ ಇಷ-
> ವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ । ಸ್ವಯಂ ಸೋ
> ಅಸ್ಮದಾ ನಿದೋ ವಧೈರಜೇತ ದುರ್ಮತಿಂ । ಅವಸ್ರವೇದ-
> ಘಶಂಸೋವತರಮವ ಕ್ಷುದ್ರಮಿವ ಸ್ರವೇತ್ ॥
>
> (ಋ. ಸಂ. ೨-೧-೧೬-೧)

ಇಂದು ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಭಾವನಾರ್ಹನಾದ, ಅನ್ನುತದಿಂದ ಸಕಲವನ್ನೂ ವದ್ದೆ ಮಾಡುವ ಇಂದುವಿಗೋಸ್ಕರ ನಾನು, ಮುಂದೆ ಹೇಳುವ ಕರ್ಮ ಅಥವಾ ಸ್ತುತಿಯನ್ನು ಪ್ರಕರ್ಷವಾಗಿ (ಮಾಡಲು) ಹೇಳಲು ಸಮರ್ಥನಾಗಲಿ. ಯಾವ ಇಂದುವು ಹವನಾರ್ಹನಂತೆ ಅನ್ನವಂತನಾಗಿ ಸ್ತುತಿಸುವವರ ಇಷ್ಟಾರ್ಥವನ್ನು ಕೊಡುವುದರ ಮೂಲಕ ಅವರ ಮನಸ್ಸನ್ನು ಅನುಕಂಪಯುಕ್ತವನ್ನಾಗಿ ಮಾಡುತ್ತಾನೋ ಅವನು ರಾಕ್ಷಸರನ್ನು ಬಲದಿಂದ ಸಂಹರಿಸುತ್ತಾ ನಮ್ಮನ್ನು ಅನುಕಂಪಾಯುಕ್ತರನ್ನಾಗಿ ಮಾಡುತ್ತಾನೆ. ಆ ಇಂದುವು ತಾನಾಗಿಯೇ ನಮ್ಮನ್ನು ನಿಂದಿಸುವ ಶತ್ರುಗಳನ್ನು ಜಯಿಸುತ್ತಾನೆ. ಇಂದುವಿನಿಂದ ನಾಶಹೊಂದುವ ಆ ಶತ್ರುಗಳು ನಮ್ಮ ಪಾಪಾದಿಗಳನ್ನು ಹೇಳುತ್ತಾ ಅಧೋಗತಿ ಹೊಂದಲಿ. ನಿಕೃಷ್ಟ ಪ್ರದೇಶವನ್ನು ನೀರು ಹೊಂದುವಂತೆ ಆ ಶತ್ರುಗಳು ಅಧಃ ಪತನವನ್ನು ಹೊಂದಲಿ.

> ಪ್ರಬ್ರವೀಮಿ ತದ್ಭವ್ಯಾಯೇಂದವೇ ಹವನಾರ್ಹ ಇವ ಯದಿಷ-
> ನ್ನವಾನನ್ನವಾನ್ವಾಮವಾನ್ವಾ ಮನನಾನಿ ಚ ನೋ ರೇಜಯತಿ ।
> ರಕ್ಷೋಹಾ ಚ ಬಲೇನ ರೇಜಯತಿ। ಸ್ವಯಂ ಸೋ ಅಸ್ಮದಭಿನಿಂದಿ-
> ತಾರಂ। ವಧೈರಜೇತ ದುರ್ಮತಿಂ। ಅವಸ್ರವೇದಘಶಂಸಃ । ಸತ-
> ಶ್ಚಾವತರಂ ಕ್ಷುದ್ರಮಿವಾವಸ್ರವೇತ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಭವ್ಯ ಅಂದರೆ ಮಹಾಮಹಿಮತ್ವಾದಿಗುಣಗಳಿಂದ ಹವಿಸ್ಸಿಗೆ ಅರ್ಹನು. ಆದರೆ ಹವಿಸ್ಸನ್ನು ಹೊಂದುವುದಿಲ್ಲ. ಹವಿರ್ಭಾಕ್ತ್ವವಿಲ್ಲದಿರುವುದರಿಂದ ಯಜ್ಞದಲ್ಲಿ ಆಹ್ವಾನವಿಲ್ಲ. ಇಷ ಶಬ್ದ ಅನ್ನಪರ್ಯಾಯದಲ್ಲಿ ಹೇಳಿದೆ. (ನಿಘೆ ೨-೭-೧೪) ಕಾಮವುಳ್ಳವನೂ ಆಗುತ್ತಾನೆ ಹೋತ್ರಾದಿಗಳ ಇಷ್ಟಾರ್ಥವನ್ನು ಸಲ್ಲಿಸುವುದರಲ್ಲಿ ಅಭಿಮುಖನಾದವನೆಂದರ್ಥ. ಅಜೇತ. ಅಜ-ಗತಿಕ್ಷೇಪಣಯೋಃ ಧಾತು. ಆರ್ಷವಾಗಿ ಪದವ್ಯತ್ಯಯ ಬಂದಿದೆ. ಶತ್ರುಗಳನ್ನು ಬಲದಿಂದ ದೂರ ಎಸೆಯಲಿ ಎಂದರ್ಥ.

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾ ಅಹೋ ದರ್ಶನೀಯಾ, ಅಹೋ ದರ್ಶನೀಯಾ-ಇತಿ । ತತ್ ಪರುಚ್ಛೇಪಸ್ಯ ಶೀಲಂ ॥**

ಮಂತ್ರದಲ್ಲಿ ರೇಜತಿ, ಪ್ರವೇತ್ ಇತ್ಯಾದಿ ಧಾತುಗಳು ಪುನಃ ಪುನಃ ಹೇಳಿರುವುದಕ್ಕೆ ಸಮಾಧಾನ ತೋರಿಸುತ್ತಾರೆ. ಅಭ್ಯಾಸವೆಂದರೆ ಪುನಃ ಪುನಃ ಪಠಿಸುವುದು. ಶಬ್ದಾಭ್ಯಾಸದಲ್ಲಿ ಬೇರೆ ಯಾವ ವಿಶೇಷವಿಲ್ಲದಿದ್ದರೆ ಆಗ ಮಂತ್ರಾರ್ಥ ತತ್ವವೇತ್ತೃಗಳಾದ ಆಚಾರ್ಯರು ಹೇಳಿದ ಅರ್ಥದ ಅತಿಶಯವನ್ನೇ ತಿಳಿಯುತ್ತಾರೆ. ಇದಕ್ಕೆ ಉದಾಹರಣೆ ತೋರಿಸುತ್ತಾರೆ. ಒಬ್ಬ ಹೆಂಗಸಿನಲ್ಲಿ ಗುಣಾತಿಶಯಗಳಿದ್ದು ಸುಂದರಿಯಾಗಿದ್ದರೆ ಆಗ ಆಹಾದರ್ಶನೀಯಳು ಎಂದು ಎರಡುಬಾರಿ ಹೇಳುತ್ತಾರೆ. ಹೀಗೆಯೇ ಮಂತ್ರದಲ್ಲಿ ಶಬ್ದಾಭ್ಯಾಸ ಬಂದಾಗ ತಿಳಿಯಬೇಕು. ಅರ್ಥಾತಿಶಯವಿರುವಾಗ ಶಬ್ದಾಭ್ಯಾಸದಿಂದ ಹೇಳುವುದು ಪರುಚ್ಛೇಪ ಋಷಿಯ ಸ್ವಭಾವವಾಗಿದೆ. ಅವನು ಯಾವಾಗಲೂ ಅನೇಕಬಾರಿ ಹೇಳಿದ ಶಬ್ದಗಳಿಂದಲೇ ಸ್ತುತಿಸುತ್ತಾನೆ. ಮಂತ್ರದೃಷ್ಟೃ ಋಷಿಗಳ ಸ್ವಭಾವವನ್ನೂ ತಿಳಿಯಬೇಕೆಂದು ಹೀಗೆ ಹೇಳಿದೆ. ಪ್ರಕೃತ ಮಂತ್ರದೃಷ್ಟೃವು ಪರುಚ್ಛೇಪ ಋಷಿಯಾದುದರಿಂದ ಅವನ ಸ್ವಭಾವವು ಇಲ್ಲಿ ವ್ಯಕ್ತವಾಗಿದೆ.

**ಪರುಚ್ಛೇಪ ಋಷಿಃ । ಪರ್ವವಚ್ಛೇಪಃ । ಪರಷಿ ಪರುಷಿ ಶೇಪೋ-ಽಸ್ಯೇತಿ ವಾ ॥**

ಋಷಿಯ ಪರುಚ್ಛೇಪವೆಂಬ ನಾಮದ ನಿರ್ವಚನವನ್ನು ತೋರಿಸುತ್ತಾರೆ. ಪರ್ವದಂತೆ ಜನನಾಂಗವುಳ್ಳವನು ಪರುಚ್ಛೇಪನು. "ಗ್ರಂಥಿರ್ನಾ ಪರ್ವಪರುಷೀ" ಎಂದು ಅಮರ. ಬಿದಿರಿನ ಗಂಟಿಗೆ ಪರ್ವವೆಂದು ಹೆಸರು ಆದರಂತೆ ಲಿಂಗವುಳ್ಳವನು. "ಶಿಶ್ನೋ ಮೇಢ್ರೋ ಮೇಹನಶೇಪಸೀ" ಎಂದು ಅಮರ. ಶೇಪವೆಂಬ ಅಕಾರಾಂತಪದವು ಪುರುಷಜನನಾಂಗ ವಾಚಕವಾಗಿದೆ. ಪರ್ವಶಬ್ದಕ್ಕೆ ಪರುತ್ ಆದೇಶ ಬಂದಿದೆ. ಅಥವಾ ಅಂಗಗಳ ಸಂಧಿ ಸಂಧಿಗಳಲ್ಲಿಯೂ ಲಿಂಗಯೋಗವಿರುವವನು. ಸರ್ವಾಂಗೀಣ ಕಾಮನೆಂದರ್ಥವಾಗುತ್ತದೆ.

**ಇತೀಮಾನಿ ಸಪ್ತವಿಂಶತಿರ್ದೇವತಾನಾಮಧೇಯಾನ್ಯನುಕ್ರಾಂತಾನಿ ॥**

ಇತಿಶಬ್ದ ಪ್ರಕಾರವಾಚಕ. ಪೂರ್ವೋಕ್ತರೀತಿಯಿಂದ ವಾಯುವಿನಿಂದ ಆರಂಭಿಸಿ ಇಂದುವಿನವರೆಗೆ ಇಪ್ಪತ್ತೇಳು ದೇವತಾನಾಮಧೇಯಗಳು ವ್ಯಾಖ್ಯಾತವಾಗಿವೆ. ವಿಶೇಷಜ್ಞಾನಕ್ಕೋಸ್ಕರ ಕ್ರಮವಾಗಿ ಕೀರ್ತಿತವಾಗಿವೆಯೆಂದು ತಾತ್ಪರ್ಯ.

## ಸೂಕ್ತ ಭಾಂಜಿ-ಹವಿರ್ಭಾಂಜಿ ||

ಇಪ್ಪತ್ತೇಳು ದೇವತೆಗಳ ಮಧ್ಯದಲ್ಲಿ ಕೆಲವು ಸೂಕ್ತವನ್ನೂ ಹವಿಸ್ಸನ್ನೂ ಹೊಂದಿರುತ್ತವೆ. ಇನ್ನು ಕೆಲವು ಕೇವಲ ಸೂಕ್ತದಲ್ಲಿ ಹೇಳಿರುವವುಗಳಲ್ಲದೆ ಹವಿಸ್ಸನ್ನು ಹೊಂದುವುದಿಲ್ಲ.

ತೇಷಾಮೇತಾನಹವಿರ್ಭಾಂಜಿ || ವೇನೋಽಸುನೀತಿರ್ಋತ ಇಂದುಃ ||

ಆ ಇಪ್ಪತ್ತೇಳು ದೇವತೆಗಳ ಮಧ್ಯದಲ್ಲಿ ವೇನ, ಅಸುನೀತಿ, ಋತ, ಇಂದು ಹೀಗೆ ನಾಲ್ಕು ದೇವತೆಗಳು ಕೇವಲ ಸೂಕ್ತಗಳಲ್ಲಿ ಮಾತ್ರ ಸ್ತುತಿಸಲ್ಪಟ್ಟಿರುತ್ತಾರೆ. ಹವಿಸ್ಸನ್ನು ಹೊಂದುವುದಿಲ್ಲ. ಆದುದರಿಂದಲೇ ಇಂದು ಪ್ರತಿಪಾದಕ ಮಂತ್ರದಲ್ಲಿ ಘೃತಾದಿಗಳಿಗೆ ಉದಕವೆಂದು ವ್ಯಾಖ್ಯಾನಮಾಡಿದೆ. ಉಳಿದ ಇಪ್ಪತ್ತಮೂರು ದೇವತೆಗಳು ಎರಡನ್ನು ಹೊಂದುತ್ತಾರೆ. ದೇವತಾ ಸ್ವಭಾವ ತಿಳಿಸಲು ಈ ವಿಷಯ ವಿವರಿಸಿದೆ.

ಪ್ರಜಾಪತಿಃ ಪ್ರಜಾನಾಂ ಪಾತಾ ವಾ ಪಾಲಯಿತಾ ವಾ ತಸ್ಯೈಷಾ
ಭವತಿ || ೪೨ ||

ಕ್ರಮಪ್ರಾಪ್ತವಾದ ಪ್ರಜಾಪತಿಪದದ ವ್ಯುತ್ಪತ್ತಿಯನ್ನು ತಿಳಿಸುತ್ತಾರೆ. ಪ್ರಜೆಗಳನ್ನು ರಕ್ಷಿಸುವವನು ಪ್ರಜಾಪತಿ ರಕ್ಷಣೆ ಒಂದೇ ಅರ್ಥವಾದರೂ ಧಾತುವಿಶೇಷಣಗಳಿಂದ ನಾನಾರೀತಿ ನಿರ್ವಚನ ಮಾಡಬಹುದೆಂದು ತೋರಿಸಲು ಎರಡು ಧಾತು ಹೇಳಿದೆ. ಮುಂದಿನ ಮಂತ್ರವು ಪ್ರಜಾಪತಿ ದೇವತಾಸ್ತುತಿಯನ್ನು ಪ್ರತಿಪಾದಿಸುತ್ತದೆ.

ಪ್ರ ತದ್ವೋ॑ಚೇಯಂ ಭವ್ಯಾಯೇಂದವೇ ಹವ್ಯೋ॑ ನ ಯ ಇಷ-
ವಾನ್ಮನ್ಮ ರೇಜತಿ ರಕ್ಷೋ॒ಹಾ ಮನ್ಮ ರೇಜತಿ |
ಸ್ವಯಂ ಸೋ॑ ಅಸ್ಮದಾ ನಿದೋ॑ ವಧೈರಜೇತ ದುರ್ಮತಿಂ |
ಅವ ಸ್ರವೇದಘಶಂಸೋಽವತರಮವ ಕ್ಷುದ್ರಮಿವ ಸ್ರವೇತ್ || ೬ ||

ಅಪರಿಮಿತಾನ್ನದಾಯಕವಾಗಿ, ಆಹೂಯಮಾನನಾದ ಇಂದ್ರನಂತೆ, ಸ್ತುತಿ (ಕರ್ಮ) ಯನ್ನು ಉದ್ದೇಶಿಸಿ ಹೋಗುವುದೂ, ಅಭಿವೃದ್ಧಿಶೀಲವೂ, ಸರ್ವಕ್ಕೂ ಜೀವನಾಧಾರವೂ ಆದ ಸೋಮರಸದ (ಸಾಹಸ) ಕರ್ಮವನ್ನು ಸ್ತುತಿಸೋಣ. ಇಂದ್ರನು ಯಜ್ಞವಿಘಾತಕರಾದ ರಾಕ್ಷಸರನ್ನು ವಧಿಸಿ, ಅವರ ಹಿಂಸಾಕೃತ್ಯಗಳನ್ನು ನಾಶಮಾಡುತ್ತಾನೆ; ಸೋಮರಸವೂ ನಿಂದಕರ ದುರ್ಬುದ್ಧಿಯನ್ನು (ತನ್ನ) ಹನನಾದಿ ಉಪಾಯಗಳಿಂದ, ತಾನೇ, ನಮ್ಮಿಂದ ದೂರಮಾಡಲಿ; ಪಾಪಶಾಂಸಕನಾದ ಕಳ್ಳನು, ಅಲ್ಪವಾದ ಜಲವು ಸ್ರವಿಸಿ (ಅದೃಶ್ಯವಾಗಿ) ಹೋಗುವಂತೆ, ಅಧೋಮುಖನಾಗಿ ಬೀಳಲಿ (ನಾಶವಾಗಲಿ).

ಭವ್ಯಾಯ ಇಂದವೇ ತತ್ ಪ್ರ ವೋಚೇಯಂ —ಭವನಶೀಲಾಯ ಕಲಾಭಿವೃದ್ಧ್ಯಾ ಪ್ರತಿದಿನಂ ವರ್ಧನಶೀಲಾಯ ಅಮೃತೇನ ಸರ್ವಸ್ಯ ಕ್ಲೇದಯಿತ್ರೇ ವಕ್ಷ್ಯಮಾಣಂ ಕರ್ಮ ಸ್ತೋತ್ರಂ ವಾ ಪ್ರಕರ್ಷೇಣ ವಕ್ತುಂ ಶಕ್ತೋ ಭೂಯಾಸಂ | ಇಂದವೇ ದ್ರವತಿ ಇತಿ ಇಂದುದ್ರವಃ ಇಂದ್ರಃ (ನಿ. ೧೧-೮) ಇಂದುವೆಂದರೆ ಸೋಮನು. ಸೋಮರಸವನ್ನು ಪಾನಮಾಡುವು

ದಕ್ಕಾಗಿ ಓಡಿಬರುವವನಾದುದರಿಂದ ಇಂದ್ರನೆಂದು ಇಂದ್ರಶಬ್ದಾರ್ಥನಿರ್ವಚನವನ್ನು ನಿರುಕ್ತಕಾರರು ವಿಮರ್ಶೆಮಾಡಿರುವರು. ಅಥವಾ ಇಂದೌ ರಮತ ಇತಿ ವಾ—ಸೋಮಪಾನದಲ್ಲಿ ವಿಹರಿಸುತ್ತಿರುವವನಾದುದರಿಂದ ಇಂದ್ರನೂ ಎಂದೂ ಹೇಳಿರುವರು. ಈ ನಿರ್ವಚನವನ್ನು ಅನುಸರಿಸಿ ಈ ಋಕ್ಕಿನಲ್ಲಿ ಸೋಮನ ಮಹಿಮೆಯನ್ನು ವಿವರಿಸಿದೆ ಮತ್ತು ಪ್ರಕರಣದಿಂದ ಅವಶ್ಯವಾಗಿ ಹೇಳಬೇಕಾಗಿರುವ ಇಂದ್ರನ ಮಾಹಾತ್ಮ್ಯವನ್ನು ವರ್ಣಿಸಿದೆ.

ಆಯಾಯ ದಿನಗಳಲ್ಲಿ ಉದಯವನ್ನು ಹೊಂದಿರುವವನೂ, ತನ್ನ ಕಲೆಗಳ ಅಭಿವೃದ್ಧಿಯಿಂದ ವೃದ್ಧಿಯನ್ನೂ ಹೊಂದುತ್ತಿರುವವನೂ ಆದ ಮತ್ತು ಅಮೃತವನ್ನು ಎಲ್ಲರಿಗೂ ಬೀರುತ್ತಾ ಎಲ್ಲರನ್ನೂ ಆನಂದಗೊಳಿಸುವವನೂ ಆಗಿರುವ (ವಿಷಯವಾದ) ಮಹಿಮೆಯು ಪ್ರಭೂತವಾಗಿರುವುದರಿಂದ ಸೋಮ ಸಂಬಂಧಿಯಾದ ಕರ್ಮವನ್ನಾಗಲೀ ವಿಶದಪಡಿಸಲು ಸಮರ್ಥನಾದೇನು ಎಂದು ಮಂತ್ರದ್ರಷ್ಟೃವಾದ ಋಷಿಯು ಹೇಳಿರುವನು ಎಂದು ವರ್ಣಿಸಿದೆ. ನಿರುಕ್ತಕಾರರು—

ಇಂದು ರಿಂಧೇರುನತ್ತೇರ್ವಾ—ಎಂದು ಇಂದು ಪದಕ್ಕೆ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು ದೀಪ್ತಿ ಎಂಬ ಅರ್ಥವನ್ನು ಬೋಧಿಸುವ ಇಂಧಿ ಧಾತುವಿನಿಂದಲಾಗಲಿ, ಕ್ಲೇದನವೆಂಬ ಅರ್ಥವನ್ನು ಬೋಧಿಸುವ ಊಞ್‌ಧಾತುವಿನಿಂದಲಾಗಲಿ, ಇಂದು ಪದವು ನಿಷ್ಪನ್ನವಾಗಿದೆ, ಚಂದ್ರನೆಂದು ಅರ್ಥ ಎಂದು ಹೇಳಿದ್ದಾರೆ. ಮತ್ತು ನಿರುಕ್ತಕಾರರು ಇದೇ ಋಕ್ಕನ್ನು ಉದಹರಿಸಿ,

> ಪ್ರಬ್ರವೀಮಿ ತದ್ಭವ್ಯಾಯೇಂದವೇ ಹವನಾರ್ಹ ಇವ ಯ ಇಷಾವಾನನ್ನವಾನ್ ಕಾಮವಾನ್ ವಾ ಮನನಾನಿ ಚ ನೋ ರೇಜಯತಿ ರಕ್ಷೋಹಾ ಚ ಬಲೇನ ರೇಜಯತಿ ಸ್ವಯಂ ಸೋ ಅಸ್ಮದಭಿನಿಂದಿತಾರಂ | ವಧೈರಜೇತ ದುರ್ಮತಿಂ | ಅವಸ್ರವೇದಘಶಂಸಃ | ತತಶ್ಚಾವತರಂ ಕ್ಷುದ್ರಮಿವಾವಸ್ರವೇತ್ | ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಮತ್ತು,
>
> ಅಭ್ಯಾಸೇ ಭೂಯಾಂ ಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ | ತತ್ಪರುಚ್ಛೇಪಸ್ಯ ಶೀಲಂ ||
>
> (ನಿ. ೧೦–೪೨)

ಎಂದೂ ಹೇಳಿರುವರು. ದುರ್ಗಾಚಾರ್ಯರು—

ಚಂದ್ರನಿಗೆ ಪ್ರೀತಿಕರವಾದ ಮಾತುಗಳನ್ನು ಹೇಳುತ್ತೇನೆ ಈ ವಚನವೂ ಚಂದ್ರನ ಪ್ರೀತಿಯನ್ನು ಸಂಪಾದಿಸುವುದಾಗಿ ಇರುವುದು. ಚಂದ್ರನು ಇಷ್ಟಗಳನ್ನು ಅಪೇಕ್ಷಿಸುವವರ ಅಭಿಲಾಷೆಗಳನ್ನು ನೆರವೇರಿಸುವನು. ಆದ್ದರಿಂದ ಆತ್ಮವಂತನಾಗಿರುವನು ಎಂದು ಒಂದು ವಿಧವಾದ ಅರ್ಥ. ಧ್ಯಾನಾಸ್ಪದನಾಗಿರುವಂತೆ ಹವಿಸ್ಸಿನಿಂದಲೇ ಭಾವನೆಯನ್ನು ಹೊಂದಲ್ಪಡುವುದಕ್ಕೆ ಅರ್ಹನು. ಹವಿರ್ಭಾಗಿಯಲ್ಲದಿರುವುದರಿಂದ ಭಾವಿಸಲ್ಪಡುವುದಿಲ್ಲ ಎಂದು ಎರಡನೆಯ ಅರ್ಥ.

ಹೋಮದಿಂದ ಆಹುತಿಯನ್ನು ಹೊಂದುವ ದೇವತೆಯಂತೆ, ಯಜ್ಞದಿಂದ ಪುನಃ ಆಹ್ವಾನಿತನಾಗುವುದಿಲ್ಲ. ಯಾವಾಗಲೂ ಇವನು ಅನ್ನವುಳ್ಳವನಾಗಿಯೂ, (ಕಾಮಿಗಳಾದವರಿಗೆ) ಕಾಮವುಳ್ಳವರಿಗೆ ಅವರವರ ಇಷ್ಟಗಳನ್ನು ನೆರವೇರಿಸಿಕೊಡುವವನಾಗಿಯೂ ಇರುವನು. ಇದರಿಂದ ನಮ್ಮ ಪ್ರಜ್ಞಾನವನ್ನೂ ಸೆಳೆಯುವನು. ಆದರೆ ನಮ್ಮ ಮನಸ್ಸುಗಳನ್ನು ಕಾಮೋನ್ಮುಖ

ವಾಗಿ ಮಾಡುವ ಇವನನ್ನು ಸ್ತುತಿಸಬಾರದೆಂದು ಆಶಂಕೆಯು ಉಂಟಾಗುವುದು. ಇವನು ರಾಕ್ಷಸರುಗಳನ್ನು ತನ್ನ ಸಾಮರ್ಥ್ಯದಿಂದ ನಾಶಮಾಡುವನು.

ಮತ್ತು ಇವನು (ನಮ್ಮನ್ನು ನಿಂದಿಸುವವರನ್ನು) ನಮ್ಮ ನಿಂದಕರನ್ನು ವಜ್ರಾಯುಧದಿಂದ ಪ್ರಹರಿಸಿ ಜಯಿಸುವನು. ನಮ್ಮಲ್ಲಿ ಕೆಟ್ಟಮನಸ್ಸುಳ್ಳವರನ್ನೂ ನಾಶಮಾಡುವನು, ನಮ್ಮನ್ನು ದೂಷಿಸುವವನು ಆಯಾಯ ಪ್ರದೇಶಗಳಲ್ಲಿ ಪ್ರಸಿದ್ಧ ನಾಗಿದ್ದರೂ ಅಧೋಗತಿಯನ್ನು ಹೊಂದುವನು. ಸ್ವಲ್ಪಮಟ್ಟಿಗೆ ವೃದ್ಧಿಯನ್ನು ಹೊಂದಿದ ದ್ರವ್ಯವು ಕೊಂಚಕೊಂಚವಾಗಿ ನಾಶವಾಗುತ್ತಾ ಸಂಪೂರ್ಣವಾಗಿ ನಾಶವಾಗುವ ಹಾಗೆ ನಮ್ಮಲ್ಲಿ ನೀಚಬುದ್ಧಿಯಿಂದ ಇರುವವನೂ ಕೂಡ ಕ್ರಮಕ್ರಮವಾಗಿ ಅಧೋಗತಿಯನ್ನು ಹೊಂದುವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು ಈ ಪರುಚ್ಛೇಪಋಷಿಯು ಶಬ್ದಗಳನ್ನು ಆವೃತ್ತಿಮಾಡಿ ಹೇಳುವುದರಿಂದ ಅರ್ಥವು ಅತಿಶಯವಾಗಿರುವುದೆಂದು ಯಾಸ್ಕರು ವಿವರಿಸಿ ಅಹೋ ದರ್ಶನೀಯಾ ಅಹೋ ದರ್ಶನೀಯಾ ಎಂದು ದೃಷ್ಟಾಂತವನ್ನೂ ಉದಾಹರಿಸಿರುತ್ತಾರೆ.

ಮನ್ಮ-ಮನನೀಯಂಸ್ತೋತ್ರಂ ಕರ್ಮ ವಾ ।

ಉಪ ಪ್ರಾಗಾತ್ಸುಮನ್ಮೇಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।
ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥

(ಋ. ಸ. ೧-೧೬೨-೭)

ಈ ಋಕ್ಕಿನಲ್ಲಿ ಮನ್ಮ ಶಬ್ದಕ್ಕೆ ಮನನೀಯಂ ಅರ್ಥಜಾತಂ—ಧ್ಯಾನಮಾಡಲು ಅರ್ಹವಾದದ್ದೆಂದು ಅರ್ಥವನ್ನು ವಿವರಿಸಿದೆ.

ಎರಡನೆಯ ಮನ್ಮ ಶಬ್ದಕ್ಕೆ ತೇಷಾಮೇವ ಕರ್ಮ ಹನನಾದಿರೂಪಂ—ಯಜ್ಞ ವಿಘ್ನಕರ್ತೃಗಳಾದ ರಾಕ್ಷಸರನ್ನು ನಿಗ್ರಹಮಾಡುವ ಕರ್ಮವೆಂದು ಅರ್ಥವನ್ನು ಹೇಳಿದೆ.

ಅಘಶಂಸಃ ಅವತರಂ ಅವಸ್ರವೇತ್—ಅಘಾನಾಂ ಪಾಪಾನಾಂ ಹಿಂಸಾದೀನಾಂ ಶಂಸಿತಾ ಸ್ತೇನಃ ಅತ್ಯಂತನಿಕೃಷ್ಟಂ ಅವ..ಬ್ಕಮಖೋ ಭೂತ್ವಾ ಅಧಃ ಪತತು । ಪಾಪಕರ್ಮಗಳನ್ನು ಹಿಂಸೆಯೇ ಮೊದಲಾದವುಗಳನ್ನೂ ಆಚರಿಸುವ ಕಳ್ಳನೂ, ತಾನು ಇರುವ ಸ್ಥಿತಿಗಿಂತಲೂ (ಕಡಿಮೆಯಾಗಿರುವ) ನೀಚವಾದ ಸ್ಥಿತಿಯನ್ನು ಹೊಂದಲಿ ಎಂದು ಪ್ರಾರ್ಥಿಸಿದೆ. ಈ ವಿಷಯದಲ್ಲಿ ಕ್ಷುದ್ರಮಿವ—ಕ್ಷೇಪ್ತುಂ ಶಕ್ಯಮುದಕಾದಿಕಮಿವ (ಎಸೆಯಲು) ಬಿಸಾಡಲು ಅರ್ಹವಾದ ನೀರೇ ಮೊದಲಾದುವುಗಳಹಾಗೆ ಎಂದು ದೃಷ್ಟಾಂತವನ್ನು ಉದಹರಿಸಿದೆ. (ನೀರು) ಉದಕವು ತಾನು ಇರುವ ಪ್ರದೇಶದಿಂದ ಸ್ರವಿಸುತ್ತಾ ಕ್ರಮಕ್ರಮವಾಗಿ ನಾಶ ನಾಗುವಹಾಗೆ ಕಳ್ಳನೂ ನಾಶವನ್ನು ಹೊಂದುವನೆಂದು ವಿವರಿಸಿದೆ. ಅಘಶಂಸ ಶಬ್ದವೂ ತೃಪುಃ ತಕ್ವಾ ಎಂಬ ಹದಿನಾಲ್ಕು ಸ್ತೇನನಾಮಗಳಲ್ಲಿ (ನಿ. ೩-೧೯) ಪಠಿತವಾಗಿದೆ. ಮತ್ತೂ—

**ಇಂದ್ರಾಸೋಮಾ ಸಮಘಶಂಸಮಭ್ಯಘಂ ತಪುರ್ಯಯಸ್ತು ಚರುರಗ್ನಿವಾ ಇವ ।**
**ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ॥**

(ಋ. ಸಂ. ೭-೧೦೪-೨)

ಈ ಋಕ್ಕನ್ನು ಉದಹರಿಸಿ ಯಾಸ್ಕರು **ಅಘಶಂಸಂ ಅಭ್ಯಘಂ** ಎಂಬ ಪದಗಳಿಗೆ **ಅಘಸ್ಯ ಶಂಸಿತಾರಂ, ಅಘಂ ಹಂತೇ ರ್ನಿರ್ಹ್ರಸಿತೋಪಸರ್ಗ ಆಹಂತೀತಿ** । ಎಂದು ವ್ಯಾಖ್ಯಾನ ಮಾಡಿದ್ದಾರೆ. ದುರ್ಗಾಚಾರ್ಯರು **ಅಘಸ್ಯ ಶಂಸಿತಾರಂ—**

ಪಾಪಗಳನ್ನು ಪ್ರಶಂಸಿಸುವನು. ಅಭ್ಯಧಿಂ ಪಾಪಗಳನ್ನೇ ಆಚರಿಸುವುದಕ್ಕಾಗಿ ತನ್ನ ಜೀವಿತಕಾಲವನ್ನು ಉಪಯೋಗಿಸುವವನು ಎಂದು ಅರ್ಥವನ್ನು ವಿವರಿಸಿರುವರು

ಈರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಹತ್ತನೆಯ ಅಧ್ಯಾಯದಲ್ಲಿ
ನಲವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

•••••••••

## ಅಥ ತ್ರಿಚತ್ವಾರಿಂಶತ್ ಖಂಡಃ

## ನಲವತ್ತಮೂರನೆಯ ಖಂಡವು

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ । (ಋ. ಸಂ. ೧೦-೧೨೧-೧೦) ॥ ಪ್ರಜಾಪತೇ ನ ಹಿ ತ್ವದೇತಾನ್ಯನ್ಯಃ ಸರ್ವಾಣಿ ಜಾತಾನಿ ತಾನಿ ಪರಿಬಭೂವ ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮಿತ್ಯಾಶೀರಹಿರ್ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೪೩ ॥

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ
ಬಭೂವ ॥ ಯತ್ಕಾಮಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ
ಪತಯೋ ರಯೀಣಾಂ ॥ (ಋ. ಸಂ. ೮-೭-೫).

(ವಾ. ಸಂ. ೧೦-೨೦, ೨೩-೬೫).

ಪ್ರಜಾಪತಿಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಜಾಪತಿದೇವನೇ ನಿನ್ನಿಂದ ಬೇರೆ ಯಾರೂ ಈ ತೋರತಕ್ಕ ಸಕಲ ವಿಶ್ವವನ್ನೂ, ಮೊದಲು ಉಂಟಾದ ಭೂತಜಾತಗಳನ್ನೂ ವ್ಯಾಪಿಸಿದವರಿಲ್ಲ. ನೀನೊಬ್ಬನೇ ಸಕಲವನ್ನೂ ಪರಿಗ್ರಹಿಸಿ ಧರಿಸಿರುವ ಸಕಲೇಶ್ವರನಾದುದರಿಂದಲೇ ನಾವು ಯಾವ ಫಲದಿಂದ ನಿನಗೆ ಹವಿಸ್ಸನ್ನು ಸಮರ್ಪಿಸುವೆವೋ ಆ ಫಲವು ನಮಗಾಗಲಿ. ನಾವು ನಿನ್ನ ಅನುಗ್ರಹದಿಂದ ಧನಪತಿಗತಿಳಾಗಲಿ.

ಪ್ರಜಾಪತೇ ನ ಹಿ ತ್ವದೇತಾನ್ಯನ್ಯಃ ಸರ್ವಾಣಿ ಜಾತಾನಿ ತಾನಿ
ಪರಿಬಭೂವ । ಯತ್ಕಾಮಾಸ್ತೇ ಜುಹಮಸ್ತನ್ನೋ ಅಸ್ತು-ವಯಂ
ಸ್ಯಾಮ ಪತಯೋ ರಯೀಣಾಂ ಇತ್ಯಾಶೀಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪ್ರಜಾಪತಿದೇವತೆಯನ್ನು ಸ್ತುತಿಸಿ ಎರಡು ಆಶೀಃ ಪ್ರಾರ್ಥನೆ ಮಾಡಿವೆ. ಇತಿ ಎಂಬುದು ಎರಡನೆಯ ಆಶೀಃ ಪ್ರಾರ್ಥನೆಯನ್ನು ತಿಳಿಸುತ್ತದೆ. ರಯಿ ಧನಪರ್ಯಾಯದಲ್ಲಿ ಹೇಳಿದೆ (ನಿಘ. ೩-೧೦-೪).

ಅಹಿರ್ವ್ಯಾಖ್ಯಾತಃ । ತಸ್ಯೈಷಾ ಭವತಿ ॥ ೪೩ ॥

ಕ್ರಮಪ್ರಾಪ್ತವಾದ ಅಹಿಃ ಶಬ್ದದ ನಿರ್ವಚನ ತೋರಿಸುತ್ತಾರೆ. ಅಹಿರಯನಾತ್ (ನಿ. ೨-೧೭) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ. ಗಮನವುಳ್ಳದ್ದರಿಂದ ಅಹಿ ಎಂದಾಗಿದೆ. ಇಣ್ ಧಾತುವಿಗೆ ಇನ್‌ಪ್ರತ್ಯಯ ಬಂದಾಗ ಗುಣ, ಅಯಾದೇಶ ವ್ಯತ್ಯಯದಿಂದ ಯಕಾರಕ್ಕೆ ಹಕಾರ. ಇಲ್ಲಿ ಅಹಿಶಬ್ದ ಮಧ್ಯಮದೇವ ವಾಚಕವಾಗಿದೆ. ಮುಂದೆ ಹೇಳುವ ಮಂತ್ರವು ಅಹಿಸ್ತುತಿ ಪ್ರಪಾದಕವಾಗುತ್ತದೆ.

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ॥ ೧೦ ॥

ಎಲೈ ಪ್ರಜಾಪತಿಯೇ, ಈಗಿರುವ ಸಮಸ್ತವಾದ ಮತ್ತು ಪ್ರಥಮಸೃಷ್ಟಿರೂಪವಾದ ಪಂಚಮಹಾ ಭೂತಾದಿಗಳನ್ನು ಸೃಷ್ಟಿಮಾಡಲು ಉದ್ಯುಕ್ತರಾಗುವವರು ನಿನ್ನನ್ನು ಬಿಟ್ಟರೆ ಮತ್ತೊಬ್ಬರಿಲ್ಲ. ಯಾವ ಅಭೀಷ್ಟಸಿದ್ಧಿಗಾಗಿ ನಾವು ನಿನಗೆ ಹವಿಸ್ಸನ್ನು ಅರ್ಪಿಸುವೆವೋ ಅಂತಹ ಫಲವು ನಮಗೆ ದೊರೆಯಲಿ. ನಾವೂ ಸಹ ಧನಗಳಿಗೆ ಒಡೆಯರಾಗುವಂತಾಗಲಿ.

ಇಳಾದಧವೆಂಬ ಇಷ್ಟಿಯಲ್ಲಿ ಪ್ರಜಾಪತಿ ದೇವತೆಯನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ ಪ್ರಜಾಪತೇ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಪ್ರಾಜಾಪತ್ಯ ಇಳಾದಧಃ ಪ್ರಜಾಪತೇ ನ ತ್ವದೇತಾನ್ಯನ್ಯಃ ಎಂಬ ಸೂತ್ರದಿಂದ (ಆ. ೨-೧೪) ವಿವೃತವಾಗಿರುವುದು. ದೇವತೆಗಳಿಗೆ ಹೋಮಮಾಡಿ ಅರ್ಪಿಸುವ ಹವಿರ್ದ್ರವ್ಯಗಳಲ್ಲಿ ಕೂದಲು ಉಗುರು, ಕ್ರಿಮಿ, ಹುಳುಗಳು ಮೊದಲಾದ ದುಷ್ಟ ಪದಾರ್ಥಗಳು ಮಿಶ್ರವಾಗಿದ್ದಲ್ಲಿ ಹವಿಸ್ಸುಗಳನ್ನು ಈ ಪ್ರಜಾಪತೇ ಎಂಬ ಋಕ್ಕನ್ನು ಪಠಿಸಿ ನೀರಿನಲ್ಲಿ ಇಡಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಅಪೋಽಭ್ಯವಹರೇಯುಃ ಪ್ರಜಾಪತೇ ನ ತ್ವದೇತಾನ್ಯನ್ಯಃ ಎಂಬ ಸೂತ್ರದಿಂದ (ಆ-೩-೧೦) ವಿವೃತವಾಗಿರುವುದು. ಮತ್ತು ಚೌಲಾದಿಗೃಹ್ಯಕರ್ಮಗಳಲ್ಲಿ ಹೋಮಾರ್ಥವಾಗಿ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಗೃಹ್ಯಸೂತ್ರದ—ತೇಷಾಂ ಪುರಸ್ತಾಚ್ಚತಸ್ರ ಆಜ್ಯಾಹುತೀರ್ಜುಹುಯಾದಗ್ನ ಆಯೂಂಷಿ ಪವಸ ಇತಿ ತಿಸೃಭಿಃ ಪ್ರಜಾಪತೇ ನ ತ್ವದೇತಾನ್ಯನ್ಯ ಇತಿ ಚ ಎಂಬ ಸೂತ್ರದಿಂದ (ಆ. ಗೃ. ೧-೪-೪) ವಿವೃತವಾಗಿರುವುದು.

ಪ್ರಜಾಪತಿಶಬ್ದದ ಅರ್ಥವಿವರಣೆ ಮಾಡುವಾಗ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

ಪ್ರಜಾಪತಿಃ । ಪ್ರಜಾಪತಿಃ ಪ್ರಜಾನಾಂ ಪಾತಾ ವಾ ಪಾಲಯಿತಾ ವಾ ॥ ತಸ್ಯೈಷಾ ಭವತಿ ॥

(ನಿ. ೧೦-೪೨)

ಪ್ರಜಾಪತಿಶಬ್ದಕ್ಕೆ—ಪ್ರಜೆಗಳ ಸಂರಕ್ಷಕನು ಪ್ರಜೆಗಳನ್ನು ಪಾಲಿಸುವವನು ಎಂದರ್ಥವು. ಕೆಳಗಿನ ಋಕ್ಕು ಪ್ರಜಾಪತಿಯ ವಿಷಯವಾಗಿರುವುದು.

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ॥

ಪ್ರಜಾಪತೇ ನ ಹಿ ತ್ವದೇತಾನ್ಯನ್ಯಃ ಸರ್ವಾಣಿ ಜಾತಾನಿ ತಾನಿ ಪರಿ ಬಭೂವ ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮಿತ್ಯಾಶೀಃ ॥ (ನಿ. ೧೦-೪೩)

ಎಲೈ ಪ್ರಜಾಪತಿಯೇ, ನಿನ್ನನ್ನು ಬಿಟ್ಟರೆ ಮತ್ತೆ ಯಾರೂ ಸೃಷ್ಟಿಸಲ್ಪಟ್ಟಿರುವ ಈ ವಸ್ತು ಸಮೂಹಗಳನ್ನೂ ದೇವತಾರೂಪ ಗಳನ್ನು ಒಳಗೂ ಹೊರಗೂ ವ್ಯಾಪಿಸಿರುವವನು ಇರುವುದಿಲ್ಲ ನಾವು ಯಾವ ಕೋರಿಕೆಗಳನ್ನು ಬಯಸಿ ಅವುಗಳ ಪ್ರಾಪ್ತಿಗಾಗಿ ನಿನಗೆ ಹವಿಸ್ಸನ್ನೂ ಅರ್ಪಿಸುವೆವೋ ಆ ಕೋರಿಕೆಗಳೆಲ್ಲವೂ ನಮಗೆ ಸಿದ್ಧಿಸಲಿ. ನಾವು ಬಹಳವಾದ ಧನಗಳಿಗೆ ಒಡೆಯರಾಗು ವಂತಾಗಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು. ಈ ಋಕ್ಕು ಆಶೀರ್ವಾದರೂಪವಾಗಿರುವುದೆಂದು ಯಾಸ್ಕರು ಹೇಳಿರುವರು.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ನಲವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುಶ್ಚತ್ವಾರಿಂಶತ್ ಖಂಡಃ

## ನಲವತ್ತನಾಲ್ಕನೆಯ ಖಂಡವು

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್ (ಋ. ಸಂ. ೭-೩೪-೧೬) ॥ ಅಪ್ಸುಜೇಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸೂದಕೇಷುಸೀದನ್ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್ಧೃತಾ ಆಪ ಇತಿ ವೇದಮುಪೀ- ತರದ್ ಬುಧ್ನಮೇತಸ್ಮಾದೇವ ಬದ್ಧಾ ಅಸ್ಮಿನ್‌ಧೃತಾಃ ಪ್ರಾಣಾ ಇತಿ ಯೋಽಹಿಃ ಸ ಬುಧ್ನ್ಯೋ ಬುಧ್ನಮಂತರಿಕ್ಷಂ ತನ್ನಿವಾಸಾತ್ತಸ್ಯೈಷಾ ಭವತಿ ॥ ೪೪ ॥

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಸೀದನ್ ॥

(ಋ. ಸಂ. ೫-೩-೨೯).

ಅಹಿಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಸ್ತೋತೃವೇ ನೀನು ಉದಕ ನಿಮಿತ್ತವಾದ ಈ ಕರ್ಮದಲ್ಲಿ ಅಂಗಭಾವವನ್ನು ಹೊಂದುತ್ತಾ, ನೀರಿನಲ್ಲಿ ಹುಟ್ಟಿರುವ, ನದಿಗಳ ನೀರನ್ನು ಅಂತರಿಕ್ಷದಲ್ಲಿ ಅಂಗಭಾವವನ್ನು ಹೊಂದುತ್ತಾ,

ನೀರಿನಲ್ಲಿ ಹುಟ್ಟಿರುವ, ನದಿಗಳ ನೀರನ್ನು ಅಂತರಿಕ್ಷದಲ್ಲಿ ಕಟ್ಟಿರುವ ಮೇಘವನ್ನು ಹೊಡೆಯುವ ಈ ಮಧ್ಯಮದೇಹನಾದ ಅಹಿಯನ್ನು ಸ್ತೋತ್ರಗಳಿಂದ ಸ್ತುತಿಸುವಿ.

ಅಪ್ಸುಜಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಉದಕೇಷು ಸೀದನ್ । ಬುಧ್ನಮಂತರಿಕ್ಷಂ, ಬದ್ಧಾ ಅಸ್ಮಿನ್‌ಧೃತಾ ಆಪ ಇತಿ ವಾ । ಇದಮಪೀತರದ್ಬುಧ್ನಮೇತಸ್ಮಾದೇವ, ಬಧ್ಧಾ ಅಸ್ಮಿನ್‌ಧೃತಾಃ ಪ್ರಾಣಾ ಇತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬುಧ್ನ ಅಂದರೆ ಅಂತರಿಕ್ಷ ಇದರಲ್ಲಿ ನೀರು ಧರಿಸಲ್ಪಡುತ್ತದೆ. ಈ ಶರೀರವೂ ಬುಧ್ನ ವಾಗುತ್ತದೆ. ಇದರಿಂದಲೇ ಅಥವಾ ಈ ದೇಹದಲ್ಲಿ ಪ್ರಾಣಗಳು ಬದ್ಧವಾಗಿವೆ. ಪೃಷೋದರಾದಿಗಣ ಪಠಿತವಾದುದರಿಂದ ಇಷ್ಟರೂಪಸಿದ್ಧಿಯಾಗುತ್ತದೆ.

ಯೋಽಹಿಃ ಸ ಬುಧ್ನ್ಯಃ । ಬುಧ್ನಮಂತರಿಕ್ಷಂ ತನ್ನಿವಾಸಾತ್ । ತಸ್ಯೈಷಾ ಭವತಿ ॥ ೪೪ ॥

ಅಹಿರ್ಬುಧ್ನಪದದ ನಿರ್ವಚನವನ್ನು ತೋರಿಸುತ್ತಾರೆ. ಅಹಿದೇವನೇ ಅಹಿರ್ಬುಧ್ನ್ಯನಾಗುತ್ತಾನೆ. ನಾಮಭೇದವಲ್ಲದೆ ಅರ್ಥಭೇದವಿಲ್ಲ. ಅಹಿ ಯಾರೋ ಅವನೇ ಬುಧ್ನ್ಯನು. ಬುಧ್ನ ಅಂದರೆ ಅಂತರಿಕ್ಷವೆಂದು ಹಿಂದೆ ಹೇಳಿದೆ. ಅಂತರಿಕ್ಷವನ್ನು ಹೊಂದಿರುವವನು. ಬುಧ್ನಮರ್ಹತಿ ಎಂಬರ್ಥದಲ್ಲಿ ಯತ್‌ಪ್ರತ್ಯಯ. ಮುಂದೆ ಹೇಳುವ ಮಂತ್ರವು ಅಹಿರ್ಬುಧ್ನ್ಯ ಸ್ತುತಿ ಪ್ರತಿಪಾದಕವಾಗುತ್ತದೆ.

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್
॥ ೧೬ ॥

ಮೇಘಗಳನ್ನು ಸೀಳುವವನೂ, ಉದಕಗಳಿಗೆ ಸ್ಥಾನವಾದ ಅಂತರಿಕ್ಷದಲ್ಲಿರುವ ಉದಕಗಳಲ್ಲಿ ಸ್ಥಿತನಾಗಿರುವವನೂ, ಉದಕಗಳಲ್ಲಿ ಉತ್ಪನ್ನನಾದವನೂ ಆದ ಅಗ್ನಿಯನ್ನು ಸ್ತೋತ್ರಗಳಿಂದ ಸ್ತುತಿಸುತ್ತೇನೆ.

ಬುಧ್ನೇ—ಬುಧ್ನಶಬ್ದಕ್ಕೆ ಯಾಸ್ಕರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ—

ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್ ಧೃತಾ ಆಪ ಇತಿ ವಾ ।
ಇದಮಪೀತರತ್ ಬುಧ್ನಮೇತಸ್ಮಾದೇವ । ಬದ್ಧಾ ಅಸ್ಮಿನ್ ಧೃತಾಃ ಪ್ರಾಣಾ ಇತಿ ॥
(ನಿ. ೧೦–೪೪)

ಬುಧ್ನವೆಂದರೆ ಅಂತರಿಕ್ಷವು. ಏಕೆಂದರೆ ಈ ಅಂತರಿಕ್ಷದಲ್ಲಿ ಮೇಘರೂಪದಿಂದ ಉದಕಗಳು ತಡೆದು ನಿಲ್ಲಿಸಲ್ಪಟ್ಟಿರುತ್ತವೆ

ಅಥವಾ ಈ ಅಂತರಿಕ್ಷದಲ್ಲಿ ಉದಕಗಳು (ಆವಿಯ ರೂಪದಿಂದ ಅಥವಾ ಮೇಘರೂಪದಿಂದ) ಧರಿಸಲ್ಪಡುತ್ತವೆ. ಆದ್ದರಿಂದ ಬುಧ್ನವೆಂದರೆ ಅಂತರಿಕ್ಷವು.

ಬುಧ್ನವೆಂದರೆ ಶರೀರವೆಂಬ ಇನ್ನೊಂದು ಅರ್ಥವೂ ಇರುವುದು. ಏಕೆಂದರೆ ಶರೀರದಲ್ಲಿ ಪ್ರಾಣಗಳು ಧರಿಸಲ್ಪಟ್ಟಿರುವುವು. ಎಂದರೆ ಪ್ರಾಣಗಳು ಇರಲು ಅವಕಾಶವನ್ನೀಯುವ ಶರೀರಕ್ಕೆ ಬುಧ್ನವೆಂದು ಹೆಸರು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ನಲವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಪಂಚಚತ್ವಾರಿಂಶತ್ ಖಂಡಃ

## ನಲವತ್ತೈದನೆಯ ಖಂಡವು

ಮಾ ನೋಽಹಿರ್ಬುಧ್ನ್ಯೋ ರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ (ಋ. ಸಂ. ೭-೩೪-೧೭) ‖ ಮಾ ಚ ನೋಽಹಿರ್ಬುಧ್ನ್ಯೋ ರೇಷಣಾಯ ಧಾನ್ಮಾಸ್ಯ ಯಜ್ಞೋಖಾ ಚ ಸ್ರಿಧದ್ಯಜ್ಞಕಾಮಸ್ಯ ಸುಪರ್ಣೋ ವ್ಯಾಖ್ಯಾತಸ್ತಸ್ಯೈಷಾ ಭವತಿ ‖ ೪೫ ‖

ಮಾ ನೋಽಹಿರ್ಬುಧ್ನ್ಯೋರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ ‖

(ಋ. ಸಂ. ೫–೩–೨೬)

ಅಹಿರ್ಬುಧ್ನ್ಯ ದೇವಸ್ತುತಿ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಈ ಅಂತರಿಕ್ಷವಾಸಿಯಾದ ಅಹಿರ್ಬುಧ್ನ್ಯನು ನಮ್ಮನ್ನು ಹಿಂಸಿಸುವ ಯಾವ ಶತ್ರುವಿಗೂ ಎನನ್ನೂ ಕೊಡದಿರಲಿ. ಇವನ ಅನುಗ್ರಹದಿಂದ ಯಜ್ಞಕಾಮನಾದ ಯಜಮಾನನ ಯಜ್ಞವು ನಿತ್ಯವೂ ವಿನಾಶವಿಲ್ಲದಿರಲಿ.

ಮಾ ಚ ನೋಽಹಿರ್ಬುಧ್ನ್ಯೋ ರೇಷಣಾಯ ಧಾನ್ಮಾಸ್ಯ ಯಜ್ಞೋಖಾ ಚ ಸ್ರಿಧದ್ಯಜ್ಞಕಾಮಸ್ಯ ‖

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇಲ್ಲಿ ಯಜ್ಞಪದದಿಂದ ಯಜ್ಞ ಮತ್ತು ಯಜ್ಞೋಖಾ ಎರಡೂ ವಿವಕ್ಷಿತವಾಗಿವೆ. ಯಜ್ಞ ಪ್ರಸಿದ್ಧವಾಗಿದೆ. ಆದರ ಉಖಾ ಅಂದರೆ ಒಂದು ಪಾತ್ರವಿಶೇಷ. ಇದರಲ್ಲಿ ಸಂಸ್ಕೃತವಾದ ಮುಖ್ಯವಾದ ಹವಿಸ್ಸು ಇರುತ್ತದೆ. ಯಜ್ಞಸಂಬಂಧಿಯಾದುದರಿಂದ ಪಾತ್ರೆಯೂ ಯಜ್ಞಶಬ್ದದಿಂದಲೇ ಅಭಿಹಿತವಾಗಿದೆ.

ಸುಪರ್ಣೋ ವ್ಯಾಖ್ಯಾತಃ । ತಸ್ಯೈಷಾ ಭವತಿ ॥ ೪೫ ॥

ಕ್ರಮಪ್ರಾಪ್ತವಾದ ಸುಪರ್ಣಪದದ ನಿರ್ವಚನವನ್ನು ತೋರಿಸುತ್ತಾರೆ. ಸುಪರ್ಣಾಃ ಸುಪತನಾಃ (ನಿ. ೩-೧೨) ಎಂದು ಇದು ರಶ್ಮಿನಾಮಮಧ್ಯದಲ್ಲಿ ವ್ಯಾಖ್ಯಾತವಾಗಿದೆ. ಇಲ್ಲಿ ಮಧ್ಯಮದೇವವಾಚಕವಾಗಿದೆ ಮುಂದೆ ಹೇಳುವ ಮಂತ್ರವು ಸುಪರ್ಣಸ್ತುತಿಯನ್ನು ಪ್ರತಿಪಾದಿಸುತ್ತದೆ.

ಮಾ ನೋಽಹಿರ್ಬುಧ್ನ್ಯೋ ರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ ॥

ಅಹಿರ್ಬುಧ್ನ್ಯಸಂಜ್ಞಕನಾದ ಅಗ್ನಿಯು ನಮ್ಮನ್ನು ಹಿಂಸಿಸುವ ಇಚ್ಛೆಯನ್ನು ಹೊಂದದಿರಲಿ. ಈ ಯಜಮಾನನ ಯಜ್ಞದ ಪ್ರಭಾವವು ಕ್ಷಯಿಸದಿರಲಿ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹತ್ತನೆಯ ಅಧ್ಯಾಯದಲ್ಲಿ

ನಲವತ್ತೈದನೆಯ ಖಂಡವು ಮುಗಿದಿದೆ.

## ಅಥ ಷಟ್‌ಚತ್ವಾರಿಂಶತ್ ಖಂಡಃ

## ನಲವತ್ತಾರನೆಯ ಖಂಡವು

ಏಕಃ ಸ್ತುಪರ್ಣಃ ಸ ಸಮುದ್ರಮಾ ವಿವೇಶ ಸ ಇದಂ ವಿಶ್ವಂ ಭುವನಂ ವಿ ಚಷ್ಟೇ । ತಂ ಪಾಕೇನ ಮನಸಾಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಂ (ಋ. ಸಂ. ೧೦-೧೧೪-೪) ॥ ಏಕಃ ಸುಪರ್ಣಃ ಸ ಸಮುದ್ರ ಮಾವಿಶತಿ ಸ ಇಮಾನಿ ಸರ್ವಾಣಿ ಭೂತಾನ್ಯಭಿಪಶ್ಯತಿ ತಂ ಪಾಕೇನ ಮನಸಾ ಪಶ್ಯಮಂತಿತ ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ ತಂ ಮಾತಾರೇಳ್ಹಿ ವಾಗೇಷಾ ಮಾಧ್ಯಮಿಕಾ ಸ ಉ ಮಾತರಂ ರೇಳ್ಹಿ ಪುರೂರವಾ ಬಹುಧಾರೋರೂಯತೇ ತಸ್ಯೈಷಾ ಭವತಿ ॥ ೪೬ ॥

ಏಕಃ ಸುಪರ್ಣಃ ಸ ಸಮುದ್ರಮಾವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ। ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಂ ॥

(ಋ. ಸಂ. ೮-೬-೧೬)

ಸುಪರ್ಣಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಅದ್ವಿತೀಯನಾದ ಮಧ್ಯಮಸ್ಥಾನನಾದ ಸುಪತನಸ್ವಭಾವವುಳ್ಳ ವಾಯುದೇವನು ಅಂತರಿಕ್ಷವನ್ನು ವ್ಯಾಪಿಸಿರುತ್ತಾನೆ. ಆವನು ಸಕಲಭೂತಗಳನ್ನೂ ಪ್ರವೇಶಿಸಿ ಅವುಗಳನ್ನು ಅನುಗ್ರಹದೃಷ್ಟಿಯಿಂದ ನೋಡುತ್ತಿರುತ್ತಾನೆ. ಈ ರೀತಿಯಾದ ದೇವನನ್ನು ನಾನು ವಿಪಕ್ವಪ್ರಜ್ಞಾನದಿಂದ ಹತ್ತಿರದವನಂತೆ ನೋಡಿದೆನು. ಉದಕನಿರ್ಮಾತೃವಾದ ಮಾಧ್ಯಮವಾಕ್ ಅವನನ್ನು ಆಸ್ವಾದಿಸುತ್ತದೆ. ಅವನು ವಾಕ್ಕನ್ನು ಆಸ್ವಾದಿಸುತ್ತಾನೆ. ಪರಸ್ಪರಾಶ್ರಯಕವಾಗಿ ಅವರ ವ್ಯಾಪ್ಯಾರ ನಡೆಯುತ್ತದೆಂದು ತಾತ್ಪರ್ಯ.

ಏಕಃ ಸುಪರ್ಣಃ ಸ ಸಮುದ್ರಮಾವಿಶತಿ ಸ ಇಮಾನಿ ಸರ್ವಾಣಿ ಭೂತಾನ್ಯಭಿವಿಪಶ್ಯತಿ, ತಂ ಪಾಕೇನ ಮನಸಾಽಪಶ್ಯಮಂತಿತಃ। ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ । ತಂ ಮಾತಾ ರೇಳ್ಹಿ ವಾಗೇಷಾ ಮಾಧ್ಯಮಿಕಾ ಸ ಉ ಮಾತರಂ ರೇಳ್ಹಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಮುದ್ರ ಅಂತರಿಕ್ಷನಾಮದಲ್ಲಿ(ನಿಘ. ೧-೩-೧೫) ಪಠಿತವಾಗಿದೆ. ದೃಷ್ಟ ದೇವತಾಸತತ್ವವುಳ್ಳ ಋಷಿಯು ಇದನ್ನು ಒಬ್ಬನಿಗೆ ವಿವರಿಸುತ್ತಾನೆ. ಈ ವಿಷಯ ಹಿಂದೆ (ನಿ. ೧೦-೧೦, ೧ರುಕ್ತದಲ್ಲಿ ವಿವೃತವಾಗಿದೆ.

ಪುರೂರವಾಃ-ಬಹುಧಾ ರೋರೂಯತೇ । ತಸ್ಯೈಷಾ ಭವತಿ ॥ ೪೬ ॥

ಪುರೂರವಾಃ ಕ್ರಮಪ್ರಾಪ್ತವಾಗಿದೆ. 'ಪ್ರಾಣ ಏವ ಹಿ ಪುರೂರವಾಃ' ಎಂದುದರಿಂದ ಇವನು ಮಧ್ಯಮದೇವನಾದ ವಾಯುವಾಗುತ್ತಾನೆ. ಇವನು ನಾನಾಪ್ರಕಾರವಾಗಿ ಅಂತರಿಕ್ಷದಲ್ಲಿ ಶಬ್ದಮಾಡುತ್ತಾನೆ. ಪುರುಶಬ್ದ ಉಪಪದವಾಗಿರುವಾಗ ಭೃಶಾರ್ಥವಿಶಿಷ್ಟ ರುಧಾತುವಿಗೆ ಅಸುನ್‌ಪ್ರತ್ಯಯ ಬಂದಾಗ ಪೂರ್ವಪದಕ್ಕೆ ದೀರ್ಘ. ಪುರುಶಬ್ದ ನಾನಾರ್ಥವಾಚಕವಾಗಿದೆ. ಮುಂದೆ ಹೇಳುವ ಮಂತ್ರವು ಪುರೂರವಸ್ತುತಿಯನ್ನು ಪ್ರತಿಪಾದಿಸುತ್ತದೆ.

ಏಕಃ ಸುಪರ್ಣಃ ಸ ಸಮುದ್ರಮಾ ವಿವೇಶ ಸ ಇದಂ ವಿಶ್ವಂ ಭುವನಂ ವಿ ಚಷ್ಟೇ । ತಂ ಪಾಕೇನ ಮನಸಾಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಂ ॥

ಸಮಸ್ತ ಕಾರ್ಯಗಳನ್ನೂ ಯಾರ ಸಹಾಯವೂ ಇಲ್ಲದೆ ಮಾಡುವವನೂ, ಸರ್ವತ್ರ ಸಂಚರಿಸಬಲ್ಲವನೂ ಆದ ಸುಪರ್ಣನೆಂಬ ದೇವನು ಅಂತರಿಕ್ಷವನ್ನು ಪ್ರವೇಶಿಸಿ ಆಲ್ಲಿ ಸಂಚರಿಸುತ್ತಾನೆ. ಮತ್ತು ಸಮಸ್ತ ಪ್ರಾಣಿವರ್ಗವನ್ನೂ ಅನುಗ್ರಹ

ಬುದ್ಧಿಯಿಂದ ನೋಡುತ್ತಾನೆ. ಅಂತಹ ದೇವನನ್ನು ನಾನು ಪರಿಪಕ್ವವಾದ (ಎಂದರೆ ಭಕ್ತಿಯುತವಾದ) ಬುದ್ಧಿಯಿಂದ ನಾನು ಸಮೀಪದಲ್ಲಿಯೇ ನೋಡಿದೆನು. ಉದಕಗಳ ನಿರ್ಮಾತ್ರಿಯೂ ಮತ್ತು ಮಧ್ಯಮಸ್ಥಾನ ದೇವತೆಯೂ ಆದ ವಾಗ್ದೇವತೆಯು ಆ ಸುಪರ್ಣಾಖ್ಯದೇವನನ್ನೂ, ಆ ಸುಪರ್ಣದೇವನು ಆ ವಾಗ್ದೇವತೆಯನ್ನೂ ಪರಸ್ಪರ ಆಶ್ರಯಿಸಿ ಅಂತರಿಕ್ಷದಲ್ಲಿ ವಾಸಿಸುತ್ತಾರೆ.

ಆಧಾರರಹಿತನೂ, ಸಂಚಾರಶೀಲನೂ ಎಂದರೆ ಸರ್ವತ್ರ ವ್ಯಾಪಿಸಿರುವವನೂ ಆದ ಪ್ರಾಣವಾಯುವು ಅಥವಾ ಪರಮಾತ್ಮನು ಅಂತರಿಕ್ಷವನ್ನು ಅಥವಾ ಚಲನ ಸ್ವಭಾವವುಳ್ಳ ಪ್ರಾಣಿವರ್ಗವನ್ನು (ಪ್ರಾಣ) ವಾಯುರೂಪದಿಂದ ಪ್ರವೇಶಿಸುತ್ತಾನೆ. ಪ್ರಾಣಿಗಳ ಶರೀರಗಳನ್ನು ಪ್ರವೇಶಿಸಿದನಂತರ ಆ ಪರಮಾತ್ಮನು ಈ ಸಮಸ್ತ ಜಗತ್ತನ್ನೂ ಎಂದರೆ ಸಕಲ ಭೂತ ಜಾತವನ್ನೂ ಚೇತನಾಯುಕ್ತರನ್ನಾಗಿ ಮಾಡುತ್ತಾನೆ. ಅಂತಹ ಆ ಪರಮಾತ್ಮನನ್ನು ನಾನು ಅತ್ಯಂತ ಸಮೀಪದಲ್ಲಿ ಎಂದರೆ ಮನಸ್ಸಿನ ಸಹಾಯದಿಂದ ನೋಡಿದೆನು. ವಾಗ್ದೇವತೆ ಎಂದರೆ ಮಾತನಾಡುವ ಶಕ್ತಿಯು ಪ್ರಾಣಿಜಾತಕ್ಕೆ ಪ್ರಾಣವಾಯುವಿರುವವರೆಗೆ ಇರುತ್ತದೆ. ಪ್ರಾಣವ್ಯಾಪಾರವೂ ಸಹ ವಾಗ್ವ್ಯವಹಾರದೊಡನೆ ಮಿಳಿತವಾಗಿಯೇ ಇರುತ್ತದೆ. ಪ್ರಾಣವಿರುವವರೆಗೆ ವಾಕ್ಕು ಶರೀರದೊಡನೆ ಸಹಕರಿಸುತ್ತದೆ. ನಿದ್ರಾಕಾಲದಲ್ಲಿ ವಾಗ್ವ್ಯವಹಾರವಿರುವುದಿಲ್ಲ. ಪ್ರಾಣವ್ಯವಹಾರವು ಮಾತ್ರ ಇರುವುದು ಕಂಡುಬರುತ್ತದೆ.

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ಏಕಃ ಸುಪರ್ಣಃ ಸ ಸಮುದ್ರಮಾವಿಶತಿ ಸ ಇಮಾನಿ ಸರ್ವಾಣಿ ಭೂತಾನ್ಯಭಿವಿಪಶ್ಯತಿ ತಂ ಪಾಕೇನ ಮನಸಾಪಶ್ಯಮಂತಿತ ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ· ತಂ ಮಾತಾ ರೇಢಿ ವಾಗೇಷಾ ಮಾಧ್ಯಮಿಕಾ ಸ ಉ ಮಾತರಂ ರೇಢಿ ॥

(ನಿ. ೧೦–೪೬)

ಇಲ್ಲಿ ಏಕಃ ಎಂದರೆ ಅದ್ವಿತೀಯನು, ಇವನಂತೆ ಸಾಮರ್ಥ್ಯವುಳ್ಳವರು ಯಾರೂ ಇಲ್ಲ. ಅಸಾಧಾರಣವಾದ ಶಕ್ತಿ ಸಾಮರ್ಥ್ಯವುಳ್ಳವನು ಎಂದರ್ಥವು. ಸುಪರ್ಣಃ ಶ್ರೇಷ್ಠವಾದ ಗಮನವುಳ್ಳವನು ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವನು ಇವನಂತೆ ಗಮನಶೀಲರಾದವರು ಮತ್ತೊಬ್ಬರಿಲ್ಲ. ಇಂತಹ ವಾಯುವು (ಅಥವಾ ಪ್ರಾಣವಾಯುವು ಅಥವಾ ಪರಮಾತ್ಮನು) ಅಂತರಿಕ್ಷವನ್ನು ಅಥವಾ ಪ್ರಾಣಿಜಾತವನ್ನು ಪ್ರವೇಶಿಸುತ್ತಾನೆ. ಪ್ರವೇಶಮಾಡಿದನಂತರ ಆ ಪ್ರಾಣಿಗಳನ್ನು ನೋಡುತ್ತಾನೆ, ನೋಡುವಂತೆ ಮಾಡುತ್ತಾನೆ ಎಂದರೆ ಚೇತನಾಯುಕ್ತರನ್ನಾಗಿ ಮಾಡಿ ಅವುಗಳು ತಮ್ಮ ತಮ್ಮ ವ್ಯವಹಾರಗಳಲ್ಲಿ ಪ್ರೇರಿತವಾಗುವಂತೆ ಮಾಡುತ್ತಾನೆ. ಇಂತಹ ಗುಣವಿಶಿಷ್ಟನಾದ ಈ ದೇವನನ್ನು ನಾನು ಪಕ್ವವಾದುದೂ ಪ್ರಜ್ಞಾನಯುಕ್ತವಾದುದೂ ಆದ ಮನಸ್ಸಿನಿಂದ ನನ್ನ ಸಮೀಪದಲ್ಲಿಯೇ (ಹೃದಯಾಕಾಶದಲ್ಲಿಯೇ) ನೋಡಿದೆನು (ಎಂದು ಋಷಿಯು ತನ್ನ ಬಳಿ ಇರುವ ಮತ್ತೊಬ್ಬ ಪುರುಷನಿಗೆ ಹೇಳುತ್ತಾನೆ.) ಅಂತರಿಕ್ಷದಲ್ಲಿ ವ್ಯಾಪಿಸಿರುವ ಈ ವಾಯುವು ಅಥವಾ ಪರಮಾತ್ಮನು ತಾನು ಪ್ರವೇಶಮಾಡಿದ ಭೂತಜಾತಗಳೊಡನೆ ಅನ್ಯೋನ್ಯಾಶ್ರಯದಿಂದ ವರ್ತಿಸುತ್ತ ಸಹಕರಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ನಲವತ್ತಾರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತಚತ್ವಾರಿಂಶತ್ ಖಂಡಃ

### ನಲವತ್ತೇಳನೆಯ ಖಂಡವು

ಸಮಸ್ಮಿಞ್ಜಾಯಮಾನ ಆಸತ ಗ್ನಾ ಉತೇಮವರ್ಧನ್ನದ್ಯಃ ೧ ಸ್ವಗೂರ್ತಾಃ | ಮಹೇಯತ್ತ್ವಾ ಪುರೂರವೋ ರಣಾಯಾವರ್ಧಯನ್ದಸ್ಯುಹತ್ಯಾಯ ದೇವಾಃ (ಋ. ಸಂ. ೧೦-೯೫-೭) || ಸಮಾಸತಾಸ್ಮಿಞ್ಜಾಯಮಾನೇ ಗ್ನಾ ಗಮನಾದಾಪೋ ದೇವಪತ್ನ್ಯೋ ವಾಪಿ ಚೈನಮವರ್ಧಯನ್ನದ್ಯಃ ಸ್ವಗೂರ್ತಾಃ ಸ್ವಯಂಗಾಮಿನ್ಯೋ ಮಹತೇ ಚ ಯತ್ತ್ವಾ ಪುರೂರವೋ ರಣಾಯ ರಮಣೀಯಾಯ ಸಂಗ್ರಾಮಾಯಾವರ್ಧಯನ್ದ-ಸ್ಯುಹತ್ಯಾಯ ಚ ದೇವಾ ದೇವಾಃ || ೪೭ ||

ಸಮಸ್ಮಿನ್ ಜಾಯಮಾನ ಆಸತ ಗ್ನಾ ಉತೇಮವರ್ಧನದ್ಯಃ ಸ್ವಗೂ-
ರ್ತಾಃ | ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ದ-
ಸ್ಯು ಹತ್ಯಾಯ ದೇವಾಃ ||

(ಋ. ಸಂ. ೮–೫–೨)

ಪುರೂರವಸ್ಸುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಈ ಪುರೂರವಸ್ಸು ವೃಷ್ಟಿಕರ್ಮವನ್ನು ಪ್ರಾರಂಭಿಸಲು ವರ್ಷಾಕಾಲದಲ್ಲಿ ನೀರೆಲ್ಲಾ ಬಂದು ಇವನನ್ನು ಸೇರುತ್ತವೆ. (ವಿಧೇಯವಾಗಿರುತ್ತವೆ.) ನದಿಯ ನೀರು ಸ್ವಯಂಗಾಮಿಗಳಾಗಿ ಇವನನ್ನು ವೃದ್ಧಿಪಡಿಸುತ್ತವೆ. ಎಲೈ ಪುರೂರವಸ್ಸೇ ನಿನ್ನನ್ನು ಮೇಘದೊಡನೆ ಮಹತ್ತಾದ ಸಂಗ್ರಾಮಕ್ಕೋಸ್ಕರ, ಮೇಘ ವಧೆಗೋಸ್ಕರ ಮಾಧ್ಯಮಿಕ ದೇವತೆಗಳು ಪುಷ್ಟಿಗೊಳಿಸುತ್ತವೆ.

ಸಮಾಸತಾಸ್ಮಿಞ್ಜಾಯಮಾನೇ ಗ್ನಾ ಗಮನಾದಾಪೋ-ದೇವಪತ್ನ್ಯೋ
ವಾ | ಅಪಿ ಚೈನಮವರ್ಧಯನ್ನದ್ಯಃ ಸ್ವಗೂರ್ತಾಃ ಸ್ವಯಂ
ಗಾಮಿನ್ಯೋ ಮಹತೇ ಚ ಯತ್ವಾ ಪುರೂರವೋ ರಣಾಯ
ರಮಣೀಯಾಯ ಸಂಗ್ರಾಮಾಯಾವರ್ಧಯನ್ | ದಸ್ಯುಹತ್ಯಾಯ
ಚ ದೇವಾ ದೇವಾಃ || ೪೭ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಗಮನಸ್ವಭಾವದಿಂದ ಗ್ನಾ ಅಂದರೆ ನೀರು. ಗಮ್ ಧಾತುವಿಗೆ ನ ಪ್ರತ್ಯಯ ಬಂದಾಗ ಟಲೋಪ. ಗ್ನಾ ಪದಕ್ಕೆ ದೇವಪತ್ನಿಯರು ಎಂಬ ಅರ್ಥವೂ ಇದೆಯೆಂದು ಬೇರೆಯಾಗಿ ತೋರಿಸಿರುತ್ತಾರೆ. ಇತಿಹಾಸಾದಿಗಳಲ್ಲಿ ಈ ಅರ್ಥವು ಪ್ರಸಿದ್ಧವಾಗಿದೆ. ದೇವಪತ್ನಿಯರು ಐಲಪುರೂರವಸ್ಸಿನಲ್ಲಿ ಬಂದು ಸೇರಿದರು. ಪ್ರಸವಿಸಿದ ಸ್ತ್ರೀಯನ್ನು ಇತರ ಸ್ತ್ರೀಯರು ನೋಡಲು ಬಂದು ಸುತ್ತುಗಟ್ಟುವುದು ಲೋಕಪ್ರಸಿದ್ಧಿ. ಅದರಂತೆ ಇತರರ ಪ್ರೇರಣೆಯಿಲ್ಲದೆ ಇವರು ಬಂದು

ಸ್ತುತಿಸಿದರು. ದೇವತೆಗಳ ಶತ್ರುವಾದ ಅಸುರನಾಶಕ್ಕೋಸ್ಕರವೂ ಇತರ ಶತ್ರುನಾಶಕ್ಕೋಸ್ಕರವೂ ಪುರೂರವ ರಾಜನನ್ನು ಹುರಿದುಂಬಿಸಿ ಸ್ತುತಿಸಿದರು. ಈ ಅರ್ಥವೂ ತೋರುತ್ತದೆ. ಅಧ್ಯಾಯ ಸಮಾಪ್ತಿ ಸೂಚಿಸಲು ದೇವಾಃ ಎಂದು ಪುನರಾವೃತ್ತಿ ಮಾಡಿದೆ.

ಸಮಸ್ಮಿಞ್ಜಾಯಮಾನ ಆಸತ ಗ್ನಾ ಉತೇಮವರ್ಧನ್ನದ್ಯಃ ಸ್ವಗೂರ್ತಾಃ ।
ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ದಸ್ಯುಹತ್ಯಾಯ
ದೇವಾಃ ॥ ೭ ॥

(ಉರ್ವಶೀ) ಈ ಪುರೂರವನು ಉತ್ಪನ್ನನಾಮೊಡನೆಯೇ, ದೇವತಾಸ್ತ್ರೀಯರು ಇವನನ್ನು ಸುತ್ತುವರಿದರು. ಸ್ವಯಂ ಗಾಮಿಗಳಾದ ನದಿಗಳು ಇವನನ್ನು ಪುಷ್ಟಿಗೊಳಿಸಿದವು. ಎಲೈ ಪುರೂರವನೇ, ಮಹತ್ತಾದ ಯುದ್ಧಕ್ಕಾಗಿಯೂ, ದಸ್ಯುಜನರ ನಾಶಕ್ಕಾಗಿಯೂ ನಿನ್ನನ್ನು ದೇವತೆಗಳು ಪುಷ್ಟನಾಗಿ ಬೆಳೆಯುವಂತೆ ಮಾಡಿದರು.

ಪುರೂರವಾಃ ಎಂಬ ಶಬ್ದದ ಪ್ರಯೋಗವಿರುವ ಋಕ್ಕಿನ ಉದಾಹರಣೆಗಾಗಿ ಈ ಋಕ್ಕಿನಲ್ಲಿ ಯಾಸ್ಕರು ನಿರ್ವಚನ ವನ್ನು ಹೇಳಿದಾರೆ—

ಸಮಾಸತಾಸ್ಮಿಞ್ಜಾಯಮಾನೇ ಗ್ನಾ ಗಮನಾದಾಪಃ । ದೇವಪತ್ನ್ಯೋ ವಾಪಿ ಚೈನಮವರ್ಧಯನ್ನದ್ಯಃ ಸ್ವಗೂರ್ತಾಃ ಸ್ವಯಂಗಾಮಿನ್ಯೋ ಮಹತೇ ಚ ಯತ್ತ್ವಾ ಪುರೂರವೋ ರಣಾಯ ರಮಣೀಯಾಯ ಸಂಗ್ರಾಮಾಯಾ ವರ್ಧಯನ್ ದಸ್ಯುಹತ್ಯಾಯ ಚ ದೇವಾ ದೇವಾಃ ॥ (ನಿ- ೧೦–೪೭)

ಈ ಪುರೂರವನು ಹುಟ್ಟಿದಕೂಡಲೆ ದೇವಪತ್ನಿಯರೆಲ್ಲರೂ ಒಟ್ಟಿಗೆ ಒಂದು ಕಡೆ ಸೇರಿ ಇವನನ್ನು ವೃದ್ಧಿಗೊಳಿಸಿದರು (ಬೆಳೆಸಿದರು) ಅಥವಾ ಗ್ನಾ ಎಂಬ ಶಬ್ದಕ್ಕೆ ಗಮನಾದಾಪಃ ಹರಿಯುವ ಸ್ವಭಾವವಿರುವುದರಿಂದ ಉದಕಗಳಿಗೆ ಗ್ನಾ ಎಂದು ಹೆಸರು (ಮೇಲೆ ದೇವಪತ್ನಿಯರೆಂದು ಅರ್ಥಮಾಡಿದೆ) ಇಂತಹ ಉದಕಗಳಿಂದ ಪೂರ್ಣವಾದ ಮತ್ತು ಸ್ವಯಂ ಪ್ರವಹಿಸುವ ನದಿಗಳು ಈ ಪುರೂರವನನ್ನು ವೃದ್ಧಿಗೊಳಿಸಿದವು ಎಂದು ಇಲ್ಲಿ ಹೇಳಿದೆ. ಈ ಸಂದರ್ಭದಲ್ಲಿ ಪುರೂರವ ಶಬ್ದಕ್ಕೆ ಬಹಳವಾದ ಶಬ್ದಮಾಡುವ ಸಿಡಿಲು ಎಂದರೆ ಮಧ್ಯಮಾಗ್ನಿಯೆಂದು ಅರ್ಥವನ್ನು ಹೇಳಬೇಕಾಗುವುದು. ಇಂತಹ ಈ ಮಧ್ಯಮಾಗ್ನಿಯನ್ನು ನದಿಗಳು ಎಂದರೆ ಉದಕಗಳು (ನದನಾ ಅಪಃ) ವರ್ಷಾಕಾಲದಲ್ಲ ವೃದ್ಧಿಯಾಗುವಂತೆ ಮಾಡಿದವು ಎಂದು ಅರ್ಥವನ್ನು ಹೇಳಬಹುದು

ಇನ್ನು ಉತ್ತರಾರ್ಧದಲ್ಲಿ ಸೂಚಿತವಾಗಿರುವ ವಿಷಯದಲ್ಲಿಯೂ ಎರಡು ವಿಧವಾದ ಅರ್ಥವನ್ನು ಹೇಳಬಹುದು ದೇವತಾಸ್ತ್ರೀಯರು ನದಿಗಳು ಮತ್ತು ದೇವತೆಗಳು ಆಗತಾನೆ ಹುಟ್ಟಿದ ಈ ಪುರೂರವನನ್ನು ರಮಣೀಯವಾದ ಯುದ್ಧಗಳಲ್ಲಿ ಶತ್ರುಗಳೊಡನೆ ಹೋರಾಡುವುದಕ್ಕೂ ದಸ್ಯುಜನರನ್ನು ಸಂಹರಿಸುವುದಕ್ಕೂ ಪೋಷಿಸಿ ಬೆಳಸಿದರು ಎಂದು ಒಂದು ವಿಧವಾದ ಅರ್ಥವು.

ಪುರೂರವ ಎಂದರೆ ಅಧಿಕವಾದ ಶಬ್ದವನ್ನು ಮಾಡುವ ಸಿಡಿಲು ಮಿಂಚು (ಮಧ್ಯಮಾಗ್ನಿ) ಯೆಂಬ ಅರ್ಥದಲ್ಲಿ ಈ ಪುರೂರವನನ್ನು ಮೇಘಗಳೊಡನೆ ಘರ್ಜನೆಮಾಡಿ ಯುದ್ಧಮಾಡುವುದಕ್ಕೂ, ಮೇಘ (ದಸ್ಯು) ವಧಕ್ಕಾಗಿಯೂ ದೇವತೆಗಳು ವೃದ್ಧಿಯನ್ನೈದುವಂತೆ ಮಾಡಿದರು ಎಂದು ಇನ್ನೊಂದು ವಿಧವಾದ ಅರ್ಥವು.

ಮುಖ್ಯಾಭಿಪ್ರಾಯವೇನೆಂದರೆ—ಈ ಋಕ್ಕಿನಲ್ಲಿ ಪುರೂರವಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಲಾಗಿದೆ. ಪುರೂರವ ಎಂಬ ರಾಜನು ಮತ್ತು ಅಂತರಿಕ್ಷದಲ್ಲಿರುವ ಮಿಂಚು ಅಥವಾ ಮಧ್ಯಮಾಗ್ನಿಯು. ಈ ಮಧ್ಯಮಾಗ್ನಿಯು (ಸಿಡಿಲು) ಬಹಳವಾಗಿ ಶಬ್ದಮಾಡುವುದರಿಂದ ಇದನ್ನು ಪುರು-ಬಹಳ ರವ-ಶಬ್ದಮಾಡುವ ಎಂಬ ಹೆಸರಿನಿಂದ ಇಲ್ಲಿ ಕರೆಯಲಾಗಿದೆ.

ಪುರೂರವನು ರಾಜನೆಂಬ ಅರ್ಥದಲ್ಲಿ—ಈ ರಾಜನು ಹುಟ್ಟಿದ ಕೂಡಲೆ ಇವನನ್ನು ದೇವತಾಸ್ತ್ರೀಯರು, ನದ್ಯಭಿಮಾನಿ ದೇವತೆಗಳೂ ಎಲ್ಲರೂ ಒಟ್ಟಾಗಿ ಸೇರಿ ಇವನು ಮುಂದೆ ರಾಜನಾಗಿ ಯುದ್ಧದಲ್ಲಿ ಶತ್ರುಗಳನ್ನು ಜಯಿಸುವುದಕ್ಕೂ ದಸ್ಯುಜನರನ್ನು ಸಂಹರಿಸುವುದಕ್ಕೂ ಅನುಕೂಲವಾಗಲೆಂದು ಇವನನ್ನು ಪೋಷಿಸಿ ಬೆಳೆಸಿದರು ಎಂದಭಿಪ್ರಾಯವು.

ಪುರೂರವನು ಮಧ್ಯಮಾಗ್ನಿಯೆಂಬ ಅರ್ಥದಲ್ಲಿ ವರ್ಷಾಕಾಲದಲ್ಲಿ ಮೇಘರೂಪದಲ್ಲಿರುವ ಉದಕಗಳು (ಗ್ನಾಃ ಮತ್ತು ನದ್ಯಃ) ಬಹಳ ಶಬ್ದಮಾಡುತ್ತಾ ಮೇಘಗಳನ್ನು ಪ್ರಹರಿಸುತ್ತಾ ಇರುವ ಈ ಮಧ್ಯಮಯಾಗ್ನಿಯನ್ನು ವೃದ್ಧಿಯಾಗುವಂತೆ ಮಾಡಿದನು. ಎಂದರೆ ವರ್ಷಾಕಾಲದಲ್ಲಿ ಮೇಘಗಳ ಮಧ್ಯೆ ಕಾಣಿಸಿಕೊಳ್ಳುವ ಮಿಂಚು ಅಥವಾ ಮಧ್ಯಮಾಗ್ನಿಯು ಆಗಾಗ ಘರ್ಜನೆಮಾಡುತ್ತಾ ಮೇಘಗಳನ್ನು ಪ್ರಹರಿಸುತ್ತಾ (ಯುದ್ಧಮಾಡುತ್ತಾ) ವೃದ್ಧಿಯನ್ನೈದುತ್ತಿರುವುದು ಎಂದಭಿಪ್ರಾಯವು.

ಅಥಾತೋಮಧ್ಯಸ್ಥಾನಾವಾಯುರ್ವಾಯೂಹ್ಯಾ ಸ ಸ್ರಾಣಾಸೋ ನೀಚೀನವಾರಂ ತಮೂಷ್ವಿಮಾ ರುದ್ರಾಯಯಾತೇ ದಿದ್ಯುಜ್ಜರಾವ ಬೋಧಾದರ್ದರ್ಯೋ ಜಾತೋ ವಿವಿಕ್ಷಾನಶ್ಮಾಪಿನದ್ಧಮಶ್ಮಾಸ್ಯಮವತಂ ಕ್ಷೇತ್ರಸ್ಯಪತಿಃ ಕ್ಷೇತ್ರಸ್ಯಪತಿನಾ ಕ್ಷೇತ್ರಸ್ಯಪತೇಽ ಮೀವಹಾ ಪುನರೇಹಿಯೋ ಅನಿಧ್ಮಪರೋಽಯಿವಾಂಸಂ ಸೇನೇವಸೃಷ್ಟಾ ಮಿತ್ರೋಜನಾನ್ ಹಿರಣ್ಯಗರ್ಭೋಽಯೇತೇ ಸರಸ್ವೋ ವಿಶ್ವಕರ್ಮಾಸರ್ವಸ್ಯ ವಿಶ್ವಕರ್ಮಾವಿಮನಾ ವಿಶ್ವಕರ್ಮನ್ಹವಿಷಾತ್ಯ ಮೂಷು ಸದ್ಯಶ್ಚಿತ್ವ ಯಾಮನ್ಯೋ ಆದಧಿಕ್ರಾಃ ಸವಿತಾಹಿರಣ್ಯಸ್ತೂಪೋ ದೇವಸ್ತ್ವಷ್ಟಾವಂತ ಆವಾತು ಪ್ರತಿತ್ಯಮಭಿತ್ವಾವೇನೋಽವೇನತೇರಯಂ ವೇನೋಽಸುನೀತ ಋತಸ್ಯ ಹಿ ಪ್ರತದ್ವೋಚೇಯಂ ಪ್ರಜಾಪತೇಬ್ಜಾಮುಕ್ಥ್ಯಮಾನೋಹಿ ರೇಕಃ ಸುಪರ್ಣಃ ಸಮಸ್ಮಿನ್ತ್ಸಪ್ತಚತ್ವಾರಿಂಶತ್ ||

ಇತಿ ನಿರುಕ್ತ ಉತ್ತರಷಟ್ಕೇ ಚತುರ್ಥೋಽಧ್ಯಾಯಃ

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹತ್ತನೆಯ ಅಧ್ಯಾಯದಲ್ಲಿ

ನಲವತ್ತೇಳನೆಯ ಖಂಡವು ಸಮಾಪ್ತವಾಗಿದೆ.

ಹತ್ತನೆಯ ಅಧ್ಯಾಯ ಸಮಾಪ್ತವಾಗಿದೆ.

# ನಿರುಕ್ತಂ

## ಅಥ ಏಕಾದಶಾಧ್ಯಾಯಃ

### ಪ್ರಥಮ ಖಂಡಃ

### ಒಂದನೆಯ ಖಂಡವು

ಓಂ । ಶ್ಯೇನೋ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೧ ॥

ಮಧ್ಯಮಾಭಿಧಾನವುಳ್ಳ ಶ್ಯೇನ ಮುಂತಾದ ಮೂವತ್ತಾರು ಪದಗಳನ್ನು ಹೇಳುತ್ತಾರೆ. ಅವುಗಳಲ್ಲಿ ಶ್ಯೇನವೆಂಬುದು ಮೊದಲನೆಯ ಪದ. ಶ್ಯೇನಃ ಶಂಸನೀಯಂ ಗಚ್ಛತಿ (ನಿ. ೪-೨೪) ಎಂದು ಅಶ್ವನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. ಇಲ್ಲಿ ಮಧ್ಯಮಸ್ಥಾನವುಳ್ಳವನೆಂದು ತಿಳಿಯಬೇಕು. ಶ್ಯೇನ ಪದದಿಂದ ತೋರುವ ಇಂದ್ರನ ಸ್ತುತಿಯನ್ನು ಮುಂದೆ ಹೇಳುವ ಋಙ್ಮಂತ್ರವು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ

ಒಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಿತೀಯಃ ಖಂಡಃ

### ಎರಡನೆಯ ಖಂಡವು

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾ ಅಯುತಂ ಚ ಸಾಕಂ। ಅತ್ರಾಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ । (ಋ. ಸಂ. ೪-೨೬-೭) ॥ ಆದಾಯ ಶ್ಯೇನೋಽಹರತ್ಸೋಮಂ ಸಹಸ್ರಂ ಸವಾನಯುತಂ ಚ ಸಹ ಸಹಸ್ರಂ ಸಹಸ್ರಸಾವ್ಯಮಭಿಪ್ರೇತ್ಯ ತತ್ರಾಯುತಂ ಸೋಮಭಕ್ಷಾಸ್ತತ್ಸಂಬಂಧೇನಾಯುತಂ ದಕ್ಷಿಣಾ ಇತಿ ವಾ ತತ್ರ ಪುರಂಧಿರಜಹಾದಮಿತ್ರಾನದಾನಾನಿತಿ ವಾ । ಮದೇ ಸೋಮಸ್ಯ ಮೂರಾ ಅಮೂರ ಇತ್ಯೈಂದ್ರೇ ಚ ಸೂಕ್ತೇ ಸೋಮಪಾನೇನ ಚ ಸ್ತುತಸ್ತಸ್ಮಾದಿಂದ್ರಂ

ಮನ್ಯಂತ ಓಷಧಿಃ ಸೋಮಃ ಸುನೋತೇರ್ಯದೇನಮಭಿಷುಣ್ವಂತಿ ಬಹುಲಮಸ್ಯ ನೈಘಂಟುಕಂ ವೃತ್ತಮಾಶ್ಚರ್ಯಮಿವ ಪ್ರಾಧಾನ್ಯೇನ ತಸ್ಯ ಪಾವಮಾನೀಷು ನಿದರ್ಶನಾಯೋದಾಹರಿಷ್ಯಾಮಃ ॥ ೨ ॥

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಂ ಅಯುತಂ ಚ
ಸಾಕಂ । ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ
ಮೂರಾ ಅಮೂರಾಃ ॥

(ಋ. ಸಂ. ೪-೨೬-೧೫)

ಶ್ಯೇನಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಶಂಸನೀಯಗಮನವುಳ್ಳ ಇಂದ್ರನು ಸೋಮವನ್ನು ತೆಗೆದುಕೊಂಡು ಕುಡಿದನು. ಋತ್ವಿಜರೆಲ್ಲರೂ ಸೇರಿ ಅಪರಿಮಿತ ಸುತ್ಯಾಗಳನ್ನು ಎಲ್ಲಿ ಮಾಡುವರೋ ಅಲ್ಲಿ ಹೋಗಿ ಸ್ವೀಕರಿಸಿದನು. ಅಥವಾ ಸಹಸ್ರಸಾವ್ಯವೆಂಬ ಸತ್ರದಲ್ಲಿ ಸೋಮಪಾನ ಮಾಡಿದನು. ಈ ಸಹಸ್ರಸಾವ್ಯಸತ್ರದಲ್ಲಿ ಬಹುಧನದಾತೃವಾದ ಇವನು ಸೋಮ ಪಾನದಿಂದ ತೃಪ್ತಿಯಾಗುತ್ತಿರಲು ಅಮೂಢನಾಗಿ ಭಯವಿಲ್ಲದೆ ಅಸುರರನ್ನು ಮೂಢರನ್ನಾಗಿಮಾಡಿ ನಾಶಪಡಿಸಿದನು.

ಆದಾಯ ಶ್ಯೇನೋಽಹರತ್ಸೋಮಂ ಸಹಸ್ರಂ ಸವಾನಯುತಂ ಚ
ಸಹ। ಸಹಸ್ರಂ-ಸಹಸ್ರಸಾವ್ಯಮಭಿಪ್ರೇತ್ಯ ತಾತ್ರಾಯುತಂ ಸೋಮ-
ಭಕ್ಷಾಃ ತತ್ಸಂಬಧೇನಾಯುತಂ ದಕ್ಷಿಣಾ ಇತಿ ವಾ । ತತ್ರ
ಪುರುಧಿರಜಹಾ ದಮಿತ್ರಾನ್ । ಅದನಾನಿತಿ ವಾ। ಮದೇ ಸೋಮಸ್ಯ
ಮೂರಾ ಅಮೂರಃ । ಇಂದ್ರೇ ಚ ಸೂಕ್ತೇ ಸೋಮಪಾನೇನ
ಸ್ತುತಸ್ತಸ್ಮಾದಿಂದ್ರಂ ಮನ್ಯಂತೇ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಹಸ್ರ ಆಯುತ ಪದಗಳು ಅಪರಿಮಿತಾರ್ಥವನ್ನು ತಿಳಿಸುತ್ತವೆ. ಸತ್ರದಲ್ಲಿ ದಕ್ಷಿಣೆ ಇಲ್ಲದಿರುವುದರಿಂದ ಹೀಗೆಯೇ ಅರ್ಥ ಹೇಳಬೇಕು. ವಾಸ್ತವವಾಗಿ ಸಹಸ್ರಸಾವ್ಯವೆಂಬ ಸತ್ರವು ಇಲ್ಲಿ ವಿವಕ್ಷಿತವೆಂದು ತಿಳಿಸುತ್ತಾರೆ. ಅಲ್ಲಿ ಆಯುತ ಸೋಮಭಕ್ಷವೂ, ಅಯುತದಕ್ಷಿಣೆಯೂ ಶ್ರುತವಾಗಿದೆ. ಮೂರಾಃ ಎಂಬಲ್ಲಿ ರೇಫಕ್ಕೆ ಡಭಾವ. ರಲ, ಡಲ ಸಮಾನವೆಂದು ಲೋಕದಲ್ಲಿಯೂ ವ್ಯವಹಾರವಿದೆ. ಅರಾತೀಃ ಶತ್ರುಗಳನ್ನು ಎಂದರ್ಥ. ರಾ ಧಾತುವಿಗೆ ದಾನಾರ್ಥವೂ ಇದೆ. ದಾನಮಾಡದಿರುವವರ ಧನವನ್ನು ಅವರಿಂದ ವಿಯೋಗಗೊಳಿಸುತ್ತಾನೆ ಎಂದರ್ಥ. ಇಂದ್ರಸೂಕ್ತದಲ್ಲಿ ಸೋಮಪಾನದಿಂದ ಸ್ತುತನಾದುದರಿಂದ ಶ್ಯೇನ ಅಂದರೆ ಇಂದ್ರನೆಂದು ವ್ಯಕ್ತವಾಗುತ್ತದೆ.

ಓಷಧಿಃ ಸೋಮಃ । ಸುನೋತೇರ್ಯದೇನಮಭಿಷುಣ್ವಂತಿ ॥

ಕ್ರಮಪ್ರಾಪ್ತವಾದ ಸೋಮಪದದ ನಿರ್ವಚನವನ್ನು ತೋರಿಸುತ್ತಾರೆ. ಸೋಮವೆಂದರೆ ಓಷಧಿ ವಿಶೇಷ. ಹಿಮವತ್ಪರ್ವತ, ಮೂಜವತ್ಪರ್ವತದಲ್ಲಿರುವ ವನಸ್ಪತಿಯಾಗುತ್ತದೆ. ಇದು ಷುಞ–ಅಭಿಷವೇ ಧಾತುವಿನಿಂದ ನಿಷ್ಪನ್ನವಾಗಿದೆ. ಯಜ್ಞದಲ್ಲಿ

ಇದು ಜಜ್ಞಿ ಹಿಂಡಲ್ಪಡುತ್ತದೆ. ಸುಧಾತುವಿಗೆ ಕರ್ಮಣಿಯಲ್ಲಿ ಮನ್‌ಪ್ರತ್ಯಯ ಬಂದಾಗ ಗುಣ. ಯತ್ತೇ ಸೋಮ ದಿವಿ (ಯ. ವಾ. ಸಂ. ೬-೩೩) ಸೋಮೋ ವೈ ವಾಜಸ್ತಸ್ಯ ಚಂದ್ರಮಾಸ್ತೃತೀಯಮಯಂ ಯಃ ಪವತೇ ಸ ತೃತೀಯಮಿತಿ ಸ ತನೂಕರಣೇ ತಂ ಸರ್ವಂ ಸ್ವತನೂಭೂತಮಾಪ್ಯಾಯಯತಿ (ಶ. ಬ್ರಾ. ೩-೯-೪-೧೨) ಎಂದು ಹೇಳಿರುವುದರಿಂದ ಇದು ಮಧ್ಯಮವಾಗುತ್ತದೆ. ಚಂದ್ರಶರೀರವೇ ಸೋಮವೆಂದು ಪ್ರಸಿದ್ಧವಾಗಿದೆ. ಅಥವಾ ವಾಯುವೇ ತನ್ನನ್ನು ಈರೀತಿಯಾಗಿ ಪರಿವರ್ತಿ ಹಿಂಡಲ್ಪಡುತ್ತದೆಂದು ಇರುವುದರಿಂದ ಮಧ್ಯಮವಾಗುತ್ತದೆ.

ಬಹುಲಮಸ್ಯ ನೈಘಂಟುಕಂ ವೃತ್ತಮಾಶ್ಚರ್ಯಮಿವ ಪ್ರಾಧಾನ್ಯೇನ ತಸ್ಯ । ಪಾವಮಾನೀಷು ನಿದರ್ಶನಾಯೋದಾಹರಿಷ್ಯಾಮಃ ॥ ೨ ॥

ಈ ಸೋಮವನ್ನು ಹೇಳುವ ಮಂತ್ರಗಳು ಅಲ್ಲಲ್ಲಿ ನಾನಾರೀತಿಯಾಗಿ ಉಪಲಬ್ಧವಾಗುತ್ತವೆ. ಕೆಲವು ಪರಾರ್ಥವಾಗಿ ಸ್ತುತಿಸುತ್ತವೆ. ಇನ್ನು ಕೆಲವು ಪ್ರಾಧಾನ್ಯದಿಂದ ಸ್ತುತಿಸುತ್ತವೆ. ಇನ್ನು ಕೆಲವು ಆಶ್ಚರ್ಯದ್ಯೋತಕಗಳಾಗಿ ಸ್ತುತಿಸುತ್ತವೆ. ಇವೆಲ್ಲವೂ ಪಾವಮಾನ ಋಕ್ಕುಗಳಲ್ಲಿ ಅಭಿಹಿತವಾಗಿವೆ. ಅವುಗಳಲ್ಲಿ ಮೊದಲು ಪರಾರ್ಥವಾಗಿ ಹೇಳುವ ಮಂತ್ರವನ್ನು ಮುಂದೆ ಉದಾಹರಿಸುತ್ತಾರೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಎರಡನೆಯ ಖಂಡವು ಸಮಾಪ್ತವು.

---

## ಅಥ ತೃತೀಯ ಖಂಡಃ

### ಮೂರನೆಯ ಖಂಡವು

ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ (ಋ. ಸಂ. ೧೯-೧-೧) ॥ ಇತಿ ಸಾ ನಿಗದವ್ಯಾಖ್ಯಾತಾಥೈಷಾಪರಾ ಭವತಿ ಚಂದ್ರಮಸೋ ವೈತಸ್ಯ ವಾ ॥ ೩ ॥

ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂ-
ದ್ರಾಯ ಪಾತವೇ ಸುತಃ ॥ (ಋ. ಸಂ. ೬-೩-೧೬-೧).

(ಸಾ. ಸಂ. ಛಂ. ಆ ೫-೨-೪-೨)

ಪರಾರ್ಥವಾಗಿ ಸೋಮಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಸೋಮವೇ ನೀನು ಅತಿಸ್ವಾದುವಾದ

ಮದವನ್ನುಂಟುಮಾಡುವ ಧಾರೆಯಿಂದ ಸ್ರವಿಸು. ರಕ್ಷಣೆಮಾಡಲು ಇಂದ್ರನಿಗೋಸ್ಕರ ನೀನು ಹಿಂಡಲ್ಪಟ್ಟಿರುವಿ. ಇದರಿಂದ ಆಸ್ವಾರ್ಥತ್ವ ವ್ಯಕ್ತವಾಗುತ್ತದೆ.

ಇತಿ ಸಾ ನಿಗದವ್ಯಾಖ್ಯಾತಾ | ಅಥೈಷಾಽಪರಾ ಭವತಿ ಚಂದ್ರಮಸೋ ವೈತಸ್ಯ ವಾ ॥ ೩ ॥

ಮಂತ್ರಾರ್ಥವು ಪಾಠಮಾತ್ರದಿಂದಲೇ ವ್ಯಾಖ್ಯಾತವಾಗಿದೆ. ಅಥಶಬ್ದ ವಿಶೇಷಾಧಿಕಾರವನ್ನು ತಿಳಿಸುತ್ತದೆ. ಇನ್ನುಮುಂದೆ ಸ್ವಪ್ರಧಾನವಾದ ಸ್ತುತಿಯು ಅಧಿಕೃತವಾಗುತ್ತದೆಂದರ್ಥ. ಚಂದ್ರತ್ವವನ್ನು ಹೊಂದಿದ ಓಷಧಿರೂಪ ಸೋಮದಸ್ತುತಿ ಅಥವಾ ಅಧಿಯಜ್ಞಹೊಂದಿದ ಓಷಧಿರೂಪ ಸೋಮದ ಸ್ತುತಿಯನ್ನು ಮುಂದೆ ಹೇಳುವ ಮಂತ್ರವು ಪ್ರತಿಪಾದಿಸುತ್ತದೆ. ಚಂದ್ರನು ಶರೀರ ಕೃಶವಾದಾಗ ಸೋಮದಿಂದ ಅಭಿವೃದ್ಧಿಪಡಿಸಿಕೊಳ್ಳುತ್ತಾನೆ. ಇದನ್ನು ' ಸ ತನೂಕರಣೇ ' ಇತ್ಯಾದಿ ವಾಕ್ಯದಿಂದ ಹಿಂದೆ ವಿವೃತವಾಗಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಮುಗಿದಿದೆ.

## ಅಥ ಚತುರ್ಥಖಂಡಃ

## ನಾಲ್ಕನೆಯ ಖಂಡವು

ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂತ್ಯೋಷಧಿಂ | ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ( ಋ. ಸಂ. ೧೦-೮-೩೩ ) ॥ ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂತ್ಯೋಷಧಿಮಿತಿ ವೃಥಾಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುರಿತಿ ನ ತಸ್ಯಾಶ್ನಾತಿ ಕಶ್ಚನಾಯಜ್ವೇತ್ಯಧಿಯಜ್ಞಮಥಾಧಿದೈವತಂ ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂತ್ಯೋಷಧಿಮಿತಿ ಯಜುಃ ಸುತಮಸೋಮ-ಮಾಹ ಸೋಮಂ ಯಂ ಬ್ರಹ್ಮಾಣೋ ವಿದುಶ್ಚಂದ್ರಮಸಂ ನ ತಸ್ಯಾಶ್ನಾತಿ ಕಶ್ಚನಾದೇವ ಇತ್ಯಥೈಷಾಪರಾ ಭವತಿ ಚಂದ್ರಮಸೋ ವೈತಸ್ಯ ವಾ ॥ ೪ ॥

ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂತ್ಯೋಷಧಿಂ | ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥

(ಋ. ಸಂ. ೨-೩-೨೦)

ಸೋಮದ ಪ್ರಧಾನಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಕೆಲವರು ಸೋಮವನ್ನು ಹೀಗೆ ತಿಳಿಯುತ್ತಾರೆ ವಿಧಿಯಿಲ್ಲದೆ ಕಾಮದಿಂದ ಅಥವಾ ಚಿಕಿತ್ಸೆಗೋಸ್ಕರ ಯಾವ ಸೋಮರಸವನ್ನು ಕುಡಿಯುತ್ತಾರೆ. ಯಾವ ಓಷಧಿಯನ್ನು ರಾಸಾಯನಿಕರು ಜಜ್ಜಿ ರಸವನ್ನು ಹಿಂಡುತ್ತಾರೋ ಅದೇ ಸೋಮವೆಂದು ತಿಳಿಯುತ್ತಾರೆ. ಆದರೆ ಅದು ಸೋಮವಲ್ಲ. ನಿಜವಾದ ಸೋಮವೆಂದರೆ ಬ್ರಾಹ್ಮಣರು ಅಂದರೆ ಋತ್ವಿಗ್ಯಜಮಾನರು ಯಾಗಸಾಧನವಾಗಿ ಯಾವ ಓಷಧಿಯ ಸಂಸ್ಕಾರವನ್ನು ಮಾಡಲು ಬಯಸುತ್ತಾರೋ, ಸಂಸ್ಕೃತವಾದ ಸೋಮರಸವನ್ನು ಅನಧಿಕೃತನಾದವನು ಕುಡಿಯುವುದಿಲ್ಲವೋ ಅದೇ ಸೋಮ ವೆಂದು ತಿಳಿಯುತ್ತಾರೆ.

ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಂಷಂತ್ಯೋಷಧಿಂ ॥ ಇತಿ
ವೃಥಾ ಸುತಮಸೋಮಮಾಹ । ' ಸೋಮಂ ಯಂ ಬ್ರಹ್ಮಾಣೋ
ವಿದುಃ ' ಇತಿ ' ನ ತಸ್ಯಾಶ್ನಾತಿ ಕಶ್ಚನ ' ಅಯಜ್ವೇತ್ಯಧಿಯಜ್ಞಂ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಜ್ಞಕಾರ್ಯಕ್ಕಲ್ಲದೆ ವ್ಯರ್ಥವಾಗಿ ಸೋಮರಸವನ್ನು ತೆಗೆದರೆ ಅದಕ್ಕೆ ಸೋಮರಸವೆಂಬ ಹೆಸರಿಲ್ಲ. ಅವೈದಿಕಕರ್ಮದಲ್ಲಿ ಉಪಯುಕ್ತವಾಗುವುದಾದರೆ ಅದು ಸೋಮವೇ ಆಗುವುದಿಲ್ಲ. ಏಕೆಂದರೆ ವಿಧಿವತ್ತಾಗಿ ಯಾಗಕ್ಕೋಸ್ಕರ ಸಂಪಾದಿತವಾದ ಸೋಮಕ್ಕೆ ಸೋಮವೆಂದು ಯಾಜ್ಞಿಕ ಬ್ರಾಹ್ಮಣರು ಹೇಳಿರುತ್ತಾರೆ. ಯಜ್ಞ ದಲ್ಲಿ ವಿನಿಯೋಗಿಸಿದರೇ ಅದು ಸೋಮವೆಂದು ಕರೆಯಲ್ಪಡುತ್ತದೆ. ಇದು ಅಧಿಯಜ್ಞವನ್ನಾಶ್ರಯಿಸಿ ಸ್ತುತಿಸಿರುವುದಕ್ಕೆ ಉದಾಹರಣೆಯಾಗುತ್ತದೆ.

ಅಥಾಧಿ ದೈವತಂ ॥ ಸೋಮಂ ಮನ್ಯತೇ ಪಪಿವಾನ್ಯತ್ಸಂಪಿಂಷಂ-
ತ್ಯೋಷಧಿಂ । ಇತಿ ಯಜುಃ ಸುತಸೋಮಮಾಹ । ಸೋಮಂ
ಯಂ ಬ್ರಹ್ಮಾಣೋ ವಿದುಃ ಚಂದ್ರಮಸಂ ನ ತಸ್ಯಾಶ್ನಾತಿ
ಕಶ್ಚನಾ ದೇವ ಇತಿ ॥

ಅಥ ಶಬ್ದ ವಿಷಯಾಂತರವನ್ನಧಿಕರಿಸುತ್ತದೆ. ಯಜತ್ಯನೇನ ಇತಿ ಯಜುಃ ಮಂತ್ರವೆಂದರ್ಥ. ವೇದವೆಲ್ಲವೂ ಯಜುಸ್ಸೇ ಆಗುತ್ತದೆ. ಅದರ ಪ್ರಭೇದಗಳೇ ಋಗಾದಿಗಳು ಜೈಮಿನಿಋಷಿಗಳು ಎಲ್ಲಿ ಅರ್ಥವಶದಿಂದ ಪಾದವ್ಯವಸ್ಥೆ ಇದೆಯೊ ಅದು ಋಕ್ಕೆಂದೂ, ಗಾನವಿದ್ದಲ್ಲಿ ಸಾಮವೆಂದೂ ಉಳಿದವುಗಳೆಲ್ಲವೂ ಯಜಸ್ಸುಗಳೆಂದೂ ಹೇಳಿರುತ್ತಾರೆ. ಪ್ರಕೃತ ಕೇವಲ ಚಂದ್ರಶರೀರವೃದ್ಧಿಗೋಸ್ಕರವಿರುವ ಸೋಮವು ಸೋಮವಾಗುವುದಿಲ್ಲ. ಆದರೆ ಅವನೇ ದೇವತೆಗಳ ಭಕ್ಷ್ಯರೂಪವಾಗಿ ವಿಪರಿಣತನಾಗುವುದಾದರೆ ಆಗ ಅವನನ್ನು ಸೋಮನೆಂದು ಯಾಜ್ಞಿಕರು ಕರೆಯುತ್ತಾರೆ. ಇದು ಅಧಿದೈವತ ದೃಷ್ಟಿಯಿಂದ ಹೇಳಿದೆ. ಸೋಮೋ ನೂನಮೇಷ ತದ್ದೇವಾನಾಮನ್ನಂ ಎಂದು ಶ್ರುತಿ ಇರುವುದರಿಂದ ಸೋಮರೂಪನಾದ ಚಂದ್ರನು ದೇವತೆಗಳ ಆಹಾರವಾಗುತ್ತಾನೆ. ಹೀಗೆಸೋಮದ ಪ್ರಧಾನಸ್ತುತಿ ಅಭಿಹಿತವಾಗಿದೆ.

ಅಥೈಷಾಽಪರಾ ಭವತಿ । ಚಂದ್ರಮಸೋ ವೈತಸ್ಯ ವಾ ॥ ೪ ॥

ಮುಂದೆ ಹೇಳುವ ಮಂತ್ರವು ಆಶ್ಚರ್ಯವಾಗುವಂತೆ ಸೋಮಸ್ತುತಿಯನ್ನು ಪ್ರತಿಪಾದಿಸುತ್ತವೆ. 'ಆಶ್ಚರ್ಯಮಿವ ಪ್ರಾಧಾನ್ಯೇನ ಎಂದು (೧೧-೨) ಹಿಂದೆ ಹೇಳಿದೆ ಆದುದರಿಂದ ಸ್ವಾರ್ಥಪ್ರಧಾನವಾದ ಬೇರೊಂದುಸ್ತುತಿಯೂ ಇದೆಯೆಂದು ತೋರಿಸಲು ಪುನಃ ಹೇಳಿರುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚಮಃ ಖಂಡಃ

## ಐದನೆಯ ಖಂಡವು

ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನಃ | ವಾಯುಃ ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ | ( ಋ. ಸಂ. ೧೦-೮೫-೫ ) || ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾ-ವಿತಿ ವಾ ವಾಯುಃ ಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾ-ದ್ರಸಹರಣಾದ್ವಾ ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈ-ರೋಷಧಿಶ್ಚಂದ್ರಮಾ ವಾ ಚಂದ್ರಮಾಶ್ಚಾಯಂದ್ರಮಪಿ ಚಂದ್ರೋ ಮಾತಾ ಚಾಂದ್ರಂ ಮಾನಮಸ್ಯೇತಿ ವಾ ಚಂದ್ರಶ್ಚಂದತೇಃ ಕಾಂತಿಕರ್ಮಣಶ್ಚಂದನಮಿತ್ಯಪ್ಯಸ್ಯ ಭವತಿ ಚಾರು ದ್ರಮತಿ ಚಿರಂ ದ್ರಮತಿ ಚಮೇರ್ವಾ ಪೂರ್ವಂ ಚಾರುರುಚೇರ್ವಿಪರೀತಸ್ಯ ತಸ್ಯೈಷಾ ಭವತಿ || ೫ ||

ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಮನಃ || ವಾಯುಃ
ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ||

(ಋ. ಸಂ. ೮—೩—೨೦)

ಸೋಮದ ಸ್ವಾರ್ಥಪ್ರಧಾನಸ್ತುತಿ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಸೋಮದೇವನೇ ಯಾವಾಗ ನಿನ್ನನ್ನು ಋತ್ವಿಗ್ಯಜಮಾನಾದಿಗಳು ಸವನತ್ರಯದಲ್ಲಿ ಕುಡಿಯಲು ಪ್ರಾರಂಭಿಸುವರೋ ಆಗ ನೀನು ಪುನಃ ವೃದ್ಧಿಹೊಂದುವಿ. ವಾಯುವು ನಿನ್ನನ್ನು ರಕ್ಷಿಸುತ್ತಾನೆ. 'ವಾಯಗೋಪಾ ವನಸ್ಪತಯಃ' ಎಂದು ಶ್ರುತಿ ಇರುವುದರಿಂದ ಎಲ್ಲವನ್ನು ಒಣಗಿಸುವವ ವನಾದರೂ ವಾಯುವು ಗ್ರಹವೆಂಬ ಪಾತ್ರವಿಶೇಷದಲ್ಲಿರುವ ನಿನ್ನನ್ನು ಒಣಗಿಸದೆ ರಕ್ಷಿಸುವನೆಂದರ್ಥ. ಚಮಸದಿಂದ ಪರಿಮಿತಿ

ಹೊಂದುವ ನೀನೇ ಸಂವತ್ಸರಗಳನ್ನು ಮಾಡುವಿ. ವಸಂತದಲ್ಲಿ ಪ್ರತಿಸಂವತ್ಸರದಲ್ಲಿಯೂ ಇದರ ಅನುಷ್ಠಾನವಿರುವುದರಿಂದ ವರ್ಷವ್ಯವಚ್ಛೇದಕನಾಗುತ್ತಾನೆ ಎಂದು ತಾತ್ಪರ್ಯ ಅಧಿದೈವತಪಕ್ಷದಲ್ಲಿ ಭಾಷ್ಯಾನುಸಾರ ವ್ಯಾಖ್ಯಾನವನ್ನು ತಿಳಿಯಬೇಕು.

**ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನಃ ॥ ಇತಿ ನಾರಾ-ಶಂಸಾನಭಿಪ್ರೇತ್ಯ । ಪೂರ್ವಪಕ್ಷಾಪರಪಕ್ಷಾವಿತಿ ವಾ ॥**

ಅಧಿಯಜ್ಞದಲ್ಲಿ ಸೋಮಪಾನಮಾಡುವ ಋತ್ವಿಗ್ಯಜಮಾನರೂಪಮನುಷ್ಯರನ್ನು ಕುರಿತು ಇದು ಹೇಳಿರುವುದು. ಅವರು ಎಷ್ಟು ಪಾನಮಾಡಿದರೂ ನೀನು ಅಭಿವೃದ್ಧಿ ಹೊಂದುತ್ತಿರುವಿಯೆಂದರ್ಥ. ಅಧಿದೈವಪಕ್ಷದಲ್ಲಿ ಶುಕ್ಲಪಕ್ಷ, ಕೃಷ್ಣಪಕ್ಷವನ್ನಿಟ್ಟುಕೊಂಡು ಪ್ರವೃತ್ತವಾಗಿದೆ. ಕೃಷ್ಣಪಕ್ಷದಲ್ಲಿ ಸೋಮರೂಪಚಂದ್ರನೇ ನಿನ್ನನ್ನು ದೇವತೆಗಳು ಪಾನಮಾಡಿದರೂ ಪುನಃ ಶುಕ್ಲಪಕ್ಷದಲ್ಲಿ ಕಲೋಪಚಯದಿಂದ ವೃದ್ಧಿಹೊಂದುವಿಯೆಂದರ್ಥ.

**ವಾಯುಃ ಸೋಮಸ್ಯ ರಕ್ಷಿತಾ । ವಾಯುಮಸ್ಯರಕ್ಷಿತಾರ ಮಾಹ । ಸಾಹಚರ್ಯಾದ್ರಸಹರಣಾದ್ವಾ ॥**

ವಾಯುರಕ್ಷಣಾಕ್ರಮವನ್ನು ವಿವರಿಸುತ್ತಾರೆ. ವಾಯುವ್ಯಗ್ರಹದಲ್ಲಿ ಇದು ಗೃಹೀತವಾಗಿರುವುದರಿಂದ ವಾಯುವಿನಿಂದ ರಕ್ಷಿತವಾಗುತ್ತದೆಂದು ತಾತ್ಪರ್ಯ. ಕಾರಣಾಂತರವನ್ನೂ ತೋರಿಸಿರುತ್ತಾರೆ. ವಾಯು ಸಹಚರಿತವುಳ್ಳದ್ದು ಸೋಮವಾದುದರಿಂದ ಅವಿನಾಭಾವಕರ್ಮದಿಂದ ವಾಯು ರಕ್ಷಿತನಾಗುತ್ತಾನೆ. ಅಥವಾ ಸರ್ವರಸಗಳನ್ನೂ ಅಪಹರಿಸುವವನು ವಾಯು. ಆದರೂ ಈ ಸೋಮವನ್ನು ಒಣಗಿಸದಿರುವುದರಿಂದ ಅದೇ ಸೋಮದ ರಕ್ಷಣೆಯಾಗುತ್ತದೆ.

**ಸಮಾನಾಂ — ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪ-ವಿಶೇಷೈ ರೋಷಧಿಶ್ಚಂದ್ರಮಾ ವಾ ॥**

ಸೋಮಕ್ಕೆ ಸಂವತ್ಸರಕರ್ತೃವನ್ನು ವಿವರಿಸುತ್ತಾರೆ. ಮಸೀ ಪರಿಮಾಣೇ ಧಾತು. ಕರ್ಮಣಿಯಲ್ಲಿ ಘಞ್ ಪ್ರತ್ಯಯ. ನಿರ್ಮಾತೃವಾದ ಸೋಮವು ಸಂವತ್ಸರಕರ್ತೃವಾಗುತ್ತದೆ. ಚಂದ್ರನೂ ವರ್ಷಕಾರಕವಾಗುತ್ತಾನೆ. ರೂಪವಿಶೇಷಗಳೇ ಇವುಗಳಿಗೆ ಕಾರಣ. ಸೋಮ ಅಂದರೆ ಓಷಧಿರೂಪವನಸ್ಪತಿಯ ಎಲೆಗಳು ಚಂದ್ರನ ಕಲೋಪಚಯದಂತೆ ಶುಕ್ಲಪಕ್ಷದಲ್ಲಿ ಒಂದೊಂದಾಗಿ ಬೆಳೆಯುತ್ತಾ ಹೋಗಿ ಪೂರ್ಣಿಮೆಯಲ್ಲಿ ಚಂದ್ರಕಲೆಯಂತೆ ಸರಿಯಾಗಿ ಹದಿನೈದು ಎಲೆಗಳಿಂದ ಕೂಡಿರುತ್ತದೆ. ಆಮೇಲೆ ಕೃಷ್ಣಪಕ್ಷದಲ್ಲಿ ಪ್ರಾತಃಕಾಲದಲ್ಲಿ ಚಂದ್ರನ ಒಂದೊಂದು ಕಲೆಯು ಕ್ಷೀಣಿಸುವಂತೆ ಒಂದೊಂದು ಎಲೆಯು ಕಳಚಿ ಬೀಳುತ್ತದೆ. ಆದುದರಿಂದ ಸೋಮವನಸ್ಪತಿಗೆ ಸೋಮಚಂದ್ರನ ಸಾಮ್ಯ ಉಪಪನ್ನವಾಗುತ್ತದೆ. ಆಯುರ್ವೇದಶಾಸ್ತ್ರಜ್ಞರೂ ರಸಾಯನತಂತ್ರದಲ್ಲಿ ಸೋಮಲಕ್ಷಣವನ್ನು ಹೀಗೆಯೇ ಹೇಳಿರುತ್ತಾರೆ. ಈ ರೀತಿ ಎಲೆಗಳ ಉಪಚಯಾಪಚಯರೂಪದಿಂದ ಸೋಮವು ಚಂದ್ರನ ಕಲೆಗಳ ಉಪಚಯಾಪಚಯಗಳಂತೆ ಸಂವತ್ಸರ, ಮಾಸಗಳನ್ನು ಮಾಡುತ್ತದೆ. ಪರಿಮಾಣವ್ಯವಚ್ಛೇದಕವಾಗುತ್ತದೆಂದು ತಾತ್ಪರ್ಯ. ಉಪಚಯಾಪಚಯಗಳೆಂದರೇ ಬೇರೆಬೇರೆರೂಪವಿಶೇಷವನ್ನು ಹೊಂದಿ ಸಂವತ್ಸರಮಾಸನಿರ್ಮಾಯಕವಾಗುತ್ತದೆ.

ಅಧಿದೈವತಪಕ್ಷದಲ್ಲಿಯೂ ಚಂದ್ರಪರವಾಗಿ ಹೀಗೆ ವ್ಯಾಖ್ಯಾನಮಾಡುತ್ತಾರೆ. ಕೃಷ್ಣಪಕ್ಷದಲ್ಲಿ ಚಂದ್ರನೇ ನೀನು ರಶ್ಮಿಗಳ ಮೂಲಕ ದೇವತೆಗಳಿಂದ ಪಾನಮಾಡಲ್ಪಡುವಿ. ಶುಕ್ಲಪಕ್ಷದಲ್ಲಿ ಪುನಃ ಕಲೋಪಚಯದಿಂದ ಅಭಿವೃದ್ಧಿಹೊಂದುವಿ. ವಾಯುವು ಸೂಕ್ಷ್ಮವಾದ ಸುಷುಮ್ನಾರೂಪರಶ್ಮಿನಾಡಿಯಿಂದ ಕಾಲಕ್ಕನುಗುಣವಾಗಿ ಇವನನ್ನು ಪುಷ್ಟಿಗೊಳಿಸುತ್ತಾನೆ. ಇವನೂ ಕಲೋಪಚಯಾಪಚಯರೂಪವಾದ ರೂಪವಿಶೇಷಗಳಿಂದ ಮಾಸವನ್ನು ಕಲ್ಪಿಸಿ ದ್ವಾದಶಾವರ್ತನೆಗಳಿಂದ ಸಂವತ್ಸರ ನಿರ್ಣಾಯಕನಾಗುತ್ತಾನೆ. ಸ್ವಾದಿಷ್ಠಯಾ—ಎಂಬ ಮಂತ್ರದಲ್ಲಿಯೂ ಚಂದ್ರಸ್ತುತಿಪ್ರತಿಪಾದಿತವಾಗುತ್ತದೆಂದು ಕೆಲವರಮತ. ಪೂಜ್ಯ ಚಂದ್ರನೇ ನೀನು ಅತಿರುಚಿಕರವಾದ, ಲೋಕಕ್ಕೆ ಮದಜನಕವಾದ ಸ್ವಕೀಯ ಕಲಾಧಾರೆಯಿಂದ ಸ್ರವಿಸು. ಏಕೆಂದರೆ ನೀನು ಸುಷುಮ್ನಾರಶ್ಮಿಮೂಲಕ ಸೂರ್ಯನಿಗೆ ಪಾನಮಾಡಲು ತುಂಬಿಸಲ್ಪಟ್ಟಿರುವಿ.

**ಚಂದ್ರಮಾಶ್ಚಾಯಂದ್ರಮತಿ । ಚಂದ್ರೋ ಮಾತಾ । ಚಾಂದ್ರಂ ಮಾನಮಸ್ಯೇತಿ ವಾ ॥**

ಕ್ರಮಪ್ರಾಪ್ತವಾದ ಚಂದ್ರಮಸ್ ಶಬ್ದದ ನಿರ್ವಚನವನ್ನು ಮೂರುರೀತಿಯಿಂದ ವಿವರಿಸುತ್ತಾರೆ. ಚಾಯನ್ ದ್ರಮತಿ ಇತಿ ಚಂದ್ರಮಾ. ಅಂತರಿಕ್ಷದಲ್ಲಿದ್ದು ಸಕಲಭೂತಜಾತಗಳನ್ನು ನೋಡುತ್ತಾ ಹೋಗುತ್ತಾನೆ. ಚಾಯೃ—ಪೂಜಾನಿಶಾಮನಯೋಃ ಧಾತು. ಶತೃಪ್ರತ್ಯಯ ಬಂದಾಗ ಚಾಯನ್ ಎಂಬುದಕ್ಕೆ ಚನ್ ಆದೇಶ. ಗತ್ಯರ್ಥಕ ದ್ರಮುಧಾತುವಿಗೆ ಅಸುನ್ ಪ್ರತ್ಯಯ ಅಥವಾ ಚಂದ್ರಶ್ಚಾಸೌ ಮಾತಾ ಚ, ಚಂದ್ರಪದ ಉಪಪದವಾಗಿರುವಾಗ ಮಾಧಾತುವಿಗೆ ಅಸುನ್ ಪ್ರತ್ಯಯ. ಅಥವಾ ಚಾಂದ್ರಂ ಮಾನಂ ಅಸ್ಯ ಚಂದ್ರಮಾಃ. ಬಹುವ್ರೀಹಿಯಾದುದರಿಂದ ಸಾಮಾನಾಧಿಕರಣ್ಯವಿಲ್ಲ. ಚಾಂದ್ರಪದಕ್ಕೆ ಆರ್ಷವಾಗಿ ಹ್ರಸ್ವಬಂದಿದೆ. ಚಂದ್ರ ಅಂದರೆ ಸೋಮ. ಅದು ಕುಡಿಯುವವರಿಗೆ ಆನಂದವನ್ನುಂಟುಮಾಡುತ್ತದೆ ಮತ್ತು ಶುಕ್ಲಪಕ್ಷದಲ್ಲಿ ವರ್ಣವೃದ್ಧಿಯಾಗುತ್ತದೆ. ಚಂದ್ರನಿಗೂ ಕಲಾವೃದ್ಧಿಯಾಗುತ್ತದೆ. ಚಂದ್ರನೇ ಸೋಮಕ್ಕೆ ಮಾನವಾಗುತ್ತಾನೆ. ಅಂದರೆ ದಿನವೂ ಒಂದೊಂದು ಕಲಾಭಿವೃದ್ಧಿಯಾಗುವಂತೆ ಸೋಮದ ವರ್ಣಾಭಿವೃದ್ಧಿಯಾಗುತ್ತದೆ.

**ಚಂದ್ರಶ್ಚಂದತೇಃ ಕಾಂತಿಕರ್ಮಣಃ । ಚಂದನಮಿತ್ಯಪ್ಯಸ್ಯ ಭವತಿ ॥**

ಚಂದ್ರಮಸ್ಸಿನಲ್ಲಿ ಚಂದ್ರಘಟಕವಾದುದರಿಂದ ಅದರ ನಿರ್ವಚನ ತೋರಿಸುತ್ತಾರೆ. ಚದಿಧಾತುವಿಗೆ ರಕ್‌ಪ್ರತ್ಯಯ ಬಂದು ಚಂದ್ರ ಎಂದಾಗಿವೆ. ನಿತ್ಯವೂ ಕಾಂತ (ಮನೋಹರ) ನಾಗಿರುತ್ತಾನೆ. ನಿತ್ಯವೂ ಇವನು ಇರಲಿ ಎಂದು ಜನರು ಬಯಸುತ್ತಾರೆ. ಚದಿಧಾತುವಿಗೆ ಲ್ಯುಟ್ ಬಂದಾಗ ಚಂದನವೆಂದೂ ರೂಪವಾಗುತ್ತದೆ.

**ಚಾರು ದ್ರಮತಿ ಚಿರಂ ದ್ರಮತಿ । ಚಮೇರ್ವಾ ಪೂರ್ವಂ ॥**

ಅಥವಾ ಚಾರು ಮನೋಹರವಾಗಿ (ಕ್ರಿಯಾವಿಶೇಷಣ) ಹೋಗುವುದರಿಂದ ಚಂದ್ರನಾಗುತ್ತಾನೆ. ಅಥವಾ ಚಿರಂ ದ್ರಮತಿ ಇತಿ ಚಂದ್ರಃ. ನಿದಾನವಾಗಿ ಹೋಗುತ್ತಾನೆ. ಅಥವಾ ಚಮುಧಾತು ಪೂರ್ವಪದ. ದ್ರಮುಧಾತು ಉತ್ತರಪದ. ದೇವತೆಗಳಿಂದ ತಿನ್ನಲ್ಪಡುತ್ತಾ ಹೋಗುತ್ತಾನೆ ಎಂದರ್ಥ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ.

**ಚಾರು - ರುಚೇರ್ವಿಪರೀತಸ್ಯ । ತಸ್ಯೈಷಾ ಭವತಿ ॥ ೫ ॥**

ನಿರ್ವಚನದಲ್ಲಿ ಚಾರು ಎಂದು ಸೇರಿದುದರಿಂದ ಅದರ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ದೀಪ್ತ್ಯರ್ಥಕವಾದ ರುಚ ಧಾತುವಿನ ವರ್ಣಗಳೇ ಆದ್ಯಂತ ವಿಪರೀತವಾಗಿ ಚಾರು ಎಂದಾಗಿದೆ. ಅತಿಶಯವಾಗಿ ಬೆಳಗುತ್ತಾ ಆಕಾಶದಲ್ಲಿ ಹೋಗುತ್ತಾನೆ ಎಂದರ್ಥ. ಇದೂ ಪೃಷೋದರಾದಿಯಿಂದಲೇ, ಸಿದ್ಧವಾಗಿರುತ್ತದೆ. ಮುಂದೆ ಉದಾಹರಿಸುವ ಮಂತ್ರವು ಚಂದ್ರಮಸ್ಸಿನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಐದನೆಯ ಖಂಡವು ಸಮಾಪ್ತವು.

———

## ಅಥ ಷಷ್ಠಃ ಖಂಡಃ

### ಆರನೆಯ ಖಂಡವು

ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ । ಭಾಗಂ ದೇವೇಭ್ಯೋ ವಿ ದಧಾತ್ಯಾಯಂಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ (ಋ ಸಂ. ೧೦-೮೫-೧೯) ॥ ನವೋ ನವೋ ಭವತಿ ಜಾಯಮಾನ ಇತಿ ಪೂರ್ವಪಕ್ಷಾದಿಮಭಿಪ್ರೇತ್ಯಾಹ್ನಾಂ ಕೇತುರುಷಸಾಮೇತ್ಯಗ್ರಮಿತ್ಯಪರಪಕ್ಷಾಂತಮಭಿಪ್ರೇತ್ಯಾದಿತ್ಯದೈವತೋ ದ್ವಿತೀಯಃ ಪಾದ ಇತ್ಯೇಕೇ ಭಾಗಂ ದೇವೇಭ್ಯೋ ವಿದಧಾತ್ಯಾಯನ್ನಿತ್ಯರ್ಧಮಾಸೇಜ್ಯಾಮಭಿಪ್ರೇತ್ಯ ಪ್ರವರ್ಧಯತೇ ಚಂದ್ರಮಾ ದೀರ್ಘಮಾಯುರ್ಮೃತ್ಯುರ್ಮಾರಯತೀತಿ ಸತೋ ಮೃತಂ ಚ್ಯಾವಯತೀತಿ ವಾ ಶತಬಲಾಕ್ಷೋ ಮೌದ್ಗಲ್ಯಸ್ತಸ್ಯೈಷಾ ಭವತಿ ॥ ೬ ॥

ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾ-
ಮೇತ್ಯಗ್ರಂ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ಪ್ರ ಚಂದ್ರ-
ಮಾಸ್ತಿರತೇ ದೀರ್ಘಮಾಯುಃ ॥

ಚಂದ್ರಮಃ ಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಈ ಚಂದ್ರನ ಶುಕ್ಲಪಕ್ಷದಲ್ಲಿ ಪಶ್ಚಿಮದಿಕ್ಕಿನಲ್ಲಿ ಸೂರ್ಯನು ಅಸ್ತಮಿತನಾದೊಡನೆ ಪ್ರತಿನಿತ್ಯವೂ ಕಲೆಯಿಂದ ಅಭಿವೃದ್ಧಿಹೊಂದುತ್ತಾ ಪ್ರತಿ ತಿಂಗಳೂ ಹುಟ್ಟುತ್ತಾ ಯಾವಾಗಲೂ ನೂತನವಾಗಿಯೇ ಇರುತ್ತಾನೆ. ಕೃಷ್ಣಪಕ್ಷದಲ್ಲಿ ಪೂರ್ವದಿಕ್ಕಿನಲ್ಲಿ ಕಲಾಹ್ರಾಸದಿಂದ ದಿವಸಕ್ಕೆ ಗುರುತಾಗಿ, ಗತಿವಿಶೇಷದಿಂದ ದಿವಸಕರ್ತನಾಗಿ ಪ್ರಭಾತದವರೆಗೆ ಹೋಗುತ್ತಾನೆ. ಇವನು ಪ್ರತಿದಿನವೂ ಹೀಗೆ ಹ್ರಸ್ವಸಮೃದ್ಧಿಯಿಂದ ಪಕ್ಷಾಂತವನ್ನುಹೊಂದಿ

ದೇವತೆಗಳ ಹವಿರ್ಭಾಗವನ್ನುಂಟುಮಾಡುತ್ತಾನೆ. ಈರೀತಿಯಾದ ಚಂದ್ರನು ಪೂಜಿಸುವವರಿಗೆ ದೀರ್ಘಾಯುಸ್ಸನ್ನು ವೃದ್ಧಿಗೊಳಿಸುತ್ತಾನೆ.

ನವೋ ನವೋ ಭವತಿ ಜಾಯಮಾನಃ ಇತಿ ಪೂರ್ವಪಕ್ಷಾದಿಮಭಿ-
ಪ್ರೇತ್ಯ || ಆದಿತ್ಯದೈವತೋ ದ್ವಿತೀಯಃ ಪಾದ ಇತ್ಯೇಕೇ ||

ಶುಕ್ಲಪಕ್ಷದ ಪ್ರತಿಪತ್ತಿನಲ್ಲಿ ಒಂದು ಕಲೆಯಿಂದ ಪಶ್ಚಿಮದಿಕ್ಕಿನಲ್ಲಿ ಚಂದ್ರನು ಗೋಚರನಾಗುತ್ತಾನೆ. ಇದನ್ನು ಮೊದಲು ಹೇಳಿದೆ. ಕೃಷ್ಣಪಕ್ಷದಲ್ಲಿ ಒಂದೊಂದು ಕಲೆಯು ನಷ್ಟವಾಗಿ ಎರಡೆರಡುಗಳಿಗೆ ವಿಳಂಬವಾಗುತ್ತಾ ಪೂರ್ವದಿಕ್ಕಿನಲ್ಲಿ ಗೋಚರನಾಗುತ್ತಾನೆ. ಆಗ ದಿವಸ ಜ್ಞಾಪಕವಿರುತ್ತದೆ. ಕೆಲವರು ಮಂತ್ರದ ದ್ವಿತೀಯಪಾದವು ಸೂರ್ಯನನ್ನು ಪ್ರತಿಪಾದಿಸುತ್ತದೆಂದು ಹೇಳುತ್ತಾರೆ. ಹಗಲನ್ನು ಮಾಡುವವನು ಸೂರ್ಯ. ತನ್ನ ಉದಯಾಸ್ತಗಳಿಂದ ಸೂರ್ಯನು ದಿವಸವನ್ನು ಮಾಡುವುದರಿಂದ ಅಹಸ್ಸಿನ ಕೇತುವಾಗುತ್ತಾನೆ. ಪ್ರಭಾತವು ಇವನಿಂದಲೇ ಆಗುವುದರಿಂದ ತಜ್ಜನಕನಾಗುತ್ತಾನೆ. ಹೀಗೆ ಸೂರ್ಯಚಂದ್ರರಿಬ್ಬರೂ ನಮಗೆ ದೀರ್ಘಾಯುವನ್ನು ಕೊಡಲಿ ಎಂದರ್ಥ.

ಮೃತ್ಯುರ್ಮಾರಯತೀತಿ ಸತಃ ||

ಕ್ರಮಪ್ರಾಪ್ತವಾದ ಮೃತ್ಯುಪದದ ನಿರ್ವಚನವನ್ನು ತಿಳಿಸುತ್ತಾರೆ. ಮಾರಯಾತೀತಿ ಮೃತ್ಯುಃ. ಮೃಙ್—ಪ್ರಾಣತ್ಯಾಗೇ ಧಾತು. ಣಿಜರ್ಥ ಅಂತರ್ಭೂತವಾಗಿರುವಾಗ ಇದಕ್ಕೆ ತ್ಯಕ್ ಪ್ರತ್ಯಯ. ಮಧ್ಯಮ ಪ್ರಾಣವಾಯುವೇ ಮೃತ್ಯುವು ಇವನು ಶರೀರದಿಂದ ಉತ್ಕ್ರಾಂತಿ ಹೊಂದುವಾಗ ಇತರ ಪ್ರಾಣಗಳಿಂದಲೂ ಪ್ರಾಣಿಗೆ ವಿಯೋಗಗೊಳಿಸುತ್ತಾನೆ. ಇದನ್ನು 'ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ' ಎಂದು ಶ್ರುತಿ ಪ್ರತಿಪಾದಿಸುತ್ತದೆ.

ಮೃತಂ ಚ್ಯಾವಯತೀತಿ ವಾ ಶತಬಲಾಕ್ಷೋ ಮೌದ್ಗಲ್ಯಃ ।
ತಸ್ಯೈಷಾ ಭವತಿ || ೮ ||

ಅತಿ ಬಲಿಷ್ಠ ಇಂದ್ರಿಯಗಳುಳ್ಳ ಮುದ್ಗಲ ಮಹರ್ಷಿಗಳ ಪುತ್ರರಾದ ಮೌದ್ಗಲ್ಯ ಋಷಿಗಳು ಮೃತ್ಯುಪದದ ನಿರ್ವಚನವನ್ನು ಬೇರೆ ರೀತಿಯಿಂದ ಮಾಡಿರುತ್ತಾರೆ, ಆಸನ್ನಮೃತ್ಯುವುಳ್ಳವನನ್ನು ಚರಮೋಚ್ಛ್ವಾಸಕಾಲದಲ್ಲಿ ಶರೀರದಿಂದ ಬೇರ್ಪಡಿಸುವುದರಿಂದ ಮೃತ್ಯುವಾಗುತ್ತಾನೆ. ಅಥವಾ ಮೃತನನ್ನು ಮಧ್ಯಮ ಪ್ರಾಣವಾಯುವು ಶರೀರದಿಂದ ಬೇರ್ಪಡಿಸುತ್ತದೆ ಎಂದರ್ಥ. ನಿಪಾತದಿಂದ ಮೃತಶಬ್ದ ಉಪಪದವಾಗಿರುವಾಗ ಚ್ಯು ಧಾತುವಿಗೆ ಉ ಪ್ರತ್ಯಯ ಬಂದು ರೂಪಸಿದ್ಧಿಯಾಗುತ್ತದೆ. ಮುಂದೆ ಹೇಳುವ ಮಂತ್ರವು ಮೃತ್ಯುಸ್ತುತಿಪ್ರತಿಪಾದಕವಾಗುತ್ತದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಆರನೆಯ ಖಂಡವು ಸಮಾಪ್ತವಾಗಿದೆ.

# ಅಥ ಸಪ್ತಮಃ ಖಂಡಃ

## ಏಳನೆಯ ಖಂಡವು

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ | ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ (ಋ.ಸಂ. ೧೦-೧೮-೧)|| ಪರಂ ಮೃತ್ಯೋ ಧ್ರುವಂ ಮೃತ್ಯೋ ಧ್ರುವಂ ಪರೇಹಿ ಮೃತ್ಯೋ ಕಥಿತಂ ತೇನ ಮೃತ್ಯೋ ಮೃತಂ ಚ್ಯಾವಯತೇ ಭವತಿ ಮೃತ್ಯೋ ಮದೇರ್ವಾ ಮುದೇರ್ವಾ ತೇಷಾಮೇಷಾ ಭವತಿ || ೭ ||

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ | ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾನಃ ಪ್ರಜಾಂ ರೀರಿಷೋ ಮೋ ತ ವೀರಾನ್ ||

(ಋ. ಸಂ. ೩-೫-೭, ಆ. ಗೃ. ೪-೬)

ಮೃತ್ಯುಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಮೃತ್ಯುವೇ ನೀನು ದೇವಮಾರ್ಗಕ್ಕಿಂತಲೂ ಬೇರೆಯಾದ ಸ್ವಕೀಯವಾದ ಪಿತೃಯಾನರೂಪವಾದ ಬೇರೆ ಮಾರ್ಗವನ್ನನುಸರಿಸಿ ಹೋಗು. ಅಪ್ರತಿಹತವಾದ ಸರ್ವೇಂದ್ರಿಯಜ್ಞಾನವುಳ್ಳ ನಿನಗೆ ನಾವು ಹೀಗೆ ಹೇಳುತ್ತೇವೆ. ನೀನು ನಮ್ಮ ಮಕ್ಕಳು ಮರಿಮಕ್ಕಳನ್ನು ಹಿಂಸಿಸಬೇಡ. ಮತ್ತು ನಮ್ಮನ್ನು ಆಶ್ರಯಿಸಿರುವ ಇತರ ಶ್ರೇಷ್ಠ ಪುರುಷರನ್ನೂ ಹಿಂಸಿಸಬೇಡ. ನಮ್ಮನ್ನು ಬಿಟ್ಟುಹೋಗುವುದರಿಂದ ರಕ್ಷಿಸು ಎಂದು ತಾತ್ಪರ್ಯ.

(ವರಂ ಮೃತ್ಯೋ ಧ್ರುವಂ ಮೃತ್ಯೋ ಧ್ರುವಂ ಪರೇಹಿ ಮೃತ್ಯೋ ಕಥಿತಂ ತೇನ ಮೃತ್ಯೋ ಮೃತಂ ಚ್ಯಾವಯತೇ ಭವತಿ ಮೃತ್ಯೋ ಮದೇರ್ವಾ ಮುದೇರ್ವಾ ತೇಷಾಮೇಷಾ ಭವತಿ || ೭ || ತ್ವೇಷಾ-ಸಮರಣಂ ಶಿಮೀವತೋ ರಿಂದ್ರಾವಿಷ್ಣೂ ಸುತಪಾವಾಮುರಷ್ಯತಿ | ಯಾ ಮರ್ತ್ಯಾಯ ಪ್ರತಿಧೀಯಮಾನಮಿತ್ ಕೃಶಾನೋರಸ್ತು ರಸನಾಮುರುಷ್ಯಥಃ ||

ಇತಿ ಸಾ ನಿಗದವ್ಯಾಖ್ಯಾತಾ || )

ಇದು ಪ್ರಕ್ಷಿಪ್ತವಾದ ಪಾದವಾದುದರಿಂದ ದುರ್ಗಾದಿವ್ಯಾಖ್ಯಾಕಾರಾಚಾರ್ಯರು ವ್ಯಾಖ್ಯಾನ ಮಾಡಲಿಲ್ಲ.

ಈ ಸೂಕ್ತದಲ್ಲಿ ಮೃತ್ಯುದೇವತೆಯ ಸ್ತುತಿಯೂ ಪಿತೃಕರ್ಮಗಳಲ್ಲಿ ಉಪಯೋಗಿಸಲ್ಪಡುವ ಮಂತ್ರಗಳೂಉಕ್ತವಾಗಿವೆ. ಶೌನಕೋಕ್ತವಾದ ಬೃಹದ್ದೇವತಾಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಹೀಗೆ ಹೇಳಿದೆ—

ಚತಸ್ರಸ್ತಾ ಸ್ತುತಿರ್ಮೃತ್ಯೋರಂತ್ಯೇ ಕ್ಲೃಪ್ತಾಶ್ಚ ಕರ್ಮಣಿ ॥ ೧೦ ॥

ಮೃತಶಿಷ್ಟೇಭ್ಯ ಆಶಾಸ್ತೇ ಇಮೇ ಜ್ಯೋಗ್ಜೀವನಂ ಪುನಃ ।
ಇಮಂ ಜೀವೇಭ್ಯ ಆಶಾಸ್ತೇ ತೇಭ್ಯಃ ಪರಿಧಿಕರ್ಮಣಿ ॥ ೧೧ ॥

ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ಮೃತ್ಯುದೇವತೆಯನ್ನು ಸ್ತುತಿಸುವವು. ಈ ಮಂತ್ರಗಳು ಅಪರಕರ್ಮಗಳಲ್ಲಿ ಉಪಯೋಗಿಸಲ್ಪಡುವವು. ಇಮೇ ಜೀವಾ ಎಂಬ ಮೂರನೆಯ ಋಕ್ಕಿನಲ್ಲಿ ಮೃತರಾದವರ ಸಂಸಾರಕ್ಕೆ ಸೇರಿದವರ ಮತ್ತು ಇನ್ನೂ ಜೀವಂತರಾಗಿರುವವರ ವಿಷಯದಲ್ಲಿ ದೀರ್ಘಕಾಲ ಬದುಕಲೆಂಬ ಆಶಾಸನೆಯು ಉಕ್ತವಾಗಿದೆ. ಇಮಂ ಜೀವೇಭ್ಯಃ ಎಂಬ ನಾಲ್ಕನೆಯ ಋಕ್ಕನ್ನು ಮೃತ್ಯುವಿನಿಂದ ಪಾರಾಗುವುದಕ್ಕಾಗಿ ಜೀವಂತರಾಗಿರುವವರ ಸುತ್ತಲೂ ಕಲ್ಲನ್ನು ಸ್ಥಾಪಿಸುವ ಕರ್ಮದಲ್ಲಿ ಪ್ರಯೋಗಿಸಲ್ಪಡುವುದು.

ಯಥಾ ಧಾತ್ರ್ಯುತ್ತರಾ ತ್ವಾಷ್ಟ್ರೀ ತತೋ ಯಾನ್ಯಾ ಇಮಾಸ್ತ್ರ್ಯತಿ ।
ಸ್ತ್ರೀಣಾಮಾಶಿಷಮಾಶಾಸ್ತೇ ತಯೈವಾಂಜನಕರ್ಮಣಿ ॥ ೧೨ ॥

**ಯಥಾಹಾನಿ** ಆರೋಹತ, ಇಮಾ, ನಾರೀಃ ಎಂಬ ಈ ಸೂಕ್ತದ ೫, ೬, ೭ ನೇ ಋಕ್ಕುಗಳನ್ನು ಮೃತರ ಸಂಸಾರಕ್ಕೆ ಸೇರಿದ ಸ್ತ್ರೀಯರು ಘೃತ ಅಥವಾ ಅಂಜನದಿಂದ (ಕಪ್ಪು) ತಮ್ಮ ನೇತ್ರಗಳನ್ನು ಸವರಿಕೊಳ್ಳುವಾಗ ಪಠಿಸಬೇಕು ಮತ್ತು ಈ ಋಕ್ಕುಗಳಲ್ಲಿ ಆ ಸ್ತ್ರೀಯರಿಗೆ ದೀರ್ಘಾಯುಸ್ಸು ಲಭಿಸಲೆಂದು ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ. ಈ ಋಕ್ಕುಗಳಲ್ಲಿ ಐದನೆಯ ಋಕ್ಕಿಗೆ ಧಾತೃವೂ, ಆರನೆಯ ಋಕ್ಕಿಗೆ ತ್ವಷ್ಟೃವೂ ದೇವತೆಗಳು.

ಉದೀರ್ಷ್ವ ನಾರೀತ್ಯನಯಾ ಮೃತಂ ಪತ್ನ್ಯನುರೋಹತಿ ।
ಭ್ರಾತಾ ಕನೀಯಾನ್ಪ್ರೇತಸ್ಯ ನಿಗದ್ಯ ಪ್ರತಿಷೇಧತಿ ॥ ೧೩ ॥

ಕುರ್ಯಾದೇತತ್ಕರ್ಮ ಹೋತಾ ದೇವರೋ ನ ಭವೇದ್ಯದಿ ।
ಪ್ರೇತಾನುಗಮನಂ ನ ಸ್ಯಾದಿತಿ ಬ್ರಾಹ್ಮಣಶಾಸನಾತ್ ॥ ೧೪ ॥

ವರ್ಣಾನಾಮಿತರೇಷಾಂ ಚ ಸ್ತ್ರೀಧರ್ಮೋಽಯಂ ಭವೇನ್ನ ವಾ ॥

ಉದೀರ್ಷ್ವನಾರಿ ಎಂಬ ಋಕ್ಕನ್ನು ಪಠಿಸುತ್ತಾ, ಮೃತನ ಪತ್ನಿಯು ಚಿತೆಯನ್ನೇರಿ ತನ್ನ ಪತಿಯೊಡನೆ ಸಹಗಮನ ಮಾಡಲು ಉದ್ಯುಕ್ತಳಾಗುವಳು. ಆಗ ಪತಿಯ ತಮ್ಮನೂ, ಪತ್ನಿಯ ಮೈದನನೂ ಆದವನು ಆ ಸ್ತ್ರೀಯನ್ನು ಸಹಗಮನ ಮಾಡಬೇಡವೆಂದು ತಡೆಯುವನು. ಮೃತನಿಗೆ ತಮ್ಮನಿಲ್ಲದಿದ್ದರೆ ಆ ಕೆಲಸವನ್ನು ಪುರೋಹಿತನೇ ಮಾಡುವನು. ಪ್ರೇತಶರೀರದ ಜತೆಯಲ್ಲಿ ಸಹಗಮನವನ್ನು ಮಾಡಬಾರದೆಂದು ಬ್ರಾಹ್ಮಣರ ಆಜ್ಞೆ ಇರುವುದು. ಬ್ರಾಹ್ಮಣರಿಗೂ ಇತರ ವರ್ಣದವರಿಗೂ ಮೃತರಾದವರ ಸ್ತ್ರೀಯರ ವಿಷಯದಲ್ಲಿ ಈ ಧರ್ಮವನ್ನೇ ಬೇಕಾದರೆ ಅನುಸರಿಸಬಹುದು. ಇಲ್ಲದಿದ್ದರೆ ಬಿಟ್ಟುಬಿಡಬಹುದು.

ಶಾಂತ್ಯರ್ಥಂ ಧನುರಾದಾನೇ ಪ್ರೇತಸ್ಯರ್ಚಂ ಧನುರ್ಜಪೇತ್ ।
ಯಸ್ಮಾದೇತಾಃ ಪ್ರಯುಜ್ಯಂತೇ ಶ್ಮಶಾನೇ ಚಾಂತ್ಯಕರ್ಮಣಿ ॥ ೧೫ ॥
ತಸ್ಮಾದ್ಭದೇತ್ತೃಚಸ್ಯಾಸ್ಯ ದೇವತಾಂ ಮೃತ್ಯುಮೇವ ತು ।

ಮೃತನಾದ ಪುರುಷನು ಕ್ಷತ್ರಿಯನಾಗಿದ್ದಲ್ಲಿ ಶಾಂತ್ಯರ್ಥವಾಗಿಯೂ, ಅವನು ಉಪಯೋಗಿಸುತ್ತಿದ್ದ ಧನುಸ್ಸನ್ನು ಮೃತ ಶರೀರದ ಬಳಿ ಇಡುವುದಕ್ಕಾಗಿ ಕೈಗೆ ತೆಗೆದುಕೊಳ್ಳುವಾಗ ಧನುರ್ಹಸ್ತಾತ್ ಎಂಬ ಈ ಋಕ್ಕನ್ನು ಪಠಿಸಬೇಕು. ಶ್ಮಶಾನದಲ್ಲಿ ಅಪರ ಕರ್ಮಗಳನ್ನು ಮಾಡುವಾಗ ಈ ಋಕ್ಕನ್ನೂ ಮುಂದಿನ ಋಕ್ಕುಗಳನ್ನೂ ಪಠಿಸುವುದರಿಂದ ಈ ಋಕ್ಕುಗಳಿಗೆ ಮೃತ್ಯುವೇ ದೇವತೆ ಯೆಂದು ಹೇಳಲ್ಪಡುವುದು.

ಮಂತ್ರೇಷು ಹ್ಯನಿರುಕ್ತೇಷು ದೇವತಾಂ ಕರ್ಮತೋ ವದೇತ್ ॥ ೧೬ ॥
ಮಂತ್ರತಃ ಕರ್ಮತಶ್ಚೈವ ಪ್ರಜಾಪತಿರಸಂಭವೇ ।

ಈ ಸೂಕ್ತದ ಮಂತ್ರಗಳಲ್ಲಿ ವಿನಿಯೋಗವನ್ನು ಅಥವಾ ದೇವತೆ ಯಾರೆಂಬುದನ್ನು ಹೇಳದೇ ಇರುವ ಸಂದರ್ಭದಲ್ಲಿ, ಮಾಡುವ ಕರ್ಮಾನುಸಾರವಾಗಿ ಆಯಾ ಮಂತ್ರಗಳ ದೇವತೆಯನ್ನೂ ವಿನಿಯೋಗವನ್ನೂ ಹೇಳಬೇಕು. ಯಾವುದೂ ಸ್ಪಷ್ಟವಾಗಿಲ್ಲ ದಿರುವ ಸಂದರ್ಭದಲ್ಲಿ ಮಂತ್ರದ ಅರ್ಥಕ್ಕೂ, ಮಾಡುವ ಕರ್ಮಕ್ಕೂ ಅನುಸಾರವಾಗಿ ಆ ಮಂತ್ರಗಳಿಗೆ ಪ್ರಜಾಪತಿಯು ದೇವತೆ ಯೆಂದು ಹೇಳಬಹುದು.

ಪರಾಶ್ಚತಸ್ರೋ ಯಾಸ್ತ್ವತ್ರ ಉಪ ಸರ್ಪೇತಿ ಪಾರ್ಥಿವೀ ॥ ೧೭ ॥
ತಾಸಾಂ ಪ್ರಯೋಗಃ ಪ್ರೇತಸ್ಯ ಅಸ್ಥಿಸಂಚಯಕರ್ಮಣಿ ॥

ಮುಂದಿನ ನಾಲ್ಕು ಋಕ್ಕುಗಳು ಎಂದರೆ ಉಪ ಸರ್ಪ ಎಂಬ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು (೧೦–೧೩) ಅಪರ ಕರ್ಮಾಂಗಭೂತವಾದ ಅಸ್ಥಿಸಂಚಯನ (ಮೃತ ಶರೀರವು ದಹನವಾದಮೇಲೆ ಅದರ ಅಸ್ಥಿ ಎಂದರೆ ಮೂಳೆಗಳನ್ನು ನದ್ಯಾದಿ ಗಳಲ್ಲಿ ಹಾಕುವುದಕ್ಕಾಗಿ ಒಂದೆಡೆ ಸಂಗ್ರಹಿಸುವ ಕರ್ಮಕ್ಕೆ ಅಸ್ಥಿಸಂಚಯ ವೆಂದು ಹೆಸರು) ವೆಂಬ ಕರ್ಮದಲ್ಲಿ ಪ್ರಯೋಗಿ ಸಲ್ಪಡುವವು.

ಪ್ರತೀಚೀನೇ ಯಥಾಹಾನಿ ಅಪಹೃತ್ಯೈತರಾಣಿ ತು ॥ ೧೮ ॥
ಅಹಸ್ಸು ಪಿತರೋ ದಧುರಿತ್ಯಾಶಾಸ್ತೇಽನ್ತ್ಯಯಾಶಿಷಃ ।
ಅಹಃಸ್ವಾಗಾಮಿಷು ಚ ಮಾಂ ಪ್ರಯತಂ ಸಮಜೀವಯನ್ ॥ ೧೯ ॥
(ಬೃ. ದೇ. ೭–೧೦ ರಿಂದ ೧೯)

ಪ್ರತೀಚೀನೇ ಎಂಬ ಕೊನೆಯ ಋಕ್ಕಿನಲ್ಲಿ ಪಿತೃದೇವತೆಗಳು ಕರ್ಮಕರ್ತನಿಗೆ ಕರ್ಮಮಾಡುವ ದಿವಸಗಳಲ್ಲಿಯೂ ಆಯು ರ್ವೃದ್ಧಿಯಾಗಲೆಂಬ ಆಶೀರ್ವಾದವನ್ನು ಮಾಡಿರುವ ವಿಷಯವು ಉಕ್ತವಾಗಿದೆ,

ಶೌನಕೋಕ್ತವಾದ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಈರೀತಿ ಹೇಳಿರುವುದು—

ಮೃತ್ಯುಮೇವ ಪ್ರಪದ್ಯೇತ ಪರಂ ಮೃತ್ಯೋ ಜಪನ್ ದ್ವಿಜಃ ।

ನಕ್ತಭೋಜೀ ಮಿತಾಹಾರಃ ಪರಿಸಂವತ್ಸರಂ ಸದಾ ॥ ೪೦ ॥
ನೈನಂ ಪುರಾಯುಷೋ ಮೃತ್ಯುರ್ನಯತೇ ಸಸುತಪ್ರಜಂ ।

ದ್ವಿಜನಾದವನು ಪರಂ ಮೃತ್ಯೋ ಎಂಬ ಈ ಸೂಕ್ತವನ್ನು ಜಪಿಸಿದಲ್ಲಿ ಅವನಿಗೆ ಮೃತ್ಯುದೇವತೆಯು ಒಲಿದು ಪ್ರಸನ್ನನಾಗು ವುದು. ಹೀಗೆ ಜಪಮಾಡುವ ಕಾಲದಲ್ಲಿ ಹಗಲು ಉಪವಾಸವಿದ್ದು ಜಪಮಾಡುತ್ತಾ ರಾತ್ರಿಕಾಲದಲ್ಲಿ ಮಾತ್ರ ಮಿತವಾದ ಆಹಾರವನ್ನು ಭುಜಿಸಬೇಕು. ಈ ರೀತಿ ಒಂದು ಸಂವತ್ಸರದವರೆಗೆ ಜಪಮಾಡಿದಿರೆ ಆ ಮೃತ್ಯು ದೇವತೆಯು ಅವನ ನಿಯಮಿತ ವಾದ ಆಯಸ್ಸು ಪೂರ್ತಿಯಾಗುವುದಕ್ಕೆ ಮುಂಚೆ ಅವನನ್ನೂ ಅವನ ಪುತ್ರಾದಿಜನರನ್ನೂ ಕೊಂಡೊಯ್ಯುವುದಿಲ್ಲ.

ಫಲಾಹಾರೋ ಜಯೇನ್ಮೃತ್ಯುಂ ತ್ರಿಭಿರ್ವರ್ಷೈರ್ಮಿತಾಶನಃ ।
ಷಷ್ಠೇ ಕಾಲೇ ತು ಭುಂಜೀತ ಫಲಂ ಮೂಲಮಥಾಪಿ ವಾ ॥

ಈ ಮೃತ್ಯುದೇವತೆಯನ್ನುದ್ದೇಶಿಸಿ ಜಪಮಾಡುವ ಕಾಲದಲ್ಲಿ ಕೆಲವು ನಿಯಮಗಳನ್ನನುಸರಿಸಬೇಕು. ಪ್ರತಿದಿನವೂ ಹಗಲ ಉಪವಾಸವಿದ್ದು ಆರನೆಯ ಯಾಮದಲ್ಲಿ ಎಂದರೆ: ಸೂರ್ಯಾಸ್ತಮಾನಾನಂತರ ಎರಡನೇ ಯಾಮದಲ್ಲಿ ಕಂದಮೂಲ ಫಲಾದಿ ಗಳನ್ನು ಮಾತ್ರ ಭಜಿಸಬೇಕು. ಈರೀತಿ ಮಿತಾಹಾರಕ್ರಮದಿಂದ ಮೂರು ವರ್ಷಗಳವರೆಗೆ ಜಪಮಾಡುವ ಪುರುಷನಿಗೆ ಮೃತ್ಯುವಿನ ಭಯವಿರುವುದಿಲ್ಲ.

ಸ್ಥಾನಾಸನಭ್ಯಾಂ ವಿಹರೇದುದಕೇ ಶಿಶಿರೇ ವಸೇತ್ ॥ ೪೨ ॥
ಗ್ರೀಷ್ಮೇ ಪಂಚತಪಾಸ್ತು ಸ್ಯಾದ್ವರ್ಷಾಸ್ವಭ್ರಾವಕಾಶಕಃ ।
ಏವಂ ಯುಕ್ತೋ ಜಯೇನ್ಮೃತ್ಯುಂ ರೋಗೇಭ್ಯಶ್ಚ ಪ್ರಮುಚ್ಯತೇ ॥ ೪೩ ॥

ಜಪಮಾಡುವ ಕಾಲದಲ್ಲಿ ಶಿಶಿರರ್ತುವಿನಲ್ಲಿ ಎಂದರೆ ಚಳಿಗಾಲದಲ್ಲಿ ನೀರಿನ ಮಧ್ಯದಲ್ಲಿ ನಿಂತು ಜಪಮಾಡಬೇಕು. ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಜಪಮಾಡಬೇಕು. ಮಳೆಗಾಲದಲ್ಲಿ ಮನೆಯ ಹೊರಗಡೆ ನಿಂತು ಮಳೆಯಲ್ಲಿ ನೆನೆಯುತ್ತಾ ಜಪಮಾಡಬೇಕು. ಈ ರೀತಿ ಜಪಮಾಡುವ ಪುರುಷನು ಮೃತ್ಯುಭಯವನ್ನು ಪರಿಹಾರಮಾಡಿಕೊಂಡು ರೋಗರಹಿತನಾಗಿ ಜೀವಿಸುವನು.

ಭ್ರಾತುರ್ಭಾರ್ಯಾಮಪುತ್ರಸ್ಯ ಸಂತಾನಾರ್ಥಂ ಮೃತೇ ಪತೌ ।
ದೇವರೋನ್ವಾರುರುಕ್ಷಂತೀಮುದೀರ್ಷ್ವೇತಿ ನಿವರ್ತಯೇತ್ ॥ ೪೪ ॥
ಋತುಕಾಲೇ ತು ಸಂಪ್ರಾಪ್ತೇ ಘೃತಾಭ್ಯಕ್ತೋಽಥ ವಾಗ್ಯತಃ ।
ಏಕಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ ॥ ೪೫ ॥

(ಋಗ್ವಿಧಾನ ಅಧ್ಯಾಯ ೩)

ಜ್ಯೇಷ್ಠಸಹೋದರನು ಸಂತಾನರಹಿತನಾಗಿ ಮೃತನಾದಾಗಿ ಅವನ ಪತ್ನಿಯು ಮೃತಶರೀರದ ಜತೆಯಲ್ಲಿ ಚಿತೆಯಮೇಲೆ ಸಹಗಮನಮಾಡಲುದ್ಯುಕ್ತಳಾಗಿದ್ದರೆ ಆ ಸಂದರ್ಭದಲ್ಲಿ ಮೃತನ ತಮ್ಮನು ತನ್ನ ಅತ್ತಿಗೆಯಾದ ಅಣ್ಣನ ಪತ್ನಿಯನ್ನು ಸಹಗಮನ ಮಾಡಬೇಡವೆಂದು ತಡೆದು ಮನೆಗೆ ಹಿಂದಕ್ಕೆ ಕರೆತರಬೇಕು. ಬಳಿಕ ಆ ಸ್ತ್ರೀಯು ಋತುಸ್ನಾನಮಾಡಿದಮೇಲೆ ಘೃತಾಭ್ಯಕ್ತಾದಿ

ಗಳಿಂದ ಶುದ್ಧನಾಗ ಆ ಸ್ತ್ರೀಯಲ್ಲಿ ಸಂಭೋಗಿಸಿ ಒಬ್ಬ ಪುತ್ರನನ್ನು ಮಾತ್ರ ಉತ್ಪತ್ತಿಮಾಡಬೇಕು. ಇನ್ನೊಬ್ಬ ಪುತ್ರನಾಗ ಬೇಕೆಂದು ಮುಂದೆ ಎಂತಹ ಸಂದರ್ಭದಲ್ಲಿಯೂ ಆ ಸ್ತ್ರೀಯಸಂಗವನ್ನು ಮತ್ತೆಮಾಡಬಾರದು.

ಈ ಸೂಕ್ತಕ್ಕೆ ದೇವತೆಯಾದ ಮೃತ್ಯುವಿನ ವಿಷಯದಲ್ಲಿ ಶತಪಥಬ್ರಾಹ್ಮಣದಲ್ಲಿ ಒಂದು ಇತಿಹಾಸವಿದೆ. ಪೂರ್ವದಲ್ಲಿ ದೇವತೆಗಳೂ ಮನುಷ್ಯರೂ ಯಜ್ಞಯಾಗಾದಿಗಳನ್ನು ಮಾಡಿ ಅದರ ಫಲವಾಗಿ ಸ್ವರ್ಗಾದಿಲೋಕಗಳಿಗೆ ಸಶರೀರವಾಗಿಯೇ ಹೋಗುತ್ತಿದ್ದರು ಹೀಗಿರುವಾಗ—

ಸ ಮೃತ್ಯುರ್ದೇವಾನಬ್ರವೀತ್ । ಅಥೈವ ಸರ್ವೇ ಮನುಷ್ಯಾ ಅಮೃತಾ ಭವಿಷ್ಯಂತ್ಯಥ ಕೋ ಮಹ್ಯಂ ಭಾಗೋ ಭವಿಷ್ಯತೀತಿ । ತೇ ಹೋಚುರ್ನಾತೋಽಪರಃ ಕಶ್ಚನ ಸಹ ಶರೀರೇಣಾಮೃತೋಽಸದ್ಯದೈವ ತ್ವಮೇತಂ ಭಾಗಂ ಹರಾಸೈ । ಅಥ ವ್ಯಾವೃತ್ಯ ಶರೀರೇಣಾಮೃತೋಽಸದ್ವಿದ್ಯಯಾ ವಾ ಕರ್ಮಣಾ ವೇತಿ । ಯದ್ವೈ ತದಬ್ರುವನ್ ವಿದ್ಯಯಾ ವಾ ಕರ್ಮಣಾ ವೇತಿ । ಏಷ ಹೈವ ಸಾ ವಿದ್ಯಾ ಯದಗ್ನಿರೇತದು ಹೈವ ತತ್ಕರ್ಮ ಯದಗ್ನಿಃ । ತೇ ಯೇ ಏವಮೇತದ್ವಿದುರ್ಯೇವೈತತ್ಕರ್ಮ ಕುರ್ವತೇ ಮೃತ್ವಾ ಪುನಸ್ಸಂಭವಂತಿ ! ತೇ ತೇ ಸಂಭವಂತ ಏವ ಅಮೃತತ್ವಮಭಿಸಂಭವತಿ । ಅಥ ಯೇ ಏವಂ ನ ವಿದುರ್ಯೇವೈತತ್ಕರ್ಮ ನ ಕುರ್ವತೇ ಮೃತ್ವಾ ಪುನಸ್ಸಂಭವಂತಿ ತೇ ಏತಸ್ಯೈವಾನ್ನಂ ಪುನಃಪುನರ್ಭವಂತಿ ॥

(ಶ. ಬ್ರಾ. ೧೦–೪–೩–೯, ೧೦)

ಒಂದಾನೊಂದು ಕಾಲದಲ್ಲಿ ಮೃತ್ಯುವು ದೇವತೆಗಳನ್ನು ಕುರಿತು ಇಂತೆಂದಿತು ಎಲೈ ದೇವತೆಗಳೇ, ನೀವು ಯಜ್ಞಾದಿ ಸತ್ಕರ್ಮಾಚರಣೆಯನ್ನು ಮಾಡಿ ಮರಣರಾಹಿತ್ಯ (ಅಮೃತತ್ವಮರಣವಿಲ್ಲದೆ ಯಾವಾಗಲೂ ಜೀವಿಸಿರುವುದು) ವನ್ನು ಪಡೆದಿದ್ದೀರಿ ಇದರಂತೆಯೇ ಮನುಷ್ಯರೆಲ್ಲರೂ ಯಜ್ಞಾದಿಗಳನ್ನು ಮಾಡಿ ಅಮೃತತ್ವವನ್ನು (ಸ್ವರ್ಗದಲ್ಲಿ ಶಾಶ್ವತಸುಖವನ್ನು) ಪಡೆಯುವರು. ಆಗ ನನ್ನ ಕೆಲಸವೇನು ? ನಾನು ಏನು ಮಾಡಬೇಕು ? ಯಾರೂ ಸಾಯುವುದೇ ಇಲ್ಲವಲ್ಲಾ ಎನ್ನಲು, ಆದಕ್ಕೆ ದೇವತೆಗಳು— ಒಳ್ಳೇದು, ಹಾಗಾದರೆ ಇನ್ನುಮೇಲೆ ಮನುಷ್ಯರು ಉತ್ತಮಕಾರ್ಯಗಳನ್ನು ಮಾಡಿ ಅಮೃತತ್ವ ಅಥವಾ ಸ್ವರ್ಗಸುಖಕ್ಕೆ ಅರ್ಹರಾಗಿದ್ದರೂ ಅವರು ತಮ್ಮ ಶರೀರಸಹಿತವಾಗಿ ಸ್ವರ್ಗಕ್ಕೆ ಹೋಗದಂತಾಗಲಿ, ನೀನು ಅವರ ಶರೀರವನ್ನು ಆಕ್ರಮಿಸು. ಆದರಿಂದ ಅವರು ಮೃತ್ಯುವಶರಾಗಿ ಪ್ರಾಣವನ್ನೂ ತಮ್ಮ ದೇಹವನ್ನೂ ಇಲ್ಲಿಯೇ ಬಿಟ್ಟು ಬೇರೆ ಶರೀರದಿಂದ ಸ್ವರ್ಗಕ್ಕೆ ಹೋಗುವಂತಾಗಲಿ ಎಂದರು. ಆದ್ದರಿಂದ ಅಲ್ಲಿಂದ ಮುಂದಕ್ಕೆ ಜ್ಞಾನವನ್ನು ಪಡೆದಾಗಲಿ, ಸತ್ಕರ್ಮಾಚರಣೆಯಿಂದಾಗಲಿ ಅಮೃತತ್ವಕ್ಕೆ ಅರ್ಹತೆಯನ್ನು ಪಡೆದ ಮನುಷ್ಯರು ಶರೀರವನ್ನು ಇಲ್ಲಿಯೇ ತ್ಯಜಿಸಿ, ಮೃತರಾದನಂತರವೇ ಅಮೃತತ್ವವನ್ನು (ಸ್ವರ್ಗದ ಶಾಶ್ವತ ಸುಖ) ಪಡೆಯುತ್ತಾರೆ. ಇಲ್ಲಿ ವಿದ್ಯಯಾ ಕರ್ಮಣಾ ವಾ ಎಂದರೆ ಅಗ್ನಿಸಂಬಂಧವಾದ ಜ್ಞಾನ ಅಥವಾ ಕರ್ಮವೆಂದರ್ಥವು. ಇದನ್ನು ತಿಳಿದು ಕರ್ಮವನ್ನು ಮಾಡಿದವರು ಮೃತರಾದನಂತರ ಅಮೃತತ್ವವನ್ನು ಪಡೆಯುವರು. ಇದನ್ನು ತಿಳಿಯದವರು ಎಷ್ಟೇ ಕರ್ಮಮಾಡಲಿ ಅವರು ಮರಣಾನಂತರ ಪುನಃ ಪುನಃ ಜನ್ಮಗಳನ್ನು ಎತ್ತುತ್ತಾ ಪ್ರತಿ ಜನ್ಮದಲ್ಲಿಯೂ ಮರಣಕ್ಕೆ ವಶರಾಗುವರು ಎಂದು ಹೇಳಿದೆ.

ಐತರೇಯ ಬ್ರಾಹ್ಮಣದಲ್ಲಿ ಒಂದು ವಿಚಿತ್ರವಾದ ಸನ್ನಿವೇಶವು ಉಕ್ತವಾಗಿದೆ—

ಸ ವಾ ಏಷ ನ ಕದಾಚನಾಸ್ತಮೇತಿ ನೋದೇತಿ । ತಂ ಯದಸ್ತಮೇತೀತಿ ಮನ್ಯಂತೇಽಹ ಏವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇ ರಾತ್ರೀಮೇವಾಸ್ತಾತ್ಕುರುತೇಽಹಃ ಪರಸ್ತಾತ್ । ಅಥ ಯದೇನಂ ಪ್ರಾತರುದೇತೀತಿ

ಮನ್ಯಂತೇ ರಾತ್ರೇರೇವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇಽಹರೇವಾಧಸ್ತಾತ್ಕುರುತೇ ರಾತ್ರಿಂ ಪರಸ್ತಾತ್ । ಸ ವಾ ಏಷ ನ ಕದಾಚನ ನಿಮ್ರೋಚತಿ । ನ ಹ ವೈ ಕದಾಚನ ನಿಮ್ರೋಚತ್ಯೇತಸ್ಯ ಹ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ಯ ಏವಂ ವೇದ ॥

(ಐ ಬ್ರಾ. ೧೪–೪೪)

ಸೂರ್ಯನು ಉದಯಿಸುವನು ಮತ್ತು ಅಸ್ತಮಾನನಾಗುವನು ಎಂದು ನಾವು ಲೋಕವ್ಯವಹಾರದಲ್ಲಿ ಹೇಳುತ್ತೇವಷ್ಟೆ. ಆದರೆ ಸೂರ್ಯನು ಇದ್ದಲ್ಲಿಯೇ ಇರುವನು, ಉದಯಿಸುವುದೂ ಇಲ್ಲ, ಮುಳುಗುವುದೂ ಇಲ್ಲ. ಸೂರ್ಯನು ಮುಳುಗುತ್ತಾನೆಂದು ಜನರು ಯೋಚಿಸುವಾಗ ವಾಸ್ತವವಾಗಿ ಸೂರ್ಯನು ಮುಳುಗುವುದಿಲ್ಲ. ದಿವಸಾಂತ್ಯದಲ್ಲಿ ಸೂರ್ಯನ ಎರಡುಕಡೆಗಳಲ್ಲಿಯೂ ಇರುವ ಪ್ರದೇಶಗಳಿಗೆ ರಾತ್ರಿಯೂ, ಹಗಲೂ ಏಕಕಾಲದಲ್ಲಿ ಉಂಟಾಗುವವು. ಎಂದರೆ ಸೂರ್ಯನ ಎದುರುಭಾಗದಲ್ಲಿ ಹಗಲಾರುವಾಗ ಇನ್ನೊಂದು ಭಾಗದಲ್ಲಿ ರಾತ್ರಿಯಾಗಿರುವುದು,

ಹಾಗೆಯೇ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುತ್ತಾನೆಂದು ಹೇಳುವಾಗ ಅದೂ ವಾಸ್ತವಸಂಗತಿಯಲ್ಲ, ಎಂದರೆ ಸೂರ್ಯನ ಒಂದು ಭಾಗದಲ್ಲಿ ಕತ್ತಲಾಗಿರುವ ಎಂದರೆ ರಾತ್ರೆಯಾಗಿರುವ ಕಾಲದಲ್ಲಿಯೇ ಮತ್ತೊಂದು ಭಾಗದಲ್ಲಿ ಹಗಲಾಗ್ಪುವುದು. ಆಗಲೂ ಸೂರ್ಯನ ಎರಡು ಪಾರ್ಶ್ವಗಳಲ್ಲಿ ಒಂದು ಪಾರ್ಶ್ವದಲ್ಲಿ ರಾತ್ರೆಯೂ ಮತ್ತೊಂದು ಪಾರ್ಶ್ವದಲ್ಲಿ ಹಗಲೂ ಏಕಕಾಲದಲ್ಲಿ ಗೋಚರವಾಗುವುದು, ಅಲ್ಲದೆ ಹಿಂದೆ ರಾತ್ರೆಯಾಗಿದ್ದ ಪ್ರದೇಶದಲ್ಲಿ ಈಗ ಹಗಲೂ, ಹಗಲಾಗಿದ್ದ ಪ್ರದೇಶದಲ್ಲಿ ರಾತ್ರಿಯೂ ಉಂಟಾಗುವುದು. ಇದು ಪರಿವರ್ತನಕ್ರಮದಿಂದ ಗೋಚರವಾಗುವುದೇ ಹೊರತು ಸೂರ್ಯನು ಯಾವಾಗಲೂ ಅಸ್ತಂಗತನಾಗುವುದಿಲ್ಲ ಎಂದರೆ ಮುಳುಗುವುದೇ ಇಲ್ಲ. ನಾವು ಮುಳುಗಿದಾನೆ ಎಂದು ತಿಳಿಯುವಾಗ ಅವನು ಇನ್ನೊಂದು ಪ್ರದೇಶದಲ್ಲಿ ಹಗಲನ್ನುಂಟುಮಾಡಿ ಅಲ್ಲಿ ಪ್ರಕಾಶಿಸುತ್ತಲೇ ಇರುತ್ತಾನೆ. ಈ ವಿಧವಾದ ಸೂರ್ಯನ ಗತಿಯನ್ನು ತಿಳಿದಿರುವ ಪುರುಷನು ಸೂರ್ಯಲೋಕವನ್ನು ಸೇರಿ ಸೂರ್ಯಸಾಯುಜ್ಯವನ್ನು ಪಡೆಯುವನು. ಅವನಿಗೆ ಜರಾಮರಣಾದಿಗಳೂ ಪುನರ್ಜನ್ಮವೂ, ದುಖವೂ ಇರುವುದಿಲ್ಲ. ಯಾವಾಗಲೂ ಶಾಶ್ವತವಾದ ಆನಂದದಲ್ಲಿ ಮಗ್ನನಾಗಿರುವನು. ಎಂದು ಮರಣಾನಂತರ ಜೀವನ ಉತ್ತಮಸ್ಥಿತಿಯ ವರ್ಣನೆಯು ಉಕ್ತವಾಗಿದೆ.

ಮರಣಾನಂತರ ಪ್ರಾಪ್ತವಾಗುವ ಗತಿಯ ವಿಚಾರವಾಗಿ ಗೌತಮಗೋತ್ರದ ಓರ್ವ ಋಷಿಯ ಪುತ್ರನಾದ ನಚಿಕೇತನಿಗೂ ಮೃತ್ಯುದೇವತೆಗೂ ನಡೆದ ಸಂಭಾಷಣೆಯೂ ತತ್ತ್ವವಿಮರ್ಶೆಯೂ ತೈತ್ತಿರೀಯಬ್ರಾಹ್ಮಣದ ೩–೧೧–೮ ನೇ ಅನುವಾಕದಲ್ಲಿ ಸೂಕ್ಷ್ಮವಾಗಿ ತಿಳಿಸಿದೆ. ಅದನ್ನೇ ವಿಸ್ತಾರವಾಗಿಯೂ ವಿಮರ್ಶಾತ್ಮಕವಾಗಿಯೂ ಕಠೋಪನಿಷತ್ತಿನಲ್ಲಿ ವರ್ಣಿಸಲಾಗಿದೆ. ಆ ಕಠೋಪನಿಷತ್ತಿನಲ್ಲೆಲ್ಲಾ ಅವರ ಸಂವಾದವೇ ವಿಸ್ತಾರವಾಗಿರುವುದರಿಂದ ಇಲ್ಲಿ ಅದರ ಸಾರಾಂಶವನ್ನು ಮಾತ್ರ ತಿಳಿಸುತ್ತೇವೆ.

### ಕಠೋಪನಿಷತ್ತಿನ ಸೂಕ್ಷ್ಮವಿವರಣೆಯು

ಪೂರ್ವದಲ್ಲಿ ಒಬ್ಬ ಋಷಿಯಿದ್ದನು. ಅವನಿಗೆ ನಚಿಕೇತನೆಂಬ ಒಬ್ಬ ಪುತ್ರನಿದ್ದನು. ಅವನು ಇನ್ನೂ ಬಾಲಕನು. ಆ ಸಮಯದಲ್ಲಿ ಋಷಿಯು ವಿಶ್ವಜಿತ್ ಎಂಬ ಯಜ್ಞವನ್ನು ಮಾಡಲುದ್ಯುಕ್ತನಾದನು. ಆ ಯಜ್ಞದಲ್ಲಿ ಯಜ್ಞಕರ್ತನು ತನಗಿರುವ ಸಕಲ ಸಂಪತ್ತನ್ನೂ ಬ್ರಾಹ್ಮಣರಿಗೆ ದಾನಮಾಡಬೇಕೆಂಬುದೇ ವಿಧಿಯು. ಅದರಂತೆ ನಿರ್ಗತಿಕನಾದ ಆ ಋಷಿಯು

ಯಜ್ಞದಲ್ಲಿ ದಾನಮಾಡಲು ತನ್ನಲ್ಲಿ ಬೆಲೆಬಾಳುವ ಯಾವ ವಸ್ತುವೂ ಇಲ್ಲದಿದ್ದರಿಂದ ತನ್ನಲ್ಲಿ ಉಳಿದಿದ್ದ ಹಾಲನ್ನು ಕೊಡಲು ಸಾಮರ್ಥ್ಯವಿಲ್ಲದ ಮುದಿಯಾದ ಮತ್ತು ಬಡಕಲಾದ ಕೆಲವು ಕುಂಟ ಹಸುಗಳನ್ನು ದಾನಮಾಡಿದನು. ಇದನ್ನೆಲ್ಲಾ ನೋಡುತ್ತಿದ್ದ ಆ ಋಷಿಯ ಮಗನಾದ ನಚಿಕೇತನೆಂಬ ಬಾಲಕನು ಮನಸ್ಸಿನಲ್ಲಿ ಇಂತು ಯೋಚಿಸಿದನು. ನನ್ನ ತಂದೆಯು ಉತ್ತಮಲೋಕ ಪ್ರಾಪ್ತಿಗಾಗಿ ಈ ಶ್ರೇಷ್ಠವಾದ ಯಾಗವನ್ನು ಮಾಡಿ ಕಲ್ಪೋಕ್ತಪ್ರಕಾರವಾಗಿ ದಾನಾದಿಗಳನ್ನು ಕೊಟ್ಟಿರುವನು. ಆದರೆ ದಾನ ಕೊಡುವಾಗ ಉತ್ತಮವುವಸ್ತುಗಳನ್ನೇ ದಾನಕೊಡಬೇಕು. ಆ ದಾನವಸ್ತುಗಳು ಅವುಗಳನ್ನು ಸ್ವೀಕರಿಸಿದವರಿಗೆ ಸುಖಸಾಧನ ವಾಗಿರಬೇಕು. ಅದರಿಂದ ಅವರಿಗೆ ಉಪಯೋಗವಾಗಬೇಕು. ಉಪಯುಕ್ತವಸ್ತುಗಳನ್ನು ದಾನಮಾಡುವುದರಿಂದಲೇ ಶ್ರೇಯಸ್ಸುಂಟಾಗುವುದು. ಆದರೆ ನಮ್ಮ ತಂದೆಯು ದಾನವಾಗಿ ಕೊಟ್ಟಿರುವ ಬಡಕಲಾದ, ಹಾಲನ್ನು ಕೊಡಲು ಸಾಮರ್ಥ್ಯ ವಿಲ್ಲದ ಮುದಿಯಾದ ಈ ಗೋವುಗಳಿಂದ ದಾನಸ್ವೀಕಾರಮಾಡಿದ ಬ್ರಾಹ್ಮಣರಿಗೆ ಏನು ಪ್ರಯೋಜನವಾದಂತಾಯಿತು ? ಈ ರೀತಿಯಾದ ದಾನದಿಂದ ಪುಣ್ಯವು ಲಭಿಸಲಾರದು ಹೀಗೆಂದು ಆಲೋಚಿಸಿ. ತನ್ನ ತಂದೆಯನ್ನು ಕುರಿತು ಇಂತೆಂದನು –ಎಲೈ ತಂದೆಯೇ, ಈ ಯಜ್ಞದಲ್ಲಿ ನೀನು ನಿನ್ನ ಸರ್ವಸ್ವವನ್ನೂ ದಾನಮಾಡಿರುವುದಿಲ್ಲ. ಯಜ್ಞದ ಫಲವು ಪೂರ್ಣವಾಗಿ ಲಭಿಸ ಬೇಕಾದರೆ ನಿನ್ನಲ್ಲಿರುವ ಸಮಸ್ತವನ್ನೂ ದಾನಮಾಡಲೇಬೇಕು. ನಿನ್ನಲ್ಲಿ ಇನ್ನೂ ದಾನಮಾಡದಿರುವ ವಸ್ತುವು ಒಂದು ಮಾತ್ರವಿರುವುದು. ಅದು ಯಾವುದೆಂದರೆ–ನಿನಗೆ ಸೇರಿದವನೂ, ನಿನಗೆ ಪುತ್ರನೂ ಆದ ನಾನೇ ಆ ವಸ್ತುವು. ನನ್ನನ್ನು ಯಾರಿಗೆ ಕೊಡುವಿ ? ಎಂದನು. ತಂದೆಯು ಆ ಮಾತನ್ನು ಬಾಲಭಾಷೆಯೆಂದು ತಿಳಿದು ಅದಕ್ಕೆ ಉತ್ತರ ಕೊಡುವ ಹವ್ಯಾಸಕ್ಕೆ ಹೋಗಲಿಲ್ಲ. ಆದರೆ ನಚಿಕೇತನು ಪುನಃ ಅದೇ ಪ್ರಶ್ನೆಯನ್ನು ಕೇಳಿದನು. ಆಗಲೂ ತಂದೆಯು ಏನನ್ನೂ ಹೇಳಲಿಲ್ಲ. ಮೂರನೇಸಲ ನಚಿಕೇತನು ಅದೇ ಪ್ರಶ್ನೆಯನ್ನು ಬಲವಂತವಾಗಿ ಕೇಳಲು ತಂದೆಗೆ ಕೋಪ ಬಂದು ಕೋಪದ ಭರದಲ್ಲಿ— ನಿನ್ನನ್ನು ಮೃತ್ಯುವಿಗೆ (ಮೃತ್ಯುದೇವತೆಯಾದ ಯಮನಿಗೆ) ಕೊಡುವೆನು ಎಂದನು. ಆದರಿಂದ ಸಮಾಧಾನಗೊಂಡು ನಚಿಕೇತನು ತಂದೆಯ ಮಾತನ್ನು ನಡೆಸಬೇಕೆಂದು ನಿಶ್ಚಯಿಸಿ ಮೃತ್ಯುವಿನ ಬಳಿಗೆ ಹೋಗಲು ಸಿದ್ಧನಾದನು. ಆದರೆ ತಂದೆಯು ಸಿಟ್ಟಿನಲ್ಲಿ ತಾನಾಡಿದ ಮಾತಿಗೆ ಪಶ್ಚಾತ್ತಾಪಪಟ್ಟು ಪುತ್ರನ ನಿಶ್ಚಯವನ್ನು ತಪ್ಪಿಸಲು ಸಮಾಧಾನೋಕ್ತಿಯಿಂದ ಪ್ರಯತ್ನಿಸಿದರೂ ನಚಿಕೇತನು ಪಿತೃವಿನ ಮಾತನ್ನು ಭಂಗಪಡಿಸಲು ಇಷ್ಟಪಡಲಿಲ್ಲ. ಆಗ ಒಂದು ಅಶರೀರವಾಣಿಯು ಕೇಳಿಸಿತು—ಎಲೈ ಬಾಲಕನೇ, ನೀನು ಮೃತ್ಯುವಿನ ಮನೆಗೆ ಹೋಗು ಅವನು ಮನೆಯಲ್ಲಿರುವ ಕಾಲವನ್ನು ತಿಳಿದುಕೋ. ನಿನ್ನ ಇಷ್ಟಾರ್ಥವು ಕೈಗೂಡುವುದು ಎನ್ನಲು, ಆ ಮಾತಿನಿಂದ ನಚಿಕೇತನು ಧೈರ್ಯವನ್ನು ತಾಳಿ ಮೃತ್ಯುವಿನ ಮನೆಗೆ ಹೋದನು. ಆದರೆ ಆಗ ಮೃತ್ಯುವು ಮನೆಯಲ್ಲಿರಲಿಲ್ಲ. ಅವನು ಮನೆಗೆ ಬರುವುದು ಮೂರು ದಿವಸವಾಯಿತು. ಅಲ್ಲಿಯವರೆಗೂ ಮೂರುದಿವಸಗಳ ವರೆಗೆ ಅಲ್ಲಿ ಉಪವಾಸದಿಂದಿಲೇ ಇದ್ದು ಮೃತ್ಯುವು ಬರುವುದನ್ನೇ ಎದುರುನೋಡುತ್ತಿದ್ದನು. ಅವನು ಬಂದ ನಂತರ ತನ್ನ ಮನೆಯಲ್ಲಿ ಮೂರುದಿವಸದಿಂದ ಉಪವಾಸದಿಂದಿದ್ದು ತನ್ನ ಆಗಮನವನ್ನೇ ಎದುರುನೋಡುತ್ತಿದ್ದ ಬಾಲಬ್ರಹ್ಮಚಾರಿಯಾದ ನಚಿಕೇತನನ್ನು ನೋಡಿ ಮೃತ್ಯುವು ಪಶ್ಚಾತ್ತಾಪದಿಂದ,—ಎಲೈ ಬಾಲಕನೇ, ನಿನಗೆ ನಮಸ್ಕಾರವು. ನೀನು ನನ್ನ ಮನೆಯಲ್ಲಿ ಮೂರುದಿವಸಗಳಿಂದ ಉಪವಾಸವಾಗಿದ್ದೆಯೆಂದು ತಿಳಿಯಿತು. ಅತಿಥಿಯು ಉಪವಾಸವಿದ್ದರೆ ಶ್ರೇಯಸ್ಸುಂಟಾಗುವುದಿಲ್ಲ. ಆದ್ದರಿಂದ ನೀನು ಉಪವಾಸದಿಂದಿದ್ದ ಮೂರುದಿನಗಳಿಗಾಗಿ ನಿನಗೆ ಬೇಕಾದ ಮೂರು ವರಗಳನ್ನು ಬೇಡಿಕೋ, ಅವುಗಳನ್ನು ಕೊಡುವೆನು ಎಂದನು. ಆದಕ್ಕೆ ಆ ಬಾಲಕನು ಇಂತು ವರವನ್ನು ಬೇಡಿದನು. ನನ್ನ ತಂದೆಯ ಕೋಪವು ಶಾಂತವಾಗಬೇಕು. ನಾನು ನಿನ್ನ ಬಳಿಯಿಂದ ಹಿಂತಿರುಗಿ ಹೋದಮೇಲೆ ತಂದೆಯು ನನ್ನ ಗುರ್ತು ಹಿಡಿದು ನನ್ನನ್ನು ಪ್ರೀತಿಯಿಂದ ಆದರಿಸಬೇಕು. ತಂದೆಯ ಚಿಂತೆಯು ನಾಶವಾಗಿ ಅವನು ಶಾಂತಚಿತ್ತನಾಗಿರಬೇಕು. ಇದೇ ನಾನು ಕೇಳುವ ಮೊದಲನೆಯವರವು ಎಂದನು. ಯಮನು (ಮೃತ್ಯುವು) ಹಾಗೆಯೇ ಆಗಲೆಂದು ವರವನ್ನು ಕೊಟ್ಟು ನಿನ್ನ ಎರಡನೇವರವು ಯಾವುದು, ಅದನ್ನು ಕೇಳಿಕೋ ಎಂದನು.

ಆನಂತರ ನಚಿಕೇತನು ಸ್ವರ್ಗಸಾಧನವಾದ ಅಗ್ನಿಯನ್ನು ಉಪಾಸನೆಮಾಡುವ ಕ್ರಮವನ್ನೂ ಜ್ಞಾನವನ್ನೂ ಕರುಣಿಸಬೇಕೆಂದು ಬೇಡಲು, ಯಮನು ಅವನ ತೀಕ್ಷ್ಣ ಬುದ್ಧಿಗೆ ಮೆಚ್ಚಿ ಅದರಂತೆ ವರವನ್ನು ಕೊಟ್ಟು, ಈ ಯಾಗಾರ್ಹವಾದ ಅಗ್ನಿಯು ನಿನ್ನ ಹೆಸರಿನಿಂದಲೇ (ನಾಚಿಕೇತಮಗ್ನಿಂ) ಪ್ರಸಿದ್ಧವಾಗಲೆಂದೂ ವರವನ್ನು ಅನುಗ್ರಹಿಸಿದನು.

ಬಳಿಕ ನಚಿಕೇತನು ತನ್ನ ಮೂರನೆಯ ವರವನ್ನು ಕುರಿತು ಈರೀತಿ ಕೇಳಿದನು—ಮನುಷ್ಯರು ಮರಣಹೊಂದಿದಮೇಲೆ ಅವನ ಆತ್ಮವು ಇರುವುದೆಂದು ಕೆಲವರೂ, ಇರುವುದಿಲ್ಲವೆಂದು ಕೆಲವರೂ ಅನ್ನುವರು. ಈ ವಿಷಯದಲ್ಲಿ ನಿಶ್ಚಯವಾದ ವಿಷಯವನ್ನು ತಿಳಿಸಲು ನೀನೊಬ್ಬನೇ ಸಮರ್ಥನು. ನಿನ್ನಿಂದ ಈ ವಿಷಯವಾಗಿ ನಿಶ್ಚಯಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಬಯಸುವೆನು. ಅದನ್ನು ನನಗೆ ವಿಶದವಾಗಿ ತಿಳಿಸು. ಇದೇ ನಾನು ಕೇಳುವ ಮೂರನೆಯ ವರವು ಎಂದನು. ಅದನ್ನು ಕೇಳಿ—

**ಯಮ**—ಎಲೈ ಬಾಲಕನೇ, ಪೂರ್ವದಲ್ಲಿ ದೇವತೆಗಳು ಸಹ ಈ ವಿಷಯದಲ್ಲಿ ಬೇಕಾದಷ್ಟು ಚರ್ಚೆಮಾಡಿರುವರು. ಇದನ್ನು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಇದು ಅತ್ಯಂತ ಸೂಕ್ಷ್ಮವಾದ ವಿಚಾರವು. ಎಲೈ ನಚಿಕೇತನೇ, ನೀನು ಹಟವನ್ನು ಹಿಡಿಯಬೇಡ, ನನ್ನನ್ನು ನಿರ್ಬಂಧಿಸಬೇಡ, ಬೇರೊಂದು ವರವನ್ನು ಕೇಳು ಕೊಡುವೆನು.

**ನಚಿಕೇತ**—ನಾನು ಕೇಳುವ ವಿಷಯವು ದೇವತೆಗಳಿಗೂ ತಿಳಿಯದೆಂದೂ ಅವರೂ ಬಹಳವಾಗಿ ಚರ್ಚೆ ಮಾಡಿರುವರೆಂದೂ ನೀನೇ ಹೇಳಿರುವೆ. ಈ ವಿಷಯವು ನಿನ್ನನ್ನು ಬಿಟ್ಟರೆ ಇತರರಿಗೆ ಯಾರಿಗೂ ಗೊತ್ತಿರುವುದಿಲ್ಲ. ಅದನ್ನು ವಿವರಿಸಲು ನೀನು ಮಾತ್ರ ಸಮರ್ಥನು. ಇದಕ್ಕಿಂತ ಉತ್ತಮವಾದ ವರವು ಬೇರೊಂದಿಲ್ಲ. ದಯವಿಟ್ಟು ಇದನ್ನು ನನಗೆ ಅನುಗ್ರಹಿಸಬೇಕು.

**ಯಮ**—ಎಲೈ ಬಾಲಕನೇ, ನೂರು ವರ್ಷಗಳವರೆಗೆ ಪುತ್ರಪೌತ್ರಾದಿಗಳನ್ನು ಕೇಳು, ಆನೆ ಕುದುರೆಗಳನ್ನೂ ಗೋವು ಮೊದಲಾದ ಪಶುಸಂಪತ್ತನ್ನೂ, ಸುವರ್ಣವನ್ನೂ ವಿಸ್ತಾರವಾದ ಹೊಲಗದ್ದೆಗಳನ್ನೂ ಬೇಕೆಂದು ಕೇಳು. ನಿನಗೆ ಎಷ್ಟು ವರ್ಷ ಬೇಕಾದರೂ ಆಯುಸ್ಸನ್ನು ಕೊಡುವೆನು. ಯಾವುದನ್ನು ಬೇಕಾದರೂ ಕೊಡುವೆನು. ಸಕಲ ಸಂಪತ್ತನ್ನೂ ಬೇಡು. ಭೂಲೋಕದಲ್ಲಿ ಅಲಭ್ಯವಾದ ಯಾವಯಾವ ಇಷ್ಟಾರ್ಥಗಳಿರುವವೋ ಅವನ್ನೆಲ್ಲಾ ಕೇಳು. ರಥಗಳು, ಮನೋಹರರಾದ ಸುಂದರ ಸ್ತ್ರೀಯರು ಮೊದಲಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವೆನು. ಆದರೆ ಮರಣದ ವಿಷಯದಲ್ಲಿ ಮಾತ್ರ ಪ್ರಶ್ನೆಯನ್ನು ಕೇಳಬೇಡ.

**ನಚಿಕೇತ**—ಎಲೈ ಯಮನೇ, ನೀನು ಕೊಡಬೇಕೆಂದಿರುವ ವಸ್ತುಗಳೆಲ್ಲಾ ಕ್ಷಣಿಕವು, ನಶ್ವರವಾದುವು. ಹೆಚ್ಚೇಕೆ ? ನಮ್ಮ ಜೀವಿತವೂ ಕೂಡ ಸ್ವಲ್ಪಕಾಲ ಮಾತ್ರವಿರುವುದು. ಮರಣಾನಂತರ ನೀನು ಕೊಡುವ ವಸ್ತುವಾಹನಾದಿಗಳಿಂದ ಏನು ಪ್ರಯೋಜನ ? ಎಲ್ಲವೂ ಮತ್ತೆ ನಿನ್ನದೇ ಆಗುವುವು. ಎಷ್ಟೇ ಸಂಪತ್ತಿದ್ದರೂ ಅದರಿಂದ ಮನುಷ್ಯನಿಗೆ ತೃಪ್ತಿಯಾಗುವುದಿಲ್ಲ. ನಿನ್ನ ಅನುಗ್ರಹವಿರುವವರೆಗೂ ನನ್ನ ಆಯುಷ್ಯಕ್ಕೆ ಯಾವ ತೊಂದರೆಯೂ ಇಲ್ಲ. ಜರಾ ಮರಣರಹಿತರಾದ ದೇವತೆಗಳಿರುವ ಲೋಕಕ್ಕೆ ಬಂದು ಮನುಷ್ಯನಾದವನು ಕ್ಷಣಿಕ ಸುಖಗಳನ್ನು ಬೇಡಬಹುದೇ ? ಎಲೈ ಮೃತ್ಯುದೇವನೇ, ಯಾವ ತತ್ತ್ವದ ವಿಷಯದಲ್ಲಿ ಬಹಳವಾದ ಚರ್ಚೆ ನಡೆದಿರುವುದೋ, ಯಾವುದು ಪರಲೋಕದಲ್ಲಿ ಮಹತ್ತ್ವವುಳ್ಳದ್ದೋ ಯಾವುದು ಗೂಢವಾಗಿರುವುದೋ ಅಂತಹ ಈ ವರವನ್ನು ಬಿಟ್ಟು ನಾನು ಬೇರೆ ಯಾವ ವರವನ್ನೂ ಅಪೇಕ್ಷಿಸುವವನಲ್ಲ.

**ಯಮ**—ಎಲೈ ಬಾಲಕನೇ, ನೀನು ಇಷ್ಟು ಕೇಳಿದಮೇಲೆ ಹೇಳುವೆನು, ಕೇಳು. ಲೋಕದಲ್ಲಿ ಶ್ರೇಯಸ್ಸು, ಪ್ರೇಯಸ್ಸು ಎಂದು ಎರಡು ವಿಧ ಮಾರ್ಗಗಳಿರುವವು. ಇವೆರಡೂ ಬೇರೆಬೇರೆ. ಇವೆರಡರ ಫಲಗಳೂ ಬೇರೆಬೇರೆ. ಪ್ರೇಯಸ್ಸಿನಲ್ಲಿ

(ಎಂದರೆ ಐಹಿಕ ಸುಖಗಳಲ್ಲಿ) ಪ್ರೇರಿತನಾದ ಮನುಷ್ಯನು ಕರ್ಮದಲ್ಲಿ ಪ್ರವೃತ್ತನಾಗುವನು. ಅವನ ಪುರುಷಾರ್ಥವು ನಾಶ ಹೊಂದುವುದು. ಆದರೆ ಶ್ರೇಯಸ್ಸಿನ ಮಾರ್ಗವನ್ನು ಅನುಸರಿಸುವವನಿಗೆ ಸಮಸ್ತ ಕಲ್ಯಾಣಗಳೂ ಉಂಟಾಗುವವು. ಆದ್ದರಿಂದ ಪ್ರೇಯಸ್ಸು, ಶ್ರೇಯಸ್ಸು ಈ ಎರಡರಲ್ಲಿ ಶ್ರೇಯಸ್ಸೇ ಶ್ರೇಷ್ಠವೆಂದರಿತು ಬುದ್ಧಿವಂತನಾದ ಪುರುಷನು ಶ್ರೇಯಸ್ಸನ್ನೇ ಅಪೇಕ್ಷಿಸುವನು. ಮೂಢನಾದವನು ಇಹಲೋಕದ ವಿಷಯಗಳಿಗೆ ಮನಸೋತು ಪ್ರೇಯಸ್ಸನ್ನು ಬಯಸುವನು. ಎಲೈ ನಾಚಿಕೇತನೇ, ನೀನು ಅನೇಕ ಪ್ರಿಯವಸ್ತುಗಳನ್ನೂ ಇಹಲೋಕದ ಸುಖಗಳನ್ನೂ ವಿಚಾರಪೂರ್ವಕವಾಗಿ ತ್ಯಜಿಸಿರುವೆ. ಅನೇಕ ಜನರು ಧನಧಾನ್ಯ ಸಮೃದ್ಧವಾದ ಪ್ರೇಯಸ್ಸಿನ ಮಾರ್ಗವನ್ನೇ ಬಯಸುತಿದ್ದರೂ ನೀನು ಮಾತ್ರ ಅದನ್ನು ಇಚ್ಛಿಸಲಿಲ್ಲ. ಲೋಕದಲ್ಲಿ ಅವಿದ್ಯೆ ವಿದ್ಯೆ ಎಂಬಿವು ತೀರಾ ಭಿನ್ನವಾದುವು. ನೀನು ವಿದ್ಯೆಯನ್ನೇ ಅಪೇಕ್ಷಿಸುವವನು. ಏಕೆಂದರೆ, ಕಾಮನೆಗಳಿಗೂ ವಿಷಯಸುಖಕ್ಕೂ ಇಹಲೋಕದ ಸುಖಸಂತೋಷಗಳಿಗೂ ನೀನು ಮೋಹಗೊಳ್ಳಲಿಲ್ಲ. ಅವಿದ್ಯೆ ಅಥವಾ ಅಜ್ಞಾನದಿಂದ ಆವೃತರಾದವರು ತಾವೆ, ಅತ್ಯಂತ ಬುದ್ಧಿವಂತರೆಂದು ಭಾವಿಸಿ ಕುರುಡನನ್ನು ಅನುಸರಿಸಿ ಹೋಗುವ ಮತ್ತೊಬ್ಬ ಕುರುಡನಂತೆ ಅಡ್ಡದಾರಿಗೆ ಒಯ್ಯಲ್ಪಡುವರು. ಐಶ್ವರ್ಯಾದಿಗಳ ಮೋಹಕ್ಕೆ ಮನಸೋತು ಬಾಲಕರಂತೆ ಬುದ್ಧಿಹೀನನಾದ ಪುರುಷನಿಗೆ ಯುಕ್ತಾಯುಕ್ತ ವಿವೇಚನೆ ಇರುವುದಿಲ್ಲ. ನಮಗೆ ಕಾಣುತ್ತಿರುವ ಈ ಪ್ರಪಂಚವಲ್ಲದೆ, ಬೇರೆ ಪರಲೋಕವು ಇಲ್ಲವೇ ಇಲ್ಲವೆಂದು ಅವನು ತಿಳಿಯುವನು. ಆದರಿಂದ ಅವನು ಪುನಃ ಪುನಃ ಜನ್ಮವೆತ್ತಿ ಆಯಾ ಜನ್ಮಗಳಲ್ಲಿ ನನಗೆ (ಮೃತ್ಯುವಿಗೆ) ವಶನಾಗುವನು. ಯಾವ ಜ್ಞಾನವು ಎಂದರೆ, ಆತ್ಮಜ್ಞಾನವು ಸರ್ವಶ್ರೇಷ್ಠವೆನಿಸುವುದೋ ಅಂತಹ ಆತ್ಮಜ್ಞಾನವನ್ನು (ಬ್ರಹ್ಮಜ್ಞಾನ) ಕೇಳಿ ತಿಳಿದುಕೊಳ್ಳುವ ಸುಸಂಧಿಯು ಅನೇಕರಿಗೆ ದೊರೆಯಲಾರದು. ಅಂತಹ ಜ್ಞಾನವನ್ನು ಉಪದೇಶಿಸುವ ಗುರುವೂ ಸಿಕ್ಕುವುದು ದುರ್ಲಭವು. ಗುರುವು ಲಭಿಸಿದರೂ ಆದರಲ್ಲಿ ಆಸಕ್ತಿ ಹುಟ್ಟಿ ಆತ್ಮಜ್ಞಾನವನ್ನು ತಿಳಿದುಕೊಳ್ಳಬೇಕೆಂಬ ಬಯಕೆ ಹುಟ್ಟುವುದು ತೀರಾ ಆಶ್ಚರ್ಯವೆಂದೇ ಹೇಳಬೇಕು.. ಈ ಆತ್ಮಜ್ಞಾನದ ವಿಷಯದಲ್ಲಿ ನಾನಾಬಗೆಯ ಭಿನ್ನಾಭಿಪ್ರಾಯಗಳಿರುವುದರಿಂದ ಸಾಮಾನ್ಯ ಮನುಷ್ಯರು ಇದನ್ನು ಹೇಳಿದರೆ ಅದು ಚೆನ್ನಾಗಿ ತಿಳಿಯುವುದಿಲ್ಲ. ಸರಿಯಾದ ಯೋಗ್ಯತೆಯುಳ್ಳ ಆತ್ಮಜ್ಞಾನಿಯೇ ಇದನ್ನುಉಪದೇಶಿಸಬೇಕು. ಇಂತಹ ಗುರುವಿನಿಂದ ಉಪದಿಷ್ಟನಾದ ಶಿಷ್ಯನಿಗೆ ತಿಳಿಯದಿರುವುದೊಂದೂ ಇರುವುದಿಲ್ಲ. ಅವನು ಎಲ್ಲವನ್ನೂ ತಿಳಿದು ಸರ್ವಜ್ಞನೇ ಆಗುವನು. ಈ ಆತ್ಮಜ್ಞಾನವು ಕೇವಲ ತರ್ಕ ಅಥವಾ ಊಹೆಯಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲ. ಜ್ಞಾನಿ ಯಾದ ಗುರುವಿನಿಂದಲೇ ತಿಳಿಯಲ್ಪಡಬೇಕು. ಎಲೈ ನಚಿಕೇತನೇ, ನಿನ್ನಂತೆ ಸತ್ಯಾನ್ವೇಷಿಯೂ, ಆತ್ಮಜ್ಞಾನವಿಷಯದಲ್ಲಿ ಪ್ರಶ್ನೆಮಾಡಿ ಅದನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯೂ ಇರುವವನು ಬೇರೊಬ್ಬನಿಲ್ಲ. ಐಶ್ವರ್ಯಾದಿಗಳು ಅನಿತ್ಯವು. ಅನಿತ್ಯ ವಸ್ತುಗಳ ಸಹಾಯದಿಂದ ನಿತ್ಯವಸ್ತುವಾದ ಬ್ರಹ್ಮಜ್ಞಾನವು ಪ್ರಾಪ್ತವಾಗಲಾರದು. ಎಲೈ ನಾಚಿಕೇತನೇ, ನೀನು ಇತರ ಐಹಿಕವಾದ ಐಶ್ವರ್ಯಾದಿಗಳನ್ನು ತುಚ್ಛೀಕರಿಸಿ, ಸಮಸ್ತ ಇಷ್ಟಾರ್ಥಪ್ರದವೂ, ಪೂರ್ಣಸುಖಕ್ಕೆ ನೆಲೆಯೂ, ಅತ್ಯಂತ ವಿಸ್ತಾರವೂ ಆದ ಪರಮಪದವನ್ನು ಮಾತ್ರ ಬಯಸಿ ಇತರ ಸುಖಗಳನ್ನು ತ್ಯಜಿಸಿರುವೆ. ವಿವೇಕಿಯಾದ ಪುರುಷನು, ಸಾಕ್ಷಾತ್ಕರಿಸಲು ಕಷ್ಟಸಾಧ್ಯವಾದುದೂ ಹೃದಯವೆಂಬ ಗೂಢವಾದ ಗುಹೆಯಲ್ಲಿ ಸ್ಥಿರವಾದುದೂ ಶಾಶ್ವತವೂ, ತೇಜಸ್ಸಿನಿಂದ ಬೆಳಗುತ್ತಿರುವುದೂ ಆದ ಆತ್ಮನನ್ನು ಯೋಗದಿಂದ ಲಭ್ಯವಾಗುವ ಜ್ಞಾನದಿಂದ ಸಾಕ್ಷಾತ್ಕರಿಸಿ, ಹರ್ಷಶೋಕಗಳನ್ನು ದಾಟುವನು. ಇದನ್ನು ಕೇಳಿ ತಿಳಿದುಕೊಂಡ ಮನುಷ್ಯನು ಆತ್ಮನನ್ನು ಸಾಕ್ಷಾತ್ಕರಿಸಿ ಆದರಿಂದ ಲಭ್ಯವಾಗುವ ಆನಂದಕ್ಕೆ ನೆಲೆಯಾದ ಸ್ಥಾನವೇ ತನಗೆ ಲಭಿಸಿತೆಂದು ಆನಂದವನ್ನು ಅನುಭವಿಸುತ್ತಿರುವನು. ಇಂತಹ ಆನಂದಸ್ಥಾನದ ಬಾಗಿಲು ನಚಿಕೇತನಾದ ನಿನಗೆ ತೆರೆದಿರುವುದೆಂದು ತಿಳಿಯುವೆನು.

ನಚಿಕೇತ—ಯಾವುದು (ಯಾವ ವಸ್ತುವು) ಧರ್ಮ, ಮತ್ತು ಅಧರ್ಮಗಳಿಂದ ಭಿನ್ನವೂ, ಕಾರ್ಯಕಾರಣಗಳಿಂದ

ಬೇರೆಯಾದುದೂ, ಭೂತಭವಿಷ್ಯತ್ತುಗಳಿಂದಲೂ ಬೇರೆಯಾದುದೂ ಇರುವುದೆಂದು ನೀನು ತಿಳಿದಿರುವೆಯೋ ಅದನ್ನು ನನಗೆ ವಿಶದವಾಗಿ ಹೇಳು.

ಯಮ — ಸಕಲವೇದಗಳು ಯಾವ ಪರಮಪದವನ್ನು ಹೊಗಳುವವೋ ಯಾವ ಪರಮಪದದ ಪ್ರಾಪ್ತಿಗಾಗಿ ವಿವೇಕಶಾಲಿಗಳು ಬ್ರಹ್ಮಚರ್ಯವನ್ನು ಪಾಲಿಸುತ್ತಾ ಕಠಿಣತಪಸ್ಸನ್ನು ಮಾಡುವರೋ ಅಂತಹ ಪರಮಗತಿಯ ವಿಷಯವನ್ನು ನಾನು ಸಂಕ್ಷೇಪವಾಗಿ ಹೇಳುವೆನು. ಅದೇ ಓಂ ಎಂಬ ಪ್ರಣವವು. ಇದೇ ಅಕ್ಷರಬ್ರಹ್ಮವು. ಇದೇ ಅಕ್ಷರವು ಎಂದರೆ ನಾಶರಹಿತವಾದುದು. ಈ ಅಕ್ಷರದ ಜ್ಞಾನವನ್ನು ಪಡೆದವನು ಯಾವ ಪರಮಪದವನ್ನು ಇಚ್ಛಿಸುವನೋ ಅದನ್ನು ಪಡೆಯುವನು. ಇದೇ ಎಲ್ಲಕ್ಕೂ ಶ್ರೇಷ್ಠವಾದ ಸಾಧನವು. ಈ ಸಾಧನವನ್ನರಿತವನು ಬ್ರಹ್ಮಲೋಕದಲ್ಲಿಯೂ ಗೌರವಿಸಲ್ಪಡುವನು. ಜ್ಞಾನಮಯವಾದ ಆತ್ಮನಿಗೆ ಜನ್ಮಮೃತ್ಯುಗಳಿಲ್ಲ. ಆ ಆತ್ಮವು ಇನ್ನೊಂದು ವಸ್ತುವಿನಿಂದ ಉತ್ಪನ್ನವಾದುದಲ್ಲ. ಅದು ಉತ್ಪನ್ನವಾದುದೇ ಅಲ್ಲ. ಅದು ಅಜವು (ಉತ್ಪನ್ನರಹಿತವಾದುದು), ನಿತ್ಯವು, ಶಾಶ್ವತವು, ಸನಾತನವು. ಆದುದರಿಂದ ಶರೀರವು ಮೃತವಾದರೂ ಶರೀರದಲ್ಲಿ ನೆಲೆಸಿರುವ ಆತ್ಮಕ್ಕೆ ನಾಶವಿಲ್ಲ. ನಾನು ಕೊಲ್ಲುವೆನು, ನಾನು ಕೊಲ್ಲಲ್ಪಡುವೆನು ಎಂದು ಹೇಳುವ ಪುರುಷರು ಅಜ್ಞಾನಿಗಳಲ್ಲದೆ ಮತ್ತೇನೂ ಅಲ್ಲ. ಏಕೆಂದರೆ ಆತ್ಮ ಕೊಲ್ಲುವುದೂ ಇಲ್ಲ. ಪ್ರಾಣಿಗಳ ಹೃದಯವೆಂಬ ಗುಹೆಯಲ್ಲಿರುವ ಆತ್ಮವಸ್ತುವು ಅಣುವಿಗಿಂತಲೂ ಅಣುವಾಗಿರುವುದು. ಎಂದರೆ ಅತ್ಯಂತ ಸೂಕ್ಷ್ಮವಾಗಿರುವುದು. ಇದು ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ ಮಹತ್ತಾದ (ದೊಡ್ಡದಾದ) ವಸ್ತುವಿಗಿಂತಲೂ ಮಹತ್ತಾದುದು. ಕಾಮರಹಿತನಾದವನಿಗೆ ಮಾತ್ರ ಆತ್ಮನ ದರ್ಶನವಾಗುವುದು. ಶೋಕರಹಿತನಾದವನು ಪರಮಾತ್ಮನ ಅನುಗ್ರಹದಿಂದ ಆತ್ಮನ ಮಹಿಮೆಯನ್ನು ತಿಳಿದುಕೊಳ್ಳುವನು. ಒಂದೇ ಸ್ಥಳದಲ್ಲಿ ಕುಳಿತಿದ್ದರೂ ಆತ್ಮನು ದೂರಹೋಗಬಲ್ಲದು. ಮಲಗಿದ್ದರೂ ಸರ್ವತ್ರ ಸಂಚರಿಸಬಲ್ಲದು. ಇಂತಹ ಗುಣವಿಶಿಷ್ಟನೂ ಆನಂದಯುಕ್ತನೂ ದುಃಖರಹಿತನೂ ಆದ ಆತ್ಮನನ್ನು ನನ್ನ ಹೊರತು ಯಾರು ? ಶರೀರಗಳಲ್ಲಿದ್ದರೂ ಅಶರೀರನಾಗಿಯೂ (ಎಂದರೆ ಶರೀರಕ್ಕೆ ಸಂಬಂಧಪಟ್ಟ ಸುಖದುಃಖಾದಿಗಳಲ್ಲಿ ಭಾಗಿಯಾಗದಿರುವ) ಅನಿತ್ಯಗಳಲ್ಲಿ ನಿತ್ಯನಾಗಿಯೂ ಇರುವ ಸರ್ವವ್ಯಾಪಿಯಾದ ಮತ್ತು ಶ್ರೇಷ್ಠನಾದ ಈ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಂಡ ವಿವೇಕಿಯಾದ ಪುರುಷನು ಶೋಕರಹಿತನಾಗುವನು ಎಂದರೆ ಅವನಿಗೆ ದುಃಖವೆಂಬುದೇ ಇಲ್ಲವು. ಈ ಆತ್ಮಜ್ಞಾನವನ್ನು ಪಡೆಯಬೇಕಾದರೆ ಇದು ಪ್ರವಚನದಿಂದ (ಶಾಸ್ತ್ರಾದಿಗಳನ್ನು ಓದಿ ಅಧ್ಯಯನ ಮಾಡುವುದರಿಂದ), ಲಭಿಸುವುದಿಲ್ಲ. ಬುದ್ಧಿಯಿಂದಲಾಗಲಿ, ಇತರರು ಹೇಳಿದ್ದನು ಕೇಳುವುದರಿಂದಲಾಗಲಿ ಲಭಿಸುವುದಿಲ್ಲ. ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಯಾವನು ಬಯಸುವನೋ ಯಾವನಿಗೆ ಆತ್ಮನು ಅನುಗ್ರಹಮಾಡುವನೋ ಎಂದರೆ ಯಾವ ಪುರುಷನಿಗೆ ಆತ್ಮನು ಪ್ರಸನ್ನನಾಗುವನೋ ಅವನಿಗೆ ಮಾತ್ರ ಈ ಆತ್ಮನು ತನ್ನ ನಿಜಸ್ವರೂಪವನ್ನು ಅವನಿಗೆ ಪ್ರಕಟಮಾಡಿ ತೋರಿಸುವನು. ಯಾವ ಪುರುಷನು ದುಷ್ಟಕರ್ಮವನ್ನು ಬಿಟ್ಟಿರುವುದಿಲ್ಲವೋ, ಯಾವನು ಅಶಾಂತನೋ ಯಾವನು ಏಕಾಗ್ರಚಿತ್ತವಿಲ್ಲದವನೋ, ಯಾವನ ಮನಸ್ಸಿನಲ್ಲಿ ಶಾಂತಿಯು ನೆಲೆಸಿರುವುದಿಲ್ಲವೋ ಅವನಿಗೆ ಎಷ್ಟೇ ಜ್ಞಾನವಿದ್ದರೂ ಆತ್ಮಸಾಕ್ಷಾತ್ಕಾರವಾಗಲಾರದು. ಬ್ರಾಹ್ಮಣ, ಕ್ಷತ್ರಿಯ ಮೊದಲಾದ ಸಮಸ್ತವರ್ಗದ ಜನರೂ ಅಷ್ಟೇಕೆ ? ಮೃತ್ಯುವೂ ಸಹ ಯಾವ ಆತ್ಮನ ಆಹಾರವೋ (ಎಂದರೆ ಅಧೀನವೋ) ಅಂತಹ ಆತ್ಮನು ಎಲ್ಲಿರುವನೆಂಬುದನ್ನು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವೇ ?

ಯಮನು ತನ್ನ ವಿವರಣೆಯನ್ನು ಮುಂದುವರೆಸುತ್ತಾ ಇಂತೆಂದನು—ಪುರುಷನ ಹೃದಯಾಂತರಾಳವೆಂಬ ಗುಹೆಯಲ್ಲಿ ನೆಲೆಸಿದ್ದ ಕರ್ಮಫಲಗಳನ್ನನುಭವಿಸುತ್ತ ಜೀವಾತ್ಮ ಪರಮಾತ್ಮಗಳೆಂಬ ಎರಡು ಆತ್ಮಗಳು ಛಾಯಾತಪಗಳಂತೆ ಎಂದರೆ ಬೆಳಕು ಮತ್ತು ಅದರ ನೆರಳಿನಂತೆ ಒಂದರ ಪಕ್ಕದಲ್ಲಿಯೇ ಮತ್ತೊಂದು ಸದಾ ಇರುವುವೆಂದು ಬ್ರಹ್ಮಜ್ಞಾನಿಗಳು ಹೇಳುವರು.

ಯಜ್ಞಾದಿಕರ್ಮಗಳನ್ನು ಮಾಡಿ ಬ್ರಹ್ಮೋಪಾಸನೆಮಾಡುವ ಸದ್ಭಕ್ತರಿಗೆ ಸಂಸಾರ ಸಾಗರವನ್ನು ದಾಟಿಸುವ ಸೇತುವೆಯಂತಿರುವ ನಚಿಕೇತನೆಂಬ ಅಗ್ನಿಯನ್ನೂ, ಸಂಸಾರಸಾಗರವನ್ನು ದಾಟಬೇಕೆಂದು ಬಯಸುವವರಿಗೆ ಅಭಯವನ್ನುಂಟುಮಾಡಿ ಅದನ್ನು ದಾಟಿಸುವ ಪರಬ್ರಹ್ಮನನ್ನೂ ನಾವು ಬಲ್ಲೆವು. ಈ ಶರೀರವೇ ಒಂದು ರಥ. ಆತ್ಮನು ಅದರಲ್ಲಿ ಕುಳಿತಿರುವ ರಥಿಕನು. ಬುದ್ಧಿಯೇ ಸಾರಥಿಯು. ಅಶ್ವಗಳನ್ನು ಹತೋಟಿಯಲ್ಲಿಡುವ ಕಡಿವಾಣವೇ ಮನಸ್ಸು; ಇಂದ್ರಿಯಗಳೇ ಕುದುರೆಗಳು. ಇಂದ್ರಿಯಗಳಿಗೆ ಸಂಬಂಧಪಡುವ ವಿಷಯಸುಖಗಳೇ ಮಾರ್ಗವು. ಇಂದ್ರಿಯ ಮತ್ತು ಮನಸ್ಸುಗಳಿಂದ ಯುಕ್ತನಾದ ಆತ್ಮನು ಸುಖದುಃಖಗಳನ್ನು ಅನುಭವಿಸುವವನೆಂದು ವಿವೇಕಿಗಳು ಹೇಳುವರು. ಮನಸ್ಸು ಯಾವಾಗಲೂ ಚಂಚಲಸ್ವಭಾವವುಳ್ಳದ್ದಾದುದರಿಂದ ಶುದ್ಧಜ್ಞಾನವಿಲ್ಲದವನ ಇಂದ್ರಿಯಗಳು, ದುಷ್ಟಕುದುರೆಗಳು ಸಾರಥಿಯ ವಶವರ್ತಿಯಾಗದಿರುವಂತೆ, ಸ್ವೇಚ್ಛಾಚಾರಿಗಳಾಗಿ ಅವನ ವಶದಲ್ಲಿರುವುದಿಲ್ಲ. ಎಂದರೆ ದುಷ್ಟಕುದುರೆಗಳು ಹೇಗೆ ಸಾರಥಿಯ ವಶವಾಗಿರುವುದಿಲ್ಲವೋ ಹಾಗೆಯೇ ಶುದ್ಧಜ್ಞಾನವಿಲ್ಲದವನ ಇಂದ್ರಿಯಗಳು (ಮನಸ್ಸು, ಕಣ್ಣು, ಕಿವಿ ಮೊದಲಾದವು) ಅವನ ವಶದಲ್ಲಿರುವುದಿಲ್ಲ. ಆದರೆ ವಿಜ್ಞಾನವಂತನಾಗಿರುವ ಪುರುಷನ ಇಂದ್ರಿಯಗಳು ಒಳ್ಳೇ ಪಳಗಿದ ಕುದುರೆಗಳು ಸಾರಥಿಯ ವಶದಲ್ಲಿರುವಂತೆ ಅವನ ವಶದಲ್ಲಿಯೇ ಇರುವವು. ಯಾವ ಪುರುಷನು ವಿಜ್ಞಾನರಹಿತನೋ ಯಾವನು ಚಂಚಲಚಿತ್ತವುಳ್ಳವನೋ ಯಾವನು ಸದಾ ಅಶುಚಿಯಾಗಿರುವನೋ ಅವನಿಗೆ ಪರಮಪದವು ದೊರೆಯಲಾರದು. ಅವನಿಗೆ ಜನನಮರಣರೂಪವಾದ ಸಂಸಾರದ ತೊಡಕು ಇದ್ದೇ ಇರುವುದು ಎಂದರೆ ಅವನು ಹುಟ್ಟುತ್ತಲೂ ಸಾಯುತ್ತಲೂ ಪುನಃ ಬೇರೊಂದು ಜನ್ಮದಲ್ಲಿ ಹುಟ್ಟುತ್ತಲೂ ಇರುವನು. ಆದರೆ ವಿಜ್ಞಾನವಂತನೂ, ಸ್ಥಿರಚಿತ್ತನೂ ಶುಚಿರ್ಭೂತನೂ ಆದ ಪುರುಷನಿಗೆ ಮಾತ್ರ ಪರಮಪದವು (ಮುಕ್ತಿಯು) ದೊರಕುವುದು. ಅವನು ಆ ಪರಮಪದದಿಂದ ಮತ್ತೆ ಹೊರಟು ಬರುವುದಿಲ್ಲ. ಅವನಿಗೆ ಮತ್ತೆ ಹುಟ್ಟುಸಾವುಗಳೇ ಇಲ್ಲ. ಯಾವ ಮನುಷ್ಯನು ವಿಜ್ಞಾನವನ್ನೇ ತನ್ನ ಸಾರಥಿಯನ್ನಾಗಿ ಮಾಡಿಕೊಂಡು ತನ್ನ ಮನಸ್ಸನ್ನು ಸಂಯಮದಲ್ಲಿಟ್ಟುಕೊಳ್ಳುವನೋ ಅವನು ಸಂಸಾರಸಾಗರವನ್ನು ದಾಟಿ ಸರ್ವವ್ಯಾಪಿಯಾದ ಪರಮಪದವನ್ನು ಸೇರುವನು. ಆ ಶ್ರೇಷ್ಠವಾದ ಸ್ಥಾನವೇ ಮುಕ್ತಿಯು. ವಿಷ್ಣುವಿನ ಪರಮಪದವೆಂದು ಹೇಳಲ್ಪಡುವುದು

ಇಂದ್ರಿಯಗಳಾಚೆಗೆ ಎಂದರೆ ಇಂದ್ರಿಯಗಳಿಗಿಂತ ಸೂಕ್ಷ್ಮವಾಗಿರುವ ವಸ್ತುಗಳು ಅಥವಾ ತನ್ಮಾತ್ರೆಗಳು ಪಂಚಭೂತಗಳ ಸೂಕ್ಷ್ಮಸ್ವರೂಪಗಳಾಗಿರುವವು (ತನ್ಮಾತ್ರವೆಂದರೆ ಸೂಕ್ಷ್ಮರೂಪ). ಪಂಚಭೂತಗಳ ತನ್ಮಾತ್ರೆಗಳನ್ನು ದಾಟಿದರೆ ಮನಸ್ಸು, ಮನಸ್ಸಿನ ಆಚೆಗೆ ಬುದ್ಧಿ, ಅದರಾಚೆಗೆ ಮಹದಾತ್ಮ, ಅದರಾಚೆಗೆ ಶ್ರೇಷ್ಠವಾದ ಅವ್ಯಕ್ತ, ಅದರಾಚೆಗೆ ಶ್ರೇಷ್ಠವಾದ ಪುರುಷ (ಪರಬ್ರಹ್ಮ) ಇರುವುದು. ಈ ಪುರುಷನಿಗಿಂತ ಶ್ರೇಷ್ಠವಸ್ತುವು ಯಾವುದೂ ಇಲ್ಲ. ಅದೇ ಕಟ್ಟಕಡೆಯ ಅತ್ಯಂತ ಶ್ರೇಷ್ಠವಾದ ಸ್ಥಾನವು (ಗತಿಯು)

ಈ ಶ್ರೇಷ್ಠನಾದ ಪರಮಪುರುಷನೇ ಸಮಸ್ತ ಭೂತಗಳ ಎಂದರೆ ಪ್ರಾಣಿಗಳ ಶರೀರಗಳಲ್ಲಿ ಗೂಢವಾಗಿ ನೆಲೆಸಿರುವ ಆತ್ಮನು. ಅವನನ್ನು ನೋಡುವುದಕ್ಕೂ ಬಾಹ್ಯಚಕ್ಷುಸ್ಸಿನಿಂದ ಸಾಧ್ಯವಿಲ್ಲ. ಅವನನ್ನು ಯಾರೂ ನೋಡಲಾರರು. ಆದರೆ ಯೋಗಿಗಳೂ, ತಪಸ್ವಿಗಳೂ ಆದವರ ಸೂಕ್ಷ್ಮಬುದ್ಧಿಗೆ ಗೋಚರನಾಗುವನು. ಎಂದರೆ ಅತ್ಯಂತ ಸೂಕ್ಷ್ಮವಸ್ತುಗಳನ್ನು ಸಾಕ್ಷಾತ್ಕರಿಸಬಲ್ಲ ತಪಸ್ವಿಗಳ ಅಂತರ್ಮುಖವಾದ ತೀಕ್ಷ್ಣ ಬುದ್ಧಿಗೆ ಮಾತ್ರ ಗೋಚರವಾಗುವನು. ಬುದ್ಧಿವಂತನಾದ ಪುರುಷನು ತನ್ನ ವಾಕ್ಶಕ್ತಿಯನ್ನು ಅದಕ್ಕಿಂತ ಸೂಕ್ಷ್ಮೇಂದ್ರಿಯವಾದ ಮನಸ್ಸಿನಲ್ಲಿ ಲೀನಮಾಡಬೇಕು. ಅನಂತರ ಮನಸ್ಸನ್ನು ಮನಸ್ಸಿಗಿಂತ ಇನ್ನೂ ಸೂಕ್ಷ್ಮವಾದ ಜ್ಞಾನಮಯ ಅಥವಾ ಚೇತನಮಯ ಆತ್ಮನಲ್ಲಿ ಲೀನಮಾಡಬೇಕು. ಬಳಿಕ ಚೇತನಮಯ ಆತ್ಮನನ್ನು ಮಹದಾತ್ಮನಲ್ಲಿಯೂ, ಮಹದಾತ್ಮನನ್ನು ಶಾಂತಾತ್ಮನಲ್ಲಿಯೂ ಲೀನಮಾಡಬೇಕು. ಆದ್ದರಿಂದ ಎಚ್ಚೆ ಜನಗಳೇ ಏಳಿರಿ. ಎದ್ದು ಕಾರ್ಯೋನ್ಮುಖರಾಗಿರಿ. ನಿಮಗಿಂತಲೂ ಶ್ರೇಷ್ಠರಾದ ಜ್ಞಾನಿಗಳ ಬಳಿಗೆ ಹೋಗಿ

ಬ್ರಹ್ಮಜ್ಞಾನವನ್ನು ಕೇಳಿ ತಿಳಿದುಕೊಳ್ಳಿರಿ. ಈ ಬ್ರಹ್ಮಜ್ಞಾನವನ್ನು ಕಲಿಯುವುದಕ್ಕಾಗಿ ಪ್ರಯತ್ನಿಸುವುದು ಎಷ್ಟು ಕಷ್ಟವೆಂದರೆ—ಹರಿತವಾದ ಕತ್ತಿಯ ಅಲುಗಿನ ಮೇಲೆ ನಡೆಯುವುದು ಎಷ್ಟು ಕಷ್ಟವೋ ಈ ಮಾರ್ಗವೂ ಅಷ್ಟೇ ಕಷ್ಟಸಾಧ್ಯವೆಂದೂ ತತ್ತ್ವಜ್ಞಾನವೇತ್ತರಾದ ಕವಿಗಳು ಹೇಳುವರು, ಈ ಆತ್ಮವು ಶಬ್ದರಹಿತವು, ಸ್ಪರ್ಶರಹಿತವು. ಅವ್ಯಯವು, ರೂಪರಹಿತವು ಎಂದರೆ ಅದನ್ನು ಧ್ವನಿಮೂಲಕ ಕೇಳಿ ತಿಳಿಯಲಾಗುವುದಿಲ್ಲ. ಅದನ್ನು ಮುಟ್ಟಲೂ ಸಾಧ್ಯವಿಲ್ಲ. ಕಣ್ಣಿನಿಂದ ನೋಡಲೂ ಸಾಧ್ಯವಿಲ್ಲ, ಕಣ್ಣಿನಿಂದ ಧೂಡಲೂ ಸಾಧ್ಯವಿಲ್ಲ. ಅದು ಯಾವಾಗಲೂ ನಾಶವಿಲ್ಲನೆ ಇರುವುದೇ ಮತ್ತು ಅದು ರಸರಹಿತವು ಎಂದರೆ ಬಾಯಿನಿಂದ ರುಚಿನೋಡಿ ತಿಳಿಯುವುದಕ್ಕಾಗುವುದಿಲ್ಲ. ಗಂಧರಹಿತವು ಎಂದರೆ ಮೂಸಿನೋಡಿ ಅದರ ಸ್ವರೂಪವವನ್ನು ತಿಳಿಯುವುದೂ ಸಾಧ್ಯವಿಲ್ಲ. ಅದು ಅನಾದಿಯು, ಅನಂತವು-ಎಂಧರೆ ಅದಕ್ಕೆ ದೇಶಕಾಲಗಳ ಪರಿಮಿತಿಯೇ ಇಲ್ಲ. ಯಾವಾಗಲೂ ಇರುವುದರಿಂದ ಅನಾದಿಯು. ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ ಅನಂತವು. ಮಹತ್ತತ್ವದಿಂದಾಚೆಗೆ ಎಂದರೆ ಅದಕ್ಕಿಂತಲೂ ಸೂಕ್ಷ್ಮವಾಗಿ ಅದರ ಉತ್ಪತ್ತಿಗೂ ಕಾರಣವಾಗಿರುವ ಸತ್ಯಸ್ವರೂಪವಾದ ಆತ್ಮತತ್ವವನ್ನು ತಿಳಿದವರು ಮೃತ್ಯುಮುಖದಿಂದ ಪಾರಾಗುವನು ಎಂದರೆ ಅವನಿಗೆ ಮೃತ್ಯುಭಯವಿಲ್ಲ ಎಂದನು. ಮೃತ್ಯುದೇವನು ಅಥವಾ ಯಮನು ನಚಿಕೇತನಿಗೆ ಹೇಳಿದ ಈ ಉಪಾಖ್ಯಾನವನ್ನು ಹೇಳುವವನೂ (ಶ್ರವಣಮಾಡುವವನೂ) ಬ್ರಹ್ಮಲೋಕದಲ್ಲಿ ಗೌರವಿಸಲ್ಪಟ್ಟು ಪೂಜ್ಯನಾಗುತ್ತಾಥ. ಮತ್ತು ಪರಮ ರಹಸ್ಯವಾದ ಉಪಾಖ್ಯಾನವನ್ನು ಬ್ರಾಹ್ಮಣರ ಸಭೆಯಲ್ಲಾಗಲೀ ಯಾವ ಪುರುಷನು ಇತರರಿಗೆ ಶ್ರವಣಮಾಡಿಸುವನೋ ಆ ಪುರುಷನು ಮಾಡುವ ಕರ್ಮವು ಅನಂತಾನಂತಫಲಪ್ರದವಾಗುವುದು.

ಮೃತ್ಯುದೇವನಾದ ಯಮನು ನಚಿಕೇತನೊಡನೆ ಸಂಭಾಷಣೆಯನ್ನು ಮುಂದುವರಿಸುತ್ತಾ ಮತ್ತಿಂತೆಂದನು—

ಯಮ —ಸ್ವಯಂಭುವಾದ ಪರಮಾತ್ಮನು ತನ್ನ ಶಕ್ತಿಗಳನ್ನು ಬಹಿರ್ಮುಖವಾಗಿ ಹರಿಯಬಿಟ್ಟನು. ಆದ್ದರಿಂದ ಇಂದ್ರಿಯಗಳು ಬಾಹ್ಯವಸ್ತುವನ್ನು ಮಾತ್ರ ನೋಡಬಲ್ಲವು. ಅತ್ಯಂತ ಸೂಕ್ಷ್ಮರೂಪದ ಅಂತರಾತ್ಮನು ಅವುಗಳಿಗೆ ಗೋಚರವಾಗುವುದಿಲ್ಲ. ವಿವೇಕಿಯಾದ ಪುರುಷನು ಅಮೃತತ್ವದನ್ನು (ಮರಣರಾಹಿತ್ಯವನ್ನು ಎಂದರೆ ಮುಕ್ತಿಪದವಿಯನ್ನು ಬಯಸಿದಲ್ಲಿ ಅವನು ಅಂತರ್ಮುಖನಾಗಿ (ತಪಸ್ಸಿನಿಂದಲೂ ಧ್ಯಾನದಿಂದಲೂ ಮಾತ್ರ) ಅಂತರಾತ್ಮನನ್ನು ಸಾಕ್ಷಾತ್ಕರಿಸುವನು. ಬಾಲಕರಂತೆ ಮಂದಬುದ್ಧಿಯುಳ್ಳವರು ಬಾಹ್ಯಸುಖಗಳಿಗೆ ಆಸೆಬಿದ್ದು ವಿಸ್ತೃತವಾದ ಮರಣಪಾಶದಲ್ಲಿ ಸಿಕ್ಕಿಬೀಳುವರು. ಆದರೆ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲದೆ ಜನ್ಮಮರಣರೂಪವಾದ ಸಂಸಾರಸಾಗರದಲ್ಲಿ ಸಿಕ್ಕಿ ದುಃಖಿಸುತ್ತಿರುವರು. ಆದರೆ ಬುದ್ಧಿವಂತರು (ಆತ್ಮಜ್ಞಾನಾಪೇಕ್ಷಿಗಳು) ಅಮೃತಪದವಿಯ ಸುಖವನ್ನರಿತು ಅದನ್ನು ಪಡೆಯುವುದಕ್ಕಾಗಿ ಈ ಲೋಕದ ಅನಿತ್ಯ ವಸ್ತುಗಳಿಗೆ ಆಶೆಪಡುವುದಿಲ್ಲ. ಈ ಅನಿತ್ಯವಸ್ತುಗಳನ್ನು ಪಡೆಯುವುದರಿಂದ ನಿತ್ಯವಸ್ತುವು ದೊರೆಯುವುದೆಂದು ಭಾವಿಸುವುದಿಲ್ಲ. ರೂಪ, ರಸ, ಗಂಧ, ಶಬ್ದ, ಸ್ಪರ್ಶವೆಂಬ ಐದು ವಿಧವಾದ ವಿಷಯಸುಖಗಳಿಂದಲೂ ಮೈಥುನ (ಸ್ತ್ರೀಸಂಭೋಗ) ದಿಂದಲೂ ಉಂಟಾಗುವ ಸುಖದ ಜ್ಞಾನವು ಈ ಆತ್ಮನಿಂದಲೇ ಆಗುವುದು. ಯಾವುದರಿಂದ ಈ ಸುಖದ ತಿಳುವಳಿಕೆಯುಂಟಾಗುವುದೋ ಅದೇ ಆತ್ಮವು. ಇನ್ನು ಉಳಿದದ್ದೇನು ? ಆತ್ಮವೊಂದೇ. ಸ್ವಪ್ನಸ್ಥಿತಿಯಲ್ಲಿಯ, ಜಾಗೃದವಸ್ಥೆಯಲ್ಲಿಯೂ ಆಗುವ ವ್ಯಾಪಾರಗಳು ಯಾವುದರ ಬಲದಿಂದ ತಿಳಿಯುತ್ತವೆಯೋ ಅಂತಹ ಶ್ರೇಷ್ಠವೂ ಸರ್ವವ್ಯಾಪಿಯೂ ಆದ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡಮೇಲೆ ವಿವೇಕಿಯಾದವನು ಯಾವವಿಧವಾದ ಶೋಕಕ್ಕೂ ಆಸ್ಪದವೀಯುವುದಿಲ್ಲ. ಅವನಿಗೆ ದುಃಖಶೋಕಗಳೇ ಇಲ್ಲ. ದೇಹಸಂಬಂಧಿಯಾದ ಜೀವನ ಸಮೀಪದಲ್ಲಿದ್ದು ಫಲವನ್ನನುಭೋಗಿಸುವ ಮತ್ತು ಭೂತಭವಿಷ್ಯಗಳಿಗೊಡೆಯನಾದ ಆತ್ಮನನ್ನು ತಿಳಿದವನು ಭಯರಹಿತನಾಗುವನು. ಅವನಿಗೆ ಯಾವವಿಧವಾದ ಭಯವೂ, ಆತಂಕವೂ ಇಲ್ಲದೆ ನಿಶ್ಚಿಂತನಾಗಿರುವನು. ಯಾವುದು ತಪಸ್ಸಿಗಿಂತ ಪೂರ್ವದಲ್ಲಿ ಎಂದರೆ ಅನಾದಿಕಾಲದಿಂದ ಇದ್ದಿತೋ ಯಾವುದು ಉದಕ ಮುಂತಾದ ತತ್ತ್ವಗಳ ಸೃಷ್ಟಿಗಿಂತಲೂ

ಪೂರ್ವದಲ್ಲಿ ಇದ್ದಿತೋ ಯಾವುದು ಹೃದಯದ ಗುಹೆಯಲ್ಲಿ (ಯಾರಿಗೂ ಕಾಣಿಸದಂತೆ) ಪ್ರವೇಶಿಸಿ ಪಂಚಭೂತಗಳೊಡನೆ (ಎಂದರೆ ಶರೀರದ ನಾನಾ ಅವಯವಗಳೊಡನೆ (ಸಂಪರ್ಕದಿಂದ) ಇರುವುದನ್ನು ಜ್ಞಾನಿಗಳು ನೋಡಿ ತಿಳಿಯುವರೋ ಅದೇ ಈ ಆತ್ಮವು. ಸಕಲದೇವತಾತ್ಮಳಾದ ಅದಿತಿದೇವಿಯು ಯಾರಿಂದ (ಯಾವ ಆತ್ಮದಿಂದ) ಉತ್ಪನ್ನಳಾದಳೋ, ಯಾವುದು ಪ್ರಾಣಿಗಳ ಶರೀರದಲ್ಲಿ ಪಂಚಭೂತಗಳೊಡನೆ ಸಂಪರ್ಕದಿಂದ ಗೂಢವಾಗಿ ನೆಲಸಿರುವುದೋ ಅದೇ ಈ ಆತ್ಮವು. ಮತ್ತು ಸ್ತ್ರೀಯರ ಗರ್ಭದಲ್ಲಿರುವಂತೆ ಗೋಪ್ಯನಾಗಿ ಎರಡು ಅರಣಿಗಳ ಮಧ್ಯದಲ್ಲಿರುವವನೂ, ಯಜ್ಞಾದಿಗಳಲ್ಲಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವವನೂ, ಪ್ರತಿದಿನವೂ ಬಹಳ ಎಚ್ಚರಿಕೆಯಿಂದ ಪೂಜ್ಯನಾದವನೂ ಆದ ಯಾವ ಅಗ್ನಿಯಿರುವನೋ ಅವನೇ ಈ ಆತ್ಮನು. ಆತ್ಮನಿಂದಲೇ ಸೂರ್ಯನು ಉದಯಿಸುವನು. (ಉತ್ಪನ್ನ ನಾಗುವನು) ಸೂರ್ಯನು ಅಸ್ತನಾಗುವುದೂ ಆತ್ಮನಲ್ಲಿಯೇ. ಸಕಲ ದೇವತೆಗಳೂ ಆತ್ಮನಲ್ಲಿಯೇ ಜನಿಸಿ ಅಲ್ಲಿಯೇ ಲೀನರಾಗುವರು. ಇಂತಹ ಸರ್ವಶಕ್ತಿಸಾಮರ್ಥ್ಯವಿರುವುದೇ ಆತ್ಮವು. ಇಲ್ಲಿರುವಂತೆ ಅಲ್ಲಿಯೂ, ಅಲ್ಲಿರುವಂತೆ ಇಲ್ಲಿಯೂ ಇರುವುದು. ಆತ್ಮನಲ್ಲಿ ನಾನಾಭೇದಗಳಿರುವುದೆಂದು ತಿಳಿಯುವವನೂ, ನಾನೇ ಬೇರೆ, ಆತ್ಮನೇ ಬೇರೆ ಎಂಬ ಅಜ್ಞಾನ ದಿಂದ ಮೋಹಿತನಾದವನೂ ಪುನಃಪುನಃ ಜನ್ಮಮರಣಗಳಿಗೆ ಸಿಲುಕುವನು. ನಾನಾತ್ವವಿರುವುದೆಂದು ತಿಳಿಯುವುದು ಬರೀ ಮನಸ್ಸಿನ ಭ್ರಾಂತಿಯು. ಇಲ್ಲಿ (ಆತ್ಮನಲ್ಲಿ) ಯಾವ ನಾನಾತ್ವವೂ ಇಲ್ಲ. ನಾನಾತ್ವವಿರುವುದೆಂದು ಬಗೆಯುವವನು ಪುನಃಪುನಃ ಮರಣಕ್ಕೆ ಒಳಗಾಗುವನು. ಇಲ್ಲಿ ನಾನಾತ್ವವೆಂದರೇನೆಂಬುದನ್ನು ವಿವರಿಸುವುದವಶ್ಯಕವು. ಪ್ರಪಂಚದಲ್ಲಿ ಅನೇಕವೂ ನಾನಾವಿಧವೂ ಆದ ಜೀವರಾಶಿಗಳಿರುವವು. ಅವುಗಳಲ್ಲೆಲ್ಲಾ ಒಬ್ಬನೇ ಆದ ಆತ್ಮನು ಅಂತರಾತ್ಮನಾಗಿ ಎಂದರೆ ಹೃದಯದಲ್ಲಿ ಗೂಢವಾಗಿ ನೆಲೆಸಿರುವನು. ಆದ್ದರಿಂದ ಈ ವಿಧವಾದ ಜೀವರಾಶಿಗಳೂ ಅವುಗಳಲ್ಲಿರುವ ಆತ್ಮನೂ ಬೇರೆಬೇರೆ, ಈ ಪ್ರಾಣಿಯಲ್ಲಿರುವ ಆತ್ಮವು ಬೇರೆ, ಇನ್ನೊಂದು ಪ್ರಾಣಿಯಲ್ಲಿರುವ ಆತ್ಮವೇ ಬೇರೆ ಎಂದು ನಾನಾತ್ವವನ್ನು ಆರೋಪಿಸುವವನು ಮರಣಕ್ಕೆ ಪದೇಪದೇ ಈಡಾಗುವನು. ಅನೇಕ ಜೀವರಾಶಿಗಳಿದ್ದರೂ ಅವುಗಳಲ್ಲೆಲ್ಲಾ ನೆಲೆಸಿರುವ ಆತ್ಮನು ಒಬ್ಬನೇ ಆಗಿರುವನು, ಬೇರೆ ಬೇರೆಯಲ್ಲ. ಹೀಗೆ ಅನೇಕ ಪ್ರಾಣಿಗಳ ಶರೀರದಲ್ಲಿ ಏಕಕಾಲದಲ್ಲಿ ನೆಲಸಿರುವುದು ಆತ್ಮನ ವೈಶಿಷ್ಟ್ಯವು ಮತ್ತು ಅವನ ಮಹತ್ತ್ವವು. ಇದನ್ನು ತಿಳಿಯದೆ ನಾನಾ ಪ್ರಾಣಿಗಳ ಶರೀರದಲ್ಲಿರುವ ಆತ್ಮವು ಬೇರೆಬೇರೆ ಎಂದು ತಿಳಿಯುವುದು ಮೂಢತನವು ಮನುಷ್ಯನ ಅಂತಃಕರಣದಲ್ಲಿ ಎಂದರೆ ಹೃದಯ ಮಧ್ಯದಲ್ಲಿ ನೆಲೆಸಿರುವ ಆತ್ಮನನ್ನು ಪುರಷನೆಂದು ಹೇಳುವರು. ಈ ಪುರುಷನು ಅಂಗುಷ್ಟ ಎಂದರೆ ಒಂದು ಹೆಬ್ಬೆರಳಿನಗಾತ್ರ ಪ್ರಮಾಣದಲ್ಲಿರುವನು. ಎಂದರೆ ಆತ್ಮನು ಸರ್ವವ್ಯಾಪಿಯಾಗಿದ್ದರೂ, ಸಕಲ ವಿಶ್ವವನ್ನು ವ್ಯಾಪಿಸಿದ್ದರೂ ಪ್ರಾಣಿಗಳ ಹೃದಯದಲ್ಲಿ ಮಾತ್ರ ಹೆಬ್ಬೆಟ್ಟಿನ ಗಾತ್ರದ ಸಣ್ಣ ಆಕಾರದಷ್ಟೇ ಇರುವನು. ಹೀಗಿದ್ದರೂ ಈ ಪುರುಷನು (ಆತ್ಮನು) ಭೂತಭವಿಷ್ಯತ್ಕಾಲಗಳಿಗೆಲ್ಲಾ ಒಡೆಯನು. ನಿಯಾಮಕನು. ಇದನ್ನು ತಿಳಿದವನು ನಿರ್ಭಯನಾಗಿರುವನು. ಈ ಅಂಗುಷ್ಠಪರಿಮಿತಿಯುಳ್ಳ ಪುರುಷನು ಧೂಮರಹಿತವಾದ (ಹೊಗೆಯಿಲ್ಲದ) ಅಗ್ನಿಯಂತೆ ಸ್ವಚ್ಛವಾಗಿ ಬೆಳಗುತ್ತಿರುವನು. ಭೂತಭವಿಷತ್ಕಾಲಗಳಿಗೆಲ್ಲಾ ಅವನೇ ಒಡೆಯನು. ಇವತ್ತಿರುವವನೂ ಅವನೇ. ನಾಳೆ ಇರುವವನೂ ಅವನೇ. ಅವನು ನಿತ್ಯನು. ಪರ್ವತದ ಶಿಖರಗಳ ಮೇಲೆ ಬೀಳುವ ಮಳೆಯು ಸುತ್ತಮುತ್ತಲಿರುವ ಪ್ರದೇಶಗಳಲ್ಲಿ ಬೇರೆ ಬೇರೆ ಪ್ರವಾಹ ರೂಪದಿಂದ ಹರಿಯುವುವು, ಬೇರೆಬೇರೆಯಾಗಿ ಹರಿಯುವ ಪ್ರವಾಹಗಳು ಒಂದೇ ವೃಷ್ಟಿಯಿಂದ ಬಿದ್ದವೆಂಬುದನ್ನು ತಿಳಿಯದೆ ಪ್ರವಾಹಗಳು ಬೇರೆಬೇರೆ ಎಂದು ತಿಳಿಯುವ ಅವಿವೇಕಿಯು, ಪ್ರಾಣಿಗಳ ನಾನಾ ಶರೀರಗಳೂ ಅವುಗಳಲ್ಲಿರುವ ಆತ್ಮವೂ ಬೇರೆಬೇರೆಯೆಂದು ತಿಳಿಯುವನು. ಆದ್ದರಿಂದ ಅವನು ನಾನಾ ಪ್ರಾಣಿಗಳಲ್ಲಿ ನಾನಾ ಜನ್ಮಗಳನ್ನು ಎತ್ತುವನು. ಆದ್ದರಿಂದ ಆತ್ಮನಲ್ಲಿ ಭಿನ್ನತ್ವವಿರುವುದೆಂದು ಭಾವಿಸಬಾರದು. ಎಲೈ ಗೌತಮನೇ ( ಗೋತಮ ವಂಶದಲ್ಲಿ ಹುಟ್ಟಿದ ನಚಿಕೇತನೇ ) ಶುದ್ಧೋದಕದಲ್ಲಿ ಬೇರೆ ಶುದ್ಧವಾದ ಉದಕವನ್ನು ಬೆರೆಸಿದರೆ ಅವೆರಡೂ ಒಂದಾಗಿ ಯಾವ ವ್ಯತ್ಯಾಸವೂ ಇಲ್ಲದಂತೆ ಏಕರೂಪ

ವಾಗಿ ಆಗಿರುವುದೋ ಅದರಂತೆ ಬ್ರಹ್ಮಜ್ಞಾನಿಯಾದವನ ಆತ್ಮವು ಅದೇ ರೂಪದ ಎಂದರೆ ಬ್ರಹ್ಮರೂಪವಾದ ಆತ್ಮನಲ್ಲಿ ಒಂದಾಗಿ ಸೇರಿಹೋಗುವುದು. ಎಂದರೆ ಬ್ರಹ್ಮಜ್ಞಾನಿಯಾದವನು ಆತ್ಮನಲ್ಲಿ (ಬ್ರಹ್ಮನಲ್ಲಿ) ಐಕ್ಯನಾಗುವನು.

ಯಮ—ಯಮನು ಮತ್ತಿಂತೆಂದನು— ಈ ಶರೀರವನ್ನು ಒಂದು ಪಟ್ಟಣವೆನ್ನುವರು. ಇದಕ್ಕೆ ಹನ್ನೊಂದು ದ್ವಾರ ಗಳಿರುವುವು. ಶಿರಸ್ಸು, (ಬ್ರಹ್ಮರಂಧ್ರ) ನಾಭಿ, ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕಾದ್ವಾರಗಳು, ಮುಖ, ಎರಡು ಅಧೋರಂಧ್ರಗಳು ಎಂದರೆ ಜಲಮಲದ್ವಾರಗಳು ಒಟ್ಟು ಹನ್ನೊಂದು ದ್ವಾರಗಳಿರುವವು. ಇಂತಹ ಶರೀರವೆಂಬ ಪಟ್ಟಣದಲ್ಲಿ ಉತ್ಪತ್ತಿನಾಶರಹಿತನಾದ ಶುದ್ಧಚೈತನ್ಯಾತ್ಮನು ನೆಲಸಿರುವನು. ಇಂತಹ ಆತ್ಮನನ್ನು ಧ್ಯಾನಮಾಡುವವನು ಶೋಕರಹಿತನಾಗುವನು. ಅವನು ಜೀವನ್ಮುಕ್ತನಾಗಿ ಮರಣಾನಂತರ ಪರಮಪದವೆಂಬ ಮುಕ್ತಿಯನ್ನು ಪಡೆಯುವನು ಹಂಸವತೀ ಋಕ್ಕೆಂದು ಪ್ರಸಿದ್ಧವಾದ ಹಂಸಃ ಶುಚಿಷತ್ ಎಂಬ ಮಂತ್ರವಿರುವುದು. ಈ ಮಂತ್ರಕ್ಕೆ ಸೂರ್ಯನು ದೇವತೆ ಯಾಗಿದ್ದರೂ ಇಲ್ಲಿ ಆದಿತ್ಯರೂಪದಿಂದ ಜಗತ್ತನ್ನು ಬೆಳಗುತ್ತಿರುವ ಆತ್ಮನೇ ಸೂರ್ಯನು ಎಂದು ಹೇಳಿ ಅದರ ಅರ್ಥವನ್ನು ಇಲ್ಲಿ ವಿವರಿಸಲಾಗಿದೆ. ಈ ಆತ್ಮವು (ಆದಿತ್ಯರೂಪದಿಂದ ಇರುವ ಆತ್ಮವು) ಆಕಾಶದಲ್ಲಿ ಸೂರ್ಯರೂಪದಿಂದಲೂ, ಅಂತರಿಕ್ಷದಲ್ಲಿ ವಾಯುರೂಪದಿಂದಲೂ. ಯಜ್ಞವೇದಿಯಲ್ಲಿ ಅಗ್ನಿರೂಪದಿಂದಲೂ, ಯಜಮಾನನ ಮನೆಯಲ್ಲಿ ಪೂಜ್ಯನಾದ ಅತಿಥಿರೂಪ ದಿಂದಲೂ ವಾಸಿಸುತ್ತಿರುವುದು. ಅದು ಎಂದರೆ ಆ ಆತ್ಮವು ಮನುಷ್ಯರಲ್ಲಿಯೂ ಶ್ರೇಷ್ಠರಾದವರಲ್ಲಿಯೂ, ಸತ್ಯದಲ್ಲಿಯೂ, ಆಕಾಶದಲ್ಲಿಯೂ ವ್ಯಾಪಿಸಿರುವುದು. ನೀರಿನಲ್ಲಿ ಹುಟ್ಟುವ ಜಲಚರಗಳೂ, ಭೂಮಿಯಲ್ಲಿ ಬೆಳೆಯುವ ಸಸ್ಯಾದಿಗಳೂ, ಪ್ರಾಣಿ ವರ್ಗವೂ, ಯಜ್ಞಾಂಗ ಕರ್ಮಗಳೂ, ಪರ್ವತಾದಿಗಳಲ್ಲಿ ಉದ್ಭವಿಸುವ ನದಿಯೇ ಮೊದಲಾದುವುಗಳೂ ಪ್ರಪಂಚದಲ್ಲಿ ಇನ್ನೂ ಯಾವ ಯಾವ ವಸ್ತುಗಳಿವೆಯೋ ಅವೆಲ್ಲವೂ ಈ ಆತ್ಮವೇ ಆಗಿರುವುದು ಎಂದರೆ ಆತ್ಮಸ್ವರೂಪವೇ (ಆತ್ಮನ ಅಂಶವೇ) ಆಗಿರುವುದು. ಇದು ಸತ್ಯಸ್ವರೂಪವುಳ್ಳುದೂ ಅತ್ಯಂತ ವಿಸ್ತೃತವಾದುದೂ ಆಗಿರುವುದು. ಅದು ಶರೀರದಲ್ಲಿರುವ ಪ್ರಾಣ ವಾಯುವನ್ನು ಮೇಲಕ್ಕೆತ್ತುವುದು. ಅಪಾನವಾಯುವನ್ನು ಕೆಳಕ್ಕೆ ಒತ್ತುವುದು. ಶರೀರಮಧ್ಯದಲ್ಲಿ ಕುಳಿತಿರುವ ಇಂತಹ ಆತ್ಮನನ್ನು ಪೂಜ್ಯನೆಂದು ಎಲ್ಲಾ ದೇವತೆಗಳೂ ಉಪಾಸಿಸುವರು. ದೇಹವನ್ನು ಬಿಟ್ಟು ಹೊರಟುಹೋಗುವ (ಎಂದರೆ ಮೃತ ನಾಗುವ) ದೇಹಿಯು (ಪ್ರಾಣಿಯು) ಈ ಶರೀರವನ್ನು ಬಿಟ್ಟು ಹೊರಟುಹೋದಮೇಲೆ ಇಲ್ಲಿ ಏನು ಉಳಿಯುವುದು? ಏನೂ ಇಲ್ಲ. ಎಂದರೆ ಮನುಷ್ಯನು ಮೃತನಾದ ಮೃತಶರೀರವನ್ನು ಬಿಟ್ಟು ಹೊರಟುಹೋದಮೇಲೆ ಆ ಮೃತಶರೀರದಲ್ಲಿ ಆತ್ಮನು ವಾಸಿಸುವು ದಿಲ್ಲ. ಮನುಷ್ಯರು ಜೀವಿಸುತ್ತಿರುವುದು ಪ್ರಾಣವಾಯುವಿನ ಶಕ್ತಿಯಿಂದಲೂ ಅಲ್ಲ, ಅಪಾನವಾಯುವಿನ ಬಲದಿಂದಲೂ ಅಲ್ಲ. ಇವೆರಡೂ ಯಾವ ಆತ್ಮನ ಆಶ್ರಯದಿಂದಿರುವುವೋ ಆ ಆತ್ಮನ ಬಲದಿಂದಲೇ ಜನರು ಬದುಕಿರುವರು. ಎಂದರೆ ಆತ್ಮನು ಶರೀರದಲ್ಲಿರುವವರೆಗೆ ಮಾತ್ರ ಮನುಷ್ಯನು ಜೀವಿಸಿರುವನೆಂದು ಹೇಳುವರು. ಆತ್ಮನು ಶರೀರವನ್ನು ತ್ಯಜಿಸಿ ಹೊರಟುಹೋದ ಮೇಲೆ ಆ ಮೃತಶರೀರದಲ್ಲಿ ಪ್ರಾಣಾಪಾನವಾಯುಗಳೂ, ಚೈತನ್ಯವೂ, ಇರುವುದಿಲ್ಲ. ಅಲ್ಲಿ ಜಡಶರೀರವೊಂದೇ ಉಳಿದಿರುವುದು

ಎಲೈ ಗೌತಮನೇ' ನಿನಗೆ ಈ ಸನಾತನವಾದ ಬ್ರಹ್ಮದ ರಹಸ್ಯವನ್ನು ಹೇಳುವೆನು, ಕೇಳು. ಮರಣಾನಂತರ ಆತ್ಮನು ಯಾವಸ್ಥಿತಿಯಲ್ಲಿರುವನೆಂಬುದನ್ನೂ ಹೇಳುವೆನ ಕೇಳು ವಿವೇಕಿಯಾದ ಪುರುಷನು ಬ್ರಹ್ಮಜ್ಞಾನವನ್ನು ಪಡೆಯು ವುದರಿಂದಲೇ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮರಣಾನಂತರ ಶ್ರೇಷ್ಠವಾದ ಪರಮಪದವನ್ನು ಸೇರುವನು. ಅಲ್ಲಿಂದ ಮುಂದಕ್ಕೆ ಅವನಿಗೆ ಪುನರ್ಜನ್ಮಗಳೂ ಮರಣಗಳೂ ಇರುವುದಿಲ್ಲ. ಯಾವಾಗಲೂ ಶಾಶ್ವತವಾದ ಮತ್ತು ಆನಂದಮಯ ನಾದ ಪರಬ್ರಹ್ಮದಲ್ಲಿ ಐಕ್ಯನಾಗಿ ಸುಖದಿಂದಿರುವನು ಆದರೆ ಬ್ರಹ್ಮಜ್ಞಾನವಿಲ್ಲದ ಮೂಢನುಮರಣಾನಂತರ ಪುನಃ ಜನ್ಮವನ್ನೂ ಪುನಃ ಮರಣವನ್ನೂ ಹೊಂದುತ್ತಾ ಸಂಸಾರಸಾಗರದಲ್ಲಿ ತೊಳಲುತ್ತಲಿರುವನು. ಮನುಷ್ಯರೇ ಮೊದಲಾದ ಪ್ರಾಣಿಗಳ.

ತಮ್ಮತಮ್ಮ ಕರ್ಮಗಳಿಗೂ, ಜ್ಞಾನಗಳಿಗೂ ಅನುಗುಣವಾಗಿ ಎಂದರೆ ತಾವು ಈ ಜನ್ಮದಲ್ಲಿ ಮಾಡಿದ ಸುಕೃತದುಷ್ಕೃತಗಳ ಫಲರೂಪವಾಗಿ ಪ್ರಾಣಿಗಳೇ ಮೊದಲಾದ ನಾನಾ ಯೋನಿಗಳಲ್ಲಿ ಎಂದರೆ ಶರೀರಗಳಲ್ಲಿ ಜನ್ಮವನ್ನು ಹೊಂದುವವು. ಕೆಲವರು ಜಡರೂಪವನ್ನು ಹೊಂದುವರು. ಪ್ರಾಣಿಗಳು ನಿದ್ರೆಯಲ್ಲಿರುವಾಗಲೂ ಅವರ ಶರೀರಾಂತರ್ಗತನಾದ ಆತ್ಮನು,ಯಾವಾಗಲೂ ಎಚ್ಚರವಾಗಿಯೇ ಇದ್ದು ಅವರವರ ಕಾಮಗಳಿಗೆ ಅನುರೂಪವಾಗಿ ರೂಪಗಳನ್ನು (ಆಶೋತ್ತರಗಳನ್ನು) ನಿರ್ಮಿಸುತ್ತಿರುವನು. ಇವನೇ ಪವಿತ್ರನೂ, ಶುಧ್ಧನೂ, ನಿತ್ಯನೂ, ಆದ ಬ್ರಹ್ಮನು. ಸಮಸ್ತ ಲೋಕಗಳೂ ಈ ಆತ್ಮನ (ಅಥವಾ ಬ್ರಹ್ಮನ) ಆಶ್ರಯದಿಂದಲೇ ಇರುವವು. ಯಾರೂ ಅದರಾಚೆಗೆ ಹೋಗಲಾರರು ಎಂದರೆ ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವೇ ಇರುವುದಿಲ್ಲ. ಹಾಗಾದರೆ ಲೋಕವ್ಯವಹಾರದಲ್ಲಿ ಕೆಲವು ಪ್ರಾಣಿಗಳು ದೊಡ್ಡದಾಗಿಯೂ ಕೆಲವು ಚಿಕ್ಕದಾಗಿಯೂ, ಒಂದೊಂದು ಪ್ರಾಣಿಯ ಶರೀರವು ಒಂದೊಂದು ವಿಧವಾಗಿ ಇರುವುದೇಕೆ? ಹಾಗಿದ್ದರೆ ಆತ್ಮನಿಗೆ ನಾನಾತ್ವವನ್ನೂ ಭಿನ್ನತ್ವವನ್ನೂ ಹೇಳಿದಂತಾಗಲಿಲ್ಲವೇ? ಎಂದರೆ, ಹಾಗಲ್ಲ. ಎಲ್ಲಾ ಪ್ರಾಣಿಗಳ ಶರೀರಗಳಲ್ಲಿರುವ ಆತ್ಮವೆಲ್ಲಾ ಒಂದೇ. ಅದು ಸಂದರ್ಭಾನುಸಾರವಾಗಿ, ಪ್ರಾಣಿಗಳ ಶರೀರಗಳಿಗನುಸಾರವಾಗಿ ಚಿಕ್ಕದಾಗಿಯೂ ದೊಡ್ಡದಾಗಿಯೂ ನಾನಾವಿಧದಾಗಿಯೂ ಇರುವ ಶರೀರಗಳಲ್ಲಿ ನೆಲಸಿದ್ದು ಪ್ರಾಣಿಗಳು ಮಾಡುವ ಕರ್ಮಾದಿಗಳಿಗೆ ಸಾಕ್ಷಿಭೂತವಾಗಿರುವುದು. ಒಂದು ಗೃಹದಲ್ಲಿ ಪ್ರವೇಶಿಸಿದ ಅಗ್ನಿಯು ಆಯಾ ವಸ್ತುಗಳಿಗನುರೂಪವಾದ (ಅಗ್ನಿಯು ಹೊತ್ತಿದಾಗ) ರೂಪಗಳನ್ನು ಧರಿಸುವಂತೆ ಸರ್ವಭೂತಗಳ ಅಂತರದಲ್ಲಿರುವ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿರುವನು. ಹಾಗೆಯೇ ಹಿಂದೇ ಆದ ವಾಯುವು ನಾನಾ ವಸ್ತುಗಳಲ್ಲಿ ಸೇರಿ ಆಯಾ ವಸ್ತುಗಳಿಗನುರೂಪವಾದ ರೂಪಗಳನ್ನು ಧರಿಸುವಂತೆ ಸರ್ವಭೂತಾಂತರಾತ್ಮನಾದ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ಎಲ್ಲಾ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿರುವನು ಮತ್ತು ಸಮುದ್ರದ ನೀರನ್ನು ನಾನಾ ಪಾತ್ರೆಗಳಲ್ಲಿ ತುಂಬಿಟ್ಟರೆ ಆ ನೀರು ಆಯಾ ಪಾತ್ರೆಗಳ ಆಕಾರ, ರೂಪ ಇವುಗಳಿಗನುಸಾರವಾಗಿ ನಾನಾ ರೂಪಗಳನ್ನು ಧರಿಸುವುದಷ್ಟೆ. ಅದರಂತೆ ಒಬ್ಬನೇ ಆದ ಆತ್ಮನು ನಾನಾವಿಧ ಪ್ರಾಣಿಗಳ ಶರೀರಗಳಲ್ಲಿ ಅವುಗಳ ಆಕಾರ, ರೂಪಗಳಿಗನುಸಾರವಾಗಿ ಒಳಗೂ ಹೊರಗೂ ವ್ಯಾಪಿಸಿರುವನು, ಹೀಗೆ ಪ್ರಾಣಿಗಳಲ್ಲಿರುವ ಆತ್ಮನಿಗೆ ಸುಖದುಃಖಗಳಿಲ್ಲವೇ ಎಂದರೆ, ಇಲ್ಲ. ಪ್ರಾಣಿಗಳ ಶರೀರಾದ್ಯವಯವಗಳಿಗೆ ಮಾತ್ರ ಸುಖದುಃಖಾದಿಗಳುಂಟು. ಅವುಗಳಲ್ಲಿ ಚೈತನ್ಯರೂಪದಿಂದಿರುವ ಆತ್ಮನಿಗೆ ಯಾವುದೂ ಇಲ್ಲ. ಅವನು ನಿರ್ಲಿಪ್ತನಾಗಿರುವನು. ಹೇಗೆಂದರೆ, ಸಮಸ್ತ ಲೋಕಗಳ ಕಣ್ಣಿನಂತಿರುವ ಸೂರ್ಯನು ಎಲ್ಲಾ ಕಡೆಯಲ್ಲಿಯೂ, ಎಲ್ಲಾ ವಸ್ತುಗಳ ಮೇಲೆಯೂ ತನ್ನ ರಶ್ಮಿಗಳನ್ನು ಬೀರಿ ಪ್ರಕಾಶಿಸುತ್ತಿದ್ದರೂ ಆಯಾ ವಸ್ತುಗಳ ಸಂಪರ್ಕವು ಎಂದರೆ ಅವುಗಳ ಸುಖದುಃಖಾದಿಗಳು ಸೂರ್ಯನಿಗಿಲ್ಲದಿರುವಂತೆ, ಸರ್ವಭೂತಗಳಲ್ಲಿ ನೆಲಸಿರುವ ಒಬ್ಬನೇ ಆದ ಆತ್ಮನಿಗೆ ಆಯಾ ಭೂತಗಳ ಅಥವಾ ಪ್ರಾಣಿಗಳ ಸುಖದುಃಖಾದಿಗಳ ಸಂಪರ್ಕವಿರುವುದಿಲ್ಲ. ಲೋಕದ ದುಃಖದಿಂದ ಅವನು ನಿರ್ಲಿಪ್ತನಾಗಿರುವನು. ಅವನು ಲೋಕಬಾಹ್ಯನು. ಒಂದೇ ರೂಪವನ್ನು ನಾನಾರೂಪವಾಗಿ ಪ್ರಕಟಮಾಡುವ ಸರ್ವಭೂತಾಂತರಾತ್ಮನಾದ ಸರ್ವರಿಗೂ ಸ್ವಾಮಿಯಾದ ಆ ಆತ್ಮನನ್ನು (ಪರಮಾತ್ಮನನ್ನು) ಯಾವ ಬುದ್ಧಿವಂತರು ತಮ್ಮ ದೇಹಮಧ್ಯದಲ್ಲಿರುವ ಆತ್ಮನಲ್ಲಿ ನೋಡುವರೋ, ಎಂದರೆ ಸರ್ವಾಂತರ್ಯಾಮಿಯಾದ ಪರಮಾತ್ಮನೂ, ತನ್ನ ದೇಹದಲ್ಲಿ ಚೈತನ್ಯಸ್ವರೂಪದಿಂದ ನೆಲಸಿರುವ ಆತ್ಮನೂ ಒಬ್ಬನೇ ಎಂದು ಯಾರು ತಿಳಿಯುವರೋ ಅವರಿಗೆ ಅಕ್ಷಯವಾದ ಸುಖವು ದೊರೆಯುವುದು. ಇತರರಿಗೆ ಆ ಸುಖವು ದೊರೆಯಲಾರದು. ಇತರ ವಸ್ತುಗಳೆಲ್ಲವೂ ಅನಿತ್ಯವು ಎಂದರೆ ಅಶಾಶ್ವತವು. ಕೆಲವುಕಾಲವಿದ್ದು ನಾಶವನ್ನು ಹೊಂದುವವು. ಆದರೆ ಆತ್ಮನು ಹಾಗಲ್ಲ, ಅವನು ನಿತ್ಯನು. ಅವನಿಗೆ ಯಾವಾಗಲೂ ನಾಶವೇ ಇಲ್ಲ. ಆದ್ದರಿಂದ ಅನಿತ್ಯ ವಸ್ತುಗಳಲ್ಲಿ ನಿತ್ಯನೂ, ಸರ್ವಚೇತನಗಳಲ್ಲಿದ್ದರೂ ಒಬ್ಬನೇ ಆದ ಚೈತನ್ಯನೂ, ಸಮಸ್ತಜನರ ಕಾಮನೆಗಳನ್ನು ಎಂದರೆ ಆಶೋತ್ತರಗಳನ್ನು ಪೂರೈಸುವವನೂ ಆದ ಪರಮಾತ್ಮನು ತಮ್ಮ ಆತ್ಮನಲ್ಲಿಯೇ ಇರುವನೆಂದು ಯಾವ ಬುದ್ಧಿ

ವಂತರು ಅರಿಯುವರೋ ಅವರು ನಾಶರಹಿತವಾದ ಶಾಶ್ವತಸುಖವನ್ನನುಭವಿಸುವರು. ಇತರರಿಗೆ ಆ ಶಾಶ್ವತ ಸುಖವಿಲ್ಲ. ಅನಿರ್ದೇಶ್ಯವಾದ ಎಂದರೆ ವರ್ಣಿಸಲಸಾಧ್ಯವಾದ ಪರಮಸುಖವು ಇದೇ ಎಂದು ಜನರು ತಿಳಿಯುವರು. ಅದನ್ನು ನಾನು ತಿಳಿದುಕೊಳ್ಳುವ ಬಗೆ ಹೇಗೆ ? ಅದು ಅನುಭವಕ್ಕೆ ಬರುವುದೋ ಇಲ್ಲವೋ ಯಾರು ಬಲ್ಲರು ? ಎಂದರೆ ಆ ಪರಮಪದವೆಂಬ ಶ್ರೇಷ್ಠಸ್ಥಾನದಲ್ಲಿ (ಮುಕ್ತಿಯಲ್ಲಿ ಅಥವಾ ನಿರ್ವಿಕಾರವಾದ ಆತ್ಮನಲ್ಲಿ) ಈ ಲೋಕದಲ್ಲಿರುವಂತೆ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರ ನಕ್ಷತ್ರಾದಿಗಳ ಪ್ರಕಾಶವೂ ಅಲ್ಲಿರುವುದಿಲ್ಲ, ವಿದ್ಯುತ್ತು ಎಂದರೆ ಮಿಂಚಿನ ಪ್ರಕಾಶವೂ ಇರುವುದಿಲ್ಲ. ಅಂದಮೇಲೆ ಅಗ್ನಿಯ ಪಾಡೇನು ? ಅಲ್ಲಿ ಅಗ್ನಿಯೂ ಇರುವುದಿಲ್ಲ. ಹಾಗಾದಲ್ಲಿ ಆ ಪರಮಃಪದದಲ್ಲಿ ಯಾವಾಗಲೂ ಗಾಢಾಂಧಕಾರವು ಆವರಿಸಿರುವುದೇ ? ಎಂದರೆ, ಹಾಗಲ್ಲ. ಆ ಆತ್ಮವು ಸ್ವಯಂಪ್ರಕಾಶಿಸುವ ಸ್ವಭಾವವುಳ್ಳದ್ದು. ಅಷ್ಟೇ ಅಲ್ಲ, ಅದು ಪ್ರಕಾಶಿಸಿದ ಮೇಲೆ ಅದರ ಪ್ರಕಾಶದಿಂದ ಎಲ್ಲವೂ ಪ್ರಕಾಶಿಸುವುದು. ಅದರ ಬೆಳಕಿನಿಂದ ಎಲ್ಲವೂ ಬೆಳಗುವುದು.

ಪರಮಪದದ ವರ್ಣನೆಯನ್ನು ಬೇರೆ ವಿಧದಿಂದ ವರ್ಣಿಸಲಾಗುವುದು. ಇದು ಎಂದರೆ ಜನನಮರಣ ಪ್ರವಾಹರೂಪ ವಾದ ಸಂಸಾರವೆಂಬುದೇ ಸನಾತನವಾದ ಅಶ್ವತ್ಥವೃಕ್ಷವು (ಅಶ್ವತ್ಥವೃಕ್ಷದಂತಿರುವುದು) ಇದರ ಬೇರುಗಳು ಮೇಲೆ ಎಂದರೆ ಊರ್ಧ್ವಮುಖವಾಗಿ ಹರಡಿರುವವು. ಕೊಂಬೆಗಳು ಕೆಳಗೆ ಎಂದರೆ ಅಧೋಮುಖವಾಗಿ ಬೆಳೆದಿರುವವು. ಆ ವೃಕ್ಷದ ಮೂಲವೇ (ಕಾರಣಭೂತವಾದುದೇ) ಶುದ್ಧವಸ್ತುವು, ಬ್ರಹ್ಮವು. ಎಂದರೆ ಶುದ್ಧವಸ್ತುವಾದ ಬ್ರಹ್ಮದಿಂದಲೇ ಈ ಸಂಸಾರವೂ ಬಾಹ್ಯಪ್ರಪಂಚವೂ ಆವಿರ್ಭವಿಸಿರುವುದು ಎಂಬಭಿಪ್ರಾಯವು. ಈ ಶಬ್ದಬ್ರಹ್ಮವನ್ನು ಅಮೃತವೆನ್ನುವರು (ಅಮೃತವೆಂದರೆ ನಾಶ ವಲ್ಲದ್ದು). ಸರ್ವಲೋಕಗಳೂ ಅದರ ಆಶ್ರಯದಿಂದಲೇ ಇರುವವು. ಅದರ ಆಚೆಗೆ ಯಾರೂ ಹೋಗಲಾರರು. ಈ ಬ್ರಹ್ಮ ವನ್ನು ಬಿಟ್ಟು ಬೇರೆ ವಸ್ತುವಿದ್ದರೆ ತಾನೇ ಅದನ್ನತಿಕ್ರಮಿಸಿ ಹೋಗುವ ಪ್ರಶ್ನೆ ಏಳುವುದು ? ಅದೇ ಅಂತಿಮಸ್ಥಾನವಾದ್ದರಿಂದ ಅದರ ಮುಂದಕ್ಕೆ ಅಥವಾ ಆಚೆಗೆ ಇನ್ನೇನೂ ಇಲ್ಲ.

ನಮ್ಮ ದೃಷ್ಟಿಗೆ ಗೋಚರವಾಗುವ ಈ ಸಕಲ ವಿಶ್ವವೂ ಪ್ರಾಣದಲ್ಲಿಯೇ ಎಂದರೆ ಪ್ರಾಣದಲ್ಲಿ ಚೈತನ್ಯರೂಪವೂ ಸರ್ವವ್ಯಾಪಿಯೂ ಆದ ಬ್ರಹ್ಮದಲ್ಲಿಯೇ ಚಲಿಸುವುದು. ಎಂದರೆ ಈ ವಿಶ್ವದ ಉತ್ಪತ್ತಿಯೂ, ಲಯವೂ ಬ್ರಹ್ಮದಲ್ಲಿಯೇ ಆಗುವುದು. ವಿಶ್ವಕ್ಕೆ ಕಾರಣಭೂತವಾದ ಈ ಬ್ರಹ್ಮವು ಬಹಳ ದೊಡ್ಡದಾಗಿರುವುದು ಎಂದರೆ ಆದ್ಯಂತಗಳಿಲ್ಲದೆ ಅನಂತವಾಗಿರು ವುದು. ಈ ಅನಂತಸ್ವರೂಪವನ್ನು ಯೋಚಿಸುತ್ತಾ ಹೋದರೆ, ಅಬ್ಬಾ ! ಇದು ಎಷ್ಟು ದೊಡ್ಡದು ? ಈ ವಿಶ್ವವೂ ಇದರಲ್ಲಿರುವ ಪ್ರಾಣಿಗಳೂ ಎಷ್ಟು ಅಲ್ಪವು ಎಂಬ ಭಾವನೆಯು ಮೂಡಿ ಮನಸ್ಸಿಗೆ ಒಂದುವಿಧ ಭಯವನ್ನುಂಟುಮಾಡುವುದು. ಕೈಯಿಂದ ವಜ್ರಾಯುಧವನ್ನು ಹಿಡಿದು ಅದನ್ನು ಮೇಲಕ್ಕೆತ್ತಿ ಹೊಡೆಯುವುದಕ್ಕೆ ಬಂದರೆ ಎಷ್ಟು ಭಯವಾಗುವುದೋ, ಈ ಅನಂತವಾದ ಬ್ರಹ್ಮದ ನಿಲುವನ್ನು ಯೋಚಿಸುವುದೂ ಅಷ್ಟೇ ಭಯಂಕರವಾದುದು. ಇದು ಮನುಷ್ಯನ ಬುದ್ಧಿಗೆ ನಿಲ ಕುವುದಿಲ್ಲ. ಏಕೆಂದರೆ ಮನುಷ್ಯನ ಬುದ್ಧಿಗೆ ಒಂದು ಪರಿಮಿತಿಯುಂಟು. ಆದರೂ ಯೋಗಾದಿಸಾಧನೆಗಳಿಂದ ಆತ್ಮಸಾಕ್ಷಾತ್ಕಾರವನ್ನ ಮಾಡಿಕೊಂಡ ತಪಸ್ವಿಗಳೂ ಜ್ಞಾನಿಗಳೂ ಇದನ್ನು ತಿಳಿದು ಅಮೃತರಾಗುವರು, ವಿಶ್ವದ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣಭೂತವಾದ ಈ ಪರಮಾತ್ಮ ಅಥವಾ ಬ್ರಹ್ಮದ ಭಯದಿಂದಲೇ (ಆಜ್ಞೆಯಿಂದಲೇ) ಅಗ್ನಿಯು ಸುಡುವುದು ಎಂದರೆ ಅಗ್ನಿಗೆ ಸುಡುವ ಶಕ್ತಿ ಇರುವುದು, ಸೂರ್ಯನು ಬೆಳಗುವನು, ಇಂದ್ರನೂ, ವಾಯುವೂ, ಐದನೆಯವನಾದ ಯಮ ಅಥವಾ ಮೃತ್ಯುವೂ ಅವನ (ಬ್ರಹ್ಮದ) ಭಯದಿಂದಲೇ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುವರು.

ಈ ಶರೀರವು ಪತನವಾಗುವುದಕ್ಕೆ (ಮೃತವಾಗುವುದಕ್ಕೆ) ಮೊದಲೇ ಆತ್ಮಜ್ಞಾನವಾದರೆ ಒಳ್ಳೆಯದು. ಇಲ್ಲದಿದ್ದರೆ ಸೃಷ್ಟಿಯಲ್ಲಿರುವ ಬೇರೆಬೇರೆ ಲೋಕಗಳಲ್ಲಿ ಜೀವನು ಜನ್ಮವೆತ್ತಬೇಕಾಗುವುದು. ಕನ್ನಡಿಯಲ್ಲಿ ಪ್ರತಿಬಿಂಬವು ಕಾಣಿಸುವಂತೆ

ತನ್ನ ಆತ್ಮನಲ್ಲಿ ಸ್ಪಷ್ಟವಾಗಿ ಬ್ರಹ್ಮನ ದರ್ಶನವಾಗುವುದು. ಎಂದರೆ ಆತ್ಮಜ್ಞಾನಿಯಾದವನಿಗೆ ಬ್ರಹ್ಮಸಾಕ್ಷಾತ್ಕಾರವು ಕನ್ನಡಿಯಲ್ಲಿ ಮುಖವು ಕಾಣಿಸುವಂತೆ ಸ್ಪಷ್ಟವಾಗಿ ಕಾಣಿಸುವುದು. ಸ್ವಪ್ನದಲ್ಲಿ ಅಸ್ಪಷ್ಟವಾಗಿ ಕಾಣುವಂತೆ ಪಿತೃಲೋಕದಲ್ಲಿ ಅಸ್ಪಷ್ಟವಾಗಿ ಕಾಣಿಸುವುದು. ನೀರಿನಲ್ಲಿ ಪ್ರತಿಬಿಂಬವು ಅಸ್ಪಷ್ಟವಾಗಿ ಕಾಣಿಸುವಂತೆ ಗಂಧರ್ವಲೋಕದಲ್ಲಿಯೂ ಅಸ್ಪಷ್ಟವಾಗಿ ಕಾಣಿಸುವುದು. ಆದರೆ ಬೆಳಕು, (ಬಿಸಿಲು) ನೆರಳು ಸ್ಪಷ್ಟವಾಗಿ ಕಾಣಿಸುವಂತೆ ಬ್ರಹ್ಮಲೋಕದಲ್ಲಿ ಸ್ಪಷ್ಟವಾಗಿ ಬ್ರಹ್ಮದರ್ಶನವಾಗುವುದು.

ಬೇರೆಬೇರೆ ತನ್ಮಾತ್ರೆಗಳಿಂದ ಹುಟ್ಟುವ ಇಂದ್ರಿಯಗಳ ಭಿನ್ನಭಾವಗಳನ್ನೂ, ಅವುಗಳ ಉತ್ಪತ್ತಿವಿನಾಶಗಳನ್ನೂ ಅರಿತುಕೊಳ್ಳುವ ಬುದ್ಧಿವಂತನು ಶೋಕರಹಿತನಾಗುವನು. ಎಂದರೆ ಪೃಥಿವ್ಯಾದಿ ಪಂಚಭೂತಗಳ ತನ್ಮಾತ್ರೆಗಳಿಂದ (ತನ್ಮಾತ್ರೆಯೆಂದರೆ ಸೂಕ್ಷ್ಮರೂಪ) ಉತ್ಪತ್ತಿಯಾದ ಚಕ್ಷುರಾದಿಂದ್ರಿಯಗಳು ತಮಗೆ ಉತ್ಪತ್ತಿಸ್ಥಾನವಾದ ಪಂಚಭೂತಗಳಲ್ಲಿಯೇ ಅಂತ್ಯದಲ್ಲಿ ಲಯ ಅಥವಾ ನಾಶವಾಗುವುವು. ಈ ಪಂಚಭೂತಗಳೂ ಇವುಗಳಿಂದ ಹುಟ್ಟುವ ಇಂದ್ರಿಯಾದಿಗಳೂ ಕೆಲವುಕಾಲವಿದ್ದು ನಾಶವನ್ನೈದುವವು. ಆದರೆ ಆತ್ಮ ವಸ್ತುವಿಗೆ ಯಾವಾಗಲೂ ನಾಶವಿರುವುದಿಲ್ಲ ಎಂದು ತಿಳಿಯುವ ಪ್ರಜ್ಞನಿಗೆ ದುಃಖವೇ ಇರುವುದಿಲ್ಲ.

ಇಂದ್ರಿಯಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು ಅಥವಾ ಸೂಕ್ಷ್ಮವಾದುದು. ಮನಸ್ಸಿಗಿಂತಲೂ ಶುದ್ಧ ಬುದ್ಧಿಯು ಹೆಚ್ಚಿನದು. ಬುದ್ಧಿಗಿಂತಲೂ ಶ್ರೇಷ್ಠವೂ ಸೂಕ್ಷ್ಮವೂ ಆದ ಮಹತ್ತ್ವವಿರುವುದು. ಅದರಾಚೆಗೆ ಎಂದರೆ ಅದಕ್ಕಿಂತಲೂ ಸೂಕ್ಷ್ಮವಾದ ಅವ್ಯಕ್ತವಿರುವುದು. ಅವ್ಯಕ್ತಕ್ಕಿಂತಲೂ ಪುರುಷನು (ಚಿತ್ ಅಥವಾ ಚೈತನ್ಯ) ಶ್ರೇಷ್ಠನು ಇವನೇ ಆತ್ಮನು. ಇವನು ಸರ್ವವ್ಯಾಪಕನು, ಸರ್ವಸಂಸಾರಧರ್ಮವರ್ಜಿತನು, ನಿರ್ಲಿಪ್ತನು. ಇಂತಹ ಆತ್ಮನನ್ನರಿತು ಪ್ರಾಣಿಯು ಮುಕ್ತನಾಗುವನು, ಅಮೃತತ್ವವನ್ನು ಪಡೆಯುವನು. ಈ ಆತ್ಮನ ಸ್ವರೂಪವು ದೃಷ್ಟಿಗೆ (ಬಾಹ್ಯದೃಷ್ಟಿಗೆ) ಗೋಚರವಾಗುವುದಿಲ್ಲ. ಯಾರೂ ಅವನನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಮನಸ್ಸಂಯಮವಿರುವ ಯೋಗಿಯ ಅಥವಾ ತಪಸ್ವಿಯ ಅಂತಃಕರಣದಲ್ಲಿ ಧ್ಯಾನದಿಂದ ಮಾತ್ರ ಅವನು ಗೋಚರನಾಗುವನು. ಈ ವಿಷಯವನ್ನು ತಿಳಿದವರೂ ಅಮೃತರಾಗುವರು.

ಯಾವನ ಪಂಚಜ್ಞಾನೇಂದ್ರಿಯಗಳೂ ಮನಸ್ಸೂ ಸ್ಥಿರವಾಗಿ ಬುದ್ಧಿಯು ನಿಶ್ಚಲವಾಗಿರುವುದೋ ಅವನಿಗೆ ಎಂದರೆ ವಿಷಯಾದಿ ಸುಖಗಳಲ್ಲಿ ತನ್ನ ಚಿತ್ತವೃತ್ತಿಗಳನ್ನು ಹೋಗಗೊಡಿಸದೆ ಮನಸ್ಥೈರ್ಯವನ್ನು ಪಡೆದಿರುವನೋ ಅಂತಹ ಪುರುಷನಿಗೆ ಪರಮಸ್ಥಿತಿಯು ಪ್ರಾಪ್ತವಾಯಿತೆನ್ನುವರು. ಈ ಸ್ಥಿರವಾದ ಇಂದ್ರಿಯಧಾರಣೆಯೇ ಯೋಗವೆಂದು ಹೇಳುವರು ಯೋಗಿಯಾದವನು ಬಹಳ ಎಚ್ಚರಿಕೆಯಿಂದಿರಬೇಕು. ಏಕೆಂದರೆ ಯೋಗಸ್ಥಿತಿಗೂ ಅನೇಕ ಪ್ರಮಾದಗಳು ಅಥವಾ ವಿಘ್ನಗಳಿರುವವು. ಅಪ್ರಮತ್ತನಾದವನಿಗೆ ಎಂದರೆ ಆಲಸ್ಯದಿಂದಿರುವವನಿಗೆ ಯೋಗವು ಸಿದ್ಧಿಸುವುದಿಲ್ಲ. ಆತ್ಮಜ್ಞಾನವು ವಾಕ್ಶಕ್ತಿಯಿಂದಾಗಲಿ (ಸಂಭಾಷಣಾದಿಗಳಿಂದ) ಮನಸ್ಸಿನಿಂದ ಯೋಚಿಸುವುದರಿಂದಾಗಲಿ, ಕಣ್ಣುಗಳಿಂದ ನೋಡುವುದರಿಂದಾಗಲಿ, ಪ್ರಾಪ್ತವಾಗುವಂತಹುದಲ್ಲ ಅದು (ಆತ್ಮವು) ಇದ್ದೇ ಇದೆ ಎಂಬ ದೃಢವಾದ ನಂಬಿಕೆಯುಳ್ಳವನಿಗೆ ಎಂದರೆ ಆಸ್ತಿಕ್ಯಬುದ್ಧಿಯುಳ್ಳವನಿಗೆ ಅಥವಾ ಶ್ರದ್ಧಾವಂತನಿಗೆ ಮಾತ್ರ ಲಭಿಸುವುದು. ಕಾರ್ಯಕಾರಣಗಳ ಸತ್ಯಜ್ಞಾನದಿಂದ ಅದನ್ನು ದೊರಕಿಸಿಕೊಳ್ಳಬೇಕು. ಅದು (ಆತ್ಮವು) ಇರುವುದೆಂಬ ಭಾವನೆಯು ಹುಟ್ಟತೆಂದರೆ ಸತ್ಯಜ್ಞಾನವು (ಬ್ರಹ್ಮಜ್ಞಾನವು) ಪ್ರಕಟವಾಗುವುದು ಎಂದರೆ ಮನಸ್ಸಿನಲ್ಲಿ ಆವಿರ್ಭವಿಸುವುದು. ಮನುಷ್ಯನ ಅಂತಃಕರಣದಲ್ಲಿರುವ ಎಲ್ಲ ಕಾಮನೆಗಳು ಎಂದರೆ ಸುಖಾದಿಗಳಲ್ಲಿ ಇಚ್ಛೆಯು ಅಳಿದುಹೋದರೆ ಅವನು ಅಮೃತನಾಗುವನು ಎಂದರೆ ಜೀವನ್ಮುಕ್ತನಾಗಿ ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಿಸುವನು.

ಅಂತಃಕರಣದಲ್ಲಿ (ಮನಸ್ಸಿನಲ್ಲಿ) ಮನೆಮಾಡಿಕೊಂಡಿರುವ ಮಿಥ್ಯಾಬಂಧನಗಳು ನಷ್ಟವಾದುವೆಂದರೆ ಆಗ ಮರ್ತ್ಯನಾದ ಮನುಷ್ಯನು ಅಮೃತನಾಗುವನು. ಎಂದರೆ ಶಾಶ್ವತವಾದ ಪರಮಪದವೆಂಬ ಮುಕ್ತಿಯನ್ನು ಪಡೆಯುವನು.

ಮನುಷ್ಯನ ಹೃದಯದಲ್ಲಿ ದೃಢವಾಗಿ ನೆಲೆಸಿರುವ ಅಜ್ಞಾನವೆಂಬ ಬಂಧನಗಳು ನಾಶವಾದೊಡನೆಯೇ ಮರ್ತ್ಯನಾಗಿದ್ದ ಮನುಷ್ಯನು ಅಮೃತನಾಗುವನು. ಹೃದಯದಲ್ಲಿ ನೂರ ಒಂದು ನಾಡಿಗಳಿರುವವು. ಅವುಗಳಲ್ಲಿ ಸುಷುಮ್ನಾ ಎಂಬ ಒಂದು ನಾಡಿಯು ಶಿರಸ್ಸಿನ ತುದಿಯಲ್ಲಿ ಬ್ರಹ್ಮರಂಧ್ರದವರೆಗೂ ಹೋಗಿರುವುದು. ಆ ನಾಡಿಯಲ್ಲಿ ಪ್ರಾಣವಾಯುವನ್ನು ಚಲಿಸುವಂತೆ ಮಾಡಿ ಬ್ರಹ್ಮರಂಧ್ರದ ಮೂಲಕ ಪ್ರಾಣವು ಹೊರಟುಹೋದರೆ ಆ ಮನುಷ್ಯನು ಅಮೃತತ್ವವನ್ನು ಪಡೆಯುವನು. ಇತರ ನಾಡಿಗಳ ಮೂಲಕ ಪ್ರಾಣವು ಹೋದರೆ ಅವನಿಗೆ ಮುಂದೆ ನಾನಾವಿಧ ಜನ್ಮಗಳು ಪ್ರಾಪ್ತವಾಗುವವು.

ಅಂಗುಷ್ಠಪರಿಮಾಣವುಳ್ಳ ಪುರುಷನು ಎಂದರೆ ಅಂತರಾತ್ಮನು ಯಾವಾಗಲೂ ಜನರ ಹೃದಯದಲ್ಲಿ ವಾಸಿಸುತ್ತಿರುವನು. ಆ ಆತ್ಮನು ಯಾವಾಗಲೂ ಜನರ ಹೃದಯದಲ್ಲಿ ವಾಸಿಸುತ್ತಿರುವನು. ಆ ಅಂತರಾತ್ಮನನ್ನು ನೋಡಬೇಕಾದರೆ, ಸಿಪ್ಪೆಯನ್ನು ಸುಲಿದು ಒಳಗಿರುವ ವಸ್ತುವನ್ನು ತೆಗೆಯುವಂತೆ ಧೈರ್ಯದಿಂದ ಎಂದರೆ ಆತ್ಮಜ್ಞಾನದಿಂದ ಬೇರ್ಪಡಿಸಬೇಕು. ಅದೇ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ ಅಮೃತವಸ್ತುವು.

ಮೃತ್ಯುವು ಅಥವಾ ಯಮನು ಉಪದೇಶಿಸಿದ ಈ ಬ್ರಹ್ಮವಿದ್ಯೆಯನ್ನರಿತುಕೊಂಡು, ಅವನು ಕಲಿಸಿದ ಸಂಪೂರ್ಣ ವಿಧಾನವನ್ನು ತಿಳಿದುಕೊಂಡು ನಚಿಕೇತನು ಬ್ರಹ್ಮಪದದನ್ನು ಪಡೆದನು. ಅವನು ಪಾಪರಹಿತನೂ ಅಮೃತನೂ ಆದನು. ಇದರಲ್ಲಿ ಹೇಳಿರುವ ಈ ಅಧ್ಯಾತ್ಮಜ್ಞಾನವನ್ನು ತಿಳಿದುಕೊಳ್ಳುವ ಇತರ ಜನರೂ ಸಹ ನಚಿಕೇತನಂತೆ ಶಾಶ್ವತವಾದ ಮುಕ್ತಿಯನ್ನು ಪಡೆಯುವರು.

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**

**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ. ಮೋತ ವೀರಾನ್ ॥ ೧ ॥**

ಎಲೈ ಮೃತ್ಯುವೇ, ಬೇರೆ ದಾರಿಯನ್ನು ಹಿಡಿದು ಪರಾಙ್ಮುಖನಾಗು. ದೇವತೆಗಳ ಮಾರ್ಗಕ್ಕಿಂತಲೂ ಬೇರೆಯಾದ ನಿನ್ನ ಸ್ವಂತ ಮಾರ್ಗವನ್ನನುಸರಿಸಿ ಹೋಗು. ಚಕ್ಷುಸ್ಸುಳ್ಳವನೂ, ಕಿವಿಯುಳ್ಳವನೂ ಆದ ನಿನ್ನನ್ನು ಪ್ರಾರ್ಥಿಸುತ್ತೇನೆ. ನಮ್ಮ ಪುತ್ರಾದಿಗಳನ್ನು ಹಿಂಸಿಸಬೇಡ. ಮತ್ತು ವೀರಪುತ್ರಾದಿಗಳನ್ನು ಹಿಂಸಿಸಬೇಡ.

ಮೃತ್ಯುಶಬ್ದದ ಅರ್ಥವಿವರಣೆಮಾಡುತ್ತಾ ಯಾಸ್ಕರು ಈ ರೀತಿ ಹೇಳಿದ್ದಾರೆ—

ಮೃತ್ಯುಃ । ಮೃತ್ಯುರ್ಮಾರಯತೀತಿ ಸತಃ । ಮೃತಂ ಚ್ಯಾವಯತೀತಿ ವಾ ಶತಬಲಾಕ್ಷೋ ಮೌದ್ಗಲ್ಯಃ ॥ ತಸ್ಯೈಷಾ ಭವತಿ ॥

(ನಿ. ೧೧-೬)

ಪ್ರಾಣಿಗಳನ್ನು ಕೊಲ್ಲುವವನಾದ್ದರಿಂದ ಇವನಿಗೆ ಮೃತ್ಯುವೆಂದು ಹೆಸರು. ಅಥವಾ ಮೃತನಾದವನನ್ನು ಎಂದರೆ ಆತ್ಮವನ್ನು ಆ ಸ್ಥಳದಿಂದ ಪರಲೋಕಕ್ಕೆ ಸಾಗಿಸುವವನಾದ್ದರಿಂದ ಇವನಿಗೆ ಮೃತ್ಯುವೆಂದು ಹೆಸರು ಎಂದು ಮುದ್ಗಲ ಪುತ್ರನಾದ ಶತಬಲಾಕ್ಷನೆಂಬ ಋಷಿಯ ಅಭಿಪ್ರಾಯವು. ಈ ಶಬ್ದಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।
ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥
ಪರಂ ಮೃತ್ಯೋ ಧ್ರುವಂ ಪರೇಹಿ ಮೃತ್ಯೋ ಧ್ರುವಂ ಪರೇಹಿ ಮೃತ್ಯೋ ಕಥಿತಂ ತೇನ ಮೃತ್ಯೋ
ಮೃತಂ ಚ್ಯಾವಯತೇ ಭವತಿ ಮೃತ್ಯೋ ಮದೇರ್ವಾ ಮುದೇರ್ವಾ ॥

(ನಿ. ೧೧-೭)

ಎಲೈ ಮೃತ್ಯುವೇ, ನೀನು ನಿಶ್ಚಯವಾಗಿಯೂ ಇಲ್ಲಿಂದ ಹೊರಡು, ಎಲೈ ಮೃತ್ಯುವೇ ಹೊರಡು, ಹೊರಡು. ಎಲೈ ಮೃತ್ಯುವೇ, ಯಾವ ಪುರುಷನನ್ನು ಮರಣಕ್ಕೆ ಈಡುಮಾಡಿದೆಯೋ ಆ ಪುರುಷನು ನಿನಗೇ ಸೇರಿದವನು. ಅವನನ್ನು ನೀನು ತೆಗೆದುಕೊಂಡು ನಿನ್ನದೇ ಆದ ಪಿತೃಯಾಣಮಾರ್ಗದಿಂದ ಹೊರಡು. ಇತರರು ದೇವಯಾನಮಾರ್ಗದಿಂದ ಪರಲೋಕಕ್ಕೆ ಹೋಗುವರು. ಎಲೈ ಮೃತ್ಯುದೇವನೇ, ನೋಡುವುದಕ್ಕೆ ನಿನಗೆ ಕಣ್ಣುಗಳಿವೆ, ಕೇಳುವುದಕ್ಕೆ ಕಿವಿಗಳಿವೆ. ಇಂತಹ ನಿನಗೆ ನಾನು ಹೇಳುವುದೇನೆಂದರೆ—ನಮ್ಮ ಸಂಶತಿಯವರನ್ನು ಎಂದರೆ ಪುತ್ರಾದಿಗಳನ್ನು ಹಿಂಸಿಸಬೇಡ, ಮತ್ತು ವೀರರಾದ ಜನರನ್ನೂ ಹಿಂಸಿಸಬೇಡ. ಮೃತು ಶಬ್ದವು ಮದ್ ಧಾತುವಿನಿಂದಾಗಲಿ, ಮುದ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು ಎಂದು ನಿರ್ವಚನಾಭಿಪ್ರಾಯವು.

ಈ ಋಕ್ಕಿನಲ್ಲಿ ಋಷಿಯು ಮೃತ್ಯುದೇವತೆಯನ್ನು ಸ್ತುತಿಸಿದಾನೆ. ಮೃತ್ಯುವೆಂದರೆ ಸಮಸ್ತಪ್ರಾಣಿಗಳನ್ನೂ ಸಂಹರಿಸುವವನು, ಕೊಲ್ಲುವವನು ಎಂದರ್ಥವು. ಮನುಷ್ಯರಿಗೂ ಇತರ ಪ್ರಾಣಿಗಳಿಗೂ ಅವರಿಗೆ ಕ್ಲುಪ್ತವಾದ ಆಯುಃ ಪರಿಮಿತಿಯು ಮುಗಿದೊಡನೆಯೇ ರೋಗರುಜಿನಗಳು, ಅಪಘಾತಗಳು, ಮೊದಲಾದ ನಾನಾ ಕಾರಣಗಳಿಂದ ಅದರು ಮೃತರಾಗುವಂತೆ ಮಾಡುವನು. ಮೃತರಾದವರ ಪ್ರೇತಗಳು ಮೃತ್ಯುಲೋಕವನ್ನು ಹೋಗಿ ಸೇರುವುದಕ್ಕೆ ಪ್ರತ್ಯೇಕವಾದ ಮಾರ್ಗವಿದೆಯೆಂಬ ಅಂಶವನ್ನೂ ಋಷಿಯು ಇಲ್ಲಿ ಸೂಚಿಸಿದಾನೆ. ದೇವತೆಗಳು ಸಂಚಾರಮಾಡುವ ಮಾರ್ಗಕ್ಕೆ ದೇವಯಾನವೆಂದು ಹೆಸರು. ಈ ದೇವಯಾನವಲ್ಲದ ಬೇರೆ ಮಾರ್ಗವೆಂದರೆ ಪಿತೃಯಾನವು. ಪಿತೃಗಳು ಪರಲೋಕಕ್ಕೆ ಹೋಗುವ ಮಾರ್ಗವು ಈ ಮಾರ್ಗವು ಮೃತ್ಯು (ಯಮನ) ವಿನ ಸ್ವಂತಮಾರ್ಗವೆಂದು ಋಷಿಯು ವರ್ಣಿಸಿದಾನೆ. ಏಕೆಂದರೆ ಈ ಮಾರ್ಗದಿಂದಲೇ ಪಿತೃಗಳೂ, ಮೃತರಾದವರ ಪ್ರೇತಗಳೂ ಮೃತ್ಯುಲೋಕಕ್ಕೆ ಹೋಗಿ ಸೇರುವುದರಿಂದ ಇದು ಮೃತ್ಯುವಿನ ಸ್ವಂತಮಾರ್ಗವೆಂದು ಋಷಿಯು ಕರೆದಿದಾನೆ. ಇಂಶಹ ಮಾರ್ಗದಿಂದಲೇ ನೀನು ಹೊರಡು, ನಮ್ಮನ್ನೂ ನಮಗೆ ಸೇರಿದ ಪುತ್ರ ಪೌತ್ರ ದುಹಿತೃ ದೌಹಿತ್ರಾದಿ ಬಂಧುವರ್ಗದವರನ್ನೂ ವೀರರಾದ ಭಟರನ್ನೂ ಹಿಂಸಿಸಬೇಡ ಎಂಬ ಪ್ರಾರ್ಥನೆಯೂ ಇಲ್ಲಿ ಉಕ್ತವಾಗಿದೆ. ಈ ಋಕ್ಕಿನಲ್ಲಿರುವ ಚಕ್ಷುಷ್ಮತೇ ಶೃಣ್ವತೇ ಎಂಬ ಶಬ್ದಗಳಿಗೆ ಭಾಷ್ಯಕಾರರು ಅಪ್ರತಿಹತಸರ್ವೇಂದ್ರಿಯವಿಜ್ಞಾನಾಯ । ಈ ಮೃತ್ಯುವಿನ ಕಣ್ಣು, ಕಿವಿ ಮೊದಲಾದ ಸರ್ವೇಂದ್ರಿಯಗಳಿಗೆ ಯಾರಿಂದಲೂ ತಡೆಯಲಾಗದ ಶಕ್ತಿಸಾಮರ್ಥ್ಯಗಳಿರುವವು ಎಂದರ್ಥವನ್ನು ವಿವರಿಸಿದಾರೆ. ಅದರಲ್ಲಿಯೂ ಚಕ್ಷುಷ್ಮತೇ ಶೃಣ್ವತೇ ಎಂಬ ಶಬ್ದಗಳ ಪ್ರಯೋಗವು ಒಂದು ವಿಭವಾದ ಗೂಢಾರ್ಥವನ್ನು ಸೂಚಿಸುವುದಾಗಿದೆ. ಲೋಕದಲ್ಲಿ ಯಾವ ಸ್ಥಳದಲ್ಲಿಯೇ ಆಗಲಿ ಯಾವ ಪ್ರಾಣಿಯು ಮೃತವಾದರೂ ಆ

ವಿಷಯವನ್ನು ಮೃತ್ಯುವು ತಕ್ಷಣವೇ ನೋಡುವನು, ತಕ್ಷಣವೇ ಅದನ್ನು ತನ್ನ ಚಾರರ ಮೂಲಕ ಕೇಳಿ ತಿಳಿಯುವನು. ಎಂದರೆ ಮೃತರಾದವರ ವಿಷಯವು ತಕ್ಷಣವೇ ಇವನಿಗೆ ತಿಳಿಯುವುದು ಎಂಬರ್ಥವು ಈ ಶಬ್ದಪ್ರಯೋಗದಿಂದ ವಿವೃತವಾಗಿದೆಯೆಂದು ತಿಳಿಯಬೇಕು.

ತ್ವೇಷಮಿತ್ಥಾ ಸಮರಣಂ ಶಿಮೀವತೋರಿಂದ್ರಾವಿಷ್ಣೂ ಸುತಪಾ ವಾಮು-
ರುಷ್ಯತಿ |

ಯಾ ಮರ್ತ್ಯಾಯ ಪ್ರತಿಧೀಯಮಾನಮಿತ್ಕೃಶಾನೋರಸ್ತುರಸನಾಮುರು
ಷ್ಯಥಃ ॥ ೨ ॥

ಎಲೈ ಇಂದ್ರಾವಿಷ್ಣುಗಳೇ, ನೀವು -ಾನವನಾದ ಯಜಮಾನನಿಗೆ ಯಜ್ಞಫಲದ ರೂಪದಲ್ಲಿ ಸ್ವೀಕರಿಸಬೇಕಾದ ಅನ್ನಾದಿಗಳನ್ನು ಇಷ್ಟಾರ್ಥಗಳನ್ನು ಹಂಚುವ ಅಗ್ನಿಯ ಮೂಲಕವಾಗಿ ಯಾವಾಗಲೂ ಒದಗಿಸಿಕೊಡುತ್ತೀರಿ. ಈ ರೀತಿ ಇಷ್ಟಾರ್ಥಪ್ರದಾನಾದಿ ಕರ್ಮಗಳುಳ್ಳ ನಿಮ್ಮಿಬ್ಬರ ಪ್ರಕಾಶಮಾನವಾದುದೂ, ಒಡಗೂಡಿದುದೂ ಆದ ಆಗಮನವನ್ನು ಹುತಶಿಷ್ಟವಾದ ಸೋಮರಸವನ್ನು ಕುಡಿದ ಯಜಮಾನನು ಪೂಜಿಸುತ್ತಾನೆ. (ಗೌರವಿಸುತ್ತಾನೆ).

ತೃತೀಯ ಸವನದಲ್ಲಿ ಸೋಮಾತಿರೇಕವೆಂಬ ಹೋಮ ಮಾಡುವಾಗ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ (ವಿಕಲ್ಪವಾಗಿ) ಬೇಕಾದರೂ ಉಪಯೋಗಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—ತ್ವೇಷಮಿತ್ಥಾ ಸಮರಣಂ ಶಿಮೀವತೋರಿತಿ ವಾ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವದು, (ಆ. ೭–೬)

ಕೃಶಾನೋಃ—ಅಗ್ನೇಃ । ಅಗ್ನಿಯ ಮೂಲಕವಾಗಿ ಎಂದು ಕೃಶಾನು ಶಬ್ದಕ್ಕೆ ಅಗ್ನಿಯೆಂದರ್ಥ ಮಾಡಿದೆ. ಈ ಪದವು ಪರ್ಯಾಯವಾಗಿ ಋಕ್ಸಂಹಿತೆಯಲ್ಲಿ ಇದೊಂದು ಋಕ್ಕಿನಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಇದಲ್ಲದೇ ಋಕ್ಸಂಹಿತೆಯಲ್ಲಿ ಈ ಹೆಸರು ಇನ್ನೂ ನಾಲ್ಕು ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ ಸಹ ಅಲ್ಲಿ ಅಗ್ನಿಯೆಂದರ್ಥವಾಗುವುದಕ್ಕೆ ಕಾರಣವಿಲ್ಲ. ಅಲ್ಲೆಲ್ಲಾ ಕೃಶಾನು ವೆಂಬ ಒಬ್ಬ ವ್ಯಕ್ತಿಯ ಹೆಸರಾಗಿದೆ. ವಾಜಸನೇಯ ಸಂಹಿತೆ ಯಲ್ಲಿ ಒಂದು ಪ್ರಕರಣವನ್ನು (೫–೩೨) ಬಿಟ್ಟರೆ ಉಳಿದ ಯಾವ ಶ್ರುತಿವಾಕ್ಯಗಳಲ್ಲೂ ಕೃಶಾನು ಎಂಬ ಪದವು ಅಗ್ನಿಪರ್ಯಾಯವಾಗಿ ಉಪಯೋಗಿಸಿರುವಂತೆ ಕಾಣುವುದಿಲ್ಲ. ಮತ್ತು ಆ ಹೆಸರು ಸಂಹಿತೆಗಳಲ್ಲೂ ಬ್ರಾಹ್ಮಣಾದಿಗಳಲ್ಲೂ ಸಹ ಬಹಳ ಪ್ರಸಿದ್ಧವೂ ಆಗಿದೆ.

ಧನ್ವಿಗಳಲ್ಲೆಲ್ಲಾ ಶ್ರೇಷ್ಠನಾದ ಕೃಶಾನುವು ಸೋಮಪಾಲಕನೆಂದು ಪ್ರಸಿದ್ಧನಾಗಿದ್ದಾನೆ. ಸೋಮವನ್ನಪಹರಿಸಿಕೊಂಡು ಹೋಗುತ್ತಿದ್ದ ಶ್ಯೇನವನ್ನು ಹಿಂಬಾಲಿಸಿ ಅದರ ಪುಕ್ಕವನ್ನು ಛೇದಿಸಿದ ಕಥೆಯು ಋಕ್ಸಂಹಿತೆಯಲ್ಲಿ ಈ ರೀತಿ ಉಕ್ತವಾಗಿದೆ.

ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ ।
ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ॥

(ಋ. ಸಂ. ೪–೨೭೩)

ದ್ಯುಲೋಕದಿಂದ ಸೋಮಾಪಹರಣಕ್ಕೆ ಬಂದ ಶ್ಯೇನವನ್ನು ಸೋಮಪಾಲಕರೆಲ್ಲರೂ ಪ್ರತಿಭಟಿಸುವ ಕಾಲದಲ್ಲಿ ಕೃಶಾನುವು ಮನೋವೇಗದಿಂದ ಅದನ್ನು ಸಮೀಪಿಸಿ ಅದರ ಮೇಲೆ ತನ್ನ ಬಾಣವನ್ನು ಬಿಟ್ಟು ಅದರ ಪುಕ್ಕವನ್ನು ಛೇದಿಸಿದನು ಎಂಬ ಕಥೆಯು ಸೂಚಿಸಲಟ್ಟಿದೆ, ಇದರಂತೆಯೇ,

ಸ ಪೂರ್ವ್ಯಃ ಪವತೇ ಯ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ ।
ಸ ಮಧ್ವ ಆ ಯುವತೇ ವೇವಿಜಾನ ಇತ್ಕೃಶಾನೋರಸ್ತುರ್ಮನಸಾಹ ಬಿಭ್ಯುಷಾ ॥

(ಋ. ಸಂ. ೯-೭೭-೨)

ಎಂಬ ಋಕ್ಕಿನಲ್ಲಿಯೂ ಇದೇ ಸನ್ನಿವೇಶವನ್ನು ಸೂಚಿಸಿದೆ. ಐತರೇಯ ಬ್ರಾಹ್ಮಣದಲ್ಲಿ ಈ ಕಥೆಯು ಇನ್ನೂ ಕೊಂಚ ವಿಸ್ತಾರ ವಾಗಿದ್ದು ಕೃಶಾನುವಿನ ಅಸಾಧಾರಣವಾದ ಶಕ್ತಿಯನ್ನು ತೋರಿಸುತ್ತದೆ.

ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನು ಮಂತ್ರಯೇತ ಪ್ರೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತ್ಯೆ ಪುನರಾಗಚ್ಛತಿ ,

ಸಾ ಪತಿತ್ವಾ ಸೋಮಪಾಲಾನ್ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ।

ತಸ್ಯಾ ಆನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸನಖಮಿವ ಯದ್ವಶಮಸ್ರವತ್ಸಾ ವಶಾಭವತ್ ।

(ಐ. ಬ್ರಾ. ೩-೨೬)

ದೇವತೆಗಳು ಸೋಮರಾಜನನ್ನಪಹರಿಸಿಕೊಂಡು ಬರಬೇಕೆಂದು ಗಾಯತ್ರಿಗೆ ತಿಳಿಸಿ ಅವಳಿಗೆ ಸ್ವಸ್ತ್ಯಯನವನ್ನು ಹೇಳಿ ಶೀಘ್ರವಾಗಿ ವಾಪಸ್ಸುಬರಬೇಕೆಂದಾಶಿಸಿ ಕಳುಹಿದಾಗ ಶ್ಯೇನರೂಪದ ಗಾಯತ್ರಿಯು ಪೃಥ್ವಿಗೆ ಇಳಿದು ಸೋಮಪಾಲರನ್ನು ಬೆದರಿಸಿದಾಗ ಕೃಶಾನುವು ತನ್ನ ಬಾಣದಿಂದ ಅದರ ನಖವನ್ನು ಕತ್ತರಿಸಿದನೆಂದು ವಿವರಿಸಿದೆ.

ಉಳಿದೆಲ್ಲಾ ಕಡೆಗಳಲ್ಲಿಯೂ ಕೃಶಾನು ಪದವು ಅಂಕಿತನಾಮವಾಗಿದ್ದು ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಅಗ್ನಿ ಪರ್ಯಾಯವಾಗಿರುವುದು ಅಷ್ಟೇನೂ ಅಸ್ವಾಭಾವಿಕವಲ್ಲವೆಂಬುದನ್ನು ಇತರ ಶ್ರುತಿವಾಕ್ಯಗಳ ಆಧಾರದಿಂದ ತಿಳಿಯಬಹುದು ತೈತ್ತಿರೀಯಸಂಹಿತೆಯಲ್ಲಿ ಅಗ್ನಿಯೇ ಕೃಶಾನುವೆಂಬ ತಾದಾತ್ಮ್ಯಬೋಧಕವಾದ ವಾಕ್ಯವನ್ನು ಗಮನಿಸಬಹುದು. ಶತಪಥ ಬ್ರಾಹ್ಮಣದಲ್ಲಿ—

ಅಥ ಸೋಮಕ್ರಯಣಾನನುದಿಶತಿ । ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನ ವೇತೇ ವಃ ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ನಿತಿ ಧಿಷ್ಣ್ಯಾನಾಂ ವಾ ಏತೇ ಭಾಜನೇನೈತಾನಿ ವೈ ಧಿಷ್ಣ್ಯಾನಾಂ ನಾಮಾನಿ ತಾನ್ಯೇವೇಭ್ಯ ಏದನ್ನದಿಕ್ಷತ್ ।

(ಶ. ಬ್ರಾ. ೬-೩-೬-೧೧)

ಎಂಬ ವಾಕ್ಯದಲ್ಲಿ ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬುವನು ಸೋಮಪಾಲಕರೆಂಬುದೆನ್ನು ನಿರ್ದೇಶಿಸಿವೆ. ತೈತ್ತಿರೀಯಸಂಹಿತೆಯಲ್ಲಿಯೂ ಸಹ,

..........ಜ್ಯೋತಿಸ್ಸೋಮವಿಕ್ರಯಿಣಿ ತಮೋಮಿತ್ರೋನ ಏಹಿ ಸಮಿತ್ರಧಾ ಇಂದ್ರಸ್ಯೋರುಮಾವಿಶ ದಕ್ಷಿಣಮುಶನ್ನುಶಂತಗ್ಂ ಸ್ಯೋನಸ್ಸ್ಯೋನಗ್ಂ ಸ್ವಾನಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಸ್ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ ।

(ತೈ. ಸಂ. ೧–೨–೭)

ಎಂಬ ವಾಕ್ಯಗಳಲ್ಲಿ ಮೇಲೆ ಹೇಳಿದ ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬುವರೇ ಜಾಗರೂಕರಾದ ಸೋಮರಕ್ಷಕರೆಂದು ಹೇಳಿ ಅನಂತರ,

ವಿಭೂರಸಿ ಪ್ರವಾಹಣೋ ವಹ್ನಿರಸಿ ಹವ್ಯವಾಹನಶ್ಶ್ವಾತ್ರೋಽಸಿ ಪ್ರಚೇತಾಸ್ತುಥೋಽಸಿ ವಿಶ್ವವೇದಾ ಉಶಿಗಸಿ ಕವಿರಂಘಾರಿರಸಿ ಬಂಭಾರಿರವಸ್ಯುರಸಿ ದುವಸ್ವಾಞ್ಛುನ್ಧ್ಯೂರಸಿ ಮಾರ್ಜಾಲೀಯಸ್ಸಮ್ರಾಡಸಿ ಕೃಶಾನುಃ ಪರಿಷದ್ಯೋಽಸಿ ಪವಮಾನಃ ಪ್ರತಕ್ವಾಸಿ ನಭಸ್ವಾನಸಂಮೃಷ್ಟೋಽಸಿ ಹವ್ಯಸೂದ ಋತಧಾಮಾಸಿ ಸುವರ್ಜ್ಯೋತಿರ್ಬ್ರಹ್ಮಜ್ಯೋತಿರಸಿ ಸುವರ್ಧಾಮಾಜೋಽಸ್ಯೇಕಪಾದಹಿರಸಿ ಬುಧ್ನಿಯೋ ರೌದ್ರೇಣಾನೀಕೇನ ಪಾಹಿ ಮಾಗ್ನೇ ಪಿಪೃಹಿ ಮಾ ಮಾ ಮಾ ಹಿಗ್ಂಸೀಃ ॥

(ತೈ. ಸಂ. ೧–೩–೩)

ಎಂಬಲ್ಲಿ ಅಂಘಾರಿ, ಬಂಭಾರಿ, ಕೃಶಾನು ಇತ್ಯಾದಿ ಸಕಲರೂ ನೀನೇ ಆಗಿರುವಿಯೆಂದು ಅಗ್ನಿಯನ್ನು ಸಂಬೋಧಿಸಿ ಪ್ರಾರ್ಥಿಸಿದೆ. ಅದೂ ಅಲ್ಲದೆ, ಕೃಶಾನುವೇ ಮುಂತಾದ ಸೋಮಪಾಲಕರು ಧಿಷ್ಣ್ಯಾನಾಂ ನಾಮಾನಿ ಅಗ್ನಿವೇದಿಗಳ ಹೆಸರುಗಳು ಎಂದು ಮೇಲೆ ಉದಹರಿಸಿರುವ ಶತಪಥಬ್ರಾಹ್ಮಣವಾಕ್ಯದಲ್ಲಿ ತಿಳಿಸಿದೆ. (ಶ. ಬ್ರಾ. ೩–೩–೩–೧) ಆದುದರಿಂದ ಕೃಶಾನುವಿಗೂ ಅಗ್ನಿಗೂ ತಾದಾತ್ಮ್ಯವಿದೆಯೆಂದು ಕೆಲವು ವಾಕ್ಯಗಳ ಆಧಾರದಿಂದ ತಿಳಿಯುತ್ತದೆ.

ಋಕ್ಸಂಹಿತೆಯಲ್ಲಿಯೂ ಸಹ ಪ್ರಕೃತವಾದ ಋಕ್ಕಿನಲ್ಲಿ ಕೃಶಾನು ಶಬ್ದದೊಡನೆ ಸಂಬಂಧಿಸಿದ ವಿಶೇಷಣಗಳೇ ಈ ಹೆಸರು ಬರತಕ್ಕ ಉಳಿದ ಋಕ್ಕುಗಳಲ್ಲಿಹೂ ಉಪಯೋಗಿಸಲ್ಪಟ್ಟರುವುದನ್ನೂ ಗಮನಿಸಬಹುದು. ಉದಾಹರಣೆಗೆ—

ತ್ರಿಃ ಸಪ್ತ ಸಸ್ರಾ ನದ್ಯೋ ಮಹೀರಪೋ ವನಸ್ಪತೀನ್ ಪರ್ವತಾ ಅಗ್ನಿಮೂತಯೇ ।
ಕೃಶಾನುಮಸ್ತ್ೠನ್ ತಿಷ್ಯಂ ಸಧಸ್ಥ ಆ ರುದ್ರಂ ರುದ್ರೇಷು ರುದ್ರಿಯಂ ಹವಾಮಹೇ ॥

(ಋ. ಸಂ. ೧೦–೬–೪೮)

ಎಂಬ ಋಕ್ಕಿನಲ್ಲಿ ಕೃಶಾನು ಮತ್ತು ಅಗ್ನಿ ಎಂಬ ಪದಗಳು ವಿಶೇಷ್ಯವಿಶೇಷಣಗಳಾಗಿವೆ. ಮತ್ತು ಮೇಲೆ ಉದಹರಿಸಿರುವ ೯–೭೭–೨ ನೇ ಋಕ್ಕಿನಲ್ಲಿ ಅಸ್ತುಃ ಕೃಶಾನೋಃ ಎಂದೂ, ೪–೨೭–೩ ನೇ ಋಕ್ಕಿನಲ್ಲಿ ಅಸ್ತಾ ಕೃಶಾನುಃ ಎಂದೂ ಪ್ರಯೋಗವಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಸ್ತುಃ ಕೃಶಾನೋಃ ಎಂಬ ವಿಶೇಷಣ ವಿಶೇಷ್ಯಗಳಿವೆ.

ಉದಹರಿಸಿರುವ ಋಕ್ಕುಗಳಲ್ಲಿ ಅಸ್ತು ಎಂಬ ಪದಕ್ಕೆ ಬಾಣವನ್ನು ಎಸೆದು ಶತ್ರುವನ್ನು ಹಿಂಸಿಸುವ ಎಂದು ತಾತ್ಪರ್ಯವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅಸ್ತಾಃ ಎಂದರೆ ನಿರಸಿತುಃ ಶತ್ರೂಣಾಂ । ಶತ್ರುಹಿಂಸಕನೆಂದೇ ಅರ್ಥವಾಗಿದೆ.

ಅಸನಾಂ—ಅಸನಂ ಚಲನಶೀಲಂ ಪ್ರದಾನಶೀಲಮನ್ನಾದಿಕಂ। ದಾತೃವಿನಿಂದ ಚಲಿಸಿ ಪ್ರತಿಗ್ರಹೀತೃವಿನಲ್ಲಿಗೆ ಹೋಗುವ ಸ್ವಭಾವವಿರುವುದರಿಂದ ಅನ್ನಾದಿಗಳಿಗೆ ಅಸನವೆಂದು ಹೆಸರೆಂದು ಸಾಯಣರು ವಿವರಿಸಿದ್ದಾರೆ.

ಪುರೂಣಿ ದಸ್ಮೋ ನಿ ರಿಣಾತಿ ಜಂಭೈರಾದ್ರೋಚತೇ ವನ ಆ ವಿಭಾವಾ ।
ಆದಸ್ಯ ವಾತೋ ಅನು ವಾತಿ ಶೋಚಿರಸ್ತುರ್ನ ಶರ್ಯಾಮಸನಾಮನು ದ್ಯೂನ್ ॥
(ಋ. ಸಂ. ೧-೧೪೮-೪)

ಎಂಬ ಋಕ್ಕಿನಲ್ಲಿ ಚಲಿಸತಕ್ಕ ಬಾಣಕ್ಕೆ ವಿಶೇಷಣವಾಗಿದೆ.

ಉರುಷ್ಯತಿ—ಉರುಷ್ಯತೀ ರಕ್ಷಾಕರ್ಮಾ (ನಿ. ೫-೨೩) ರಕ್ಷಿಸುತ್ತಾನೆಂದರ್ಥ. ನಿರುಕ್ತಕಾರರು—
ಸ ನೋ ಬೋಧಿ ಶ್ರುಧೀ ಹವಮುರುಷ್ಯಾಣೋ ಅಘಾಯತಃ ಸಮಸ್ಮಾತ್ ।
(ಋ. ಸಂ. ೫-೨೪-೩)

ಎಂಬ ಋಕ್ಕನ್ನುದಹರಿಸಿ ನಮ್ಮ ವಿಷಯದಲ್ಲಿ ಕೇಡನ್ನು ಬಯಸುವ ಸಮಸ್ತರಿಂದಲೂ ನಃ ನಮ್ಮನ್ನು ಉರುಷ್ಯ ರಕ್ಷಿಸು ಎಂಬರ್ಥವನ್ನು ತೋರಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಈ ಪದವು ಎರಡು ಸಲ ಬಂದಿದೆ. ಮೊದಲನೆಯದಕ್ಕೆ ಉರುಷ್ಯತಿ—ರಕ್ಷತಿ । ಯಾಗೇನ ಪೂಜಯತಿ ಅಥವಾ ಸ್ತೌತಿ । ಯಾಗದಿಂದ ಪೂಜಿಸುತ್ತಾನೆ ಅಥವಾ ಸ್ತುತಿಸುತ್ತಾನೆ ಎಂಬರ್ಥವೆಂದೂ, ಎರಡನೆಯ ಪದಕ್ಕೆ ಉರುಷ್ಯಥಃ ಪ್ರೇರಯಥಃ ನಮಗೆ ಅವಿಚ್ಛಿನ್ನವಾಗಿ ಅನ್ನವನ್ನು ಒದಗಿಸುತ್ತಾ ರಕ್ಷಿಸಿ ಎಂಬರ್ಥವೆಂದೂ ಸಾಯಣರು ವಿವರಿಸಿದ್ದಾರೆ.

ಶಿಮೀವತಃ—ಶಿಮೀತಿ ಕರ್ಮನಾಮ । ಶಮಯತೇರ್ವಾ ಶಕ್ನೋತೇರ್ವಾ । (ನಿ. ೫-೧೨) ಪ್ರಯಾಸಪಡು ಅಥವಾ ಶ್ರಮಪಡು ಎಂಬರ್ಥವನ್ನು ಕೊಡುವ ಶಮ್ ಧಾತುವಿನಿಂದಾಗಲಿ ಅಥವಾ ಶಕ್ಯವೆಂಬರ್ಥವನ್ನು ಕೊಡುವ ಶಕ್ ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿ ಕರ್ಮವೆಂದರ್ಥವಾಗುತ್ತದೆ.

ಆಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಁ ಋಜೀಷೀ ।
ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥
(ಋ. ಸಂ. ೧೦-೮೯-೫)

ಇತ್ಯಾದಿ ಋಕ್ಕುಗಳಲ್ಲಿ ಶಮೀವಾನ್ ಎಂಬುದಕ್ಕೆ ಕರ್ಮಯುಕ್ತನಾದ ಎಂಬರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದೇ ಅರ್ಥವನ್ನು ಹೇಳಬೇಕು. ಇಂದ್ರಾವಿಷ್ಣುಗಳು ಸರ್ವದಾ ಲೋಕರಕ್ಷಣಾದಿ ಕಾರ್ಯಯುಕ್ತರೆಂದರ್ಥವು.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಏಳನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಅಷ್ಟಮಃ ಖಂಡಃ

### ಎಂಟನೆಯ ಖಂಡವು

**ವಿಶ್ವಾನರೋ ವ್ಯಾಖ್ಯಾತಃ । ತಸ್ಯೈಷಾ ಭವತಿ ॥ ೮ ॥**

ಕ್ರಮಪ್ರಾಪ್ತವಾದ ವಿಶ್ವಾನರಪದದ ನಿರ್ವಚನವನ್ನು ತೋರಿಸುತ್ತಾರೆ. 'ಅಪಿ ವಾ ವಿಶ್ವಾನರ ಏವ ಸ್ಯಾತ್' (ನಿ. ೭-೨೧) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಎಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ನವಮಃ ಖಂಡಃ

### ಒಂಭತ್ತನೆಯ ಖಂಡವು

**ಪ್ರ ವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ । ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ (ಋ. ಸಂ. ೧೦-೫೦-೧) ॥ ಪ್ರಾರ್ಚತ ಯೂಯಂ ಸ್ತುತಿಂ ಮಹತೇಽಂಧಸೋಽನ್ನಸ್ಯ ದಾತ್ರೇ ಮಂದಮಾನಾಯ ಮೋದಮಾನಾಯ ಸ್ತೂಯಮಾನಾಯ ಶಬ್ದಾಯ್ಯಮಾನಾಯೇತಿ ವಾ ವಿಶ್ವಾನರಾಯ ಸರ್ವಂ ವಿಭೂತಾಯೇಂದ್ರಸ್ಯ ಯಸ್ಯ ಪ್ರೀತೌ ಸುಮಹದ್ಬಲಂ ಮಹಚ್ಚ ಶ್ರವಣೀಯಂ ಯಶೋ ನೃಮ್ಣಂ ಚ ಬಲಂ ನೃಣ್ನತಂ ದ್ಯಾವಾಪೃಥಿವ್ಯಾ ವಃ ಪರಿಚರತ ಇತಿ ಕಮನ್ಯಂ ಮಧ್ಯಮಾದೇವಮವಕ್ಷ್ಯತ್ತಸ್ಯೈಷಾಪರಾಭವತಿ ॥ ೯ ॥**

ಪ್ರವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾ ಭುವೇ । ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ॥

(ಋ. ಸಂ. ೮-೧-೯,　ಯ. ವಾ. ಸಂ. ೩೩-೨೩)

ವಿಶ್ವಾನರ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಸ್ತೋತೃಗಳೇ, ನೀವು ಅಧಿಕ ಅನ್ನದಾತೃವಾದ, ಸ್ತುತಿಸಲ್ಪಡುವ, ಸಕಲವಿಭೂತಿಯುಕ್ತನಾದ ಸರ್ವನೇತೃವಾದ ಮಧ್ಯಮ ವಾಯುದೇವನನ್ನು ಚನ್ನಾಗಿ ಸ್ತುತಿಸಿರಿ. ಈ ಈಶ್ವರನಾದ ವಾಯುವಿನ ಅನುಗ್ರಹವಾದಾಗ ಅಧಿಕಬಲವೂ, ಮಹಾಯಶಸ್ಸೂ, ಶಕ್ತಿಯೂ ಉಂಟಾಗುತ್ತವೆ. ಅವನನ್ನು ಸ್ತುತಿಸುವ ನಿಮ್ಮನ್ನು ದ್ಯಾವಾಪೃಥಿವಿಗಳೂ ಅಭಿನಂದಿಸುತ್ತವೆ.

ಪ್ರಾರ್ಚತ ಯೂಯಂ ಸ್ತುತಿಂ ಮಹತೇ ಅಂಧಸೋಽನ್ನಸ್ಯ ದಾತ್ರೇ ಮಂದಮಾನಾಯ ಮೋದಮಾನಾಯ ಸ್ತೂಯಮಾನಾಯ ಶಬ್ದಾಯಮಾನಾಯೇತಿ ವಾ । ವಿಶ್ವಾನರಾಯ ಸರ್ವಂ ವಿಭೂತಾಯೇಂದ್ರಸ್ಯ ಯಸ್ಯ ಪ್ರೀತೌ ಸುಮಹದ್ಬಲಂ ಮಹಚ್ಚ ಶ್ರವಣೀಯಂ ಯಶೋ ನೃಮ್ಣಂ ಚ ಬಲಂ ನೃಣಾಂ ನತಂ, ದ್ಯಾವಾಪೃಥಿವ್ಯೌ ವಃ ಪರಿಚರತ ಇತಿ । ಕಮನ್ಯಂ ಮಧ್ಯಮಾದೇವಮವಕ್ಷ್ಯತ್ । ತಸ್ಯೈಷಾಽಪರಾ ಭವತಿ ॥ ೯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಂದಮಾನಪದಕ್ಕೆ ನಾನಾರ್ಥ ವರ್ಣಿತವಾಗಿದೆ. ಮದಿಧಾತುವಿಗೆ ಸ್ತುತಿಮೋದಮದಸ್ವಪ್ನಕಾಂತಿಗತ್ಯರ್ಥವಿರುವುದರಿಂದ ಸಂತೋಷಪಡುವ, ಸ್ತುತಿಸಲ್ಪಡುವ, ಶಬ್ದಮಾಡುವ ಎಂದು ಅನೇಕಾರ್ಥ ವಿವರಿಸುತ್ತಾರೆ. ಬಲಕೃತಿ ಇಲ್ಲಿ ವರ್ಣಿತವಾದುದರಿಂದ ಮಧ್ಯಮದೇವನಲ್ಲದೆ ವಿಶ್ವಾನರನು ಬೇರೆ ದೇವತೆಯಾಗುವುದಿಲ್ಲ. ದ್ಯುಸ್ಥಾನದೇವತೆಯೂ ವಿಶ್ವಾನರಪದದಿಂದ ಅಭಿಹಿತನಾಗಿರುವುದರಿಂದ ಸಂಶಯಬರುತ್ತದೆ. ಆದುದರಿಂದ ಮಧ್ಯಮಸ್ಥಾನದವನೇ ಇಲ್ಲಿ ಹೇಳಿರುವನೆಂದು ತಿಳಿಸಲು ಅಸಾಧಾರಣವಾದ ಬಲಕೃತಿಯನ್ನು ತಿಳಿಸುವ ಇನ್ನೊಂದು ಮಂತ್ರವೂ ಇದೆಯೆಂದು ತಿಳಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಒಂಭತ್ತನೆಯ ಖಂಡವು ಸಮಾಪ್ತವಾಗಿದೆ.

◆◆◆◆◆◆◆◆

## ಅಥ ದಶಮಃ ಖಂಡಃ

## ಹತ್ತನೆಯ ಖಂಡವು

ಉದು ಜ್ಯೋತಿರಮೃತಂ ವಿಶ್ವಜನ್ಯಂ ವಿಶ್ವಾನರಃ ಸವಿತಾ ದೇವೋ ಅಶ್ರೇತ್ (ಋ. ಸಂ. ೭-೭೬-೧) ‖ ಉದಶಿಶ್ರಿಯಜ್ಜ್ಯೋತಿರಮೃತಂ ಸರ್ವಜನ್ಯಂ ವಿಶ್ವಾನರಃ ಸವಿತಾ ದೇವ ಇತಿ ಧಾತಾ ಸರ್ವಸ್ಯ ವಿಧಾತಾ ತಸ್ಯೈಷಾ ಭವತಿ ‖ ೧೦ ‖

ಉದು ಜ್ಯೋತಿರಮೃತಂ ವಿಶ್ವಜನ್ಯಂ ವಿಶ್ವಾನರಃ ಸವಿತಾ ದೇವೋ ಅಶ್ರೇತ್ ‖

(ಋ. ಸಂ. ೫-೫-೨೩)

ವಿಶ್ವಾನರನೆಂದರೆ ಮಧ್ಯ ಮವಾಯುವೆಂದು ಸ್ಪಷ್ಟಪಡಿಸಲು ವಿಶ್ವಾನರಸ್ತುತಿ ಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ ಅವಿನಾಶಿಯಾದ, ಸಕಲ ಜನರಿಗೆ ಹಿತವಾದ ಸೂರ್ಯನೆಂಬ ಜ್ಯೋತಿಯನ್ನು, ಪ್ರೇರಕನಾದ ವಿಶ್ವಾನರನಾದ ವಾಯುದೇವನು. ಮೇಲಿನಿಂದಲೇ ಹೋಗುವಂತೆ ಮಾಡಿದನು.

ಉದಶಿಶ್ರಿಯಜ್ಜ್ಯೋತಿರಮೃತಂ ಸರ್ವಜನ್ಯಂ ವಿಶ್ವಾನರಃ ಸವಿತಾ ದೇವ ಇತಿ ‖

ಮಂತ್ರಾರ್ಥವನ್ನು ವಿವರಿಸುತ್ತಾರೆ. ಹೀಗೆ ಇಲ್ಲಿ ವಿಶ್ವಾನರನು ಸೂರ್ಯಜ್ಯೋತಿಯನ್ನು ಊರ್ಧ್ವಲೋಕದಲ್ಲಿರುವಂತೆ ಮಾಡಿದನೆಂದು ಬಲಕೃತಿವರ್ಣಿತವಾದುದರಿಂದ ವಾಯುದೇವನಲ್ಲದೆ ಇತರ ಯಾವ ದೇವತೆಯೂ ಆಗುವುದಿಲ್ಲ.

ಧಾತಾ ಸರ್ವಸ್ಯ ವಿಧಾತಾ । ತಸ್ಯೈಷಾ ಭವತಿ ‖ ೧೦ ‖

ಕ್ರಮಪ್ರಾಪ್ತವಾದ ಧಾತೃಪದದ ನಿರ್ವಚನವನ್ನು ತೋರಿಸುತ್ತಾರೆ. ಇವನು ಸಕಲವನ್ನೂ ಸೃಜಿಸುವ ಮಧ್ಯಮದೇವನಾಗುತ್ತಾನೆ. ಮಳೆಯಿಂದ ಸಕಲ ಧಾರಣೆ ಮಾಡುತ್ತಾನೆಂದು ತಾತ್ಪರ್ಯ. ಧಾರಣಪೋಷಣಾರ್ಥಕಧಾತುವಿಗೆ ತೃಚ್ ಪ್ರತ್ಯಯ ಬಂದಿದೆ. ಮುಂದೆ ಹೇಳುವ ಮಂತ್ರವು ಧಾತೃದೇವನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।
ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ‖ ೪ ‖

ಋತ್ವಿಕ್ಕುಗಳೊಡಗೂಡಿಕೊಂಡು ಋಭುಗಳು ಯಾಗಾದಿಕರ್ಮಗಳನ್ನು ಅತಿಶೀಘ್ರವಾಗಿ ನೆರವೇರಿಸಿ ಮಾಡುವರಾಗಿದ್ದರೂ ಸಹ ಮರಣರಹಿತವಾದ ದೇವತ್ವವನ್ನು ತಮ್ಮ ಕರ್ಮಗಳಿಂದ ಪಡೆದರು. ಅನಂತರ ಸುಧನ್ವಪುತ್ರರೂ, ಸೂರ್ಯನಿಗೆ

ಸಮಾನವಾದ ಪ್ರಕಾಶವುಳ್ಳವರೂ ಆದ ಆ ಋಭುಗಳು ಸಂವತ್ಸರದ ಅವಯವಗಳಾದ ವಸಂತಾದಿಋತುಕಾಲಗಳಲ್ಲಿ ಅನುಷ್ಠಿಸ ಬೇಕಾದ ಅಗ್ನಿಷ್ಟೋಮಾದಿಕರ್ಮಗಳೊಡನೆ ಒಂದಾಗಿ ಸೇರಿಕೊಂಡು ಹವಿಸ್ಸನ್ನು ಸ್ವೀಕಾರಮಾಡಲು ಅರ್ಹರಾದರು. ಈ ಋಕ್ಕಿಗೆ ನಿರುಕ್ತವು ಈ ರೀತಿಯಿದೆ.

ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತ್ವಮಾನಶಿರೇ ಸೌಧನ್ವನಾ ಋಭವಃ ಸೂರಖ್ಯಾನಾಃ ಸೂರಪ್ರಜ್ಞಾ ವಾ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ ।
(ನಿ ೧೧–೧೬)

ಸೂರ್ಯನಂತೆ ಪ್ರಕಾಶವನುಳ್ಳವರೂ ಅಥವಾ ಸೂರ್ಯನಂತೆ ಪ್ರಜ್ಞೆಯುಳ್ಳವರೂ ಆದ ಋಭುಗಳು ತಮ್ಮ ತಪಃಕರ್ಮಗಳಿಂದಲೂ ಇತರ ಅಸಾಧಾರಣವಾದ ಕಾರ್ಯಗಳಿಂದಲೂ ಸಹ ಮಾನವರಾದವರೂ ಅಮೃತತ್ವವನ್ನು ಪಡೆದರು. ಮತ್ತು ಸಂವತ್ಸರದ ಅವಯವಗಳಾದ ವಸಂತಾದಿ ಋತುಕಾಲಗಳಲ್ಲಿ ಅನುಷ್ಠಿಸಬೇಕಾದ ಅಗ್ನಿಷ್ಟೋಮಾದಿ ಕರ್ಮಗಳೊಂದಿಗೆ ಒಂದಾದರು, ಎಂದರೆ ಸಕಲ ಯಜ್ಞಗಳಲ್ಲಿಯೂ ಹವಿಸ್ಸ್ವೀಕಾರಕ್ಕೆ ಅರ್ಹತೆಯನ್ನು ಪಡೆದರು ಎಂದಿದೆ.

ವಾಘತಃ ಈ ಶಬ್ದವು ಋತ್ವಿಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩–೧೮) ಸಾಯಣರು ಋತ್ವಿಙ್ನಾಮೈತತ್ ಅತ್ರ ಚ ಸಾಮರ್ಥ್ಯಾತ್ ತದ್ವಂತೋ ಲಕ್ಷ್ಯಂತೇ । ಋತ್ವಿಗ್ಭಿರುಪೇತಾ ಋಭವಃ । ಋತ್ವಿಙ್ನಾಮಗಳಲ್ಲಿ ಪಠಿತ ವಾಗಿರುವ ಈ ಶಬ್ದಕ್ಕೆ ಈ ಸಂದರ್ಭದಲ್ಲಿ ಋತ್ವಿಕ್ಕುಗಳೊಡನೆ ಕೂಡಿರುವ ಋಭುಗಳು ಎಂದರ್ಥವೆಂದು ಹೇಳಿದ್ದಾರೆ. ಆದರೆ ನಿರುಕ್ತದಲ್ಲಿ ವೋಢಾರೋ ಮೇಧಾವಿನೋ ವಾ ಎಂದಿದೆ. ವೋಢಾರಃ ಎಂಬುದಕ್ಕೆ ದುರ್ಗಾಚಾರ್ಯರು ಯಜ್ಞ–ಸ್ಯಾನುಷ್ಠಾತಾರಃ ಯಜ್ಞಾನುಷ್ಠಾನವನ್ನು ಮಾಡುವವರು ಅಥವಾ ಮೇಧಾವಿನಃ ನ ಹ್ಯಮೇಧಾವಿನಃ ಸಂವತ್ಸರೇಣ ಸಕಲಂ ಕರ್ಮ ಸಮಾಪಯಿತುಂ ಶಕ್ತಾಃ । ಒಂದು ಸಂವತ್ಸರದಲ್ಲಿಯೇ ಸಕಲ ಕರ್ಮಗಳನ್ನು ನೆರವೇರಿಸಲು ಶಕ್ತಿಯುಳ್ಳ ವರು ಎಂದರ್ಥವೆಂದು ವಿವರಿಸಿದ್ದಾರೆ.

ವಿಷ್ಟ್ವೀ—ಈ ಶಬ್ದವು ೨೬ ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩–೧). ಆದರೆ, ವಿಷ್ಟ್ವೀತಿ ನ ಕರ್ಮ–ನಾಮ । ಶಮೀತ್ಯನೇನ ಪೌನರುಕ್ತ್ಯಪ್ರಸಂಗಾತ್ । ಕಿಂ ತರ್ಹಿ । ವಿಷೇರ್ವ್ಯಾಪ್ತ್ಯರ್ಥಸ್ಯ ಕ್ರಿಯಾಶಬ್ದೋಽಯಂ ವಿಷ್ಟ್ವೀತಿ । ವಿಷ್ಟ್ವಾ ವ್ಯಾಪ್ತ್ವಾ । ಕೃತ್ವಾ ಇತ್ಯರ್ಥಃ । ಕರ್ಮನಾಮಗಳಲ್ಲಿ ಪಠಿತವಾಗಿದ್ದರೂ ಸಹ ಇಲ್ಲಿ ಪುನಃ ವಾಚಕವಾದ ಶಮೀ ಎಂದು ಪುನರುಕ್ತಿಯಿರುವುದರಿಂದ ವ್ಯಾಪ್ತ್ಯರ್ಥವುಳ್ಳ ವಿಷ್ ಧಾತುವಿನಿಂದ ನಿಷ್ಪನ್ನವಾದ ಈ ಪದಕ್ಕೆ ನೆರವೇರಿಸಿ ಎಂದರ್ಥವೆಂದು ಭಾಷ್ಯಗಳಲ್ಲಿ ವಿವರಿಸಿದೆ.

ಶಮೀ—ಈ ಪದವೂ ಕರ್ಮನಾಮಗಳಲ್ಲಿ ಪಠಿತವಾಗಿದೆ ( ನಿ. ೩–೧ ) ಯಾಗದಾನಾದೀನಿ ಕರ್ಮಾಣಿ । ಅನ್ಯಾನ್ಯಪಿ " ಏಕಂ ಚಮಸಂ ಚತುರಃ ಕೃಣೋತನ " (ಋ. ಸಂ. ೧–೧೬೧–೨ ಇತ್ಯಾದಿನಾ ದೇವೈರುಕ್ತಾನಿ ಕರ್ಮಾಣಿ । ಇಲ್ಲಿ ಕರ್ಮವೆಂದರೆ ಯಾಗಾದಿ ಕರ್ಮಗಳು ಮತ್ತು " ಒಂದು ಚಮಸವನ್ನು ನಾಲ್ಕಾಗಿಮಾಡಿ " ಎಂದಿವೇ ಮುಂತಾದ ದೇವತೆಗಳಿಂದ ಪ್ರಾರ್ಥಿತವಾದ ಕರ್ಮಗಳೆಂದರ್ಥ.

ಸೂರಚಕ್ಷಸಃ—ಸೂರ್ಯಸಮಾನಪ್ರಕಾಶಾಃ ಸೂರ್ಯಸದೃಶಜ್ಞಾನಾ ವಾ । ಸೂರ್ಯನಿಗೆ ಸಮಾನವಾದ ಪ್ರಕಾಶ

ವುಳ್ಳವರು ಅಥವಾ ಸೂರ್ಯನಿಗೆ ಸಮಾನವಾದ ಜ್ಞಾನವುಳ್ಳವರು ಎಂದರ್ಥ. ಋಭು ಶಬ್ದಕ್ಕೆ ಉರು ಭಾಸಮಾನೋ ಮೇಧಾವೀ ವಾ । ಅತ್ಯಂತ ಪ್ರಕಾಶಮಾನನು ಅಥವಾ ಮೇಧಾವಿಯೆಂದರ್ಥವುಂಟು. ಉದಾಹರಣೆಗೆ—

ಶ್ವಮಗ್ನ ಋಭುರಾಕೇ ನಮಸ್ಯ ೧ ಸ್ತ್ವಂ ವಾಜಸ್ಯ ಕ್ಷುಮತೋ ರಾಯ ಈಶಿಷೇ ।

(ಋ. ಸಂ. ೨-೦-೧೦)

ಎಂಬ ಋಕ್ಕಿನಲ್ಲಿ ಅಗ್ನಿಗೆ ಋಭು ಶಬ್ದವು ವಿಶೇಷಣವಾಗಿ ಮೇಲಿನ ಅರ್ಥವನ್ನು ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸೂರಚಕ್ಷಸಃ ಎಂಬ ವಿಶೇಷಣವು ಋಭುಗಳ ಈ ವಿಶೇಷಗುಣವನ್ನು ತಿಳಿಸುತ್ತದೆ.

ಧೀತಿಭಿಃ—ಅಗ್ನಿಷ್ಟೋಮಾದಿಕರ್ಮಭಿಃ । ಅಗ್ನಿಷ್ಟೋಮಾದಿ ಕರ್ಮಗಳೊಡನೆ ಎಂದು ಇಲ್ಲಿ ಅರ್ಥವಾಗುತ್ತದೆ. ಧೀತಿಶಬ್ದಕ್ಕೆ ಕರ್ಮ, ಪ್ರಜ್ಞಾ ಎಂಬ ಎರಡು ಅರ್ಥವೂ ಉಂಟು. ನಿರುಕ್ತದಲ್ಲಿ ಅಂಗುಳಿನಾಮಗಳಲ್ಲೂ ಪಠಿತವಾಗಿದೆ (ನಿ. ೩-೮) ನಿರುಕ್ತಕಾರರು ಕರ್ಮ, ಪ್ರಜ್ಞೆ ಎಂದೆರಡರ್ಥಗಳೂ ಇರತಕ್ಕ ಎರಡು ಋಕ್ಕುಗಳನ್ನು ಉದಹರಿಸಿದ್ದಾರೆ.

ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ।

(ಋ. ಸಂ. ೬-೬೧-೨)

ಎಂಬ ಋಕ್ಕಿನಲ್ಲಿ ಧೀತಿಭಿಃ ಎಂದರೆ ಕರ್ಮಭಿಃ ಎಂದೂ,

ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।

(ಋ. ಸಂ. ೪-೨೩-೮)

ಎಂಬ ಋಕ್ಕಿನಲ್ಲಿ ಪ್ರಜ್ಞಾ ಎಂದೂ ನಿರುಕ್ತಕಾರರು ಅರ್ಥವನ್ನು ಹೇಳಿರುತ್ತಾರೆ. ಸ್ತುತಿಯೆಂಬ ಅರ್ಥದಲ್ಲಿ ಕೆಲವೆಡೆಗಳಲ್ಲಿ ಈ ಶಬ್ದದ ಪ್ರಯೋಗವಿದೆ.

ಸಮಪೃಚ್ಯಂತ—ಸಂಯುಕ್ತಾ ಅಭವನ್ । ಹವಿರ್ಭಾಗಾರ್ಹಾ ಬಭೂವುಃ । ಕರ್ಮಗಳೊಂದಿಗೆ ಐಕ್ಯತೆಯನ್ನು ಪಡೆದರು ಎಂದರೆ ಹವಿಸ್ಸ್ವೀಕಾರಕ್ಕೆ ಅರ್ಹತೆಯನ್ನು ಪಡೆದರು ಎಂದರ್ಥ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡವು ಸಮಾಪ್ತವಾಗಿದೆ.

# ಅಥ ಏಕಾದಶ ಖಂಡಃ

## ಹನ್ನೊಂದನೆಯ ಖಂಡವು

ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ | ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ (ಋ. ಸಂ. ೭-೧೭-೨) || ಮೈತ್ರಾ ಸಂ. ೪-೧೨-೬)|| ಧಾತಾ ದದಾತು ದತ್ತವತೇ ಪ್ರವೃದ್ಧಾಂ ಜೀವಿಕಾಮನುಪಕ್ಷೀಣಾಂ ವಯಂ ದೇವಸ್ಯ ಧೀಮಹಿ ಸುಮತಿಂ ಕಲ್ಯಾಣೀಂ ಮತಿಂ ಸತ್ಯಧರ್ಮಣೋ ವಿಧಾತಾ ಧಾತ್ರಾ ವ್ಯಾಖ್ಯಾತಸ್ತಸ್ಯೈಷ ನಿಪಾತೋ ಭವತಿ ಬಹುದೇವತಾಯಾಮೃಚಿ || ೧೧ ||

ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ ||
ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ ||

(ಅ. ಸಂ. ೭-೧೭)

ಧಾತೃಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಧ್ಯಮದೇವನಾದ ಧಾತೃವು ಹವಿರ್ದಾನ ಮಾಡಿದವರಿಗೆ ಪ್ರವೃದ್ಧವಾದ ನಶಿಸದಿರುವ ಜೀವಕೆಯನ್ನು ಕೊಡುತ್ತಾನೆ. ಆದುದರಿಂದ ನಾವು ನಿತ್ಯವೂ ಯಥಾವತ್ತಾಗಿ ಕರ್ಮವನ್ನು ಮಾಡುತ್ತಾ ಧಾತೃದೇವ ಸಂಬಂಧಿಯಾದ ಹವಿರ್ದಾನದಿಂದ ಕೂಡಿದ, ಶುಭಕರವಾದ ಬುದ್ಧಿಯನ್ನು ಧರಿಸೋಣ.

ಧಾತಾ ದಧಾತು ದಾಶುಷೇ ದತ್ತವತೇ ಪ್ರವೃದ್ಧಾಂ ಜೀವಿಕಾಮನು-
ಪಕ್ಷೀಣಾಂ ವಯಂ ದೇವಸ್ಯ ಧೀಮಹಿ ಸುಮತಿಂ ಕಲ್ಯಾಣೀಂ
ಮತಿಂ ಸತ್ಯಧರ್ಮಣಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪಾಠಮಾತ್ರದಿಂದಲೇ ಅರ್ಥವಾಗುವುದರಿಂದ ಸುಲಭಾರ್ಥಕವಾಗಿದೆ.

ವಿಧಾತಾ-ಧಾತ್ರಾ ವ್ಯಾಖ್ಯಾತಃ | ತಸ್ಯೈಷ ನಿಪಾತೋ ಭವತಿ |ಬಹು
ದೇವತಾಯಾಮೃಚಿ || ೧೧ ||

ವಿಧಾತಾ ಕ್ರಮಪ್ರಾಪ್ತವಾಗಿದೆ ಇದು ದಾತೃಪದದಿಂದಲೇ ವ್ಯಾಖ್ಯಾತವಾಗಿದೆ. ಧಾತೃವೇ ವಿಧಾತೃ ಆಗುತ್ತಾನೆ. ವಿ ಉಪಸರ್ಗಮಾತ್ರ ಇಲ್ಲಿ ಅಧಿಕವಾಗಿದೆ. ವಿಧಾತೃಸ್ತುತಿಯು ಬಹುದೇವತಾಕವಾದ ಅಂದರೆ ವರುಣ, ವಿಧಾತೃ, ಅನುಮತಿ ಸೋಮ ಬೃಹಸ್ಪತಿದೇವತಾಕವಾದ ಋಙ್ಮಂತ್ರದಲ್ಲಿ ಸ್ಪಷ್ಟವಾಗಿದೆ.

ಈ ರೀತಿಯಾಗಿ ಶ್ರೀ ಯಾಸ್ಕಮುನಿಪ್ರಣೀತವಾದ ಹನ್ನೊಂದನೆಯ ಅಧ್ಯಾಯದಲ್ಲಿ
ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

# ಅಥ ದ್ವಾದಶ ಖಂಡಃ

## ಹನ್ನೆರಡನೆಯ ಖಂಡವು

ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ ಉ ಶರ್ಮಣಿ । ತವಾಹಮದ್ಯ ಮಘವನ್ನುಪಸ್ತುತೌ ಧಾತರ್ವಿಧಾತಃ ಕಲಶಾ ಅಭಕ್ಷಯಂ (ಋ ಸಂ. ೧೦-೧೬೭-೩) ॥ ಇತ್ಯೇತಾಭಿರ್ದೇವತಾಭಿರಭಿಪ್ರಸೂತಃ ಸೋಮಕಲಶಾನ-ಭಕ್ಷಯಮಿತಿ ಕಲಶಃ ಕಸ್ಮಾತ್ಕಲಾ ಅಸ್ಮಿ ಞ್ಛೇರತೇ ಮಾತ್ರಾಃ ಕಲಿಶ್ಚ ಕಲಾಶ್ಚ ಕಿರತೇ । ವಿಕೀರ್ಣಾ ಮಾತ್ರಾಃ ॥ ೧೨ ॥

ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ
ಉಶರ್ಮಣಿ। ತವಾಹಮದ್ಯ ಮಘವನ್ನುಪಸ್ತುತೌ ಧಾತರ್ವಿಧಾತಃ
ಕಲಶಾನಭಕ್ಷಯಂ ॥

(ಋ. ಸಂ. ೮-೮-೨೫)

ವಿಧಾತ್ರಾದಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಾನು ಶೋಭಿಸುವ ಸೋಮ ಮತ್ತು ವರುಣರ ಕರ್ಮದಲ್ಲಿ ಅಥವಾ ಅವರ ಯಜ್ಞದಲ್ಲಿ ಇದ್ದು ಬೃಹಸ್ಪತಿ ಮತ್ತು ಅನುಮತಿ ದೇವತೆಗಳ ಆಶ್ರಯವಾದ ಯಜ್ಞಗೃಹದಲ್ಲಿ ಇದ್ದು ಈ ದೇವತೆಗಳಿಂದ ಅನುಜ್ಞಾತನಾಗಿ ಎಲೈ ಇಂದ್ರನೇ ನಿನ್ನ ಸ್ತೋತ್ರದಲ್ಲಿ ಉದ್ಯುಕ್ತನಾಗಿರುತ್ತೇನೆ. ಎಲೈ ಧಾತೃದೇವನೇ ನಿಮ್ಮೆಲ್ಲರಿಂದ ಆಜ್ಞಪ್ತನಾಗಿ ಈ ಸೋಮಕಲಶಗಳನ್ನು ಭಕ್ಷಿಸಿದೆನು.

ಇತ್ಯೇತಾಭಿರ್ದೇವತಾಭಿರಭಿಪ್ರಸೂತಃ ಸೋಮಕಲಶಾನಭಕ್ಷಯ-
ಮಿತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಭಿಪ್ರಸೂತಃ ಅಂದರೆ ಅಭ್ಯನುಜ್ಞಾತಃ, ಆಜ್ಞಾಪಿಸಲ್ಪಟ್ಟವನೆಂದರ್ಥ. ಸೋಮಕಲಶ ಪದದಿಂದ ಕಲಶದಲ್ಲಿರುವ ಹುತಶಿಷ್ಟವಾದ ಸೋಮವನ್ನು ಎಂದರ್ಥ. ವಿಶೇಷ್ಯದಲ್ಲಿ ಬಾಧ ಬಂದಾಗ ವಿಶೇಷಣದಲ್ಲಿ ಕಾರ್ಯ ತಿಳಿಯಬೇಕು. ಕಲಶತಿನ್ನುವುದು ಅಸಾಧ್ಯವಾದುದರಿಂದ ಅದರಲ್ಲಿರುವ ಸೋಮವೆಂದು ಅರ್ಥಾತ್ ಸಿದ್ಧವಾಗುತ್ತದೆ.

ಕಲಶಃ ಕಸ್ಮಾತ್ ? ಕಲಾ ಅಸ್ಮಿನ್ ಶೇರತೇ ಮಾತ್ರಾಃ ॥

ನಿಗಮಪ್ರಸಕ್ತವಾದ ಕಲಶಪದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಕಲಾಃ-ಅವಯವಗಳು. ಸೋಮಸಮುದಾಯದಿಂದ ಕೆಲವು ಭಾಗ ಬೇರ್ಪಟ್ಟು ಅವು ಇದರಲ್ಲಿರುತ್ತವೆ ಎಂಬರ್ಥದಲ್ಲಿ ಕಲಾಶಬ್ದಪೂರ್ವಪದವಾಗಿರುವಾಗ ಶೀಙ್‌ಧಾತುವಿಗೆ ಡಪ್ರತ್ಯಯ. ಕಲಾಶಃ ಎಂಬುದು ಕಲಶ ಎಂದಾಗಿದೆ.

## ಕಲಿಶ್ಚ ಕಲಾಶ್ಚ ಕಿರತೇರ್ವಿಕೀರ್ಣಮಾತ್ರಾಃ ॥ ೧೨ ॥

ಕಲಾಶಬ್ದ ಪ್ರಸಕ್ತವಾದುದರಿಂದ ಅದರ ನಿರ್ವಚನವನ್ನು ತೋರಿಸುತ್ತಾರೆ. ಕೄ–ವಿಕ್ಷೇಪೇ. ಧಾತು. ಇದರಿಂದ ಕಲಿ, ಕಲಾ ಶಬ್ದಗಳು ನಿಷ್ಪನ್ನವಾಗಿವೆ. ಸಮುದಾಯದಿಂದ ವಿಕ್ಷಿಪ್ತವಾಗುವುದರಿಂದ ಕಲಾ ಎಂದು ಹೆಸರು ಬಂದಿದೆ.

ಎಲೈ ಇಂದ್ರನೇ, ಪ್ರಕಾಶಮಾನವಾದ ಸೋಮ ಮತ್ತು ವರುಣನನ್ನು ಉದ್ದೇಶಿಸಿ ಮಾಡುವ ಯಜ್ಞದಲ್ಲಿಯೂ ಬೃಹಸ್ಪತಿ ಮತ್ತು ಅನುಮತಿಯನ್ನು ಉದ್ದೇಶಿಸಿ ಮಾಡುವ ಯಜ್ಞದಲ್ಲಿಯೂ ಪ್ರವೃತ್ತನಾಗಿರುವ ನಾನು ಈಗ ನಿನ್ನನ್ನು ಸ್ತೋತ್ರಮಾಡಲು ಪ್ರವೃತ್ತನಾಗಿದ್ದೇನೆ. ಎಲೈ ಧಾತೃವೇ, ಎಲೈ ವಿಧಾತೃವೇ, ನಿಮ್ಮ ಸಮ್ಮತಿಯಿಂದ ನಾನು ಕಲಶದಲ್ಲಿ ಉಳಿದಿರುವ ಹೋಮಶೇಷವಾದ ಸೋಮರಸವನ್ನು ಪಾನಮಾಡಿದ್ದೇನೆ.

ಕಲಶ ಶಬ್ದ ನಿರ್ವಚನವನ್ನು ಹೇಳುತ್ತಾ ಯಾಸ್ಕರು—

> ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ ಉ ಶರ್ಮಣಿ । ತವಾಹಮದ್ಯ ಮಘವನ್ನುಪಸ್ತುತೌ ಧಾತರ್ವಿಧಾತಃ ಕಲಶಾ ಅಭಕ್ಷಯಂ ॥ ಇತ್ಯೇತಾಭಿರ್ದೇವತಾಭಿರಭಿಪ್ರಸೂತಃ ಸೋಮಕಲಶಾನಭಕ್ಷಯಮಿತಿ । ಕಲಶಃ ಕಸ್ಮಾತ್ ಕಲಾ ಅಸ್ಮಿಞ್ಛೇರತೇ ಮಾತ್ರಾಃ । ಕಲಿಶ್ಚ ಕಿರತೇರ್ವಿಕೀರ್ಣಮಾತ್ರಾಃ ॥
> (ನಿ. ೧೧–೧೨)

ಎಂದು ಹೇಳಿದಾರೆ. ಎಂದರೆ ಸೋಮ, ವರುಣ, ಬೃಹಸ್ಪತಿ, ಅನುಮತಿ ಎಂಬ ದೇವತೆಗಳನ್ನುದ್ದೇಶಿಸಿ ಮಾಡುವ ಯಜ್ಞದಲ್ಲಿ ಈ ದೇವತೆಗಳ ಒಪ್ಪಿಗೆಯಿಂದ ಕಲಶದಲ್ಲಿ ಮಿಕ್ಕಿರುವ ಸೋಮರಸವನ್ನು ಭಕ್ಷಿಸಿದೆನು (ಪಾನಮಾಡಿದೆನು). ಮುಖ್ಯಾಭಿಪ್ರಾಯವೇನೆಂದರೆ ಈ ದೇವತೆಗಳ ಪ್ರೇರಣೆಯಿಂದ ಕಲಶದಲ್ಲಿರುವುದನ್ನು ಭಕ್ಷಿಸಿದೆನು. ಕಲಶಕ್ಕೆ ಕಲಶವೆಂಬ ಹೆಸರು ಬರಲು ಕಾರಣವೇನು ? ಕಲಾ ಎಂದರೆ ಒಂದು ನಿರ್ದಿಷ್ಟವಾದ ಅಳತೆಯು. ಇಂತಹ ಅಳತೆಯಿಂದ ಕೂಡಿದ ಅನೇಕ ಸೋಮರಸಗಳು ಈ ಪಾತ್ರೆಯಲ್ಲಿ ತುಂಬಿರುವುದರಿಂದ ಇದಕ್ಕೆ ಕಶಲವೆಂದು ಹೆಸರು. ಕಲಿಃ ಮತ್ತು ಕಲಾಃ ಎಂಬ ಎರಡು ಶಬ್ದಗಳೂ ಎರಚು, ಪ್ರತ್ಯೇಕವಾಗಿ ಇಡು ಎಂಬರ್ಥವುಳ್ಳ ಕಿರ್ ಧಾತುವಿನಿಂದ ನಿಷ್ಪನ್ನವಾಗಿವೆ.

ಇಲ್ಲಿಗೆ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಹನ್ನೆರಡನೆಯ ಖಂಡವು ಸಮಾಪ್ತವಾಗಿದೆ.

ಇತಿ ಪ್ರಥಮಃ ಪಾದಃ

---

# ಅಥ ತ್ರಯೋದಶ ಖಂಡಃ

### ದ್ವಿತೀಯಃ ಪಾದಃ

## ಹದಿಮೂರನೆಯ ಖಂಡವು

## ಅಥಾತೋ ಮಧ್ಯಸ್ಥಾನಾ ದೇವಗಣಾಸ್ತೇಷಾಂ ಮರುತಃ ಪ್ರಥಮಾಗಾಮಿನೋ

**ಭವಂತಿ ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ತೇಷಾಮೇಷಾ ಭವತಿ ॥ ೧೩ ॥**

## ಅಥಾತೋ ಮಧ್ಯಮಸ್ಥಾನಾ ದೇವಗಣಾಃ ॥

ಮೊದಲನೆಯ ಪಾದದಲ್ಲಿ ಏಕವಚನಾಂತವಾದ ಮಧ್ಯಮಸ್ಥಾನದೇವತಾವಿಶೇಷಗಳ ನಿರ್ವಚನವನ್ನು ತೋರಿಸಿ ಈಗ ದೇವತಾ ಗಣರೂಪವಾಗಿರುವ ಎಂಟು ಶಬ್ದಗಳ ನಿರ್ವಚನವನ್ನು ವಿವರಿಸುತ್ತಾರೆ. ಅಥ ಅತಃ ಶಬ್ದಗಳು ವಿಶೇಷಾಧಿಕಾರವನ್ನು ಸೂಚಿಸುತ್ತವೆ. ಇನ್ನುಮುಂದೆ ಬಹುವಚನವಿಶಿಷ್ಟವಾದ ಬೇರೊಂದು ಅಧಿಕಾರ ಆರಂಭವಾಗುತ್ತದೆಂದರ್ಥ. ಮಧ್ಯಮಸ್ಥಾನದ ದೇವಗಣವನ್ನು ಇನ್ನುಮುಂದೆ ಹೇಳುತ್ತೇವೆ.

## ತೇಷಾಂ ಮರುತಃ ಪ್ರಥಮಾಗಾಮಿನೋ ಭವಂತಿ ॥

ವಾಯುವೇ ಭೇದವಿವಕ್ಷೆಯಿಂದ ಮರುದಭಿಧಾನದಿಂದ ಬಹುವಚನಾಂತವಾಗಿ ಹೇಳಲ್ಪಡುತ್ತಾನೆ. ವಾಯುವಿಗೆ ಪ್ರಾಥಮ್ಯವಿದ್ದಂತೆ ಇವುಗಳಿಗೂ ಪ್ರಾಥಮ್ಯ ತಿಳಿಯಬೇಕು. ಬಹುಸಾಧ್ಯಕರ್ಮದಲ್ಲಿ ಮಧ್ಯಮನೂ ಬಹುತ್ವ ಹೊಂದಿರುತ್ತಾನೆ. ಬೇರೆಯಾಗಿ ತಿಳಿಯಲ್ಪಟ್ಟ ಈ ಮರುದ್ದೇವತೆಗಳು ಏಳು ಏಳು ಗುಣಗಳಾಗಿ ನಲವತ್ತೊಂಬತ್ತು ಎಂದು ಮಾರುತಗಣಾದಿಗಳಲ್ಲಿ ಪ್ರಸಿದ್ಧರಾಗಿರುತ್ತಾರೆ. ಇವರು ಮಾರೀಚಕಶ್ಯಪನಿಂದ ಆದಿತಿಯಲ್ಲಿ ಜನಿಸಿರುತ್ತಾರೆ. ನೈರುಕ್ತಸಿದ್ಧಾಂತದಲ್ಲಿ ಸಕಲಗಣಗಳೂ ಮರುತ್ತೇ ಆಗಿರುತ್ತವೆ.

## ಮರುತೋ ಮಿತರಾವಿಣೋ ಮಿತರೋಚಿನೋವಾ, ಮಹದ್ದ್ರವಂ- ತೀತಿ ವಾ । ತೇಷಮೇಷಾ ಭವತಿ ॥ ೧೩ ॥

ಮರುಚ್ಛಬ್ದದ ವ್ಯುತ್ಪತ್ತಿಯನ್ನು ವಿವರಿಸುತ್ತಾರೆ. ಮಿತವಾಗಿ ಸುಶ್ಲಿಷ್ಟವಾಗಿ ಶಬ್ದಮಾಡುವವರು, ಅಥವಾ ಸುಶ್ಲಿಷ್ಟವಾಗಿ ಪ್ರಕಾಶಿಸುವವರು. ಎಲ್ಲರೂ ಸೇರಿ ಒಂದೇ ಧ್ವನಿಯಿಂದ ಶಬ್ದಮಾಡುವ ಸ್ವಭಾವವುಳ್ಳವರಾಗಿರುತ್ತಾರು ಕೆಲವರು ಅಕಾರ ಪ್ರಶ್ಲೇಷಮಾಡಿ ಪಾಠಮಾಡುತ್ತಾರೆ. ಈಗ ಬಹುಪ್ರಕಾರವಾಗಿ ಶಬ್ದಮಾಡುವವರು, ಪ್ರಕಾಶಿಸುವವರು ಅಥವಾ ಅಧಿಕವಾಗಿ ನೀರು ಸುರಿಸುವವರು ಮರುದ್ದೇವತೆಗಳು ಎಂದರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ಮರುದ್ಗಣಗಳ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ದಶ ಖಂಡಃ

## ಹದಿನಾಲ್ಕನೆಯ ಖಂಡವು

ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈರ್ ರಥೇಭಿರ್ಯಾತ ಋಷ್ಟಿಮದ್ಭಿರಶ್ವಪರ್ಣೈಃ ||
ಆ ವರ್ಷಿಷ್ಠಯಾ ನ ಇಷಾ ವಯೋ ನ ಪಪ್ತತಾ ಸುಮಾಯಾಃ (ಋ. ಸ. ೧-೮೮-೧) ||
ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವಂಚನೈರಿತಿ ವಾ ಸ್ವರ್ಚನೈರಿತಿ ವಾ ಸ್ವರ್ಚಿಭಿರಿತಿ ವಾ ರಥೈರಾಯಾತ ಋಷ್ಟಿಮದ್ಭಿರಶ್ವಪರ್ಣೈರಶ್ವಪತನೈರ್ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ ಸುಮಾಯಾಃ ಕಲ್ಯಾಣಕರ್ಮಾಣೋ ವಾ ಕಲ್ಯಾಣಪ್ರಜ್ಞಾ ವಾ ರುದ್ರಾ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೧೪ ||

ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈರ್ ರಥೇಭಿರ್ಯಾತ ಋಷ್ಟಿಮದ್ಭಿರಶ್ವ-
ಪರ್ಣೈಃ || ಆ ವರ್ಷಿಷ್ಠಯಾ ನ ಇಷಾ ವಯೋ ನ ಪಪ್ತತಾ
ಸುಮಾಯಾಃ ||

(ಋ. ಸಂ. ೧-೬-೧೪)

ಮರುದ್ಗಣಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಮರುದ್ದೇವತೆಗಳೇ ವಿಶಿಷ್ಟಕಾಂತಿಯಿಂದ ಕೂಡಿದ, ಸುಪೂಜಿತವಾದ, ಶಬ್ದದಿಂದ ಕೂಡಿದ ವ್ಯಾಪ್ತಿಪತನಗಳುಳ್ಳ, ವೇಗವುಳ್ಳ ಮೇಘರಥಗಳಿಂದ ಬನ್ನಿರಿ. ಕಲ್ಯಾಣಕರ್ಮವುಳ್ಳ ದೇವತೆಗಳೇ ನೀವು ಬರುವಾಗ ನಮಗೆ ಕೊಡಲು ಅತಿಶಯವಾದ ಅನ್ನದೊಡನೆ ಕೂಡಿ ಪಕ್ಷಿಗಳಂತೆ ಶೀಘ್ರವಾಗಿ ಬನ್ನಿರಿ.

ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವಂಚನೈರಿತಿ ವಾ ಸ್ವರ್ಚನೈರಿತಿವಾ
ಸ್ವರ್ಚಿಭಿರಿತಿ ವಾ | ರಥೈರಾಯಾತ ಋಷ್ಟಿಮದ್ಭಿರಶ್ವಪರ್ಣೈರಶ್ವ-
ಪತನೈಃ | ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ |
ಸುಮಾಯಾಃ ಕಲ್ಯಾಣಕರ್ಮಾಣೋ ವಾ ಕಲ್ಯಾಣಪ್ರಜ್ಞಾ ವಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸ್ವರ್ಕೈಃ ಎಂಬುದಕ್ಕೆ ನಾನಾರ್ಥ ಸಂಭವಿಸುತ್ತವೆ. ಸುಪೂಜಿತವಾದವುಗಳು, ಸುಗಮನವುಳ್ಳವುಗಳು, ಅನುಪರತವಾದವಿದ್ಯುತ್ಸಂಪಾತವುಳ್ಳವುಗಳು ಎಂದು ಆಯಾಯ ಧಾತ್ವರ್ಥಗಳಿಂದ ನಿರ್ಣಯಿಸಬೇಕು. ಸುಮಾಯಾಃ—ಶೋಭನಕಾರ್ಯವುಳ್ಳವರು ಅಥವಾ ಶೋಭನವಾದ ಪ್ರಜ್ಞೆಯುಳ್ಳವರು.

ರುದ್ರಾ ವ್ಯಾಖ್ಯಾತಾಃ | ತೇಷಾಮೇಷಾ ಭವತಿ || ೧೪ ||

ಕ್ರಮಪ್ರಾಪ್ತವಾದ ರುದ್ರರ ನಿರ್ವಚನವನ್ನು ತೋರಿಸುತ್ತಾರೆ. "ರುದ್ರೋ ರೌತೀತಿ ಸತಃ" (ನಿ. ೧೦-೫) ಎಂದು ಹಿಂದೆ ಇದು ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಋಙ್ಮಂತ್ರವು ರುದ್ರಗಣಗಳ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈ ರಥೇಭಿರ್ಯಾತ ಋಷ್ಟಿಮದ್ಭಿ-
ರಶ್ವಪರ್ಣೈಃ ।
ಆ ವರ್ಷಿಷ್ಠಯಾ ನ ಇಷಾ ವಯೋನ ಪಪ್ತತಾ ಸುಮಾಯಾಃ ॥

ಎಲೈ ಮರುತ್ತುಗಳೇ, ನಿಮ್ಮ ವಿಶೇಷವಾದ ಕಾಂತಿಯುಳ್ಳವೂ, ಸುಲಭವಾದ ಗಮನವುಳ್ಳವೂ, ಆಯುಧಗಳಿಂದ ಭರಿತವಾದುವೂ, ಕಟ್ಟಿದ ಕುದುರೆಗಳುಳ್ಳವೂ, ಆದ ರಥಗಳೊಡನೆ ನಮ್ಮ ಯಜ್ಞಕ್ಕೆ ದಯಮಾಡಿ. ಶ್ರೇಷ್ಠವಾದ ಕರ್ಮಗಳುಳ್ಳ ಎಲೈ ಮರುತ್ತುಗಳೇ, ನಮಗೆ ಕೊಡಬೇಕಾದುದೂ ಅತ್ಯಂತ ಪ್ರಭೂತವಾದುದೂ ಆದ ಅನ್ನವನ್ನು ತುಂಬಿಕೊಂಡು ಪಕ್ಷಿಗಳಂತೆ ವೇಗವಾಗಿ ಸಂಚರಿಸುತ್ತ ನಮ್ಮಕಡೆಗೆ ಬನ್ನಿರಿ.

ಮರುತಃ—ಈ ಶಬ್ದಕ್ಕೆ ಭಾಷ್ಯಕಾರರು ಎರಡು ಮೂರು ವಿಧವಾದ ರೂಪನಿಷ್ಪತ್ತಿಗಳನ್ನು ಮಾಡಿ ಅರ್ಥವನ್ನು ವಿವರಿಸಿರುವರು. ಮಿತಂ ನಿರ್ಮಿತಮಂತರಿಕ್ಷಂ ಪ್ರಾಪ್ಯ ರುವಂತಿ ಶಬ್ದಂ ಕುರ್ವಂತೀತಿ ಮರುತಃ । ಯದ್ವಾ ಅಮಿತಂ ಭೃಶಂ ಶಬ್ದಕಾರಿಣಃ । ಅಥವಾ ಮಿತಂ ಸ್ವೈರ್ನಿರ್ಮಿತಂ ಮೇಘಂ ಪ್ರಾಪ್ಯ ವಿದ್ಯುದಾತ್ಮನಾ ರೋಚ-ಮಾನಾಃ । ಅಥವಾ ಮಹತ್ಯಂತರಿಕ್ಷೇ ದ್ರವಂತೀತಿ ಮರುತಃ । ಅಂತರಿಕ್ಷದಲ್ಲಿ ಬೀಸುತ್ತಾ ಶಬ್ದ ಮಾಡುವುದರಿಂದ ಈ ದೇವತೆಗಳಿಗೆ ಮರುತ್ತುಗಳೆಂದು ಹೆಸರು. ಅಥವಾ ಬಹಳವಾಗಿ ಶಬ್ದಮಾಡುವುದರಿಂದ ಮರುತ್ತುಗಳೆಂದು ಹೆಸರು. ಅಥವಾ ಮೇಘಮಧ್ಯದಲ್ಲಿ ವಿದ್ಯುದ್ರೂಪದಿಂದ ಪ್ರಕಾಶಮಾನರಾದುದರಿಂದ ಮರುತ್ತುಗಳೆಂದು ಹೆಸರು. ಅಥವಾ ವಿಸ್ತಾರವಾದ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮರುತ್ತುಗಳೆಂದು ಹೆಸರು. ಇತ್ಯಾದಿ. ಯಾಸ್ಕರು ತಮ್ಮ ನಿರುಕ್ತದಲ್ಲಿ ದೇವತೆಗಳನು ಸ್ವರ್ಗ, ಅಂತರಿಕ್ಷ, ಭೂಲೋಕ ಇವುಗಳಲ್ಲಿರುವ ದೇವತೆಗಳೆಂದು ಮೂರು ವಿಧವಾಗಿ ವಿಂಗಡಿಸಿರುವರು. ಈ ಮರುದ್ದೇವತೆಗಳು ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಅಂತರಿಕ್ಷದೇವತೆಗಳೆಂದು ಕರೆಯಲ್ಪಡುವರು. ಈ ವಿಷಯದಲ್ಲಿ—

ಸರ್ವಾ ಸ್ತ್ರೀ ಮಧ್ಯಮಸ್ಥಾನಾ ಪುಮಾನ್ ವಾಯುಶ್ಚ ಸರ್ವಗಃ ।
ಗಣಾಶ್ಚ ಸರ್ವೇ ಮರುತ ಇತಿ ವೃದ್ಧಾನುಶಾಸನಂ ॥ ಇತಿ ॥

ಸಮಸ್ತ ಸ್ತ್ರೀದೇವತೆಗಳೂ ಪುರುಷದೇವತೆಗಳಾದ ವಾಯು ಮತ್ತು ಮರುದ್ಗಣಗಳು ಮಧ್ಯಮಸ್ಥಾನವಾದ ಅಂತರಿಕ್ಷದ ದೇವತೆಗಳೆಂದು ಹೇಳುವರು ಎಂದು ಪೂರ್ವಿಕರ ಮತವು. ಪೌರಾಣಿಕರು—ಮರೀಚಿಪುತ್ರನಾದ ಕಶ್ಯಪಋಷಿಯಿಂದ ನಲವತ್ತೊಂಭತ್ತು ಸಂಖ್ಯಾಕರಾದ ಮರುದ್ದೇವತೆಗಳು ಉತ್ಪನ್ನರಾದರು—ಎಂದು ಹೇಳುವರು. ಯಾಸ್ಕಮಹರ್ಷಿಗಳು ಈ ಶಬ್ದದ ರೂಪನಿಷ್ಪತ್ತಿಯನ್ನು ಮಾಡುವಾಗ-ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರ-ವಂತೀತಿ ವಾ (ನಿ. ೪೧-೧೩) ಎಂದು ಹೇಳಿರುವರು. ಇದರ ಅರ್ಥವಿವರಣೆಯನ್ನು ಮೇಲೆ ವಿವರಿಸಿದ್ದೇವೆ.

ವಿದ್ಯುನ್ಮದ್ಭಿಃ—ವಿಶಿಷ್ಟದೀಪ್ತಿಯುಕ್ತೈಃ । ಅಥವಾ ವಿದ್ಯುತಾ ಸಂಯುಕ್ತೈಃ । ಸಮಸ್ತವಾದ ಕಾಂತಿಯಿಂದ ಕೂಡಿದವರು ಅಥವಾ ಮಿಂಚಿನಿಂದ ಕೂಡಿದವರು.

ಸ್ವರ್ಕೈಃ—ಸ್ವರ್ಚನೈಃ ಶೋಭನಗಮನಯುಕ್ತೈಃ । ಯದ್ವಾ । ಶೋಭನಮರ್ಕೋರ್ಚನಂ ಸ್ತುತಿರ್ಯೇಷಾಮಸ್ತಿ ತಾದೃಶೈಃ । ಉತ್ತಮವಾದ ಗಮನಗಳಿಂದ ಕೂಡಿದವರು ಅಥವಾ ಅರ್ಕವೆಂದರೆ ಸ್ತುತಿಯು ಉತ್ತಮವಾದ ಸ್ತುತಿಗಳಿಂದ ಸ್ತುತಿಸಲ್ಪಡುವವರು ಎಂದರ್ಥವು.

ಋಷ್ಟಿಮದ್ಭಿಃ—ಶಕ್ತಿರೂಪವಾದ ಆಯುಧಗಳಿಂದ ಯುಕ್ತರಾದವರು. ವೇಗವಾಗಿ ಬೀಸುವ ಮರುತ್ತುಗಳಿಗೆ ಅದ್ಭುತವಾದ ಶಕ್ತಿಯಿರುವುದು. ಈ ವಿಧವಾದ ಶಕ್ತಿಯೇ ಇವರ ಆಯುಧವು.

ಅಶ್ವಪರ್ಣೈಃ— ಅಶ್ವಂ ವ್ಯಾಪ್ತಂ ಪರ್ಣಂ ಪತನಂ ಗಮನಂ ಯೇಷಾಂ । ಅಂತರಿಕ್ಷದಲ್ಲಿ ಗಮನವುಳ್ಳವರು ಎಂದರೆ ಅಂತರಿಕ್ಷದಲ್ಲಿ ಸಂಚರಿಸುವವರು.

ಸುಮಾಯಾಃ—ಮಾಯಾ ಎಂದರೆ ಕರ್ಮ ಅಥವಾ ಜ್ಞಾನವು. ಸುಮಾಯಾಃ ಎಂದರೆ ಉತ್ತಮವಾದ ಕರ್ಮಗಳನ್ನು ಮಾಡುವವರು ಅಥವಾ ಶ್ರೇಷ್ಠವಾದ ಜ್ಞಾನವುಳ್ಳವರು.

ವರ್ಷಿಷ್ಠಯಾಃ—ವೃಷ್ಟಿಪ್ರದಾನದಿಂದ ಆಹಾರೋತ್ಪತ್ತಿಗೆ ಸಾಧನಭೂತವಾದ ಎಂದರ್ಥವು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿರುವರು—

ಅಥಾತೋ ಮಧ್ಯಮಸ್ಥಾನಾ ದೇವಗಣಾಃ । ತೇಷಾಂ ಮರುತಃ ಪ್ರಥಮಗಾಮಿನೋ ಭವಂತಿ । ಮರುತಃ । ಮರುತೋ ಮಿತರಾವಿಣೋ ವಾ, ಮಿತರೋಚಿನೋ ವಾ, ಮಹದ್ದ್ರವಂತೀತಿ ವಾ । ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವಂಚನೈರಿತಿ ವಾ, ಸ್ವರ್ಚನೈರಿತಿ ವಾ । ಸ್ವರ್ಚಿಭಿರಿತಿ ವಾ । ರಥೈರಾಯಾತ । ಋಷ್ಟಿಮದ್ಭಿರಶ್ವಪರ್ಣೈರಶ್ವಪತನೈರ್ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ ಸುಮಾಯಾಃ ಕಲ್ಯಾಣಪ್ರಜ್ಞಾ ವಾ ॥

(ನಿ. ೧೧–೧೩–೧೪)

ಇದರ ಅರ್ಥವಿವರಣೆಯು ಭಾಷ್ಯಕಾರರು ಮೇಲೆ ವಿವರಿಸಿದಂತೆಯೇ ಇರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಹದಿನಾಲ್ಕನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಪಂಚದಶ ಖಂಡಃ

## ಹದಿನೈದನೆಯ ಖಂಡವು

ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ | ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ || (ಋ. ಸಂ. ೫-೫೭-೧) || ಆಗಚ್ಛತ ರುದ್ರಾ ಇಂದ್ರೇಣ ಸಹಜೋಷಣಾಃ ಸುವಿತಾಯ ಕರ್ಮಣ ಇಯಂ ವೋಽಸ್ಮದಪಿ ಪ್ರತಿಕಾಮಯತೇ ಮತಿಸ್ತೃಷ್ಣಜ ಇವ ದಿವ ಉತ್ಸಾ ಉದನ್ಯವೇ ಇತಿ ತೃಷ್ಣಕ್ ತೃಷ್ಯತೇ ರುದನ್ಯುರುದನ್ಯತೇಃರ್ಭವ ಉರು ಭಾಂತೀತಿ ವರ್ತೇನ ಭಾಂತೀತಿ ವರ್ತೇನ ಭವಂತೀತಿ ವಾ ತೇಷಾಮೇಷಾ ಭವತಿ || ೧೫ ||

ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ
ಗಂತನ | ಇಯಂ ವೋ ಅಸ್ಮತ್ಪ್ರತಿಹರ್ಯತೇ ಮತಿಸ್ತೃಷ್ಣಜೇನ
ದಿವ ಉತ್ಸಾ ಉದನ್ಯವೇ ||

(ಋ. ಸಂ. ೪-೩-೨೧)

ರುದ್ರಗಣಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ರುದ್ರರೇ ನೀವು ಇಂದ್ರನೊಡನೆ ಸಮಾನ ಪ್ರೀತಿಯುಳ್ಳವರಾಗಿ ಹಿರಣ್ಯರಥವುಳ್ಳವರಾಗಿ ಶಾಸ್ತ್ರೀಯವಾಗಿ ಮಾಡುವ ಈ ಯಜ್ಞಕ್ಕೋಸ್ಕರ ಬನ್ನಿರಿ. ಈ ನಮ್ಮ ಸ್ತುತಿಯು ನಿಮ್ಮನ್ನು ಬಯಸುತ್ತಿದೆ. ವರ್ಷಾಕಾಲದಲ್ಲಿ ಪಿಪಾಸೆಯನ್ನು ಹೋಗಲಾಡಿಸುವ ನೀರು ಆಕಾಶದಿಂದ ಬೀಳುವಂತೆ ನೀವು ನಮ್ಮ ಸ್ತುತಿಯಿಂದ ಸಂತುಷ್ಟರಾಗಿ ಬನ್ನಿರಿ

ಆಗಚ್ಛತ ರುದ್ರಾ ಇಂದ್ರೇಣ ಸಹ ಜೋಷಣಾಃ | ಸುವಿತಾಯ
ಕರ್ಮಣ ಇಯಂ ವೋ ಅಸ್ಮದಪಿ ಪ್ರತಿಕಾಮಯತೇ ಮತಿಃ |
ತೃಷ್ಣಜ ಇವ ಉತ್ಸಾ ಉದನ್ಯವ ಇತಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪಠನಮಾತ್ರದಿಂದ ವ್ಯಾಖ್ಯಾತವಾಗುತ್ತದೆ. ಉತ್ಸ ಅಂದರೆ ಮೇಘ ಅಥವಾ ಪರ್ವತದಝರಿ. ಅಥವಾ ಬಾವಿ.

ತೃಷ್ಣಕ್-ತೃಷ್ಯತೇರುದನ್ಯು ರುದನ್ಯತೇಃ ||

ನಿಗಮಪ್ರಸಕ್ತವಾದ ತೃಷ್ಣಕ್ ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಞಿ–ತೃಷ–ಪಿಪಾಸಾಯಾಮ್. ಧಾತು. ಇದಕ್ಕೆ ನಜಿಙ್ ಪ್ರತ್ಯಯ. ಜಿತ್ತ್ವಾದುದರಿಂದ ಗುಣಬರುವುದಿಲ್ಲ. 'ಲುಬ್ಧೋಽಭಿಲಾಷುಕಸ್ತೃಷ್ಣಕ್' ಎಂದು ಅಮರ,

ಉದಕವನ್ನು ಬಯಸುವವನು ಉದನ್ಯ 'ಅಶನಾಯೋದನ್ಯ'— ಎಂದು ನಿಪಾತಿತವಾಗಿದೆ. ಉದನ್ಯ ಎಂಬ ಕ್ಯಜಂತದ ಮೇಲೆ ಉಪ್ರತ್ಯಯ. 'ಉದಕೇಚ್ಛುರುದನ್ಯುಃ ಸ್ಯಾತ್' ಅಮರ.

ಋಭವ ಉರು ಭಾಂತೀತಿ ವರ್ತೇನ ಭಾಂತೀತಿ ವರ್ತೇನ ಭವಂತೀತಿ ವಾ । ತೇಷಾಮೇಷಾ ಭವತಿ ॥ ೧೫ ॥

ಕ್ರಮಪ್ರಾಪ್ತವಾದ ಋಭು ಪದದ ನಿರ್ವಚನ ತೋರಿಸುತ್ತಾರೆ. ಅಧಿಕವಾಗಿ ಪ್ರಕಾಶಿಸುವವರು ಋಭುಗಳು. ಉರುಶಬ್ದ ಉಪಪದವಾಗಿರುವಾಗ ಭಾಧಾತುವಿಗೆ ಕುಪ್ರತ್ಯಯ. ಪೂರ್ವಪದದ ಆದಿಗೆ ಲೋಪವೂ ರೇಫಕ್ಕೆ ಸಂಪ್ರಸಾರಣವೂ ನಿಪಾತದಿಂದ ಸಿದ್ಧವಾಗುತ್ತದೆ. ಅಥವಾ ಋತದಿಂದ ಅಂದರೆ ಸತ್ಯ ಅಥವಾ ಯಜ್ಞದಿಂದ ಶೋಭಿಸುವವರು. ಆಗ ಋತಪೂರ್ವಪದ, ಭಾಧಾತು ಉತ್ತರಪದದಿಂದ ಸಿದ್ಧವಾಗುತ್ತದೆ. ಅಥವಾ ಋತದಿಂದ ಆಗಿ ದೇವತ್ವದಿಂದ ಸಂಪನ್ನರಾಗುತ್ತಾರೆ. ಆಗ ಭೂಧಾತು ಉತ್ತರಪದವೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ಋಭುದೇವತಾಗಣಸ್ತುತಿಯನ್ನು ಪ್ರತಿಪಾದಿಸುತ್ತದೆ.

ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ । ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥ ೧ ॥

ಇಂದ್ರನೊಡನಾಡಿಗಳೂ, ಪರಸ್ಪರ ಪ್ರೀತಿಯುಳ್ಳವರೂ, ಸುವರ್ಣನಿರ್ಮಿತವಾದ ರಥವುಳ್ಳವರೂ, ರುದ್ರಪುತ್ರರೂ ಆದ ಎಲೈ ಮರುತ್ತುಗಳೇ, ಉತ್ತಮ ಪ್ರದೇಶವಾದ ಯಜ್ಞಕ್ಕೆ ಬನ್ನಿರಿ. ನಮ್ಮಿಂದ ನಿರ್ಮಿತವಾದುದೂ, ನಿಮ್ಮನ್ನುದ್ದೇಶಿಸಿದುದೂ ಆದ ಈ ಸ್ತುತಿಯು ನಿಮಗೆ ಅರ್ಪಿತವಾಗಿ ನಿಮ್ಮನ್ನು ಹೊಂದಲಿಚ್ಛಿಸುತ್ತದೆ. ಬಾಯಾರಿಕೆಯಿಂದ ಬಳಲಿದವನೂ, ಉದಕವನು, ಅಪೇಕ್ಷಿಸಿದವನೂ ಆದ ಗೋತಮನಿಗಾಗಿ ಪ್ರವಿಸುವ ಉದಕಗಳನ್ನು ತೆಗೆದುಕೊಂಡು ಅಂತರಿಕ್ಷದಿಂದ ಯಾವ ರೀತಿ ಬಂದಿರೋ ನಮ್ಮ ಯಜ್ಞಕ್ಕೂ ಅದೇ ರೀತಿ ಬನ್ನಿರಿ.

**ರುದ್ರಾಸಃ—ರುದ್ರಪುತ್ರಾಃ ಮರುತಃ** । ರುದ್ರಪುತ್ರರಾದ ಮರುದ್ದೇವತೆಗಳನ್ನು ರುದ್ರಾಸಃ ಎಂದು ತಂದೆಯ ಹೆಸರಿನಿಂದಲೇ ಇಲ್ಲಿ ನಿರ್ದೇಶಿಸಲಾಗಿದೆ.

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವೂ, ಅವರವರಿಗೆ ಇರುವ ರಾಜ ಪ್ರಜಾ ಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡಿರುವುದೂ ಸಂಹಿತೆಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿ ಇದ್ದುದನ್ನು ತಿಳಿಸುವ ಪೂರ್ವಕಥೆಯೊಂದನ್ನು ಶತಪಥಬ್ರಾಹ್ಮಣದಲ್ಲಿ ಹೇಳಿದೆ.

ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮದವಿಂದತ್ತ್ರೇ ಚತುರ್ಧಾವ್ಯದ್ರವನ್ನನ್ಯೋನ್ಯಸ್ಯ ಶ್ರಿಯಾ ತಿಷ್ಠಮಾನಾ ಅಗ್ನಿರ್ವಸುಭಿಃ ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೇರ್ದೇವೈಃ ।
(ಶ. ಬ್ರಾ. ೩-೪-೨-೧)

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನುಸ್ಯವುಂಟಾಗಿ ಒಬ್ಬರಿಗೊಬ್ಬರು ಸೇರಲಿಷ್ಟಪಡದೇ ನಾಲ್ಕು ಗುಂಪು ಮಾಡಿಕೊಂಡು ಬೇರೆಬೇರೆಯಾದರು. ಅಗ್ನಿಯು ವಸುಗಳೊಂದಿಗೂ ಸೋಮನ ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾದ ಗುಂಪುಮಾಡಿಕೊಂಡರು, ಎಂಬ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿದೆ. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ, ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ ಅದೇ ಶತಪಥ ಬ್ರಾಹ್ಮಣದಲ್ಲಿ.

ಕ್ಷತ್ರಂ ವಾ ಇಂದ್ರೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।

(ಶ. ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸುಳ್ಳ ರಾಜನು. ಮರುತ್ತುಗಳೇ ಅವನ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ. ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯನ್ನು ಪಡೆಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವ ಕ್ರಮವು ಶ್ರುತಿಗಳಲ್ಲಿ ಕಂಡುಬರುತ್ತದೆ. ಮತ್ತು

ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ॥

(ಋ. ಸಂ. ೧-೧೭೧-೫)

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈ ರೀತಿಯಾದ ಸಾಹಚರ್ಯವನ್ನು ವರ್ಣಿಸಿ ಬೃಹದ್ದೇವತೆಯಲ್ಲಿ—

ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।

(ಬೃ. ದೇ. ೪-೫೬).

ಇತ್ಯಾದಿ ವಾಕ್ಯಗಳಿಂದ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ. ಆದರೆ ಒಂದು ಸೂಕ್ತದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದದ ಫಲವಾಗಿ ಅವರವರ ವೈಷಮ್ಯವೂ ಇಂದ್ರನ ಕ್ರೋಧವೂ ಸೂಚಿತವಾಗಿದೆ. ಈ ಕ್ರೋಧಕ್ಕೆ ಮೂಲವಾದ ಅವರವರ ವಾಗ್ವಾದವನ್ನು ಈ ರೀತಿ ತಿಳಿಸಿದೆ.

ಕ್ವಸ್ಯಾವೋ ಮರುತಃ ಸ್ವಧಾಸೀದ್ಯನ್ಮಾಮೇಕಂ ಸಮಧತ್ತಾಹಿಹತ್ಯೇ ।
ಅಹಂ ಹ್ಯುಗ್ರಸ್ತವಿಷಸ್ತುವಿಷ್ಮಾನ್ವಿಶ್ವಸ್ಯ ಶತ್ರೋರನಮಂ ವಧಸ್ನೈಃ ॥

(ಋ. ಸಂ. ೧-೧೬೫-೬)

ಎಲೈ ಮರುತ್ತುಗಳೇ, ನಿಮ್ಮ ಸಹಾಯದಿಂದ ನಾನು ಅಹಿಹನನವನ್ನು ಮಾಡಿದೆನು ಎಂದು ಹೇಳುವುದು ಸುಳ್ಳು. ನಿಮಗೆ ಆ ಶಕ್ತಿಯು ತಾನೇ ಎಲ್ಲಿದ್ದಿತು ? ನನ್ನ ಶಕ್ತಿಯೇ. ಅಸಾಧಾರಣವಾದುದರಿಂದ ಇತರ ಶಕ್ತಿಯ ಸಹಾಯವನ್ನು ಅಪೇಕ್ಷಿಸದೇ ವೃತ್ರಹನನಕಾಲದಲ್ಲಿ ಅದು ನನಗೆ ಸಹಾಯಮಾಡಿತು. ಕೇವಲ ನಾನು ಮಾತ್ರ ಭಯಂಕರನೂ, ಅದ್ಭುತವಾದ ಶಕ್ತಿಯುಳ್ಳ

ವನೂ ಆಗಿದ್ದೇನೆ. ಎಂದು ಮರುತ್ತುಗಳನ್ನು ತಿರಸ್ಕೃತವಾದ ದೃಷ್ಟಿಯಿಂದ ಕಂಡು ತನ್ನ ಕ್ರೋಧವನ್ನು ಪ್ರಕಟಸುತ್ತಾನೆ. ಇಲ್ಲಿ ಆ ಕ್ರೋಧವು ಸೂಚಿತವಾಗಿದೆ. ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳ ಸಹಾಯವನ್ನು ಇಂದ್ರನು ಪಡೆದನೆಂಬುದು ಪ್ರಸಿದ್ಧವಾಗಿದೆ. ಅವರೂ ಸಹ ಮರುತ್ತುಗಳು ಆ ವಿಷಯವನ್ನು ತಿಳಿಸಿ ಆ ಸಹಾಯದ ಜ್ಞಾಪಕಾರ್ಥವಾಗಿ ಇಂದ್ರನಿಗೆ ಸೇರಬೇಕಾದ ಹವಿಸ್ಸಿನಲ್ಲಿ ತಮಗೂ ಭಾಗವನ್ನು ಕೊಡಬೇಕೆಂದು ಕೇಳಿದಾಗ ಇಂದ್ರನು ಮರುತ್ತುಗಳಿಂದ ಯಾವ ಸಹಾಯವೂ ಆಗಿಯೇ ಇಲ್ಲವೆಂದೂ, ತಾನು ತನ್ನ ಸ್ವಶಕ್ತಿಯಿಂದಲೇ ಸಕಲಶತ್ರುಗಳನ್ನೂ ಕೊಂದನೆಂದೂ ಹೇಳಿಕೊಳ್ಳುತ್ತಾನೆ. ಇದೇ ವಿಷಯವನ್ನು ನಿರುಕ್ತಕಾರರು ತಿಳಿಸುತ್ತಾ ಈರೀತಿ ಹೇಳಿದ್ದಾರೆ —

> ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ । ಸ ಇಂದ್ರ ಏತ್ಯ ಪರಿದೇವ-
> ಯಾಂಚಕ್ರೇ । (ನಿ. ೧-೫).

ಅಗಸ್ತ್ಯಮುನಿಯು ಇಂದ್ರನನ್ನುದ್ದೇಶಿಸಿ ಹವಿಸ್ಸನ್ನು ಸಿದ್ಧಪಡಿಸಿದಾಗ ಮರುತ್ತುಗಳಿಗೂ ಅವರಲ್ಲಿ ಭಾಗವನ್ನರ್ಪಿಸಲು ಅಪೇಕ್ಷಿಸಿ ದೊಡನೆಯೇ ಇಂದ್ರನು ಆ ವಿಷಯದಲ್ಲಿ ಆಕ್ಷೇಪಿಸಿದನು ಎಂಬ ಸಂದರ್ಭವನ್ನು ತಿಳಿಸಿ ನಿರುಕ್ತಕಾರರು ಈ ಅಂಶವನ್ನು ತಿಳಿಸುವ,

> ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।
> ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿನಶ್ಯತಿ ॥
> (ಋ. ಸ. ೧-೧೭೦-೧).

ಎಂಬ ಋಕ್ಕನ್ನುದಹರಿಸಿದ್ದಾರೆ. ಆ ಕ್ರೋಧದ ವೇಗವು ಕಡಿಮೆಯಾಗಿ ತನಗೆ ಅದರಿಂದ ಬಾಧಕವಾಗದಿರಲೆಂದೂ ಮತ್ತು ಮರುತ್ತುಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಹವಿರ್ಭಾಗವು ಅವರಿಗೆ ಸೇರಲೇಬೇಕೆಂಬ ಉದ್ದಿಶ್ಯದಿಂದಲೂ ಇಲ್ಲಿ ಮರುತ್ತುಗಳನ್ನುದ್ದೇಶಿಸಿ ಪ್ರಾರ್ಥಿಸಿದೆ. ಈ ವಿಧವಾದ ಸಾಂತ್ವವಚನವಾದನಂತರ ಇಂದ್ರನ ಮೈತ್ರಿಯು ಹಿಂದಿನಂತೆಯೇ ಬೆಳೆದು ತನ್ನ ಹವಿಸ್ಸಿನ ಭಾಗವನ್ನು ಮರುತ್ತುಗಳಿಗೂ ತಾನೇ ಕೊಡುತ್ತಾನೆ. ಇದೇ ವಿಷಯವನ್ನು ಎಂಟನೇ ಮಂಡಲದಲ್ಲಿ ಋಷಿಯು ಈ ರೀತಿ ಹೇಳಿ ಸ್ತುತಿಸಿದ್ದಾನೆ.

> ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।
> ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥
> (ಋ. ಸಂ. ೮-೯೬-೭)

ಎಲೈ ಇಂದ್ರನೇ, ಮರುತ್ತುಗಳೊಡನಿರುವ ನಿನ್ನ ಸಖ್ಯವು ಪ್ರಸಿದ್ಧವಾದುದು ಅವರಿಗೂ ನಿನ್ನ ಹವಿಸ್ಸಿನಲ್ಲಿ ಭಾಗವನ್ನು ಕೊಟ್ಟು ಅವರ ಸಹಾಯದಿಂದ ಶತ್ರುಗಳನ್ನೆಲ್ಲಾ ಜಯಿಸು ಎಂದು ಪ್ರಾರ್ಥಿಸಿದೆ.

**ಉದನ್ಯವೇ ತೃಷ್ಣಜೇ ದಿವಃ ಉತ್ಸಾಃ**— ಉದಕೇಚ್ಛವೇ ಗೋತಮಾಯ ದ್ಯುಲೋಕಸಕಾಶಾತ್ ಉದಕನಿಷ್ಯಂದಾ ಯುಷ್ಮಾಭಿಃ ಪ್ರೇರಿತಾಃ । ಕಾಡಿನಲ್ಲಿ ಬಾಯಾರಿಕೆಯಿಂದ ಅಲೆಯುತ್ತಿದ್ದ ಗೋತಮನೆಂಬ ಋಷಿಯನ್ನು ತೃಪ್ತಿಪಡಿಸುವುದಕ್ಕಾಗಿ ಅಂತರಿಕ್ಷದಿಂದ ಉದಕಪೂರ್ಣವಾದ ಬಾವಿಯನ್ನೇ ತಂದುಕೊಟ್ಟರೆಂದು ಇಲ್ಲಿ ಉಕ್ತವಾಗಿದೆ.

ಪರಾವತಂ ನಾಸತ್ಯಾನುದೇಥಾಮುಚ್ಚಾಬುಧ್ನಂ ಚಕ್ರಥುರ್ಜಿಹ್ಮಬಾರಂ ||
ಕ್ಷರನ್ನಾಪೋ ನ ಪಾಯನಾಯ ರಾಯೇ ಸಹಸ್ರಾಯ ತೃಷ್ಯತೇ ಗೋತಮಸ್ಯ ||

(ಋ. ಸಂ. ೧-೧೧೬-೯)

ಎಂಬ ಋಕ್ಕಿನಲ್ಲಿ ಈ ವಿಷಯದ ವರ್ಣನೆ ಇದೆ-ಗೋತಮನೆಂಬ ಒಬ್ಬ ಋಷಿಯು ಬಹಳ ಬಾಯಾರಿಕೆಯಿಂದ ಸಂಕಟಪಡುತ್ತಾ ಮರುಭೂಮಿಯಲ್ಲಿ (ಮರಳು ಕಾಡಿನಲ್ಲಿ) ಅಲೆಯುತ್ತಿರುವಾಗ ಕುಡಿಯಲು ನೀರನ್ನು ಹುಡುಕಿ ಅದು ಸಿಕ್ಕದಿರುವ ಕಾರಣ ಅಶ್ವಿನೀದೇವತೆಗಳನ್ನು ನೀರಿಗಾಗಿ ಪ್ರಾರ್ಥಿಸಿದನು. ಅವರು ಅವನಿಗೆ ನೀರು ತುಂಬಿರುವ ಒಂದು ಬಾವಿಯನ್ನೇ ತಂದು ಅದರ ಬುಡವು ಮೇಲಕ್ಕೆ ಇರುವಂತೆಯೂ ನೀರಿರುವ ಮೇಲುಭಾಗವು ಕೆಳಮುಖವಾಗಿರುವಂತೆ ಈ ಋಷಿಯು ಪಾತ್ರೆಯಿಂದ ನೀರನ್ನು ಕುಡಿಯುವ ಹಾಗೆ ಮಾಡಿದರು. ಇದರಿಂದ ಅವನ ಬಾಯಾರಿಕೆಯು ಅಡಗಿತು ಎಂಬ ಇತಿಹಾಸವು ಇಲ್ಲಿ ವಿವರಿಸಲ್ಪಟ್ಟಿದೆ. ಮತ್ತು—

ಜಿಹ್ಮಂ ನುನುದ್ರೇಽವತಂ ತಯಾ ದಿಶಾಸಿಂಚನ್ನುತ್ಸಂ ಗೋತಮಾಯ ತೃಷ್ಣಜೇ |
ಆ ಗಚ್ಛಂತೀಮವಸಾ ಚಿತ್ರಭಾನವಃ ಕಾಮಂ ವಿಪ್ರಸ್ಯ ತರ್ಪಯಂತ ಧಾಮಭಿಃ ||

(ಋ. ಸಂ. ೧-೮೫-೧೧)

ಎಂಬ ಋಕ್ಕಿನಲ್ಲಿ ಮರುದ್ದೇವತೆಗಳು ತಾವು ಅಗೆದ ಬಾವಿಯನ್ನು ಗೋತಮ ಋಷಿಯು ವಾಸಮಾಡುತ್ತಿದ್ದ ದಿಕ್ಕಿನಲ್ಲಿ ಸ್ಥಾಪಿಸಿ ನೀರು ಸಿಕ್ಕುವಂತೆ ಮಾಡಿದರು. ಅನಂತರ ಆ ಬಾವಿಯನ್ನು ಋಷ್ಯಾಶ್ರಮದಲ್ಲಿಯೇ ಇರಿಸಿ ಬಾಯಾರಿದ ಗೋತಮ ಋಷಿ ಗೋಸ್ಕರ ಜಲಪ್ರವಾಹವನ್ನು ಹರಿಸಿದರು. ನಾನಾವಿಧ ಪ್ರಕಾಶವುಳ್ಳ ಮರುತ್ತುಗಳು ಭಕ್ತನಾದ ಗೋತಮ ಋಷಿಯನ್ನು ಇಂತಹ ರಕ್ಷಣೆಯಿಂದ ಸಮೀಪಿಸಿ ಮೇಧಾವಿಯಾದ ಅವನ ಇಷ್ಟಾರ್ಥವನ್ನು ಆಯುರ್ಧಾರಕಗಳಾದ ಉದಕಗಳಿಂದ ತೃಪ್ತಿಪಡಿಸ್ಸಿದರು ಎಂದಿದೆ. ಪ್ರಕೃತಋಕ್ಕಿನಲ್ಲಿ ಗೋತಮಶಬ್ದಪ್ರಯೋಗವಿಲ್ಲದಿದ್ದರೂ ಭಾಷ್ಯಕಾರರು ಈ ವಿಷಯವು ಗೋತಮ ಋಷಿಗೇ ಅನ್ವಯಿಸುವುದೆಂದೂ ಇದರಿಂದ ಮರುದ್ದೇವತೆಗಳ ಮಾಹಾತ್ಮ್ಯವು ವರ್ಣಿತವಾಗಿರುವುದೆಂದೂ ಹೇಳಿದ್ದಾರೆ.

ಈರೀತಿ ಶ್ರೀಯಾಸ್ಕಮುನಿ ವಿರಚಿತ ಹನ್ನೊಂದನೆಯ ಅಧ್ಯಾಯದಲ್ಲಿ
ಹದಿನೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷೋಡಶ ಖಂಡಃ

## ಹದಿನಾರನೆಯ ಖಂಡವು

ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ | ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ || (ಋ. ಸಂ. ೧-೧೧೦-೪) || ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ

ವಾ ಮರ್ತಾಸಃ ಸಂತೋಽಮೃತತ್ವಮಾನಶಿರೇ ಸೌಧನ್ವನಾ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿರ್ಋಭುರ್ವಿಭ್ವಾ ವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಸ್ತೇಷಾಂ ಪ್ರಥಮೋತ್ತಮಾಭ್ಯಾಂ ಬಹುವನ್ನಿಗಮಾ ಭವಂತಿ ನ ಮಧ್ಯಮೇನ ತದೇತದೃಭೋಶ್ಚ ಬಹುವಚನೇನ ಚಮಸಸ್ಯ ಚ ಸಂಸ್ತವೇನ ಬಹೂನಿ ದಶತಯೀಷು ಸೂಕ್ತಾನಿ ಭವಂತ್ಯಾದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ । ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥಃ। ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತ್ಯಂಗಿರಸೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೧೬ ॥

ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ
ಅಮೃತತ್ವಮಾನಶುಃ । ಸೌಧನ್ವನಾ ಋಭವಃ ಸೂರಚಕ್ಷಸಃ
ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥

(ಋ. ಸಂ ೦–೭–೩೦)

ಋಭುಗಣಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸಕಲಾರಿಷ್ಟಶಾಮಕ ಕರ್ಮಗಳನ್ನು ಶೀಘ್ರವಾಗಿ ಮಾಡಿ ಮೇಧಾವಿಗಳಾದ ಮನುಷ್ಯರು ದೇವತ್ವವನ್ನು ಹೊಂದಿದರು. ಹೀಗೆ ದೇವತ್ವವನ್ನು ಪಡೆದ ಸುಧನ್ವಪುತ್ರರಾದ ಸೂರ್ಯ ಸಮಾನರಾದ ಈ ಋಭುಗಳು ವಸಂತಾದಿಕಾಲದಲ್ಲಿ ಅನುಷ್ಠೇಯವಾದ ಯಜ್ಞಗಳಲ್ಲಿ ಹವಿರ್ಭಾಗಿಗಳಾದರು.

ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಳ್ಹಾರೋ ಮೇಧಾವಿನೋ ವಾ
ಮರ್ತಾಸಃ ಸಂತೋಽಮೃತತ್ವಮಾನಶಿರೇ। ಸೌಧನ್ವನಾ ಋಭವಃ
ಸೂರಖ್ಯಾನಾಃ ಸೂರಪ್ರಜ್ಞಾವಾ ಸಂವತ್ಸರೇ ಸಮಪೃಚ್ಯಂತ
ಧೀತಿಭಿಃ ಕರ್ಮಭಿಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅನಿಷ್ಟನಾಶಕವಾದುದು ಶಮೀ ಕರ್ಮನಾಮದಲ್ಲಿ ಹೇಳಿದೆ. (ನಿಘ. ೨–೧–೩೩) ತರಣಿ ಕ್ಷಿಪ್ರನಾಮದಲ್ಲಿ ಹೇಳಿದೆ (ನಿಘ. ೨–೧೫–೫೫) ಸೂರಚಕ್ಷಸಃ ಸೂರ್ಯನಂತೆ ಪ್ರಸಿದ್ಧರು ಅಥವಾ ಸೂರ್ಯನಂತೆ ಜ್ಞಾನವುಳ್ಳವರು.

ಋಭುಃ, ವಿಭ್ವಾ, ವಾಜಿ ಇತಿ ಸುಧನ್ವನಃ ಆಂಗಿರಸಸ್ಯ ತ್ರಯಃ ಪುತ್ರಾ
ಬಭೂವುಃ ॥

ನಿಗಮೋಕ್ತವಾದ ಸೌಧನ್ವನಾ ಎಂಬ ಪದದ ಅರ್ಥವನ್ನು ವಿವರಿಸುತ್ತಾರೆ. ಅಂಗಿರಸನ ಪುತ್ರನಾದ ಸುಧನ್ವನಿಗೆ ಋಭ್ವಾದಿ ಮೂರಜನ ಮಕ್ಕಳಿದ್ದರು.

ತೇಷಾಂ ಪ್ರಥಮೋತ್ತಮಾಭ್ಯಾಂ ಬಹುವನ್ನಿಗಮಾ ಭವಂತಿ ನ ಮಧ್ಯಮೇನ ॥

ಆರ್ಭವಮಂತ್ರಗಳ ಸ್ವಭಾವವನ್ನು ತೋರಿಸುತ್ತಾರೆ. ಈ ಮೂರಜನರ ಮಧ್ಯದಲ್ಲಿ ಯಾವಾಗಲೂ ಮೊದಲನೆ ಕೊನೆಯವರನ್ನು ಸೇರಿಸಿ ಅನೇಕ ನಿಗಮುಗಳು ಸ್ತುತಿಸುತ್ತದೆ. ಮಧ್ಯಮನಾದ ವಿಭುವಿನೊಡನೆ ಸೇರಿ ಹೇಳುವುದಿಲ್ಲ.

ತದೇತತ್ ಋಭೋಶ್ಚ ಬಹುವಚನೇನ ಚಮಸಸ್ಯ ಚ ಸಂಸ್ತವೇನ ಬಹೂನಿ ದಶತಯೀಷು ಸೂಕ್ತಾನಿ ಭವಂತಿ ॥

ಹೀಗೆ ಋಭುವನ್ನು ಬಹುವಚನದಿಂದಲೂ, ಚಮಸಸ್ತುತಿಯನ್ನು ಸೇರಿಸಿಯೂ ಋಗ್ವೇದದಲ್ಲಿ ಅನೇಕ ಸೂಕ್ತಗಳು ಸ್ತುತಿಸುತ್ತವೆ.

ಆದಿತ್ಯ ರಶ್ಮಯೋಽಪ್ಯೃಭವ ಉಚ್ಯಂತೇ॥ ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥಃ॥(ಋ.ಸಂ. ೨-೩-೬)
ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತಿ ॥

ಸೂರ್ಯರಶ್ಮಿಗಳೂ ಋಭವಪದದಿಂದ ಅಭಿಹಿತವಾಗುತ್ತವೆ. ಅದಕ್ಕೆ ಮಂತ್ರೋದಾಹರಣೆಯನ್ನು ತೋರಿಸುತ್ತಾರೆ. ಪೂರ್ವ ಮಂತ್ರದಲ್ಲಿ ಪುರಾಣಪ್ರಸಿದ್ಧರಾದ ಸುಧನ್ವನ ಮಕ್ಕಳಿಃದ ಕರ್ಮದಿಂದ ದೇವತ್ವವನ್ನು ಹೊಂದಿದ ಋಭುಗಳನ್ನು ಸ್ತುತಿಸಿ ಇಲ್ಲಿ ಸೂರ್ಯರಶ್ಮಿಗಳನ್ನು ಸ್ತುತಿಸುತ್ತಾರೆ. ಚನ್ನಾಗಿ ಪ್ರಕಾಶಿಸುವ ಸೂರ್ಯರಶ್ಮಿಗಳೇ ನೀವು ಪ್ರಕಾಶಾದಿಗಳನ್ನು ಕೊಡುತ್ತಾ ಲೋಕಾನುಗ್ರಹಪ್ರವೃತ್ತವಾದ ವೃಷ್ಟಿಕಾರ್ಯದಿಂದ ಉನ್ನತ ಪ್ರದೇಶಗಳಲ್ಲಿ ಯವಾದಿಗಳನ್ನು ಲೋಕೋಪಕಾರಾರ್ಥವಾಗಿ ಮಾಡಿದ್ದೀರಿ. ತಗ್ಗಾದ ಪ್ರದೇಶಗಳಲ್ಲಿ ನೀರನ್ನು ಶೇಖರಿಸಿರುತ್ತೀರಿ. ರಾತ್ರಿಯಲ್ಲಿ ಅಗೂಹನೀಯವಾದ ಸೂರ್ಯಮಂಡಲದಲ್ಲಿ ಇದ್ದಂತೆ ಈಗ ಹಾಗೆ ಆಗಬೇಡಿ. ನೀವು ಇಲ್ಲವಾದರೆ ಹಗಲೇ ಇಲ್ಲದಂತಾಗುತ್ತದೆ.

ಅಂಗಿರಸೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೧೬ ॥

ಕ್ರಮಪ್ರಾಪ್ತವಾದ ಅಂಗಿರಸಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ಏಕವಚನದಿಂದ ಅಂಗನರೇಷ್ವಂಗಿರಾಃ (ನಿ. ೩–೧೭) ಎಂದು ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಮಂತ್ರವು ಅಂಗಿರಸರ ಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ಹದಿನಾರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತದಶ ಖಂಡಃ

## ಹದಿನೇಳನೆಯ ಖಂಡವು

ವಿರೂಪಾಸ ಇದೃಷಯಸ್ತ ಇದ್ಗಂಭೀರವೇಪಸಃ । ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿ ಜಜ್ಞಿರೇ ॥ (ಋ. ಸಂ. ೧೦-೬೨-೫)॥ ಬಹುರೂಪಾ ಋಷಯಸ್ತೇ ಗಂಭೀರ ಕರ್ಮಾಣೋ ವಾ ಗಂಭೀರಪ್ರಜ್ಞಾ ವಾ ತೇಽಂಗಿರಸಃ ಪುತ್ರಾಸ್ತೇಽಗ್ನೇರಧಿಜಜ್ಞಿರ ಇತ್ಯಗ್ನಿ-ಜನ್ಮ ಪಿತರೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೧೭ ॥

ವಿರೂಪಾಸ ಇದೃಷಯಸ್ತ ಇದ್ಗಂಭೀರವೇಪಸಃ ।
ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿಜಜ್ಞಿರೇ ॥
(ಋ. ಸಂ. ೮-೨-೨೧)

ಅಂಗಿರಸಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಸತ್ಯವೇದವನ್ನು ಅಥವಾ ಕರ್ಮವನ್ನು ನೋಡಿದ, ಅನ್ಯೋನ್ಯವಾಗಿ ವರ್ಣರೂಪದಿಂದ ಬೇರೆಬೇರೆಯಾಗಿರುವ, ಆ ಅಂಗಿರಸರು ಸಾಕ್ಷಾತ್ತಾಗಿ ನೋಡಿರುತ್ತಾರೆ. ಗಂಭೀರ ಕರ್ಮತರೂ ಆಗಿರುತ್ತಾರೆ. ಇವರು ಅಂಗಿರಸ್ಸಿನ ಪುತ್ರರಾಗಿರುತ್ತಾರೆ. ಇವರು ಅಗ್ನಿಯ ಪುತ್ರರೂ ಆಗಿರುತ್ತಾರೆ.

ವಿರೂಪಾ ಋಷಯಸ್ತೇ ಗಂಭೀರಕರ್ಮಾಣೋ ವಾ ಗಂಭೀರ ಪ್ರಜ್ಞಾ ವಾ । ತೇ ಅಂಗಿರಸಃ ಪುತ್ರಾಸ್ತೇ ಅಗ್ನೇರಧಿ ಜಜ್ಞಿರೇ ಇತ್ಯಗ್ನಿಜನ್ಮ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ದೇವ ಎಂಬುದು ಕರ್ಮನಾಮದಲ್ಲಿ (ನಿಘ. ೨-೧-೫) ಪಠಿತವಾಗಿದೆ. ಇವರು ಅಗ್ನಿತ್ವ ವನ್ನು ಹೊಂದಿದ ಅಂಗಿರಸನಿಂದ ಹುಟ್ಟಿರುವುದರಿಂದ ಅಗ್ನಿಯಿಂದಲೂ ಜನ್ಮಪಡೆದಿದ್ದಾರೆ ಎಂದು ಹೇಳಿದೆ. 'ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್' ಎಂದು ಬ್ರಾಹ್ಮಣದಲ್ಲಿ ಹೇಳಿದೆ. ಬಹುತ್ವ ತೋರುವಾಗ ಗೋತ್ರಾರ್ಥ ಋಷ್ಯಣಿಗೆ ಲುಕ್ ಬರುವುದರಿಂದ ಪುತ್ರರೂ ಅಂಗಿರಸ ಎಂದೇ ಆಗಿರುತ್ತಾರೆ.

ಪಿತರೋ ವ್ಯಾಖ್ಯಾತಾಃ । ತೇಷಾಮೇಷಾ ಭವತಿ ॥ ೧೭ ॥

ಕ್ರಮಪ್ರಾಪ್ತವಾದ ಪಿತೃಗಣದ ನಿರ್ವಚನವನ್ನು ತೋರಿಸುತ್ತಾರೆ. ಇದು ಏಕವಚನದಿಂದ ದ್ಯಾರ್ಮೇ ಪಿತಾ (ನಿ. ೪-೨೧) ಎಂದು ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಮಂತ್ರವು ಪಿತೃಗಣಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡವು ಸಮಾಪ್ತವಾಗಿದೆ.

## ಅಥ ಅಷ್ಟಾದಶ ಖಂಡಃ
## ಹದಿನೆಂಟನೆಯ ಖಂಡವು

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ | ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು | (ಋ. ಸಂ. ೧೦-೧೫-೧) || ಉದೀರತಾಮವರ ಉದೀರತಾಂ ಪರ ಉದೀರತಾಂ ಮಧ್ಯಮಾ ಪಿತರಃ ಸೋಮ್ಯಾಃ ಸೋಮಸಂಪಾದಿನಸ್ತೇಽಸುಂ ಯೇ ಪ್ರಾಣಮನ್ವೀಯುರವೃಕಾ ಅನಮಿತ್ರಾಃ ಸತ್ಯಜ್ಞಾ ವಾ ಯಜ್ಞಜ್ಞಾ ವಾ ತೇ ನ ಆಗಚ್ಛಂತು ಪಿತರೋ ಹ್ವಾನೇಷು ಮಾಧ್ಯಮಿತೋ ಯಮ ಇತ್ಯಾಹುಸ್ತಸ್ಮಾನ್ಮಾಧ್ಯಮಿಕಾನ್ ಪಿತ್ರ್ಯಾನ್ ಮನ್ಯಂತೇಽಂಗಿರಸೋ ವ್ಯಾಖ್ಯಾತಾಃ ಪಿತರೋ ವ್ಯಾಖ್ಯಾತಾ ಭೃಗವೋ ವ್ಯಾಖ್ಯಾತಾ ಅಥರ್ವಾಣೋಽಥಸವಂತಸ್ಥರ್ವತಿ ಶ್ಚರತಿಕರ್ಮಾ ತತ್ಪ್ರತಿಷೇಧಸ್ತೇಷಾಮೇಷಾ ಸಾಧಾರಣಾ ಭವತಿ || ೧೮ ||

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ||
ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ
ಹವೇಷು ||

(ಋ. ವಾ. ಸಂ. ೧೯-೪೯) (ಋ. ಸಂ. ೭-೬-೧೭)

ಪಿತೃಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮೂರು ವಿಧವಾದ ಪಿತೃಗಣವಿರುತ್ತದೆ. ಶ್ರೌತಕರ್ಮಾನುಷ್ಠಾನ ಕ್ಕೋಸ್ಕರ ಪಿತೃತ್ವವನ್ನು ಹೊಂದಿದವರು ಉತ್ತಮರೂ, ಸ್ಮಾರ್ತಕರ್ಮಹೊಂದುವವರು ಮಧ್ಯಮರೂ, ಕೆಲವು ಸಂಸ್ಕಾರ ರಹಿತರು ಅಧಮರೂ ಆಗಿರುತ್ತಾರೆ. ಪೃಥಿವಿಯನ್ನಾಶ್ರಯಿಸಿರುವ ನಿಕೃಷ್ಟ ಪಿತೃಗಳು ಊರ್ಧ್ವಲೋಕವನ್ನು ಸೇರಿ ಉತ್ತಮ ಹವಿಸ್ಸನ್ನು ಹೊಂದದಿರಲಿ. ಉತ್ತಮರಾದ ದ್ಯುಲೋಕವನ್ನು ಹೊಂದಿದ ಪಿತೃಗಳು ಪ್ರಚ್ಯುತಿ ಹೊಂದದಿರಲಿ. ಮಧ್ಯಮಸ್ಥಾನ ವನ್ನುಹೊಂದಿದರಲಿ. ಮಧ್ಯಮಸ್ಥಾನವನ್ನು ಹೊಂದಿದವರೂ ಉತ್ತಮಲೋಕವನ್ನು ಹೊಂದಲಿ. ಪ್ರಾಣಮಾತ್ರ ಮೂರ್ತಿ ಯುಳ್ಳ, ಅಸ್ಥೂಲವಿಗ್ರಹವುಳ್ಳ, ಶತ್ರುರಹಿತರಾದ, ಯಥಾವತ್ತಾಗಿ ಸತ್ಯ ಅಥವಾ ಯಜ್ಞವನ್ನು ತಿಳಿದ ಅವರು ಸೋಮ ಸಂಪಾದಿಗಳಾಗಿ ನಮ್ಮ ಆಹ್ವಾನವನ್ನು ಮನ್ನಿಸಿ ಬರಲಿ.

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ||
ಸೋಮಸಂಪಾದಿನಸ್ತೇಽಸುಂಯೇ ಪ್ರಾಣಮನ್ವೀಯುರವೃಕಾ
ಅನಮಿತ್ರಾಃ ಸತ್ಯಜ್ಞಾ ಯಜ್ಞಜ್ಞಾ ವಾ ತೇ ನ ಆಗಚ್ಛಂತು
ಪಿತರೋಹ್ವಾನೇಷು ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಉತ್ ಎಂದು ಉಪಸರ್ಗ ಹೇಳಿರುವುದರಿಂದ ಯೋಗ್ಯಕ್ರಿಯಾಧ್ಯಾಹಾರ ಮಾಡಿಕೊಳ್ಳ

ಬೇಕಾಗಿರುವುದರಿಂದ ಪ್ರಕ್ರಾಂತವಾದ ಈರತಾಂ ಎಂಬುದನ್ನೇ ಸೇರಿಸಿ ಹೇಳಿರುತ್ತಾರೆ. ವೃಕ ಅಂದರೆ ತೋಳ, ಅಥವಾ ವಜ್ರವೆಂದು ಅರ್ಥವಾದರೂ ಲಕ್ಷಣೆಯಿಂದ ಶತ್ರುವೆಂದು ತಿಳಿಯಬೇಕು.

ಮಾಧ್ಯಮಿಕೋ ಯಮ ಇತ್ಯಾಹುಃ ತಸ್ಮಾನ್ಮಾಧ್ಯಮಿಕಾನ್ಪಿತೄನ್ ಮನ್ಯಂತೇ ||

ನಿರುಕ್ತಕಾರರು ಇಲ್ಲಿ ಅಂದರೆ ಮಾಧ್ಯಮಿಕ ಯಮನೆಂದು ಹೇಳುತ್ತಾರೆ, ಅವನು ಪಿತೃಗಳಿಗೆ ರಾಜನೆಂದು ಪ್ರಸಿದ್ಧವಾಗಿದೆ ಆದುದರಿಂದ ಮಾಧ್ಯಮಿಕ ಪಿತೃಗಳನ್ನು ಮಾತ್ರ ಇಲ್ಲಿ ಹೇಳಿದೆಯೆಂದು ತಿಳಿಯಬೇಕು.

ಅಂಗಿರಸೋ ವ್ಯಾಖ್ಯಾತಾಃ | ಪಿತರೋ ವ್ಯಾಖ್ಯಾತಾಃ | ಭೃಗವೋ ವಾಖ್ಯಾತಾಃ | ಅಥರ್ವಾಣೋಽಥರ್ವ (ಣ) ವಂತಸ್ಥರ್ವತಿಶ್ಚರತಿ-ಕರ್ಮಾ | ತತ್ಪ್ರತಿಷೇಧಸ್ತೇಷಾಮೇಷಾ ಸಾಧಾರಣಾ ಭವತಿ ||೧೮||

ಅಂಗಿರಸ, ಪಿತೃ, ಭೃಗುಗಣಗಳು ಹಿಂದೆ ವ್ಯಾಖ್ಯಾತವಾಗಿವೆ (ನಿ. ೩-೧೭, ೪-೨೧) ಮುಂದೆ ಅಥರ್ವಾಣಃ, ಭೃಗವಃ ಎಂದು ಹೇಳುತ್ತಾರೆ. ಅವರಿಬ್ಬರ ಸಾಮೂಹಿಕ ಸ್ತುತಿಯೂ, ಪ್ರತ್ಯೇಕಸ್ತುತಿಯೂ ಇರುತ್ತದೆ. ಇದಲ್ಲದೆ ಅಥರ್ವದೇವತೆಗಳಿಗೆ ಪಿತ್ರಂಗಿರೋಭೃಗುಗಳೊಡನೆ ಸಾಧಾರಣ ಸ್ತುತಿಯೂ ಲಬ್ಧವಾಗುತ್ತದೆ. ಪ್ರಸಂಗದಿಂದ ಅಥರ್ವಪದದ ನಿರ್ವಚನವನ್ನು ತೋರಿಸುತ್ತಾರೆ. ಅಥರ್ವಾ ಉಳ್ಳವರು ಅಥರ್ವಾಣರು. ಗತ್ಯರ್ಥದಲ್ಲಿ ಥರ್ವಧಾತುವು ನಿರುಕ್ತದಲ್ಲಿ ಹೇಳಿದೆ. ಥರ್ವ ಅಂದರೆ ಗಮನವುಳ್ಳವರು. ಥರ್ವಧಾತುವಿಗೆ ಕನಿನ್‌ಪ್ರತ್ಯಯ. ಅಕಾರದಿಂದ ಅದರ ನಿಷೇಧ ತೋರುತ್ತದೆ. ನ ಥರ್ವಂತೀತಿ ಅಥರ್ವಾಣಃ. ಗಮನವಿಲ್ಲದವರು ಅಂದರೆ ಸ್ಥಿರವಾದ ಪ್ರಕೃತಿಯುಳ್ಳವರೆಂದರ್ಥ. ಮುಂದೆ ಹೇಳುವ ಮಂತ್ರವು ಅಂಗಿರಸ ಮುಂತಾದವರ ಸಾಧಾರಣಸ್ತುತಿಯನ್ನು ಪ್ರತಿಪಾದಿಸುತ್ತದೆ,

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ | ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ | ಹವೇಷು || ೧ ||

ಕೆಳಗಿನ ಲೋಕದಲ್ಲಿರುವ ಪಿತೃಗಳೂ, ಉತ್ತಮಲೋಕದಲ್ಲಿರುವವರೂ, ಮಧ್ಯಮಲೋಕದಲ್ಲಿರುವವರೂ ನಮ್ಮ ಹವಿಸ್ಸಗಳನ್ನು ಸ್ವೀಕರಿಸಲಿ. ಅವರೆಲ್ಲರೂ ನಮ್ಮಲ್ಲಿ ಅನುಗ್ರಹಬದ್ಧಿಯುಳ್ಳವರಾಗಿರಲಿ. ತೋಳಗಳಂತೆ ಕ್ರೂರಿಗಳಲ್ಲದವರೂ, ನಮ್ಮ ಯಜ್ಞಕರ್ಮಗಳನ್ನರಿತವರೂ, ನಮ್ಮ ಪ್ರಾಣವನ್ನು ರಕ್ಷಿಸಲು ಬಂದಿರುವವರೂ ಆದ ಆ ಪಿತೃಗಳು ನಮ್ಮ ಆಹ್ವಾನ ಕಾಲದಲ್ಲಿ ನಮ್ಮನ್ನು ರಕ್ಷಿಸಲಿ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಉದೀರತಾಮವರ ಉದೀರತಾಂ ಪರ ಉದ್ಧೀರತಾಂ ಮಧ್ಯಮಾಃ ಪಿತರಃ ಸೋಮ್ಯಾಃ ಸೋಮಸಂಪಾದಿನಸ್ತೇಽಸುಂ ಪ್ರಾಣಮನ್ವೀಯುರವೃಕಾ ಅನಮಿತ್ರಾಃ ಸತ್ಯಜ್ಞಾ ವಾ ಯಜ್ಞಜ್ಞಾ ವಾ ತೇ ನ ಆಗಚ್ಛಂತು ಪಿತರೋ ಹ್ವಾನೇಷು ||

(ನಿ. ೧೧-೧೮)

ಅವರೇ ಕೆಳಭಾಗದಲ್ಲಿ ಎಂದರೆ ಪೃಥ್ವಿಯಲ್ಲಿ ಅಥವಾ ಪಿತೃಲೋಕದ ಕೆಳಭಾಗದಲ್ಲಿರುವ ಪಿತೃಗಳು ಪರಾಸಃ ದ್ಯುಲೋಕವಾಸಿಗಳಾದ ಪಿತೃಗಳು, ಮಧ್ಯಮಾಃ— ಮಧ್ಯಮಸ್ಥಾನರಾದ ಅಂತರಿಕ್ಷದಲ್ಲಿ ವಾಸಿಸುವ ಪಿತೃಗಳೂ

ಸೋಮ್ಯಾಸಃ—ಹಿಂದೆ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಸಿದ್ಧಪಡಿಸಿ ಅರ್ಪಿಸಿದವರೂ, ಯಾರು ನಮ್ಮ ಪ್ರಾಣಗಳನ್ನು ರಕ್ಷಿಸಲು ಬಂದಿರುವರೋ ಅವರೂ, ಯಾರಿಗೂ ಯಾವವಿಧವಾದ ಹಿಂಸೆಯನ್ನು ಮಾಡದಿರುವವರೂ, ಶತ್ರುಗಳಲ್ಲದವರೂ ಎಂದರೆ ಕೇಡನ್ನು ಬಯಸದಿರುವವರೂ ಸತ್ಯ ಅಥವಾ ಯಜ್ಞಸ್ವರೂಪವನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ಈಗ ನಾವು ಮಾಡುತ್ತಿರುವ ಆಹ್ವಾನದಲ್ಲಿ ಎಂದರೆ ಆಹ್ವಾನದಿಂದ ನಮ್ಮಲ್ಲಿಗೆ ಬಂದು ನಮ್ಮನ್ನು ರಕ್ಷಿಸಲಿ.

ಅವೃಕಾಃ ಎಂಬ ಶಬ್ದಕ್ಕೆ —ವೃಕಃ ಎಂದರೆ ತೋಳವು. ತೋಳದ ಸ್ವಭಾವವು ಹಿಂಸೆಯನ್ನು ಮಾಡುವುದೇ ಆಗಿದೆ. ಈ ಶಬ್ದವನ್ನು ಮನುಷ್ಯರ ಪರವಾಗಿ ಉಪಯೋಗಿಸಿದಾಗ ಹಿಂಸೆಮಾಡುವವರು, ದುಷ್ಟರು ಎಂದರ್ಥವಾಗುವುದು. ಅವೃಕಾಃ ಎಂದರೆ ವೃಕರಲ್ಲದವರು, ಯಾರಿಗೂ ಹಿಂಸೆಯನ್ನು ಮಾಡದಿರುವವರು, ಸಜ್ಜನರು ಎಂದಭಿಪ್ರಾಯವು.

ಅನಮಿತ್ರಾಃ—ಮಿತ್ರನೆಂದರೇ. ಸ್ನೇಹಿತ, ಹಿತಕಾರಿ ಎಂದು. ಅಮಿತ್ರ ಎಂದರೆ ಮಿತ್ರನಲ್ಲದವನು, ಶತ್ರುವು। ಅನಮಿತ್ರ ಎಂದರೆ ಶತ್ರುವಲ್ಲದವನು ಎಂದರೆ ಸ್ನೇಹಿತನು, ಹಿತಕಾರಿಯು ಎಂದೇ ಅರ್ಥವು ಆದ್ದರಿಂದ ಮಿತ್ರಶಬ್ದಕ್ಕೂ ಅನಮಿತ್ರ ಶಬ್ದಕ್ಕೂ ಒಂದೇ ಅರ್ಥವಿರುವುದು. ಈ ಶಬ್ದದಲ್ಲಿ ಎರಡಾವರ್ತಿ ನಿಷೇಧಾರ್ಥಸೂಚಕ ಉಪಸರ್ಗಗಳಿರುವುದರಿಂದ (Two negetives make one affirmative) ಶಬ್ದವು ಪೂರ್ವದ ಅರ್ಥವನ್ನೇ ಸೂಚಿಸುವುದು.

ಭಾಷ್ಯಕಾರರು ಪಿತೃಗಳಲ್ಲಿ ಮೂರು ವಿಧವೆಂದು ಹೇಳಿರುವರು— ಉತ್ತಮಾ ಮಧ್ಯಮಾ ಅಧಮಾಶ್ಚೇತಿ ಹೇಗೆಂದರೆ—

ಉತ್ತಮಾಃ—ಯಥಾವಿಧಂ ಶ್ರೌತಂ ಕರ್ಮಾನುಷ್ಠಾಯ ಪಿತೃತ್ವಂ ಪ್ರಾಪ್ತಾ ಉತ್ತಮಾಃ ಉತ್ತಮ ಕರ್ಮಗಳಾದ ಯಜ್ಞಯಾಗಾದಿಗಳನ್ನೂ ಯಥಾವಿಧಿಯಾಗಿ ಮಾಡಿ ಆ ಸತ್ಕರ್ಮಾನುಷ್ಠಾನದ ಫಲವಾಗಿ ಪಿತೃಸ್ಥಾನವನ್ನು ಪಡೆದವರು ಪಿತೃಗಳಲ್ಲಿ ಉತ್ತಮರೆಂದು ಪ್ರಸಿದ್ಧಿಯನ್ನು ಪಡೆದಿದಾರೆ.

ಮಧ್ಯಮಾಃ—ಸ್ಮಾರ್ತಕರ್ಮಪರಾ ಮಧ್ಯಮಾಃ। ಸ್ಮೃತಿಪುರಾಣಾದಿಗಳಲ್ಲಿ ಹೇಳಿರುವಂತೆ ದೇವತೆಗಳನ್ನು ಆರಾಧಿಸಿ ಆ ಪುಣ್ಯದಿಂದ ಪಿತೃತ್ವವನ್ನು ಪಡೆದ ಪಿತೃಗಳು ಮಧ್ಯಮರು.

ಅಧಮಾಃ—ಅತ್ರಾಪಿ ಕೈಶ್ಚಿತ್ಸಂಸ್ಕಾರೈರ್ವಿಕಲಾ ಅಧಮಾಃ। ಮೇಲೆ ಹೇಳಿದ ಕರ್ಮಾದಿಗಳಲ್ಲಿ ಲೋಪದೋಷಗಳುಂಟಾಗಿ ಕರ್ಮವನ್ನು ಸಾಂಗವಾಗಿ ನೆರವೇರಿಸಲಸಮರ್ಥರಾದವರು ಪಿತೃಗಳಲ್ಲಿ ಅಧಮರೆನಿಸುವರು ಎಂದು ಉತ್ತಮ ಮಧ್ಯಮಾಧಮರೆಂಬ ಮೂರುವಿಧ ಪಿತೃಗಳ ಸ್ವರೂಪವನ್ನೂ ಅವರ ಸ್ಥಾನಮಾನಗಳನ್ನೂ ತಿಳಿಸಿದಾರೆ. ಇದನ್ನನುಸರಿಸಿಯೇ ಅಗ್ನಿದಗ್ಧಾಃ ಎಂಬ ಮಂತ್ರವೂ ಇರುವುದು. ಎಂದರೆ ಅಗ್ನಿಯಲ್ಲಿ ಯಾರ ಮೃತಶರೀರವು ಮಂತ್ರಪೂರ್ವಕವಾದ ಸಂಸ್ಕಾರಾದಿಗಳಿಂದ ದಹಿಸಲ್ಪಡುವುದೋ ಅವರು ಪಿತೃಗಳಲ್ಲಿ ಉತ್ತಮ ಸ್ಥಾನವನ್ನು ಗಳಿಸುವರು. ಇವರಿಗೆ ಅಗ್ನಿದಗ್ಧರೆಂದು ಹೆಸರು. ಹಾಗಿಲ್ಲದೆ, ಅಗ್ನಿಸಂಸ್ಕಾರಾದಿಗಳಿಲ್ಲದೆ ನೀರಿನಲ್ಲಿ ಮುಳುಗಿಹೋಗುವುದನ್ನು ಮಾಡಲು ಕರ್ತೃವಿಲ್ಲದಿರುವುದು, ಅಥವಾ ಯಥಾವಿಧಿಯಾಗಿ ಕರ್ಮದಿಂದ ಸಂಸ್ಕೃತವಾಗದಿರುವವರು ಇವರೆಲ್ಲಾ ಅನಗ್ನಿದಗ್ಧರೆಂದು ಹೇಳಲ್ಪಡುವರು. ಇವರು ಪಿತೃಗಳಲ್ಲಿ ಮಧ್ಯಮಸ್ಥಾನವನ್ನೋ ಅಥವಾ ಅಧಮಸ್ಥಾನವನ್ನೋ ಪಡೆಯುವರು. ಈ ವಿಧವಾದ ಪಿತೃಗಳೆಲ್ಲರೂ, ಸೋಮಸಂಪಾದಿಗಳೂ, ಹಿಂಸಾರಹಿತರೂ, ಪ್ರಾಣವನ್ನು ರಕ್ಷಿಸುವರೂ, ಯಜ್ಞಾನುಷ್ಠಾನ ಕರ್ಮಗಳನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ನಮ್ಮ ಆಹ್ವಾನವನ್ನು ಮನ್ನಿಸಿ ನಮ್ಮನ್ನು ರಕ್ಷಿಸಲಿ ಎಂಬಭಿಪ್ರಾಯವು ಈ ಋಕ್ಕಿನಲ್ಲಿ ಉಕ್ತವಾಗಿದೆ.

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ ಪಿತರೋಬರ್ಹಿಷದಃ ಎಂಬ ಗುಂಪಿನ ಪಿತೃಗಳನ್ನುದ್ದೇಶಿಸಿ ಹೋಮ ಮಾಡುವಾಗ ಇದಂ ಪಿತೃಭ್ಯಃ ಎಂಬ ಈ ಋಕ್ಕನ್ನು ಎರಡನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ಉದಾಹರಿಸಲಾಗಿದೆ (ಆ. ೨-೧೯) ಅಗ್ನಿಮಾರುತಶಸ್ತ್ರಮಂತ್ರಗಳಲ್ಲಿಯೂ ಇದಂ ಪಿತೃಭ್ಯಃ ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಅಹಂ ಪಿತೄನ್ತ್ಸು-ವಿದತ್ರಾ ಅವಿತ್ಸೀದಂ ಪಿತೃಭ್ಯೋ ನಮೋ ಅಸ್ತ್ವದ್ಯ ಸ್ವಾದುಷ್ಕಿಲಾಯಮಿತಿ ಚತಸ್ರಃ ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

ಈರೀತಿ ಶ್ರೀಯಾಸ್ಕಮುನಿ ವಿರಚಿತ ಹನ್ನೊಂದನೆಯ ಅಧ್ಯಾಯದಲ್ಲಿ
ಹದಿನೆಂಟನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಕೋನವಿಂಶತಿ ಖಂಡಃ

### ಹತ್ತೊಂಬತ್ತನೆಯ ಖಂಡವು

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ । ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥ (ಋ. ಸಂ. ೧೦-೧೪-೬) ॥ ಅಂಗಿರಸೋ ನಃ ಪಿತರೋ ನವಗತಯೋ ನವನೀತಗತಯೋ ಚಾಥರ್ವಾಣೋ ಭೃಗವಃ ಸೋಮ್ಯಾಃ ಸೋಮಸಂಪಾದಿನಸ್ತೇಷಾಂ ವಯಂ ಸುಮತೌ ಕಲ್ಯಾಣ್ಯಾಂ ಮತೌ ಯಜ್ಞಿಯಾನಾಮಪಿ ಚೈಷಾಂ ಭದ್ರೇ ಭಂದನೀಯೇ ಭಾಜನವತಿ ವಾ ಕಲ್ಯಾಣೇ ಮನಸಿ ಸ್ಯಾಮೇತಿ ಮಾಧ್ಯಮಿಕೋ ದೇವಗಣ ಇತಿ ನೈರುಕ್ತಾಃ ಪಿತರ ಇತ್ಯಾಖ್ಯಾನಮಥಾಪ್ಯೃಷಯಃ ಸ್ತೂಯಂತೇ ॥ ೧೯ ॥

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।
ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥

(ಋ. ವಾ. ಸಂ. ೧೯-೫೦) (ಋ. ಸಂ. ೭-೬-೧೫).

ಅಂಗಿರಸಾದಿಗಳ ಸಾಧಾರಣ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಅಂಗಿರ, ಅಥರ್ವ, ಭೃಗುವೆಂಬ ಹೆಸರುಳ್ಳ ನಮ್ಮ ಪಿತೃಗಳು ಸದಾ ನೂತನಗತಿಯುಳ್ಳವರಾಗಿ, ಯಜ್ಞಸಂಪಾದಕರಾಗಿ ನಮ್ಮ ಕಲ್ಯಾಣಬುದ್ಧಿಯಲ್ಲಿ ಇರುತ್ತಾರೆ. ನಾವು ಯಜ್ಞಸಂಪಾದಿಗಳಾದ ಅವರ ಉಪಕಾರಪ್ರವೃತ್ತಿಯುಳ್ಳವರಾಗೋಣ. ಮತ್ತು ಸ್ತುತ್ಯವಾದ ಕಲ್ಯಾಣ ಮನಸುಳ್ಳವರಾಗಿ ಅವರ ಪೂಜೆಯಲ್ಲಿ ತತ್ಪರರಾಗೋಣ.

ಅಂಗಿರಸೋ ನಃ ಪಿತರೋ ನವಗತಯೋ ವಾಽಥರ್ವಾಣೋ ಭೃಗವಃ
ಸೋಮ್ಯಾಃ ಸೋಮಸಂಪಾದಿನಸ್ತೇಷಾಂ ವಯಂ ಸುಮತೌ
ಕಲ್ಯಾಣ್ಯಾಂ ಮತೌ ಯಜ್ಞಿಯಾನಾಂ ಅಪಿ ಚೈಷಾಂ ಭದ್ರೇ ಭಂದ-
ನೀಯೇ ಭಾಜನವತಿ ವಾ ಕಲ್ಯಾಣೇ ಮನಸಿ ಸ್ಯಾಮೇತಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ನವಗ್ವಾ ಅಂದರೆ ನೂತನಗತಿ ಅಥವಾ ನೂತನ ಗೀತೆಯುಳ್ಳವರೆಂದರ್ಥ. ಭದ್ರವಾದ ಅಂದರೆ ಸ್ತುತ್ಯವಾದ, ಪೂಜಾಯೋಗ್ಯವಾದ ಎಂದರ್ಥ.

ಮಾಧ್ಯಮಿಕೋ ದೇವಗಣ ಇತಿ ನೈರುಕ್ತಾಃ | ಪಿತರ ಇತ್ಯಾಖ್ಯಾನಂ ||

ಋಭು, ಅಂಗಿರಸ, ಭೃಗು, ಅರ್ಥರ್ವಾಣರೆಂದು ಸ್ತುತಿಸಿರುವುದಿಂದ ದೇವತಾಪದ ಮಧ್ಯದಲ್ಲಿ ಹೇಳಿರುವುದರಿಂದ ಇವರು ಒಂದೊಂದು ಮಾಧ್ಯಮಿಕ ದೇವಗಣವೆಂದು ನಿರುಕ್ತಕಾರರ ಸಿದ್ಧಾಂತ. ಪಿತೃಗಳ ವಿಷಯದಲ್ಲಿ ಮಾತ್ರ ಋಭು ಸನತ್ಕುಮಾರ ಮುಂತಾದ ನಾಮವಿಶೇಷದಿಂದ ಇತಿಹಾಸ ಪುರಾಣಾದಿಗಳನ್ನು ತಿಳಿದವರು ಹೇಳುತ್ತಾರೆ. ಇದೂ ಮಂತ್ರವಿಷಯನೇ ಆಗಿರುತ್ತದೆ.

ಅಥಾಪ್ಯೃಷಯಃ ಸ್ತೂಯಂತೇ || ೧೯ ||

ಪಿತೃಗಳೂ ಕೂಡಾ ದೇವಗಣದಲ್ಲಿಯೇ ಸೇರುತ್ತಾರೆಯೇ ಅಥವಾ ತದ್ಭಿನ್ನಸ್ವರೂಪವುಳ್ಳವರೇ ಎಂದು ಆಶಂಕೆ ಬರುತ್ತದೆ ಏಕೆಂದರೆ ಅಂಗಿರಸಾದಿಗಳು ದೇವಗಣದಲ್ಲಿ ಹೇಳಿರುವುದಲ್ಲದೆ ಋಷಿಗಳೂ ಆನಾಮದಿಂದ ಪ್ರಸಿದ್ಧರಾಗಿರುತ್ತಾರೆ. ವಸಿಷ್ಠಾದಿ ಋಷಿಗಳನ್ನು ಮಂತ್ರದಲ್ಲಿ ಸ್ತುತಿಸಿರುವುದರಿಂದ ಇವರನ್ನು ಋಷಿಗಳೆಂದೂ ಅಂಗೀಕರಿಸಲು ಕಾರಣವಿರುತ್ತದೆ. ಮುಂದೆ ಹೇಳುವ ಮಂತ್ರವು ವಸಿಷ್ಠ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ
ಸೋಮ್ಯಾಸಃ | ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ
ಭದ್ರೇ ಸೌಮನಸೇ ಸ್ಯಾಮ || ೬ ||

ಅಂಗಿರಸ್ಸುಗಳೂ, ಅಥರ್ವಸಂಜ್ಞಕರಾದ ಋಷಿಗಳೂ ಭೃಗುಗಳೂ ನೂತನವಾದ ಚೈತನ್ಯದಾಯಕರಾದ ನಮ್ಮ ಪಿತೃಗಳೂ ಸೋಮಾರ್ಪಣೆಗೆ ಅರ್ಹರಾಗಿದ್ದಾರೆ. ಪೂಜಾರ್ಹರಾದ ಅವರ ಕಲ್ಯಾಣಾತ್ಮಕವಾದ ಅನುಗ್ರಹಕ್ಕೂ ಪ್ರೀತಿಗೂ ನಾವು ಪಾತ್ರರಾಗೋಣ.

ಈ ಋಕ್ಕಿನಲ್ಲಿರುವ ಅಂಗಿರಸಃ, ಪಿತರಃ, ಅಥರ್ವಾಣಃ, ಭೃಗವಃ ಎಂಬ ಶಬ್ದಗಳನ್ನು ವಿವರಿಸುವಾಗ ಯಾಸ್ಕರು ಪ್ರಕೃತಋಕ್ಕಿಗೆ ನಿರ್ವಚನವನ್ನು ಹೇಳಿದಾರೆ, ಮೇಲೆ ಹೇಳಿದ ಅಂಗಿರಸಃ ಮೊದಲಾದವರು ಪಿತೃದೇವತೆಗಳು. ಅವರು ಮಾಧ್ಯಮಿಕವಾದ ಎಂದರೆ ಮಧ್ಯಮಸ್ಥಾನದಲ್ಲಿರುವ ಪಿತೃಗಳು, ಅವರುಗಳಿಗೆ ಯಮನು ರಾಜನು ಆದ್ದರಿಂದ ಮಾಧ್ಯಮಿಕೋ

ಯಮ ಇತ್ಯಾಹುಃ । ತಸ್ಮಾನ್ಮಾಧ್ಯಮಿಕಾನ್ ಪಿತೄನ್ಮನ್ಯಂತೇ (ನಿ. ೧೦–೧೯)। ಯಮನೂ ಮಧ್ಯಮಸ್ಥಾನದೇವತೆಯು ಎಂದು ಹೇಳಿದ್ದಾರೆ.

ಅಂಗಿರಸಃ—ಅಂಗಾರೇಷ್ವಂಗಿರಾಃ । ಅಂಗಾರಾ ಅಂಗನಾಃ (ಅಂಚನಾಃ) ನಿ. ೩–೧೭। ಅಂಗಿರಸರೆಂಬುವರು ಬಹಳ ಪ್ರಸಿದ್ಧರಾದ ಋಷಿಗಳು. ಪೂರ್ವದಲ್ಲಿ ಪ್ರಜಾಪತಿಯು ತನ್ನ ಪುತ್ರಿಯ ಸಂಗವನ್ನು ಮಾಡಿ ಅದರಿಂದ ಸ್ಖಲಿತವಾದ ರೇತಸ್ಸು ಭೂಮಿಯಮೇಲೆ ಬಿದ್ದು ಸರೋವರ ರೂಪದಲ್ಲಿ ನಿಂತಿತು. ಅದನ್ನು ದೇವತೆಗಳು ಇಂಗಿಸಬೇಕೆಂದು ಪ್ರಯತ್ನಿಸಿ ಅದರ ಸುತ್ತಲೂ ವೈಶ್ವಾನರಾಗ್ನಿಯನ್ನು ಸ್ಥಾಪಿಸಿದರು. ಆಗ ಆ ವೀರ್ಯವು ಅಗ್ನಿಯ ಶಾಖದಿಂದ ಪ್ರಜ್ವಲಿತವಾಗಿ ಉರಿಯುತ್ತಿರುವಾಗ ಅದರಿಂದ ಮೊದಲು ಆದಿತ್ಯನೂ, ಅಲ್ಲಿದ್ದ ಕೆಂಡಗಳಿಂದ ಅಂಗಿರಾ ಋಷಿಗಳೂ ಉತ್ಪನ್ನರಾದರೆಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವುದನ್ನು ನಾವು ಹಿಂದೆಯೇ ವಿವರಿಸಿದೇವೆ. ಈ ಅಂಗಿರಾಋಷಿಗಳು ಬಹಳ ಪ್ರಸಿದ್ಧರಾದ ಪಿತೃಗಳೆಂದು ಹೇಳುವ ರೂಢಿ ಇದೆ. ಅಂಗಾರಾಃ ಎಂದರೆ ಕೆಂಡಗಳು. ಇವುಗಳು ಆರಿಹೋದನಂತರ ಕಪ್ಪಾಗಿ ಮುಟ್ಟಿದರೆ ಕೈಯೆಲ್ಲಾ ಮಸಿಯಾಗುವುದು (ಅಂಚನಾಃ) ಆದ್ದರಿಂದ ಅಂಗಾರಾಃ ಎಂಬ ಹೆಸರು.

ಪಿತರಃ—ಪಿತಾ ಪಾತಾ ವಾ ಪಾಲಯಿತಾ ವಾ (ನಿ. ೪–೨೧) ಪಿತೃಶಬ್ದಕ್ಕೆ ಸಂರಕ್ಷಿಸುವವರು ಅಥವಾ ಕಾಪಾಡುವವರು ಎಂದರ್ಥವಿರುವುದು. ಪಿತೃಗಳು ಯಾರು ಇವರ ವಿಷಯವೇನು ಎಂಬುದನ್ನು ಈ ಸೂಕ್ತದ ಪೀಠಿಕೆಯಲ್ಲಿ ನಾವು ವಿಸ್ತಾರವಾಗಿ ವಿವರಿಸಿದೇವೆ.

ಅಥರ್ವಾಣಃ—ಥರ್ವ್‌ಧಾತುವಿಗೆ ಚಲಿಸು ಎಂದರ್ಥವಿರುವುದು. (ಥರ್ವತಿಃ ಚರತಿಕರ್ಮಾ) ಆದರಿಂದ ನಿಷ್ಪನ್ನವಾದ ಥರ್ವಣಃ ಎಂಬ ಶಬ್ದಕ್ಕೆ ಚಲಿಸುವವರು ಎಂದರ್ಥವು. ಅಥರ್ವಾಣಃ ಎಂಬ ಶಬ್ದವು ಅದರ ಪ್ರತಿಷೇಧಾರ್ಥವನ್ನು ತಿಳಿಸುವುದು ಎಂದರೆ ಚಲಿಸುವ ಸ್ಥಿರವಾಗಿ ಇರುವವರು ಸ್ಥಿರಪ್ರಕೃತಿಯುಳ್ಳವರು ಎಂದರ್ಥವು.

ಭೃಗವಃ—ಅರ್ಚಿಷಿ ಭೃಗುಃ ಸಂಬಭೂವ । ಭೃಗುರ್ಭೃಜ್ಯಮಾನೋ ನ ದೇಹೇ (ನಿ. ೩–೧೭) ಮೇಲೆ ಹೇಳಿದಂತೆ ಪ್ರಜಾಪತಿಯ ವೀರ್ಯವನ್ನು ವೈಶ್ವಾನರಾಗ್ನಿಯಿಂದ ತಪ್ತಮಾಡುವಾಗ ಜ್ವಾಲೆಯಿಂದ ಭೃಗುಋಷಿಯು ಉತ್ಪನ್ನನಾದನು ಎಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ. ಜ್ವಾಲೆಯಂತೆ-ಪ್ರಕಾಶಮಾನನಾದ್ದರಿಂದ ಭೃಗು ಎಂಬ ಹೆಸರಾಯಿತು. ಈ ಋಷಿಯ ವಂಶಸ್ಥರಿಗೆ ಭೃಗವಃ ಎಂದು ಹೆಸರು. ಇವರು ಪ್ರಸಿದ್ಧರಾದ ಪಿತೃಗಣಗಳು. ಇನ್ನು ಪ್ರಕೃತಋಕ್ಕಿನ ನಿರ್ವಚನವನ್ನು ವಿವರಿಸೋಣ—

ಅಂಗಿರಸೋ ನಃ ಪಿತರೋ ನವಗತಯೋ ನವನೀತಗತಯೋ ವಾಥರ್ವಾಣೋ ಭೃಗವಃ ಸೋಮ್ಯಾಃ ಸೋಮ್ಯಾಃ ಸೋಮಸಂಪಾದಿನಸ್ತೇಷಾಂ ವಯಂ ಸುಮತೌ ಕಲ್ಯಾಣ್ಯಾಂ ಮತೌ ಯಜ್ಞಿಯಾನಾಮಪಿ ಚೈಷಾಂ ಭದ್ರೇ ಭಂದನೀಯೇ ಭಾಜನವತಿ ವಾ ಕಲ್ಯಾಣೇ ಮನಸಿ ಸ್ಯಾಮೇತಿ ॥

(ನಿ. ೧೦–೧೯)

ಇಲ್ಲಿ ಅಂಗಿರಸಃ, ಪಿತರಃ, ಭೃಗವಃ ಅಥರ್ವಾಣಃ ಎಂಬ ಪಿತೃದೇವತೆಗಳ ವಿಷಯವನ್ನು ಮೇಲೆ ವಿವರಿಸಿದೇವೆ. ಇನ್ನು ನವಗ್ವಾಃ ಎಂದರೆ ನವಗತಯೋ ನವನೀತಗತಯೋ ವಾ ನವಗ್ವಾ ಎಂದರೆ ಹೊಸಗತಿಯುಳ್ಳವರು ಎಂದರೆ ಪ್ರತಿಮಾಸದಲ್ಲಿ

ಅಥವಾ ಪ್ರತಿ ಸಂವತ್ಸರದಲ್ಲಿ ಆಚರಿಸಲ್ಪಡುವ ಪಿತೃಯಜ್ಞಾದಿಗಳಲ್ಲಿ (ಶ್ರಾದ್ಧಾದಿಗಳಲ್ಲಿ) ಕವ್ಯಸ್ವೀಕಾರಾರ್ಥವಾಗಿ ಬರುವವರು ಅಥವಾ ನವನೀತ ಎಂದರೆ ಬೆಣ್ಣೆಯಮೇಲೆ ಅತ್ಯಾಸೆಯಿಂದ ಬರುವವರು ಎಂಬ ನವಗ್ವಾಃ ಎಂಬ ಶಬ್ದಕ್ಕೆ ಯಾಸ್ಕರು ಅರ್ಥ ವಿವರಣೆಮಾಡಿದ್ದಾರೆ. ಸೋಮ್ಯಾಃ-ಸೋಮಸಂಪಾದಿನಃ । ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮಲತೆಗಳನ್ನು ಜಜ್ಜಿ ಹಿಂಡಿ ಸೋಮರಸವನ್ನು ಸಿದ್ಧಪಡಿಸುವವರು. ಇವರು ಯಜ್ಞಮಾಡುತ್ತಿದ್ದ ಕಾಲದಲ್ಲಿ ಈರೀತಿ ಸೋಮರಸವನ್ನು ಸಿದ್ಧಪಡಿಸಿ ದೇವತೆಗಳಿಗೆ ಅರ್ಪಿಸಿ ಆದರಿಂದ ಉತ್ತಮಸ್ಥಾನವನ್ನು ಪಡೆದದ್ದರಿಂದ ಇವರಿಗೆ ಸೋಮ್ಯಾಸಃ ಎಂಬ ಹೆಸರು ಬಂದಿತು. ಮೇಲೆ ಹೇಳಿದ ಪೂಜಾರ್ಹರಾದ (ಅಥವಾ ಯಜ್ಞಾರ್ಹರಾದ) ಪಿತೃಗಳ ಉತ್ತಮವೂ ಪ್ರಶಸ್ಯವೂ ಕಲ್ಯಾಣಾತ್ಮಕವೂ ಆದ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ ನಾವು ಇರುವಂತಾಗಲಿ ಎಂದರೆ ಅವರ ಉತ್ತಮವಾದ ಅನುಗ್ರಹಕ್ಕೆ ನಾವು ಪಾತ್ರರಾಗೋಣ ಎಂದು ನಿರುಕ್ತವಚನದ ಮುಖ್ಯಾಭಿಪ್ರಾಯವು.

ಮಾಧ್ಯಮಿಕೋ ದೇವಗಣ ಇತಿ ನೈರುಕ್ತಾಃ । ಪಿತರ ಇತ್ಯಾಖ್ಯಾನಂ ॥ (ನಿ. ೧೧-೨೦)

ಮೇಲೆ ಹೇಳಿದ ಅಂಗೀರಸರೇ ಮೊದಲಾದವರು ಮಧ್ಯಮ (ಅಂತರಿಕ್ಷ) ಸ್ಥಾನೀಯರಾದ ದೇವಗಣಕ್ಕೆ ಸೇರಿದವರು ಎಂದು ನಿರುಕ್ತಕಾರರು ಹೇಳಿರುವರು ಇವರುಗಳೆಲ್ಲರೂ ಹಿಂದೆ ಋಷಿಗಳಾಗಿದ್ದು ತಮ್ಮ ಉತ್ತಮ ಕರ್ಮಗಳಿಂದ ಉತ್ತಮಸ್ಥಾನವನ್ನು ಪಡೆದಿರುವುದರಿಂದ ಇವರೆಲ್ಲರನ್ನೂ ಪಿತೃಗಳೆಂದು ಕರೆಯಬೇಕೆಂದು ಮತ್ತೆ ಕೆಲವರ ಅಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಹತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

•••••••••

## ಅಥ ವಿಂಶತಿಃ ಖಂಡಃ

## ಇಪ್ಪತ್ತನೆಯ ಖಂಡವು

ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿಮಾ ಗಭೀರಃ। ವಾತಸ್ಯೇವ ಪ್ರಜವೋ ನಾನ್ಯೇನ ಸ್ತೋಮೋ ವಸಿಷ್ಠಾ ಅನ್ವೇತವೇ ವಃ (ಋ. ಸಂ. ೭-೩೩-೮) ॥ ಇತಿ ಯಥಾ ಆಪ್ತ್ಯಾ ಆಪ್ನೋತೇ ಸ್ತೇಷಾಮೇಷ ನಿಪಾತೋ ಭವತ್ಯೈಂದ್ರ್ಯಾಮೃಚಿ ॥ ೨೦ ॥

ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿ-
ಮಾ ಗಭೀರಃ । ವಾತಸ್ಯೇವ ಪ್ರಜವೋ ನಾನ್ಯೇನ ಸ್ತೋಮೋ
ವಸಿಷ್ಠಾ ಅನ್ವೇತವೇ ವಃ ॥

(ಋ. ಸಂ, ೫-೩-೨೭)

ವಸಿಷ್ಠ ಋಷಿ ಸ್ತುತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವಸಿಷ್ಠ ಪುತ್ರರ ಮಾತಿನ ದೀಪ್ತಿಯು ಸೂರ್ಯನಂತಿದೆ ಅವರ ಸ್ತೋತ್ರದ ಮಾತು ಪ್ರಕಾಶಾರ್ಥಕವಾಗಿದೆಯೆಂದು ತಾತ್ಪರ್ಯ. ಸ್ಫುಟಾರ್ಥಕವಲ್ಲದೆ ಸಮುದ್ರದ ಮಹಿಮೆಯಂತೆ ಅರ್ಥಗಂಭೀರವೂ, ವಾಯುವಿನಂತೆ ಶೀಘ್ರಪ್ರವೃತ್ತಿಯುಳ್ಳದ್ದೂ ಆಗಿರುತ್ತದೆ. ಈರೀತಿಯಾದ ಸ್ತೋತ್ರವನ್ನು ವಸಿಷ್ಠ ಪುತ್ರರಲ್ಲದೆ ಇನ್ನು ಬೇರೆ ಯಾರೂ ಮಾಡಲು ಅಸಮರ್ಥರು. ಹೀಗೆ ಋಷಿಗಳೂ ಮಂತ್ರದಲ್ಲಿ ಸ್ತುತಿಸಲ್ಪಡುವುದರಿಂದ ಮಂತ್ರ ವಿಷಯವಿದೆಯೆಂದು ಹಿಂದೆ ಹೇಳಿರುವುದು ಯುಕ್ತವಾಗಿದೆ.

**ಆಪ್ತ್ಯಾ-ಆಪ್ನೋತೇಸ್ತೇಷಾಮೇಷ ನಿಪಾತೋ ಭವತ್ಯೈಂದ್ರ್ಯಾ ಮೃಚಿ ॥ ೨೦ ॥**

ಆಪ್ತ್ಯ ಎಂಬ ಋಷಿಗಳೂ ಇಂದ್ರನ ಸಹಚಾರಿಗಳೆಂದೂ ಪ್ರಸಿದ್ಧವಾಗಿದೆ. ಇದರಿಂದಲೇ ಹಿಂದೆ ಹೇಳಿದ ಋಭ್ವಾದಿಗಳೂ ಮಧ್ಯಮಸ್ಥಾನರೆಂದು ವ್ಯಕ್ತವಾಗುತ್ತದೆ. ಆಪ್ನುವಂತಿ ಸ್ತುತ್ಯಾನ್ ಇತಿ ಆಪ್ತ್ಯಾಃ. ಇವರು ಸ್ತುತಿಮೂಲಕ ಸ್ತುತ್ಯರನ್ನು ಹೊಂದುತ್ತಾರೆ ಎಂದರ್ಥ. ಆಪ್ ಧಾತುವಿಗೆ ಯತ್ ಪ್ರತ್ಯಯದಿಂದ ಆಪ್ತ್ಯ ಎಂದು ನಿಪಾತಿತವಾಗಿದೆ. ಇಂದ್ರಸಹಚಾರಿಗಳಾದ ಮಧ್ಯಮಸ್ಥಾನದ ದೇವಗಣಕ್ಕೆ ಆಪ್ತ್ಯ ಎಂದು ಹೆಸರು. ಇವರು ಮುಂದೆ ಹೇಳುವ ಇಂದ್ರದೇವತಾಕವಾದ ಋಙ್ಮಂತ್ರದಲ್ಲಿ ಸ್ತುತಿಸಲ್ಪಡುತ್ತಾರೆ.

**ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿಮಾ ಗಭೀರಃ**
**ವಾತಸ್ಯೇವ ಪ್ರಜವೋ ನಾನ್ಯೇನ ಸ್ತೋಮೋ ವಸಿಷ್ಠಾ ಅನ್ವೇತವೇ ವಃ ॥**

ಎಲೈ ವಸಿಷ್ಠರೇ' ಪ್ರಸಿದ್ಧರಾದ ಈ ನಿಮ್ಮ ಮಹಾತ್ಮ್ಯವು ಸೂರ್ಯನ ಪ್ರಭೆಯಂತೆ ಕಂಗೊಳಿಸುತ್ತದೆ. ಸಮುದ್ರ ದಂತೆ ಗಂಭೀರಾತ್ಮಕವಾಗಿರುತ್ತದೆ. ನಿಮ್ಮ ಸ್ತುತಿಯು ವಾಯುವಿನಂತೆ ವೇಗಗಾಮಿಯಾಗಿರುತ್ತದೆ. ಇತರರ ಸ್ತುತಿಗಳಿಂದ ಅದನ್ನು ಮೀರಿಸಲು ಸಾಧ್ಯವಿಲ್ಲ.

ಋಗ್ವೇದಮಂತ್ರಗಳಲ್ಲಿ ದೇವತೆಗಳೇ ಅಲ್ಲದೆ, ಪಿತೃಗಳೂ, ಋಷಿಗಳೂ ಸ್ತುತಿಸಲ್ಪಡುತ್ತಾರೆಂದು ಯಾಸ್ಕರು ಹೇಳಿ ಋಷಿಗಳ ಪ್ರಶಂಸೆಯನ್ನು ವರ್ಣಿಸುವ ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದಾರೆ. (ನಿ. ೧೧-೨೦). ಈ ಋಕ್ಕಿನಲ್ಲಿ ವಸಿಷ್ಠ ಋಷಿಯ ಮತ್ತು ವಸಿಷ್ಠಪುತ್ರರೇ ಮೊದಲಾದ ವಸಿಷ್ಠವಂಶದವರ ಮಹಾತ್ಮ್ಯದ ವರ್ಣನೆ ಇದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕವಿಂಶತಿ ಖಂಡಃ

### ಇಪ್ಪತ್ತೊಂದನೆಯ ಖಂಡವು

ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ । ಆ ದರ್ಷತೇ ಶವಸಾ ಸಪ್ತ ದಾನೂನ ಪ್ರ ಸಾಕ್ಷತೇ ಪ್ರತಿಮಾನಾಸಿ ಭೂರಿ (ಋ. ಸಂ. ೧೦-೧೨೦-೬) ॥ ಸ್ತೋತವ್ಯಂ ಬಹುರೂಪಮುರುಭೂತಮೀಶ್ವರತಮಮಾಪ್ತವ್ಯಮಾಪ್ತವ್ಯಾನಾ ಮಾದೃಣಾತಿ ಯಃ ಶವಸಾ ಬಲೇನ ಸಪ್ತ ದಾತ್ರ್ಯಾನಿತಿ ವಾ ಸಪ್ತ ದಾನವಾನಿತಿ ವಾ ಪ್ರಸಾಕ್ಷತೇ ಪ್ರತಿಮಾನಾನಿ ಬಹೂನಿ ಸಾಕ್ಷತಿರಾಪ್ನೋತಿಕರ್ಮಾ ॥ ೨೧ ॥

ಸ್ತುಷೇಯ್ಯಂ ಪುರುವರ್ಪಸಮೃಭ್ವ ಭಿನತಮಮಾಪ್ತ್ಯ ಮಾಪ್ತ್ಯಾನಾಂ ।
ಆದರ್ಷತೇ ಶವಸಾ ಸಪ್ತದಾನೂನ್ ಪ್ರಸಾಕ್ಷತೇ ಪ್ರತಿಮಾನಾನಿ
ಭೂರಿ ॥

(ಋ. ಸಂ. ೮-೭-೨)

ಆಪ್ತ್ಯದೇವಗಣಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸ್ತೋತ್ರಾರ್ಹನಾದ ಬಹುರೂಪವುಳ್ಳ, ನಾನಾರೀತಿ ಪ್ರಕಾಶಿಸುವ, ಅತಿಶಯ ಐಶ್ವರ್ಯವುಳ್ಳ, ನಾನಾರೀತಿ ಪ್ರಕಾಶಿಸುವ, ಅತಿಶಯ ಐಶ್ವರ್ಯವುಳ್ಳ ಆಪ್ತ್ಯರ ಸ್ತುತಿಯಿಂದ ಹೊಂದಲು ಯೋಗ್ಯನಾದ ಇಂದ್ರನು ಬಲದಿಂದ ಏಳುಜನ ದಾನವರನ್ನು ನಾಶಪಡಿಸಿದನು. ಹಾಗೆಯೇ ರಾಕ್ಷಸಪ್ರತಿರೂಪ ವಾಗಿರುವ ಅವರ ಸೈನ್ಯವನ್ನೂ ಸೋಲಿಸಿ ಓಡಿಸಿದನು.

ಸ್ತೋತವ್ಯಂ ಬಹುರೂಪಮುರುಭೂತ ಮೀಶ್ವರತಮಮಾಪ್ತವ್ಯಾನಾ
ಮಾದೃಣಾತಿ ಯಃ ಶವಸಾ ಬಲೇನ ಸಪ್ತ ದಾತ್ಯನಿತಿ ವಾ ಸಪ್ತ
ದಾತ್ಯನಿತಿ ವಾ ಸಪ್ತ ದಾನವಾನಿತಿ ವಾ । ಪ್ರಸಾಕ್ಷತೇ ಪ್ರತಿ
ಮಾನಾನಿ ಬಹೂನಿ । ಸಾಕ್ಷತಿರಾಪ್ನೋತಿಕರ್ಮಾ ॥ ೨೧ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವರ್ಪ ರೂಪನಾಮದಲ್ಲಿ ಪಠಿತವಾಗಿದೆ. (ನಿಘ. ೩-೭-೩). ಸಾಕ್ಷತಿಯೆಂಬುದು ನಿರುಕ್ತದಲ್ಲಿ ಹೇಳಿದ ಧಾತು. ವ್ಯಾಪ್ತ್ಯರ್ಥದಲ್ಲಿ ಹೇಳಿದೆ ಇಲ್ಲಿ ತಿರಸ್ಕಾರಾರ್ಥವು ವಿವಕ್ಷಿತವಾಗಿದೆ. ದಾನು ಪದಕ್ಕೆ ಮೇಘ ಅಥವಾ ಅಸುರರು ಎಂದರ್ಥ.

ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮ ಮಾಪ್ತ್ಯಮಾಪ್ತ್ಯಾನಾಂ।
ಆ ದರ್ಷತೇ ಶವಸಾ ಸಪ್ತ ದಾನೂನ್ಪ್ರ ಸಾಕ್ಷತೇ ಪ್ರತಿಮಾನಾನಿ
ಭೂರಿ ॥ ೬ ॥

ಯಾವ ಇಂದ್ರನು ತನ್ನ ಸಾಮರ್ಥ್ಯದಿಂದ ವೃತ್ರ, ನಮುಚಿ, ಕುಯವ ಮೊದಲಾದ ಏಳುವಂದಿ ಪ್ರಮುಖ ದಾನವರನ್ನು ಅಥವಾ ಮೇಘಗಳನ್ನು ಸೀಳಿಹಾಕಿದನೋ, ಯಾವ ಇಂದ್ರನು ಶತ್ರುಗಳ ಅತಿಶಯವಾದ ಬಲವನ್ನು ಸಹಿಸ ಬಲ್ಲನೋ ಅಥವಾ ಶತ್ರುಗಳ ದುರ್ಭೇದ್ಯವಾದ ಸ್ಥಾನಗಳನ್ನು ಆಕ್ರಮಿಸಿ ಹಿಡಿಯಬಲ್ಲನೋ ಅಂತಹ ಸ್ತುತಿಗೆ ಪಾತ್ರನಾದವನೂ ಅನೇಕ ರೂಪಗಳನ್ನು ಧರಿಸಬಲ್ಲವನೂ, ಅತ್ಯಂತ ಪ್ರಕಾಶಮಾನನೂ, ಸರ್ವರಿಗೂ ಪ್ರಭುವೂ ಪ್ರಾರ್ಥಿಸಿ ಕರೆಯಲ್ಪಡಬೇಕಾದ ದೇವತೆಗಳ ಮಧ್ಯದಲ್ಲಿ ಅತಿಶಯವಾಗಿ ಪ್ರಾರ್ಥಿತನೂ ಆದ ಇಂದ್ರನನ್ನು ನಾನು ಸ್ತುತಿಸುತ್ತೇನೆ.

ಈ ಋಕ್ಕಿನಲ್ಲಿರುವ ಆಪ್ತ್ಯಾನಾಂ ಎಂಬ ಶಬ್ದದ ಅರ್ಥವಿವರಣೆ ಮಾಡುವಾಗ ಯಾಸ್ಕರು ಈ ಋಕ್ಕಿಗೆ ನಿರ್ವಚನ ವನ್ನು ಹೇಳಿದ್ದಾರೆ—

ಆಪ್ತ್ಯಃ । ಆಪ್ತ್ಯ ಆಪ್ನೋತೇಃ । ತೇಷಾಮೇಷಾ ನಿಪಾತೋ ಭವತ್ಯೈಂದ್ರ್ಯಾಮೃಚಿ ॥
ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ ॥
ಆ ದರ್ಷತೇ ಶವಸಾ ಸಪ್ತದಾನೂನ್ಪ್ರಸಾಕ್ಷತೇ ಪ್ರತಿಮಾನಾನಿ ಭೂರಿ ॥ ಸ್ತೋತವ್ಯಂ ಬಹುರೂಪಮು-
ರುಭೂತಮೀಶ್ವರತಮಮಾಪ್ತವ್ಯಮಾಪ್ತವ್ಯಾನಾಮಾದೃಣಾತಿ ಯ॥ ಶವಸಾ ಬಲೇನ ಸಪ್ತ ದಾತೄನಿತಿ
ವಾ ಸಪ್ತ ದಾನವಾನಿತಿ ವಾ ಪ್ರಸಾಕ್ಷತೇ ಪ್ರತಿಮಾನಾನಿ ಬಹೂನಿ ॥

(ನಿ. ೧೧–೨–೧)

ಆಪ್ತ್ಯ—ಎಂಬ ಶಬ್ದವು ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇಂದ್ರದೇವತಾಕವಾದ ಪ್ರಕೃತಋಕ್ಕಿನಲ್ಲಿ ಪ್ರಸಂಗವಶದಿಂದ ಈ ಶಬ್ದ ಪ್ರಯೋಗ..ದೆ.

ಸ್ತುಷೇಯ್ಯಂ ಪುರುವರ್ಪಸಮೃಭ್ವಂ—ಸ್ತೋತವ್ಯಂ ಬಹುರೂಪಮುರುಭೂತಮೀಶ್ವರತಮಂ ॥ ಈ ಪಾದದಲ್ಲಿರುವ ಶಬ್ದಗಳೂ ಮುಂದಿನ ಪಾದದಲ್ಲಿರುವ ಶಬ್ದಗಳೂ ಇಂದ್ರನ ಗುಣಗಳನ್ನು ವರ್ಣಿಸುವ ವಿಶೇಷಣ ಪದಗಳಾಗಿವೆ. ಇಂದ್ರನು ಸ್ತುತಿಸಲ್ಪಡಲು ಯೋಗ್ಯನಾದವನು. ಇಂದ್ರನು ಮಹಾಮಹಿಮನಾದ ದೇವತೆಯಾದ್ದರಿಂದ ಅವನನ್ನು ಜನರೆಲ್ಲರೂ ಸ್ತುತಿಸುವರು. ಇಂದ್ರನು ಅನೇಕ ರೂಪಗಳನ್ನು ಧರಿಸಬಲ್ಲನು. ಇಂದ್ರೋಮಾಯಾಭಿಃ ಪುರುರೂಪ ಏತಿ ಎಂಬ ಶ್ರುತಿ ವಾಕ್ಯದಂತೆ ಇಂದ್ರನು ತನ್ನ ಶಕ್ತಿಯಿಂದ ಅಥವಾ ಮಹಿಮೆಯಿಂದ ತನಗೆ ಬೇಕಾದ ರೂಪಗಳನ್ನು ಧರಿಸಲು ಸಮರ್ಥನಾಗಿರು ವನು. ಋಭ್ವಂ ಎಂದರೆ ಉರುಭೂತಂ ಎಂದು ಹೇಳಿರುವರು. ದೊಡ್ಡದಾದ ಆಕಾರ ಉಳ್ಳವನು ಅಥವಾ ಶ್ರೇಷ್ಠವಾದ ಮಹಿಮೆಯುಳ್ಳವನು ಎಂದರ್ಥವು.

ಇನತಮಂ ಆಪ್ತ್ಯಂ ಆಪ್ತ್ಯಾನಾಂ—ಈಶ್ವರತಮಂ ಆಪ್ತವ್ಯಂ ಆಪ್ತವ್ಯಾನಾಂ ॥ ಇನ ಎಂದರೆ ಸ್ವಾಮಿ, ಈಶ್ವರ, ಪ್ರಭು, ಎಂದರ್ಥವು. ಇನತಮನೆಂದರೆ ಅತಿಶಯವಾದ ಅಥವಾ ಶ್ರೇಷ್ಠವಾದ ಪ್ರಭುವು ಎಲ್ಲರಿಗೂ ಒಡೆಯನಾದವನು

ಎಂದಭಿಪ್ರಾಯವು, ಆಪ್ತ ಎಂದರೆ ಹೊಂದಲರ್ಹನಾದವನು ಎಂದರೆ ಅವನನ್ನು ಹೊಂದಬೇಕೆಂದು ಅಥವಾ ಅವನು ತಮಗೆ ದೊರೆಯಬೇಕೆಂದು ಅಥವಾ ತಮ್ಮ ಸಮೀಪಕ್ಕೆ ಬರಬೇಕೆಂದು ಜನರು ಅಪೇಕ್ಷಿಸುತ್ತಾರೆ. ಇಂತಹ ಗುಣವಿಶಿಷ್ಟರಾದ ದೇವತೆಗಳಲ್ಲಿ ಇಂದ್ರನು ಆಪ್ತತ್ವಂ ಅತಿಶಯವಾಗಿ ತಮ್ಮ ಸಮೀಪವರ್ತಿಯಾಗಿರಬೇಕೆಂದು ಅಪೇಕ್ಷಿಸಲ್ಪಡುವನು ಎಂದರೆ ಜನರು ಇಂದ್ರನನ್ನು ಸಮೀಪವರ್ತಿಯಾಗಿದ್ದು ತಮ್ಮ ಸ್ತೋತ್ರಗಳನ್ನು ಕೇಳಿ, ತಮಗೆ ಬೇಕಾದ ಇಷ್ಟಾರ್ಥಗಳನ್ನು ಒದಗಿಸಿಕೊಡಲಿ ಎಂದು ಜನರು ಅಪೇಕ್ಷಿಸುವರು ಆದ್ದರಿಂದಲೇ ಎಲ್ಲಾ ದೇವತೆಗಳಿಗಿಂತಲೂ ಹೆಚ್ಚಾಗಿ ಜನರು ಇಂದ್ರನನ್ನು ಬಯಸುವರು ಎಂದು ಮುಖ್ಯಾಭಿಪ್ರಾಯವು.

ಆ ದರ್ಷತೇ ಶವಸಾ ಸಪ್ತ ದಾನೂನ್—ಆ ದೃಣಾತಿ ಯಃ ಶವಸಾ ಬಲೇನ ಸಪ್ತ ದಾತೃನಿತಿ ವಾ ಸಪ್ತ ದಾನವಾನಿತಿ ವಾ॥ ಇಲ್ಲಿ ದಾನವಾನ್ ಎಂಬ ಶಬ್ದಕ್ಕೆ ಎರಡುವಿಧ ಅರ್ಥವನ್ನು ಹೇಳಿದ್ದಾರೆ. ಸಪ್ತ ದಾತೃನ್ ಸಪ್ತಸರ್ಪಣ ಶೀಲಾನ್ ವೃಷ್ಟ್ಯುದಕಪ್ರದಾತೃನ್ ಮೇಘಾನ್ । ಅಂತರಿಕ್ಷದಲ್ಲಿ ಸಂಚರಿಸುತ್ತಿರುವ, ವೃಷ್ಟ್ಯುದಕಗಳನ್ನು ಕೊಡುವ ಎಂದರೆ ಸುರಿಸುವ ಮೇಘಗಳನ್ನು ಎಂದು ಒಂದು ವಿಧವಾದ ಅರ್ಥವು. ಅಥವಾ ದಾನವಾನಿತಿ ವಾ—ದಾನವರನ್ನು, ಕಶ್ಯಪಋಷಿಯ ಪತ್ನಿಯರಲ್ಲಿ ಒಬ್ಬಳಾದ ದನು ಎಂಬ ಸ್ತ್ರೀಯಲ್ಲಿ ಉತ್ಪನ್ನರಾದ ಪುತ್ರರಿಗೆ ದಾನವರೆಂದು ಹೆಸರು. ಇವರು ಕೆಟ್ಟ ಸ್ವಭಾವದವರಾದ್ದರಿಂದ ಇವರು ಅಸುರರ ಗುಂಪಿಗೆ ಸೇರಿದವರೆಂದು ಹೇಳುವ ಪದ್ಧತಿ ಇದೆ. ಆದ್ದರಿಂದ ಈ ವಾಕ್ಯಕ್ಕೆ—ಇಂದ್ರನು ತನ್ನ ಶಕ್ತಿ ಸಾಮರ್ಥ್ಯದಿಂದ ಸರಿಯುತ್ತಿರುವ ಮೇಘಗಳನ್ನು ಅಥವಾ ದಾನವರೆಂಬ ಅಸುರರನ್ನು ಸೀಳಿಹಾಕುತ್ತಾನೆ ಎಂದರ್ಥವು

ಪ್ರಸಾಕ್ಷತೇ ಪ್ರತಿಮಾನಾನಿ ಭೂರಿ—ಪ್ರ ಸಾಕ್ಷತೇ ಪ್ರತಿಮಾನಾನಿ ಬಹೂನಿ ॥ ಇಲ್ಲಿ ಸಾಕ್ಷತಿರಾಪ್ನೋತಿ ಕರ್ಮಾ ಎಂದು ಹೇಳಿರುವುದರಿಂದ ಪ್ರಸಾಕ್ಷತೇ ಎಂದರೆ ಸಮೀಪಿಸುತ್ತಾನೆ ಎಂದರೆ ಸಮೀಪಿಸಿ ಸೋಲಿಸುತ್ತಾನೆ ಎಂದರ್ಥವು. ಇಂದ್ರನು ಅನೇಕ ಅಸುರರ ಶಕ್ತಿಸಾಮರ್ಥ್ಯಗಳನ್ನು ಪರಾಭವಗೊಳಿಸುತ್ತಾನೆ ಅಥವಾ ಅಸುರರ ಸ್ಥಾನಗಳನ್ನು ಸಮೀಪಿಸಿ ಅವುಗಳನ್ನು ಗೆಲ್ಲುತ್ತಾನೆ ಎಂದಭಿಪ್ರಾಯವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತೊಂದನೆಯ ಖಂಡವು ಮುಗಿದಿದೆ.

---

# ಅಥ ದ್ವಾವಿಂಶತಿ ಖಂಡಃ

## ಇಪ್ಪತ್ತೆರಡನೆಯ ಖಂಡವು

**ಅಥಾತೋ ಮಧ್ಯಸ್ಥಾನಾ ಸ್ತ್ರಿಯಸ್ತಾಸಾಮದಿತಿಃ ಪ್ರಥಮಾಗಾಮಿನೀ ಭವತ್ಯದಿತಿರ್ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೨೨ ॥**

## ಅಥಾತೋ ಮಧ್ಯಸ್ಥಾನಾಃ ಸ್ತ್ರಿಯಃ ||

ಬಹುವಚನ ವಿಶಿಷ್ಟವಾದ, ಮಧ್ಯಮದೇವತಾಗಣವಾಚಕವಾದ ವಿಭ್ವಾದಿಗಳನ್ನು ವ್ಯಾಖ್ಯಾನಮಾಡಿದುದಾಯಿತು. ಇನ್ನುಮುಂದೆ ಲಿಂಗವಿಶಿಷ್ಟವಾದುದನ್ನು ವ್ಯಾಖ್ಯಾನಮಾಡುವುದರಿಂದ. ಅಥ ಪದವು ಅಧಿಕಾರಾಂತರವನ್ನು ತಿಳಿಸುತ್ತದೆ. ಮಧ್ಯಮಸ್ಥಾನವುಳ್ಳ ಸ್ತ್ರೀಯರು ಇನ್ನುಮುಂದೆ ನಿರ್ದಿಷ್ಟರಾಗುತ್ತಾರೆ ಎಂದರ್ಥ.

**ತಾಸಾಮದಿತಿಃ ಪ್ರಥಮಾಗಾಮಿನೀ ಭವತಿ || ಅದಿತಿಃ ವ್ಯಾಖ್ಯಾತಾ |**
**ತಸ್ಯಾ ಏಷಾ ಭವತಿ || ೨೨ ||**

ಅವರಲ್ಲಿ ಮೊದಲು ಅದಿತಿಯು ಉಪಸ್ಥಿತಳಾಗುತ್ತಾಳೆ. 'ಅದೀನಾ ದೇವಮಾತಾ' (ನಿ. ೨-೨೨) ಎಂದು ಇದರ ನಿರ್ವಚನವನ್ನು ಹಿಂದೆ ಹೇಳಿರುತ್ತಾರೆ. ಮುಂದೆ ಹೇಳುವ ಮಂತ್ರವು ಅದಿತಿ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತ ಎರಡನೆಯ ಖಂಡವು ಸಮಾಪ್ತವು.

---

## ಅಥ ತ್ರಯೋವಿಂಶತಿ ಖಂಡಃ

### ಇಪ್ಪತ್ತಮೂರನೆಯ ಖಂಡವು

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸತಿ | ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು (ಋ. ಸಂ. ೧೦-೬೪-೫) || ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ಕರ್ಮಣಿ ರಾಜಾನೌ ಮಿತ್ರಾವರುಣೌ ಪರಿಚರಸಿ ವಿವಾಸತಿಃ ಪರಿಚರ್ಯಾಯಾಂ ಹವಿಷ್ಮಾಂ ಆವಿವಾಸತೀತ್ಯಾಶಾಸ್ತೇರ್ವಾತೂರ್ತಪಂಥಾ ಅತ್ವರಮಾಣಪಾಂಥಾ ಬಹುರಥೋಽರ್ಯಮಾದಿತ್ಯೋಽರೀನ್ನಿಯಚ್ಛತಿ ಸಪ್ತಹೋತಾ ಸಪ್ತಾಸ್ಮೈ ರಶ್ಮಯೋ ರಸಾನಭಿ ಸಂನಾಮಯಂತಿ ಸಪ್ತೈನಮೃಷಯಃ ಸ್ತುವಂತೀತಿ ವಾ ವಿಷಮರೂಪೇಷು ಜನ್ಮಸು ಕರ್ಮಸೂದಯೇಷ್ವಾದಿತ್ಯೋ ದಕ್ಷ ಇತ್ಯಾಹುರಾದಿತ್ಯಮಧ್ಯೇ ಚ ಸ್ತುತೋಽದಿತಿರ್ದಾಕ್ಷಾಯಣೀ ಅದಿತೇರ್ದಕ್ಷೋ

ಅಜಾಯತ ದಕ್ಷಾದ್ವಾದಿತಿಃ ಪರೀತಿ ಚ| ತತ್ಕಥಮುಪಪದ್ಯೇತ ಸಮಾನಜನ್ಮಾನೌ ಸ್ಯಾತಾ-ಮಿತ್ಯಪಿ ವಾ ದೇವಧರ್ಮೇಣೇತರೇತರ ಜನ್ಮಾನೌ ಸ್ಯಾತಾಮಿತರೇತರಪ್ರಕೃತೀ ಅಗ್ನಿರಪ್ಯದಿತಿರುಚ್ಯತೇ ತಸ್ಮೈಷಾ ಭವತಿ || ೨೩ ||

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ
ವಿವಾಸಸಿ | ಅತೂರ್ತ ಪಂಥಾಃ ಪುರುರಥೋ ಅರ್ಯಮಾ
ಸಪ್ತಹೋತಾ ವಿಷುರೂಪೇಷು ಜನ್ಮಸು ||

(ಋ ಸಂ. ೮–೨–೬).

ಅದಿತಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಾತಃ ಕಾಲಾಭಿಮಾನಿದೇವತೆಯೇ ಸೂರ್ಯನ ಉದಯ್ಯ ವಾಗುವಾಗ ಯಾವಾಗ ನೀನು ಜನ್ಮಹೊಂದಿದೆಯೋ ಅದರಿಂದ ಮಿತ್ರಾವರುಣದೇವಾತಕವಾದ ಹಗಲು ರಾತ್ರಿಗಳನ್ನು ವ್ಯಾಪಿಸಿರುವಿ. ಸಕಲಲೋಕೇಶ್ವರರಾದ ಅವರಲ್ಲಿ ದಕ್ಷನು ಅಂದರೆ ಸೂರ್ಯನು ನಿತ್ಯವೂ ನಿಯತಿಗತಿಯುಳ್ಳವನೂ, ನಾನಾ ಗಮನವುಳ್ಳವನೂ, ಕತ್ತಲೆಯನ್ನು ಹೋಲಾಡಿಸುವವನೂ, ಸಪ್ತರಶ್ಮಿಗಳಿಂದ ಕೂಡಿದವನಾಗಿ ನಾನಾರೂಪಗಳಲ್ಲಿ ಉದಯ ಹೊಂದುತ್ತಾನೆ.

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ಕರ್ಮಣಿ ರಾಜಾನೌ ಮಿತ್ರಾವ-ರುಣೌ ಪರಿಚರಿಸಿ | ವಿವಾಸತಿಃ ಪರಿಚರ್ಯಾಯಾಂ—' ಹವಿಷ್ಮಾಂ ಆವಿವಾಸತಿ ' ಇತಿ | ಆಶಾಸ್ತೇ ವಾ | ಅತೂರ್ತಪಂಥಾ ಅತ್ವರಮಾಣಪಂಥಾಃ | ಬಹುರಥೋಽರ್ಯಮಾಽಽದಿತ್ಯೋಽರೀ-ನ್ನಿಯಚ್ಛತಿ | ಸಪ್ತಹೋತಾ—ಸಪ್ತಾಸ್ಮೈರಶ್ಮಯೋ ರಸಾನಭಿಸ-ನ್ನಮಯಂತಿ | ಸಪ್ತೈನಮೃಷಯಃ ಸ್ತುವಂತೀತಿ ವಾ | ವಿಷಮರೂಪೇಷು ಜನ್ಮಸು ಕರ್ಮಸೂದಯೇಷು ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅದಿತಿಯೇ! ಯಾವಾಗ ನಿನ್ನಿಂದ ಸೂರ್ಯನು ಜನಿಸಿದನೋ. ಹುಟ್ಟಿದೊಡನೆಯೇ ಕರ್ಮದಲ್ಲಿ ಪ್ರವೃತ್ತನಾದನೋ ಆದುದರಿಂದ ಲೋಕೇಶ್ವರನಾದನು. ಇದರಿಂದ ನೀನು ಆ ಮಿತ್ರಾವರುಣರನ್ನು ಉಪಚರಿಸುವಿ. ವಿವಾಸತಿ ಧಾತುವಿಗೆ ಪರಿಚರಣಾರ್ಥವಿದೆಯೆಂದು ಶ್ರುತಿಪ್ರಮಾಣವನ್ನು ತೋರಿಸುತ್ತಾರೆ. ಅಗ್ನಿಯೇ ಯಾರು ನಿನ್ನನ್ನು ಉಪಚರಿಸುವರೋ ಅವರಲ್ಲಿ ದಯತೋರು ಎಂದು ಮಂತ್ರಾರ್ಥ. ಅಥವಾ ನನ್ನ ಪುತ್ರರು ಹೀಗೆಯೇ ಲೋಕೋಪಕಾರ ಪ್ರವೃತ್ತರಾಗಿರಲಿಯೆಂದು ನೀನು ಆಶಾಸನೆಮಾಡುವಿಎಂದರ್ಥ. ಆದಿತ್ಯನ ಸಪ್ತರಶ್ಮಿಗಳು ರಸಾಹರಣಮಾಡುತ್ತವೆಯೆಂದು ಪ್ರಸಿದ್ಧಿಇದೆ. ಅಥವಾ ಸಪ್ತ ಋಷಿಗಳಿಂದ ಸ್ತುತಿಸಲ್ಪಡುವವನೆಂದರ್ಥ.

ಆದಿತ್ಯೋ ದಕ್ಷ ಇತ್ಯಾಹುರಾದಿತ್ಯಮಧ್ಯೇ ಚ ಸ್ತುತಃ ||

ತುವಿಜಾತೋ ವರುಣೋ ದಕ್ಷೋ ವಂಶಃ (ಋ. ಸಂ. ೨-೭-೬-೧) ಇತ್ಯಾದಿಮಂತ್ರಗಳಲ್ಲಿ ಆದಿತ್ಯಮಧ್ಯದಲ್ಲಿ ಸ್ತುತನಾದುದರಿಂದ ದಕ್ಷ ಅಂದರೆ ಆದಿತ್ಯನೆಂದು ದೇವತಾತತ್ವ ತಿಳಿದವರು ಹೇಳುತ್ತಾರೆ.

ಅದಿತಿ ರ್ದಾಕ್ಷಾಯಣೀ ||
ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿ ಪರಿ ಇತಿಚ
(ಋ. ಸಂ. ೮-೩-೧-೪)

ತತ್ಕಥಮುಪಪದ್ಯೇತ ? ||

ಇಲ್ಲಿ ತೋರುವ ಆಕ್ಷೇಪವನ್ನು ವಿವರಿಸುತ್ತಾರೆ. ಇತಿಹಾಸಕುಶಲರು ದಕ್ಷನ ಪುತ್ರಿಯಾದ ದಾಕ್ಷಾಯಣಿಯನ್ನು ಅದಿತಿಯೆಂದು ಹೇಳುತ್ತಾರೆ. ಮಂತ್ರದಲ್ಲಿ ಇನ್ನೂ ವಿರುದ್ಧವಾಗಿ ತೋರುತ್ತದೆ. ಅದಿತಿಯಿಂದ ದಕ್ಷನು ಹುಟ್ಟಿದನು. ದಕ್ಷನಿಂದ ಅದಿತಿಯು ಜನ್ಮಪಡೆದಳೆಂದು ಮಂತ್ರ ಹೇಳುತ್ತದೆ. ಪ್ರಸ್ತುತಮಂತ್ರದಲ್ಲಿ ಅದಿತಿಯಿಂದ ದಕ್ಷನಾದ ಆದಿತ್ಯನು ಹುಟ್ಟಿರುವನೆಂದು ಹೇಳಿದೆ. ಹೀಗೆ ಪರಸ್ಪರ ವಿರುದ್ಧವಾದುದರಿಂದ ಹೇಗೆ ನಿರ್ಣಯಿಸುವುದು ಎಂದು ಆಕ್ಷೇಪ.

ಸಮಾನಜನ್ಮಾನೌ ಸ್ಯಾತಾಮ್ || ಇತಿ ||

ಏಕಕಾಲದಲ್ಲಿ ಉತ್ಪನ್ನರಾದವರು ಆಗಬಹುದು. ಅಂದರೆ ಪ್ರಾತಃಕಾಲವಾದಮೇಲೆ ಸೂರ್ಯನ ಉದಯ. ಸೂರ್ಯೋದಯ ನಿಮಿತ್ತವಾಗಿ ಉಷಃ ಕಾಲ. ಹೀಗೆ ಪರಸ್ಪರಾಶ್ರಯವಿರುವುದರಿಂದ ಸಂಗತವಾಗುತ್ತದೆ.

ಅಪಿ ವಾ-ದೇವಧರ್ಮೇಣೇತರೇತರಜನ್ಮಾನೌ ಸ್ಯಾತಾಮಿತರೇತರ ಪ್ರಕೃತೀ ||

ಅಥವಾ ಇವರು ದೇವತೆಗಳಾದುದರಿಂದ ಮಹಾಮಹಿಮತ್ವವಿರುವುದರಿಂದ ಅದಿತಿಯನ್ನು ಅಪೇಕ್ಷಿಸಿ ದಕ್ಷನಿಗೆ ಕಾರಣತ್ವ, ಕಾರ್ಯತ್ವವನ್ನೂ ಹೇಳಬಹ ದು. ಜನ್ಮ ಅಂದರೆ ಕಾರ್ಯ, ಪ್ರಕೃತಿಯೆಂದರೆ ಕಾರಣ.

ಅಗ್ನಿರಪ್ಯದಿತಿರುಚ್ಯತೇ । ತಸ್ಯೈಷಾ ಭವತಿ || ೨೩ ||

ಅಗ್ನಿಯೂ ಕೂಡಾ ಅದಿತಿಪದದಿಂದ ಅಭಿಹಿತವಾಗುವುದರಿಂದ ವ್ಯಭಿಚರಿತವಾಗುತ್ತದೆಂದು ತೋರಿಸುತ್ತಾರೆ, ಮುಂದೆ ಹೇಳುವ ಮಂತ್ರವು ಅದಿತಿಶಬ್ದವಾಚ್ಯವಾದ ಅಗ್ನಿಸ್ತುತಿಯನ್ನು ಪ್ರತಿಪಾದಿಸುತ್ತದೆ.

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ । ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತ-ಹೋತಾ ವಿಷುರೂಪೇಷು ಜನ್ಮಸು || ೫ ||

ಎಲೈ ಪೃಥ್ವಿಯೇ, (ಅದಿತಿಯೇ) ನೀನು ಸೂರ್ಯನ ಉತ್ಪನ್ನಕಾಲದಲ್ಲಿ ಅವನ ಪೂಜಾಕರ್ಮಕ್ಕಾಗಿ ಪ್ರಕಾಶಮಾನರಾದ ಮಿತ್ರಾವರುಣರನ್ನು ಪೂಜಿಸುತ್ತೀಯೆ. ಕತ್ತಲೆಯನ್ನು ನಿರೋಧಿಸುವ ಸೂರ್ಯನು ಕರ್ಮಾನುಗುಣವಾದ ಅನೇಕ ರೂಪಗಳುಳ್ಳ ತನ್ನ ಉದಯಾಸ್ತಮಯಕಾಲಗಳಲ್ಲಿ ಏಳುವಿಧವಾದ ರಶ್ಮಿಗಳುಳ್ಳವನಾಗಿಯೂ, ವೇಗವಿಲ್ಲದ ಗಮನಮಾರ್ಗಗಳುಳ್ಳವನಾಗಿಯೂ ಅಥವಾ ಒಂದೇಸಮನಾದ ಗಮನವುಳ್ಳವನಾಗಿಯೂ, ಅನೇಕ ರಥಗಳುಳ್ಳವನಾಗಿಯೂ ಎಂದರೆ ಬಹುವೇಗವುಳ್ಳವನಾಗಿಯೂ ಇರುತ್ತಾನೆ.

ಅದಿತಿಶಬ್ದದ ನಿರ್ವಚನವನ್ನು ಹೇಳುವಾಗ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

ಅದಿತಿಃ । ಅದಿತಿರದೀನಾ ದೇವಮಾತಾ (ನಿ. ೪–೨೨)

ಅದಿತಿಯು ದೇವತೆಗಳಿಗೆ ಮಾತೆಯು. ಇವಳು ದೀನಳಲ್ಲವಾದುದರಿಂದ ಇವಳಿಗೆ ಅದಿತಿಯೆಂಬ ಹೆಸರು ಬಂದಿದೆ ಅದಿತಿಯ ಮಕ್ಕಳು ಎಂದರೆ,

ಅಷ್ಟೌ ಪುತ್ರಾಸೋ ಅದಿತೇಃ । ......... ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್‌ಂಶಶ್ಚ । ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ ।

(ತೈ. ಆ. ೧–೧೩–೩)

ಅದಿತಿಗೆ ಮಿತ್ರ, ವರುಣ, ಧಾತಾ, ಆರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬ ಎಂಟುಮಂದಿ ಪುತ್ರರೆಂದು ಹೇಳಿದೆ. ಈ ಅದಿತಿಶಬ್ದವಿರುವ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರ್ವಚನವನ್ನು ಈರೀತಿ ಹೇಳಿದಾರೆ—

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ಕರ್ಮಣಿ ರಾಜಾನೌ ಮಿತ್ರಾವರುಣೌ ಪರಿಚರಿಸಿ । ವಿವಾಸತಿಃ ಪರಿಚರ್ಯಾಯಾಂ । ಹವಿಷ್ಮಾನ್ ಆವಿವಾಸತಿ । ಇತ್ಯಾಶಾಸ್ತೇರ್ವಾ ಅತೂರ್ಥಪಂಥಾ ಅತ್ವರಮಾಣಪಂಥಾ ಬಹುರಥೋ ಅರ್ಯಮಾದಿತ್ಯೋಽರೀನ್ನಿಯಚ್ಛತಿ ಸಪ್ತಹೋತಾ ಸಪ್ತಾಸ್ಮೈ ರಶ್ಮಯೋ ರಸಾನಭಿಸನ್ನಾಮಯಂತಿ ಸಪ್ತೈನಮೃಷಯಃ ಸ್ತುವಂತೀತಿ ವಾ ವಿಷಮರೂಪೇಷು ಜನ್ಮಸು ಕರ್ಮಸೂದಯೇಷು ॥

(ನಿ. ೧೧–೨೩)

ಎಲೈ ಅದಿತಿಯೇ, ದಕ್ಷನ ಜನನಸಮಯದಲ್ಲಿ ನೀನು ರಾಜರಾದ (ರಾಜರಂತೆ ಪ್ರಕಾಶಿಸುವ) ಮಿತ್ರಾವರುಣರನ್ನು ಸೇವಿಸುತ್ತೀಯೆ. ವಿವಾಸತಿ ಧಾತುವಿಗೆ ಪರಿಚರ್ಯಾ ಎಂದರೆ ಸೇವಿಸುವುದು ಎಂದರ್ಥವು. ಈ ಅರ್ಥವನ್ನು ಹವಿಷ್ಮಾನ್ ಆವಿವಾಸತಿ ಎಂಬ ಶ್ರುತಿವಾಕ್ಯವು ಸಮರ್ಥಿಸುವುದು ಅಥವಾ ಈ ಧಾತುವಿಗೆ ಪ್ರಾರ್ಥಿಸುವುದು, ಬಯಸುವುದು ಎಂಬ ಅರ್ಥವೂ ಇರುವುದು. ಇಲ್ಲಿರುವ ಆರ್ಯಮಾ ಶಬ್ದಕ್ಕೆ ಆದಿತ್ಯನೆಂದು ಅರ್ಥವು. ಈ ಆದಿತ್ಯನು ಸಂಚರಿಸುವ ಮಾರ್ಗವು ನಿರ್ಬಾಧಿತವಾಗಿರುವುದು ಎಂದರೆ ಅವನನ್ನು ಯಾರೂ ತಡೆದು ನಿಲ್ಲಿಸುವಂತಿಲ್ಲ ಮತ್ತು ಇವನ ಸಂಚಾರವು ಅತಿವೇಗವಿಲ್ಲದೆ ಒಂದೇ ಸಮನಾಗಿರುವುದು ಅಥವಾ ಇವನ ರಥವು ಬಹುವೇಗವಾಗಿ ಸಂಚರಿಸುವ ಶಕ್ತಿಯುಳ್ಳದ್ದಾಗಿರುವುದು. ಸಪ್ತಹೋತಾ ಎಂಬ ಶಬ್ದಕ್ಕೆ ಏಳು ರಶ್ಮಿಗಳು ಎಂದರ್ಥವು. ಸೂರ್ಯನ ಏಳುವಿಧವಾದ ರಶ್ಮಿಗಳು ಸೂರ್ಯನ ಕಾರ್ಯವಾದ ರಸಾದಿಗಳನ್ನು

ಹೀರುವುದರಲ್ಲಿ ಸಮರ್ಥವಾಗಿರುವವು ಅಥವಾ ಸಪ್ತಹೋತಾ ಎಂಬ ಶಬ್ದಕ್ಕೆ ಸಪ್ತಋಷಿಗಳು ಎಂದೂ ಅರ್ಥಮಾಡಬಹುದು. ಈ ಸಪ್ತರ್ಷಿಗಳು ಈ ಸೂರ್ಯನನ್ನು ಸ್ತುತಿಸುವರು. ವಿಷಮರೂಪೇಷು ಜನ್ಮಸು ಎಂಬ ಶಬ್ದಗಳಿಗೆ ವ್ಯತ್ಯಸ್ತವಾದ ಜನ್ಮಕಾಲಗಳಲ್ಲಿ ಎಂದರೆ ಸೂರ್ಯೋದಯ ಮತ್ತು ಸೂರ್ಯಾಸ್ತಮಯ ಎಂದರ್ಥವು.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಇಪ್ಪತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ವಿಂಶತಿ ಖಂಡಃ

## ಇಪ್ಪತ್ತನಾಲ್ಕನೆಯ ಖಂಡವು

ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವತಾತಾ। ಯಂ ಭದ್ರೇಣ ಶವಸಾ ಚೋದಯಾಸಿ ಪ್ರಜಾವತಾ ರಾಧಸಾ ತೇ ಸ್ಯಾಮ। (ಋ. ಸಂ. ೧-೯೪-೧೫) ಯಸ್ಮೈ ತ್ವಂ ಸುದ್ರವಿಣೋ ದದಾಸ್ಯನಾಗಾಸ್ತ್ವಮನಪರಾಧತ್ವಮದಿತೇ ಸರ್ವಾಸು ಕರ್ಮತತಿಷ್ವಾಗ ಆಙ್ಪೂರ್ವಾದ್ಗಮೇರೇನ ಏತೇಃ ಕಿಲ್ಮಿಷಂ ಕಿಲ್ಬಿದಂ ಸುಕೃತ ಕರ್ಮಣೋ ಭಯಂ ಕೀರ್ತಿಮಸ್ಯ ಭಿನತ್ತೀತಿ ವಾ ಯಂ ಭದ್ರೇಣ ಶವಸಾ ಬಲೇನ ಚೋದಯಸಿ ಪ್ರಜಾವತಾ ಚ ರಾಧಸಾ ಧನೇನ ತೇ ವಯಮಿಹ ಸ್ಯಾಮೇತಿ ಸರಮಾ ಸರಣಾತ್ತಸ್ಯಾ ಏಷಾ ಭವತಿ ॥ ೨೪ ॥

ಯಸ್ಮೈತ್ವಂ ಸುದ್ರವಿಣೋ ದದಾಶೋಽನಾಗಸ್ತ್ವಮದಿತೇ ಸರ್ವ।
ತಾತಾ। ಯಂ ಭದ್ರೇಣ ಶವಸಾ ಚೋದಯಾಸಿ ಪ್ರಜಾವತಾ
ರಾಧಸಾ ತೇ ಸ್ಯಾಮ॥

ಋ. ಸಂ. ೧-೬-೩)

ಅದಿತಿಪದವಾಚ್ಯ ಅಗ್ನಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಶೋಭನಧನವುಳ್ಳ, ಅಖಂಡನೀಯನಾದ ಅಗ್ನಿಯೇ ನೀನು ಯಜಮಾನನ ಸಕಲಕಾರ್ಯಗಳಲ್ಲಿಯೂ ಅನಪರಾಧತ್ವವನ್ನುಂಟುಮಾಡುವಿ. ಅವೈಗುಣ್ಯವನ್ನುಂಟು ಮಾಡುವಿಯೆಂದರ್ಥ. ಯಜಮಾನನನ್ನು ಕಲ್ಯಾಣಕರಬಲದಿಂದಲೂ, ಪ್ರಜಾಸಂಪತ್ತಿಯಿಂದಲೂ ಪ್ರೇರೇಪಿಸುತ್ತಿರುವಿ. ಅನುಗ್ರಹಿಸುವಿಯೆಂದು ತಾತ್ಪರ್ಯ. ಈ ನಾವು ನಿನ್ನ ಅನುಗ್ರಹಕ್ಕೆ ಪಾತ್ರರಾಗೋಣ

ಯಸ್ಮೈ ತ್ವಂ ಸುದ್ರವಿಣೋ ದದಾಸ್ಯನಾಗಸ್ತ್ವ ಮನಪರಾಧತ್ವ-
ಮದಿತೇ! ಸರ್ವಾಸು ಕರ್ಮತತಿಷು | ಆಗ-ಆಙ್‌ಪೂರ್ವಾದ್ಗಮೇ
ರೇನ ಏತೇಃ | ಕಿಲ್ಬಿಷಂ ಕಿಲ್ಬಿದಂ ಸುಕೃತಕರ್ಮಣೋಭಯಂ,
ಕೀರ್ತಿಮಸ್ಯ ಭಿನತ್ತೀತಿ ವಾ | ಯಂ ಭದ್ರೇಣಶವಸಾ ಬಲೇನ
ಚೋದಯಸಿ ಪ್ರಜಾವತಾ ಚ ರಾಧಸಾ ಧನೇನ ತೇ ವಯಮಿಹ
ಸ್ಯಾಮ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅನಾಗಸ್ತ್ವಂ ಪಾಪರಾಹಿತ್ಯದಿಂದ ಕರ್ಮಾರ್ಹತೆಯನ್ನು ಎಂದರ್ಥ. 'ಪಾಪಾಪರಾಧ ಯೋರಾಗಃ' ಎಂದು ಅಮರ. ಆಙ್‌ಪೂರ್ವಕವಾದ ಗಮ್‌ಧಾತುವಿಗೆ ಅಸುನ್ ಪ್ರತ್ಯಯ ಬಂದಾಗ ಟಿಲೋಪ. ಆಗಃ ಎಂದಾಗುತ್ತದೆ. ಫಲರೂಪದಿಂದ ಅವಶ್ಯವಾಗಿ ಮನುಷ್ಯನನ್ನು ಹೊಂದುವುದು ಪಾಪವೆಂದರ್ಥ. ಇದರ ಪರ್ಯಾಯವಾಗಿ ಏನ ಪದವನ್ನು ಹೇಳುತ್ತಾರೆ. ಇದೂ ಗತ್ಯರ್ಥಕವಾದ ಇಣ್ ಧಾತುವಿಗೆ ನಸ್‌ಪ್ರತ್ಯಯ ಬಂದು ಗುಣದಿಂದ ಏನಃ ಎಂದಾಗಿದೆ. ಎಲ್ಲವೂ ಸಾಂತನಪುಂಸಕಪದಗಳು ಆಗುತ್ತವೆ. 'ಏನಃ ಪಾಪಾಪರಾಧಯೋಃ' ಎಂದು ಕೋಷ. ಇದರ ಪರ್ಯಾಯ ಕಿಲ್ಬಿಷಪದ. ಕಿಲ್ಬಿದವೆಂಬುದು ಕಿಲ್ಬಿಷವಾಗಿದೆ. ಸುಕೃತಮಾಡಿ ಕೀರ್ತಿಪಡೆದ ಮನುಷ್ಯರ ಕೀರ್ತಿಯನ್ನು ನಾಶಪಡಿಸುವುದು ಕಿಲ್ಬಿಷ. ರಾಧಃ ಧನಪರ್ಯಾಯದಲ್ಲಿ ಹೇಳಿದೆ. (ನಿಘ. ೨-೧೦-೧೭-೩).

ಸರಮಾ—ಸರಣಾತ್ತಸ್ಯಾ ಏಷಾ ಭವತಿ || ೨೪ ||

ಕ್ರಮಪ್ರಾಪ್ತವಾದ ಸರಮಾಪದದ ನಿರ್ವಚನವನ್ನು ತೋರಿಸುತ್ತಾರೆ. ಐತಿಹಾಸಿಕಪಕ್ಷದಲ್ಲಿ ದೇವತೆಗಳ ನಾಯಿಗೆ ಸರಮಾ ಎಂದು ಹೆಸರು. ನಿರುಕ್ತಕಾರರ ಮತದಲ್ಲಿ ಮಾಧ್ಯಮಿಕ ವಾಕ್ಕಾಗುತ್ತದೆ. ಸರಣಶೀಲವುಳ್ಳದ್ದು ಸರಮಾ. ಗತ್ಯರ್ಥಕವಾದ ಸೃಧಾತುವಿಗೆ ಅಮಪ್ರತ್ಯಯ. ಗುಣ (ಅರ್) ಸ್ತ್ರೀತ್ವದಲ್ಲಿ ಅದರಮೇಲೆ ಟಾಪ್ ಬಂದಿದೆ. ಮುಂದೆ ಹೇಳುವ ಮಂತ್ರವು ಸರಮಾಸ್ತುತಿಪ್ರತಿಪಾದಕವಾಗುತ್ತವೆ.

ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವ-
ತಾತಾ | ಯಂ ಭದ್ರೇಣ ಶವಸಾ ಚೋದಯಾಸಿ ಪ್ರಜಾವತಾ
ರಾಧಸಾ ತೇ ಸ್ಯಾಮ || ೧೫ ||

ಸುದ್ರವಿಣಃ—ಶೋಭನಧನಃ | ಶ್ರೇಷ್ಠವಾದ ಧನವುಳ್ಳವನೆಂದರ್ಥ. ಈ ವಿಶೇಷಣವು ಋಕ್ಸಂಹಿತೆಯಲ್ಲಿ ಅಗ್ನಿ ಪರ್ಯಾಯವಾಗಿ ಮಾತ್ರ ಉಪಯೋಗಿಸಲ್ಪಟ್ಟಿದೆ. ಈ ಋಕ್ಕಲ್ಲದೇ ಋ. ಸಂ. ೧೦-೬೧-೨೧ ನೇ ಋಕ್ಕಿನಲ್ಲಿಯೂ ಈ ವಿಶೇಷಣವು ಅಗ್ನಿಯ ಧನದ ವೈಶಿಷ್ಟ್ಯವನ್ನು ತೋರಿಸುತ್ತದೆ.

ಅದಿತೇ—ಅಖಂಡನೀಯಾಗ್ನೇ ಅಥವಾ ಅದಿತೇಃ ಪುತ್ರ ಅಗ್ನೇ | ಎಂದು ಎರಡು ವಿಧವಾದ ಅರ್ಥವನ್ನೂ ಮಾಡಬಹುದು. ಮೊದಲನೆಯದಾಗಿ ಅದಿತಿಯನ್ನುವುದಕ್ಕೆ ಅದೀನಾ ಎಂದು ಅರ್ಥಮಾಡಿದರೆ ದೀನವಲ್ಲದ್ದು, ಕ್ಷಯಿಸದಿರುವುದು ಎಂದಾಗುತ್ತದೆ. ಅಗ್ನಿಯು ಕ್ಷಯರಹಿತನು, ಮರಣರಹಿತನು ಎಂದು ಅನೇಕ ಕಡೆಗಳಲ್ಲಿ ಹೇಳಿದೆ.

ಅಗ್ನೇ ತ್ರಾತಾರಮಮೃತಂ ಮಿಯೇಧ್ಯ ಯಜಿಷ್ಠಂ ಹವ್ಯವಾಹನ ।
(ಋ. ಸಂ. ೧–೪೪–೫)

ನೂ ಚಿತ್ಸಹೋಜಾ ಅಮೃತೋ ನಿ ತುಂದತೇ ಹೋತಾ ಯದ್ದೂತೋ ಅಭವದ್ವಿವಸ್ವತಃ ।
(ಋ. ಸಂ. ೧–೫೮–೧)

ಇತ್ಯಾದಿ ಅನೇಕ ಸನ್ನಿವೇಶಗಳಲ್ಲಿ ಅಗ್ನಿಯನ್ನು ಮರಣರಹಿತನೆಂದು ಹೇಳಿದೆ. ಅದ್ದರಿಂದಲೇ ಅದಿತಿಯೆಂದೂ ಹೇಳಬಹುದು. ಎರಡನೆಯದಾಗಿ ಅದಿತಿಯು ದೇವಮಾತಾ (ನಿ. ೨–೩೩) ದೇವತೆಗಳ ತಾಯಿ ಎಂದು ಹೇಳಿರುವುದರಿಂದ ಅಗ್ನಿಯೂ ಅದಿತಿ ಪುತ್ರನಾದನು. ಆದುದರಿಂದ ಅದಿತೇ ಎಂದರೆ ಅದಿತಿಪುತ್ರನೇ ಎಂದು ತಿಳಿಯಬೇಕೆಂದು ಸ್ಕಂದಸ್ವಾಮಿಗಳು ಹೇಳುತ್ತಾರೆ. ಅಥವಾ ಅಗ್ನಿರಪ್ಯದಿತಿರುಚ್ಯತೇ ಎಂದು ನಿರುಕ್ತಕಾರರು (ನಿ. ೧೧–೨೨) ಅದಿತಿಯೆಂಬುದು ಅಗ್ನಿಪರ್ಯಾಯ ಶಬ್ದವೆಂದೇ ಹೇಳಿ ಈ ಋಕ್ಕನ್ನೇ ಉದಹರಿಸುತ್ತಾರೆ. ಅದಿತೇ ಎಂದರೆ ಎಲೈ ಅಗ್ನಿಯೇ ಎಂದಾಗುತ್ತದೆ.

**ಸರ್ವತಾತಾ**—ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿ ಸರ್ವತಾತಾ ಎಂಬ ಶಬ್ದವನ್ನು ವಿವರಿಸುವಾಗ **ಸರ್ವಾಸು ಕರ್ಮತತಿಷು** ಸಕಲ ಯಜ್ಞಕರ್ಮಗಳ ಸಮೂಹದಲ್ಲಿ ಎಂದು ಅರ್ಥವನ್ನು ಮಾಡುತ್ತಾರೆ. (ನಿ. ೧೧–೨೪) **ಸರ್ವತಾತಾ** ಎನ್ನುವ ಪದವು ಸಾದಾರಣವಾಗಿ ಯಜ್ಞಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

ದೇವಾನಾಂ ದೂತಃ ಪುರುಧ ಪ್ರಸೂತೋಽನಾಗಾನ್ನೋ ವೋಚತು ಸರ್ವತಾತಾ ।
(ಋ. ಸಂ. ೭–೫೪–೧೯)

ಶತತಮಂ ವೇಶ್ಯಂ ಸರ್ವತಾತಾ ದಿವೋದಾಸಪುತಿಥಿಗ್ವಂ ಯದಾವಂ ।
(ಋ. ಸಂ. ೪–೨೬–೩)

ರಾಯೇ ಮಿತ್ರಾವರುಣಾ ಸರ್ವತಾತೇಳೇ ತೋಕಾಯ ತನಯಾಯ ಶಂ ಯೋಃ ।
(ಋ. ಸಂ. ೫–೬೯–೩)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ೬–೧೫–೧೮; ೭–೧೮–೧೯ ಇತ್ಯಾದಿ ಅನೇಕ ಋಕ್ಕುಗಳಲ್ಲಿಯೂ ಸರ್ವತಾತಾ ಶಬ್ದವು ಯಜ್ಞಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಈ ಸಂದರ್ಭದಲ್ಲಿ ಸಕಲಕರ್ಮಗಳ ನಡುವೆಯೂ ಎಂದು ಅರ್ಥ ಮಾಡಬಹುದು.

**ಅನಾಗಾಸ್ತ್ವಂ**—ಪಾಪರಾಹಿತ್ಯವನ್ನು ಅಥವಾ ಪಾಪರಹಿತವಾದ ಕರ್ಮಾರ್ಹತೆಯನ್ನು ಎಂದರ್ಥವು. ಅಜ್ಞಾನ ದಿಂದ ಯಾವ ವಿಧವಾದ ಕರ್ಮಲೋಪಬಂದರೂ ಇನ್ನು ಬೇರೆ ರೀತಿಯಾದ ನ್ಯೂನತೆಯಿದ್ದರೂ ಸಹ ಅಗ್ನಿಯು ಈ ದೋಷ ದಿಂದ ಬಿಡುಗಡೆಮಾಡಿಸುತ್ತಾನೆಂಬ ಶ್ರದ್ಧೆಯಿಂದ ಪದೇ ಪದೇ ಇಂತಹ ಪ್ರಾರ್ಥನೆಯು ಅಗ್ನಿಯನ್ನು ಕುರಿತು ಮಾಡಲ್ಪಟ್ಟಿದೆ. ಉದಾಹರಣೆಗೆ—

ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾಚಿತ್ತಿಭಿಶ್ಚಕೃಮಾ ಕಚ್ಚಿದಾಗಃ ।
ಕೃಧೀ ಷ್ವಸ್ಮಾ ಅದಿತೇರನಾಗಾನ್ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥
(ಋ. ಸಂ. ೨–೧೨–೪)

ಯೆತ್ಸೀಮಾಗಶ್ಚಕೃಮಾ ತತ್ಸು ಮೃಳ ತದರ್ಯಮಾದಿತಿಃ ಶಿಶ್ರಥಂತು ।
(ಋ. ಸಂ. ೭-೬೩-೭)

ಇತ್ಯಾದಿ ನಾನಾಸಂದರ್ಭಗಳಲ್ಲಿ ಸಕಲ ಪಾಪಗಳನ್ನು ನಾಶಮಾಡಬೇಕೆಂದು ಅಗ್ನಿಯನ್ನು ಕುರಿತು ಪ್ರಾರ್ಥನೆಯು ಅತ್ಯಂತ ಪಶ್ಚಾತ್ತಾಪ ಪೂರಿತವಾಗಿಯೂ ಶ್ರದ್ಧಾಯುಕ್ತವಾಗಿಯೂ ಇದೆ.

ಸುಪ್ರವಿಣಃ—ಶೋಭನಾನಿ ದ್ರವಿಣಾನಿ ಧನಾನಿ ಯಸ್ಯ ಸಃ ಸುದ್ರವಿಣಃ. ದ್ರು ಗತೌ ಧಾತು. ಇದಕ್ಕೆ ದ್ರುದಕ್ಷಿಭ್ಯಾಮಿನನ್—(ಉ. ಸೂ. ೨-೫೦೮) ಎಂಬುದರಿಂದ ಇನನ್ ಪ್ರತ್ಯಯ. ದ್ರು ಎಂಬುದಕ್ಕೆ ಪ್ರತ್ಯಯ ನಿಮಿತ್ತವಾಗಿ ಗುಣ, ಅವಾದೇಶ, ರೇಫನಿಮಿತ್ತವಿರುವುದರಿಂದ ಅಟ್‌ಕುಪ್ವಾಙ್—ಸೂತ್ರದಿಂದ ಪ್ರತ್ಯಯ, ನಕಾರಕ್ಕೆ ಣತ್ವ. ದ್ರವಿಣ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ದ್ರವಿಣ ಶಬ್ದದ ಅಂತ್ಯದಲ್ಲಿ ಸಕಾರಾಗಮವು ಛಾಂದಸವಾಗಿ ಬರುತ್ತದೆ. ಸಂಬುದ್ಧಿಯಲ್ಲಿ ಆಮಂತ್ರಿತಸಂಜ್ಞೆ ಬರುವುದರಿಂದ ಆಮಂತ್ರಿತಸ್ಯಚ—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ದದಾಶಃ—ದಾಶೃ ದಾನೇ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. ಇತಶ್ಚ ಲೋಪಃ ಪರಸ್ಮೈಪದೇಷು ಎಂಬುದರಿಂದ ಇಕಾರ ಲೋಪ. ಲೇಟೋಽಡಾಟೌ ಎಂಬುದರಿಂದ ಅಡಾಗಮ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿ ಶೇಷ. ಹ್ರಸ್ವ. ದದಾಶಸ್ ಎಂದಿರುವಾಗ ರುತ್ವ ವಿಸರ್ಗ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ಸರ್ವತಾತಾ—ಸರ್ವದೇವಾತ್ತಾತಿಲ್—(ಪಾ. ಸೂ. ೪-೪-೧೪೨) ಎಂಬುದರಿಂದ ಸರ್ವಶಬ್ದದಮೇಲೆ ತಾತಿಲ್ ಲಿತಿ—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಯಾಸ್ಕ ಪಕ್ಷದಲ್ಲಿ ಸರ್ವಾಃ ಸ್ತುತಯಃ ಯೇಷು ಯಾಗೇಷು ಇತಿ ಸರ್ವತಾತಾ ಎಂದು ಬಹುವ್ರೀಹಿ ಸಮಾಸ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಆತ್ವ ಬರುತ್ತದೆ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಎರಡು ಪಕ್ಷಗಳಲ್ಲಿಯೂ ಸುಪಾಂ ಸುಲುಕ್—ಎಂಬುದರಿಂದ ಸಪ್ತಮಿಗೆ ಡಾದೇಶ ಬರುತ್ತದೆ.

ಚೋದಯಾಸಿ—ಚುದ ಪ್ರೇರಣೇ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. ಚುರಾದಿಯಲ್ಲಿ ಸೇರಿರುವುದರಿಂದ ಸತ್ಯಾಪಪಾಶ—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಪ್ರತ್ಯಯ. ಪುಗಂತಲಘೂಪಧಸ್ಯಚ ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಲೇಟೋಽಡಾಟೌ ಎಂಬುದರಿಂದ ಆಡಾಗಮ. ಪ್ರತ್ಯಯನಿಮಿತ್ತವಾಗಿ ಣಿಚಿಗೆ ಗುಣ. ಆಯಾದೇಶ. ಯುಷ್ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಸ್ವರದಿಂದ ದಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಪ್ರಜಾವತಾ—ಪ್ರಜಾಃ ಅಸ್ಯ ಸಂತಿ ಇತಿ ಪ್ರಜಾವಾನ್. ತದಸ್ಯಾಸ್ತಿ—ಸೂತ್ರದಿಂದ ಮತುಪ್ ಅಕಾರದ

ಸರದಲ್ಲಿ ಮತುಪ್ ಎಂಬುದರಿಂದ ಮಾದುಪಧಾಯೊಶ್ಚ—ಎಂಬುದರಿಂದ ಮಕಾರಕ್ಕೆ ವಕಾರಾದೇಶ. ತೃತೀಯಾ ಏಕವಚನಾಂತರೂಪ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

## ಅಥ ಪಂಚವಿಂಶತಿ ಖಂಡಃ

## ಇಪ್ಪತ್ತೈನೆಯ ಖಂಡವು

ಕಿಮಿಚ್ಛಂತೀ ಸರಮಾ ಪ್ರೇದಮಾನಡ್ ದೂರೇ ಹ್ಯಧ್ವಾ ಜಗುರಿಃ ಪರಾಚೈಃ | ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ | (ಋ ಸಂ. ೧೦-೧೦೮-೧) ಕಿಮಿಚ್ಛಂತೀ ಸರಮೇದಂ ಪ್ರಾನಡ್ ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನೈರಚಿತಃ ಕಾ ತೇಃಸ್ಮಾಸ್ವರ್ಥಹಿತಿರಾಸೀತ್ಕಿಂ ಪರಿತಕನಂ ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ ತಕ್ಮೇತ್ಯುಷ್ಣನಾಮ ಇತಿ ಸತಃ ಕಥಂ ರಸಾಯಾ ಅತರಃ ಪಯಾಂಸೀತಿ ರಸಾ ನದೀ ರಸತೇಃ ಶಬ್ದಕರ್ಮಣಃ ಕಥಂರಸಾನಿ ತಾನ್ಯುದಕಾನೀತಿ ವಾ ದೇವ ಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದ ಇತ್ಯಾಖ್ಯಾನಂ ಸರಸ್ವತೀ ವ್ಯಾಖ್ಯಾತಾ ತಸ್ಯಾ ಏಷಾ ಭವತಿ || ೨೫ ||

ಕಿಮಿಚ್ಛಂತೀ ಸರಮಾ ಪ್ರೇದಮಾನಡ್ ದೂರೇ ಹ್ಯಧ್ವಾ ಜಗುರಿಃ
ಪರಾಚೈಃ || ಕಾಸ್ಮೇ ಹಿತಿಃ ಕಾ ಪರಿತಕ್ಮ್ಯಾಸೀತ್ ಕಥಂ
ರಸಾಯಾ ಅತರಃ ಪಯಾಂಸಿ ||

(ಋ. ಸಂ. ೮-೬-೫)

ಸರಮಾಸ್ತುತಿ ಪ್ರತಿಪಾದಕ ಮಂತ್ರವನ್ನುದಾಹರಿಸುತ್ತಾರೆ. ಈ ದೇವನಾಯಿಯು ನಮ್ಮಿಂದ ಏನನ್ನು ಬಯಸಿ ನಮ್ಮ ಆವಾಸ ಸ್ಥಾನಕ್ಕೆ ಬಂದಿದೆ? ಈ ಮಾರ್ಗವು ದೇವಮಾರ್ಗದಿಂದ ಬಹುದೂರವಿದೆ. ಪರಾಙ್ಮುಖಗಮನದಿಂದ ಕೂಡಿದ ಈ ಮಾರ್ಗವು ಪ್ರಯತ್ನದಿಂದಲೂ ದುರ್ಗಮ್ಯವಾಗಿದೆ. ಆದುದರಿಂದ ಇದನ್ನೇ ಕೇಳೋಣ. ಎಲೈ ಸರಮೆಯೇ ನೀನು ನಮ್ಮಲ್ಲಿ ಏನು ಆಶೆ ಇಟ್ಟಿರುವಿ? ಬಹುದೂರದಿಂದ ಬರುವಾಗ ಎಷ್ಟುರಾತ್ರಿ ಕಳೆದಿದೆ? ಅಧಿಕ ಶಬ್ದಮಾಡುವ ಈ ನದಿಯನ್ನು ಹೇಗೆ ದಾಟಿರುವಿ?

**ಕಿಮಿಚ್ಛಂತೀ ಸರಮೇದಂ ಪ್ರಾನಟ್ ದೂರೇ ಹ್ಯಧ್ವಾ ಜಗುರಿರ್ಜಂಗ-ನ್ಯೈತೇಃ| ಪರಾಂಚನೈರಚಿತಃ| ಕಾ ತೇ ಅಸ್ಮಾಸ್ವರ್ಥ ಹಿತಿರಾಸೀತ್| ಕಿಂ ಪರಿತಕನವ್ । ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ । ತಕ್ಮೇತ್ಯುಷ್ಣನಾಮ ತಕತ ಇತಿ ಸತಃ । 'ಕಥಂ ರಸಾಯಾ ಅತರಃ ಪಯಾಂಸಿ' ಇತಿ । ರಸಾ—ನದೀ । ರಸತೇಃ ಶಬ್ದಕರ್ಮಣಃ । ಕಥಂ ರಸಾನಿ ತಾನ್ಯುದಕಾನೀತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪರಿತಕ್ಮ್ಯಾ ಅಂದರೆ ರಾತ್ರಿ ಪರಿ ಉಪಸರ್ಗ ಪೂರ್ವದಲ್ಲಿರುವಾಗ ಗತ್ಯರ್ಥಕವಾದ ತಕ ಧಾತುವಿಗೆ ಮನಿನ್ ಪ್ರತ್ಯಯ. ಪರಿತಕ್ಮಾ ಎಂಬುದು ಪರಿತಕ್ಮ್ಯಾ ಎಂದಾಗಿದೆ. ಯಕಾರ ಛಾಂದಸವಾಗಿ ಅಧಿಕವಾಗಿ ಬಂದಿದೆ. ಪ್ರಪಂಚದಲ್ಲಿ ಎಲ್ಲಾ ಕಡೆ ಪ್ರಸರಿಸುವುದು ರಾತ್ರಿ. ಅಥವಾ 'ಪರಿತಃ ಏನಾಂ ತಕ್ಮ' ಎಂಬ ವ್ಯುತ್ಪತ್ತಿಯಿಂದ ಪರಿತಕ್ಮ್ಯಾ ಎಂದಾಗಿದೆ. ತಕ್ಮ ಎಂದರೆ ಉಷ್ಣ. ಗತ್ಯರ್ಥಕ ತಕ ಧಾತುವಿಗೆ ಮನಿನ್. ತಕ್ಮ ಆರ್ಷವಾಗಿ ಪದವ್ಯತ್ಯಯ ಬಂದಿದೆ. ಯಾವುದರ ಸುತ್ತಲೂ ಉಷ್ಣವಿರುತ್ತದೋ ಅದು ಪರಿತಕ್ಮ್ಯಾ. ಉಷ್ಣವಾದ ಹಗಲು ಸುತ್ತಲೂ ಉಳ್ಳದ್ದು ರಾತ್ರಿ ಯೆಂದರ್ಥ. ರಸಾ ಎಂಬುದು ಒಂದು ನದಿ. ಶಬ್ದಾರ್ಥಕ ರಸಧಾತುವಿಗೆ ಅಚ್ ಬಂದಾಗ ಅದರಮೇಲೆ ಸ್ತ್ರೀತ್ವದಲ್ಲಿ ಟಾಪ್. ಅತಿ ಶಬ್ದಮಾಡುತ್ತಾ ಹರಿಯುವ ನದಿ. ಅಥವಾ ಕಥಂರಸಾ ಎಂಬುದೇ ನದಿಯ ಹೆಸರು. ಪ್ರಶ್ನವಿಷಯವಾದ ನೀರುಳ್ಳ ನದಿಯೆಂದರ್ಥ.

**ದೇವಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದೇ ಇತ್ಯಾ-ಖ್ಯಾನಂ ॥**

ಮಂತ್ರ ನಿದಾನವನ್ನು ತೋರಿಸುತ್ತಾರೆ. ಬಲಾಸುರನ ಭಟರಾದ ಪಣಿಗಳೆಂಬ ಅಸುರರು ಇಂದ್ರ ಪುರೋಹಿತನಾದ ಬೃಹಸ್ಪತಿಯ ಗೋವುಗಳನ್ನು ಅಪಹರಿಸಿ ಒಂದು ಗುಹೆಯಲ್ಲಿ ಅಡಗಿಸಿಟ್ಟರು. ಆಗ ಬೃಹಸ್ಪತಿಪ್ರೇರಿತನಾದ ಇಂದ್ರನು ದೇವನಾಯಿಯಾದ ಸರಮೆಯನ್ನು ಹುಡುಕಲು ಕಳುಹಿಸಿದನು. ಅದು ದೊಡ್ಡ ರಸವೆಂಬ ನದಿಯನ್ನೂ ದಾಟಿ ಬಲನ ಪತ್ತನವನ್ನು ಹೊಂದಿ ಗುಪ್ತಸ್ಥಾನದಲ್ಲಿರುವ ಗೋವುಗಳನ್ನು ನೋಡಿತು. ಈಗ ಪಣಿಗಳು ಇದನ್ನು ತಿಳಿದು ಅದರೊಡನೆ ಸ್ನೇಹಗಳಿಸಲು ಈ ಸಂವಾದ ಮಾಡಿದರೆಂದು ಇತಿಹಾಸವಿದೆ. ಮಧ್ಯಮಾವಾಕ್ಪಕ್ಷದಲ್ಲಿ ಹೀಗೆ ವ್ಯಾಖ್ಯಾನಮಾಡುತ್ತಾರೆ. ಬಹುಕಾಲದಿಂದ ಕೇಳದೆ ಈಗ ವರ್ಷಾಕಾಲದಲ್ಲಿ ಆಗಿರುವ ಮೇಘಗರ್ಜನೆಯನ್ನು ಕುರಿತು ಹೇಳುತ್ತಾರೆ. ಇದುವರೆಗೆ ಕೇಳದೆ ಈಗ ಏಕೆ ಬಂದಿರುವಿ ? ನಿನ್ನ ಸ್ವರಕೇಳಿ ಬಹುಕಾಲವಾಯಿತು. ಬೇಗಬಂದು ಬೇಗ ನಷ್ಟವಾಗುವುದು ಈ ಧ್ವನಿ. ಬಂದುದಕ್ಕೆ ಪ್ರಯೋಜನವೇನು ? ಅಂತರಿಕ್ಷದಲ್ಲಿರುವ ಮಹಾನದಿಯಿಂದ ಹೇಗೆ ತಪ್ಪಿ ಬಂದಿರುವಿ ? ಎಂದರ್ಥ.

**ಸರಸ್ವತೀ ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೨೩ ॥**

ಕ್ರಮಪ್ರಾಪ್ತವಾದ ಸರಸ್ವತೀಪದದ ನಿರ್ವಚನವನ್ನು ತೋರಿಸುತ್ತಾರೆ. 'ನದೀವತ್' (ನಿ. ೨—೨೩) ತದ್ದ್ಯದ್ದೇವತಾವತ್'

(ನಿ. ೨–೨೩) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಮಂತ್ರವು ಸರಸ್ವತೀ ಸ್ತುತಿಯನ್ನು ಪ್ರತಿಪಾದಿಸುತ್ತದೆ.

**ಕಿಮಿಚ್ಛಂತೀ ಸರಮಾ ಪ್ರೇದಮಾನಡ್ ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।**
**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ॥ ೧ ॥**

ಸರಮೆಯು ಏನನ್ನು ಅಪೇಕ್ಷಿಸಿ ಇಲ್ಲಿ ಬಂದಿದ್ದಾಳೆ? ಇಲ್ಲಿಗೆ ಬರುವ ದಾರಿಯು ಅತಿ ದೀರ್ಘವಾದುದು. ಅನುಸ್ಯೂತವಾಗಿ ನಡೆಯುವವರಿಗೂ ಈ ದಾರಿಯನ್ನು ನಡೆದುಬರಲು ಸಾಧ್ಯವಿಲ್ಲ. ಆದ್ದರಿಂದ ಎಲೈ ಸರಮೆಯೇ ನಮ್ಮಲ್ಲಿಗೆ ನೀನು ಬಂದಿರುವ ಉದ್ದಿಶ್ಯವು ಏನು? ಯಾವ ರೀತಿಯ ಗಮನದಿಂದ ನೀನು ಇಲ್ಲಿಗೆ ಬಂದೆ? ರಸಾನದಿಯ ಉದಕಗಳನ್ನು ಹೇಗೆ ದಾಟ ಬಂದೆ?

ಯಾಸ್ಕರು ಈ ಋಕ್ಕಿಗೂ ಈ ಋಕ್ಕಿನಲ್ಲಿರುವ ಸರಮಾ ಎಂಬ ಶಬ್ದಕ್ಕೂ ನಿರ್ವಚನವನ್ನು ಹೇಳಿದಾರೆ—

> **ಸರಮಾ । ಸರಮಾ ಸರಣಾತ್ ॥ (ನಿ. ೧೧–೨೪) ತಸ್ಯೈಷಾ ಭವತಿ । ಕಿಮಿಚ್ಛಂತೀ ಸರಮೇದಂ-ಪ್ರಾನಡ್ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನ್ನೈರಚಿತೈಃ ಕಾ ತವಾಸ್ಮಾಸ್ವರ್ಥಹಿತಿರಾಸೀತ್ ಕಿಂ ಪರಿತಕನಂ । ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ । ತಕ್ಮೇತ್ಯುಷ್ಣನಾಮತಕತ ಇತಿ ಸತಃ । ಕಥಂ ರಸಾಯಾ ಅತರಃ ಪಯಾಂಸೀತಿ । ರಸಾ ನದೀ ರಸತೇಃ ಶಬ್ದಕರ್ಮಣಃ । ಕಥಂ ರಸಾನಿ ತಾನ್ಯುದಕಾನೀತಿ ವಾ । ದೇವಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದ ಇತ್ಯಾಖ್ಯಾನಂ ॥**
> (ನಿ. ೧೧–೨೫)

**ಸರಮಾ ಸರಣಾತ್**—ಸೃ-ಸರಿ ಎಂಬ ಧಾತುವಿನಿಂದ ನಿಷ್ಪನ್ನವಾದ ಸರಣ ಎಂಬ ಶಬ್ದವನ್ನನುಸರಿಸಿ ಸರಮಾ ಎಂಬ ಶಬ್ದದ ಉತ್ಪತ್ತಿಯಾಗಿದೆ. ಸರಿಯುವ ಅಥವಾ ಸಂಚರಿಸುವ ಎಂದು ಅರ್ಥವು ಸಂಚರಿಸುವ ಸ್ವಭಾವವುಳ್ಳ ದೇವಶುನಿ ಎಂದಭಿಪ್ರಾಯವು.

**ಕಿಮಿಚ್ಛಂತೀ ಸರಮೇದಂ ಪ್ರಾನಟ್**—ಸರಮೆಯು ನಮ್ಮಿಂದ ಏನನ್ನು ಬಯಸಿ ಇಲ್ಲಿಗೆ ಬಂದಿರಬಹುದು ಎಂದ ಅಸುರರು ತಮ್ಮಲ್ಲಿಯೇ ಮಾತನಾಡಿಕೊಂಡು ಬಳಿಕ ಸರಮೆಯನ್ನು ನೇರವಾಗಿ ಕೇಳುವರು.

**ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನ್ನೈರಚಿತೈಃ**—ಆದು ನಡೆದುಬಂದಿರುವ ರಸ್ತೆಯು (ದಾರಿಯ) ಬಹುದೂರವಾಗಿರುವುದು. ಜಗುರಿ ಶಬ್ದವು ಗಮ್ಲೃ ಗತೌ—ಹೋಗು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಜಗುರಿಯೆಂದರೆ ಹೋಗುವುದು, ಸಂಚರಿಸುವುದು ಪರ ಅಂಚನೈಃ ಪರಾಙ್ಮುಖೈರ್ಗಮನೈಃ ವಿಪ್ರಕೃಷ್ಟೋ ದೇವನಿವಾಸಾತ್ । ಪರಾಂಚನವೆಂದರೆ ಒಂದು ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕಾಗಿ ಗಮನ, ಒಂದು ಪ್ರದೇಶವನ್ನು ಹಿಂದಕ್ಕೆ ಹಾಕಿ ಮುಂದಿರುವ ಪ್ರದೇಶಕ್ಕೆ ಹೋಗುವುದು ಎಂದರ್ಥವು ಎಂದರೆ ದೇವಶುನಿಯಾದ ಸರಮೆಯು ಇಂದ್ರನ ನಿವಾಸಸ್ಥಾನದಿಂದ ಹೊರಟು ಪಣಿಗಳ ಪಟ್ಟಣಕ್ಕೆ ಬಂದಿರುವುದು ಎಂದಭಿಪ್ರಾಯವು.

**ಕಾ ತವಾಸ್ಮಾಸ್ವರ್ಥಹಿತಿರಾಸೀತ್**—ನಮ್ಮಲ್ಲಿ ನಿನಗೆ ಏನು ಕೆಲಸ? ಯಾವ ಕಾರ್ಯಾರ್ಥವಾಗಿ ನೀನು ನಮ್ಮಲ್ಲಿಗೆ ಬಂದಿರುವೆ?

ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ | ತಕ್ಮೇತ್ಯುಷ್ಣನಾಮ ತಕತ ಇತಿ ಸತಃ—ಹೋಗು ಎಂಬರ್ಥವುಳ್ಳ ತಕತಿಧಾತುವಿನಿಂದ ತಕ್ಮ ಶಬ್ದವು ನಿಷ್ಪನ್ನವಾಗಿದೆ. ತಕ್ಮವೆಂದರೆ ಉಷ್ಣವು, ಶಾಖವು. ರಾತ್ರಿಯ ಎರಡು ಕಡೆಗಳಲ್ಲಿಯೂ ಎಂದರೆ ರಾತ್ರಿಗೆ ಪೂರ್ವದಲ್ಲಿಯೂ. ರಾತ್ರಿಗೆ ಕೊನೆಯಲ್ಲಿಯೂ ಉಷ್ಣವಿರುವುದು. ರಾತ್ರಿಗೆ ಪೂರ್ವದಲ್ಲಿ ಎಂದರೆ ಸೂರ್ಯಾಸ್ತಮಯಕ್ಕೆ ಮೊದಲು ಬಿಸಲು (ಉಷ್ಣ) ವಿರುವುದು, ರಾತ್ರಿಯ ಕೊನೆಯಲ್ಲಿ ಎಂದರೆ ರಾತ್ರಿಯು ಮುಗಿದು ಪ್ರಾತಃಕಾಲವಾದ ಮೇಲೆ ಸೂರ್ಯೋದಯವಾದಮೇಲೆ ಬಿಸಿಲು (ಉಷ್ಣ) ಇರುವುದು ಆದ್ದರಿಂದ ಎರಡು ಕೊನೆಗಳಲ್ಲಿಯೂ ಉಷ್ಣವು (ಬಿಸಲು) ಆವರಿಸಲ್ಪಟ್ಟ ಕಾಲಕ್ಕೆ ಎಂದರೆ ರಾತ್ರಿಗೆ ಪರಿತಕ್ಮ್ಯಾ ಎಂದು ಹೆಸರು.

ಕಥಂ ರಸಾಯಾ ಅತರಃ ಪಯಾಂಸೀತಿ ರಸಾ ನದೀ ರಸತೇಃ ಶಬ್ದಕರ್ಮಣಃ | ಕಥಂ ರಸಾನಿ ತಾನ್ಯುದಕಾನೀತಿ ವಾ-ಎಲೈ ಸರಮೆಯೇ, ನೀನು ರಸಾನದಿಯ ಅಗಾಧವಾದ ಜಲವನ್ನು ಹೇಗೆ ದಾಟಿದೆ ? ರಸಾ ಎಂಬುದು ಒಂದು ನದಿಯ ಹೆಸರು. ಶಬ್ದಮಾಡು ಎಂಬರ್ಥವುಳ್ಳ ರಸತಿ ಧಾತುವಿನಿಂದ ರಸಾ ಎಂಬ ಶಬ್ದವು ನಿಷ್ಪನ್ನವಾಗಿದೆ. ರಸಾ ಎಂದರೆ ನೀರು ಹರಿಯುವಾಗ ಭೋರ್ಗರೆಯುವಂತೆ ಶಬ್ದಮಾಡುತ್ತಾ ಹರಿಯುವ ನದಿ ಎಂದರ್ಥವು. ಅಥವಾ ರಸವೆಂದರೆ ಉದಕವೆಂದೂ ಹೆಸರು. ಅಗಾಧವಾದ ಜಲರಾಶಿಯಿಂದ ಕೂಡಿದ ನದೀ ಎಂದೂ ಅರ್ಥವು.

ದೇವಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದ ಇತ್ಯಾಖ್ಯಾನಂ—ಇಂದ್ರನಿಂದ ಕಳುಹಲ್ಪಟ್ಟ ಸರಮೆ ಎಂಬ ದೇವಶುನಿಯು ಪಣಿಗಳೆಂಬ ಅಸುರರೊಡನೆ ಸಂಭಾಷಣೆ ಮಾಡಿತೆಂದು ಒಂದು ಆಖ್ಯಾನವಿದೆ. ಅದನ್ನು ಈ ಸೂಕ್ತದಲ್ಲಿ ಹೇಳಲಾಗಿದೆ.

ಈ ಋಕ್ಕಿನಲ್ಲಿ ಪಣಿಯೆಂಬ ಅಸುರರು ಸರಮೆಯನ್ನು ಕಂಡಕೂಡಲೆ ಅದನ್ನು ಈ ರೀತಿ ಪ್ರಶ್ನೆಮಾಡಿದರು— ಎಲೈ ಸರಮೆಯೇ, ನೀನು ಏತಕ್ಕಾಗಿ ಇಲ್ಲಿಗೆ ಬಂದಿರುವೆ ? ನಿನಗೆ ನಮ್ಮಲ್ಲಿ ಏನು ಕೆಲಸ ? ನೀನು ಬಹುದೂರಪ್ರದೇಶದಿಂದ ಇಲ್ಲಿಗೆ ಬಂದಿರುವೆ. ನಮ್ಮಲ್ಲಿ ನಿನಗೆ ಯಾವಕಾರ್ಯವಿರುವುದು ? ಬಹಳ ಆಳವಾದುದೂ; ಅಗಾಧವಾದ ಜಲದಿಂದ ಕೂಡಿರುವುದೂ ಆದ ಈ ರಸಾನದಿಯನ್ನು ಹೇಗೆ ದಾಟಿದೆ ? ಎಂದು ಪ್ರಶ್ನೆಮಾಡಿದಾರೆ, ಇದಕ್ಕೆ ಸರಮೆಯು ಮುಂದಿನ (೨ ನೇ) ಋಕ್ಕಿನಲ್ಲಿ ಪ್ರತ್ಯುತ್ತರವನ್ನು ಹೇಳಿರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತೈದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಡ್ವಿಂಶತಿಃ ಖಂಡಃ

## ಇಪ್ಪತ್ತ ಆರನೆಯ ಖಂಡವು

ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ । (ಋ. ಸಂ. ೧-೩-೧೦) ॥ ಪಾವಕಾ ನಃ ಸರಸ್ವತ್ಯನ್ನೈರನ್ನವತೀ ಯಜ್ಞಂ ವಷ್ಟು ಧಿಯಾವಸುಃ ಕರ್ಮವಸುಸ್ತಸ್ಯಾ ಏಷಾಪರಾ ಭವತಿ ॥ ೨೬ ॥

ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ
ವಷ್ಟು ಧಿಯಾವಸುಃ ॥ (ಋ. ಸಂ. ೧-೧-೬, ಯ. ವಾ. ಸಂ.
೨೦-೮೪)

ಸರಸ್ವತೀ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನೀರಿನಿಂದ ಶುದ್ಧಿಯನ್ನುಂಟುಮಾಡುವ, ಅನ್ನವುಳ್ಳ, ಧನವುಳ್ಳ ಮಾಧ್ಯಮಿಕ ವಾಕ್ ನಮ್ಮ ಯಜ್ಞವನ್ನು ಹವಿರ್ಲಕ್ಷಣ ಅನ್ನಾದಿಗಳಿಂದ ನಿರ್ವಹಿಸಲಿ.

ಪಾವಕಾ ನಃ ಸರಸ್ವತೀ ಅನ್ನೈರನ್ನವತೀ ಯಜ್ಞಂ ವಷ್ಟು ಧಿಯಾ
ವಸುಃ । ಕರ್ಮವಸುಃ । ತಸ್ಯಾ ಏಷಾಽಪರಾ ಭವತಿ ॥ ೨೬ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಧಿಯಾವಸುಃ ಕರ್ಮದಿಂದ ಪ್ರಾಪ್ಯವಾದ ಧನಕ್ಕೆ ಕಾರಣಭೂತಗಳು. 'ವಾಗ್ವೈ ಧಿಯಾವಸು' ಎಂದು ಆರಣ್ಯಕದಲ್ಲಿ ವ್ಯಾಖ್ಯಾತವಾಗಿದೆ. ಮುಂದೆ ಹೇಳುವ ಇನ್ನೊಂದು ಮಂತ್ರವೂ ಸರಸ್ವತೀಸ್ತುತಿ ಪ್ರತಿಪಾದಕವಾಗುತ್ತದೆ.

ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು
ಧಿಯಾಽವಸುಃ ॥ ೧೦ ॥

ಸರಸ್ವತೀದೇವಿಯು ಜನರನ್ನು ಶುದ್ಧಿಗೊಳಿಸುವವಳು; ಯಜ್ಞಾದಿಗಳಿಂದ ಆರಾಧನೆಮಾಡುವ ಜನರಿಗೆ ಅನ್ನಾದಿಗಳನ್ನು ಕೊಡುವವಳು; ಮತ್ತು ಧನರೂಪವಾದ ಐಶ್ವರ್ಯಪ್ರಾಪ್ತಿಗೂ ಕಾರಣಭೂತಳಾದವಳು. ಇಂತಹ ಸರಸ್ವತಿಯು ನಾವು ಕೊಡುವ ಹವಿರ್ಲಕ್ಷಣರೂಪವಾದ ಅನ್ನಾದಿಗಳಿಂದ ತೃಪ್ತಿಗೊಂಡು ನಮ್ಮ ಯಜ್ಞವನ್ನು ಸಾಂಗವಾಗಿ ನೆರವೇರಿಸುವಂತೆ ಮಾಡಲಿ.

ಪಾವಕಾನಃ ಎಂಬ ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಸೇರಿ ಸಾರಸ್ವತಸ್ತ್ರ್ಯೃಚಃ ಎಂದರೆ ಸರಸ್ವತೀ ಸಂಬಂಧವಾದ ಮೂರು ಋಕ್ಕುಗಳು ಎನಿಸುವವು. ಈ ಮೂರು ಋಕ್ಕುಗಳಲ್ಲಿ ಮೊದಲನೆಯದಾದ ಈ ಪಾವಕಾನಃ ಎಂಬ ಋಕ್ಕು ಅನ್ವಾರಂಭಣೀಯೇಷ್ಟಿ ಎಂಬ ಯಜ್ಞವಿಶೇಷದಲ್ಲಿ ಸರಸ್ವತಿಯನ್ನು ಆಹ್ವಾನಮಾಡುವ ಪುರೋನುವಾಕ್ಯ ಎಂಬ

ಮಂತ್ರವು ಯಜ್ಞದಲ್ಲಿ ಯಾವ ದೇವತೆಯನ್ನಾಗಲಿ ಉದ್ದೇಶಿಸಿ ಹೋಮಮಾಡುವಾಗ ಎರಡು ಋಕ್ಕುಗಳನ್ನು ಉಪಯೋಗಿಸು ವರು. ಆ ಎರಡು ಋಕ್ಕುಗಳೂ ಆ ದೇವತೆಗೆ ಸಂಬಂಧಪಟ್ಟದ್ದಾಗಿರಬೇಕು. ಮೊದಲನೆಯ ಋಕ್ಕನ್ನು ಪಠಿಸಿ ದೇವತೆಯನ್ನು ಆಹ್ವಾನಮಾಡುವರು. ಇಂತಹ ಋಕ್ಕಿಗೆ ಪುರೋನುವಾಕ್ಯಾ ಎಂದು ಹೆಸರು. ಮತ್ತೊಂದು ಋಕ್ಕಿನಿಂದ ಆ ದೇವತೆಯನ್ನು ದ್ದೇಶಿಸಿ ಹೋಮಮಾಡುವರು. ಈ ಮಂತ್ರಕ್ಕೆ ಯಾಜ್ಯಾ ಎಂದು ಹೆಸರು. ಅದರಂತೆ ಅನ್ವಾರಂಭಣೀಯೇಷ್ಟಿಯಲ್ಲಿಯೂ ಪುರೋನುವಾಕ್ಯಾ ಮತ್ತು ಯಾಜ್ಯಾ ಎಂಬ ಎರಡು ಋಕ್ಕುಗಳನ್ನು ಉಪಯೋಗಿಸುವರು. ಈ ವಿಷಯವನ್ನು ಆಶ್ವಲಾಯನ ಮಹರ್ಷಿಯು ತಮ್ಮ ಶ್ರೌತಸೂತ್ರದಲ್ಲಿ (ಆಶ್ವ. ಶ್ರೌ. ಸೂ. ೨-೮) ತಥಾ ದರ್ಶಪೂರ್ಣಮಾಸಾವಾರಪ್ಸ್ಯಮಾನ ಎಂಬ ಖಂಡದಲ್ಲಿ ಈ ರೀತಿ ಹೇಳಿರುವರು.

ಪಾವಕಾ ನಃ ಸರಸ್ವತೀ ಪಾವೀರವೀ ಕನ್ಯಾ ಚಿತ್ರಾಯುಃ । (ಆಶ್ವ. ೨-೮)

ಈ ಅನ್ವಾರಂಭಣೀಯೇಷ್ಟಿಯನ್ನೂ ದರ್ಶಪೂರ್ಣಮಾಸಯಾಗವನ್ನೂ ಮಾಡವುದಕ್ಕೆ ಪೂರ್ವದಲ್ಲಿ ಯಜಮಾನನು ಪುಣ್ಯಾಹವಾಚನ, ನಾಂದೀಶ್ರಾದ್ಧ, ಉದಕಶಾಂತ್ಯಾಖ್ಯ ಕರ್ಮಗಳನ್ನು ನೆರವೇರಿಸಿ ಪತ್ನಿಯ ಹಸ್ತದಲ್ಲಿ ಪ್ರತಿಸಾರವೆಂದ ಸೂತ್ರ ವನ್ನು ಕಟ್ಟಿ ಬಳಿಕ ಮಾರನೆಯದಿವಸ ಸ್ನಾನಾದಿ ನಿತ್ಯಕರ್ಮಗಳನ್ನು ನೆರವೇರಿಸಿದ ಬಳಿಕ—ಯಾವಜ್ಜೀವಂ ದರ್ಶಪೂರ್ಣ- ಮಾಸಾಭ್ಯಾಂ ಯಕ್ಷ್ಯೇ ಎಂದು ಸಂಕಲ್ಪಮಾಡಬೇಕು. ಅನಂತರ ಅನ್ವಾರಂಭಣೀಯಯಾ ಯಕ್ಷ್ಯೇ ಎಂದೂ ಸಂಕಲ್ಪ ಮಾಡಿ ಅಗ್ನಿವಿಹರಣವೆಂಬ ಗಾರ್ಹಪತ್ಯಾಗ್ನಿಯಿಂದ ಅಗ್ನಿಯನ್ನು ತರುವ ಅಗ್ನ್ಯಾನಯನವೆಂಬ ಕರ್ಮವನ್ನು ನೆರವೇರಿಸಬೇಕು. ಬಳಿಕ ಅನ್ವಾಧಾನವನ್ನು ಹೇಳುವಾಗ ಅಗ್ನಾವಿಷ್ಣೂ, ಸರಸ್ವತೀ, ಸರಸ್ವಾನ್, ಅಗ್ನಿರ್ಭಗೀ ಎಂಬ ಪ್ರಧಾನದೇವತೆಗಳ ನ್ನುದ್ದೇಶಿಸಿ ಪ್ರಧಾನಹೋಮವನ್ನು ಮಾಡಬೇಕು. ಅಗ್ನಾವಿಷ್ಣುಗಳಿಗೆ ಏಕಾದಶಕಪಾಲಃ ಪುರೋಡಾಶವೂ, ಸರಸ್ವತೀದೇವತೆಗೆ ಚರುವೂ, ಸರಸ್ವಾನ್ ಎಂಬ ದೇವತೆಗೆ ದ್ವಾದಶಕಪಾಲಃ ಪುರೋಡಾಶವೂ, ಅಗ್ನಿರ್ಭಗೀ ಎಂಬ ದೇವತೆಗೆ ಅಷ್ಟಾದಶಕಪಾಲಃ ಪುರೋಡಾಶವೂ ಹೋಮದ್ರವ್ಯಗಳು ಈ ಹೋಮಗಳನ್ನು ಪೂರ್ಣಮಾಸಯಾಗಾನುಸಾರವಾಗಿ ಮಾಡಬೇಕು. ಈ ದೇವತೆ ಗಳಿಗೂ ಹೋಮಮಾಡುವಾಗ ಉಪಯೋಗಿಸುವ ಪುರೋನುವಾಕ್ಯಾ ಮತ್ತು ಯಾಜ್ಯಾ ಎಂಬ ಮಂತ್ರಗಳು ಈ ರೀತಿ ಇರುವವು—

ಅಗ್ನಾವಿಷ್ಣೂ—ಅಗ್ನಾವಿಷ್ಣೂ ಸಜೋಷಸಾ (ಪುರೋನುವಾಕ್ಯಾ)
ಅಗ್ನಾವಿಷ್ಣೂ ಮಹಿ ಧಾಮ—(ಯಾಜ್ಯಾ)

ಸರಸ್ವತೀ—ಪಾವಕಾನಃ ಸರಸ್ವತೀ (ಪುರೋನುವಾಕ್ಯಾ) ಋ. ಸಂ. ೧-೩-೧೦
ಪಾವೀರವೀಕನ್ಯಾ (ಯಾಜ್ಯಾ) ಋ. ಸಂ. ೬-೪೯-೭

ಸರಸ್ವಾನ್—ಪೀಪಿವಾಂಸಂ ಸರಸ್ವತಃ (ಪುರೋನುವಾಕ್ಯಾ) ಋ. ಸಂ. ೭-೯೬-೬
ದಿವ್ಯಂ ಸುಪರ್ಣಂ ವಾಯಸಂ (ಯಾಜ್ಯಾ) ಋ. ಸಂ. ೧-೧೬೪-೨

ಸರಸ್ವತೀ—ಸಾಯಣಾಚಾರ್ಯರು ಋಗ್ವೇದಮಂತ್ರಗಳಲ್ಲಿ ಉಪಯೋಗಿಸಲ್ಪಟ್ಟಿರುವ ಸರಸ್ವತೀ ಶಬ್ದಕ್ಕೆ ಐದುವಿಧವಾದ ಅರ್ಥವಿವರಣೆಯನ್ನು ಕೊಟ್ಟಿದ್ದಾರೆ.

(1) ನದೀ—ಋ. ಸಂ. ೧-೧೪೨-೯ ; ೧-೧೬೪-೪೨ ; ೨-೩೦-೮.

(2) ನದಿಯ ಹೆಸರು—ಋ. ಸಂ. ೧-೩-೧೨ ; ೨-೪೧-೬ : ೩-೨೩-೪ ; ೬-೪೧ ರಲ್ಲಿ ೪, ೭, ೧೦ ೧೧, ೧೩ ನೆಯ ಋಕ್ಕುಗಳು ; ೬-೫೨-೬ ; ೬-೬೧-೨ ; ೭-೩೬-೬ ; ೭-೯೫-೧- & ೨ ; ೭-೯೬-೧ ; ೮-೨೧-೧೭ & ೧೮ ; ೧೦-೬೧-೯ ; ೧೨-೬೫-೧೩ ; ೧೦-೭೫-೫.

(3) ದೇವತೆಯ ಹೆಸರು—ಋ. ಸಂ. ೫-೪೩-೧೧ ; ೫-೪೬-೨ ; ೬-೪೯-೭ ; ೫-೫೦-೧೨; ೧೦-೧೭-೭ ; ೧೦-೩೦-೧೨.

(4) ಆಕಾಶಾಭಿಮಾನಿದೇವತೆ—(ಇಳಾ, ಭಾರತೀ, ಸರಸ್ವತೀ ಎಂಬ ಮೂವರು ದೇವತೆಗಳಲ್ಲಿ ಒಂದು)-ಋ. ಸಂ. ೧-೧೮೮-೮.

(5) ವಾಗ್ದೇವಿ--ಋ. ಸಂ. ೨-೧೧-೧ ; ೩-೪-೮ ; ೩-೫೪-೧೩ ; ೫-೪೨-೧೨; ೭-೩೯-೫ ೭-೪೦-೩ ; ೯-೬೭-೩೨.

ಋಗ್ವೇದದಲ್ಲಿ ಸರಸ್ವತೀ ದೇವಿಯನ್ನು ಸ್ತೋತ್ರಮಾಡುವ ಅನೇಕ ಮಂತ್ರಗಳಿವೆ. ಆದರೆ ಈ ಸರಸ್ವತೀ ದೇವಿಯು ಯಾರು ಅವಳ ಸ್ವರೂಪವೇನು ಎಂಬ ವಿಷಯದಲ್ಲಿ ನಿರುಕ್ತಕಾರರು ಏನನ್ನೂ ಹೇಳಿರುವುದಿಲ್ಲ- ನದೀವದ್ದೇವತಾಚ್ಚ ನಿಗಮಾ ಭವಂತಿ ಎಂದು ಮಾತ್ರ ಹೇಳಿದ್ದಾರೆ, ಎಂದರೆ, ಸರಸ್ವತೀ ದೇವತಾಕವಾದ ಕೆಲವು ಮಂತ್ರಗಳಲ್ಲಿ ಸರಸ್ವತಿಯು ನದಿಯೆಂದು ಕೆಲವು ಮಂತ್ರಗಳಲ್ಲಿ ಒಂದು ದೇವತೆಯೆಂದೂ ವರ್ಣನೆ ಇದೆ. ಆದರೆ ಸರಸ್ವತಿಯೆಂಬ ನದಿಯೇ ಓರ್ವ ದೇವತೆಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಅಥವಾ ದೇವತೆಯನ್ನೇ ನದಿಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಎನ್ನುವುದು ವಿಶದವಾಗಿಲ್ಲ. ಆದುದರಿಂದ ಸರಸ್ವತೀ ಎನ್ನುವುದು ನದೀ, ಮತ್ತು ದೇವತೆಗಳೆರಡನ್ನೂ ಸೂಚಿಸುವುದೆಂದು ಹೇಳಬೇಕಾಗಿದೆ. ಸರಸ್ವತಿಯು ಒಂದು ದೇವತೆಯೆಂದು ಹೇಳುವ ಪಕ್ಷದಲ್ಲಿ ಆ ದೇವತೆ ಯಾರು ? ಅದರ ಸ್ವರೂಪವೇನು ? ಆ ದೇವತೆಯ ಸ್ಥಾನಮಾನಗಳಾವುವು ? ಇವೇ ಮೊದಲಾದ ವಿಷಯಗಳಿಗೆ ಸಮಂಜಸವಾದ ಉತ್ತರವನ್ನು ಹೇಳುವುದು ಸುಲಭಸಾಧ್ಯವಲ್ಲ ಸರಸ್ವತಿಯು ಒಂದು ನದಿಯೆಂದು ಹೇಳುವ ಪಕ್ಷದಲ್ಲಿ ಆ ಹೆಸರಿನ ಪ್ರಸಿದ್ಧವಾದ ಒಂದು ನದಿಯು ಪೂರ್ವದಲ್ಲಿ ಇತ್ತೆಂದೂ (ಈಗಿನ ಸರಸ್ವತಿ the modern Sarsnti ) ಅದನ್ನೇ ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿರುವುದೆಂದೂ ಹೇಳಬಹುದು. ಹೀಗೆ ಹೇಳುವ ಸಂದರ್ಭದಲ್ಲಿ ಕೆಲವು ನಿರ್ದಿಷ್ಟವಾದ ದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞಯಾಗಾದಿಗಳಲ್ಲಿ ನದೀ ಮೊದಲಾದ ಅಚೇತನ ವಸ್ತುಗಳ ಪ್ರತಿಪಾದನೆಯು ನಿಷಿದ್ಧವಲ್ಲವೇ ಎಂಬ ಸಂಶಯವು ತಲೆದೋರುವುದು. ಈ ವಿಷಯದಲ್ಲಿ ಜೈಮಿನಿಮಹರ್ಷಿಯು ತಮ್ಮ ಮೀಮಾಂಸಾ ಸೂತ್ರದಲ್ಲಿ ಅಚೇತನೇಽರ್ಥಬಂಧನಾತ್ (ಜೈ. ಸೂ. ೧-೨-೩೫) ಪೂರ್ವಪಕ್ಷವನ್ನು ಮಾಡಿರುವುದಕ್ಕೆ ಭಾಷ್ಯಕಾರರು ಅಭಿಮಾನಿವ್ಯಪದೇಶಃ (ವೇ.ಸೂ. ೨ ೧-೫) ಎಂಬ ವೇದಾಂತಸೂತ್ರವನ್ನು ಉದಹರಿಸಿ ಸಮಾಧಾನವನ್ನು ಹೇಳಿರುವರು. ಎಂದರೆ ವೇದಮಂತ್ರಗಳಲ್ಲಿ ಅನೇಕ ಕಡೆ ಅಚೇತನವಸ್ತುಗಳನ್ನು ಸಂಬೋಧನೆಮಾಡಿರುವ ಸಂದರ್ಭದಲ್ಲಿ, ಆ ಅಚೇತನವಸ್ತುಗಳ ಅಭಿಮಾನದೇವತೆಗಳನ್ನು ಕುರಿತು ಹೇಳಿರುವುದೆಂದು ತಿಳಿಯಬೇಕೆಂದು ಹೇಳಿರುವರು. (ಭಾಗ ೧. 380-381 ಪೇಜುಗಳನ್ನು ನೋಡಿ) ಆದುದರಿಂದ ನದಿಯೆಂದು ಸ್ತೋತ್ರಮಾಡಿರುವ ಕಡೆಗಳಲ್ಲಿ ಆ ನದ್ಯಭಿಮಾನಿದೇವತೆಯನ್ನು

ಸ್ತೋತ್ರಮಾಡಿರುವುದೆಂದು ತಿಳಿಯಬೇಕು. ಈ ಸರಸ್ವತೀದೇವತೆಯ ವಿಷಯದಲ್ಲಿ ಅನೇಕರು ಅನೇಕ ವಿಧವಾಗಿ ಅಭಿಪ್ರಾಯಪಡುವರು—

(1) ಪುರಾಣಾದಿಗಳಲ್ಲಿ ಸರಸ್ವತಿಯೆಂದರೆ ವಾಗಧಿಷ್ಠಾತ್ರೀ, ಶಾರದಾ, ವಿದ್ಯಾಸ್ವರೂಪಿಣೀ, ಹಂಸವಾಹಿನೀ— ವಾಗಭಿಮಾದೇವತೆಯೂ, ಶಾರದಾ ಎಂಬ ಹೆಸರಿನಿಂದ ಪ್ರಸಿದ್ಧಳೂ, ವಿದ್ಯಾಸ್ವರೂಪಿಣಿಯೂ ಹಂಸದಮೇಲೆ ಕುಳಿತಿರುವವಳೂ ಆದ ದೇವತಾವಿಷಯವೆಂದು ಹೇಳಲ್ಪಟ್ಟಿರುವುದು.

(2) ಅಥವಾ ಈ ಸರಸ್ವತೀದೇವಿಯು ಉಪಾಧಿವಿಶೇಷವಿಶಿಷ್ಟಳಾದ ಆದಿತ್ಯರೂಪಳಾಗಿರುವಳೆಂದೂ ಹೇಳುವರು. ಉಪಾಧಿಯೆಂದರೆ ಸಂಧ್ಯಾಕಾಲವು. ಆದುದರಿಂದ ಸಂಧ್ಯಾಕಾಲಪ್ರಕಾಶ ಯುಕ್ತನಾದ ಆದಿತ್ಯನೇ ಸರಸ್ವತೀರೂಪದಿಂದ ಇಲ್ಲಿ ಸ್ತುತಿಸಲ್ಪಟ್ಟಿರುವನೆಂದು ಕೆಲವರ ಮತವು.

(3) ಸರಃ ಶಬ್ದವು ಸೃ—ಸರಿ, ಸಂಚರಿಸು ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸರಃ ಅಸ್ಯಾ ಅಸ್ತೀತಿ ಅಥವಾ ಸರಃ ತೇಜೋ ಯಸ್ಯಾ ವಿದ್ಯತೇ ಸಾ ಸರಸ್ವತೀತಿ ಭವತಿ ಎಂದರೆ ತೇಜೋರೂಪಿನಿಂದ ಪ್ರಕಾಶಿಸವಳಾದುದರಿಂದ ಸರಸ್ವತೀ ಎಂದು ಹೆಸರು.

(4) ಅಥವಾ— ಪ್ರಾತರ್ವಾಚಾಂ ಪ್ರವರ್ತಿಕಾ, ಪ್ರಾಣಿನಾಂ ಸ್ವಾಪಪರಿತ್ಯಾಗೇನ ಸ್ವೋಚಿತೆ ವ್ಯವಹಾರೇಷು ಪ್ರವೃತ್ತೌ ಶಬ್ದಾಯಮಾನತಾಯಾಃ ಪ್ರವೃತ್ತೇಃ, ರಾತ್ರೌ ಚ ವಾಚಾಂ ನಿರೋಧಕಾ ರಾತ್ರೌ ಪ್ರಾಣಿನಾಂ ನಿಲಾಯನಿಲೀನತ್ವೇನ ಸುಪ್ಯಮಾನತಯಾ ಶಬ್ದವಿರಾಮಾತ್। ಏವಂ ಚ ಶಬ್ದಸ್ಯ ಪ್ರವರ್ತಿಕಾ ನಿರ್ವರ್ತಿಕಾ ಏಷೈವ ಲೋಕೇ ಸರಸ್ವತೀತ್ವೇನ ವ್ಯಪದಿಶ್ಯತೇ ನಾನ್ಯಾ ॥ ಎಂದರೆ ಪ್ರಾತಃಕಾಲದಲ್ಲಿ ಪ್ರಾಣಿಗಳು ನಿದ್ರೆಯಿಂದ ಎಚ್ಚರಗೊಂಡು ಮಾತನಾಡುವುದು ಮೊದಲಾದ ತಮ್ಮ ತಮ್ಮ ವ್ಯಾಪಾರವ್ಯವಹಾರಾದಿಗಳಲ್ಲಿ ತೊಡಗಿರುವವು. ರಾತ್ರಿಕಾಲದಲ್ಲಿ ಪ್ರಾಣಿಗಳು ನಿದ್ರೆಯಲ್ಲಿ ಆಸಕ್ತವಾಗಿರುವಾಗ ಮಾತನಾಡುವುದು ಶಬ್ದಮಾಡುವುದು ಮೊದಲಾದ ಕರ್ಮಗಳಿಲ್ಲದೆ ವ್ಯವಹಾರಾದಿಗಳಿಂದ ವಿರಾಮವನ್ನು ಹೊಂದಿರುವವು. ಆದುದರಿಂದ ಮಾತನಾಡುವ ಅಥವಾ ಶಬ್ದಮಾಡುವ ವಿಚಾರದಲ್ಲಿ ಪ್ರವರ್ತನನಿವರ್ತನೆಗಳಿಗೆ ಕಾರಣಭೂತಳಾಗಿರುವುದರಿಂದ ಈ ವಾಗ್ದೇವತೆಗೆ ಸರಸ್ವತೀ ಎಂದು ಹೆಸರು.

(5) ಹಿಂದೆ ಹೇಳಿದಂತೆ ವಾಗ್ರೂಪತ್ವಾದಿಗಳು ಈ ದೇವತೆಗೆ ಇರುವುದರಿಂದ ಈ ಸರಸ್ವತೀದೇವಿಯು ಉಷಾರೂಪಿಣಿಯಾಗಿರುವಳು. ಆದುದರಿಂದಲೇ ಉಷಾದೇವತೆಯ ಹೆಸರುಗಳಾದ ಸೂನೃತಾ, ಸೂನೃತಾವತೀ ಸೂನೃತಾವರೀ ಮೊದಲಾದ ಶಬ್ದಗಳ ಮಧ್ಯದಲ್ಲಿ ಈ ಸರಸ್ವತೀದೇವತೆಯ ಹೆಸರು ಇರುವುದು. ಇಲ್ಲಿ ಸೂನೃತ ಶಬ್ದಕ್ಕೆ ಪ್ರಿಯವು ಸತ್ಯವೂ ಆದ ಮಾತುಗಳೆಂದರ್ಥವು.

ಇದರಂತೆ ಸರಸ್ವತೀದೇವತಾವಿಚಾರದಲ್ಲಿ ಬೃಹದ್ದೇವತಾಗ್ರಂಥಕರ್ತರಾದ ಶೌನಕರು ಇತರ ಗ್ರಂಥಕಾರರೂ ವಿಧ ವಿಧವಾಗಿ ಅರ್ಥಮಾಡಿರುವರು.

ಈಗ ಋಗ್ವೇದದಲ್ಲಿ ಈ ಸರಸ್ವತೀಶಬ್ದವು ಯಾವ ಯಾವ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಸ್ವಲ್ಪ ಮಟ್ಟಿಗೆ ವಿಚಾರಮಾಡೋಣ. ಈ ವಿಷಯದಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸಬೇಕಾಗುವುದು. (1) ಈಗ ನಾವು ವ್ಯಾಖ್ಯಾನಮಾಡುತ್ತಿರುವ ಪ್ರಸಕ್ತವಾದ ಪಾವಕಾನಃ ಸರಸ್ವತೀ ಎಂಬ ಋಕ್ಕು. (2) ಸರಸ್ವತೀದೇವತಾಕವಾದ ಇತರ ಋಕ್ಕುಗಳು. (3) ಈ ಋಕ್ಕುಗಳನ್ನು ರಚಿಸಿದ ಋಷಿಗಳು ಮತ್ತು ಅವರ ವಂಶಸ್ಥರು. ಈ ಮೂರು ವಿಷಯ ಗಳನ್ನೂ ವಿಮರ್ಶೆಮಾಡುವೆವು—

ಪ್ರಸಕ್ತವಾದ ಈ ಸೂಕ್ತದಲ್ಲಿ ೧೦, ೧೧, ೧೨ ನೆಯ ಋಕ್ಕುಗಳು ಸರಸ್ವತೀದೇವತಾಕಮಂತ್ರಗಳು. ೧೦, ೧೧ನೆಯ ಋಕ್ಕುಗಳಲ್ಲಿ ಸರಸ್ವತೀನದಿಯನ್ನೇ ಒಂದು ದೇವತೆಯನ್ನಾಗಿ ಭಾವಿಸಿ ಸ್ತುತಿಸಲ್ಪಟ್ಟಿರುವುದು. ಭಾಷ್ಯಕಾರರಾದ ಸಾಯಣಾ ಚಾರ್ಯರು ೧೦–೧೧ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೂ, ೧೨ ನೆಯ ಋಕ್ಕಿನಲ್ಲಿ ಸರಸ್ವತೀ ಎಂಬ ನದಿಯು ಅಭಿಮಾನಿದೇವತೆಯೆಂದೂ ವ್ಯಾಖ್ಯಾನ ಮಾಡಿರುವರು. Griffith ಎಂಬ ಪಂಡಿತರು ಸರಸ್ವತಿಯೆಂದರೆ ವಾಗ್ದೇವತೆಯೆಂದು ಅರ್ಥಮಾಡಿರುವರು. ಆದರೆ ಪಾವಕಾ ಎಂಬ ಶಬ್ದಕ್ಕೆ "ನೀರಿನಿಂದ ಶುದ್ಧಿಗೊಳಿಸುವ" ಎಂಬ ಅರ್ಥ ವನ್ನುಮಾಡುವಾಗಲೂ ಅರ್ಣ ಎಂಬ ಶಬ್ದಕ್ಕೆ ನದಿಯೆಂದು ಅರ್ಥಮಾಡುವಾಗಲೂ, ಸರಸ್ವತಿಎಂದರೆ ಒಂದು ನದೀ ಅಥವಾ ನದಿಯ ಅಭಿಮಾನದೇವತೆ ಎಂದು ಹೇಳಬೇಕಾಗುವುದು. ಆಧುನಿಕ ಪಂಡಿತರಲ್ಲಿ ಕೆಲವರು ಸರಸ್ವತಿಯೆಂದರೆ ಸಿಂಧೂನದಿ ಅಭಿಪ್ರಾಯಪಡುವರು. ಆದರೆ ಈ ಋಕ್ಕನ್ನು ರಚಿಸಿದ ವಿಶ್ವಾಮಿತ್ರಪುತ್ರನಾದ ಮಧುಚ್ಛಂದಋಷಿಯ ಆಶ್ರಮವು ಕುರುಕ್ಷೇತ್ರ ದಲ್ಲಿರುವ ಈಗಿನ ಸರಸುತಿ ಎಂಬ ನದಿಯ ಪಶ್ಚಿಮ ದಡದ ಮೇಲೆ ಇತ್ತೆಂದು ಹೇಳಿರುವುದರಿಂದ ಮಹಾಭಾರತ, ಶಲ್ಯಪರ್ವ, ಅಧ್ಯಾಯ ೪೩, ಈ ಸರಸುತಿ ಎಂಬ ನದಿಯನ್ನೇ ಮಧುಚ್ಛಂದಋಷಿಯು ಸ್ತೋತ್ರಮಾಡಿರುವನೆಂದು ಊಹಿಸಲವಕಾಶವಿದೆ. ಏಕೆಂದರೆ ಒಂದು ನದಿಯನ್ನು ಸ್ತೋತ್ರಮಾಡುವಾಗ ತಾನು ವಾಸಿಸುವ ಸ್ಥಳದ ಸಮೀಪದಲ್ಲಿರುವ ಪ್ರಸಿದ್ಧವಾದ ನದಿಯನ್ನು ಬಿಟ್ಟು ಎಲ್ಲಿಯೋ ದೂರದಲ್ಲಿರುವ (ಅದೇ ಹೆಸರಿನ) ಬೇರೊಂದು ನದಿಯನ್ನು ಸ್ತೋತ್ರಮಾಡಿರುವನೆಂದು ಹೇಳುವುದು ನ್ಯಾಯ ವೆಂದು ತೋರುವುದಿಲ್ಲ. ಎರಡನೆಯ ಮಂಡಲದಲ್ಲಿ ಸರಸ್ವತೀ ದೇವತಾಕವಾದ ಋ. ಸಂ. ೨–೩೨–೮; ೨–೪೧–೧೬– ರಿಂದ ೧೮ ಋಕ್ಕುಗಳನ್ನೆಲ್ಲಾ ಶೂನಹೋತ್ರನ ಪುತ್ರನಾದ ಗೃತ್ಸಮದ ಎಂಬ ಋಷಿಯೇ ರಚಿಸಿರುವನು. ಈ ಗೃತ್ಸಮದಋಷಿಯು ಅತ್ರಿಋಷಿಯ ವಂಶದಲ್ಲಿ ಅತ್ರಿಯಿಂದ ಆರನೆಯ ತಲೆಯವನೆಂದು ತಿಳಿದುಬರುವುದು. (ಮೈಸೂರು ಗವರ್ನಮೆಂಟು ಓರಿಯಂಟಲ್ ಲೈಬ್ರರಿಯಲ್ಲಿ ಪ್ರಿಂಟಾದ No. 25 ನೇ ಪ್ರವರ ಮತ್ತು ಗೋತ್ರ ಎಂಬ ಗ್ರಂಥದ ಪ್ರಕಾರ) ವಿಶ್ವಾಮಿತ್ರನು ಅತ್ರಿಯಿಂದ ಐದನೇ ತಲೆಯನು. ಒಟ್ಟು ಎಂಟು ಋಕ್ಕುಗಳಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸ್ತೋತ್ರಮಾಡಿದಾನೆ. ಋ. ಸಂ. ೨–೧–೧೧ ಮತ್ತು ೨–೩–೮ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ಇಡಾ ಮತ್ತು ಭಾರತಿಯರೊಡನೆ ಸ್ತುತಿಸಿದಾನೆ. ಋ. ಸಂ. ೨–೩೧–೪ ರಲ್ಲಿ ಈ ಮೂವರನ್ನು ಎಂದರೆ, ಇಡಾ, ಸರಸ್ವತೀ, ಭಾರತೀ ಎಂಬುವರನ್ನು ಮೂರು ಮಂದಿ ದೇವತೆಯರೆಂದು ಹೇಳಿದಾನೆ. ಋ. ಸಂ. ೨–೩೦–೮ರಲ್ಲಿ ಸರಸ್ವತಿಯನ್ನು ಇಂದ್ರ ಮತ್ತು ಮರುತ್ತುಗಳೊಡನೆ ಸ್ತೋತ್ರಮಾಡಿದಾನೆ. ಋ. ಸಂ. ೨–೩೨–೮ ರಲ್ಲಿ ಸರಸ್ವತಿಯನ್ನು ಓರ್ವ ದೇವತೆಯನ್ನಾಗಿ ಹೇಳಿದಾನೆ. ಋ. ಸಂ. ೨–೪೧ ನೇಯಸೂಕ್ತದ ೧೬ ನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಬಹುದೊಡ್ಡ ನದಿಯೆಂದೂ ಬಹುದೊಡ್ಡ ದೇವತೆಯೆಂದೂ ೧೮ ನೆಯ ಋಕ್ಕಿನಲ್ಲಿ ಋತಾವರೀ (ಋತ–ನೀರು) ಹೆಚ್ಚಾದ ನೀರುಳ್ಳ ನದಿಯೆಂದೂ ವರ್ಣಿಸಿದಾನೆ. ಇದನ್ನು ನೋಡಿ ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಬಹುದೊಡ್ಡ ನದಿಯೆಂದು ಹೇಳಿರುವುದರಿಂದ

ಸಿಂಧುನದಿಯೇ ಇರಬೇಕೆಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಕವಿಯು ಒಂದು ನದಿಯನ್ನಾಗಲಿ, ಸ್ತೋತ್ರಮಾಡುವಾಗ (ಅದು ಚಿಕ್ಕದು ಅಥವಾ ಸಾಧಾರಣವಾಗಿದ್ದರೂ) ಅದನ್ನು ಬಹುದೊಡ್ಡದೆಂದು ವರ್ಣಿಸುವುದು ಸಾಧಾರಣವಾಗಿದೆ. ಋ ಸಂ. ೨-೩೦-೮ ನೆಯ ಋಕ್ಕಿನಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸಿಡಿಲು ಮತ್ತು ಮಿಂಚಿನ ಅಧಿದೇವತೆಯೆಂದು ಭಾವಿಸಿ ಸ್ತೋತ್ರಮಾಡಿರುವನೆಂದು ಕೆಲವರು ಅಭಿಪ್ರಾಯಪಡುವರು, ಆದರೆ ಒಬ್ಬ ಋಷಿಯು ಒಂದೇ ದೇವತೆಯನ್ನು ಬೇರೆ ಬೇರೆ ಅರ್ಥದಲ್ಲಿ ವರ್ಣಿಸಿರುವನೆಂದು ಹೇಳುವುದು ಸಕಾರಣವಾಗಿ ತೋರುವುದಿಲ್ಲ. ಋ. ಸಂ. ೩-೨೩ ನೆಯ ಸೂಕ್ತಕ್ಕೆ ಭರತಪುತ್ರರಾದ ದೇವಶ್ರವಾ ಮತ್ತು ದೇವವಾಕರೆಂಬುವರು ಋಷಿಗಳು. ಹಿಂದೆ ಹೇಳಿದ ಗೋತ್ರ ಪ್ರವರವೆಂಬ ಗ್ರಂಥದ ಪ್ರಕಾರ ಈ ಋಷಿಗಳು ವಿಶಾಮಿತ್ರನ ಪುತ್ರರೆಂದು ತಿಳದುಬರುವುದು. ಭರತನು ಅತ್ರಿಯಿಂದ ಆರನೆಯ ತಲೆಯವನೆಂದು, ವಿಶ್ವಾಮಿತ್ರನು ಏಳನೆಯ ತಲೆಯವನೆಂದೂ ಇವರಿಬ್ಬರೂ ಅತ್ರಿಯು ಮರಿ ಮಗನಾದ ಪುರೂರವನ ವಂಶಸ್ಥರೆಂದು ಅದೇಗ್ರಂಥದಿಂದ ತಿಳಿದುಬರುವುದು. ಇವರು ಋ. ಸಂ. ೩-೨೩-೪ ನೆಯ ಋಕ್ಕಿನಲ್ಲಿ—

ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಂ ।
ದೃಷದ್ವತ್ಯಾಂ ಮಾನುಷಾ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥

(ಋ. ಸಂ. ೩-೨೩-೪)

ಸರಸ್ವತೀನದಿಯ ಜತೆಯಲ್ಲಿ ದೃಷದ್ವತೀ ಮತ್ತು ಆಪಯಾ ಎಂಬ ಬೇರೆ ಎರಡು ನದಿಗಳ ಹೆಸರನ್ನು ಹೇಳಿದಾರೆ, ದೃಷದ್ವತಿಯು ಈಗಿನ ಚಿತ್ರಾಂಗವೆಂಬ ನದಿಯು (the modern Chitrang, Chautag, or Chitang) ಆಪಯಾ ಎಂಬುವುದು ಈಗಿನ ಅಪಗಾ ಎಂಬ ನದಿಯ (the modern Apaga) ಈ ಎರಡು ನದಿಗಳೂ ಸರಸ್ವತಿಯ ನದಿಯ ಸಮೀಪದಲ್ಲಿಯೇ ಇರುವುದರಿಂದ ಸರಸ್ವತಿಯು ಸಿಂಧುನದಿಯಲ್ಲವೆಂದು ಧಾರಾಳವಾಗಿ ಹೇಳಬಹುದು. ವಿಶ್ವಾಮಿತ್ರಋಷಿಯ ಆಶ್ರಮವೂ ಸಹ (ಕುರುಕ್ಷೇತ್ರದಲ್ಲಿರುವ) ಈ ಸರಸ್ವತೀನದಿಯ ಪಶ್ಚಿಮದಡದಲ್ಲಿಯೇ ಇತ್ತೆಂದು ಈಚಿನ ಪರಿಶೋಧನೆಗಳಿಂದ ವ್ಯಕ್ತವಾಗಿದೆ (see Dey's Geographical Dic.) ಇದುವರೆಗೆ ಹೇಳಿದ ವಿಷಯಗಳೆಲ್ಲವೂ ಅತ್ರಿ ಮತ್ತು ವಿಶ್ವಾಮಿತ್ರಋಷಿಗಳ ವಂಶಸ್ಥರ ಸಂಬಂಧವಾದವು.

ಈಗ ಭರದ್ವಾಜ ಮತ್ತು ಅವರ ವಂಶಸ್ಥರ ವಿಷಯವನ್ನು ವಿಮರ್ಶೆಮಾಡೋಣ. ಋ. ಸಂ. ೬-೪೯-೭ ೬-೫೦-೧೨; ೬-೫೨-೬ ಈ ಮೂರು ಋಕ್ಕುಗಳಿಗೂ ಭರದ್ವಾಜಪುತ್ರನಾದ ಋಜಿಶ್ವಾ ಎಂಬುವನೇ ಋಷಿಯು. ಈ ಮೂರು ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಋಕ್ಕುಗಳಲ್ಲಿ ಸರಸ್ವತಿಯು ಒಂದು ನದಿಯೆಂಬ ವಿಚಾರವು ಸ್ಪಷ್ಟವಾಗಿ ಉಕ್ತವಾಗಿದೆ. ಎರಡನೆಯ ಮಂತ್ರದಲ್ಲಿ ರುದ್ರ, ವಿಷ್ಣು, ವಾಯು, ಪರ್ಜನ್ಯ ಎಂಬ ದೇವತೆಗಳ ಜತೆಯಲ್ಲಿ ಸರಸ್ವತಿಯ ಹೆಸರು ಸೂಚಿಸಲ್ಪಟ್ಟದ್ದರೂ ಸರಸ್ವತಿಯು ನದಿಯ ಹೆಸರೆಂದು ಭಾವಿಸಬಹುದಾಗಿದೆ. ಏಕೆಂದರೆ ಆ ಋಷಿಯು ಎರಡು ಋಕ್ಕುಗಳಲ್ಲಿ ಸರಸ್ವತಿಯು ನದಿಯೆಂದು ಹೇಳಿರುವುದರಿಂದ ಮತ್ತೊಂದು ಋಕ್ಕಿನಲ್ಲಿ ಅದೇ ಋಷಿಯು ಸರಸ್ವತಿಯನ್ನು ನದಿಯೆಂದೇ ಭಾವಿಸಿ ಸ್ತೋತ್ರಮಾಡಿರುವುದು ಸಹಜವಾಗಿದೆ. ಭರದ್ವಾಜರ ಆಶ್ರಮವು ಪ್ರಯಾಗದಲ್ಲಿ (Allahabad) ಇದ್ದಿತು. ಆದುದರಿಂದ ಭರದ್ವಾಜಪುತ್ರನಾದ ಋಜಿಶ್ವಾ ಎಂಬುವನು ತನ್ನ ಆಶ್ರಮಕ್ಕೆ ಸಮಿಪದಲ್ಲಿರುವ ಒಂದು ನದಿಯನ್ನೇ ಸ್ತೋತ್ರಮಾಡಿರಬೇಕು. ಭರದ್ವಾಜಋಷಿಯ ಋ. ಸಂ. ೬-೬೧ ನೆಯ ಸೂಕ್ತವೆಲ್ಲಾ (ಒಟ್ಟು ೧೪ ಋಕ್ಕುಗಳು) ಸರಸ್ವತೀವಿಷಯವಾಗಿಯೇ ಇದೆ. ಈ ಸೂಕ್ತದಲ್ಲಿರುವ ಹಲವು ಶಬ್ದಗಳ ಅರ್ಥವು ಸಿಂಧೂನದಿಗೆ ಅನ್ವಯಿಸುವುದೆಂದು ಕೆಲವು

ಪಾಶ್ಚಾತ್ಯ ಪಂಡಿತರ ಅಭಿಪ್ರಾಯವು ಆದರೆ ಆ ಶಬ್ದಗಳು ಸರಸ್ವತೀನದಿಗೂ ಸಹ ಅನ್ವಯಿಸುವುದರಿಂದ ಸಂಶಯಕ್ಕೆ ಅವಕಾಶವಿಲ್ಲ.

ಏಳನೆಯ ಮಂಡಲದಲ್ಲಿರುವ ಋ. ಸಂ. ೭-೯-೫ ; ೭-೩೫-೧೧ ; ೭-೩೬-೬ ; ೭-೪೦-೩ ; ೭-೯೫-೫ ; ೭-೯೬ ಈ ಋಕ್ಕುಗಳಿಗೆಲ್ಲಾ ವಸಿಷ್ಠಋಷಿಯ ಆಶ್ರಮವು ರಾಜಪುಟಾಣಾದಲ್ಲಿರುವ ಆರಾವಳೀಪರ್ವತದ ಅಬು ಎಂಬ ಬೆಟ್ಟದ; (Month Abu) ಸಮೀಪದಲ್ಲಿತ್ತೆಂದು ತಿಳಿದುಬರುವುದು. ಮೊದಲನೆಯ ನಾಲ್ಕುಮಂತ್ರಗಳೂ ಕಡೆಯ ಎರಡು ಸೂಕ್ತಗಳೂ ಸರಸ್ವತಿಯನ್ನು ನದಿಯೆಂದೇ ಹೇಳಿ ಸ್ತುತಿಸಿರುವವು. ಈ ಋಕ್ಕುಗಳಲ್ಲಿರುವ ಸಿಂಧುಮಾತಾ ಮತ್ತು ಆಸಮುದ್ರಾತ್ ಎಂಬ ಶಬ್ದಗಳು ಸಿಂಧುನದಿಗೇ ವಿಶೇಷವಾಗಿ ಅನ್ವಯಿಸುವುದರಿಂದ ಸಿಂಧುನದಿಯೇ ಈ ಮಂತ್ರಗಳಲ್ಲಿ ಸ್ತುತಿಸಲ್ಪಟ್ಟಿರುವುದೆಂದು ಕೆಲವರು ಹೇಳುವರು. ಈ ವಿವಾದವನ್ನು ಸಂಪೂರ್ಣವಾಗಿ ತಳ್ಳಿಹಾಕುವುದಕ್ಕಾಗುವುದಿಲ್ಲ. ಆದರು ಒಂದು ನದಿಯ ವಿಷಯವನ್ನು ಹೇಳುವಾಗ ಮತ್ತೊಂದು ನದಿಯನ್ನು ಹೋಲಿಸುವುದೂ, ಉತ್ಪ್ರೇಕ್ಷೆಯಿಂದ ಕೂಡಿದ ಪ್ರಶಂಸೆಯನ್ನು ಮಾಡುವುದು ಅಸಂಭವವಲ್ಲ.

ಎಂಟನೆಯ ಮಂಡಲದಲ್ಲಿರುವ ಋ. ಸಂ. ೮-೨೧-೧೭ ಮತ್ತು ೧೮ ಋಕ್ಕುಗಳಿಗೆ ಕಣ್ವಋಷಿಯ ಪುತ್ರನಾದ ಶೋಭರಿ ಎಂಬುವನು ಋಷಿಯು. ಈ ಋಷಿಯು, ಮೇಲೆ ಹೇಳಿದ ಋಕ್ಕುಗಳಲ್ಲಿ ಚಿತ್ರನೆಂಬ ರಾಜನು ಸರಸ್ವತೀನದಿಯ ತೀರದಲ್ಲಿ ಮಾಡಿದ ಯಜ್ಞವನ್ನೂ ಆ ರಾಜನ ದಾನಪ್ರಶಂಸೆಯನ್ನೂ ವರ್ಣಿಸಿರುವನು. ಶೌನಕರ ಬೃಹದ್ದೇವತಾಗ್ರಂಥದಲ್ಲಿ (೬-೫೮ರಿಂದ ೬೨) ಈ ಚಿತ್ರರಾಜನು ಕುರುಕ್ಷೇತ್ರದಲ್ಲಿ ಯಜ್ಞ ಮಾಡಿದನೆಂದು ಹೇಳಿರುವುದರಿಂದ ಸರಸ್ವತಿಯು ಸಮೀಪದಲ್ಲಿರುವ ನದಿಯೇ ಆಗಿರಬೇಕು ಮತ್ತು,

> ಪೂಷಾ ವಿಷ್ಣುರ್ಹವನಂ ಮೇ ಸರಸ್ವತ್ಯವಂತು ಸಪ್ತ ಸಿಂಧವಃ।
> ಅಪೋ ವಾತಃ ಪರ್ವತಾಸೋ ವನಸ್ಪತಿಃ ಶೃಣೋತು ಪೃಥಿವೀ ಹವಂ ॥ (ಋ. ಸಂ. ೮-೫೪-೪)

ಈ ಋಕ್ಕಿನಲ್ಲಿ ಪೂಷಾ, ವಿಷ್ಣು, ಸರಸ್ವತೀ ಸಪ್ತಸಿಂಧವಃ (ಏಳು ನದಿಗಳು) ಆಪಃ, ವಾತಃ, ಪರ್ವತಾಸಃ, ವನಸ್ಪತಿಃ ಪೃಥಿವೀ ಈ ದೇವತೆಗಳ ಮಧ್ಯದಲ್ಲಿ ಸರಸ್ವತಿಯೂ ಸೂಚಿಸಲ್ಪಟ್ಟಿರುವುದು. ಅದರಂತೆಯೇ ಋ. ಸಂ. ೯-೬೭-೩೨ ರಲ್ಲಿ ಆ ಮಂತ್ರದ ಋಷಿಯಾದ ವಸಿಷ್ಠ ಅಥವಾ ಪವಿತ್ರ ಎಂಬುವರು ಸರಸ್ವತೀ ಶಬ್ದವನ್ನು ಉಪಯೋಗಿಸಿರುವರು. ಇಲ್ಲಿ ಸರಸ್ವತಿಯು ಒಂದು ದೇವತೆ ಅಥವಾ ನದಿ ಎಂಬ ಎರಡು ಅರ್ಥಗಳಲ್ಲಿ ಯಾವದಾದರೂ ಆಗಬಹುದು. ಋ. ಸಂ. ೧೦-೩೦-೧೨ ರಲ್ಲಿ ಸರಸ್ವತಿಯೆಂದರೆ ಯಾವ ನದಿಯೆಂದು ನಿರ್ದಿಷ್ಟವಾಗಿ ಹೇಳಿಲ್ಲ. ಋ. ಸಂ. ೧೦-೬೪-೯ ರಲ್ಲಿ ಈ ಮಂತ್ರದ ಋಷಿಯಾದ ಗಯನೆಂಬುವನು (ಅತ್ರಿಋಷಿಯ ವಂಶಸ್ಥ) ಸಿಂಧೂ ಮತು ಸರಯೂ (Gogra) ನದಿಗಳ ಜತೆಯಲ್ಲಿಯೇ ಸರಸ್ವತಿಯನ್ನು ಹೇಳಿರುವನು ಮತ್ತು

> ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।
> ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥
> (ಋ. ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ಸರಸ್ವತೀನದಿಯು, ಗಂಗಾ (the Ganges) ಯಮುನಾ (the Jamna) ಶುತುದ್ರಿ (the Sutlej ಪರುಷಿ (the Ravi] ಅಸಿಕ್ನಿ (the Chinab) ವಿತಸ್ತಾ (the Jhelam) ಮರುದ್ವೃಧಾ (the United

Stream of the Jhelam and Chenab) ಆರ್ಜಿಕಿಯಾ (the Bias) ಮತ್ತು ಸುಷೋಮಾ (the Indus) ಎಂಬ ನದಿಗಳಜತೆಯಲ್ಲಿ ಹೇಳಲ್ಪಟ್ಟಿರುವುದರಿಂದ ಸರಸ್ವತೀನದಿಯೇ ಒಂದು ಪ್ರತ್ಯೇಕವಾದ ನದಿಯೆಂದು ಸಿಂಧುನದಿಯಲ್ಲವೆಂದೂ ಸ್ಪಷ್ಟವಾಗುವುದು. ಮೇಲಿನ ಋಕ್ಕಿರುವ ಸೂಕ್ತವೆಲ್ಲಾ ನದಿಗಳ ಪರವಾಗಿಯೇ ಇದೆ. ಎಂದರೆ ಈ ಸೂಕ್ತದಲ್ಲಿರುವ ೯ ಋಕ್ಕುಗಳಿಗೂ ನದಿಗಳೇ ದೇವತೆಗಳು. ಈ ಸೂಕ್ತಕ್ಕೆ ಪ್ರಿಯಮೇಧಋಷಿಯ ಪುತ್ರನಾದ ಸಿಂಧೂಕ್ಷಿತ್ ಎಂಬವನು ಋಷಿಯು.

ಸರಸ್ವತಿಯು ತಿಸ್ರೋ ದೇವ್ಯಃ ಎಂದು ಹೇಳಲ್ಪಡುವ ಮೂರು ಮಂದಿ ದೇವತೆಯರಲ್ಲಿ ಒಬ್ಬಳೆಂದು ಆಪ್ರೀಸೂಕ್ತಗಳೆಂದು ಹೇಳಲ್ಪಡುವ ೧೦ ಸೂಕ್ತಗಳಿವೆ. ಈ ಸೂಕ್ತಗಳಲ್ಲಿ ತಿಸ್ರೋ ದೇವ್ಯಃ ಎಂದರೆ ಇಳಾ ಸರಸ್ವತೀ ಭಾರತೀ ಎಂಬ ಮೂರು ದೇವತೆಗಳ ಸ್ತೋತ್ರವಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ—ಅಗ್ನಿಯು ಭೂಮಿ ಅಂತರಿಕ್ಷ, ಸ್ವರ್ಗಗಳಲ್ಲಿ ಮೂರು ರೂಪಗಳಿಂದ ಆರಾಧಿಸಲ್ಪಡುವವನು. ಭಾರತಿಯ ಸೂರ್ಯನ ಕಿರಣಗಳನ್ನು ಸೂಚಿಸುವುದರಿಂದ ಈ ದೇವತೆಯು (ಎಂದರೆ ಸೂರ್ಯನು) ಸ್ವರ್ಗ (ದಿವ)ದಲ್ಲಿರುವ ಅಗ್ನಿಯ ರೂಪವು. ಸರಸ್ವತಿಯು ಶಿಡಿಲುಮಿಂಚುಗಳಿಗೆ ಅಭಿಮಾನಿದೇವತೆಯನ್ನಾಗಿ ಅನೇಕ ಕಡೆ ವರ್ಣಿಸಿರುವುದರಿಂದ ಈ ಸರಸ್ವತಿಯು ಅಂತರಿಕ್ಷದಲ್ಲಿರುವ ಅಗ್ನಿಯ ರೂಪವು ಇಳಾದೇವಿಯು ಭೂಮಿಯ ಮೇಲಿರುವ ಪ್ರಜೆಗಳಿಗೆ(ಜನಗಳಿಗೆ)ಧನಾದಿಗಳನ್ನೂ ದೀರ್ಘಾಯುವನ್ನೂ ಕೊಡುವವಳಾದುದರಿಂದ ಈ ದೇವತೆಯು ಭೂಮಿಯಲ್ಲಿರುವ ಅಗ್ನಿಯ ರೂಪವು ಎಂದು ಈ ಇಳಾ ಸರಸ್ವತೀ ಭಾರತಿಯರ ಸಂಕೇತವು. ಈ ಮೂವರು ದೇವತೆಗಳೂ ಯಜ್ಞವೇದಿಕೆಗೆ ಬಂದು ಬರ್ಹಿಸ್ತರಣದ(ಹರಡಿರುವದರ್ಭೆಗಳ) ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಋಷಿಗಳು ಸ್ತೋತ್ರ ಮಾಡಿದಾರೆ.

ಸರಸ್ವತಿಯು ನದಿಯಲ್ಲದೆ ಬೇರೆ ದೇವತೆಯೆಂದು ಭಾವಿಸಿ ಋಷಿಗಳು ಸ್ತೋತ್ರಮಾಡಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ.

(1) ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ।
ಅರ್ಯಮಣಂ ವರುಣಂ ಸೋಮಮಶ್ವಿನಾ ಸರಸ್ವತೀ ನಃ ಸುಭಗಾ ಮಯಸ್ಕರತ್।

ಈ ಋಕ್ಕಿನಲ್ಲಿ ಸರಸ್ವತಿಯು ವಾಗ್ದೇವತೆ ಅಥವಾ ಶಿಡಿಲುಮಿಂಚುಗಳ ಅಭಿಮಾನಿದೇವತೆ.

(2) ಸರಸ್ವತಿ ತ್ವಮಸ್ಮಾ ಅವಿಡ್ಢಿ ಮರುತ್ವತೀ ಜೇಷಿ ಶತ್ರೂನ್।

(ಋ. ಸಂ. ೨-೩೦-೮)

(3) ಸರಸ್ವತೀ ಶೃಣವನ್ ಯಜ್ಞಿಯಾ ಸೋ ಧಾತಾ ರಯಿಂ ಸಹವೀರಂ ತುರಾಸಃ।

(ಋ. ಸಂ. ೩–೫೪–೧೩)

ಈ ಋಕ್ಕುಗಳಲ್ಲಿ ಸರಸ್ವತಿಯು ನದೀ ಎಂದಾಗಲೀ ಶಿಡಿಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ ಭಾವಿಸಲ್ಪಟ್ಟಿರುವುದು.

(4)　ದಮೂನಸೋ ಅಪಸೋ ಯೇ ಸುಹಸ್ತಾ ವೃಷ್ಣಃ ಪತ್ನೀರ್ನದ್ಯೋ ವಿಭ್ವತಷ್ಟಾಃ।
ಸರಸ್ವತೀ ಬೃಹದ್ದಿವೋತ ರಾಕಾ ದಶಸ್ಯಂತೀರ್ವರಿವಸ್ಯಂತು ಶುಭ್ರಾಃ।

(ಋ. ಸಂ. ೫-೪೨-೧೨)

(5)　ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಂ।

ಋ. ಸಂ. ೫-೪೩-೧೧)

(6)　ಉಭಾ ನಾಸಾತ್ಯಾ ರುದ್ರೋ ಅಧ ಗ್ನಾಃ ಪೂಷಾ ಭಗಃ ಸರಸ್ವತೀ ಜುಷಂತ ।

(ಋ. ಸಂ. ೫-೪೬-೨)

ಈ ಮೂರು ಋಕ್ಕುಗಳಲ್ಲಿಯೂ ಸರಸ್ವತಿಯು ಸಿಡಿಲುಮಿಂಚುಗಳ ಅಭಿಮಾನಿದೇವತೆಯು. Griffith ಎಂಬುವರು ಈ ಮೂರು ಋಕ್ಕುಗಳಲ್ಲಿ ಮೊದಲನೆಯದರಲ್ಲಿ ಸರಸ್ವತಿಯನ್ನುಸಿಂಧು ಅಥವಾ ಸರಸ್ವತಿ ಎಂಬ ಯಾವುದಾದರು ಒಂದು ನದಿಯೆಂತಲು, ೨-೩ ನೆಯ ಋಕ್ಕುಗಳಲ್ಲಿ ದೇವತೆಯೆಂತಲೂ ವ್ಯಕ್ತವಾಗುವುದೆಂದು ಅಭಿಪ್ರಾಯ ಪಡುವರು. K. C. ಚಟ್ಟೋಪಾಧ್ಯಾಯ ಎಂಬುವರು ೧-೨ ನೆಯ ಋಕ್ಕುಗಳು ಸಿಂಧುನದಿಗೆ ಅನ್ವಯಿಸುವುದೆಂದು ಹೇಳುವರು. ಈ ಮೂರು ಋಕ್ಕುಗಳೂ ಅತ್ರಿ ಋಷಿಯ ವಂಶಸ್ಥರಿಂದಲೇ ಉಕ್ತವಾಗಿದೆ. ಮೊದಲನೆಯ ಋಕ್ಕಿಗೆ ಅತ್ರಿ ಅಥವಾ ಅತ್ರಿಯ ಪುತ್ರನಾದ ಭೌಮನೆಂಬುವನೂ, ಎರಡನೆಯ ಋಕ್ಕಿಗೆ ಅತ್ರಿಯೂ, ಮೂರನೆಯ ಋಕ್ಕಿಗೆ ಅತ್ರಿಯ ವಂಶಸ್ಥನಾದ ಪ್ರತಿಕ್ಷತ್ರನೆಂಬುವನು ಋಷಿಗಳು. ಎರಡನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಸ್ವರ್ಗದಿಂದಲೂ (ದಿವಃ) ಮೇಘಮಂಡಲದಿಂದಲೂ (ಪರ್ವತಾದಾ) ಆಹ್ವಾನ ಮಾಡಲಾಗಿದೆ. ಮೊದಲನೆಯ ಋಕ್ಕಿನಲ್ಲಿ ಪತ್ನೀಃ ಎಂಬ ಶಬ್ದವಿರುವುದರಿಂದ ಸರಸ್ವತಿಯನ್ನೂ, ಇತರ ನದಿಗಳು ಇಂದ್ರನ ಪತ್ನಿಯರನ್ನಾಗಿ ಭಾಷ್ಯಕಾರರು ಭಾವಿಸಿರುವರು.

(7)　ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ ವಾಯುಃ ಪೂಷಾ ಸರಸ್ವತಿ
ಸಜೋಷಸಃ। (ಋ. ಸಂ. ೧೦-೬೫-೧

(8)　ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ।

(ಋ. ಸಂ. ೧೦-೬೫-೧೩)

ಈ ಎರಡು ಋಕ್ಕುಗಳಲ್ಲಿಯೂ ಸರಸ್ವತಿಯು ವಾಗ್ದೇವತೆಯು.

(9)　ಯತ್ಸುರಾಮಂ ವ್ಯಪಿಬಃ ಶಚೀಭಿಃ ಸರಸ್ವತೀ ತ್ವಾ ಮಘವನ್ನಭಿಷ್ಣಕ್

(ಋ. ಸಂ. ೧೦-೧೩೧-೫)

ಈ ಋಕ್ಕಿನಲ್ಲಿ ಸರಸ್ವತಿಯು ಇಂದ್ರನೊಡನೆ ಇರುವಂತೆ ಹೇಳಿರುವುದರಿಂದ ಸರಸ್ವತಿಯು ಸಿಡಿಲುಮಿಂಚುಗಳ ಅಭಿಮಾನಿ ದೇವತೆಯೆಂದಾಗಲಿ, ವಾಗ್ದೇವತೆಯೆಂದಾಗಲಿ ಭಾವಿಸಬಹುದು.

(10)　ಗರ್ಭಂ ಧೇಹಿ ಸಿನೀವಾಲಿ ಗರ್ಭಂ ಧೇಹಿ ಸರಸ್ವತಿ । ಋ. ಸಂ. ೧೦-೧೮೪-೨)

ಇಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದು ಹೇಳುವುದು ಸಮಂಜಸವಾಗಿರುವುದು.

ಸರಸ್ವತೀನದಿಯು ಆ ಕಾಲದಲ್ಲಿ ಎಲ್ಲೆಲ್ಲಿ ಹರಿಯುತ್ತಿತ್ತೆಂಬ ವಿಚಾರದಲ್ಲಿ ತಿಳಿದಮಟ್ಟಿಗೆ ಸೂಕ್ಷ್ಮವಾಗಿ ವಿವರಿಸುವ ಈ ವಿವರಣೆಯು (1) R. D. Oldharn in Journal of Asiatic Society Bengal 1886 page 332 (2) C. F. Oldham, Journal of Royal Asiatic Society 1893, page 51 (3) Maps of the Cambridge History of India Vol. I Ancient India (4) Maps of Punjab published by the Surveyor-General of India (5) Ancient India as described by Magasthenoses and Arrian ಎಂಬ ಭಾಷಣಗಳನ್ನನುಸರಿಸಿ ಬರೆಯಲ್ಪಟ್ಟಿರುವುದು-ಸರಸ್ವತೀನದಿಯು ಆ ಕಾಲದಲ್ಲಿ ಒಂದು ದೊಡ್ಡನದಿಯಾಗಿದ್ದಿತು. ಹಿಮಾಲಯಪರ್ವತದಲ್ಲಿರುವ ಸಿರ್‌ಮೂರ್ (Sirmur) ಪರ್ವತಶ್ರೇಣಿಯಲ್ಲಿ ಉದ್ಭವಿಸಿ ಅಲ್ಲಿಂದ ಪಶ್ಚಿಮಕ್ಕೂ ಸ್ವಲ್ಪ ದಕ್ಷಿಣಕ್ಕೂ ಹರಿಯುವುದು. ಇದರ ಉದ್ಭವ ಸ್ಥಾನದಲ್ಲಿ ಐದು ಸಣ್ಣ ಸಣ್ಣ ತೊರೆಗಳು (ನೀರು ಹರಿಯುವ ಸಣ್ಣ ಹಳ್ಳಿಗಳು) ಸೇರಿ ಈ ನದಿಯಾಗಿ ಮುಂದಕ್ಕೆ ಹರಿದಿರಬಹುದು. ಆದುದರಿಂದ ಇದಕ್ಕೆ ಪಂಚಜಾತಾ ಎಂಬ ಹೆಸರು ಬಂದಿರಬೇಕು. ಸ್ವಲ್ಪದೂರ ಹರಿದಮೇಲೆ ದೃಷದ್ವತೀ ಎಂಬ ನದಿಯು (the modern Chitrang) ಪೂರ್ವದಿಕ್ಕಿನಿಂದ ಹರಿದು ಬಂದು ಇದಕ್ಕೆ ಸೇರುವುದು. ಆಪಯಾ ಎಂಬುದು ದೃಷದ್ವತಿಗೆ ಉಪನದಿಯು ಆಕಾಲದ ಸರಸ್ವತಿಯು ಈಗಿನ ಸರಸ್ವತಿನದಿಯ ದಕ್ಷಿಣಕ್ಕಿತ್ತು. (ಮರಳುಭೂಮಿಗಳಲ್ಲಿ ಹರಿಯುವ ನದಿಗಳು ತಮ್ಮ ಪಾತ್ರಗಳನ್ನು ಅನೇಕವೇಳೆ ಬದಲಾಯಿಸುವುವು.) ಈಗಿನ ಸರಸ್ವತಿನದಿಗೆ ಮಾರ್ಕಂಡಾ (Markand) ಮತ್ತು ಗಗ್ಗರ್ (Ghaggar) ಎಂಬ ಸಣ್ಣ ನದಿಗಳು ಸೇರುವುವು ಬಳಿಕ ಸರಸ್ವತಿಯು ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಪ್ರವಹಿಸಿ ಕಡೆಗೆ ಸಮುದ್ರವನ್ನು ಸೇರುವುದು. ಈಗಿನ ಹಾಕ್ರ (Hakra) ಎಂಬ ಒಣಗಿಹೋಗಿರುವ ನದಿಯ ಪಾತ್ರವೇ ಆಗಿನ ಸರಸ್ವತೀ ನದಿಯ ಪಾತ್ರವಾಗಿರಬೇಕು. ಅದು ಈಗಿನ (Sutlej) ಎಂಬ ನದಿಯೊಡನೆ ಸಂಗಮವಾಗಿ ಸಿಂಧೂನದಿಯಲ್ಲಿ ಐಕ್ಯವಾಗಿರಬಹುದು. ಅಥವಾ ನೇರವಾಗಿ ಸಿಂಧೂನದಿಗೇ ಹೋಗಿ ಸೇರಿರಬಹುದು. ಆ ಕಾಲದಲ್ಲಿ ಸಿಂಧೂನದಿಯು ಈಗಿರುವುದಕ್ಕಿಂತ ಬಹುದೂರ ಪೂರ್ವದಿಕ್ಕಿನಲ್ಲಿತ್ತು ಮತ್ತು (Rann of Kach) ಎಂಬ ಕೊಲ್ಲಿಯ ಸಮೀಪದಲ್ಲಿ ಸಮುದ್ರವನ್ನು ಸೇರುತ್ತಿತ್ತು. ಮ್ಯಾಕ್ಸ್ ಮುಲ್ಲರ್ (Max Muller) ಪಂಡಿತನು ಋ. ಸಂ. ೭-೯೫-೨ನೆಯ ಋಕ್ಕಿನಲ್ಲಿ ಹೇಳಿರುವ ಆಸಮುದ್ರಾತ್ ಎಂಬ ಶಬ್ದದ ಆಧಾರದಮೇಲೆ ಈ ಸರಸ್ವತೀನದಿಯು ನೇರವಾಗಿ ಸಮುದ್ರಕ್ಕೆ ಹೋಗಿ ಸೇರುತ್ತಿತ್ತೆಂದು ಅಭಿಪ್ರಾಯಪಡುತ್ತಾನೆ. ಈ ನದಿಯು ಸಮುದ್ರಕ್ಕೆ ಸೇರುವ ಮೊದಲು ಮರಳುಕಾಡಿನ ಪ್ರದೇಶದಲ್ಲಿ ಹರಿಯುತ್ತಿದ್ದುದರಿಂದ ನದಿಯು ಸಮುದ್ರಕ್ಕೆ ಸೇರುವ ಮೊದಲೇ ಮರುಭೂಮಿಯಲ್ಲಿ ಇಂಗಿ ಹೋಗಿರಬಹುದು (See Muir's Sanskrit Texts Vol II page 393) ಈರೀತಿ ನದಿಯು ಮರುಭೂಮಿ ಯಲ್ಲಿ ಇಂಗಿಹೋದ ವಿಚಾರದ ವರ್ಣನೆಯು ಮಹಾಭಾರತದಲ್ಲಿಯೂ (ವನಪರ್ವ ತೀರ್ಥಯಾತ್ರಾ ವರ್ಣನೆ) ಮತ್ತು ಮನುಸಂಹಿತೆಯಲ್ಲಿಯೂ (೧-೨೧) ಹೇಳಲ್ಪಟ್ಟಿದೆ. ಈ ಎಲ್ಲಾ ಕಾರಣಗಳಿಂದ ಈಗಿನ ಸರಸುತಿ ನದಿಯೇ ಹಿಂದಿನ ಸರಸ್ವತೀ ನದಿಯಾಗಿರಬೇಕೆಂದು ಹೇಳಬಹುದು.

ವಾಜಿನೀವತೀ—ಈ ಶಬ್ದದ ಅರ್ಥವೂ ಹಿಂದೆ ಹೇಳಿದ ವಾಜೇಭಿಃ ಎಂಬ ಶಬ್ದದ ಅರ್ಥವನ್ನೇ ಅನುಸರಿಸಿರುವುದು. ಇದಕ್ಕೆ ರಾಮನಾಥ್ ಎಂಬುವರು Betstower of food ಎಂದೂ Benfey ಎಂಬುವರು filled up or rich with offering ಎಂದೂ Geluder ಎಂಬುವರು rich with reward ಎಂದೂ Rosen ಎಂಬುವರು provided with food ಎಂದೂ Ludwig ಎಂಬುವರು rich with steed ಎಂದೂ ವೇದಾರ್ಥಯತ್ನಕಾರರು Mounted on a charger ಎಂದೂ ಅರ್ಥಮಾಡಿರುವರು. ಕೆಲವರು ವಾಜಿನೀ ಎಂದರೆ ಆಹಾರವನ್ನು ಉತ್ಪನ

ನದೀತೀರದ ಫಲವತ್ತಾದ ಭೂಮಿಯೆಂದೂ ವಾಜಿನೀವತೀ ಎಂದರೆ ಅಂತಹ ಫಲವತ್ತಾದ ಭೂಮಿಗೆ ನೀರನ್ನು ಒದಗಿಸುವುದರ ಮೂಲಕ ಜನರಿಗೆ ಅನ್ನಾದ್ಯಾಹಾರಗಳನ್ನು ನೀಡುವ ನದಿಯೆಂದೂ ಹೇಳುವರು.

ಯಜ್ಞಂ—ಯಜ್ಞಶಬ್ದವು ನಿರುಕ್ತದಲ್ಲಿ ಹದಿನೈದು ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ. ೩-೧೯) ಈ ಶಬ್ದಕ್ಕೆ ಎರಡುವಿಧವಾಗಿ ಅರ್ಥಮಾಡಬಹುದು. (1) ದೇವತೆಯನ್ನು ಸ್ತೋತ್ರಾದಿಗಳಿಂದ ಆರಾಧಿಸುವುದು (2) ಅಂಗೋಪಾಂಗಕರ್ಮಗಳಿಂದಲೂ, ಮಂತ್ರಪಠನದಿಂದಲೂ, ಪಶುವನ್ನು ಅರ್ಪಿಸುವುದರಿಂದಲೂ ಅನೇಕ ಹೋಮಗಳಿಂದಲೂ ಮಾಡಬೇಕಾದ ಕರ್ಮವಿಶೇಷವು. ಈ ಎರಡನೇ ವಿಧವಾದ ಕರ್ಮವೇ ಸಾಧಾರಣವಾಗಿ ವೇದಗಳಲ್ಲಿ ಯಜ್ಞಶಬ್ದದಿಂದ ವಿವರಿಸಲ್ಪಟ್ಟಿರುವುದು.

ವಷ್ಟು—ಈ ಶಬ್ದವು ವಶ ಕಾಂತೌ ಎಂಬ ಧಾತುವಿನ ಲೋಣ್ಮಧ್ಯಮಪುರುಷೈಕವಚನವು. ಭಾಷ್ಯಕಾರರು ಈ ಧಾತುವಿಗೆ ಅಪೇಕ್ಷಿಸು ಎಂದರ್ಥ ಹೇಳಿ ನಿರ್ವಹತ್ವಿತ್ಯರ್ಥಃ ಯಜ್ಞಕರ್ಮವನ್ನು ಸಾಂಗಗೊಳಿಸಲಿ ಎಂದು ಮುಖ್ಯಾರ್ಥವನ್ನು ಹೇಳಿರುವರು. ಇದನ್ನು ಸಮರ್ಥನೆಮಾಡುವುದಕ್ಕಾಗಿ ಐತರೇಯ ಆರಣ್ಯಕದ ಯಜ್ಞಂ ವಷ್ಟ್ವಿತಿ ಯದಾಹ ಯಜ್ಞಂ ವಹತ್ವಿತ್ಯೇವ ತದಾಹ (ಐ.ಆ. ೧-೧-೪) ಎಂಬ ವಾಕ್ಯವನ್ನು ಉದಹರಿಸಿರುವರು. Gelduer ಮತ್ತು Grassmann ಎಂಬ ಪಂಡಿತರೀರ್ವರೂ desire, wish for, make efforts, carry on to completion ಎಂದು ಅರ್ಥಮಾಡಿರುವರು. ಕಡೆಯ ಅರ್ಥವೇ ಇಲ್ಲಿ ಸರಿಯಾಗಿರುವುದು.

ಧಿಯಾವಸುಃ—ಈ ಶಬ್ದದ ಅರ್ಥವಿವರಣೆಯನ್ನು ಭಾಷ್ಯಕಾರರು ಈ ರೀತಿ ಮಾಡಿರುವರು—ಧಿಯಾವಸುಃ ಕರ್ಮಪ್ರಾಪ್ಯಧನನಿಮಿತ್ತಭೂತಾ । ವಾಗ್ದೇವತಾಯಾಸ್ತಥಾವಿಧಂ ಧನನಿಮಿತ್ತತ್ವಮಾರಣ್ಯಕಕಾಂಡೇ ಶ್ರುತ್ಯಾ ವ್ಯಾಖ್ಯಾತಂ । ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ, ಧಿಯಾವಸುಃ-(ಐ. ಆ. ೧-೧-೪) ಎಂದರೆ ಧಿಯಾವಸು ಶಬ್ದಕ್ಕೆ ಯಜ್ಞಾದಿಕರ್ಮಗಳಿಂದ ಲಭಿಸುವ ಧನಾದ್ಯೈಶ್ವರ್ಯಪ್ರಾಪ್ತಿಗೆ ಕಾರಣಭೂತಳಾದವಳು ಎಂದರ್ಥವು. ವಾಗ್ದೇವತೆಯು ಧನಪ್ರಾಪ್ತಿಗೆ ಕಾರಣಭೂತಳೆಂದು ಹೇಳುವ ಐತರೇಯಾರಣ್ಯಕದ ಯಜ್ಞಂ ವಷ್ಟು ಇತ್ಯಾದಿವಾಕ್ಯವನ್ನೂ ಉದಾಹರಿಸಿದಾರೆ.

ಮತ್ತು ಈ ಶಬ್ದದ ರೂಪನಿಷ್ಪತ್ತಿವಿಚಾರದಲ್ಲಿ—ಧಿಯಾ ಕರ್ಮಣಾ ವಸು ಯಸ್ಯಾಃ ಸಕಾಶಾದ್ಭವತಿ ಸಾ ಧಿಯಾವಸುಃ ಎಂದರೆ ಕರ್ಮಗಳಿಗೆ ಫಲರೂಪವಾಗಿ ಹೊಂದಬೇಕಾದ ಐಶ್ವರ್ಯವು ಯಾವ ದೇವತೆಯಿಂದ ಲಭಿಸುವುದೋ ಆ ದೇವತೆಗೆ ಧಿಯಾವಸುಃ ಎಂದು ಹೆಸರು ಎಂದು ಹೇಳಿದಾರೆ. ಪಾಶ್ಚಾತ್ಯಪಂಡಿತರು Suppo ter of all by wisdom, recompenser of worship or religious eeremonies, bestower of riches, source of wealth, rich in sense or intellect, one rewarding for devotion excellent-minded ಮೊದಲಾದ ಶಬ್ದಗಳಿಂದ ಅರ್ಥವಿವರಣೆಮಾಡಿದಾರೆ. ಈ ಶಬ್ದವು ಋಗ್ವೇದದಲ್ಲಿ ಋ. ಸಂ. ೧-೩-೧೦; ೮-೫೮-೯; ೧೦-೬-೦೫; ೧೧-೬-೧೬; ೧-೬-೨-೧೩; ೧-೬೪-೧೫; ೩-೩-೨ ಎಂಬ ಎಂಟು ಋಕ್ಕುಗಳಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ.

ಈರೀತಿ ಶ್ರೀಯಾಸ್ಕಮುನಿ ವಿರಚಿತ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತಾರನೆಯ ಖಂಡವು ಸಮಾಪ್ತವಾಗಿದೆ.

---

# ಅಥ ಸಪ್ತವಿಂಶತಿ ಖಂಡಃ

## ಇಪ್ಪತ್ತೇಳನೆಯ ಖಂಡವು

ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿರಾಜತಿ । (ಋ.ಸಂ. ೧-೩-೧೨)॥ ಮಹದರ್ಣಃ' ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ ಕರ್ಮಣಾ ಪ್ರಜ್ಞಯಾ ವೇಮಾನಿಚ ಸರ್ವಾಣಿ ಪ್ರಜ್ಞಾನಾನ್ಯಭಿವಿರಾಜತಿ ವಾಗರ್ಥೇಷು ವಿಧೀಯತೇ ತಸ್ಮಾನ್ಮಾಧ್ಯಮಿಕಾಂ ವಾಚಂ ಮನ್ಯಂತೇ ವಾಗ್ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೨೭ ॥

ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ
ವಿಶ್ವಾ ವಿರಾಜತಿ ॥ (ಋ- ಸಂ. ೧-೧-೬)

ಸರಸ್ವತೀಸ್ತುತಿ ಪ್ರತಿಪಾದಕವಾದ ಎರಡನೆಯ ಮಂತ್ರವನ್ನು ಉದಾಹರಿಸುತ್ತಾರೆ. ಮಾಧ್ಯಮಿಕ ವಾಕ್ಕಾದ ಸರಸ್ವತಿಯು ಅಧಿಕವಾದ ನೀರನ್ನು ಮಳೆಯಿಂದ ಆವಿಷ್ಕರಿಸುತ್ತದೆ. ವಿಶಿಷ್ಟಪ್ರಜ್ಞಾನದಿಂದ ಅನುಷ್ಠಾನ ಬುದ್ಧಿಯನ್ನು ಸಕಲರಿಗೂ ಉಂಟುಮಾಡುತ್ತದೆ.

ಮಹದರ್ಣಃ ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ
ಕರ್ಮಣಾ ಪ್ರಜ್ಞಯಾ ವೇಮಾನಿ ಚ ಸರ್ವಾಣಿ ಪ್ರಜ್ಞಾನಾನ್ಯಭಿ-
ವಿರಾಜತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಹತ್ ಎಂಬುದು ವರ್ಣವ್ಯತ್ಯಯದಿಂದ ಮಹಃ ಎಂದಾಗಿದೆ. ಕೇತು ಕರ್ಮನಾಮದಲ್ಲಿ ಹೇಳಿದೆ (ನಿಘ. ೩-೨).

ವಾಗರ್ಥೇಷು ವಿಧೀಯತೇ । ತಸ್ಮಾನ್ಮಾಧ್ಯಮಿಕಾಂ ವಾಚಂ
ಮನ್ಯಂತೇ ॥

ಮಾಧ್ಯಮಿಕವಾಕ್ ಸರಸ್ವತೀ ಎಂದು ಹೇಳಿದೆ. ವಾಕ್ ಯಾವಾಗಲೂ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತೆ. ಆ ಅರ್ಥ ಯಾವುದು ಅಂದರೆ 'ಚತಸ್ರ ಊರ್ಜಂ ದುದುಹೇ ಪಯಾಂಸಿ' (ಋ. ಸಂ. ೬-೭-೫) ಎಂದು ಉದಕಾಧಿಕಾರಲಕ್ಷಣಾರ್ಥದಲ್ಲಿ ಹೇಳಿದೆ. ಆದುದರಿಂದ ಇಲ್ಲಿ ಮಹೋ ಅರ್ಣಃ ಎಂದು ಹೇಳಿರುವುದರಿಂದಲೂ ಇಲ್ಲಿ ಸರಸ್ವತಿಯೆಂದರೆ ಮಾಧ್ಯಮಿಕ ವಾಕ್ಕಾಗುತ್ತದೆ.

ವಾಗ್ ವ್ಯಾಖ್ಯಾತಾ | ತಸ್ಯಾ ಏಷಾ ಭವತಿ || ೨೭ ||

ಕ್ರಮಪ್ರಾಪ್ತವಾದ ವಾಕ್ಪದದ ನಿರ್ವಚನವನ್ನು ಹೇಳುತ್ತಾರೆ. ಇದು 'ವಚೇಃ' (ನಿ. ೨-೨೩) ಎಂಬಲ್ಲಿ ಹಿಂದೆ ವ್ಯಾಖ್ಯಾತ ವಾಗಿದೆ. ಮುಂದೆ ಹೇಳುವ ಮಂತ್ರವು ವಾಕ್‌ಸ್ತುತಿ ಪ್ರತಿಪಾದಕವಾಗುತ್ತದೆ.

ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ |
ಧಿಯೋ ವಿಶ್ವಾ ವಿ ರಾಜತಿ || ೧೨ ||

ಸರಸ್ವತೀನದಿಯು ಬಹು ಅಗಾಧಪ್ರವಾಹದಿಂದ ಹರಿಯುತ್ತಿರುವುದರಿಂದ ಈ ನದಿಯಲ್ಲಿ ಬಹು ಹೆಚ್ಚಾಗಿ ನೀರಿರುವುದು ಮತ್ತು ಈ ದೇವಿಯು ತನ್ನನ್ನು ಸ್ತೋತ್ರಮಾಡುವ ಅಥವಾ ಯಜ್ಞದಿಂದ ಆರಾಧಿಸುವ ಜನರ ಮನಸ್ಸನ್ನು ಪ್ರಕಾಶಗೊಳಿಸುವಳು ಎಂದರೆ ಜನರ ಬುದ್ಧಿಯನ್ನು ಚುರುಕಾಗುವಂತೆ ಪ್ರೇರಿಸುವಳು

ಈ ಮಂತ್ರವು ಸೌತ್ರಾಮಣೀ ಎಂಬ ಯಾಗದಲ್ಲಿ ಸರಸ್ವತಿಯನ್ನು ಸ್ತೋತ್ರಮಾಡುವುದಕ್ಕಾಗಿ ಉಪಯೋಗಿಸಲ್ಪ ಡುವುದು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಈರೀತಿ ಹೇಳಿರುವರು—ಮಹದರ್ಣಃ ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ ಕರ್ಮಣಾ ಪ್ರಜ್ಞಯಾ ವೇಮಾನಿ ಚ ಸರ್ವಾಣಿ ಪ್ರಜ್ಞಾನಾನ್ಯಭಿವಿರಾಜತಿ (ನಿ.೧೧-೨೭) ಸರಸ್ವತಿಯ ನದೀರೂಪವನ್ನೂ, ವಾಗ್ದೇವತೆಯ ರೂಪವನ್ನು ಯಾಸ್ಕರು ತತ್ರ ಸರಸ್ವತೀತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ (ನಿ. ೨-೨೩) ಎಂಬ ವಚನದಿಂದ ಹೇಳಿರುವರು. ಈ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ಸರಸ್ವತಿಯನ್ನು ನದೀ ರೂಪದಂತೆಯೂ ೩ ನೆಯ ಪಾದದಲ್ಲಿ ದೇವತಾರೂಪದಂತೆಯೂ ಭಾವಿಸಿ ಸ್ತೋತ್ರಮಾಡಲ್ಪಟ್ಟಿರುವುದು.

ಮಹೋ ಅರ್ಣಃ—ಅರ್ಣಶಬ್ದವು ಉದಕಸೂಚಕವಾದ ೧೦೧ ನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು. ಅರ್ಣವೆಂದರೆ ಉದಕವೆಂದೂ, ನದಿಯೆಂದೂ ಅರ್ಥವು. ಇಲ್ಲಿ ಸರಸ್ವತೀನದಿಯು ಸಿಂಧೂ ಮೊದಲಾದ ನದಿಗಳಷ್ಟು ದೊಡ್ಡದಾ ಗಿಲ್ಲದಿದ್ದರೂ ಮಹೋ ಅರ್ಣಃ ಎಂದರೆ ಹೆಚ್ಚಾದ ನೀರುಳ್ಳ ದೊಡ್ಡನದಿ ಎಂದು ಸ್ತೋತ್ರಮಾಡಿರುವುದು ಸರಿಯೇ ಎಂದರೆ, ಸ್ತೋತ್ರಮಾಡುವಾಗ ದೇವತೆಗೆ ಇರುವ ಸ್ವಲ್ಪ ಗುಣವನ್ನು ಉತ್ಪ್ರೇಕ್ಷೆಮಾಡಿ ಬಹಳವಾಗಿರುವುದು ಪ್ರಶಂಸೆಮಾಡುವುದು ಲೋಕದಲ್ಲಿ ರೂಢಿಯಾಗಿದೆ. ಅದಲ್ಲದೆ ಈ ಋಕ್ಕಿನ ಋಷಿಯಾದ ಮಧುಚ್ಛಂದ ಋಷಿಯು ನೋಡಿರುವ ನದಿಗಳಲ್ಲೆಲ್ಲಾ ಇದೇ ದೊಡ್ಡದಾಗಿರಬಹುದು. ಮತ್ತು ದೂರದಲ್ಲಿರುವ ಸಿಂಧೂ ಮೊದಲಾದ ದೊಡ್ಡನದಿಗಳನ್ನು ಆ ಋಷಿಯು ನೋಡಿಲ್ಲದಿರಬಹುದು. ಆದುದರಿಂದ ಈ ನದಿಯುಬಹು ದೊಡ್ಡ ನದಿಯೆಂದೂ ಇದರಲ್ಲಿ ಬಹಳವಾಗಿ ನೀರಿರುವುದೆಂದೂ ಸ್ತೋತ್ರಮಾಡಿರುವುದು ಸಹಜವಾಗಿದೆ.

ಕೇತುನಾ—ಇದಕ್ಕೆ ಭಾಷ್ಯಕಾರರೂ ಯಾಸ್ಕರೂ ಕರ್ಮಣಾ ಕೆಲಸದಿಂದ ಎಂದು ಅರ್ಥಮಾಡಿರುವರು. ನದೀ ಪರವಾಗಿ ಅರ್ಥಹೇಳುವಾಗ ಕೇತುನಾ ಎಂದರೆ ಬಹಳ ಅಗಾಧವಾಗಿಯೂ ಗಂಭೀರವಾಗಿಯೂ ಇರುವಪ್ರವಾಹ ರೂಪಕರ್ಮ ದಿಂದ ಎಂದೂ ದೇವತಾಪರವಾಗಿ ಅರ್ಥಮಾಡುವಾಗ ಜನರ ಮನಸ್ಸನ್ನು ಉದ್ದೀಪನ (ಪ್ರೇರಣೆ) ಗೊಳಿಸುವ ಕರ್ಮದಿಂದ ಎಂದು ಅರ್ಥಮಾಡಬಹುದು. ಸರಸ್ವತೀನದಿಯ ಅಗಾಧಪ್ರವಾಹವು (Saraswats"s mighty, endless and impetuous flood) ಋ. ಸಂ ೬-೬೧-೨ ಮೊದಲಾದ ಅನೇಕ ಮಂತ್ರಗಳಲ್ಲಿ ವರ್ಣಿಸಲ್ಪಟ್ಟಿರುವುದು. ಈ ಶಬ್ದಕ್ಕೆ

ಪಾಶ್ಚಾತ್ಯರು Brightness, banner, fiag, activity, wisdom ಎಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು ಕೇತುನಾ ಎಂದರೆ ಗರ್ಜನಾಖ್ಯೇನ ಕರ್ಮಣಾ ಎಂದು ಯಾಸ್ಕರು ಕರ್ಮಣಾ ಪ್ರಜ್ಞಯಾವಾ ಎಂದು ವ್ಯಾಖ್ಯಾನಮಾಡಿರುವರು. ಉವ್ವಟ ಮತ್ತು ಮಹೀಧರರ ಅಭಿಪ್ರಾಯವು ಸ್ಕಂದಸ್ವಾಮಿಯ ಅಭಿಪ್ರಾಯದಂತೆಯೇ ಇದೆ. ವೆಂಕಟಮಾಧವರು ಕೇತುನಾ ಎಂದರೆ ಕರ್ಮಣಾ ಎಂದು ಮಾತ್ರ ಹೇಳಿರುವರು.

ಧಿಯಃ—ಬುದ್ಧಿ, ಆಲೋಚನೆ. ಯಾಸ್ಕರು ಪ್ರಜ್ಞಾ ಎಂದೂ ಸ್ಕಂದಸ್ವಾಮಿಯು ಕರ್ಮಣೀ ಪ್ರಜ್ಞಾ ಎಂದೂವೆಂಕಟಮಾಧವರು ಪ್ರಜ್ಞಾ ಎಂದೂ ಉವ್ವಟ ಮತ್ತು ಮಹೀಧರರು ಬುದ್ಧಿ ಎಂದೂ ಹೇಳಿರುವರು. ಪಾಶ್ಚಾತ್ಯರಲ್ಲಿ Grassman ಎಂಬುವರು act of devotion ಎಂದೂ ಡಾ॥ ಸರೂಪರವರು Devotion, thought ಎಂದು ಅರ್ಥಮಾಡಿರುವರು.

ವಿರಾಜತಿ—ಭಾಷ್ಯಕಾರರು ಇದಕ್ಕೆ ವಿಶೇಷೇಣ ದೀಪಯತಿ—ಹೆಚ್ಚಾಗಿ ಪ್ರಕಾಶಗೊಳಿಸುವಳು. ಪ್ರೇರಿಸುವಳು ಉದ್ದೀಪನಗೊಳಿಸುವಳು ಎಂದು ಹೇಳಿದಾರೆ. ಈಶಬ್ದವು ರಾಜ್ ಧಾತುವಿನ ಪ್ರಥಮಪುರುಷೈಕವಚನವು ಇದಕ್ಕೆ shine, preside, govern, brighten ಎಂದು ಅರ್ಥ ಹೇಳಬಹುದು. ಧಿಯೋ ವಿರಾಜತಿ ಎಂದರೆ ಮನಸ್ಸನ್ನು ಸತ್ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಪ್ರೇರಿಸುವಳು. ಅಥವಾ ನಮ್ಮ ಮನಸ್ಸನ್ನು ಸಂತೋಷವಾಗಿರುವಂತೆ ಮಾಡುವವಳು ಎಂದಭಿಪ್ರಾಯವು.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತೇಳನೆಯ ಖಂಡವು ಸಮಾಪ್ತವಾಗಿದೆ.

## ಅಥ ಅಷ್ಟಾವಿಂಶತಿ ಖಂಡಃ

### ಇಪ್ಪತ್ತೆಂಟನೆಯ ಖಂಡವು

ಯದ್ವಾಗ್ವದಂತ್ಯವಿಚೇತನಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ। ಚತಸ್ರ ಊರ್ಜಂ ದುದುಹೇ ಪಯಾಂಸಿ ಕ್ವ ಸ್ವಿದಸ್ಯಾಃ ಪರಮಂ ಜಗಾಮ ॥ ಋ. ಸಂ ೮-೧೦೦-೧೧) ॥ ಯದ್ವಾಗ್ವದಂತ್ಯವಿಚೇತನಾನ್ಯವಿಜ್ಞಾತಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ ಮದನಾ ಚತುಸ್ರೋಽನು ದಿಶ ಊರ್ಜಂ ದುದುಹೇ ಪಯಾಂಸಿ ಕ್ವ ಸ್ವಿದಸ್ಯಾಃ ಪರಮಂ ಜಗಾಮೇತಿ ಯತ್ಪೃಥ್ವೀಂ ಗಚ್ಛತೀತಿ ವಾ ಯದಾದಿತ್ಯರಶ್ಮಯೋ ಹರಂತೀತಿ ವಾ ತಸ್ಯಾ ಏಷಾಪರಾ ಭವತಿ ॥ ೨೮ ॥

**ಯದ್ವಾಗ್ವದಂತ್ಯವಿಚೇತನಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ। ಚತಸ್ರ ಊರ್ಜಂ ದುದುಹೇ ಪಯಾಂಸಿ ಕ್ವಸ್ವಿದಸ್ಯಾಃ ಪ ಮಂ ಜಗಾಮ ॥**

ವಾಕ್‌ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಾಧ್ಯಮಿಕವಾಕ್ ತಿಳಿಯದ ಸ್ಪಷ್ಟಾರ್ಥವುಳ್ಳ ಮೇಘಗರ್ಜನೆ ರೂಪದಿಂದ ಮಾಧ್ಯಮಿಕ ದೇವತೆಗಳಿಗೆ ಹರ್ಷವನ್ನುಂಟುಮಾಡುತ್ತಾ ಶಬ್ದಮಾಡಿ ವೃಷ್ಟಿಕರ್ಮದಲ್ಲಿ ವ್ಯಾಪಿಸುತ್ತದೆ. ಆಗ ನಾಲ್ಕುದಿಕ್ಕುಗಳಲ್ಲಿಯೂ ನೀರನ್ನು ಸುರಿಸುತ್ತದೆ. ಈ ಮಾಧ್ಯಮಿಕ ವಾಕ್ಕಿನ ಸ್ವಕೀಯವಾದ ಶ್ರೇಷ್ಠಸ್ವರೂಪವು ಎಲ್ಲಿ ಅಡಗಿ ಹೋಗಿದೆ ? ಇವರ ತತ್ತ್ವವನ್ನು ತಿಳಿದವನು ಯಾರು ? ಎಂದರ್ಥ.

**ಯದ್ವಾಗ್ವದಂತ್ಯವಿಚೇತನಾನ್ಯವಿಜ್ಞಾತಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾಮದನಾ। ಚತಸ್ರೋಽನು ದಿಶ ಊರ್ಜಂ ದುದುಹೇ ಪಯಾಂಸಿ। 'ಕ್ವಸ್ವಿದಸ್ಯಾಃ ಪರಮಂ ಜಗಾಮ' ಇತಿ। ಯತ್ಪೃಥಿವೀಂ ಗಚ್ಛತೀತಿ ವಾ ಯದಾದಿತ್ಯರಶ್ಮಯೋ ಹರಂತೀತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ರಾಷ್ಟ್ರೀ ಈಶ್ವರೀ ಎಂದರ್ಥ. ಸ್ವಿತ್ ಪ್ರಶ್ನಾರ್ಥವನ್ನು ತಿಳಿಸುವ ಅವ್ಯಯ ಗತ್ಯರ್ಥಕ ತಿಳಿಸುವ ಅವ್ಯಯ ಗತ್ಯರ್ಥಕ ಧಾತುಗಳನ್ನು ಜ್ಞಾನಾರ್ಥದಲ್ಲಿಯೂ ಪ್ರಯೋಗಿಸುವುದರಿಂದ ಇದರ ತತ್ತ್ವವು ಪೃಥಿವಿಯನ್ನು ಸೇರುತ್ತದೆಯೇ ಅಥವಾ ಆದಿತ್ಯ ರಶ್ಮಿಗಳು ಸೆಳೆಯುತ್ತವೆಯೇ ಎಂದು ತಿಳಿಯಲು ಯಾರು ಸಮರ್ಥರು ಎಂದರ್ಥವಾಗುತ್ತದೆ.

**ತಸ್ಯಾ ನಿಷಾಽಪರಾ ಭವತಿ ॥ ೨೮ ॥**

ಈ ಮಾಧ್ಯಮಿಕವಾದ ವಾಕ್ಕೇ ಸರ್ವಪ್ರಾಣ್ಯಂತರ್ಗತವಾಗಿ ಸಕಲಾರ್ಥಾಭಿಧಾಯಕವಾಗುತ್ತದೆಂದು ಇವರ ಮಹದೈಶ್ವರ್ಯ ವನ್ನು ವ್ಯಕ್ತಪಡಿಸಲು ಮುಂದೆ ಇನ್ನೊಂದು ಮಂತ್ರವನ್ನು ಉದಾಹರಿಸುತ್ತಾರೆ.

**ಯದ್ವಾಗ್ವದಂತ್ಯವಿಚೇತನಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ। ಚತಸ್ರ ಊರ್ಜಂ ದುದುಹೇ ಪಯಾಂಸಿ ಕ್ವ ಸ್ವಿದಸ್ಯಾಃ ಪರಮಂ ಜಗಾಮ ॥ ೧೦ ॥**

ಸ್ವಪ್ರಭುತ್ವದಿಂದ ಪ್ರಕಾಶಿಸುವವಳೂ, ದೇವತೆಗಳಿಗೆ ಸಂತೋಷಕಾರಕಳೂ ಆದ ಮಧ್ಯಮಿಕಾವಾಗ್ದೇವಿಯು ಯಾವಾಗ ಮಾನವರ ಪ್ರಜ್ಞೆಗೆ ಅರ್ಥವಾಗದಂತಹ ವಾಕ್ಕುಗಳನ್ನು ಉಚ್ಚರಿಸುತ್ತಾ ಯಜ್ಞಭೂಮಿಯಲ್ಲಿ ಕುಳಿತಳೋ ಆಗ ನಾಲ್ಕು ದಿಕ್ಕುಗಳಲ್ಲಿಯೂ ಅನ್ನವನ್ನೂ ಉದಕವನ್ನೂ ಕರೆದಳು. ಈ ವಾಗ್ದೇವಿಯ ಶ್ರೇಷ್ಠವಾದ ಮೂಲತತ್ವವು ಎಲ್ಲಿಗೆ ಹೇಗೆ ಹೋಯಿತು ಎಂಬುದು ಯಾರಿಗೂ ತಿಳಿಯದು.

ಈ ಋಕ್ಕಿಗೂ ಮುಂದಿನ ಋಕ್ಕಿಗೂ ಯಾಸ್ಕರು ವಾಗ್ದೇವತೆಯ ವಿಷಯದಲ್ಲಿ ಉದಾಹರಣೆಯನ್ನು ಕೊಡುವುದಕ್ಕಾಗಿ ನಿರ್ವಚನವನ್ನು ಹೇಳಿರುವರು—

**ಯದ್ವಾಗ್ವದಂತ್ಯವಿಚೇತನಾನ್ಯವಿಜ್ಞಾತಾನಿ ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ ಮದನಾ ಚತಸ್ರೋऽನು ದಿಶ ಊರ್ಜಂ ದುದುಹೇ ಪಯಾಂಸಿ ಕ್ವ ಸ್ವಿದಸ್ಯಾಃ ಪರಮಂ ಜಗಾಮೇತಿ ಯತ್ಪೃಥಿವೀಂ ಗಚ್ಛತೀತಿ ವಾ ಯದಾದಿತ್ಯರಶ್ಮಯೋ ಹರಂತೀತಿ ವಾ ॥**

( ನಿ. ೧೧-೨೮ )

ಯಾವಾಗ ವಾಗ್ದೇವತೆಯ (ಅಥವಾ ಮಾಧ್ಯಮಿಕಾವಾಕ್—ಎಂದರೆ ಅಂತರಿಕ್ಷಸ್ಥವಾದ ಮೇಘಗರ್ಜನೆ) ದೇವತೆಗಳ ಮಧ್ಯದಲ್ಲಿ ಹರ್ಷಕಾರಕಳಾಗಿ ರಾಣಿಯಂತೆ ಕುಳಿತು ಯಾರಿಗೂ ತಿಳಿಯದ ಎಂದರೆ ಶಬ್ದಮಾತ್ರವಿದ್ದು ಅರ್ಥವು ತಿಳಿಯದಿರುವಂತೆ ಇರುವ ಮಾತುಗಳನ್ನಾಡುವಳೋ ಆಗ ನಾಲ್ಕು ದಿಕ್ಕುಗಳೂ ಹಾಲನ್ನು ಆಹಾರವನ್ನೂ ಉದಕವನ್ನೂ ಯಥೇಚ್ಛವಾಗಿ ಕರೆಯುವವು ಆದರೆ, ಆ ದೇವತೆಯ ಉತ್ತಮವಾದ ಭಾಗವು ಎಲ್ಲಿಗೆ ಹೋಗುವುದು ? ಆ ಶ್ರೇಷ್ಠ ಭಾಗವು ಭೂಮಿಗೆ ಹೋಗುವುದೇ ಅಥವಾ ಅದನ್ನು ಆದಿತ್ಯನ ರಶ್ಮಿಗಳು ಕೊಂಡೊಯ್ಯುವವೆ ? (ಇದು ಯಾರಿಗೂ ತಿಳಿಯದು)

ಪ್ರಕೃತ ಋಕ್ಕಿನಲ್ಲಿ ವಾಗ್ದೇವತೆಯಂದರೆ ಮಾಧ್ಯಮಿಕಾ ವಾಕ್ ಎಂದು ಅರ್ಥಮಾಡಿದಲ್ಲಿ, ಅಂತರಿಕ್ಷಸ್ಥವಾದ ಮೇಘಗರ್ಜನೆ ಎಂದರೆ ಸಿಡಿಲು ಎಂದು ಹೇಳುವ ಪಕ್ಷದಲ್ಲಿ—ಅಂತರಿಕ್ಷದಲ್ಲಿ ಮೇಘಗಳು ಆವರಿಸಿರುವಾಗ ಅವುಗಳ ಮಧ್ಯದಲ್ಲಿ ದೇದೀಪ್ಯಮಾನವಾಗಿ ಪ್ರಕಾಶಿಸುವ ಮಿಂಚನ್ನೇ ಈ ವಾಗ್ದೇವತೆಯು ದೇವತೆಗಳ ಮಧ್ಯದಲ್ಲಿ ಪ್ರಕಾಶಮಾನಳಾಗಿ ಕುಳಿತಿರುವ ರಾಣಿಯೆಂದೂ, ಮೇಘ ಮಂಡಲದಿಂದ ಹೊರಡುವ ಸಿಡಿಲು ಗರ್ಜನೆಯೇ ವಾಗ್ದೇವತೆಯ ಅಸ್ಪಷ್ಟವಾದ ಎಂದರೆ ಧ್ವನಿಯುಕ್ತವಾಗಿದ್ದರೂ ಅರ್ಥವಾಗದಂತಿರುವ ಮಾತುಗಳೆಂದೂ, ಈ ಜನಪ್ರಿಯವಾದ ಧ್ವನಿಯನ್ನು ವಾಗ್ದೇವತೆಯು ಮಾಡಿದಾಗ ನಾಲ್ಕು ದಿಕ್ಕುಗಳಲ್ಲಿಯೂ ಧಾರಾಕಾರವಾಗಿ ಬೀಳುವ ಮಳೆಯನ್ನೇ ಹಾಲೆಂದೂ, ಉದಕವೆಂದೂ, ಆಹಾರವೆಂದೂ ಋಷಿಯು ಪ್ರಕಾರಾಂತರವಾಗಿ ವರ್ಣಿಸಿದಾನೆ. ಆದರೆ ಈ ದೇವತೆಯ ಶ್ರೇಷ್ಠವಾದ ರೂಪವು ಯಾವದೆಂದು ಯಾರಿಗೂ ತಿಳಿಯದು. ಅದು ಭೂಮಿಗೆ ಪುನಃ ಬರುವುದೇ ಅಥವಾ ಸೂರ್ಯರಶ್ಮಿಗಳಿಂದ ಅಪಹೃತವಾಗಿ ಆದಿತ್ಯನ (ಸ್ವರ್ಗದ) ಬಳಿಗೆ ಹೋಗುವುದೇ, ಯಾವುದೂ ಯಾರಿಗೂ ತಿಳಿಯದು ಎಂದು ವಾಗ್ದೇವತೆಯ ಮಹತ್ಸ್ವರೂಪವನ್ನು ಮಾನವರ ಅಲ್ಪತ್ವವನ್ನೂ ಋಷಿಯು ವ್ಯಕ್ತಪಡಿಸಿದಾನೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಇಪ್ಪತ್ತ ಎಂಟನೆಯ ಖಂಡವು ಸಮಾಪ್ತವು.

---

## ಅಥ ಏಕೋನತ್ರಿಂಶತಿ ಖಂಡಃ

## ಇಪ್ಪತ್ತೊಂಬತ್ತನೆಯ ಖಂಡವು

**ದೇವೀಂವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ ।**
**ಸಾನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ॥**

(ಋ. ಸಂ. ೮-೧೦೦-೧೧) ದೇವೀಂವಾಚಮಜನಯಂತ ದೇವಾಸ್ತಾಂ ಸರ್ವರೂಪಾಃ ಪಶವೋ ವದಂತಿ ವ್ಯಕ್ತವಾಚಶ್ಚಾವ್ಯಕ್ತವಾಚಶ್ಚ ಸಾ ನೋ ಮದನಾನ್ನಂ ಚ ರಸಂ ಚ ದುಹಾನಾಧೇನುರ್ವಾಗಸ್ಮಾನುಪೈತು ಸುಷ್ಟುತಾಸುಮತೀ ರಾಕೇತಿ ದೇವಪತ್ನ್ಯಾವಿತಿ ನೈರುಕ್ತಾಃ ಪೌರ್ಣಮಾಸ್ಯಾವಿತಿ ಯಾಜ್ಞಿಕಾ ಯಾ ಪೂರ್ವಾ ಪೌರ್ಣಮಾಸೀ ಸಾಸುಮತಿ-ರ್ಯೋತ್ತರಾ ಸಾ ರಾಕೇತಿ ವಿಜ್ಞಾಯತೇಽನುಮತಿರನುಮನನಾತ್ತಸ್ಯಾ ಏಷಾ ಭವತಿ ||೨೯||

> ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾ ಪಶವೋ
> ವದಂತಿ| ಸಾ ನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾ-
> ಗಸ್ಮಾನುಪ ಸುಷ್ಟುತೈತು ||
>
> (ಋ. ಸಂ. ೬-೭-೫)

ಮಧ್ಯಮವಾಗ್ವಿಭೂತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಕಾಶಿಸುವ ಅಥವಾ ಉದಕವನ್ನು ಕೊಡುವ ಮಾಧ್ಯಮಿಕ ವಾಕ್ಕನ್ನು ಮಧ್ಯಮದೇವತೆಗಳು ಸೃಜಿಸಿದರು. ಈ ದೇವತೆಯನ್ನು ಸಕಲಪ್ರಾಣಿಗಳೂ ಹೇಳುತ್ತವೆ. ಈ ಸ್ತುತ್ಯವಾದ ಮದಕರವಾದ ವಾಕ್ ವೃಷ್ಟಿದಾನದಿಂದ ನಮಗೆ ಅನ್ನವನ್ನೂ, ಘೃತಾದಿರಸವನ್ನೂ ಕೊಡುತ್ತಾ ಸಂತೋಷ ಪಡಿಸುತ್ತಾ, ನಮ್ಮಿಂದ ಸ್ತುತಿಸಲ್ಪಡುವವಳಾಗಿ ನಮ್ಮನ್ನು ಹೊಂದಲಿ.

> ದೇವೀಂ ವಾಚಮಜನಯಂತ ದೇವಸ್ತಾಂ ಸರ್ವರೂಪಾಃ ಪಶವೋ
> ವದಂತಿ ವ್ಯಕ್ತವಾಚಶ್ಚಾವ್ಯಕ್ತವಾಚಶ್ಚ | ಸಾ ನೋ ಮದನಾಽನ್ನಂ
> ಚ ರಸಂ ಚ ದುಹಾನಾ ಧೇನುರ್ವಾಗಸ್ಮಾನು ಪೈತು ಸುಷ್ಟುತಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಕಲ ಪ್ರಾಣಿಗಳೂ ಹೇಳುತ್ತವೆಯೆಂದರೆ ತಿರ್ಯಕ್ ಪ್ರಾಣಿಗಳು ಅವ್ಯಕ್ತವಾಗಿಯೂ ಇತರರು ವ್ಯಕ್ತವಾಗಿಯೂ ಹೇಳುತ್ತಾರೆ ಎಂದರ್ಥ. ಮನುಷ್ಯಾದಿಗಳು ವ್ಯಕ್ತವಾಕ್ಕುಳ್ಳವರು. ಪಶು ಮುಂತಾದವುಗಳು ಅವ್ಯಕ್ತವಾಕ್ಕುಳ್ಳವುಗಳಾಗುತ್ತವೆ.

> ಅನುಮತೀರಾಕೇ ದೇವಪತ್ನ್ಯಾವಿತಿ ನೈರುಕ್ತಾಃ || ಪೌರ್ಣಮಾ-
> ಸ್ಯಾವಿತಿ ಯಾಜ್ಞಿಕಾಃ | 'ಯಾ ಪೂರ್ವಾ ಪೌರ್ಣಮಾಸೀ
> ಸಾಽನುಮತಿಃ, ಯೋತ್ತರಾಸಾರಾಕಾ' ಇತಿ ವಿಜ್ಞಾಯತೇ ||

ಈ ಒಟ್ಟಿಗೆ ಸಂಚರಿಸುವ ಇಬ್ಬರು ದೇವತೆಗಳ ಅರ್ಥನಿರ್ವಚನಮಾಡಲು ಆರಂಭಿಸಿ ಈ ವಿಷಯದಲ್ಲಿರುವ ವೈಮತ್ಯವನ್ನು ತೋರಿಸುತ್ತಾರೆ. ಅನುಮತಿಃ, ರಾಕಾ ಎಂಬ ಎರಡು ಹೆಸರುಳ್ಳ ದೇವಪತ್ನಿಯರು ಎಂದು ನಿರುಕ್ತಕಾರರಮತ. ಸಮಾನಾರ್ಥ ವನ್ನು ಪ್ರದರ್ಶಿಸಲು ಒಟ್ಟಿಗೆ ಹೇಳಿದೆ. ಇವರು ಮಧ್ಯಮಸ್ಥಾನದ ದೇವಪತ್ನಿಯರೆಂದು ಅವರ ಮತ. ಆದರೆ ಯಾಜ್ಞಿಕರು

ಪೌರ್ಣಮಾಸೀ ಎಂದು ಹೇಳುತ್ತಾರೆ. ಕಾಲಾಧಿದೇವತೆಗಳಾದುದರಿಂದ ಚಂದ್ರಸಹಚಾರಿಣಿಯರಾದುದರಿಂದಲೂ ಮಧ್ಯಮ ಸ್ಥಾನದಲ್ಲಿ ಹೇಳಿರುತ್ತಾರೆ. ಇದಕ್ಕೆ ಬ್ರಾಹ್ಮಣ ಮಂತ್ರ ಪ್ರಮಾಣವನ್ನೂ ತೋರಿಸುತ್ತಾರೆ. ಒಂದು ಕಲಾಹೀನನಾದ ಚಂದ್ರನು ಇರುವಾಗ ಅನುಮತಿಯೂ, ಪೂರ್ಣಚಂದ್ರನಿರುವಾಗ ರಾಕಾ ಎಂದೂ ಕರೆಯುತ್ತಾರೆ ಹೀಗೆ ಈ ವಿಷಯದಲ್ಲಿ ಮತಭೇದವಿದೆ.

**ಅನುಮತಿರನುಮನನಾತ್ । ತಸ್ಯಾ ಏಷಾ ಭವತಿ ॥ ೨೯ ॥**

ಅನುಮತಿಪದದ ನಿರ್ವಚನವನ್ನು ತೋರಿಸುತ್ತಾರೆ. ಋಷಿದೇವತಾದಿಗಳಿಂದ ಇದು ಒಂದು ಕಲಾಹೀನವಾದ ಚತುರ್ದಶಿಯಲ್ಲಿರಲಿ ಎಂದು ಒಪ್ಪಿರುವುದರಿಂದ ಅನುಮತಿಯೆಂದಾಗಿದೆ. ಅನು ಉಪಸರ್ಗಪೂರ್ವದಲ್ಲಿರುವಾಗ ಮನಧಾತುವಿಗೆ ಕ್ತಿನ್ ಪ್ರತ್ಯಯ ಬಂದಾಗ ಧಾತುನಕಾರಕ್ಕೆ ಲೋಪ ಬರುತ್ತದೆ. ಮುಂದೆ ಹೇಳುವ ಮಂತ್ರವು ಅನುಮತಿಸ್ತುತಿ ಪ್ರತಿಪಾದಕವಾಗುತ್ತದೆ.

**ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ।**
**ಸಾ ನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ॥ ೧೧ ॥**

ಪ್ರಕಾಶಮಾನಳಾದ ವಾಗ್ದೇವತೆಯನ್ನು ದೇವತೆಗಳು ಉತ್ಪನ್ನಮಾಡಿದರು. ಆದೇ ವಾಗ್ದೇವಿಯನ್ನು ನಾನಾ ವಿಧವಾದ ರಸವುಳ್ಳ ಪಶುಗಳು ಪ್ರಶಂಸಸುತ್ತವೆ. ಆದೇ ವಾಗ್ದೇವಿಯು ನಮಗೆ ಹರ್ಷಕಾರಕಳಾಗಿಯೂ ಅನ್ನವನ್ನೂ ಕ್ಷೀರಾದಿ ರಸಗಳನ್ನೂ ಕರೆಯುತ್ತಲೂ ಪ್ರಭೂತವಾದ ಕ್ಷೀರವುಳ್ಳ ಧೇನುರೂಪವನ್ನಾಶ್ರಯಿಸಿ ಅತಿಶಯವಾಗಿ ಸುತಿಸಲ್ಪಡುತ್ತಾ ನಮ್ಮಲ್ಲಿಗೆ ದಯಮಾಡಲಿ.

ಈ ಋಕ್ಕಿನ ವಿಷಯದಲ್ಲಿ ಯಾಸ್ಕರ ನಿರುಕ್ತವು ಈರೀತಿ ಇದೆ—

ದೇವೀಂ ವಾಚಮಜನಯಂತ ದೇವಾಸ್ತಾಂ ಸರ್ವರೂಪಾಃ ಪಶವೋ ವದಂತಿ ವ್ಯಕ್ತವಾಚಶ್ಚಾ-ವ್ಯಕ್ತವಾಚಶ್ಚ ಸಾ ನೋ ಮದನಾನ್ನಂ ಚ ಸರಂ ಚ ದುಹಾನಾ ಧೇನುರ್ವಾಗಸ್ಮಾನುಪೈತು ಸುಷ್ಟುತಾ॥

(ನಿ. ೧೧–೨೯)

ದೇವತೆಗಳು ವಾಗ್ದೇವತೆಯನ್ನು ಸೃಷ್ಟಿಸಿದರು. ಈ ವಾಗ್ದೇವತಾರೂಪವಾದ ವಾಕ್ಕನ್ನು (ಅಥವಾ ಮಾತುಗಳನ್ನು ಭಾಷೆಯನ್ನು) ನಾನಾರೂಪಗಳುಳ್ಳ ಸಮಸ್ತ ಪ್ರಾಣಿಗಳೂ ಬಳಸುವವು ಎಂದರೆ ವ್ಯಕ್ತಶಬ್ದಗಳಿಂದಲೂ ಅರ್ಥದಿಂದಲು ಕೂಡಿರುವ ವಾಕ್ಯಗಳನ್ನು ಮನುಷ್ಯಾದಿಗಳು ಮಾತನಾಡುವರು. ಅವ್ಯಕ್ತವೂ ಅಸ್ಪಷ್ಟವೂ ವರ್ಣಾತ್ಮಕವಲ್ಲದ್ದೂ ಆದ ಶಬ್ದಾದಿಗಳನ್ನು ಗವಾದಿ ಪಶುಗಳು ಮಾಡುವವು. ಇವು ಅವ್ಯಕ್ತವಾಕ್ಯಗಳೆಂದು ಹೇಳಲ್ಪಡುವವು ಎಂದರೆ ಈ ಅವ್ಯಕ್ತಶಬ್ದಗಳ ಅಭಿಪ್ರಾಯವು, ಮನುಷ್ಯರಿಗೆ ತಿಳಿಯುವುದಿಲ್ಲ. ಇಂತಹ ವ್ಯಕ್ತಾವ್ಯಕ್ತ ಶಬ್ದ ಸ್ವರೂಪಳಾದ ವಾಗ್ದೇವತೆಯು ನಮಗೆ ಹಾಲನ್ನು ಕರೆಯುವ ಧೇನುವಿನಂತೆ ಪ್ರೀತಿಪಾತ್ರಳಾಗಿ ಹಿತಕರವಾದ ಅನ್ನಾದಿಗಳನ್ನು ಎಂದರೆ ಹಾಲು, ಘೃತ ಮೊದಲಾದವನ್ನೂ, ರಸಾದಿಗಳನ್ನೂ

ಎಂದರೆ ಸಸ್ಯಾದಿಗಳಿಂದ ಉತ್ಪನ್ನವಾಗುವ ಪುಷ್ಟಿಕರವಾದ ಆಹಾರಾದಿಗಳನ್ನೂ ಯಥೇಚ್ಛವಾಗಿ ಕರೆಯುತ್ತಾ ಎಂದರೆ ಅನುಗ್ರಹಿಸುತ್ತಾ ನಮ್ಮ ಸಮೀಪಕ್ಕೆ ಬರಲಿ ಮತ್ತು ನಮ್ಮಿಂದ ಸ್ತುತಿಸಲ್ಪಡಲಿ ಎಂದು ನಿರ್ವಚನಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಇಪ್ಪತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

••••••••

## ಅಥ ತ್ರಿಂಶತಿ ಖಂಡಃ

## ಮೂವತ್ತನೆಯ ಖಂಡವು

ಅನ್ವಿದನುಮತೇ ತ್ವಂ ಮನ್ಯಾಸೈ ಶಂ ಚ ನಸ್ಕೃಧಿ । ಕ್ರತ್ವೇ ದಕ್ಷಾಯ ನೋ ಹಿನು ಪ್ರಣ ಆಯೂಂಷಿ ತಾರಿಷಃ । (ತೈ. ಸಂ. ೩-೩-೧೧) ॥ ಅನುಮನ್ಯಸ್ವಾನುಮತೇ ತ್ವಂ ಸುಖಂ ಚ ನಃ ಕುರ್ವನ್ನನ್ನಂ ಚ ನೋಽಪತ್ಯಾಯ ಹಿ ಪ್ರವರ್ಧಯ ಚ ನ ಆಯೂ ರಾಕಾ ರಾತೇರ್ದಾನಕರ್ಮಣಸ್ತಸ್ಯಾ ಏಷಾ ಭವತಿ ॥ ೩೦ ॥

ಅನ್ವಿದನುಮತೇ ತ್ವಂ ಮನ್ಯಾಸೈ ಶಂ ಚ ನಶ್ಕೃಧಿ । ಕ್ರತ್ವೇ ದಕ್ಷಾಯ
ನೋ ಹಿನು ಪ್ರಣ ಆಯೂಂಷಿ ತಾರಿಷಃ ॥

(ಯ. ವಾ. ಸಂ. ೩೪-೮)

ಅನುಮತಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಕಲಾಹೀನಚಂದ್ರನುಳ್ಳ ಪೌರ್ಣಮಾಸಿಯೇ ನೀನು ನಮ್ಮ ಸ್ತುತಿಯನ್ನು ತಿಳಿ. ನಮಗೆ ಸುಖವನ್ನುಂಟುಮಾಡು ನಮ್ಮ ಸಂಕಲ್ಪಸಿದ್ಧಿಗೋಸ್ಕರ ಪ್ರೇರೇಪಿಸು. ನಮ್ಮ ಆಯುಸ್ಸನ್ನು ಅಭಿವೃದ್ಧಿಗೊಳಿಸು.

ರಾಕಾ—ರಾತೇರ್ದಾನಕರ್ಮಣಃ । ತಸ್ಯಾ ಏಷಾ ಭವತಿ ॥ ೩೦ ॥

ರಾಕಾಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ದಾನಾರ್ಥಕವಾದ ರಾಧಾತುವಿಗೆ "ಕೃದಾಧಾರಾ—" ಸೂತ್ರದಿಂದ ಕ ಪ್ರತ್ಯಯ ಹವಿರ್ದಾನನಿಮಿತ್ತಕ್ಕೋಸ್ಕರ ಆಗುವುದು. ಹವಿನ್ವೈದನೆಯ ದಿನದಲ್ಲಿ ಪೂರ್ಣಚಂದ್ರನಿರುವ ಪೌರ್ಣಮಾಸಿರಾತ್ರಿ ಋತ್ವಿಕ್ ಈ ಪೌರ್ಣಮಾಸಿಯಲ್ಲಿ ಹವಿಸ್ಸನ್ನು ದೇವತೆಗಳಿಗೆ ಕೊಡುತ್ತಾನೆ. ಮುಂದೆ ಹೇಳುವ ಮಂತ್ರವು ರಾಕಾಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಮೂವತ್ತನೆಯ ಖಂಡವು ಮುಗಿದಿದೆ.

## ಅಥ ಏಕತ್ರಿಂಶಂತಿ ಖಂಡಃ

## ಮೂವತ್ತೊಂದನೆಯ ಖಂಡವು

ರಾಕಾಮುಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ । ಸೀವ್ಯತ್ವಪಃ ಸೂಚ್ಯಾಚ್ಛಿದ್ಯಮಾನಯಾದದಾತು ವೀರಂ ಶತದಾಯು ಮುಕ್ಥ್ಯಂ । (ಋ. ಸಂ. ೨-೩೨-೪) ॥ ರಾಕಾಮುಹಂ ಸುಹ್ವಾನಾಂ ಸುಷ್ಟುತ್ಯಾಹ್ವಯೇ ಶೃಣೋತು ನಃ ಸುಭಗಾ ಬೋಧತ್ವಾತ್ಮನಾ ಸೀವ್ಯತ್ವಪಃ ಪ್ರಜನನಕರ್ಮ ಸೂಚ್ಯಾಚ್ಛಿದ್ಯ-ಮಾನಯಾ ಸೂಚೀ ಸೀವ್ಯತೇರ್ದದಾತು ವೀರಂ ಶತಪ್ರದಮುಕ್ಥ್ಯಂ ವಕ್ತವ್ಯಪ್ರಶಂ ಸಂ ಸಿನೀವಾಲೀ ಕುಹೂರಿತಿ ದೇವಪತ್ನ್ಯಾವಿತಿ ನೈರುಕ್ತಾ ಅಮಾವಾಸ್ಯೇ ಇತಿ ಯಾಜ್ಞಿಕಾ ಯಾ ಪೂರ್ವಾಮಾವಾಸ್ಯಾ ಸಾ ಸಿನೀವಾಲೀ ಯೋತ್ತರಾ ಸಾ ಕುಹೂರಿತಿ ವಿಜ್ಞಾಯತೇ ಸಿನೀವಾಲೀ ಸಿನಮನ್ನಂ ಭವತಿ ಸಿನಾತಿ ಭೂತಾನಿ ಬಾಲಂ ಪರ್ವ ವೃಣೀತೇಸ್ತಸ್ಮಿನ್ನ-ನ್ನವತೀ ವಾಲಿನೀ ವಾ ವಾಲೇನೇವಾಸ್ಯಾಮಣುತ್ವಾಚ್ಚಂದ್ರಮಾಃ ಸೇವಿತವ್ಯೋ ಭವತೀತಿ ವಾ ತಸ್ಯಾ ಏಷಾ ಭವತಿ ॥ ೩೧ ॥

ರಾಕಾಮುಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ
ಬೋಧತು ತ್ಮನಾ । ಸೀವ್ಯತ್ವಪಃ ಸೂಚ್ಯಾಽಚ್ಛಿದ್ಯಮಾನಯಾ
ದದಾತು ವೀರಂ ಶತದಾಯುಮುಕ್ಥ್ಯಂ ॥

(ಋ. ಸಂ. ೨-೩-೧೦)

ರಾಕಾಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಹೋತೃವಾದ ನಾನು ಆಹ್ವಾನಕ್ಕೆ ಫಲಕೊಡುವ ಪೂರ್ಣ ಚಂದ್ರನುಳ್ಳ ಪೌರ್ಣಮಾಸಿಯನ್ನು (ಅಭಿಮಾನಿ ದೇವತೆಯನ್ನು) ಕರೆಯುತ್ತೇನೆ. ಸಂಪತ್ಭರಿತಳಾದ ಅವಳು ನಮ್ಮ ಆಹ್ವಾನವನ್ನು ಕೇಳಲಿ. ಕೇಳಿ ತಾನಾಗಿ ನಮ್ಮ ಅಭಿಪ್ರಾಯವನ್ನು ತಿಳಿಯಲಿ. ನಮಗೆ ಸೂಜಿಯಸ್ಥಾನದಂತೆ ಅವಿಚ್ಛಿನ್ನ ಬುದ್ಧಿಯಿಂದ ಸಂಪತ್ತನ್ನು ಅನುಗ್ರಹಿಸಲಿ ಸ್ತೋತ್ರಾರ್ಹನಾದ ವೀರಪುತ್ರನನ್ನೂ ದಯಪಾಲಿಸಲಿ.

ರಾಕಾಮಹಂ ಸುಹ್ವಾನಾಂ ಸುಷ್ಟುತ್ಯಾಹ್ವಯೇ, ಶೃಣೋತುನಃ ಸುಭಗಾ ಬೋಧತ್ವಾತ್ಮನಾ, ಸೀವ್ಯತ್ವಪಃ ಪ್ರಜನನಕರ್ಮ, ಸೂಚ್ಯಾಚ್ಛಿದ್ಯಮಾನಯಾ, ಸೂಚೀ ಸೀವ್ಯತೇ । ದದಾತು ವೀರಂ ಶತದಾಯುಮುಕ್ಥ್ಯಮ್ । ವಕ್ತವ್ಯ-ಪ್ರಶಂಸಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಪಃ ಪ್ರಜನನಕರ್ಮಪರ್ಯಾಯದಲ್ಲಿ ಪಠಿತವಾಗಿದೆ ( ನಿಘ. ೨-೧-೧) ಪುತ್ರೋತ್ಪಾದನಲಕ್ಷಣವಾದ ಕರ್ಮವೆಂದರ್ಥ. ಸೂಚಿಯಿಂದ ಹೊಲಿದ ಬಟ್ಟೆಯು ಚಿರಕಾಲವಿರುವಂತೆ ಪ್ರಜಾಸಂತಾನ ಅವಿಚ್ಛಿನ್ನವಾಗಿರಲಿ ಎಂದು ತಾತ್ಪರ್ಯ. ಷಿವು ತಂತುಸಂತಾನೇ ಧಾತು ಚಟ್‌ಪ್ರತ್ಯಯ ಧಾತುವಿನ ಟಿಗೆ ಊಭಾವ. ಟಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್. ಸೂಚೀ ಎಂದಾಗುತ್ತದೆ ಶತದಾಯಂ ಅಂದರೆ ಬಹುಧನವುಳ್ಳವನೆಂದರ್ಥ.

**ಸಿನೀವಾಲೀ ಕುಹೂರಿತಿ ದೇವಪತ್ನ್ಯಾವಿತಿ ನೈರುಕ್ತಾಃ | ಅಮಾವಾಸ್ಯೇ ಇತಿ ಯಾಜ್ಞಿಕಾಃ | ಯಾ ಪೂರ್ವಾಮಾವಾಸ್ಯಾಸಾ ಸಿನೀವಾಲೀ | ಯೋತ್ತರಾ ಸಾ ಕುಹೂಃ ಇತಿ | ವಿಜ್ಞಾಯತೇ ||**

ಸಿನೀವಾಲೀ, ಕುಹೂ ಶಬ್ದಗಳ ವಿಷಯದಲ್ಲಿ ಮತಭೇದವನ್ನು ತೋರಿಸುತ್ತಾರೆ. ನಿರುಕ್ತಕಾರರು ಇವು ದೇವಪತ್ನಿಯರೆಂದು ಹೇಳುತ್ತಾರೆ. ಯಾಜ್ಞಿಕರು ಅಮಾವಾಸ್ಯಾ ವಿಶೇಷವೆನ್ನುತ್ತಾರೆ. ಅದಕ್ಕೆ ಬ್ರಾಹ್ಮಣಪ್ರಮಾಣವನ್ನೂ ತೋರಿಸುತ್ತಾರೆ. ಸಾದೃಷ್ಟೇಂದುಕಲಾಕುಹೂಃ ಎಂದು ಅವರು ಕೃಷ್ಣಪಕ್ಷದ ಚತುರ್ದಶಿಯ ಅಂತಿಮಯಾಮದಲ್ಲಿ ಅಮಾವಾಸ್ಯೆಯ ಆದ್ಯಯಾಮದಲ್ಲಿ ಚಂದ್ರಕಲಾಶೇಷವಿರುವುದರಿಂದ ಅದಕ್ಕೆ ಸಿನೀವಾಲೀ ಎಂದು ಹೆಸರು. ಅಮಾವಾಸ್ಯೆಯ ಅಂತಿಮಪ್ರಹರದಲ್ಲಿ ಸಂಪೂರ್ಣ ಚಂದ್ರಕಲಾನಷ್ಟವಾಗಿರುವುದರಿಂದ ಅದಕ್ಕೆ ಕುಹೂ ಎಂದು ಹೆಸರು. ತದಭಿಮಾನಿದೇವತೆಯೆಂದು ಸಿದ್ಧಾಂತ

**ಸಿನೀವಾಲೀ ಸಿನಮನ್ನಂ ಭವತಿ, ಸಿನಾತಿ ಭೂತಾನಿ | ವಾಲಂ ಪರ್ವ, ವೃಣೋತೇಸ್ತಸ್ಮಿನ್ನನ್ನವತೀ | ವಾಲಿನೀ ವಾ | ವಾಲೇನೇವಾಸ್ಯಾ ಅಣುತ್ವಾಚ್ಚಂದ್ರಮಸಃ ಸೇ (ವಿ) ತವ್ಯೋ ಭವತೀತಿವಾ | ತಸ್ಯಾ ಏಷಾ ಭವತಿ || ೩೧ ||**

ಸಿನೀವಾಲೀಪದದ ನಿರ್ವಚನವನ್ನು ತೋರಿಸುತ್ತಾರೆ. ಸಿನೀ, ವಾಲೀ ಎಂದು ಇಲ್ಲಿ ಎರಡು ಪದಗಳಿರುತ್ತವೆ. ಸಿನಮನ್ನಂ ಭವತಿ ಅಥವಾ ಸಿನಾತಿ ಬಧ್ನಾತಿ ಭೂತಾನಿ ಎಂದು ಎರಡು ರೀತಿಯಾಗಿ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಷಿಞ್ ಬಂಧನೇ ಧಾತು ನಕ್‌ಪ್ರತ್ಯಯ (ನಿಘ. ೨-೭-೮) ಸಿನ ಅಂದರೆ ಅನ್ನ ಅಥವಾ ಸಿನೀ ಅಂದರೆ ಪ್ರಾಣಿಗಳು ಅನ್ನದಿಂದ ಆಗುತ್ತವೆ ಅನ್ನವೇ ರಸರೂಪವಾಗಿ ಪರಿಣತವಾಗಿ ತ್ವಗಸೃಙ್ಮಾಂಸ ಮೇದೋಸ್ಥಿಮಜ್ಜಾ ಶುಕ್ರರೂಪ ಸಪ್ತಧಾತುರೂಪದಿಂದ ನಿಷ್ಪನ್ನವಾಗಿ ಶರೀರವಾಗುತ್ತದೆ. ಚಂದ್ರನಿದ್ದರೆ ಅವನ ರಶ್ಮಿಸಂಬಂಧದಿಂದ ಅನ್ನದಿಂದ ಗರ್ಭಸಂಭವವೆಂದು ಕೃಷಿವಿದ್ಯೆಯಲ್ಲಿ ವಿವೃತವಾಗಿದೆ. ವಾಲೀಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಉತ್ಸವತಿಥಿ ಅಥವಾ ಸಂಧಿಸಮಯಕ್ಕೆ ವಾಲೀ ಎಂದು ಹೆಸರು. ದೇವಾ ತತ್ರ ಹವೀಂಷಿ ವೃಣ್ವಂತಿ ಇತಿ ವಾಲೀ ದೇವತೆಗಳು ಈ ಸಮಯದಲ್ಲಿ ಹವಿಸ್ಸನ್ನು ಸ್ವೀಕರಿಸುತ್ತಾರೆ. ವೃಞ್ ವರಣೇ ಧಾತು ವನಿಪ್ ಪ್ರತ್ಯಯ ವಾಲೇ ಸಿನೀ ಸಿನೀವಾಲೀ ರಾಜದಂತಾದಿಗಳಲ್ಲಿ ಸೇರಿರುವುದರಿಂದ ಸಿನೀಪದಕ್ಕೆ ಪೂರ್ವಪ್ರಯೋಗ ಬರುತ್ತದೆ. ಪರ್ವಕಾಲದಲ್ಲಿ ಇದು ಅನ್ನದಿಂದ ಕೂಡಿರುತ್ತದೆ. ಅಥವಾ ಉಪಮಾರ್ಥದಲ್ಲಿ ಇದು ಹೇಳಿದೆ. ತಲೆಕೂದಲಿನಂತೆ ಬಹು ಸೂಕ್ಷ್ಮವಾಗಿ ಚಂದ್ರಕಲೆಯನ್ನು ಈ ಕಾಲದಲ್ಲಿ ತಿಳಿಯಬೇಕಾಗಿದೆ. ಅಥಾ ಬಾಲಕನಿಂದಲು ತಿಳಿಯಲು ಯೋಗ್ಯವಾದ ಕಲೆಯುಳ್ಳದ್ದು ಎಂದರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ಸಿನೀವಾಲೀಸ್ತುತಿಯನ್ನು ಪ್ರತಿಪಾದಿಸುತ್ತದೆ.

**ರಾಕಾಮಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ |**
**ಸೀವ್ಯತ್ವಪಃ ಸೂಚ್ಯಾಚ್ಛಿದ್ಯಮಾನಯಾ ದದಾತು ವೀರಂ ಶತದಾಯಮುಕ್ಥ್ಯಂ ||**

ಶ್ರೇಷ್ಠವಾದ ಆಹ್ವಾನಕ್ಕೆ ಅರ್ಹಳಾದ "ರಾಕಾ" ಎಂಬ ದೇವತೆಯನ್ನು ಶ್ರೇಷ್ಠವಾದ ಸ್ತುತಿಪೂರ್ವಕವಾಗಿ ನಾನು ಕರೆಯುತ್ತೇನೆ. ಉತ್ತಮವಾದ ಧನವುಳ್ಳ ಆ ದೇವಿಯು ನಮ್ಮ ಆಹ್ವಾನವನ್ನು ಕೇಳಲಿ. ತಾನಾಗಿಯೇ ನಮ್ಮ ಇಷ್ಟಾರ್ಥವನ್ನು ತಿಳಿಯಲಿ. ಪುತ್ರೋತ್ಪಾದನ ರೂಪವಾದ ಕರ್ಮವನ್ನು ಸೂಚೀಸ್ಥಾನೀಯವಾದುದೂ, ಅವಿಚ್ಛಿನ್ನವಾದುದೂ ಆದ ಅನುಗ್ರಹದ ಬುದ್ಧಿಯಿಂದ ಹೆಣೆಯಲಿ. ಪರಾಕ್ರಮಿಯಾದವನೂ, ಬಹುಧನವುಳ್ಳವನೂ ಮತ್ತು ಪ್ರಶಸ್ಯನೂ ಆದ ಪುತ್ರನನ್ನು ಕೊಡಲಿ.

ಪತ್ನೀಸಂಯಾಜವೆಂಬ ಯಾಗದಲ್ಲಿ ಗೃಹಪತಿಹೋಮಕ್ಕೆ ಪೂರ್ವಭಾವಿಯಾಗಿ ರಾಕಾ ಮತ್ತು ಸಿನೀವಾಲಿ ಎಂಬ ದೇವತೆಗಳನ್ನು ಉದ್ದೇಶಿಸಿ ಹೋಮಮಾಡಬೇಕು. ಆಗ ರಾಕಾಯಾಗದಲ್ಲಿ ರಾಕಾಮಹಂ ಎಂಬ ಈ ಸೂಕ್ತದ ಮೊದಲನೆಯ ಋಕ್ಕು ಯಾಸ್ತೇ ರಾಕೇ ಎಂಬ ಎರಡನೆಯ ಋಕ್ಕು ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳಿಗಾಗಿ ಉಪಯೋಗಿಸ ಲಾಗದೆಂದು ಆಶ್ವಲಾಯನ ಶ್ರೌತ್ರಸೂತ್ರದ ರಾಕಾಮಹಂ ಸಿನೀವಾಲಿ ಕುಹೋಮಹಮಿತಿ ದ್ವೇ ದ್ವೇ ಯಾಜ್ಯಾನು-ವಾಕ್ಯೇ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೧-೧೦); ಮತ್ತು ಮರುದ್ದೇವತಾಕವಾದ ಮಂತ್ರಗಳಲ್ಲಿ ಈ ಋಕ್ಕು ಗಳನ್ನು ಧಾಯ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ ರಾಕಾಮಹಮಿತಿ ದ್ವೇ ಎಂಬ ಸೂತ್ರದಿಂದ ವಿವೃತನಾಗಿರುವುದು. (ಆ. ೫-೨೦)

ಈ ಋಕ್ಕಿನಿಂದಲೂ ಇದರ ಮುಂದಿನ ಋಕ್ಕಿನಿಂದಲೂ ರಾಕಾ ಎಂಬ ದೇವಿಯು ಸ್ತುತಳಾಗಿದ್ದಾಳೆ.

**ರಾಕಾ ಸಂಪೂರ್ಣಚಂದ್ರಾ ಪೌರ್ಣಮಾಸೀ**—ಸಂಪೂರ್ಣವಾದ ಚಂದ್ರನನ್ನು ಹೊಂದಿರುವ ರಾತ್ರಿಗೆ ಪೂರ್ಣಿಮಾ ಎಂದು ಹೆಸರು ಲೋಕದಲ್ಲಿ ರೂಢಿಯಲ್ಲಿದೆ. ಇದನ್ನೇ ರಾಕಾ ಎಂದು ಹೇಳಿದೆ. **ಸುಹವಾಂ ಸುಷ್ಟುತೀ ಅಹಂ ಹುವೇ-ಸ್ವಾಹ್ವಾನಾಂ ಆಹ್ವಾನ ಪ್ರಯೋಜಕಾರಿಣೀಂ ಶೋಭನಯಾ ಸ್ತುತ್ಯಾ ಅಹಮಾಹ್ವಯಾಮಿ** ಈ ದೇವಿಯು ತನ್ನನ್ನು ಆಹ್ವಾನಮಾಡುವವರ ಅಭಿಲಾಷೆಗಳನ್ನು ನೆರವೇರಿಸಿಕೊಡುವವಳಾದುದರಿಂದ ಈ ದೇವಿಯನ್ನು ಯಜಮಾನನು ಉತ್ತಮವಾದ ಸ್ತುತಿಯಿಂದ ಆಹ್ವಾನಮಾಡುವನು. ಎಂದು ಹೇಳಿದೆ.

ಸುಭಗಾ ಎಂಬ ಪದಕ್ಕೆ ಉತ್ತಮವಾದ ಧನವನ್ನು ಹೊಂದಿರುವಳೆಂದು ಅರ್ಥಮಾಡಿ ಉತ್ತಮವಾದ ಧನವುಳ್ಳ ಈ ದೇವಿಯು ಯಜಮಾನನ ಆಹ್ವಾನವನ್ನು (ಕೇಳಲಿ ಎಂದೂ, ಕೇಳಿದ ನಂತರ) ಶ್ರವಣಮಾಡಿದ ನಂತರ **ತ್ಮನಾ ಬೋಧತು** ಯಜಮಾನನು ಆಹ್ವಾನಮಾಡಿದ ಉದ್ದೇಶವನ್ನು ತಾನಾಗಿಯೇ ತಿಳಿಯಲಿ ಎಂದೂ **ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು** ಯಜಮಾನನ ಸಂತತಿಯು ಅವಿಚ್ಛಿನ್ನವಾಗುವಂತೆ ಅನುಗ್ರಹಿಸಲಿ ಎಂದೂ, **ವೀರಂ ಶತದಾಯಂ ಉಕ್ಥ್ಯಂ ಪುತ್ರಂ ದದಾತು** ಪರಾಕ್ರಮಶಾಲಿಯೂ, ಪ್ರಭೂತವಾದ ಧನವಂತನೂ ಅಥವಾ ಪ್ರಭೂತವಾಗಿ ದಾನಮಾಡುವವನೂ ಆಗಿರುವ ಪ್ರಸಶ್ಯಮಾನನಾದ ಪುತ್ರನನ್ನು ಅನುಗ್ರಹಿಸಲಿ ಎಂದೂ ಆಶಿಸಿದೆ.

**ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು**—**ಪುತ್ರೋತ್ಪಾದನಲಕ್ಷಣಂ ಕರ್ಮ ಸೂಚೀಸ್ಥಾನೀಯಯಾ ಅವಿಚ್ಛನ್ನಯಾ ಅನುಗ್ರಹಬುದ್ಧ್ಯಾ ಸಂತನೋತು| ಯಥಾವಸ್ತ್ರಾದಿಕಂ ಸೂಚ್ಯಾಸ್ಯೂತಂ ಚಿರಂ ತಿಷ್ಠತಿ ಏವಮಿದಂ ಕರೋತು|** ಅಪಃ ಎಂಬ ಪದವು ಕರ್ಮನಾಮಗಳಲ್ಲಿ (ನಿ. ೭-೨) ಯಾಸ್ಕರಿಂದ ಪಠಿತವಾಗಿದೆ. ಈ ಪದಕ್ಕೆ

ಪುತ್ರೋತ್ಪಾದನರೂಪವಾದ ಕರ್ಮವೆಂದು ಇಲ್ಲಿ ಅರ್ಥವನ್ನು ವಿವರಿಸಿದೆ. ರಾಕಾದೇವಿಯ ಅನುಗ್ರಹವು ಸೂಜಿಯಿಂದ ಹೊಲಿಯಲ್ಪಟ್ಟ (ವಸ್ತ್ರದ ಹಾಗೆ) ವಸ್ತ್ರವು ಬಹಳ ಕಾಲದವರೆಗೂ ಸ್ಥಿರವಾಗಿರುವ ಹಾಗೆ ನಮ್ಮ (ಪುತ್ರರು) ವಂಶವು ಪುತ್ರರುತ್ಪನ್ನರಾಗುವುದರಿಂದ ಬಹಳ ಕಾಲದವರೆಗೂ ಸ್ಥಿರವಾಗಿರಲಿ ಎಂದು ಅರ್ಥವನ್ನು ವಿವರಿಸಿದೆ.

ನಿರುಕ್ತಕಾರರು ರಾಕಾ ಎಂಬ ಪದದ ಅರ್ಥವನ್ನು ವಿವರಿಸುವಾಗ ಈ ಋಕ್ಕನ್ನೇ ಉದಹರಿಸಿ, ( ನಿ. ೧೧–೩೨) ರಾಕಾ—ರಾತೇರ್ದಾನಕರ್ಮಣಃ ಎಂದು ನಿರ್ವಚನವನ್ನು ಹೇಳಿ, ರಾಕಾಮಹಂ ಸುಹ್ವಾನಾಂ ಸುಷ್ಟುತ್ಯಾಹ್ವಯೇ ಶೃಣೋತುನಸ್ಸುಭಗಾ ಬೋಧತ್ವಾತ್ಮನಾ ಸೀವ್ಯತ್ವಪಃ ಪ್ರಜನನಕರ್ಮ ಸೂಚ್ಯಾಚ್ಛಿದ್ಯಮಾನಯಾ। ಸೂಚೀ ಸೀವ್ಯತೇಃ ದದಾತು ವೀರಂ ಶತಪ್ರದಮುಕ್ಥ್ಯಂ ವಕ್ತವ್ಯಪ್ರಶಂಸಂ ಎಂದು ಈ ಋಕ್ಕಿನ ಅರ್ಥವನ್ನು ಭಾಷ್ಯಕಾರರು ಅರ್ಥವನ್ನಾಡಿಸುವ ರೀತಿಯಲ್ಲಿಯೇ ವರ್ಣಿಸಿದ್ದಾರೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತೊಂದನೆಯ ಖಂಡ ಸಮಾಪ್ತವಾಗಿದೆ.

---

## ಅಥ ದ್ವಾತ್ರಿಂಶತಿ ಖಂಡಃ

### ಮೂವತ್ತೆರಡನೆಯ ಖಂಡವು

ಸಿನೀವಾಲೀ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ। ಜುಷಸ್ವ ಹವ್ಯಮಾಹುತಂ ಪ್ರಜಾಂ ದೇವಿ ದಿದಿಡ್ಢಿ ನಃ (ಋ. ಸಂ. ೨-೩೨-೬) ಸಿನೀವಾಲಿ ಪೃಥುಜಘನೇ ಸ್ತುಕಸ್ತ್ಯಾಯತೇಃ ಸಂಘಾತಃ ಪೃಥುಕೇಶಸ್ತುಕೇ ಪೃಥುಷ್ಟುತೇ ವಾ ಯಾ ತ್ವಂ ದೇವಾನಾಮಸಿ ಸ್ವಸಾ ಸ್ವಸಾ ಸು ಅಸಾ ಸ್ವೇಷು ಸೀದತೀತಿ ವಾ ಜುಷಸ್ವ ಹವ್ಯಮಾಹುತಂ ಪ್ರಜಾಂ ಚ ದೇವಿ ದಿಶ ನಃ ಕುಹೂರ್ಗೂಹತೇಃ ಕ್ವಾಭೂದಿತಿ ವಾ ಕ್ವ ಸತೀ ಹೂಯತ ಇತಿ ವಾ ಕ್ವಾಹುತಂ ಹವಿರ್ಜುಹೋತೀತಿ ವಾ ತಸ್ಯಾ ಏಷಾ ಭವತಿ ॥ ೩೨ ॥

ಸಿನೀವಾಲಿ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ । ಜುಷಸ್ವ ಹವ್ಯ-
ಮಾಹುತಂ ಪ್ರಜಾಂ ದೇವಿ ದಿದಿಡ್ಢಿ ನಃ ॥

(ಯ. ವಾ. ಸಂ. ೩೪–೧೦, ಅ. ಸಂ. ೭–೧೦–೨) (ಋ. ಸಂ. ೨–೭–೧೪)

ಸಿನೀವಾಲೀಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ತೋರುವ ಚಂದ್ರಕಲೆಯುಳ್ಳ ಅಮಾವಾಸೆಗೆ ಸಿನೀವಾಲೀ ಯೆಂದು ಹೆಸರು. ಸಿನೀವಾಲೀ ಅಭಿಮಾನಿದೇವತೆಯೇ ಅಧಿಕಕೇಶ ಕಲಾಪವುಳ್ಳ ನೀನು ಮಾಧ್ಯಮಿಕ ದೇವತೆಗಳ ಭಗಿನಿಯಾಗಿರುವಿ. ಆ ನೀನು ಅಭಿಮುಖವಾಗಿ ಅಗ್ನಿಯಲ್ಲಿ ಪ್ರಕ್ಷಿಪ್ತವಾದ ಹವಿಸ್ಸನ್ನು ಸ್ವೀಕರಿಸು ನಮಗೆ ಪುತ್ರಾದಿ ಸಂಪತ್ತನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಸಿನೀವಾಲಿ ! ಪೃಥುಜಘನೇ ! ಸ್ತುಕಃ ಸ್ತ್ಯಾಯತೇಃ ಸಂಘಾತಃ |
ಪೃಥುಕೇಶಸ್ತುಕೇ ಪೃಥುಷ್ಟುಕೇ ವಾ | ಯಾ ತ್ವಂ ದೇವಾನಾಮಸಿ
ಸ್ವಸಾ | ಸು-ಅಸಾ ಸ್ವೇಷು ಸೀದತೀತಿ ವಾ | ಜುಷಸ್ವ ಹವ್ಯಮು-
ದನಂ ಪ್ರಜಾಂ ಚ ದೇವಿ ದಿಶ ನಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪೃಥುಷ್ಟುಕೇ ಎಂಬುದಕ್ಕೆ ವಿಸ್ತಾರವಾದ ಜಘನ ವುಳ್ಳವಳೆಂದರ್ಥ. ಅಥವಾ ಅಧೀಕಕೇಶಕಲಾಪವುಳ್ಳವಳು. ಸ್ತ್ಯೈ ಷ್ಟ್ಯೈ ಶಬ್ದಸಂಘಾತಯೋಃ ಧಾತು. ಡುಕಕ್‌ಪ್ರತ್ಯಯ ಬಂದಾಗ ಐಕಾರಕ್ಕೆ ಲೋಪ. ಷ್ಟುಕ ಅಂದರೆ ಸಂಘಾತವೆಂದರ್ಥ. ಪೃಥುಕೇಶಷ್ಟುಕ ಎಂದಿರುವಾಗ ಶಾಕಪಾರ್ಥಿವಾದಿಗಣದಲ್ಲಿ ಸೇರಿರುವುದರಿಂದ ಮಧ್ಯದ ಕೇಶಪದಕ್ಕೆ ಲೋಪ. ಸ್ವಸಾ ಅಂದರೆ ಸ್ವಯಂಸಂಚಾರಿಣಿ ಅಥವಾ ತಂಗಿಯೆಂದರ್ಥ. ಸು ಅಸಾ ಸ್ವಸಾ ಎಂದಾಗಿದೆ. ಸುಖವಾಗಿ ತಿರುಗುವವಳು, ಪಿತ್ರಾದಿ ಸ್ವಜನರಸಮುದಾಯಲ್ಲಿ ಇರುವವಳು ಎಂದು ತಾತ್ಪರ್ಯ.

ಕುಹೂ ಗೂಹತೇಃ | ಕ್ವಾಭೂದಿತಿ ವಾ | ಕ್ವ ಸತೀ ಹೂಯತ ಇತಿ ವಾ
ಕ್ವಾಹುತಂ ಹವಿರ್ಜುಹೋತಿ ವಾ | ತಸ್ಯಾ ಏಷಾ ಭವತಿ || ೩೨ ||

ಕುಹೂ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಗುಹೂ ಸಂವರಣೇ ಧಾತು ಕ್ವ ಶಬ್ದ ಉಪಪದವಾಗಿರುವಾಗ ಭೂಧಾತು, ಅಥವಾ ಹ್ವೇಧಾತುವಿಗೆ ಕೂಪ್ರತ್ಯಯ ಬಂದಾಗ ಗಕಾರಕ್ಕೆ ಕಕಾರಾದಿಗಳು ಬಂದು ಕುಹೂ ಎಂದಾಗುತ್ತದೆ, ಇದರಲ್ಲಿ ಚಂದ್ರನು ಅದೃಶ್ಯನಾಗಿರುತ್ತಾನೆ. ಅವನು ಎಲ್ಲಿಗೆ ಹೋದನು ಎಂದು ವಿತರ್ಕಾಸ್ಪದನಾಗುತ್ತಾನೆ. ಗುಹುಃ; ಕ್ವಭೂ; ಕ್ವಹೂ. ಎಂದಿರುವುದು ಪೃಷೋದರಾದಿಪಠಿತವಾದುದರಿಂದ ಕುಹೂ ಎಂದಾಗುತ್ತದೆ. ಮುಂದೆ ಹೇಳುವ ಮಂತ್ರವು ಕುಹೂ ಸ್ತುತಿ ಪ್ರತಿಪಾದಕವಾಗುತ್ತದೆ.

ಸಿನೀವಾಲಿ ಪೃತುಷ್ಟುಕೇ ಯಾ ದೇವಾನಾಮಸಿ ಸ್ವಸಾ |
ಜುಷಸ್ವ ಹವ್ಯಮಾಹುತಂ ಪ್ರಜಾಂ ದೇವಿ ದಿದಿಡ್ಢಿನಃ ||

ಪೃಥುವಾದ ಜಘನವುಳ್ಳ ಎಲೈ ಸಿನೀವಾಲಿ ದೇವತೆಯೇ, ಯಾವ ನೀನು ದೇವತೆಗಳಿಗೆ ಭಗಿನಿಯಾಗಿದ್ದೀಯೋ ಅಂತಹ ನೀನು ಅಗ್ನಿಯಲ್ಲಿ ನಾವು ಅರ್ಪಿಸಿದ ಹವಿಸ್ಸನ್ನು ಸೇವಿಸು. ಎಲೈ ದೇವಿಯೇ, ನಮಗೆ ಪುತ್ರಾದಿಗಳನ್ನು ಕೊಡು.

ಸಿನೀವಾಲಿಯಾಗದಲ್ಲಿ ಸಿನೀವಾ ಎಂಬ ಈ ಋಕ್ಕೂ, ಯಾ ಸುಬಾಹುಃ ಎಂಬ ಇದರ ಮುಂದಿನ ಋಕ್ಕೂ ಸಹ ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳನ್ನು ಉಪಯೋಗಿಸಬೇಕೆಂದು ಹೇಳಿರುವ ಆಶ್ವಲಾಯನಶ್ರೌತಸೂತ್ರದ ಸೂತ್ರವನ್ನು ಹಿಂದೆಯೆ ಹೇಳಲಾಗಿದೆ. (ಆ. ೫–೨೦).

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯಸ್ತ್ರಿಂಶತಿ ಖಂಡಃ

### ಮೂವತ್ತಮೂರನೆಯ ಖಂಡವು

ಕುಹೂಮಹಂ ಸುಕೃತಂ ವಿದ್ಮನಾಪಸಮಸ್ಮಿನ್ ಯಜ್ಞೇ ಸುಹವಾಂ ಜೋಹವೀಮಿ । ಸಾ ನೋ ದದಾತು ಶ್ರವಣಂ ಪಿತೄಣಾಂ ತಸ್ಯೈ ತೇದೇವಿ ಹವಿಷಾ ವಿಧೇಮ (ಮೈತ್ರಾ. ಸಂ. ೪-೧೨-೬) ಕುಹೂಮಹಂ ಸುಕೃತಂ ವಿದಿತಕರ್ಮಾಣಮಸ್ಮಿನ್ಯಜ್ಞೇ ಸುಹ್ವಾನಾಮಾಹ್ವಯೇ ಸಾ ನೋ ದದಾತು ಶ್ರವಣಂ ಪಿತೄಣಾಂ ಪಿತ್ರ್ಯಂ ಧನಮಿತಿ ವಾ ಪಿತ್ರ್ಯಂ ಯಶ ಇತಿ ವಾ ತಸ್ಯೈ ತೇ ದೇವಿ ಹವಿಷಾ ವಿಧೇಮೇತಿ ವ್ಯಾಖ್ಯಾತಂ ಯಮೀ ವ್ಯಾಖ್ಯಾತಾ ತಸ್ಯಾ ನಿಷಾ ಭವತಿ ॥ ೩೩ ॥

ಕುಹೂಮಹಂ ಸುಕೃತಂ ವಿದ್ಮನಾಪಸಮಸ್ಮಿನ್ಯಜ್ಞೇ ಸುಹವಾಂ ಜೋಹವೀಮಿ ।
ಸಾ ನೋ ದದಾತು ಶ್ರವಣಂ ಪಿತೄಣಾಂ ತಸ್ಯೈ ತೇ ದೇವಿ ಹವಿಷಾ
ವಿಧೇಮ ॥ (ತೈ. ಬ್ರಾ. ೩-೩-೧೧) (ಅಥಸಂ ೭-೧೦-೫ ) (ಆ. ಗೃ ೧-೧೦)

ಕುಹೂಸ್ತೂತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಷ್ಟವಾದ ಇಂದು ಕಲೆಯುಳ್ಳ ಅಮಾವಾಸ್ಯಾಭಿಮಾನಿ ದೇವತೆಯೇ ಶುಭಕರ್ಮವನ್ನು ಮಾಡುವ, ಪ್ರತ್ಯಕ್ಷಕರ್ಮವುಳ್ಳ ಯಜ್ಞದಲ್ಲಿ ಆಹ್ವಾನಿಸಲ್ಪಡುವ ನಿನ್ನನ್ನು ಆಹ್ವಾನಿಸುತ್ತೇನೆ. ಆಹೂತಳಾದ ನೀನು ಹವಿಸ್ಸನ್ನು ಸ್ವೀಕರಿಸಿ ನಮಗೆ ಪಿತೃಗಳ ಧನವನ್ನು ಅನುಗ್ರಹಿಸು. ಈ ರೀತಿಯಾಗಿರುವ ಕುಹೂದೇವಿಯೇ ನಿನ್ನನ್ನು ಹವಿರ್ದಾನದಿಂದ ಉಪಚರಿಸುತ್ತೇವೆ.

ಕುಹೂಮಹಂ ಸುಕೃತಂ ವಿದಿತಕರ್ಮಾಣಮಸ್ಮಿನ್ ಯಜ್ಞೇ ಸುಹ್ವಾನಾಮಾಹ್ವಯೇ। ಸಾ ನೋ ದದಾತು ಶ್ರವಣಂ ಪಿತೄಣಾಂ, ಪಿತ್ರ್ಯಂ ಧನಮಿತಿ ವಾ

ಪಿತ್ರ್ಯಂ ಯಶ ಇತಿ ವಾ ತಸ್ಯೈ ತೇ ದೇವಿ ಹವಿಷಾ ವಿಧೇಮೇತಿ ವ್ಯಾಖ್ಯಾತಮ್ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಶ್ರವಣವೆಂಬುದು ಧನಪರ್ಯಾಯದಲ್ಲಿಯೂ ( ನಿಘ. ೨-೧೦-೨೬ ) ಯಶಃ ಪರ್ಯಾಯದಲ್ಲಿಯೂ (ನಿ.೧೧-೧೦) ಹೇಳಿರುವುದರಿಂದ ಪಿತೃಗಳ ಧನವನ್ನು ಅಥವಾ ಯಶಸ್ಸನ್ನು ಕೊಡು ಎಂದರ್ಥವಾಗುತ್ತದೆ

ಯಮೀ ವ್ಯಾಖ್ಯಾತಾ | ತಸ್ಯಾ ನಿಷಾ ಭವತಿ || ೩೩ ||

ಕ್ರಮಪ್ರಾಪ್ತವಾದ ಯಮೀ ಪದದ ನಿರ್ವಚನವನ್ನು ತೋರಿಸುತ್ತಾರೆ ಇದು ಯಮ (ನಿ. ೧೦-೧೯) ಪದನಿರ್ವಚನದಿಂದಲೇ ವ್ಯಾಖ್ಯಾತವಾಗಿದೆ. ಇಲ್ಲಿ ಸ್ತ್ರೀಲಿಂಗಮಾತ್ರ ವಿಶೇಷ. ಕೃದಿಕಾರಾತ್ ಸೂತ್ರದಿಂದ ಙೀಪ್ ಬಂದಿದೆ. ಮುಂದೆ ಹೇಳುವ ಮಂತ್ರವು ಯಮೀಸ್ತುತಿಪ್ರತಿಪಾದಕವಾಗುತ್ತದೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುಸ್ತ್ರಿಂಶತಿಃ ಖಂಡಃ

## ಮೂವತ್ತನಾಲ್ಕನೆಯ ಖಂಡವು

ಅನ್ಯಮೂಷು ತ್ವಂ ಯಮ್ಯನ್ಯ ಉ ತ್ವಾಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ || ತಸ್ಯ ವಾ ತ್ವಂ ಮನ ಇಚ್ಛಾ ಸ ವಾ ತವಾಧಾ ಕೃಣುಷ್ವ ಸಂವಿದಂ ಸುಭದ್ರಾಂ | (ಋ. ಸಂ. ೧-೧೦-೧೪) || ಅನ್ಯಮೇವ ಹಿತ್ವಂ ಯಮ್ಯನ್ಯಸ್ತ್ವಾಂ ಪರಿಷ್ವಂಕ್ಷ್ಯತೇ ಲಿಬುಜೇವ ವೃಕ್ಷಂ ತಸ್ಯ ವಾ ತ್ವಂ ಮನ ಇಚ್ಛ ಸ ವಾ ತವಾಧಾನೇನ ಕುರುಷ್ವ ಸಂವಿದಂ ಸುಭದ್ರಾಂ ಕಲ್ಯಾಣಭದ್ರಾಂ ಯಮೀ ಯಮಂ ಚಕಮೇ ತಾಂ ಪ್ರತ್ಯಾಚಚಕ್ಷೇ-ತ್ಯಾಖ್ಯಾನಂ || ೩೪ ||

ಅನ್ಯಮೂಷು ತಂ ಯಮ್ಯನ್ಯ ಉ ತ್ವಾಂ ಪರಿಷ್ವಜಾತೇ ಲಿಬುಜೇವ
ವೃಕ್ಷಂ | ತಸ್ಯ ವಾ ತ್ವಂ ಮನ ಇಚ್ಛಾ ಸವಾ ತವಾಧಾಕೃಣುಷ್ವ
ಸಂವಿದ್ಧಂ ಸುಭದ್ರಾಂ ||

(ಋ. ಸಂ. ೭-೬-೮)

ಯಮೀಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ ಯಮಿಯು ಯಮನನ್ನು ಕಾಮಿಸಿದಾಗ ಯಮನು ನಿರಾಕರಿಸುತ್ತಾನೆ. ಯಮಿಯೇ ನೀನು ಇತರ ಪುರುಷರನ್ನು ಆಲಂಗಿಸು ಲಿಬುಜವೆಂಬ ಲತೆಯು ಮರವನ್ನು ಆಶ್ರಯಿಸಿರುವಂತೆ ನನ್ನನ್ನು ಬಿಟ್ಟು ಬೇರೊಬ್ಬರನ್ನು ಗಾಢವಾಗಿ ಆಲಿಂಗಿಸು, ಅವನೂ ನಿನ್ನನ್ನು ಆಲಂಗಿಸುತ್ತಾನೆ. ಆ ಪುರುಷನ ಮನಸ್ಸನ್ನು ಪ್ರವೇಶಿಸಲು ಬಯಸು. ಅವನೂ ನಿನ್ನ ಮನವನ್ನು ಪ್ರವೇಶಿಸಲಿ. ಹೀಗೆ ಆ ನೀವಿಬ್ಬರು ಒಂದೇ ಮನಸ್ಸಿನಿಂದ ಶೋಭನವಾದ ಮೈಥುನ ಕಾರ್ಯವನ್ನು ಹೊಂದಿರಿ.

ಅನ್ಯಮೇವ ಹಿ ತ್ವಂ ಯಮ್ಯನ್ಯಸ್ತ್ವಾಂ ಪರಿಷ್ವಂಕ್ಷ್ಯತೇ ಲಿಬುಜೇವ ವೃಕ್ಷಂ। ತಸ್ಯ ತ್ವಂ ಮನ ಇಚ್ಛ ಸ ವಾ ತವಾಧಾನೇನ ಕುರುಷ್ವ ಸಂವಿದಂ ಸುಭದ್ರಾಂ ಕಲ್ಯಾಣಭದ್ರಾಂ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪಾಠಮಾತ್ರದಿಂದ ಅರ್ಥವಾಗುವುದರಿಂದ ಸುಲಭಾರ್ಥಕವಾಗಿದೆ.

ಯಮೀಯಮಂ ಚಕಮೇ, ತಾಂ ಪ್ರತ್ಯಾಚಚಕ್ಷ ಇತ್ಯಾಖ್ಯಾನಂ ॥೩೪॥

ದೇವತಾಬಹುತ್ವಪಕ್ಷದಲ್ಲಿ ಇದು ಸಂಗತವಾಗುತ್ತದೆ. ತಂಗಿಯು ಕಾಮಿಸಿರುವುದರಿಂದ ಯಮನು ನಿರಾಕರಣೆಮಾಡಿದನೆಂದು ಪ್ರಸಿದ್ಧವಾಗಿದೆ. ದೇವತಾತ್ರಿತ್ವ ಪಕ್ಷದಲ್ಲಿ ಮಾಧ್ಯಮಿಕನಾದ ಯಮನು ಮಾಧ್ಯಮಿಕವಾಕ್ಕನ್ನು ಕುರಿತು ತನ್ನಿಂದ ಬೇರೆ ಯಾದಂತೆ ಮಾಡಿ ಹೇಳುತ್ತಾನೆಂದು ತಿಳಿಯಬೇಕು. ಎಲೈ ಯಮಿಯೇ ನಿನ್ನ ಪರಿಷ್ವಂಗಕಾಲ ಅತೀತವಾಗಿದೆ. ಈಗ ಪ್ರಭಾತ ವಾಗಿದೆ. ಲಿಬುಜಲತೆಯು ವೃಕ್ಷವನ್ನೆಂಬಂತೆ ನೀನು ದ್ಯುಸ್ಥಾನದ ಆಲಿಂಗನೆಯನ್ನು ಬಯಸು. ಆದರ ಮನಃಪ್ರಕಾಶವನ್ನು ಸೇರಲು ಬಯಸು. ಅವನೂ ನಿನ್ನ ಪ್ರಕಾಶವನ್ನನುಸರಿಸಲಿ. ಹೀಗೆ ಪರಸ್ಪರ ಪ್ರಕಾಶದಿಂದ ಲೋಕೋಪಕಾರದಲ್ಲಿ ಪ್ರವೃತ್ತ ರಾಗಿರಿ ಎಂದು ತಾತ್ಪರ್ಯ.

ಅನ್ಯಮೂ ಷು ತ್ವಂ ಯಮ್ಯನ್ಯ ಉ ತ್ವಾಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ। ತಸ್ಯ ವಾ ತ್ವಂ ಮನ ಇಚ್ಛಾ ಸ ವಾ ತವಾಧಾ ಕೃಣುಷ್ವ ಸಂವಿದಂ ಸುಭದ್ರಾಂ ॥ ೧೪ ॥

ಎಲೈ ಯಮಿಯೇ, ನೀನು ಬೇರೆ ಪುರುಷನನ್ನು ಅತಿಶಯವಾಗಿ ಆಲಂಗಿಸಿಕೊ. ಬೇರೆ ಪುರುಷನು, ಲತೆಯು ವೃಕ್ಷವನ್ನು ಅಪ್ಪಿಕೊಳ್ಳುವಂತೆ ನಿನ್ನನ್ನು ಆಲಂಗಿಸಲಿ. ನೀನು ಅವನನ್ನು ಪ್ರೀತಿಸು. ಅವನು ನಿನ್ನನ್ನು ಗಾಢವಾಗಿ ಪ್ರೀತಿಸಲಿ. ಅವನೊಡನೆ ಕಲ್ಯಾಣಾತ್ಮಕವಾದ ಸಂಬಂಧವನ್ನು ಬೆಳೆಸು.

ಯಮೀ—ಎಂಬ ಶಬ್ದವನ್ನು ವಿವರಿಸುತ್ತಾ ಯಾಸ್ಕರು ಪ್ರಕೃತಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

ಯಮೀ । ಯಮೀ ವ್ಯಾಖ್ಯಾತಾ। ತಸ್ಯೈಷಾ ಭವತಿ। ಅನ್ಯೂಮೂ ಷ ತ್ವಂ ಯಮ್ಯನ್ಯ ಉ ತ್ವಾಂಪರಿ ಪರಿ ಷ್ವಜಾತೇ ಲಿಬುಜೇವ ವೃಕ್ಷಂ । ತಸ್ಯ ವಾ ತ್ವಂ ಮನ ಇಚ್ಛಾ ಸ ವಾ ತವಾಧಾ ಕೃಣುಷ್ವ ಸಂವಿ

ದಂ ಸುಭದ್ರಾಂ ॥ ಅನ್ಯಮೇವ ಹಿ ತ್ವಂ ಯಮ್ಯನ್ಯಸ್ತ್ವಾಂ ಪರಿಷ್ವಂಕ್ಷ್ಯತೇ ಲಿಬುಜೇವ ವೃಕ್ಷಂ ತಸ್ಯ ವಾ ತ್ವಂ ಮನ ಇಚ್ಛ ಸ ವಾ ತವಾಧಾನೇನ ಕುರುಷ್ವ ಸಂವಿದಂ ಸುಭದ್ರಾಂ ಕಲ್ಯಾಣಭದ್ರಾಂ॥ ಯಮೀ ಯಮಂ ಚಕಮೇ ತಾಂ ಪ್ರತ್ಯಾಚಕ್ಷ್ಯೇತ್ಯಾಖ್ಯಾನಂ ॥

(ನಿ. ೧೧-೩೪)

ಯಮೀ ಎಂಬ ಶಬ್ದವನ್ನು ಹಿಂದೆಯೇ ವಿವರಿಸಲಾಗಿದೆ. ಮುಂದಿನ (ಪ್ರಕೃತ) ಋಕ್ಕು ಯಮೀ ಎಂಬ ಸ್ತ್ರೀಯನ್ನು ಸಂಬೋಧಿಸುವ ಮಂತ್ರವಾಗಿದೆ-ಎಲೈ ಯಮಿಯೇ, ನಿಜವಾಗಿಯೂ ನೀನು (ನನ್ನನ್ನುಬಿಟ್ಟು) ಬೇರೊಬ್ಬ ಪುರುಷನನ್ನು, ಲತೆಯು ವೃಕ್ಷವನ್ನು ಸುತ್ತಿಕೊಳ್ಳುವಂತೆ, ಬಿಗಿದಪ್ಪಿ ಆಲಂಗಿಸಿಕೋ. ಅವನ ಮನಸ್ಸನ್ನು ನೀನೂ, ನಿನ್ನ ಮನಸ್ಸನ್ನು ಅವನೂ ಪರಸ್ಪರ ತಿಳಿದು ವರ್ತಿಸಿರಿ. ಎಲೌ ಯಮಿಯೇ ಅವನೊಡನೆ ಈ ವಿಧವಾದ ರತಿಸುಖದಿಂದ ಉತ್ತಮವಾದ ಸುಖಸಂತೋಷಗಳನ್ನು ಪಡೆದು ಆನಂದವಾಗಿರಿ. ಹಿಂದೆ ಯಮೀ ಎಂಬ ಸ್ತ್ರೀಯು ತನ್ನ ಅಣ್ಣನಾದ ಯಮನನ್ನೇ ಪ್ರೀತಿಸಿ ಅವನೊಡನೆ ಸಂಭೋಗೇಚ್ಛೆಯನ್ನು ಬಯಸಿದಾಗ ಯಮನು ಯಮಿಗೆ ಹೇಳಿದ ಮಾತಿದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ಮೂವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚತ್ರಿಂಶತಿ ಖಂಡಃ

## ಮೂವತ್ತೈದನೆಯ ಖಂಡವು

### ಉರ್ವಶೀ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೩೫ ॥

ಕ್ರಮಪ್ರಾಪ್ತವಾದ ಉರ್ವಶೀಪದದ ನಿರ್ವಚನ ಮಾಡಬೇಕಾಗಿದೆ. ಇದು 'ಉರ್ವ್ಯಭ್ಯಶ್ನುತೇ (ನಿ. ೫-೧೩) ಎಂದು ಅಪ್ಸರಸ್ಸನ್ನು ಹೇಳುವಾಗ ವ್ಯಾಖ್ಯಾತವಾಗಿದೆ. ಇಲ್ಲಿ ಮಾಧ್ಯಮಿಕ ಸ್ತ್ರೀದೇವತೆಯೆಂಬರ್ಥದಲ್ಲಿಯೂ ಅದೇ ವ್ಯುತ್ಪತ್ತಿ ಹೇಳಬೇಕು. ಬಹೂದಕವನ್ನು ಹೊಂದುವವಳು, ಅಥವಾ ಉದಕದಲ್ಲಿ ಅಧಿಕಕಾಮವುಳ್ಳವಳು ಎಂದರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ಉರ್ವಶೀಸ್ತುತಿ ಪ್ರತಿಪಾದಕವಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಮುವತ್ತೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷಟ್‌ತ್ರಿಂಶತ್ ಖಂಡಃ

### ಮೂವತ್ತಾರನೆಯ ಖಂಡವು

ವಿದ್ಯುನ್ನ ಯಾ ಪತಂತೀ ದವಿದ್ಯೋದ್ಭರಂತೀ ಮೇ ಅಪ್ಯಾ ಕಾಮ್ಯಾನಿ। ಜನಿಷ್ಠೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ ತಿರತ ದೀರ್ಘಮಾಯುಃ (ಋ. ಸಂ- ೧೦-೯೫-೧೦) ವಿದ್ಯುದಿವ ಯಾ ಪತಂತ್ಯದ್ಯೋತತ । ಹರಂತೀ ಮೇ ಅಪ್ಯಾ ಕಾಮಾನ್ಯು. ದಕಾನ್ಯಂತರಿಕ್ಷಲೋಕಸ್ಯ ಯದಾ ನೂನಮಯಂ ಜಾಯೇತಾದ್ಭ್ಯೋಽಧ್ಯಪ ಇತಿ ನರ್ಯೋ ಮನುಷ್ಯೋ ನೃಭ್ಯೋ ಹಿತೋ ನರಾಪತ್ಯಮಿತಿ ವಾ ಸುಜಾತಃ ಸುಜಾತತ- ರೋಽಥೋರ್ವಶೀ ಪ್ರವರ್ಧಯತೇ ದೀರ್ಘಮಾಯುಃ ಪೃಥಿವೀ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೩೬ ॥

> ವಿದ್ಯುನ್ನ ಯಾ ಪತಂತೀ ದಿವದ್ಯೋದ್ಭರಂತೀ ಮೇ ಅಪ್ಯಾ
> ಕಾಮ್ಯಾನಿ । ಜನಿಷ್ಠೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ
> ತಿರತ ದೀರ್ಘಮಾಯುಃ ॥
>
> (ಋ. ಸಂ. ೮–೫–೨)

ಉರ್ವಶೀಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಧ್ಯಮದೇವನಾದ ಪುರೂರವನು ತನ್ನಿಂದ ಜ್ಯೋತಿಯೂ ಶಬ್ದವೂ ಬೇರೆಯೆಂದು ಕಲ್ಪಿಸಿ ಹೇಳುತ್ತಾನೆ. ಮಾಧ್ಯಮಿಕದೇವಿಯು ಮಿಂಚಿನಂತೆ ಮೇಘೋದರಗಳಲ್ಲಿ ಪ್ರಕಾಶಿಸುತ್ತಾ ಅಂತರಿಕ್ಷದಲ್ಲಿ ನಮಗೆ ಅಭಿಮತವಾದ ನೀರನ್ನು ಸಂಪಾದಿಸಿಕೊಡುತ್ತಾಳೆ. ಮನುಷ್ಯರಿಗೆ ಪುತ್ರಜನನವಾದಂತೆ ಇವಳಿಂದ ನೀರಿನ ಅಲೆಗಳು ಉಂಟಾಗುತ್ತವೆ. ಈ ಊರ್ವಶಿಯು ಅದರಿಂದ ಉಂಟಾಗುವ ಅನ್ನದಮೂಲಕ ನಮಗೆ ದೀರ್ಘಾಯು ವನ್ನುಂಟುಮಾಡಲಿ.

> ವಿದ್ಯುದಿವ ಯಾ ಪತಂತ್ಯದ್ಯೋತತ ಹರಂತೀ ಮೇ ಅಪ್ಯಾ
> ಕಾಮ್ಯಾ ನ್ಯುದಕಾನ್ಯಂತರಿಕ್ಷ ಲೋಕಸ್ಯ । ಯದಾ ನೂನಮಯಂ
> ಜಾಯೇತಾದ್ಭ್ಯೋಧ್ಯಪ ಇತಿ ನರ್ಯೋ ಮನುಷ್ಯೋ ನೃಭ್ಯೋ
> ಹಿತೋ ನರಾಪತ್ಯಮಿತಿ ವಾ। ಸುಜಾತಃ ಸುಜಾತರೋಽಥೋರ್ವಶೀ
> ಪ್ರವರ್ಧಯತೇ ದೀರ್ಘಮಾಯುಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಪ್ಯಾ ಅಂತರಿಕ್ಷ ಸಂಬಂಧವಾದ ನೀರು. ಅಪ್ ಅಂತರಿಕ್ಷನಾಮದಲ್ಲಿ ಹೇಳಿದೆ (ನಿಘ. ೧–೩–೮) ನಾರಾಪತ್ಯಂ ಎಂಬುದರಿಂದ ಐತಿಹಾಸಿಕಪಕ್ಷವನ್ನು ಸೂಚಿಸುತ್ತಾರೆ. ಆಗ ಊರ್ವಶೀ ಎಂಬ ಅಪ್ಸರಸ್ಸಿನಿಂದ

ವಿಯುಕ್ತನಾದ ಪುರೂರವಸ್ಸು ರಾಜನು ಹೇಳುತ್ತಾನೆಂದು ತಿಳಿಯಬೇಕು. ಮಿಂಚಿನಂತೆ ಪ್ರಕಾಶಿಸುವ ಉರ್ವಶಿಯು ಸ್ವರ್ಗತವಾದ ಅನೇಕ ಹಾವಭಾವಗಳನ್ನು ಧರಿಸುತ್ತಾ ಬರುತ್ತಾಳೆ. ಈಗ ಅವಳು ನನ್ನಿಂದ ಗರ್ಭ ಹೊಂದಿರುತ್ತಾಳೆ. ನನ್ನ ವೀರ್ಯದಿಂದ ಹುಟ್ಟಿದ ಆಯು ಎಂಬುವನು ನರರಿಗೆ ಹಿತದಾಯಕನಾಗಿರುತ್ತಾನೆ. ನಾನಿಲ್ಲದಿದ್ದರೂ ಊರ್ವಶಿಯು ಅವನನ್ನು ಯೋಗ್ಯ ಕರ್ಮದಿಂದ ಬೆಳೆಸಿ ದೀರ್ಘಾಯುವನ್ನಾಗಿ ಮಾಡುತ್ತಾಳೆ.

ಪೃಥಿವೀ ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೩೬ ॥

ಪೃಥಿವೀ ಕ್ರಮಪ್ರಾಪ್ತವಾಗಿದೆ. 'ಅಥವೈದರ್ಶನೇನ ಪೃಥುಃ' (ನಿ. ೧-೪-೩) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ. ಇಲ್ಲಿ ಮಾಧ್ಯಮಿಕ ಸ್ತ್ರೀ ದೇವತೆ ಅರ್ಥವೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ಪೃಥಿವೀ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಮದ್ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತತ್ರಿಂಶತಿ ಖಂಡಃ

## ಮೂವತ್ತೇಳನೆಯ ಖಂಡವು

ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ। ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ (ಋಂ. ಸಂ. ೫-೮೪-೧) ॥ ಸತ್ಯಂ ತ್ವಂ ಪರ್ವತಾನಾಂ ಮೇಘಾನಾಂ ಖೇದನಂ ಛೇದನಂ ಭೇದನಂ ಬಲಮುಮುತ್ರ ಧಾರಯಸಿ ಪೃಥಿವಿ ಪ್ರಜಿನ್ವಸಿ ಯಾ ಭೂಮಿಂ ಪ್ರವಣವತಿ ಮಹತ್ತ್ವೇನ ಮಹತೀತ್ಯುದಕವತೀತಿ ವೇಂದ್ರಾಣೀಂದ್ರಸ್ಯ ಪತ್ನೀ ತಸ್ಯಾ ಏಷಾ ಭವತಿ ॥ ೩೭ ॥

ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ । ಪ್ರಯಾ ಭೂಮಿಂ
ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ॥

( ಋ. ಸಂ. ೪-೪-೨೯ )

ಮಧ್ಯಮದೇವತಾ ಪೃಥಿವೀಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಪೃಥಿವಿ ಮಾಧ್ಯಮಿಕದೇವತೆ ಅಂತರಿಕ್ಷದಲ್ಲಿ ಇದ್ದು ನೀನು ಸತ್ಯವಾವಾಗಿಯೂ ಮೇಘಗಳ ಛೇದನಮಾಡಲು ಸಾಮರ್ಥ್ಯ ಹೊಂದಿರುವಿ. ಅಧಿಕಜಲಭರಿತಳೇ ಗಮನವುಳ್ಳ ನೀನು ಅಧಿಕಜಲದಿಂದ ಪ್ರತ್ಯಕ್ಷಭೂಮಿಯನ್ನು ತೃಪ್ತಿಗೊಳಿಸುವಿ.

**ಸತ್ಯಂ ತ್ವಂ ಪರ್ವತಾನಾಂ ಮೇಘಾನಾಂ ಖೇದನಂ ಛೇದನಂ ಭೇದನಂ ಬಲಮುಮುತ್ರ ಧಾರಯಸಿ ಪೃಥಿವಿ । ಪ್ರಜಿನ್ವಸಿ ಯಾ ಭೂಮಿಂ ಪ್ರವಣವತಿ ಮಹತ್ವೇನ, ಮಹತೀತ್ಯುದಕವತೀತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬಳ್ ಎಂಬುದು ಸತ್ಯ ಪರ್ಯಾಯದಲ್ಲಿ (ನಿಘ. ೩-೧೦-೧) ಪಠಿತವಾಗಿದೆ. ಪರ್ವತ ಮೇಘಪರ್ಯಾಯದಲ್ಲಿ (ನಿಘ. ೧-೧೦-೯) ಹೇಳಿದೆ. ಮಹಶಬ್ದವು ಉದಕಪರ್ಯಾಯದಲ್ಲಿ (ನಿಘ. ೧-೧೨-೫೬) ಹೇಳಿದೆ ಮೇಘಗಳ ಖೇದವನ್ನು ಧರಿಸಿರುವಿಯೆಂದರೆ ಅವುಗಳನ್ನು ಛೇದಿಸುವ ಬಲವನ್ನು ಹೊಂದಿರುವಿಯೆಂದರ್ಥ.

**ಇಂದ್ರಾಣೀಂದ್ರಸ್ಯ ಪತ್ನೀ । ತಸ್ಯಾ ಏಷಾ ಭವತಿ ॥ ೩೭ ॥**

ಇಂದ್ರಾಣೀ ಇಂದ್ರನ ವಿಭೂತಿಯಾಗುತ್ತದೆ. ಬೇರೆಯಾಗಿ ಇಂದ್ರನಪತ್ನಿಯೆಂದು ಪೌರಾಣಿಕರು ಹೇಳುತ್ತಾರೆ. 'ಇಂದ್ರ ವರುಣ'—ಸೂತ್ರದಿಂದ ಇಂದ್ರಪದದಮೇಲೆ ಙೀಷ್ ಆನುಗಾಗಮ ಬಂದಿದೆ. ಇಲ್ಲಿ ಮಧ್ಯಮಸ್ಥಾನದೇವತೆಯೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ಇಂದ್ರಾಣೀಸ್ತುತಿ ಪ್ರತಿಪಾದಕವಾಗುತ್ತದೆ.

**ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ ।**
**ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ॥ ೧ ॥**

ಎಲೈ ಮಧ್ಯಸ್ಥಾನದೇವತೆಯೇ. ನೀನು ಮೇಘಗಳ ಖಂಡಗಳನ್ನು ಅತಿಶಯವಾಗಿ ಧರಿಸಿದ್ದೀಯೆ. ಉತ್ಕೃಷ್ಟವಾದ ಗುಣಗಳುಳ್ಳವಳೂ, ಮಾಹಾತ್ಮ್ಯವುಳ್ಳವಳೂ-ಆದ ಎಲೈ ದೇವತೆಯೇ, ನೀನು ಅದೇ ಗುಣಗಳಿಂದ ಪೃಥ್ವಿಯನ್ನು ಅತಿಶಯವಾಗಿ ಸಂತೋಷಗೊಳಿಸುತ್ತೀಯೆ.

ಈ ಸೂಕ್ತದ ವಿಷಯದಲ್ಲಿ ಭಾಷ್ಯಕಾರರು—

ದ್ವಿರೂಪಾ ಪೃಥಿವೀ ಚೈಷಾ ಪ್ರತ್ಯಕ್ಷಾ ದೇವತಾಪಿ ಚ ।
ಮಧ್ಯಸ್ಥಾನಾ ದೇವತೋಕ್ತಾ ಸಾತ್ರ ಸಂಬೋಧ್ಯ ವಕ್ಷ್ಯತೇ ॥

ಎಂದು ಹೇಳಿದಾರೆ. ಎಂದರೆ ಈ ಸೂಕ್ತಕ್ಕೆ ಪೃಥಿವಿಯು ದೇವತೆಯು. ಈ ಪೃಥಿವಿಯು ಎರಡುವಿಧ. ನಮ್ಮ ಕಣ್ಣುಗಳಿಗೆ ಪ್ರತ್ಯಕ್ಷವಾಗಿ ಗೋಚರವಾಗುತ್ತಿರುವ ಪೃಥಿವೀ ಅಥವಾ ಭೂಮಿಯೆಂಬುದು ಒಂದುವಿಧ. ಈ ಪೃಥಿವ್ಯಭಿಮಾನಿಯಾದ ದೇವತೆಯು ಮಧ್ಯಸ್ಥಾನದೇವತೆಯೆಂದು ಪ್ರಸಿದ್ಧವಾಗಿರುವುದು. ಇದು ಎರಡನೆಯ ವಿಧ. ಈ ಎರಡನೆಯ ವಿಧವಾದ ಮಧ್ಯಮಸ್ಥಾನದೇವತೆಯನ್ನೇ ಈ ಸೂಕ್ತದಲ್ಲಿ ಸಂಬೋಧಿಸಿ ಸ್ತುತಿಸಲಾಗಿದೆ. ಎಂದಭಿಪ್ರಾಯವು.

ಪೃಥಿವಿ—ಪೃಥಿವಿ ಅಥವಾ ಪೃಥ್ವೀಶಬ್ದವು ಇಪ್ಪತ್ತೊಂದು ಪೃಥಿವೀ (ಭೂಮಿ) ನಾಮಗಳಲ್ಲಿಯೂ (ನಿ. ೨-೫) ಹದಿನಾರು ಅಂತರಿಕ್ಷನಾಮಗಳಲ್ಲಿಯೂ ( ನಿ. ೨-೧೦ ) ಪಠಿತವಾಗಿದೆ. ಮತ್ತು ಪೃಥ್ವೀ ( ದ್ವಿವಚನಾಂತಶಬ್ದ ) ಎಂಬ ಶಬ್ದವು ದ್ಯಾವಾಪೃಥಿವಿನಾಮಗಳಲ್ಲಿಯೂ ( ನಿ. ೩-೨೨ ) ಪಠಿತವಾಗಿದೆ.

ಪೃಥು ವಿಸ್ತೀರ್ಣೇ ಎಂಬ ಧಾತುವಿನಿಂದ ಪೃಥಿವೀ ಎಂಬ ಶಬ್ದದ ರೂಪ ನಿಷ್ಪತ್ತಿಯಾಗಿದೆ. ಪೃಥಿವೀ ಎಂದರೆ ಅತ್ಯಂತವಿಸ್ತಾರವಾದ ಪ್ರದೇಶ. ಈ ಅರ್ಥವು ಪೃಥಿವಿಗೂ ಅಥವಾ ಭೂಮಿಗೂ ಮತ್ತು ಅಂತರಿಕ್ಷ (ಆಕಾಶ)ಕ್ಕೂ ಅನ್ವಯಿಸುವುದು. ಪೃಥಿವಿಗಿಂತಲೂ ಅಂತರಿಕ್ಷವೇ ಹೆಚ್ಚು ವಿಸ್ತಾರವಾಗಿರುವುದರಿಂದ ಋಗ್ವೇದದಲ್ಲಿ ಅನೇಕಕಡೆ ಅಂತರಿಕ್ಷ ಎಂಬ ಅರ್ಥವನ್ನು ಸೂಚಿಸುವುದಕ್ಕಾಗಿ ಪೃಥಿವೀಶಬ್ದದ ಪ್ರಯೋಗವಿದೆ. ಪ್ರಕೃತಸೂಕ್ತದಲ್ಲಿ ಅಂತರಿಕ್ಷದಲ್ಲಿರುವ ಮಾಧ್ಯಮಿಕಾ ದೇವತೆಯೇ ಇಲ್ಲಿ ಸ್ತುತವಾಗಿದೆ. ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಸತ್ಯಂ ತ್ವಂ ಪರ್ವತಾನಾಂ ಮೇಘಾನಾಂ ಖೇದನಂ ಛೇದನಂ ಬಲಮಮುತ್ರ ಧಾರಯಸಿ ಪೃಥಿವಿ! ಪ್ರಜಿನು ಅಸಿ ಯಾ ಭೂಮಿಂ ಪ್ರವಣವತಿ ವಹತ್ಯೇನ ಮಹತೀತ್ಯುದಕವತೀತಿ ವಾ ॥

(ನಿ. ೧೧-೩೭)

ಎಲೈ ಮಧ್ಯಮಸ್ಥಾನದೇವತೆಯೇ, ನೀನು ನಿಜವಾಗಿಯೂ ಅಂತರಿಕ್ಷದಲ್ಲಿದ್ದುಕೊಂಡು ಮೇಘಗಳನ್ನು ಪ್ರಹರಿಸುತ್ತಾ ಅಥವಾ ಭೇದಿಸುತ್ತಾ ನಿನ್ನ ಬಲವನ್ನು ಅಂತರಿಕ್ಷದಲ್ಲಿ ಪ್ರಕಾಶಪಡಿಸುತ್ತೀಯೇ. ಎಲೈ ಮಹತ್ಸ್ವರೂಪವುಳ್ಳ ( ಬೃಹದಾಕಾರವುಳ್ಳ ) ದೇವತೆಯೇ, ನೀನು ಉದಕಸ್ವರೂಪದಿಂದಿದ್ದ ಅಥವಾ ಉದಕವನ್ನು ಧರಿಸಿದ್ದು ನಿನ್ನ ಅಸಧಾರಣ ಮಹಿಮೆಯಿಂದ ಭೂಮಿಯನ್ನು ನೆನೆಯುವಂತೆ ಮಾಡಿ ಸಂತೋಷಗೊಳಿಸುತ್ತೀಯೆ ಎಂದು ಮುಖ್ಯಾಭಿಪ್ರಾಯವು.

ಈರೀತಿ ಶ್ರೀಯಾಸ್ಕಮುನಿ ವಿರಚಿತ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟತ್ರಿಂಶತಿ ಖಂಡಃ

## ಮೂವತ್ತೆಂಟನೆಯ ಖಂಡವು

ಇಂದ್ರಾಣೀಮಾಸು ನಾರಿಷು ಸುಭಗಾಮಹಮಶ್ರವಂ । ನ ಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿರ್ವಿಶಸ್ಮಾದಿಂದ್ರ ಉತ್ತರಃ। (ಋ, ಸಂ. ೧೦-೮೬-೧೧) ಇಂದ್ರಾಣೀಮಾಸು ನಾರಿಷು ಸುಭಗಾಮಹಮಶೃಣವಂ ನ ಹ್ಯಸ್ಯಾ ಅಪರಾಮಪಿ ಸಮಾಂ ಜರಯಾ ಮ್ರಿಯತೇ ಪತಿಃ ಸರ್ವಸ್ಮಾದ್ಯ ಇಂದ್ರ ವುತ್ತರಸ್ತಮೇತದ್ ಬ್ರೂಮಸ್ತಸ್ಯಾ ಏಷಾಪರಾ ಭವತಿ ॥ ೩೮ ॥

ಇಂದ್ರಾಣೀಮಾಸು ನಾರಿಷು ಸುಭಗಾಮಹಮಶ್ರವಂ । ನಹ್ಯಸ್ಯಾ ಅಪರಂ ಚ ನ ಜರಸಾ ಮರತೇ ಪತಿರ್ವಿಶ್ವ ಸ್ಮಾದಿಂದ್ರ ಉತ್ತರಃ ॥

(ಋ. ಸಂ. ೮-೪-೩)

ಇಂದ್ರಾಣೀಸ್ತುತಿಪ್ರತಿಪಾದಕ ಮಂತ್ರವನ್ನು ವಿವರಿಸುತ್ತಾರೆ. ನಾನು ಸ್ತ್ರೀಯರಲ್ಲಿ ಇಂದ್ರಾಣಿಯನ್ನು ಅತಿಶಯ ಸೌಭಾಗ್ಯವತಿಯನ್ನಾಗಿ ಕೇಳಿರುತ್ತೇನೆ. ಇವಳಿಂದ ಅತಿಶಯಸೌಭಾಗ್ಯವುಳ್ಳವರು ಯಾರೂ ಇಲ್ಲ. ಈ ಇಂದ್ರಾಣಿಯ ಪತಿಯಾದ ಇಂದ್ರನು ಸಕಲ ಜಗತ್ತಿನಿಂದ ಉತ್ಕೃಷ್ಟತರನು. ಮುಪ್ಪಿನಿಂದ ಈತನಿಗೆ ಮರಣವೇ ಇಲ್ಲ.

ಇಂದ್ರಾಣೀಮಾಸು ನಾರಿಷು ಸುಭಗಾಮಶೃಣವಂ ನ ಹ್ಯಸ್ಯಾ ಅಪರಾ-
ಮಪಿ ಸಮಾಂ| ಜರಯಾ ಮ್ರಿಯತೇ ಪತಿಃ| ಸರ್ವಸ್ಮಾದ್ಯ ಇಂದ್ರ
ಉತ್ತರಸ್ತಮೇತದ್ ಬ್ರೂಮಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ ಇದನ್ನು ಇಂದ್ರನನ್ನು ಕುರಿತು ಹೇಳುತ್ತೇವೆಯೆಂದು ತಾತ್ಪರ್ಯ. ಇಂದ್ರಾಣಿಗೆ ಸಮಾನಳು ಬೇರೊಬ್ಬಳಿಲ್ಲ. ಇವನು ಅಜರಾಮರಣನಾದುದರಿಂದಲೇ ಸಕಲಭೂತಜಾತಕ್ಕಿಂದ ಉತ್ಕೃಷ್ಟನಾಗಿರುತ್ತಾನೆ.

ತಸ್ಯಾ ಏಷಾಪರಾ ಭವತಿ || ೩೮ ||

ವೃಷಾಕಪಿಯೆಂಬುವನು ಇಂದ್ರನಪುತ್ರನೆಂದು ಹಿಂದೆ ಹೇಳಿರುವುದು. ವೃಷಾಕಪಿ ಋಷಿಯೊಬ್ಬನೂ ಇದ್ದಾನೆ, ನಿರುಕ್ತಕಾರರ ಮತದಲ್ಲಿ ಅವನು ಆದಿತ್ಯನಾಗುತ್ತಾನೆ. ಇದನ್ನು ವ್ಯಕ್ತಪಡಿಸಲು ಇಂದ್ರಾಣಿಸ್ತುತಿಯನ್ನು ಇನ್ನೊಂದು ಮಂತ್ರದಿಂದ ವಿವರಿಸುತ್ತಾರೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಮೂವತ್ತೆಂಟನೆಯ ಖಂಡವು ಸಮಾಪ್ತವು.

## ಅಥ ಏಕೋನಚತ್ವಾರಿಂಶತ್ ಖಂಡಃ
## ಮೂವತ್ತೊಂಬತ್ತನೆಯ ಖಂಡವು

ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ | ಯಸ್ಯೇದಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ ಉತ್ತರಃ (ಋ. ಸಂ. ೧೦-೮೬-೧೨) || ಸಾಹಮಿಂದ್ರಾಣಿ ರಮೇ ಸಖ್ಯುರ್ವೃಷಾಕಪೇರ್ಋತೇ ಯಸ್ಯೇದ-ಮಪ್ಯಂ ಹವಿರಪ್ಸು ಶೃತಮದ್ಭಿಃ ಸಂಸ್ಕೃತಮಿತಿ ವಾ ಪ್ರಿಯಂ ದೇವೇಷು ನಿಗಚ್ಛತಿ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮೋ ಗೌರೀ ರೋಚತೇರ್ಜ್ವಲತಿ-

ಕರ್ಮಣೋಽಯಮಪೀತರೋ ಗೌರೋ ವರ್ಣ ಏತಸ್ಮಾದೇವ ಪ್ರಶಸ್ಯೋ ಭವತಿ ತಸ್ಯಾ ಏಷಾ ಭವತಿ ॥ ೩೯ ॥

ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ॥ ಯಸ್ಯೇದ-
ಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ ಉತ್ತರಃ ॥
(ಋ. ಸಂ. ೮ ೪–೩)

ವೃಷಾಕಪಿಸ್ತುತಿಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಇಂದ್ರಾಣಿಯೇ ನಾನು ಮಿತ್ರನಾದ ವೃಷಾಕಪಿ ಇಲ್ಲದೆ ಸಂತೋಷಪಡಲಾರೆ. ಯಾವ ವೃಷಾಕಪಿಗೆ ಮಾಡಿರುವ ನೀರಿನಲ್ಲಿ ಸಂಸ್ಕೃತವಾದ ಚರುಪುರೋಡಾಶಾದಿ ಹವಿಸ್ಸನ್ನು ಎಲ್ಲಾ ದೇವತೆಗಳೂ ಆದರದಿಂದ ಸ್ವೀಕರಿಸುತ್ತಾರೆ. ಹೀಗೆ ಹೇಳುವ ನಾನು ಸಕಲಪ್ರಾಣಿಜಾತದಿಂದ ಉತ್ಕೃಷ್ಟನಾಗಿರುವೆನು

ನಾಹಮಿಂದ್ರಾಣಿ ರಮೇ ಸಖ್ಯುರ್ವೃಷಾಕಪೇರ್ಋತೇ ಯಸ್ಯೇದ-
ಮಪ್ಯಂ ಹವಿರಪ್ಸು ಶೃತಮದ್ಭಿಃ ಸಂಸ್ಕೃತಮಿತಿ ವಾ ಪ್ರಿಯಂ
ದೇವೇಷು ನಿಗಚ್ಛತಿ । ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇ-
ತದ್ಬ್ರೂಮಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಮಾನಾಖ್ಯಾನದಿಂದ ಸುಖಿಯಾಗತ್ತಾನೆ. ವೃಷಾಕಪಿಯೆಂದರೆ ಇಲ್ಲಿ ಮಹೇಂದ್ರ ನಾಗುತ್ತಾನೆ. ಇವನ ಸಹಾಯವಿಲ್ಲದೆ ನಾನು ಏನುಮಾಡಲೂ ಸಮರ್ಥನಲ್ಲವೆಂದು ಇಂದ್ರನು ಹೇಳುತ್ತಾನೆ. ಈ ಮಹೇಂದ್ರ ಸಂಬಂಧಿಯಾದ ಹವಿಸ್ಸನ್ನು ದೇವಯಜನದಿಂದ ಸಕಲ ದೇವತೆಗಳೂ ಹೊಂದುತ್ತಾರೆ. ಆದುದರಿಂದ ಈ ಮಹೇಂದ್ರನು ಸರ್ವೋತ್ಕೃಷ್ಟನಾಗಿರುತ್ತಾನೆ.

ಗೌರೀ ರೋಚತೇ ಜ್ವಲತಿಕರ್ಮಣಃ । ಅಯಮಪೀತರೋ ಗೌರೋ
ವರ್ಣ ಏತಸ್ಮಾದೇವ ಪ್ರಶಸ್ಯೋ ಭವತಿ । ತಸ್ಯಾ ಏಷಾ
ಭವತಿ ॥ ೩೯ ॥

ಗೌರೀ ಕ್ರಮಪ್ರಾಪ್ತವಾಗಿದೆ. ದೀಪ್ತ್ಯರ್ಥಕ ರುಚಧಾತುವಿಗೆ ರನ್‌ಪ್ರತ್ಯಯ ಬಂದು ಗೌರ ಎಂದು ನಿಪಾತಿತವಾಗಿದೆ. ಸ್ತ್ರೀತ್ವದಲ್ಲಿ ಙೀಷ್. ತನ್ನ ಸ್ವಕೀಯ ಕಾಂತಿಯಿಂದ ಬೆಳಗುವವಳು ಮಾಧ್ಯಮಿಕ ವಾಕ್ ಇಲ್ಲಿ ಗೌರೀ ಎಂದು ತಿಳಿಯಬೇಕು ಗೌರವೆಂಬ ವರ್ಣವಾಚಕಪದವೂ ಈ ರುಚಧಾತುವಿನಿಂದಲೇ ನಿಷ್ಪನ್ನವಾಗಿದೆ. ಅದೂ ಕೂಡಾ ಕಪ್ಪು ಮುಂತಾದ ಬಣ್ಣ ಗಳಿಂದ ಪ್ರಶಸ್ತವಾಗಿರುತ್ತದೆ. ಮುಂದೆ ಹೇಳುವ ಮಂತ್ರವು ಗೌರೀಸ್ತುತಿಪ್ರತಿಪಾದಕವಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ಮೂವತ್ತೊಂಬತ್ತನೆಯ ಖಂಡವು ಮುಗಿದಿದೆ.

## ಅಥ ಚತ್ವಾರಿಂಶತ್ ಖಂಡಃ

## ನಲವತ್ತನೆಯ ಖಂಡವು

ಗೌರೀರ್ಮಿಮಾಯ ಸಲಿಲಾನಿ ತಕ್ಷ ತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ ! ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್ (ಋ. ಸಂ. ೧-೧೬೪- ೪೧) ॥ ಗೌರೀರ್ಮಿಮಾಯ ಸಲಿಲಾನಿ ತಕ್ಷತೀ ಕುರ್ವತ್ಯೇಕಪದೀ ಮಧ್ಯಮೇನ ಚಾದಿತ್ಯೇನ ಚ ಚತುಷ್ಪದೀ ದಿಗ್ಭಿರಷ್ಟಾಪದೀ ದಿಗ್ಭಿಶ್ಚಾವಾಂತರದಿಗ್ಭಿಶ್ಚ ನವಪದೀ ದಿಗ್ಭಿಶ್ಚಾವಾಂತರದಿಗ್ಭಿಶ್ಚಾದಿತ್ಯೇನ ಚ ಸಹಸ್ರಾಕ್ಷರಾ ಬಹೂದಕಾ ಪರಮೇ ವ್ಯವನೇ ತಸ್ಯಾ ಏಷಾಪರಾ ಭವತಿ ॥ ೪೦ ॥

ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ
ಚತುಷ್ಪದೀ । ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ
ಪರಮೇ ವ್ಯೋಮನ್ ॥

(ಋ. ಸಂ. ೨-೩-೨೨)
(ಅಥ. ಸಂ. ೯-೨೬-೨೧)

ಗೌರೀಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ದೀಪ್ತಿಮತಿಯಾದ ಈ ಮಾಧ್ಯಮಿಕ ವಾಗ್ದೇವತೆಯು ಉತ್ಕೃಷ್ಟವಾದ ಆಕಾಶದಲ್ಲಿದ್ದು ಮಧ್ಯಮನೊಡನೆ ಏಕತ್ವವನ್ನು ಹೊಂದಿ, ಮಧ್ಯಮ ಮತ್ತು ಆದಿತ್ಯನೊಡನೆ ಸೇರಿ, ನಾಲ್ಕುದಿಕ್ಕುಗಳಿಂದಲೂ, ವಿದಿಕ್ಕುಗಳಿಂದಕೂಡಿದ ಎಂಟುದಿಕ್ಕುಗಳಿಂದಲೂ ಸಂಬಂಧಪಡೆದು, ಹಾಗೆಯೇ ಮೇಲಿನ ಸೂರ್ಯನೊಡನೆ ಒಂಬತ್ತರ ಸಹಾಯಪಡೆದು, ವೃಷ್ಟ್ಯುದಕಗಳನ್ನು ನಿರ್ಮಿಸುತ್ತಾ ಈ ಸಕಲಪ್ರಪಂಚವನ್ನೂ ಮಾಡುತ್ತಾಳೆ.

ಗೌರೀರ್ಮಿಮಾಯ ಸಲಲಾನಿ ತಕ್ಷತೀ ಕುರ್ವತೀ । ಏಕಪದೀ-
ಮಧ್ಯಮೇನ । ದ್ವಿಪದೀ-ಮಧ್ಯಮೇನ ಚಾದಿತ್ಯೇನ ಚ ।
ಚತುಷ್ಪದೀ-ದಿಗ್ಭಿರಷ್ಟಾಪದೀ ದಿಗ್ಭಿಶ್ಚಾವಂತರದಿಗ್ಭಿಶ್ಚ । ನವಪದೀ-
ದಿಗ್ಭಿಶ್ಚಾವಾಂ ರದಿಗ್ಭಿಶ್ಚಾದಿತ್ಯೇನ ಚ । ಸಹಸ್ರಾಕ್ಷರಾ-ಬಹೂದಕಾ
ಪರಮೇ ವ್ಯವನೇ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಹಸ್ರಪದ ಅಪರಿಮಿತವಾಚಕವಾಗುತ್ತದೆ. ಒಂದು ಎರಡು ಎಂದು ಗಣನೆಯೇಕೆ ? ಇವಳು ಅಪರಿಮಿತವಾದ ವ್ಯಾಪ್ತಿಯುಳ್ಳವಳು ಎಂದು ತಾತ್ಪರ್ಯ.

## ತಸ್ಯಾ ಏಷಾಽಪರಾ ಭವತಿ ॥ ೪೦ ॥

ಪೂರ್ವಮಂತ್ರದಲ್ಲಿ ಗೌರೀ ಎಂದರೆ ಮಾಧ್ಯಮಿಕದೇವತೆಯೆಂದು ಸ್ಪಷ್ಟವಾಗಿ ತಿಳಿಯದಿರುವುದರಿಂದ ಸ್ಪಷ್ಟಲಿಂಗವುಳ್ಳ ಮಂತ್ರಾಂತರವನ್ನು ಗೌರೀಸ್ತುತಿಪ್ರತಿಪಾದಕವಾಗಿ ಉದಾಹರಿಸುತ್ತಾರೆ.

ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ ।
ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್ ॥
॥ ೪೧ ॥

ಅಂತರಿಕ್ಷ ಮಾಧ್ಯಮಿಕಾ ವಾಕ್ಕು ಶಬ್ದಮಾಡುತ್ತಾಳೆ. ಉದಕಗಳನ್ನು ಸಂಪಾದಿಸುವವಳಾಗಿಯೂ, ಒಂದು, ಎರಡು ನಾಲ್ಕು, ಎಂಟು ಮತ್ತು ಒಂಭತ್ತು ಅಧಿಷ್ಠಾನಗಳುಳ್ಳವಳಾಗಿಯೂ ಇರುತ್ತಾ ಉತ್ಕೃಷ್ಟವಾದ ಅಂತರಿಕ್ಷದಲ್ಲಿ ಅಪರಿಮಿತವಾದ ವ್ಯಾಪ್ತಿಯುಳ್ಳವಳಾಗುತ್ತಾಳೆ.

ಈ ಋಕ್ಕಿಗೆ ಮಾಧ್ಯಮಿಕವಾದ ವಾಕ್ಕಿನ ಪರವಾಗಿ ಒಂದು ವಿಧವಾಗಿಯೂ, ಶಬ್ದಬ್ರಹ್ಮಾಕವಾದ ವಾಕ್ಕಿನ ಪರವಾಗಿ ಇನ್ನೊಂದು ವಿಧವಾಗಿಯೂ ಅರ್ಥಮಾಡಿದೆ.

ಗೌರೀ—ಗೌರೀ ರೋಚತೇರ್ಜ್ವಲತಿಕರ್ಮಣಃ । ದೀಪ್ತ್ಯರ್ಥಕವಾದ ರುಚ್ ಧಾತುವಿನಿಂದ ನಿಷ್ಪನ್ನವಾಗಿದೆ. [ಅಯಮಪೀತರೋ ಗೌರೋ ವರ್ಣ ಏತಸ್ಮಾದೇವ ಪ್ರಶಸ್ಯೋ ಭವತಿ। ವರ್ಣವಾಚಕವಾದ ಗೌರಶಬ್ದವೂ ಸಹ ಈ ಧಾತುವಿನಿಂದಲೇ ನಿಷ್ಪನ್ನವಾಗಿ ಅತ್ಯಂತ ಪ್ರಶಸ್ಯವಾಗಿರುತ್ತದೆ] ಎಂದು ತಿಳಿಸಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೂ ಉದಹರಿಸಿ ವಿಶದವಾಗಿ ವಿವರಿಸಿದ್ದಾರೆ

ಗೌರೀರ್ಮಿಮಾಯ ಸಲಿಲಾನಿ ತಕ್ಷತೀ ಕುರ್ವತ್ಯೇಕಪದೀ ಮಧ್ಯಮೇನ, ದ್ವಿಪದೀ ಮಧ್ಯಮೇನ ಚಾದಿತ್ಯೇನ ಚ, ಚತುಷ್ಪದೀ ದಿಗ್ಭಿಃ; ಅಷ್ಟಾಪದೀ ದಿಗ್ಭಿಶ್ಚ, ನವಪದೀ ದಿಗ್ಭಿಶ್ಚಾದಿತ್ಯೇನ ಚ ಸಹ ಸಾಕ್ಷರಾ ಬಹೂದಕಾ ಪರಮೇ ವ್ಯವನೇ॥

(ನಿ· ೧೧–೪೦)

ಉದಕಗಳನ್ನು ಸೃಷ್ಟಿಸುತ್ತಾ ಅಂರಿಕ್ಷಸ್ಥಳದ ಮಾಧ್ಯಮಿಕಾ ವಾಕ್ಕು ಶಬ್ದಮಾಡುತ್ತಾಳೆ. ಏಕಪದಿಯೆಂದರೆ ಮಧ್ಯಮರೂಪ ವಾದ ಒಂದಧಿಷ್ಠಾನವುಳ್ಳವಳೆಂದರ್ಥ, ಇದನ್ನು ಸಾಯಣರು ವಿವರಿಸುತ್ತಾ ಮೇಘೇ ವರ್ತಮಾನಾ ಗಮನಸಾಧನೇನ ವಾಯುನಾ ಏಕಪದೀ ವಾ । ಮೇಘಸ್ಥಳಾದುದರಿಂದಾಗಲಿ ಅಥವಾ ತನ್ನ ಸಂಚಾರಕ್ಕೆ ಸಾಧನ ಭೂತವಾದ ವಾಯುರೂಪ ವಾದ, ಅಧಿಷ್ಠಾನವನ್ನು ಹೊಂದಿರುವುದರಿಂದಾಗಿ ಏಕಪದಿಯೆಂಬ ವಿಶೇಷಣವಿದೆಯೆಂದು ತಿಳಿಸಿದ್ದಾರೆ.

ದ್ವಿಪದೀ ಮಧ್ಯಮೇನ ಚಾದಿತ್ಯೇನ ಚ—ಅಂತರಿಕ್ಷ, ಆದಿತ್ಯ ಈ ಎರಡು ಅಧಿಷ್ಠಾನವುಳ್ಳವಳು ಅಥವಾ ಮೇಘಾಂತರಿಕ್ಷಾಖ್ಯದ್ವ್ಯಧಿಷ್ಠಾನಾ । ಮೇಘ ಮತ್ತು ಅಂತರಿಕ್ಷರೂಪವಾದ ಎರಡು ಅಧಿಷ್ಠಾನಗಳುಳ್ಳವಳು.

ಚತುಷ್ಪದೀ—ದಿಗ್ಭಿಃ ದಿಕ್ಚತುಷ್ಟಯಾಧಿಷ್ಠಾನಾ। ನಾಲ್ಕುದಿಕ್ಕುಗಳನ್ನು ಆಶ್ರಯಿಸಿ ನಾಲ್ಕುಕಾಲುಗಳುಳ್ಳವಳಂತೆ ಇರುವವಳು. (ಪಾದಚತುಷ್ಟಯೋಪೇತಾ)

ಅಷ್ಟಾಪದೀ, ನವಪದೀ ದಿಗ್ಭಿಶ್ಚಾವಾಂತರದಿಗ್ಭಿಶ್ಚಾದಿತ್ಯೇನ ಚ । ನಾಲ್ಕುದಿಕ್ಕುಗಳು, ನಾಲ್ಕುಅವಾಂತರ ದಿಕ್ಕುಗಳು (ವಿದಿಕ್ಕುಗಳು ) ಮತ್ತು ಆದಿತ್ಯ ಈ ಒಂಭತ್ತು ಅಧಿಷ್ಠಾನಗಳು.

ಈರೀತಿ ಸಮಸ್ತದಿಗ್ವಿದಿಕ್ಕುಗಳಲ್ಲಿಯೂ ವ್ಯಾಪಿಸಿ ಅಪರಿಮಿತವಾದ ಪ್ರಸರವುಳ್ಳವಳೂ, ಅಪರಿಮಿತವಾದ ಉದಕಗಳನ್ನು ಸೃಷ್ಟಿಸುವವಳೂ ಆಗಿ ಈ ವಾಗ್ದೇವತೆಯು ಉತ್ಕೃಷ್ಟವಾದ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಲೂ, ಲೋಕೋಪಕಾರಕಳಾಗಿಯೂ ಇರುತ್ತಾಳೆಂದು ಸ್ತುತಿಸಿದೆ.

ನಿರುಕ್ತಕಾರರು ವ್ಯೋಮಶಬ್ದಕ್ಕೆ ಪರ್ಯಾಯವಾಗಿ ವ್ಯವನವೆಂಬ ಪದವನ್ನು ಪಯೋಗಿಸಿದ್ದಾರೆ. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುತ್ತಾ ವಿಭಕ್ತಾನಾಂ ಭೂತಾನಾಂ ಯತ್ಪರಮಂ ಅವನಂ । ವಿಭಕ್ತವಾಗಿರತಕ್ಕ ಭೂತಗಳಿಗೆಲ್ಲಾ ಒಂದೇ ವಿಧವಾದ ಸಂಬಂಧವನ್ನು ಕಲ್ಪಿಸಿ ಎಲ್ಲಕ್ಕೂ ಉತ್ಕೃಷ್ಟವಾದ ರಕ್ಷಣಸ್ಥಾನವಾದ ಅಂತರಿಕ್ಷವೆಂದು ವಿವರಿಸಿದ್ದಾರೆ. ಓತಪ್ರೋತ ರೂಪದಲ್ಲಿ ಸಕಲಭೂತಗಳಿಗೂ ಸಂಬಂಧವನ್ನು ಕಲ್ಪಿಸುವುದೆಂದರ್ಥ.

> ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ ವಾಯೌ ಗಾರ್ಗೀ ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತ್ಯಂತರಿಕ್ಷಲೋಕೇಷು ಗಾರ್ಗಿ।
>
> (ಬೃ. ಉ. ೩-೬-೧)

ಸಕಲವಿಶ್ವವೂ ಉದಕದಲ್ಲಿ ಓತಪ್ರೋತರೂಪದಲ್ಲಿ ಸೇರಿವೆ. ಉದಕವು ವಾಯುವಿನಲ್ಲಿಯೂ, ವಾಯುವು ಅಂತರಿಕ್ಷದಲ್ಲಿಯೂ ಸಂಬಂಧಿಸಿದೆ. ಇತ್ಯಾದಿಯಾಗಿ ವರ್ಣಿತವಾಗಿದೆ.

ಈ ಋಕ್ಕಿಗೆ ಇನ್ನೊಂದು ವಿಧವಾದ ಅರ್ಥವೂ ಸಾಧ್ಯವಾಗುತ್ತದೆ. ಗೌರೀಃ— ಗರಣಶೀಲಾ ಶಬ್ದಬ್ರಹ್ಮಾತ್ಮಿಕಾ ವಾಕ್। ವಿಸ್ತೃತವಾಗಿ ಮಾಹಾತ್ಮ್ಯವನ್ನು ಪಡೆಯತಕ್ಕ ಶಬ್ದಬ್ರಹ್ಮಾತ್ಮಿಕವಾದ ವಾಕ್ಕೆಂದು ಗೌರಿ ಶಬ್ದಕ್ಕೆ ಅರ್ಥ. ಈ ಗೌರಿಯು ಘಟಾದಿದ್ರವ್ಯಗಳನ್ನು ವೈಯಕ್ತಿಕವಾದ ನಾಮದ ವ್ಯವಹಾರದಿಂದ ವಿಭಾಗಿಸಿ ಅದರ ವ್ಯಕ್ತಿತ್ವವನ್ನು ಸಂಪಾದಿಸಿಕೊಡುವುದರಿಂದ ತಕ್ಷತೀ ಎಂದು ವರ್ಣಿತವಾಗಿದೆ.

> ವಾಗ್ವೈ ಗ್ರಹಃ ಸ ನಾಮ್ನಾತಿಗ್ರಾಹೇಣ ಗೃಹೀತೋ ವಾಚಾ ಹಿ ನಾಮಾನ್ಯಭಿವದತಿ।
>
> (ಬೃ. ಉ. ೩-೨-೩ )

ಸಕಲವನ್ನೂ ಗ್ರಹಿಸತಕ್ಕದ್ದು ವಾಕ್ಕು. ಅದು ನಾಮಾತ್ಮಕವಾಗಿದೆ. ನಾಮದಿಂದಲೇ ಸಕಲ ಪದಾರ್ಥಗಳೂ ವ್ಯವಹೃತಗಳಾಗುತ್ತವೆ. ಸಕಲವೂ ನಾಮಾತ್ಮಕಗಳಾಗಿ ಉತ್ಪನ್ನವಾದವೆಂದರ್ಥ

> ವಾಗ್ವೈಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛೈಲಿನಿರಬ್ರವೀದ್ವಾಗ್ವೈ ಬ್ರಹ್ಮೇತ್ಯವದತೋಹಿ ಕಿಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ.
>
> (ಬೃ. ಉ. ೪-೧-೨)

ಇದು ಜನಕನಿಗೂ ಯಾಜ್ಞ್ಯವಲ್ಕ್ಯನಿಗೂ ನಡೆದ ಸಂಭಾಷಣೆಯು. ಇದರಲ್ಲಿ ವಾಕ್ಕಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ತೋರಿಸಿ ವಾಕ್ಕಿನ ಮಹತ್ತ್ವವನ್ನು ಪ್ರಶಂಸಿಸಿದೆ. ಶೈವಲಿನಿಯು ಜನಕನಿಗೆ ವಾಕ್ಕೇ ಬ್ರಹ್ಮನೆಂದು ಹೇಳಿದನೇ ಹೊರತು ಅದರ ಆಯತನವನ್ನೂ ಆಧಾರವನ್ನೂ ಹೇಳಲಿಲ್ಲ ಯಾಜ್ಞವಲ್ಕ್ಯನು ಇದನ್ನು ತಿಳಿದು ಶೈವಲಿನಿಯು ಜನಕನಿಗೆ ವಾಕ್ಕಿನ ವಿಷಯದಲ್ಲಿ ಹೇಳದೇ ಬಿಟ್ಟ ವಿಷಯವನ್ನು ತಾನು ತಿಳಿಸುತ್ತಾನೆ.

ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇನದುಪಾಸೀತ। ಕಾಪ್ರಜ್ಞತಾ ಯಾಜ್ಞವಲ್ಕ್ಯ। ವಾಗೇವ ಸಮ್ರಾಡಿತಿ ಹೋವಾಚ। ವಾಚಾ ವೈ ಸಮ್ರಾಡ್ಬಂಧುಃ ಪ್ರಜ್ಞಾಯತ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ ... ............... ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಪ್ರಜ್ಞಾಯಂತೇ ವಾಗ್ವೈ ಸಮ್ರಾಟ್ ಪರಮಂ ಬ್ರಹ್ಮ।

(ಬೃ. ಉ. ೪-೧-೨)

ವಾಕ್ಕೇ ಇದರ ಆಯತನವು. ಆಕಾಶವೇ ಪ್ರತಿಷ್ಠೆಯು. (ಅವಲಂಬನವು.) ಸುಹೃತ್ತಾಗಲಿ ಇತರ ಬಂಧುವಾಗಲಿ ವಾಕ್ಕಿನಿಂದಲೇ ಋಗಾದಿವೇದಗಳೂ, ಇತಿಹಾಸಾದಿಗಳೂ, ಸಕಲ ಶಾಸ್ತ್ರಸ್ಮೃತಿಗಳೂ, ಯಜ್ಞಯಾಗಾದಿಗಳೂ ತಿಳಿಯಪಡಿಸುತ್ತವೆ. ವಿಶ್ವವೆಲ್ಲವೂ ವಾಕ್ಕಿನ ವ್ಯವಹಾರವನ್ನೇ ಆಶ್ರಯಿಸಿದೆ. ವಾಕ್ಕೇ ಪರಬ್ರಹ್ಮವು, ಇತ್ಯಾದಿಯಾಗಿ ವಾಕ್ಕಿಗೆ ಮಹತ್ವವು ವರ್ಣಿತವಾಗಿದೆ. ಅದನ್ನೇ ಇಲ್ಲಿ ಸಾಯಣರು 'ಘಟಾದಿದ್ರವ್ಯಾಣಿ ತತ್ತದ್ವಾಚಕತ್ವೇನ ನಿಷ್ಪಾದಯಂತಿ,' ಎಂದು ವಿವರಿಸಿದ್ದಾರೆ. ಶಬ್ದಬ್ರಹ್ಮಾತ್ಮಕವಾದ ಈ ವಾಕ್ಕನ್ನು 'ಏಕಪದೀ' ಇತ್ಯಾದಿ ವಿಶೇಷಣಗಳಿಂದ ವರ್ಣಿಸಿದೆ.

ಏಕಪದೀ—ಅವ್ಯಾಕೃತತ್ವೇನ ಏಕಪ್ರತಿಷ್ಠಾನಾ ಏಕರೂಪಾ ವಾ ಆತ್ಮನಾ। ಈ ಶಬ್ದಬ್ರಹ್ಮವು ವ್ಯಾಕೃತಾವಸ್ಥೆಯಲ್ಲಿ ನಾನಾ ರೂಪದಲ್ಲಿರುತ್ತದೆ. ಅವ್ಯಾಕೃತವಾದ ಅವಸ್ಥೆಯಲ್ಲಿ ಅದ್ವಿತೀಯವೂ, ಅವಿಭಕ್ತವೂ ಆಗಿರುತ್ತದೆ. ಒಂದೇ ರೂಪವು ಮತ್ತು ಒಂದೇ ಅಧಿಷ್ಠಾನವು. ಆದುದರಿಂದ ಏಕಪದೀ ಎಂಬ ವಿಶೇಷಣವು.

ದ್ವಿಪದೀ—ಸುಪ್ತಿಙ್‌ಭೇದೇನ ಪಾದದ್ವಯವತೀ । ಸುಬಂತ ಮತ್ತು ತಿಙಂತ ಎಂದರೆ ನಾಮಪದ ಮತ್ತು ಕ್ರಿಯಾಪದ ಎಂಬ ಭೇದಗಳಿಂದ ಎರಡು ಪಾದಗಳುಳ್ಳದ್ದು.

ಚತುಷ್ಪದೀ—ನಾಮಾಖ್ಯಾತೋಪಸರ್ಗನಿಪಾತಭೇದೇನ । ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಈ ನಾಲ್ಕು ವಿಭಾಗಗಳುಳ್ಳದ್ದು.

ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತಾನೀಮಾನಿ ಭವಂತಿ ।

(ನಿ. ೧-೧)

ಎಂಬುದಾಗಿ ನಿರುಕ್ತಕಾರರು ನಾಮಾದಿಗಳ ಸ್ವರೂಪಗಳನ್ನು ವಿವರಿಸಿದ್ದಾರೆ.

ಅಷ್ಟಾಪದೀ—ಆಮಂತ್ರಿತಸಹಿತಾಷ್ಟಭೇದೇನ–ಸಂಬೋಧನೆಯೊಂದಿಗೆ ಸೇರಿ ಎಂಟು ವಿಭಕ್ತಿಗಳುಳ್ಳದ್ದು.

ನವಪದೀ—ಅವ್ಯಯದೊಂದಿಗೆ ಸೇರಿದುದೂ ಅಷ್ಟವಿಭಕ್ತ್ಯಾತ್ಮಕವಾದದ್ದೂ ಆದ ವಾಕ್ಕು; ಎಂದು ಒಂದರ್ಥ. ಅಥವಾ ನಾಭಿ, ಉರಸ್ಸು, ಕಂಠ ಇತ್ಯಾದಿ ಒಂಭತ್ತು ಪ್ರದೇಶಗಳಲ್ಲಿ ಉತ್ಪನ್ನವಾಗಿ ಅನಂತರ ಅನಂತವಾಗಿ ಹರಡತಕ್ಕ (ಸಹಸ್ರಾಕ್ಷರಾ) ವಾಕ್ಕು ಎಂದು ಇನ್ನೊಂದರ್ಥ.

ಶಬ್ದಬ್ರಹ್ಮರೂಪವಾದ ಈ ವಾಕ್ಕಿಗೆ ಹೃದಯಾಕಾಶವೇ ಮೂಲವು. ಈ ಮೂಲದಿಂದ ಉತ್ಪನ್ನವಾಗಿ ಅಥವಾ ಆವಿರ್ಭೂತವಾಗಿ ವಿಶ್ವವ್ಯಾಪಿಯಾಗುತ್ತದೆಂದು ತಾತ್ಪರ್ಯ, ಪರಮೇ ವ್ಯೋಮನ್ ಎಂಬುದಕ್ಕೆ ಉತ್ಕೃಷ್ಟೇ ಹೃದಯಾಕಾಶೇ ಎಂದರ್ಥಮಾಡಿದೆ. ಶಬ್ದಬ್ರಹ್ಮಕ್ಕೆ ಮೂಲವಾದ ಹೃದಯಾಕಾಶವನ್ನು ಉಪನಿಷತ್ತುಗಳಲ್ಲಿ ಈರೀತಿ ವರ್ಣಿಸಿದೆ.

ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾ-ಪೃಥಿವೀ ಅಂತರೇವ ಸಮಾಹಿತೇ ಉಭಾವಗ್ನಿಶ್ಚ ವಾಯುಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭಾ ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚನಾಸ್ತಿ ಸರ್ವಂ ತದಸ್ಮಿನ್ ಸಮಾಹಿತಮಿತಿ ।

(ಛಾ. ಉ. ೮-೧-೩)

ದೇಹರೂಪವಾದ ಈ ಬ್ರಹ್ಮಪುರದಲ್ಲಿ ಸೂಕ್ಷ್ಮವೂ ಪುಂಡರೀಕರೂಪವೂ ಆದ ಗೃಹವಿದೆ. ಅದು ಹೃದಯಾಕಾಶವು. ಅದು ಬ್ರಹ್ಮನ ಆವಾಸಸ್ಥಾನವು. ಅದರ ಅನ್ವೇಷಣವನ್ನು ಮಾಡಿ ಅಲ್ಲಿ ಬ್ರಹ್ಮತತ್ತ್ವವನ್ನು ಕಾಣಬೇಕು. (ಛಾ. ಉ. ೮-೧-೧) ಬ್ರಹ್ಮಾಂಡಕ್ಕಿಂತಲೂ ಮಹತ್ತಾದ ಈ ಬ್ರಹ್ಮತತ್ತ್ವವನ್ನು ಅಡಗಿಸಿಕೊಂಡಿರುವ ಸೂಕ್ಷ್ಮವಾದ ಈ ಅಂತರಾಕಾಶದ ಸ್ವರೂಪ. ವೇನೆಂದರೆ, ಬಾಹ್ಯಾಕಾಶವು ಎಷ್ಟು ವಿಸ್ತೃತವಾಗಿ ಹರಡಿರುವುದೋ ಅಷ್ಟೇ ವಿಸ್ತಾರವಾಗಿ ಈ ಹೃದಯಾಕಾಶವು ಹರಡಿರುವುದು,

ಇದರಲ್ಲೇ ದ್ಯಾವಾಪೃಥಿವಿಗಳೆರಡೂ ಹರಡಿರುವುವು. ಅಲ್ಲದೆ ವಾಯ್ವಗ್ನಿಗಳೂ, ಚಂದ್ರಸೂರ್ಯರೂ, ವಿದ್ಯುತ್ತೂ, ನಕ್ಷತ್ರಗಳೂ ದೇಹಾಂತರ್ಗತವಾದುದೂ ಆಗಿಲ್ಲದಿರುವುದೂ ಆದ ಸಮಸ್ತವೂ ಸಹ ಈ ದಹರಾಕಾಶದಲ್ಲಿ ಅಡಕವಾಗಿದೆ. (ಛಾ. ೮-೧-೩) ಇದನ್ನೇ ತೈತ್ತಿರೀಯೋಪನಿಷತ್ತಿನಲ್ಲಿ,

ದಹ್ರಂ ವಿಪಾಪಂ ಪರಮೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಗ್‌ಸ್ಥಂ ।
ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾಸಿತವ್ಯಂ ॥

(ತೈ. ಉ. ೪-೧೨-೩)

ಈ ಹೃದಯಾಕಾಶವು ಅತಿಸೂಕ್ಷ್ಮವಾದುದು. ಪಾಪರಹಿತವಾದುದು. ಇದು ಉತ್ತಮವಾದ ಆವಾಸಸ್ಥಾನವು. ಇದು ಪುಂಡರೀಕರೂಪದಲ್ಲಿ ದೇಹರೂಪವಾದ ಪುರದ ಮಧ್ಯಭಾಗದಲ್ಲಿ ಈ ಸೂಕ್ಷ್ಮವಾದ ಹೃದಯದಲ್ಲಿ ಅದಕ್ಕಿಂತಲೂ ಸೂಕ್ಷ್ಮವಾದ ಆಕಾಶವಿದ್ದು ಆ ಆಕಾಶದಲ್ಲಿ ಯಾವ ಬ್ರಹ್ಮತತ್ತ್ವವಡಗಿದೆಯೋ ಅದನ್ನು ಉಪಾಸನೆಮಾಡಬೇಕು ಎಂದು ಹೃದಯಾಕಾಶವನ್ನು ವರ್ಣಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಈ ಹೃದಯಾಕಾಶಕ್ಕೂ ಶಬ್ದಬ್ರಹ್ಮಾತ್ಮಕವಾದ ವಾಕ್ಕಿಗೂ ಆಧಾರಾಧೇಯಭಾವವನ್ನು ತಿಳಿಸಿದೆಯೆಂದು ಸಾಯಣಭಾಷ್ಯವು ಹೇಳುತ್ತದೆ. ಇದೇ ಸಂಬಂಧವನ್ನು ಛಾಂದೋಗ್ಯದಲ್ಲಿಯೂ ತಿಳಿಸುತ್ತಾ ನಾಮರೂಪಗಳ ವಿಭಾಗಕ್ಕೆ ಮೂಲವಾದ ವಾಕ್ಕಿಗೆ ಆಕಾಶವೇ ಮೂಲವೆಂದು ತಿಳಿಸಿದೆ.

ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ।

(ಛಿ. ಉ. ೮-೧೪-೧)

ನಾಮರೂಪಗಳೆಂದು ವೈಯಕ್ತಿಕವಾದ ವಿಭಾಗವನ್ನು ಮಾಡಲು ಆಕಾಶವೇ ಕಾರಣವು. ಇದರಲ್ಲಿ ಅಂತರ್ಗತನಾಗಿರುವವನೇ

ಪರಬ್ರಹ್ಮನು. ಪರಮಾತ್ಮನು. ಈ ವಾಕ್ಯವನ್ನು ಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದ ದಹರಾಧಿಕರಣದ ಪ್ರಕರಣದಲ್ಲಿ ಉದಹರಿಸಿ ಪರಬ್ರಹ್ಮನಿಗೂ ಈ ದಹರಾಕಾಶಕ್ಕೂ ತಾದಾತ್ಮ್ಯವನ್ನು ಹೇಳಿದ್ದಾರೆ.

ಪ್ರಸಿದ್ಧೇಶ್ಚ— ಇತಶ್ಚ ಪರಮೇಶ್ವರ ಏವ ''ದಹರೋಽಸ್ಮಿನ್ನಂತರಾಕಾಶಃ'' ಇತ್ಯುಚ್ಯತೇ । ಯತ್ಕಾರಣ ಮಾಕಾಶಶಬ್ದಃ ಪರಮೇಶ್ವರೇ ಪ್ರಸಿದ್ಧಃ। "ಆಕಾಶೋ ವೈ ನಾಮ .... .... .... ಸ ಆತ್ಮಾ'' ''ಸರ್ವಾ ಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ'' ( ಛಾ. ಉ. ೧-೯-೧ ) ಇತ್ಯಾದಿ ಪ್ರಯೋಗದರ್ಶನಾತ್ ।

(ಬ್ರಸ್ಮಸೂತ್ರಭಾಷ್ಯ ೧-೩-೧೭)

ಈ ಅಂತರ್ಹೃದಯಾಕಾಶವೇ ಪರಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪರಬ್ರಹ್ಮನ ಬಾಹ್ಯಾವಿರ್ಭಾಗಗಳಾದ ನಾಮರೂಪಗಳ ವಿಭಾಗಕ್ಕೆ ಆಕಾಶವೇ ಕಾರಣವಾಗಿರುವುದರಿಂದಲೂ, ಈ ಸಕಲಭೂತಗಳೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ಇತ್ಯಾದಿ ಶ್ರುತಿವಾಕ್ಯಗಳಿದ್ದು ಆಕಾಶಕ್ಕೆ ಬ್ರಹ್ಮತಾದಾತ್ಮ್ಯವನ್ನು ಹೇಳಿರುವುದರಿಂದಲೂ ಸಹ ದಹರಾಕಾಶವು ಕೆಲವು ಕಡೆಗಳಲ್ಲಿ ಬ್ರಹ್ಮಾವಾಸಸ್ಥಾನವೆಂದೂ ಇನ್ನು ಕೆಲವು ಕಡೆಗಳಲ್ಲಿ ಬ್ರಹ್ಮರೂಪಿಯೇ ಎಂದೂ ಸಹ ಪ್ರಸಿದ್ಧವಾಗಿದೆ.

ಸಾ ಇಯಂ ಶಬ್ದಬ್ರಹ್ಮಾತ್ಮಿಕಾ ವಾಕ್ ಉತ್ಕೃಷ್ಟೇ ಹೃದಯಾಕಾಶೇ ಮೂಲಾಧಾರೇ ಸಹಸ್ರಾಕ್ಷರಾ ಅನೇಕಾಕಾರೇಣ ವ್ಯಾಪ್ತಾ ಭವತೀತ್ಯರ್ಥಃ (ಸಾ. ಭಾ.)

ಶಬ್ದಬ್ರಹ್ಮರೂಪವಾದ ಈ ವಾಕ್ಕು ಅತಿಶಯವಾದುದೂ ಹೃದಯಾಕಾಶರೂಪವಾದುದೂ ಆದ ಮೂಲಾಧಾರದಲ್ಲಿದ್ದು ಅಪರಿಮಿತವಾದ ಆಕಾರಗಳನ್ನು ಪಡೆದು ವಿಶ್ವವನ್ನು ವ್ಯಾಪಿಸುತ್ತದೆ ಎಂದ ತಾತ್ಪರ್ಯವೆಂದು ಸಾಯಣರು ವಿವರಿಸಿದ್ದಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಲವತ್ತನೆಯ ಖಂಡವು ಸಮಾಪ್ತವಾಗಿವೆ.

---

## ಅಥ ಏಕಚತ್ವಾರಿಂಶತ್ ಖಂಡಃ

## ನಲವತ್ತೊಂದನೆಯ ಖಂಡವು

ತಸ್ಯಾಃ ಸಮುದ್ರಾ ಅಧಿ ವಿ ಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸ್ರಃ । ತತಃ ಕ್ಷರತ್ಯಕ್ಷರಂ ತದ್ವಿಶ್ವಮುಪ ಜೀವತಿ। (ಋ ಸಂ. ೧-೧೬೪-೪೨) ॥ ತಸ್ಯಾಃ ಸಮುದ್ರಾ ಅಧಿವಿಕ್ಷರಂತಿ ವರ್ಷಂತಿ ಮೇಘಾಸ್ತೇನ ಜೀವಂತಿ ದಿಗಾಶ್ರಯಾಣಿ ಭೂತಾನಿ ತತಃ

ಕ್ಷರತ್ಯಕ್ಷರಮುದಕಂ ತತ್ಸರ್ವಾಣಿ ಭೂತಾನ್ಯುಪಜೀವಂತಿ ಗೌರ್ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೪೧ ॥

ತಸ್ಯಾ ಸಮುದ್ರಾ ಅಧಿ ವಿಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸ್ರಃ ॥
ತತಃ ಕ್ಷರತ್ಯಕ್ಷರಂ ತದ್ವಿಶ್ವಮುಪಜೀವತಿ ॥

ಈ ಗೌರಿಯಿಂದಲೇ ಮೇಘಗಳು ನಾನಾರೀತಿಯಾಗಿ ಮಳೆಗರೆಯುತ್ತವೆ. ಆ ಮಳೆನೀರಿನಿಂದ ದಿಕ್ಕುವಿದಿಕ್ಕುಗಳಲ್ಲಿರುವ ಭೂತಜಾತಗಳು ಜೀವಿಸುತ್ತವೆ. ಗೌರಿಯೇ ಮೇಘದಮೂಲಕ ನೀರನ್ನು ಸುರಿಸುತ್ತಾಳೆ. ಆ ನೀರನ್ನಾಶ್ರಯಿಸಿ ಪ್ರಪಂಚವು ಜೀವಿಸುತ್ತದೆ.

ತಸ್ಯಾಃ ಸಮುದ್ರಾ ಅಧಿ ವಿಕ್ಷರಂತಿ—ಪ್ರವರ್ಷಂತಿ ಮೇಘಾಸ್ತೇನ
ಜೀವಂತಿ ದಿಗಾಶ್ರಯಾಣಿ ಭೂತಾನಿ। ತತಃ ಕ್ಷರತ್ಯಕ್ಷರಮುದಕಂ
ತತ್ಸರ್ವಾಣಿ ಭೂತಾನ್ಯುಪಜೀವಂತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಮುದ್ರವನ್ನು ಅಂತರಿಕ್ಷನಾಮದಲ್ಲಿ (ನಿಘ. ೧–೩–೧೫) ಹೇಳಿದ್ದರೂ ಇಲ್ಲಿ ಅಂತರಿಕ್ಷದಲ್ಲಿರುವುದರಿಂದ ಮೇಘಗಳೆಂದು ತಿಳಿಯಬೇಕು. ಅಕ್ಷರವನ್ನು ಉದಕಪರ್ಯಾಯದಲ್ಲಿ (ನಿಘ. ೧–೧೨–೩೨) ಪಠಿಸಿರುತ್ತಾರೆ.

ಗೌರ್ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೪೧ ॥

ಕ್ರಮಪ್ರಾಪ್ತವಾದ ಗೋಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ಪೃಥಿವಿನಾಮದಲ್ಲಿ (ನಿ. ೨–೫) ವ್ಯಾಖ್ಯಾತವಾಗಿದೆ. ಗಮ್‌ಧಾತುವಿಗೆ ಡೋಸ್ ಪ್ರತ್ಯಯ ಬಂದಾಗ ಟಿಲೋಪ. ಗೋ ಓಕಾರಾಂತಪದ. ಇಲ್ಲಿ ಮಾಧ್ಯಮಿಕವಾದ ವಾಗ್ದೇವತೆ ಅರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ಗೋಸ್ತುತಿ ಪ್ರತಿಪಾದಕವಾಗುತ್ತದೆ.

ತಸ್ಯಾಃ ಸಮುದ್ರಾ ಅಧಿ ವಿಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸ್ರಃ।
ತತಃ ಕ್ಷರತ್ಯಕ್ಷರಂ ತದ್ವಿಶ್ವಮುಪ ಜೀವತಿ ॥ ೪೨ ॥

ಮಾಧ್ಯಮಿಕವಾದ ವಾಕ್ಕಿನಿಂದ ಮೇಘಗಳು ಪ್ರಭೂತವಾಗಿ ವೃಷ್ಟಿಯನ್ನು ಸುರಿಸುತ್ತವೆ. ಆದರಿಂದ ನಾಲ್ಕು ದಿಕ್ಕುಗಳಲ್ಲೂ ಇರತಕ್ಕ ಪ್ರಜೆಗಳು ಜೀವಿಸುತ್ತಾರೆ. ಅನಂತರ ಉದಕವು ಸಸ್ಯಾದಿಗಳಿಗೆ ಪ್ರಸರಿಸುತ್ತದೆ. ಸತ್ಯವೇ ಮುಂತಾದ ಸಮಸ್ತ ಜಗತ್ತೂ ಸಹ ಅದರ ಆಶ್ರಯದಿಂದ ಬದುಕುತ್ತದೆ.

**ಸಮುದ್ರಾಃ**—ವೃಷ್ಟ್ಯುದಕಸಮುಂದನಾಧಿಕರಣಭೂತಾ ಮೇಘಾಃ । ವೃಷ್ಟ್ಯುದಕಪ್ರವಾಹಕ್ಕೆ ಆಧಾರಭೂತವಾದ ಮೇಘಗಳೆಂದರ್ಥ. ನಿರುಕ್ತಕಾರರು ಇದರ ನಿರ್ವಚನವನ್ನು ತಿಳಿಸುತ್ತಾ,

**ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।**

(ನಿ. ೨-೧೦)

ಚಲಿಸು ಎಂಬರ್ಥವನ್ನು ಕೊಡುವ **ದ್ರು ಸಂ, ಉದ್** ಎಂಬ ಎರಡು ಉಪಸರ್ಗಗಳೂ ಸೇರಿಕೊಂಡು ಮೇಲಕ್ಕೆ ಉಕ್ಕಿ ಹರಿಯುತ್ತವೆ ಎಂದು ತಾತ್ಪರ್ಯವನ್ನು ಕೊಡುತ್ತಾದ್ದರಿಂದಲೂ, ಅಥವಾ, ಅದೇ ದ್ರು ಧಾತುವಿನೊಡನೆ ಸಮ್ ಅಭಿ ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರ ಕಡೆಗೆ ಹರಿದು ಬರುತ್ತವೆಯೆಂಬ ಅರ್ಥವನ್ನು ಕೊಡುವುದರಿಂದಾರಿಂದಾಗಲಿ, ಅಥವಾ ಸಂತೋಷಪಡು ಎಂಬರ್ಥವನ್ನು ಕೊಡುವ **ಮುದ್** ಧಾತುವಿನೊಡನೆ ಸಮ್ ಎಂಬ ಉಪಸರ್ಗವು ಸೇರಿ ಜಲಚರಪ್ರಾಣಿಗಳು ಇದರಲ್ಲಿ ಹರ್ಷವನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಾಗಲಿ, ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಾಗಲಿ, ಅಥವಾ ತೇವಮಾಡು ಎಂಬರ್ಥವನ್ನು ಕೊಡುವ **ಉದ್** ಧಾತುವಿನೊಡನೆ ಸಮ್ ಉಪಸರ್ಗವು ಸೇರಿ ನೆನೆಯಿಸು ಎಂದು ತಾತ್ಪರ್ಯವನ್ನು ಕೊಡುವುದರಿಂದಾಗಲಿ **ಸಮುದ್ರ**ವೆಂಬ ಪದವು ನಿಷ್ಪನ್ನವಾಗಿದೆಯೆಂದು ಹೇಳಿದ್ದಾರೆ.

ಅನಂತರ ಪಾರ್ಥಿವವಾದ ಸಮುದ್ರಕ್ಕೂ, ಅಂತರಿಕ್ಷಪರ್ಯಾಯವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುತ್ತಾ ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು ನಿರುಕ್ತಕಾರರು,

**ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ।** ಅಂತರಿಕ್ಷಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. ಅದು ಸರಿಯಲ್ಲ. ಎಂದು ತಿಳಿಸಿ ಈ ಸಂದರ್ಭದಲ್ಲಿ ಅಂತರಿಕ್ಷಪರ್ಯಾಯವಾದ ಸಮುದ್ರಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸಲು ಒಂದು ಇತಿಹಾಸವನ್ನು ಉದಹರಿಸಿದ್ದಾರೆ. ಈ ಇತಿಹಾಸವನ್ನು ಇದೇ ಭಾಗದ 54–55 ನೇ ಪುಟಗಳಲ್ಲಿ ತಿಳಿಸಿದೆ.

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾ ಇಚ್ಛಂತಃ ಶವಸೋ ನಪಾತಃ ॥**

(ಋ. ಸಂ. ೧-೧೬೧-೧೪)

ಎಂಬಲ್ಲಿ **ಸಮುದ್ರೈಃ** ಎಂಬ ಪದವು ಅದ್ಭಿಃ ಎಂಬುದಕ್ಕೆ ವಿಶೇಷಣವಾಗಿದೆ. ಪ್ರವಹಿಸತಕ್ಕ ಉದಕಗಳಿಂದ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಸ್ರವಿಸತಕ್ಕ ವೃಷ್ಟ್ಯುದಕಗಳಿಗೆ ಆಧಾರಭೂತವಾಗಿರುವ **ಮೇಘ**ಗಳು ಎಂದರ್ಥ. **ತಸ್ಮಾಃ ಸಮುದ್ರಾ ಅಧಿ ವಿ ಕ್ಷರಂತಿ—ವರ್ಷಂತಿ ಮೇಘಾಃ ।** ಮೇಘಗಳು ಮಳೆಯನ್ನು ಸುರಿಸುತ್ತವೆಯೆಂದು ನಿರುಕ್ತಕಾರರು ಅರ್ಥ ಮಾಡಿದ್ದಾರೆ. (ನಿ. ೧೧-೪೧).

**ಪ್ರದಿಶಶ್ಚತಸ್ರಃ—ದಿಗಾಶ್ರಯಾಣಿ ಭೂತಾನಿ** (ನಿ). ಸಕಲದಿಕ್ಕುಗಳನ್ನೂ ಆಶ್ರಯಿಸಿರುವ ಭೂತಗಳು (ತೇನ ಜೀವಂತಿ) ಎಂದು ತಾತ್ಪರ್ಯ.

**ಅಕ್ಷರಂ–ಅಕ್ಷರಮುದಕಂ ।** ಉದಕಪರ್ಯಾಯವಾಗಿ ಈ ಪದವನ್ನುಪಯೋಗಿಸಿದೆ. ಈ ಪದದ ಪ್ರಯೋಗದಲ್ಲಿ ವಿಶೇಷವಿಷಯವನ್ನು ಗಮನಿಸಬೇಕು.

ಅಕ್ಷರಂ ನ ಕ್ಷರತಿ ನ ಕ್ಷೀಯತೇ ವಾಕ್ಷಯೋ ಭವತಿ ವಾಚೋಽಕ್ಷ ಇತಿ ವಾ ||

(ನಿ. ೧೩-೧೨)

ಕ್ಷರವಲ್ಲದ್ದು, ಕ್ಷರರಹಿತವಾದದ್ದು ಅಕ್ಷರಂ ಆದುದರಿಂದ ಈ ಪದವನ್ನು (೧-೧೬೪-೩೯) ಇತ್ಯಾದಿ ಋಕ್ಕುಗಳಲ್ಲಿ ಕ್ಷಯರಹಿತ ಆತ್ಮನ ಪರವಾಗಿ ಉಪಯೋಗಿಸಿದೆ. ಕ್ಷರ ಸಂಚಲನೇ, ಸ್ರವಣೇಚ, ಸಂಚರಿಸತಕ್ಕದ್ದು, ಸ್ರವಿಸತಕ್ಕದ್ದು ಎಂಬರ್ಥದಲ್ಲಿ ಕ್ಷರಧಾತುವು ಉಪಯೋಗಿಸಲ್ಪಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅಕ್ಷರಶಬ್ದವು ಸ್ರವಿಸುವ ಉದಕಕ್ಕೆ ವಿಶೇಷಣವಾಗಿದೆ. ಇದೇ ರೀತಿಯಲ್ಲಿ,

ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ |
ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ||

(ಋ. ಸಂ. ೧-೩-೪೫)

ಎಂಬಲ್ಲಿಯೂ ಸಹ ಇದೇ ರೀತಿ ಅಕ್ಷರವೆಂದರೆ ಉದಕವೆಂದರ್ಥವಾಗುತ್ತದೆ. ಅಕ್ಷರಾ, ಸ್ರೋತಃ, ತೃಪ್ತಿಃ (ನಿ. ೨-೨೪) ಇತ್ಯಾದ್ಯುದಕನಾಮಗಳಲ್ಲಿ ನಿರುಕ್ತಕಾರರೂ ಈ ಪದವನ್ನು ಪಠಿಸಿರುತ್ತಾರೆ. ಕ್ಷರವಲ್ಲದ ಸತ್ತ್ವವುಳ್ಳದ್ದು; ಚೈತನ್ಯದಾಯಿಯಾದುದು ಎಂದರ್ಥ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ನಲವತ್ತೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಿಚತ್ವಾರಿಂಶತ್ ಖಂಡಃ

## ನಲವತ್ತೆರಡನೆಯ ಖಂಡವು

ಗೌರಮೀಮೇದನು ವತ್ಸಂ ಮಿಷಂ ತಂ ಮೂರ್ಧಾನಂ ಹಿಙ್ಙಕೃಣೋನ್ಮಾತವಾಉ | ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ ಮಾಯುಂ ಪಯತೇ ಪಯೋಭಿಃ (ಋ. ಸಂ. ೧-೧೬೪-೨೮) || ಗೌರನ್ವಮೀಭೇದ್ವತ್ಸಂ ನಿಮಿಷಂತಮನಿಮಿಷಂತಮಾದಿತ್ಯಮಿತಿ ವಾ ಮೂರ್ಧಾನಮಸ್ಯಾಭಿಹಿಙ್ ಕರೋನ್ಮನನಾಯ ಸೃಕ್ವಾಣಂ ಸರಣಂ ಘರ್ಮಂ ಹರಣಮಭಿವಾವಶಾನಾ ಮಿಮಾತಿ ಮಾಯುಂ ಪ್ರಪ್ಯಾಯತೇ ಪಯೋಭಿರ್ಮಾಯುಮಿವಾದಿತ್ಯಮಿತಿ ವಾ ವಾಗೇಷಾ ಮಾಧ್ಯಮಿಕಾ ಧರ್ಮಧುಗಿತಿ ಯಾಜ್ಞಿಕಾಧೇನುರ್ಧಯುತೇರ್ವಾ ತಸ್ಯಾ ಏಷಾ ಭವತಿ || ೪೨ ||

ಗೌರಮೀಮೇದನು ವತ್ಸಂ ಮಿಷಂತಂ ಮೂರ್ಧಾನಂ ಹಿಙ್ಙ್ಕೃಣೋ-
ನ್ಮಾತವಾ ಉ ॥ ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ
ಮಾಯುಂ ಪಯತೇ ಪಯೋಭಿಃ ॥ (ಋ. ಸಂ. ೨-೩-೧೯)

ಗೋಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಾಧ್ಯಮಿಕವಾಗ್ದೇವತೆಯು ಅವ್ಯವಹಿತದರ್ಶನವುಳ್ಳ ಆದಿತ್ಯನನ್ನು ಕುರಿತು ಅನುಕೂಲ ಶಬ್ದಮಾಡುತ್ತದೆ. ಮೇಲಿರುವ ಸೂರ್ಯರಶ್ಮಿಗಳನ್ನು ಆಳೆಯಲು ಹಿಂಕಾರದಿಂದ ಶಬ್ದ ಮಾಡುತ್ತದೆ. ಯಾವಾಗಲೂ ಸಂಚರಿಸುವ, ರಸವನ್ನು ಸೆಳೆಯುವ ಸೂರ್ಯನನ್ನು ಬಯಸುತ್ತಾ ಶಬ್ದಮಾಡುತ್ತದೆ. ನೀರಿನಿಂದ ಆಪ್ಯಾಯನವನ್ನುಂಟುಮಾಡುತ್ತದೆ.

ಗೌರನ್ವಮೀಮೇದ್ವತ್ಸಂ ಮಿಷಂತಂ ನಿಮಿಷಂತ-ಮನಿಮಿಷಂತ-
ಮಾದಿತ್ಯಮಿತಿ ವಾ। ಮೂರ್ಧಾನಮಸ್ಯಾಭಿಹಿಙ್ಙಕರೋನ್ಮನನಾಯ।
ಸೃಕ್ವಾಣಂ-ಸರಣಂ, ಘರ್ಮಂ ಹರಣಂ ಅಭಿವಾವಶಾನಾ ಮಿಮಾತಿ
ಮಾಯುಂ ಪ್ರಪ್ಯಾಯತೇ ಪಯೋಭಿಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ರಸಹರಣದಿಂದ ಆದಿತ್ಯನು ವತ್ಸನಾಗುತ್ತಾನೆ. ಇವನು ಯಾವಾಗಲೂ ಎಲ್ಲರಿಂದಲೂ ನೋಡಲ್ಪಡುತ್ತಾನೆ. ಮಾಯು ಶಬ್ದಪರ್ಯಾಯದಲ್ಲಿ (ನಿಘ. ೧-೧೧-೧೨) ಹೇಳಿದೆ. ಶಬ್ದಾರ್ಥಕ ಮೀಮಧಾತು ನಿರುಕ್ತದಲ್ಲಿ ಮಾತ್ರ ಹೇಳಿದೆ.

ಮಾಯುಮಿವಾದಿತ್ಯಮಿತಿ ವಾ । ವಾಗೇಷಾ ಮಾಧ್ಯಮಿಕಾ, ಘರ್ಮ-
ದುಗಿತಿ ಯಾಜ್ಞಿಕಾಃ ।

ಅಥವಾ ಉಪಮಾರ್ಥದಲ್ಲಿ ಮಾಯುಶಬ್ದ ಉಪಾತ್ತವಾಗಿದೆ. ಶಬ್ದವನ್ನೆಂಬಂತೆ ಸದಾಗಮನವುಳ್ಳ ಸೂರ್ಯನನ್ನು ಬಯಸುತ್ತಾ ಶಬ್ದವನ್ನು ಮಾಡುತ್ತಾಳೆ ಎಂದರ್ಥ. ಗೋಶಬ್ದದಿಂದ ಮಧ್ಯಮಸ್ಥಾನದ ದೇವತೆ ತಿಳಿಯುತ್ತದೆಂದು ನಿರುಕ್ತಕಾರರ ಮತ. ಯಜ್ಞದ ಸರ್ವಾಂಗಸಂಪಾದಕವಾದ ಧೇನುವೆಂದು ಯಾಜ್ಞಿಕರ ಮತ. ಗೋವು ಕೂಡಾ ಕರುವನ್ನು ನೋಡಿ ಶಬ್ದಮಾಡುತ್ತದೆ. ಅದರ ತಲೆಯನ್ನು ನೆಕ್ಕಿ ಹಿಂಕಾರಶಬ್ದಮಾಡುತ್ತದೆ. ಆ ಕರುವನ್ನುದ್ದೇಶಿಸಿ ಶಬ್ದಮಾಡುತ್ತಾ ಹೋಗುತ್ತದೆ. ಹಾಲಿನಿಂದ ಸಂತೋಷಪಡಿಸುತ್ತದೆ.

ಧೇನುರ್ಧಯತೇರ್ವಾ ಧಿನೋತೇರ್ವಾ । ತಸ್ಯಾ ಏಷಾ ಭವತಿ ॥

ಕ್ರಮಪ್ರಾಪ್ತವಾದ ಧೇನು ಪದದ ನಿರ್ವಚನವನ್ನು ತೋರಿಸುತ್ತಾರೆ. ಇದು ಕರುವಿನಿಂದ ಕುಡಿಯಲ್ಪಡುತ್ತದೆ ಎಂಬರ್ಥದಲ್ಲಿ ಪಾನಾರ್ಥಕ ಧೇಟ್‌ಧಾತುವಿಗೆ ನುಪ್ರತ್ಯಯ. ಅಥವಾ ಪ್ರೀಣನಾರ್ಥಕ ಧಿವಿಧಾತುವಿನಿಂದ ನಿಷ್ಪನ್ನವಾಗಿದೆ. ನೀರಿನಿಂದ ಅಥವಾ ಹಾಲಿನಿಂದ ಪ್ರೀತಿಯನ್ನುಂಟುಮಾಡುವುದು ಧೇನು ಎಂದರ್ಥ. ಮುಂದೆ ಹೇಳುವ ಮಂತ್ರವು ಧೇನುಸ್ತುತಿ ಪ್ರತಿಪಾದಕವಾಗುತ್ತದೆ.

ಈ ಋಕ್ಕಿನಲ್ಲಿ ವರ್ಣಿತವಾಗಿರುವ ದ್ಯಾವಾಪೃಥಿವಿಗಳಿರುಗಳ ಲಕ್ಷಣವೂ, ಮೇಲೆ ಉದಾಹೃತವಾದ ಶತಪಥಬ್ರಾಹ್ಮಣದ ವಾಕ್ಯದಲ್ಲಿ ವರ್ಣಿತವಾಗಿರುವ ಅಶ್ವಿನೀದೇವತೆಗಳ ಲಕ್ಷಣವೂ ಒಂದೇ ಆಗಿದೆ. ಅಲ್ಲದೇ, "ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವ ದ್ಯಾವಾಪೃಥಿವಿಗಳೇ ಇವರು" ಎಂದು ಸಿಸ್ಪಷ್ಟವಾಗಿ ತಾದಾತ್ಮ್ಯವನ್ನೇ ಹೇಳಿದೆ. (೩).

ಅಹೋರಾತ್ರಾವಿತ್ಯೇಕೇ—ಅಹೋರಾತ್ರಗಳೇ ಅಶ್ವಿನೀದೇವತೆಗಳೆಂದು ಇನ್ನು ಕೆಲವರ ಮತವಾಗಿದೆ (೪)

ಸೂರ್ಯಾಚಂದ್ರಮಸಾವಿತ್ಯೇಕೇ—ಇವರನ್ನೇ ಸೂರ್ಯಚಂದ್ರರೆಂದು ಇನ್ನು ಕೆಲವರು ಹೇಳುತ್ತಾರೆ (೫)

ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ—ಸುಕೃತಿಗಳಾದ ಇಬ್ಬರು ರಾಜರೆಂದು ಇತಿಹಾಸಕಾರರ ಮತವಾಗಿದೆ (೬) ಹೀಗೆ ಬೇರೆಬೇರೆ ನಿರ್ವಚನಗಳನ್ನು ತೋರಿಸಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮೂರುವಿಧವಾದ ಅರ್ಥ ಹೇಳಿರುವುದಕ್ಕೆ ಅವಕಾಶವಿದೆ. ಅಶ್ವಿನೌ ವಾಯ್ವಾದಿತ್ಯೌ ಎಂಬ ಅರ್ಥವನ್ನು ಅನುಮೋದಿಸುವ ಋಕ್ಕುಗಳೂ ಋಕ್ಸಂಹಿತೆಯಲ್ಲಿ ಕೆಲವಿದೆ. ಉದಾಹರಣೆಗೆ—

ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।
ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥

(ಋ. ಸಂ. ೧–೧೮೧–೪)

ಎಂಬಲ್ಲಿ 'ಅನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋ ಅನ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ॥ ಮಧ್ಯಮಲೋಕವರ್ತಿಯಾದವನು ಒಬ್ಬನು, ದ್ಯುಲೋಕದ ಶ್ರೇಷ್ಠವಾದ ಪುತ್ರನು ಆದಿತ್ಯರೂಪದಲ್ಲಿ ಇನ್ನೊಬ್ಬನು ಎಂದು ಅರ್ಥ ಮಾಡಿದೆ. (ನಿ. ೧೨–೨) ಇಲ್ಲಿ ಮಧ್ಯಮಲೋಕವರ್ತಿಯಾದವನು ವಾಯುವೆಂದು ಕೆಲವರೂ, ಚಂದ್ರನೆಂದು ಇನ್ನು ಕೆಲವರೂ ಹೇಳುತ್ತಾರೆ. ಮೊದಲನೆಯ ಅಭಿಪ್ರಾಯದಂತೆ ವಾಯ್ವಾದಿತ್ಯರೇ ಆಯಿತು. ಪ್ರಕೃತವಾದ ಋಕ್ಕಿನಲ್ಲಿ ಸಾಯಣರ ಅರ್ಥವನ್ನು ಅನುಮೋದಿಸುತ್ತದೆ, ಇಂತಹ ವಾಯ್ವಾದಿತ್ಯರಿಂದ ಪ್ರೇರಿತವಾಗಿ ಮೇಘವು ವೃಷ್ಟಿಯನ್ನು ಸುರಿಸಲಿ ಎಂದರ್ಥ.

ಗೌರಮೀಮೇದನು ವತ್ಸಂ ಮಿಷಂತಂ ಮೂರ್ಧಾನಂ ಹಿಙ್ಙಕೃಣೋ
ನ್ಮಾತವಾ ಉ । ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ
ಮಾಯುಂ ಪಯತೇ ಪಯೋಭಿಃ ॥ ೨೮ ॥

ಧೇನುವು ಕಣ್ಣುಮಿಟುಕಿಸುತ್ತಿರುವ ತನ್ನ ಕರುವನ್ನು ಸಮೀಪಿಸಿ ಶಬ್ದವನ್ನು ಮಾಡುತ್ತದೆ. ಅದರ ತಲೆಯನ್ನು ನೆಕ್ಕಿ ಶುದ್ಧಿಮಾಡುವ ಸನ್ನಾಹದಿಂದಲೇ ಗುಟುರುಶಬ್ದವನ್ನು ಮಾಡುತ್ತದೆ. ಕರುವಿನ ಮುಖಪ್ರಾಂತದಲ್ಲಿ ನೊರೆಯನ್ನು ನೋಡಿ ಮಮತಾಪೂರ್ವಕವಾಗಿ ಶಬ್ದವನ್ನು ಮಾಡುತ್ತದೆ. ಕ್ಷೀರಗಳಿಂದ ತನ್ನ ಕರುವನ್ನು ತೃಪ್ತಿಗೊಳಿಸುತ್ತದೆ.

ಪ್ರವರ್ಗ್ಯದಲ್ಲಿ ಹಾಲುಕರೆಯುವ ಕಾಲದಲ್ಲಿ ಕರುವನ್ನು ಹಸುವಿನಿಂದ ಬೇರ್ಪಡಿಸಿ ಬೇರೆಕಡೆ ಕಟ್ಟಲು ಕರೆದುಕೊಂಡು ಹೋಗುವಾಗ ಗೌರಮೀಮೇತ್ ಎಂಬ ಈ ಋಕ್ಕನ್ನು ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ ಗೌರಮೀಮೇದನು ವತ್ಸಂ ಮಿಷಂತಂ ನಮಸೇದುಪ ಸೀದತ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೬–೭).

ಈ ಋಕ್ಕಿನಲ್ಲಿಯೂ ಸಹ ಮೇಘಪರವಾದ ಅರ್ಥವನ್ನು ಹೇಳಬಹುದು ಆಗ—ಮಿಷಂತಂ ವತ್ಸಂ—ವೃಷ್ಟಿರೂಪವಾದ ಕ್ಷೀರಾಭಾವದಿಂದ ಪರಿತಪಿಸುತ್ತಾ ಕಣ್ಣು ಮಿಟುಕಿಸುತ್ತಿರುವ ಲೋಕರೂಪವಾದ ವತ್ಸವನ್ನು ನೋಡಿ ಅಮೀಮೇತ್—ವೃಷ್ಟಿಗೆ ಪೂರ್ವಭಾವಿಯಾದ ಗರ್ಜನಶಬ್ದವನ್ನು ಮಾಡಿತು ;

ಮೂರ್ಧಾನಂ ಮಾತನ್ವೈ ಹಿಙ್ ಅಕೃಣೋತ್—ಮೂರ್ಧಸ್ಥಾನೀಯವಾದ ಪೃಥ್ವಿಯನ್ನು ಸಸ್ಯಾದಿಗಳಿಂದ ಯುಕ್ತವನ್ನಾಗಿ ಮಾಡಲು ಸನ್ನಾಹಪೂರಿತವಾದ ಶಬ್ದವನ್ನು ಮಾಡುತ್ತದೆ. ಸೃಕ್ವಾಣಂ ಘರ್ಮಂ ಅಭಿ ವಾವಶಾನಾ—ಫಲದ ಸೃಷ್ಟಿಕರ್ತೃವಾದುದೂ ದೀಪ್ತವಾದುದೂ ಆದ ಪೃಥ್ವಿಯನ್ನು ಮಮತೆಯಿಂದ ಲಾಲಿಸುತ್ತಾ ; ಪಯೋಭಿಃ ಪಯತೇ ಉದಕರೂಪವಾದ ಕ್ಷೀರಾದಿಗಳಿಂದ ತುಂಬುತ್ತದೆ ಎಂದರ್ಥವಾಗುವುದೆಂದು ಸಾಯಣರು ವಿವರಿಸಿದ್ದಾರೆ. ಈ ಮಂತ್ರಕ್ಕೆ ನಿರುಕ್ತಕಾರರ ವಿವರಣೆಯು ಈ ರೀತಿಯಿದೆ.

ಗೌರನ್ವಮೀಮೇದ್ವತ್ಸಂ ನಿಮಿಷಂತಮನಿಮಿಷಂತಮಾದಿತ್ಯಮಿತಿ ವಾ ಮೂರ್ಧಾನಮಸ್ಯಾಭಿಹಿಙ್ಙಕರೋನ್ಮನನಾಯ ಸೃಕ್ವಾಣಂ ಸರಣಂ ಘರ್ಮಂ ಹರಣಮಭಿವಾವಶಾನಾ ಮಿಮಾತಿ ಮಾಯುಂ ಪ್ರಪ್ಯಾಯತೇ ಪಯೋಭಿರ್ಮಾಯುಮಿವಾದಿತ್ಯಮಿತಿ ವಾ ।

(ನಿ. ೧೧-೪೨)

ಇಲ್ಲಿ ವತ್ಸಶಬ್ದಕ್ಕೆ ಆದಿತ್ಯನೆಂದರ್ಥಮಾಡಿದೆ. ಆದಿತ್ಯನ ಮೂರ್ಧದ ಮೇಲೆ ಗುರ್ತಿಸುವುದಕ್ಕಾಗಿ ಹಿಙ್ಕಾರಶಬ್ದ ಮಾಡುತ್ತದೆಂದೂ, ಪ್ರವಾಹರೂಪದಲ್ಲಿ ಸುರಿಯುವುದಕ್ಕಾಗಿ ಗರ್ಜನಶಬ್ದವನ್ನು ಮಾಡುತ್ತಾ ಉದಕದಿಂದ ಪೂರ್ಣವಾಗಿ ತುಂಬುತ್ತದೆಂದೂ ಮತ್ತು ಮಾಯುವಿನಂತೆ ಶಬ್ದಮಾಡುತ್ತದೆಂದೂ ತಾತ್ಪರ್ಯವಾಗುತ್ತದೆ ಇಲ್ಲಿ ಮಾಯುವೆಂಬ ಪದಕ್ಕೆ ಆದಿತ್ಯನೆಂದರ್ಥ ಮಾಡಿದೆ. ಗೌಃ ಎಂಬುದಕ್ಕೆ ಇಲ್ಲಿ ಮಾಧ್ಯಮಿಕಾ ವಾಕ್ ಎಂದು ನಿರುಕ್ತಕಾರರು ತಮ್ಮ ಮತವನ್ನು ತಿಳಿಸಿ ಅನಂತರ ಘರ್ಮಧುಗಿತಿ ಯಾಜ್ಞಿಕಾ ತಪ್ತವಾದುದೂ ಉದಕರಸವಾದುದೂ ಆದ ಪಯಸ್ಸನ್ನು ಕೊಡತಕ್ಕದ್ದೆಂದು ವೈದಿಕರೂ ಹೇಳುವರೆಂದು ಯಜ್ಞಿಕಮತವನ್ನೂ ತಿಳಿಸಿದ್ದಾರೆ. [ ಮಾಯು ಶಬ್ದದ ಅರ್ಥವನ್ನು ಪುನಃ ೪೯ ನೇ ಋಕ್ಕಿನಲ್ಲಿ ವಿವರಿಸಲಾಗುತ್ತದೆ. ]

ವಾವಶಾನಾ—ವಾವಶಾನೋ ವಷ್ಟೇರ್ವಾ ವಾಶ್ಯತೇರ್ವಾ । (ನಿ. ೫-೧) ಆದರದಿಂದ ಇಚ್ಛಿಸು ಎಂಬರ್ಥವನ್ನು ಕೊಡುವ ವಶ್ ಧಾತುವಿನಿಂದಾಗಲೀ ಅಥವಾ ಗಟ್ಟಿಯಾಗಿ ಶಬ್ದವನ್ನು ಮಾಡು ಎಂಬರ್ಥವನ್ನು ಕೊಡುವ ವಾಶ್ ಧಾತುವಿನಿಂದಾಗಲೀ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿ ಅನಂತರ ಇದರ ಪ್ರಯೋಗವನ್ನು ತಿಳಿಸುವುದಕ್ಕಾಗಿ ಋಕ್ಸಂಹಿತೆಯಿಂದ,

ಸಪ್ತ ಸ್ವಸೄರರುಷೀರ್ವಾವಶಾನೋ ವಿದ್ವಾನ್ಮಧ್ವ ಉಜ್ಜಭಾರಾ ದೃಶೇ ಕಂ ।
ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ವವ್ರಿಮವಿದತ್ಪೂಷಣಸ್ಯ ॥

(ಋ. ಸಂ. ೧೦-೫-೫)

ಎಂಬ ಋಕ್ಕನ್ನುದಹರಿಸಿ ತೋರಿಸಿದ್ದಾರೆ. ಈ ಋಕ್ಕಿನಲ್ಲಿ ವಾವಶಾನಃ ಎಂದರೆ ಕಾಮಯಮಾನಃ ವಾಶ್ಯಮಾನಃ ಸ್ತೋತೃಭಿಃ ಸ್ತೂಯಮಾನೋ ವಾ ಅಗ್ನಿಂ ಎಂದು ಸಾಯಣರು ವಿವರಿಸುತ್ತಾ ಅದ್ಯತನಾದ ಎಂದರ್ಥದಲ್ಲಿ ಒಂದು

ವಿಧವಾಗಿಯೂ, ಸ್ತೋತೃಗಳಿಂದ ಮಾಡಲ್ಪಟ್ಟ (ಶಬ್ದರೂಪವಾದ) ಸ್ತೋತ್ರಗಳಿಂದ ಸ್ತುತರಾದ ಎಂಬರ್ಥದಲ್ಲಿ ಇನ್ನೊಂದು ವಿಧವಾಗಿಯೂ, ಅರ್ಥ ಮಾಡಿದ್ದಾರೆ. ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥಮಾಡಬಹುದೆಂದು ನಿರುಕ್ತಕಾರರು ತಿಳಿಸಿದ್ದಾರೆ.

ಪಯತೇ—ಪ್ಯಾಯತೇ । ಅತಿಶಯವಾಗಿ ವೃದ್ಧಿಯಾಗುವಂತೆಯೂ, ಸಂತೃಪ್ತಿಯನ್ನು ಪಡೆಯುವಂತೆಯೂ ಮಾಡುತ್ತದೆ ಎಂದರ್ಥವಾಗುತ್ತದೆ.

ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ ಮಾಯುಂ
ಧ್ವಸನಾವಧಿ ಶ್ರಿತಾ। ಸಾ ಚಿತ್ತಿಭಿರ್ನಿ ಹಿ ಚಕಾರ ಮರ್ತ್ಯಂ ವಿದ್ಯು-
ದ್ಭವಂತೀ ಪ್ರತಿ ವವ್ರಿಮೌಹತ ॥ ೨೯ ॥

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ನಲವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಿಚತ್ವಾರಿಂಶತ್ ಖಂಡಃ

## ನಲವತ್ತಮೂರನೆಯ ಖಂಡವು

ಉಪಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ । ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರವೋಚಂ॥ (ಋ.ಸಂ. ೧-೧೬೪-೨೬)॥ ಉಪಹ್ವಯೇ ಸುದೋಹನಾಂ ಧೇನುಮೇತಾಂ ಕಲ್ಯಾಣಹಸ್ತೋ ಗೋಧುಗಪಿ ಚ ದೋಗ್ಧ್ವೇನಾಂ ಶ್ರೇಷ್ಠಂ ಸವಂ ಸವಿತಾ ಸುನೋತು ನ ಇತ್ಯೇಷ ಹಿ ಶ್ರೇಷ್ಠಃ ಸರ್ವೇಷಾಂ ಸವಾನಾಂ ಯದುದಕಂ ಯದ್ವಾ ಪಯೋ ಯಜು-ಷ್ಮದಭೀದ್ಧೋ ಘರ್ಮಸ್ತಂ ಪ್ರಬ್ರವೀಮಿ ವಾಗೇಷಾ ಮಾಧ್ಯಮಿಕಾ ಘರ್ಮಧುಗಿತಿ ಯಾಜ್ಞಿಕಾ ಅಘ್ನ್ಯಾಹಂತವ್ಯಾ ಭವತ್ಯಘಘ್ನೀತಿ ವಾ ತಸ್ಯಾ ಏಷಾ ಭವತಿ ॥ ೪೩ ॥

ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧು-
ಗುತ ದೋಹದೇನಾಂ । ಶ್ರೇಷ್ಠಂ ಸವಂ ಸವಿತಾಸಾವಿಷ-
ನ್ನೋಽಭೀದ್ಧೋ ಘರ್ಮಸ್ತದುಷು ಪ್ರವೋಚಂ ॥
(ಋ. ಸಂ. ೨-೩-೧೯)

ಧೇನುಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಹೋತೃವಾದ ನಾನು ಕಲ್ಯಾಣೋದಕವನ್ನು ಕೊಡುವ, ಸರ್ವ ಲೋಕವನ್ನು ತೃಪ್ತಿಪಡಿಸುವ ಈ ಮಾಧ್ಯಮಿಕ ವಾಕ್ಕನ್ನು ಮನಸ್ಸಿನಿಂದ ಹೊಂದಿ ಸ್ತುತಿಯಿಂದ ಆಹ್ವಾನಿಸುತ್ತೇನೆ. ನನ್ನಿಂದ ಆಹೂತಳಾದ ಇವಳನ್ನು ಕಲ್ಯಾಣಹಸ್ತನಾದ ದೋಹನಕುಶಲನಾದ ಇಂದ್ರನು ನೀರುಸುರಿಸುವಂತೆ ಮಾಡಿದನು. ಈ ಪ್ರಶಸ್ತವಾದ ನೀರನ್ನು ವೃಷ್ಟಿದಾನದಿಂದ ಕರ್ಮಪ್ರಚೋದಕನಾದ ಪ್ರಕಾಶಕನಾದ ಮಧ್ಯಸ್ಥಾನದ ವಿದ್ಯುತ್ ನಮಗೆ ನಿತ್ಯವೂ ಕೊಡಲಿಯೆಂದು ಸ್ತುತಿಸುತ್ತೇವೆ.

ಉಪಹ್ವಯೇ ಸುದೋಹನಾಂ ಧೇನುಮೇತಾಂ ಕಲ್ಯಾಣಹಸ್ತೋ ಗೋಧುಗಪಿ ಚ ದೋಗ್ಧ್ಯೇನಾಂ ಶ್ರೇಷ್ಠಂ ಸವಂ ಸವಿತಾ ಸುನೋತು ನ ಇತಿ । ಏಷ ಹಿ ಶ್ರೇಷ್ಠಃ ಸರ್ವೇಷಾಂ ಸವಾನಾಂ-ಯದುದಕಂ ಯದ್ವಾ ಪಯೋ ಯಜುಷ್ಮದಃ । ಅಭೀದ್ಧೋ ಘರ್ಮಸ್ತಂ ಸುಪ್ರಬ್ರವೀಮಿ। ವಾಗೇಷಾ ಮಾಧ್ಯಮಿಕಾ। ಘರ್ಮ-ದುಗಿತಿ ಯಾಜ್ಞಿಕಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸವವೆಂದರೆ ನೀರು. ಅರೆಯಲು ಅನುಕೂಲವಾಗುವಂತೆ ನೀರನ್ನು ಸೇರಿಸುತ್ತಾರೆ. ಅಥವಾ ಸವವೆಂದರೆ ಯಜುರ್ವೇದದಿಂದ ಸಂಸ್ಕೃತವಾದ ಹಾಲು. ಧೇನುವೆಂದರೆ ನಿರುಕ್ತಕಾರರ ಮತದಲ್ಲಿ ಮಾಧ್ಯಮಿಕವಾಕ್ ಯಾಜ್ಞಿಕರ ಮತದಲ್ಲಿ ಗೋವು. ಆಗ ಮಂತ್ರಾರ್ಥ—ಈ ಯಜ್ಞಕರ್ಮದಲ್ಲಿ ಅಂಗಭಾವವನ್ನು ಹೊಂದಿರುವ, ಸುಖವಾಗಿ ಹಾಲುಕರೆಯುವ ಹಸುವನ್ನು ಕರೆಯುತ್ತೇನೆ. ನನ್ನಿಂದ ಕರೆಯಲ್ಪಟ್ಟ ಈ ಹಸುವನ್ನು ಹಾಲುಕರೆಯುವುದರಲ್ಲಿ ಚತುರನಾದ ಅಧ್ವರ್ಯುವು ಕರೆಯಲಿ. ಈ ಶ್ರೇಷ್ಠವಾದ, ಯಜುಃ ಸಂಸ್ಕೃತವಾದ ಹಾಲನ್ನು ಸವಿತೃದೇವತೆಯು ಅಂಗೀಕರಿಸಲಿ.

ಅಘ್ನ್ಯಾ ಅಹಂತವ್ಯಾ ಭವತಿ । ಅಘಘ್ನೀತಿ ವಾ । ತಸ್ಯಾ ಏಷಾ ಭವತಿ ॥ ೪೩ ॥

ಕ್ರಮಪ್ರಾಪ್ತವಾದ ಅಘ್ನ್ಯಾಪದದ ನಿರ್ವಚನವನ್ನು ತೋರಿಸುತ್ತಾರೆ. 'ಅಘ್ನ್ಯಾದಯಶ್ಚ' ಸೂತ್ರದಿಂದ ಇದು ನಿಪಾತಿತವಾಗಿದೆ. ನಞ್‌ಪೂರ್ವಕ ಹನ್‌ಧಾತುವನ್ನಾಶ್ರಯಿಸಿದರೆ ಹಿಂಸಿಸಲ್ಪಡದಿರುವುದು ಎಂದರ್ಥ. ಅಘಪದ ಉಪಪದವಾಗಿರುವ ಹನ್‌ಧಾತುವನ್ನಂಗೀಕರಿಸಿದರೆ ಪಾಪವನ್ನು ಅಂದರೆ ದುರ್ಭಿಕ್ಷಾದಿಗಳನ್ನು ಹೋಗಲಾಡಿರುವುದು ಎಂದರ್ಥ. ಮಾಧ್ಯಮಿಕ ವಾಕ್ಕಾಗಲೀ ಹಸುವಾಗಲೀ ಎರಡು ಅರ್ಥಗಳನ್ನು ಕೊಡುತ್ತಿದ್ದರೂ ಮುಂದಿನ ಮಂತ್ರವು ಈ ಅಘ್ನ್ಯಾಸ್ತುತಿಯನ್ನು ತಿಳಿಸುತ್ತದೆ.

ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ। ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥ ೨೬ ॥

ಶ್ರೇಷ್ಠವಾದ ಕ್ಷೀರವನ್ನು ಕೊಡತಕ್ಕ ಈ ಧೇನುವನ್ನು ನಾನು ಪ್ರಾರ್ಥಿಸಿ ಆಹ್ವಾನಿಸುತ್ತೇನೆ. ಅನಂತರ ಶ್ರೇಷ್ಠವಾದ ಹಸ್ತವುಳ್ಳವನೂ, ಗೋವನ್ನು ಕರೆಯತಕ್ಕವನೂ ಆದ ಅಧ್ವರ್ಯುವು ಈ ಧೇನುವಿನ ಕ್ಷೀರವನ್ನು ಕರೆಯುತ್ತಾನೆ. ಪ್ರಶಸ್ತವೂ ನಮ್ಮಿಂದ ಕರೆಯಲ್ಪಟ್ಟದ್ದೂ ಆದ ಈ ಕ್ಷೀರವನ್ನು ಪರಮೇಶ್ವರನು ಅನುಗ್ರಹಿಸಲಿ. ಈ ಸವಿತೃವಿನ ಪ್ರವರ್ಗ್ಯವು ದೀಪ್ತವಾಗಿದೆ ಆದುದರಿಂದಲೇ ನಾನು ಈ ಧೇನುವನ್ನು ವಿಶೇಷರೀತಿಯಿಂದ ಆಹ್ವಾನಿಸುತ್ತೇನೆ.

ಪ್ರವರ್ಗ್ಯದಲ್ಲಿ ಘರ್ಮಧುಗಾಹ್ವಾನಕಾಲದಲ್ಲಿ ಉಪ ಹ್ವಯೇ ಎಂದು ಮೊದಲಾಗುವ ಎರಡು ಋಕ್ಕುಗಳನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ ಉಪ ಹ್ವಯೇ ಸುದ. ಘಾಂ ಧೇನುಮೇತಾಮಿತಿ ದ್ವೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೭)

ಈ ಋಕ್ಕಿನಲ್ಲಿ ಧೇನುಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಬಹುದು. ಆಗ ಉಳಿದ ಪದಗಳಿಗೂ ಅದನ್ನನುಸರಿಸಿಯೇ ಎರಡು ವಿಧವಾದ ಅನ್ವಯಗಳನ್ನೂ ತಾತ್ಪರ್ಯಗಳನ್ನೂ ಹೇಳಬೇಕಾಗುತ್ತದೆ ಮೇಲೆ ಪ್ರತಿಪದಾರ್ಥದಲ್ಲಿ ಹೇಳಿರುವ ಅರ್ಥವಲ್ಲದೆ ಬೇರೆ ಅರ್ಥವನ್ನು ಈರೀತಿ ಹೇಳಬಹುದೆಂದು ಸಾಯಣರು ವಿವರಿಸಿದ್ದಾರೆ, ಇದರಂತೆ,

ಧೇನು–ವ್ಯಾಖ್ಯಾ ಪ್ರೀಣಯಿತ್ರೀಂ ಮೇಘಲಕ್ಷಣಾಂ ಧೇನುಂ । ಲೌಕಿಕವಾದ ಧೇನುವು ಕ್ಷೀರದಿಂದ ಯಜಮಾನನನ್ನು ತೃಪ್ತಿಗೊಳಿಸುವಂತೆ ಮೇಘವು ವೃಷ್ಟಿಯಿಂದ ಲೋಕವನ್ನು ತೃಪ್ತಿಗೊಳಿಸುವುದರಿಂದ ಅದಕ್ಕೂ ಧೇನುವೆಂಬ ಹೆಸರು ಪ್ರಸಿದ್ಧವಾಗಿದೆ, ಮೇಘರೂಪವಾದ ಈ ಧೇನುವನ್ನು ಕರೆಯತಕ್ಕವನು ಆದಿತ್ಯನು. ಆದುದರಿಂದ ಸುಹಸ್ತಃ ಎಂಬ ವಿಶೇಷಣಕ್ಕೆ ವೃಷ್ಟಿಕಾರಕವೂ, ಪ್ರಕಾಶಮಾನವೂ ಆದ ಕಿರಣಗಳಿಂದ ಕೂಡಿದವನೆಂದರ್ಥ ಘರ್ಮವೆಂದರೆ ಗ್ರೀಷ್ಮವೆಂದರ್ಥ.

ಧೇನು—ಧೇನುರ್ಧಯತೇರ್ವಾ, ಧಿನೋತೇರ್ವಾ ಧಯತೇಽಸೌ ವತ್ಸೇನೇತಿ । ತರ್ಪಯತ್ಯಸೌ ಪಯಸಾ । (ನಿ. ೧೧-೪೨) ಕರುವಿನಿಂದ ಹಾಲು ಹೀರಲ್ಪಡುತ್ತದೆ ಎಂಬುದರಿಂದಾಗಲಿ, ಅಥವಾ ಕ್ಷೀರವನ್ನು ಕೊಟ್ಟು ತೃಪ್ತಿಯನ್ನುಂಟುಮಾಡುತ್ತದೆ ಎಂಬುದರಿಂದಾಗಲಿ ಗೋವುಗಳಿಗೆ ಧೇನುಗಳೆಂದು ಹೆಸರು. ಗೋಧುಕ್ ಇಂತಹ ಗೋವನ್ನು ಕರೆಯತಕ್ಕವನು ಯಜ್ಞಸಂಬಂಧವಾದ ಅರ್ಥದಲ್ಲಿ ಅಧ್ವರವೂ, ಮೇಘಸಂಬಂಧವಾದ ಅರ್ಥದಲ್ಲಿ ಆದಿತ್ಯನೂ ಆಗುತ್ತಾರೆ.

ಘರ್ಮಃ—ಈ ಪದಕ್ಕೆ ಪ್ರವರ್ಗ್ಯ ವೆಂಬ ಹೆಸರುಳ್ಳ ಯಾಗವೆಂದರ್ಥ ಮಾಡಿದ್ದಾರೆ. ಮತ್ತು ತಮ್ಮ ಅರ್ಥವನ್ನು ಸಮರ್ಥಿಸಲು, ತತ್ಪ್ರವರ್ಗ್ಯಸ್ಯ ಪ್ರವರ್ಗ್ಯತ್ವಂ ಯದ್ಘ್ರಾಂ ಆ ಇತ್ಯಪತತ್ । ತದ್ಘರ್ಮಸ್ಯ ಘರ್ಮತ್ವಂ ।

(ತೈ. ಆ. ೫-೧-೫)

ಎಂಬ ಆರಣ್ಯಕದ ವಾಕ್ಯವನ್ನುದಹರಿಸಿ ಇಲ್ಲಿ ಘರ್ಮ ಸವಂ ಎಂಬ ಪದಕ್ಕೆ ಸೋಮಯಾಗವೆಂದೂ ಅರ್ಥಮಾಡಿದ್ದಾರೆ.

ಪ್ರವರ್ಗ್ಯವು ಸೋಮಯಾಗಕ್ಕೆ ಪೂರ್ವಭಾವಿಯಾಗಿ ನೆರವೇರಿಸಲ್ಪಡಬೇಕಾದ ವಿಧಿಯು. ಇದರ ಕ್ರಮವನ್ನು ಐತರೇಯ ಬ್ರಾಹ್ಮಣಾದಿಗಳಲ್ಲಿ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಂತೆಯೇ ಇದರ ಮುಂದಿನ ಎರಡು ಋಕ್ಕುಗಳಲ್ಲಿಯೂ ಸಹ ಇದೇ ವಿಷಯವನ್ನು ಹೇಳಿರುವುದರಿಂದ ಅದರ ಕೊನೆಯಲ್ಲಿ ಎಂದರೆ ಇದೇ ಸೂಕ್ತದ ೭ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೊಂದನೆಯ ಅಧ್ಯಾಯದಲ್ಲಿ
ನಲವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತುಶ್ಚತ್ವಾರಿಂಶತ್ ಖಂಡಃ

## ನಲವತ್ತನಾಲ್ಕನೆಯ ಖಂಡವು

ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ। ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಮುದಕಮಾಚರಂತೀ। (ಋ. ಸಂ. ೧-೧೬೪-೪೦) ಸುಯವಸಾದಿನೀ ಭಗವತೀ ಹಿ ಭಾವಾಥೇದಾನೀಂ ವಯಂ ಭಗವಂತಃ ಸ್ಯಾಮಾದ್ಧಿ ತೃಣಮಘ್ನೇ ಸರ್ವದಾ ಪಿಬ ಚ ಶುದ್ಧಮುದಕಮಾಚರಂತೀ ತಸ್ಯಾ ಏಷಾಪರಾ ಭವತಿ ॥ ೪೪ ॥

ಸೂಯವಸಾದ್ಭಗವತೀ ಹಿ ಭೂಯಾ ಅಥೋವಯಂ ಭಗವಂತಃ
ಸ್ಯಾಮ। ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಮುದಕ
ಮಾಚರಂತೀ ॥

(ಋ. ಸ. ೨-೩-೨೧)

ಅಘ್ನ್ಯಾಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಮಾಧ್ಯಮಿಕವಾಗ್ದೇವತೆಯೇ ನೀನು ಉದಕದಮೂಲಕ ಸಕಲರಿಂದಲೂ ಸೇವಿಸಲು ಯೋಗ್ಯವಾದ ಧನವುಳ್ಳವಳು ಆಗ: ನಾವೂ ಕೂಡಾ ನಿನ್ನಿಂದ ಕೊಡಲ್ಪಟ್ಟ ನೀರಿನಿಂದ ಐಶ್ವರ್ಯವಂ ತರಾಗೋಣ. ಯಾವಾಗಲೂ ನೀನು ಮೇಘವನ್ನು ನೀರುಸುರಿಯುವಂತೆ ಮಾಡು. ಮಧ್ಯಮಸ್ಥಾನದಲ್ಲಿ ತಿರುಗುತ್ತಾ ಶುದ್ಧವಾದ ಸ್ಥಾನವನ್ನು ಹೊಂದು. ಧೇನುವೆಂದು ಯಾಜ್ಞಿಕರ ಮತ. ಚನ್ನಾಗಿರವ ಹುಲ್ಲನ್ನು ತಿಂದು ಸಕಲರಿಗೂ ಹೊಂದುವಂತೆ ಅಧಿಕ ಕ್ಷೀರವುಳ್ಳವಳಾಗು. ನಾವು ಕೂಡಾ ನಿನ್ನಿಂದ ಕೊಡಲ್ಪಟ್ಟ ಹಾಲಿನಿಂದ ಧನವಂತರಾಗೋಣ ನಮಗೆ ಹೀಗೆ ಉಗಕಾರಮಾಡುತ್ತಾ ನೀನು ಅರಣ್ಯದಲ್ಲಿ ಸಂಚರಿಸುತ್ತಾ ಚನಾಗಿರುವ ಹುಲ್ಲನ್ನು ತಿಂದು ಶುದ್ಧವಾದ ನೀರನ್ನು ಸೇವಿಸುತ್ತಿರು.

ಸೂಯವಸಾದಿನೀ ಭಗವತೀ ಹಿ ಭವಾಥೇದಾನೀಂ ವಯಂ ಭಗವಂತಃ
ಸ್ಯಾಮಾದ್ಧಿ ತೃಣಮಘ್ನ್ಯೇ ಸರ್ವದಾ, ಪಿಬ ಚ ಶುದ್ಧಮುದಕ-
ಮಾಚರಂತೀ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಭಗಶಬ್ದ ಧನ ಮತ್ತು ಉದಕಪರ್ಯಾಯದಲ್ಲಿ ಹೇಳಿದೆ (ನಿಘ. ೨-೧೦-೧೦)

ತಸ್ಯಾ ಏಷಾಽಪರಾ ಭವತಿ ॥ ೪೪ ॥

ಅಘ್ನ್ಯಾಸ್ತುತಿಪ್ರತಿಪಾದಕವಾಗಿ ಮುಂದೆ ಹೇಳುವ ಇನ್ನೊಂದು ಮಂತ್ರವೂ ಪ್ರಸಿದ್ಧವಾಗಿದೆ. ಪೂರ್ವಮಂತ್ರದಲ್ಲಿ ಸ್ವರೂಪದಿಂದ ಧೇನುವೆಂದೇ ನಿರ್ಣಯಿಸಬಹುದು. ಸ್ಪಷ್ಟವಾಗಿ ಮಧ್ಯಮಸ್ಥಾನದೇವತೆಯೆಂದು ವ್ಯಕ್ತವಾಗುವುದಿಲ್ಲ ಉತ್ತರ ಮಂತ್ರದಲ್ಲಿ ವಸ್ವಾದಿದೇವತಾಸಂಬಂಧದಿಂದ ಅದು ನಿರ್ಣಯವಾಗುತ್ತದೆ.

**ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ|**
**ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಮುದಕಮಾಚರಂತೀ ||೪೦||**

ಅಹಿಂಸಿತಳಾದ ಎಲೈ ಗೋವೆ, ಶ್ರೇಷ್ಠವಾದ ತೃಣಾದಿಗಳನ್ನು ಭಕ್ಷಿಸುತ್ತಾ ಪೂಜ್ಯವಾದ ಕ್ಷೀರಸಂಪತ್ತಿನಿಂದ ಕೂಡಿಕೊಂಡು ಇರು. ಅನಂತರ ನಾವೂ ಸಹ ಪ್ರಭೂತವಾದ ಧನವಂತರಾಗಿ ಆಗುವೆವು. ನೀನು ಸರ್ವದಾ ತೃಣವನ್ನು ಭಕ್ಷಿಸು. ಎಲ್ಲಾ ಕಡೆಯೂ ಸಂಚರಿಸುತ್ತಾ ಪವಿತ್ರವಾದ ಉದಕವನ್ನು ಕುಡಿ.

ಅಗ್ನಿಹೋತ್ರಾದಿಗಳಿಗಾಗಿ ಹಾಲುಕರೆಯುವಾಗ ಹಸುವು ಧ್ವನಿಯಿಂದ ಕೂಗಿದರೆ ಆಗ **ಸೂಯವಸಾತ್** ಎಂಬ ಈ ಋಕ್ಕನ್ನು ಪಠಿಸಿ ಹಸುವಿಗೆ ತೃಣಾದಿ ಆಹಾರವನ್ನು ಕೊಡಬೇಕೆಂದು ಆಶ್ವಲಾಯನಶ್ರೌತಸೂತ್ರ **ವಾಶ್ಯಮಾನಾಯೈ ಯವಸಂ ಪ್ರಯಚ್ಛೇತ್ ಸೂಯವಸಾದ್ಭಗವತೀ ಹಿ ಭೂಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ.೩-೧೧) ಮತ್ತು ಪ್ರವರ್ಗ್ಯವೆಂಬ ಯಾಗವಿಶೇಷದಲ್ಲಿ ಅಭಿಷ್ಟವಕಾಲದಲ್ಲಿ ಈ ಋಕ್ಕನ್ನು ಪರಿಧಾನಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸೂಯವಸಾದ್ಭಗವತೀ ಹಿ ಭೂಯಾ ಇತಿ ಪರಿದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೭).

ಅಗ್ನಿಹೋತ್ರಾರ್ಥವಾಗಿ ಉದ್ದೇಶಿಸಿದ ಗೋವು ಕುತ್ಸಿತವಾದ ಶಬ್ದವನ್ನು ಮಾಡಿದ ಪಕ್ಷದಲ್ಲಿ ಆಗ ಈ ಮಂತ್ರವನ್ನು ಪಠಿಸಿ ಯವಸಾದಿಗಳನ್ನು ಕೊಡಬೇಕೆಂಬ ವಿಧಿಯಿದೆ.

" ವಾಶ್ಯಮಾನಾಯೈ ಯವಸಂ ಪ್ರಯಚ್ಛೇತ್ ಸೂಯವಸಾದ್ಭಗವತೀ ಹಿ ಭೂಯಾಃ "

(ಆಶ್ವ. ಶ್ರೌ. ೩-೧೧)

ಎಂದು ಆಶ್ವಲಾಯನಶ್ರೌತಸೂತ್ರವು ಈ ಮಂತ್ರದ ವಿನಿಯೋಗವನ್ನು ತಿಳಿಸುತ್ತದೆ.

ಅಘ್ನ್ಯೇ—ಈ ಪದವು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯) ನಿರುಕ್ತಕಾರರು ಈ ಪದದ ನಿರ್ವಚನವನ್ನು

ಅಘ್ನ್ಯಾ ಅಹಂತವ್ಯಾ ಭವತಿ । ಅಘಘ್ನೀ ಇತಿ ವಾ ।

(ನಿ. ೧೧-೪೩)

ಇದು ಕೊಲ್ಲಲ್ಪಡತಕ್ಕದ್ದಲ್ಲ ಎಂಬುದರಿಂದಾಗಲೀ, ಅಥವಾ ಪಾಪವನ್ನು ನಾಶಮಾಡತಕ್ಕದ್ದು ಎಂಬುದರಿಂದಾಗಲಿ ಅಘ್ನ್ಯಾ ಎಂಬ ಹೆಸರು ಬಂದಿದೆ ಎಂದು ವಿವರಿಸಿ, ಪ್ರಕೃತವಾದ ಋಕ್ಕನ್ನೇ ಉದಹರಿಸಿ ಈ ಋಕ್ಕಿಗೆ ಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಕೇವಲ ಗೋವಿನ ಪರವಾದರೆ ಈ ಮಂತ್ರದ ತಾತ್ಪರ್ಯವು ಸುಲಭವಾಗಿ ಅರ್ಥವಾಗುತ್ತದೆ. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ವಾಖ್ಯಾನವನ್ನು ಬರೆಯುತ್ತಾ ಗೋವಿನ ಪರವಾಗಿ ಒಂದರ್ಥವನ್ನೂ, ಮಾಧ್ಯಮಿಕಾವಾಕ್ಕಿನ ಪರವಾಗಿ ಇನ್ನೊಂದರ್ಥವನ್ನೂ ತಿಳಿಸಿದ್ದಾರೆ. ಇದಕ್ಕೆ ನಿರುಕ್ತವು ಈ ರೀತಿಯಿದೆ—

**ಸುಯವಸಾದಿನೀ ಭಗವತೀ ಹಿ ಭವಾಥೇದಾನೀಂ ವಯಂ ಭಗವಂತಃ ಸ್ಯಾಮಾದಿದ್ಧಿ ತೃಣ ಮಘ್ನೇ ಸರ್ವದಾ ಪಿಬ ಚ ಶುದ್ಧಮುದಕಮಾಚರಂತೀ ।**

(ನಿ. ೧೧-೪೩)

ಇಲ್ಲಿ ಗೋವಿನ ಪರವಾದ ಅರ್ಥವು ಮೇಲೆ ಭಾವಾರ್ಥದಲ್ಲಿ ತಿಳಿಸಿದಂತೆಯೇ ಆಗುತ್ತದೆ. ಮಾಧ್ಯಮಿಕಾವಾಕ್ಕಿನ ಪರವಾದರೆ—**ಶೋಭನಂ ಯವಸಮುದಕಮಧ್ಯಾತ್ಮೀಕೃತ್ಯ ಸೂರ್ಯಾತ್ ತೇನ 'ಭಗವತೀ' ಧನವತೀ ಉದಕೇನ ಉದಕವತೀ ಭವ** । ಯವಸವೆಂದರೆ ಶ್ರೇಷ್ಠವಾದ ಉದಕವೆಂದೂ, ಇದಕ್ಕೆ ಆಧಾರವಾದ ಆದಿತ್ಯನಿಂದ ಉದಕವನ್ನು ಪಡೆದು ಪೂರ್ಣವಾದ ಉದಕವುಳ್ಳವಳಾಗು ಎಂಬ ಮೊದಲನೆಯ ಪ್ರಾರ್ಥನೆಯೂ, ಅನಂತರ, "**ಅಥೋ ವಯಂ ಭಗವಂತಃ ಸ್ಯಾಮ**" ಅನಂತರ ನಿನ್ನಿಂದ ಉತ್ಕೃಷ್ಟವಾದ ಉದಕದಿಂದ ನಾವೂ ಉದಕವುಳ್ಳವರಾಗುತ್ತೇವೆ ತತ್ಪರಿಣಾಮ ವಾಗಿ ಅನ್ನಾದಿ ಸಂಪತ್ತನ್ನು ಪಡೆಯುತ್ತೇವೆ ಎಂಬ ಹಾರೈಕೆಯೂ ಪೂರ್ವಾರ್ಧದ ತಾತ್ಪರ್ಯವು.

**ಅದ್ಧಿ ತೃಣಂ** ಎಂಬ ವಾಕ್ಯದಲ್ಲಿ ತೃಣ ಶಬ್ದಕ್ಕೆ ಮೇಘವೆಂದರ್ಥ. ಘನೀಭೂತವಾದ ಮೇಘವು ಘರ್ಷಿತವಾಗಿ ಸೀಳಲ್ಪಟ್ಟು ಅನಂತರ ವೃಷ್ಟಿಪತನವಾಗುತ್ತದೆ. ತದ್ಯತೇಽಸೌ ಇತಿ ತೃಣಃ ಸೀಳು ಎಂದರ್ಥವನ್ನು ಕೊಡುವ ತೃದ್ ಧಾತುವಿನಿಂದ ನಿಷ್ಪನ್ನವಾಗಿ ಘರ್ಷಣವಾಗಿ ಸೀಳಲ್ಪಡುವುದರಿಂದ ಮೇಘಕ್ಕೆ ತೃಣವೆಂಬ ಹೆಸರೆಂದು ದುರ್ಗಾಚಾರ್ಯರ ವಿವರಣೆಯಿದೆ. [ತೃನ್ನಾದ್ಯತ್ ತೃಣಂ ಎಂದು ನಿರುಕ್ತಕಾರರು ಬೇರೆ ಸಂದರ್ಭದಲ್ಲಿ ಈ ಪದದ ನಿರ್ವಚನವನ್ನು ತಿಳಿಸಿದ್ದಾರೆ. (ನಿ. ೧–೨೦) ಇಂತಹ ಮೇಘವನ್ನು ಅದ್ಧಿ ಎಂದರೆ ಘನೀಭೂತವಾದ ಮೇಘವು ಕರಗುವಂತೆ ಮಾಡಿ ನೀರನ್ನು ಸುರಿಸು ಎಂದರ್ಥ.

**ಶುದ್ಧಮಾಚರಂತೀ**—ಯಾವಾಗಲೂ ಅಂತರಿಕ್ಷದಲ್ಲೇ ಸಂಚರಿಸುವುದರಿಂದ ಯಾವ ಅಶುದ್ಧಿಯೂ ಇಲ್ಲದೆ **ಉದಕಂ**—ಸೂರ್ಯರಶ್ಮಿಯಿಂದ ಅಪಹೃತವಾದ ಉದಕವನ್ನು, **ಆಚರಂತೀ**—ಸೇವಿಸುತ್ತಾ, ವಿಶ್ವದಾನೀಂ ವೃಷ್ಟಿಕಾಲವು ಪ್ರಾಪ್ತವಾದಾಗಲೆಲ್ಲಾ, **ಪಿಬ**—ಕುಡಿ, ಎಂದು ಪುನಃ ಪ್ರಾರ್ಥಿಸಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ನಲವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಪಂಚಚತ್ವಾರಿಂಶತ್ ಖಂಡಃ

## ನಲವತ್ತೈದನೆಯ ಖಂಡವು

**ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾಗಾತ್ ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧತಾಂ ಮಹತೇ ಸೌಭಗಾಯ.। (ಋ. ಸಂ. ೧-೧೬೪-೨೭) ಇತಿ ಸಾ ನಿಗದವ್ಯಾಖ್ಯಾತಾ ಪಥ್ಯಾಸ್ವಸ್ತಿಃ ಪಂಥಾ ಅಂತರಿಕ್ಷಂ ತನ್ನಿವಾಸಾತ್ತಸ್ಯಾ ಏಷಾ ಭವತಿ ॥ ೪೫ ॥**

ಹಿಙ್ಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾ-
ಗಾತ್ । ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ
ವರ್ಧತಾಂ ಮಹತೇ ಸೌಭಗಾಯ ॥

(ಋ. ಸಂ. ೨-೩-೧೯)

ಅಘ್ನ್ಯಾಮಧ್ಯಮದೇವತಾಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಹಿಂ ಎಂಬ ಮೇಘ ಗರ್ಜನೆಯನ್ನು ಮಾಡುತ್ತಾ ಉದಕಪನ್ನು ರಕ್ಷಿಸುತ್ತಾ ವತ್ಸನಾದ ಆದಿತ್ಯನನ್ನು ಮನಸ್ಸಿನಿಂದ ನಿತ್ಯವೂ ಬಯಸುತ್ತಾ ಈ ಮಾಧ್ಯಮಿಕವಾಗ್ದೇವತೆಯು ಬಂದಳು. ಇವಳು ನಮಗೆ ಐಶ್ವರ್ಯವುಂಟಾಗಲು ದ್ಯಾವಾಪೃಥಿವಿಯೊಡನೆ ಯಾವಾಗಲೂ ವೃಷ್ಟಿಯನ್ನುಂಟುಮಾಡಿ ಅಭಿವೃದ್ಧಿಯನ್ನು ಹೊಂದಲಿ.

ಇತಿ ಸಾ ನಿಗದವ್ಯಾಖ್ಯಾತಾ ॥

ಮಂತ್ರಾರ್ಥ ಸುಲಭವಾದುದರಿಂದ ಅದು ಪಾಠಮಾತ್ರದಿಂದಲೇ ವ್ಯಾಖ್ಯಾತವಾಗಿದೆಯೆಂದು ತಿಳಿಸುತ್ತಾರೆ. ವ್ಯಾಖ್ಯಾನಾಪೇಕ್ಷೆ ಇಲ್ಲವೆಂದು ತಾತ್ಪರ್ಯ.

ಪಥ್ಯಾ ಸ್ವಸ್ತಿಃ । ಪಂಥಾ ಅಂತರಿಕ್ಷಂ ತನ್ನಿವಾಸಾತ್ । ತಸ್ಯಾ ಏಷಾ
ಭವತಿ ॥ ೪೫ ॥

ಪಥ್ಯಾಸ್ವಸ್ತಿಃ ಎಂದು ಪಥ್ಯಾಂ ಸ್ವಸ್ತಿಂ ಪ್ರಥಮಾಂ ಪ್ರಾಯಣೀಯೇ ಯಜತಿ ಇತ್ಯಾದಿವಾಕ್ಯಗಳಲ್ಲಿ ದೃಷ್ಟವಾದುದರಿಂದ ಎರಡು ಪದಗಳು ಸಮಾಮ್ನಾತವಾಗಿವೆ. ಈ ಎರಡು ಪದಗಳಲ್ಲಿ 'ಪಂಥಾ ಪತತೇಃ' (ನಿಘ. ೨-೨೮) ಎಂದೂ ಪಥಿನ್‌ಶಬ್ದವು ಹಿಂದೆ ವ್ಯಾಖ್ಯಾತವಾಗಿದೆ. ಆಸ್ಥಾನದವರಿಂದ ಅದು ಹೊಂದಲ್ಪಡುವುದು. ಪಂಥಾ ಎಂದರೆ ಅಂತರಿಕ್ಷ. ಆದರಲ್ಲಿರುವುದು ಪಥ್ಯಾ. 'ಭವೇ ಛಂದಸಿ' ಸೂತ್ರದಿಂದ ಯತ್ ಪ್ರತ್ಯಯ. ಸ್ವಸ್ತಿ ಎಂಬಲ್ಲಿ ಸುಪೂರ್ವಕವಾದ ಅಸ್‌ಧಾತುವಿಗೆ ಕ್ತಿನ್ ಪ್ರತ್ಯಯಕ್ಕೆ ಸಾರ್ವಧಾತುಕತ್ವವನ್ನಾಶ್ರಯಿಸಿ ಭೂಭಾವ ಬರುವುದಿಲ್ಲವೆಂದೂ, ಆರ್ಧಧಾತುಕತ್ವವನ್ನಾಶ್ರಯಿಸಿ ಧಾತುವಿನ ಆಕಾರಕ್ಕೆ ಲೋಪ ಬರುವುದಿಲ್ಲವೆಂದೂ ತಿಳಿಯಬೇಕು. ಶೋಭನವಾದ ರಸವುಳ್ಳದ್ದು ಎಂದರ್ಥ. ಮುಂದೆ ಹೇಳುವ ಮಂತ್ರವು ಈ ಎರಡರ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾಗಾತ್ ।
ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧತಾಂ ಮಹತೇ
ಸೌಭಗಾಯ ॥ ೨೭ ॥

ಕ್ಷೀರಾದಿಸಂಪತ್ತುಗಳಿಗೆ ಪಾಲಕಳೂ, ತನ್ನಲ್ಲಿಯೇ ತನ್ನ ಕರುವನ್ನು ಲಾಲಿಸುವವಳೂ, ಆದುದರಿಂದಲೇ ಕರುವನ್ನು ದ್ದೇಶಿಸಿ ಶಬ್ದಮಾಡುತ್ತಾ ಕರುವನ್ನು ಸಮೀಪಿಸುವವಳೂ, ಆದ ಧೇನುವು ಬಂದಿದ್ದಾಳೆ, ಅಹಿಂಸಿತಳಾದ ಈ ಧೇನುವು ಅಶ್ವಿನೀ ದೇವತೆಗಳಿಗೆ ಕ್ಷೀರವನ್ನು ಕರೆದುಕೊಡಲಿ. ಆದೇ ಧೇನುವು ಅತ್ಯಧಿಕವಾದ ಸೌಭಾಗ್ಯಕ್ಕಾಗಿ ಬೆಳೆಯಲಿ.

ಆಘ್ನ್ಯಾ—ಈ ಪದವು ಗೋನಾಮುಗಳಲ್ಲಿ ಪಠಿತವಾಗಿದೆ. ( ನಿ. ೩-೯ ) ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

ಈ ಋಕ್ಕಿನಲ್ಲಿಯೂ ಸಹ ಮೇಘಪರವಾದ ಅರ್ಥವನ್ನು ಮಾಡಬಹುದು ಹಿಂಕೃಣ್ವತೀ ಎಂಬ ಪದಕ್ಕೆ ಮಳೆಯನ್ನು ಸುರಿಸುವ ಕಾಲದಲ್ಲಿ ಗರ್ಜನವನ್ನು ಮಾಡುತ್ತಾ ಎಂದೂ **ವಸೂನಾಂ ವಸುಪತ್ನೀ** ಎಂಬುವಕ್ಕೆ ಗೋಸಸ್ಯಾದಿ ಧನಗಳ ಪಾಲಕಳು ಎಂದು ಅರ್ಥಮಾಡಿದೆ. ವತ್ಸಶಬ್ದಕ್ಕೆ ವತ್ಸದಂತೆ ಪೋಷಣಾರ್ಹವಾದ ಲೋಕವೆಂದರ್ಥವು. ಅಶ್ವಿಭ್ಯಾಂ ಎನ್ನುವಾಗ ಸ್ಥಾವರಜಂಗಮರೂಪವಾದ ಲೋಕಗಳಿಗಾಗಿಎಂದಾಗಲಿ ಅಥವಾ ವಾಯ್ವಾದಿತ್ಯರಿಂದ ಎಂದಾಗಲಿ ತಾತ್ಪರ್ಯವಾಗುತ್ತದೆ. ಮೊದಲನೆ ಅರ್ಥದಂತೆ ಸಕಲ ಲೋಕಗಳಿಗಾಗಿಯೂ ವೃಷ್ಟಿಯನ್ನು ಸುರಿಸಲಿ ಎಂದೂ ಎರಡನೆಯ ಅರ್ಥದಂತೆ ವಾಯ್ವಾದಿತ್ಯರ ಪ್ರೇರಣೆಯಿಂದ ವೃಷ್ಟಿಯನ್ನು ಸುರಿಸಲಿ ಎಂದೂ ಅರ್ಥವಾಗುತ್ತದೆ.

**ಆಘ್ನ್ಯಾ ಅಹಂತವ್ಯಾ ಭವತಿ । ಅಘಘ್ನೀ ಇತಿ ವಾ ।**

ಇದು ಕೊಲ್ಲಲ್ಪಡತಕ್ಕದಲ್ಲ ಎಂಬುದರಿಂದಾಗಲಿ ಅಥವಾ ಪಾಪವನ್ನು ನಾಶಮಾಡತಕ್ಕದ್ದು ಎಂಬುದರಿಂದಾಗಲಿ ಅಘ್ನ್ಯಾ ಎಂಬ ಹೆಸರು ಬಂದಿದೆ ಎಂದು ವಿವರಿಸಿ,

**ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ ।**
**ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಶುದ್ಧಮುದಕಮಾಚರಂತೀ ॥**

(ಋ. ಸಂ. ೧-೧೬೪-೪೦)

ಎಂಬ ಋಕ್ಕನ್ನುದಹರಿಸಿ ಈ ಪದದ ಅರ್ಥವನ್ನು ತಿಳಿಸಿದ್ದಾರೆ.

ಅಶ್ವಿಭ್ಯಾಂ—ಈ ಪದಕ್ಕೆ ಮೂರು ವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ ಧೇನುಪರ್ಯಾಯವಾದ ಅರ್ಥದಲ್ಲಿ ಅಶ್ವಿಭ್ಯಾಂ ಕ್ಷೀರಂ ದುಹಾಂ ಎಂದರೆ ಅಶ್ವಿನೀದೇವತೆಗಳಿಗಾಗಿ ಕ್ಷೀರವನ್ನು ಕರೆಯಲಿ ಎಂದೂ ; ಎರಡನೆಯದಾಗಿ ಮೇಘಪರ್ಯಾಯವಾದ ಅರ್ಥದಲ್ಲಿ ವಿಶ್ವವ್ಯಾಪಕಗಳಾದ ಸ್ಥಾವರಜಂಗಮರೂಪಗಳಾದ ಲೋಕಗಳಿಗಾಗಿ ಅಥವಾ ವಾಯ್ವಾದಿತ್ಯರಿಂದ ಎಂದೂ ಅರ್ಥವಾಗುತ್ತದೆ. ಈ ಎಲ್ಲಾ ಅರ್ಥಗಳಿಗೂ ಅವಕಾಶವಿದೆಯೆಂದು ನಿರುಕ್ತಕಾರರ ನಿರ್ವಚನದಿಂದ ತಿಳಿಯುತ್ತದೆ. (ನಿ. ೧೨-೧).

ಅಶ್ವಿನೌ—**ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ ।** ಒಬ್ಬ ದೇವತೆಯು ಉದಕದಿಂದಲೂ, ಇನ್ನೊಬ್ಬ ದೇವತೆಯು ತೇಜಸ್ಸಿನಿಂದಲೂ ಕೂಡಿಕೊಂಡು ವಿಶ್ವವನ್ನೆಲ್ಲಾ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು. (೧)

**ಅಶ್ವೈರಶ್ವಿನಾವಿತ್ಯೌರ್ಣವಾಭಃ** ಅಶ್ವಗಳನ್ನು ಹೊಂದಿರುವುದರಿಂದ ಅಶ್ವಿನೀದೇವತೆಗಳು ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಔರ್ಣವಾಭರ ಮತವೆಂದು ತಿಳಿಯುತ್ತದೆ. (೨).

**ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತೇಕೇ**—ಇಲ್ಲಿಯವರೆಗೆ ಅಶ್ವಿನೀದೇವತೆಗಳ ಸ್ವರೂಪವನ್ನು ವರ್ಣಿಸಿದಂತಾಯಿತು. ಈಗ ಅವರಾರು ? ಎಂಬ ಪ್ರಶ್ನೆಯನ್ನು ಕೇಳಿ ಮೊದಲು, **ದ್ಯಾವಾಪೃಥಿವ್ಯಾವಿತ್ಯೇಕೇ ।** ಅವರು ದ್ಯಾವಾ

ಪೃಥಿವಿಗಳೆಂದು ಕೆಲವರ ಮತವಾಗಿದೆ. ಶತಪಥಬ್ರಾಹ್ಮಣದ ವಾಕ್ಯವನ್ನುದಹರಿಸಿ ಇದಕ್ಕೆ ಶ್ರುತಿವಾಕ್ಯದ ಆಧಾರವೂ ಇದೆಯೆಂದೂ ತೋರಿಸಬಹುದು.

> ಅಥ ಯದಶ್ವಿನಾವಿತೀಮೇ ಹ ವೈ ದ್ಯಾವಾಪೃಥಿವೀ ಪ್ರತ್ಯಕ್ಷಮಶ್ವಿನಾವಿಮೇ ಹೀದಂ ಸರ್ವ-
> ಮಶ್ನುವಾತಾಂ ।
>
> (ಶ. ಬ್ರಾ. ೪-೧-೫-೧೬)

ವಿಶ್ವವನ್ನೆಲ್ಲಾ ವ್ಯಾಪಿಸುವವರು ದ್ಯಾವಾಪೃಥಿವಿಗಳೇ ಆದ್ದರಿಂದ ದ್ಯಾವಾಪೃಥಿವಿಗಳೇ ಅಶ್ವಿನೀದೇವತೆಗಳೆಂದು ಪ್ರಸಿದ್ಧರಾಗಿದ್ದಾರೆ ಎಂದು ಮೇಲಿನ ವಾಕ್ಯವು ನಿಸ್ಸಂದಿಗ್ಧವಾಗಿ ತಿಳಿಸುತ್ತದೆ. ಈ ಅಭಿಪ್ರಾಯಕ್ಕೆ ಋಕ್ಸಂಹಿತಾ ವಾಕ್ಯದಿಂದಲೂ ಸಹಾಯವು ದೊರಕುವುದೆಂದು ತೋರಿಸಬಹುದು. ಉದಾಹರಣೆಗೆ—

> ಮಧು ನೋ ದ್ಯಾವಾಪೃಥಿವೀ ಮಿಮಿಕ್ಷತಾಂ ಮಧುಶ್ಚುತಾ ಮಧುದುಘೇ ಮಧುವ್ರತೇ ।
> ದಧಾನೇ ಯಜ್ಞಂ ದ್ರವಿಣಂ ಚ ದೇವತಾ ಮಹಿ ಶ್ರವೋ ವಾಜಮಸ್ಮೇ ಸುವೀರ್ಯಂ ।
>
> (ಋ. ಸಂ. ೬-೭೦-೫)

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಲವತ್ತೈದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಟ್‌ಚತ್ವಾರಿಂಶತ್ ಖಂಡಃ

### ನಲವತ್ತಾರನೆಯ ಖಂಡವು

ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ । ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ (ಋ. ಸಂ. ೪-೩೦-೧೦-೬೩-೧೬) ॥ ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾ ಭವತು ದೇವೀ ಗೋಪ್ತ್ರೀ ದೇವಾನ್ಗೋಪಯತ್ವಿತಿ ದೇವಾ ಏನಾಂ ಗೋಪಾಯಂತ್ವಿತಿ ವೋಷಾ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೪೬ ॥

> ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿಯಾ ವಾಮಮೇತಿ ।
> ಸಾ ನೋ ಅಮಾಸೋ ಅರಣೇ ನಿಪಾತು ಸ್ವಾವೇಶಾ ಭವತು
> ದೇವಗೋಪಾ ॥

ಪಥ್ಯಾಸ್ವಸ್ತಿ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸ್ವಸ್ತಿದೇವತೆಯೇ ಅಂತರಿಕ್ಷದಲ್ಲಿ ಸರ್ವದೇವತೆಗಳಿಂದಲೂ ಪ್ರಶಸ್ತಳು. ಉದಕದಿಂದ ಧನವಂತಳಾದ ಅವಳು ನಿತ್ಯವೂ ಉದಕರೂಪ ದ್ರವ್ಯವನ್ನು ಹೊಂದುತ್ತಾಳೆ. ಇವಳು ನಮ್ಮನ್ನು ಮನೆಯಲ್ಲಿಯೂ, ಅರಣ್ಯದಲ್ಲಿಯೂ, ಮನೆಯ ಹೊರಗೂ ರಕ್ಷಿಸಲಿ. ನಮ್ಮಿಂದ ಸುಖೋಪಚಾರವುಳ್ಳವಳಾಗಲಿ ದೇವತೆಗಳಿಂದ ಯಾವಾಗಲೂ ರಕ್ಷಿತಳಾಗಲಿ.

ಉಷಾ ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೪೬ ॥

ಕ್ರಮಪ್ರಾಪ್ತವಾದ ಉಷಾ ಪದದ ನಿರ್ವಚನ ತೋರಿಸುತ್ತಾರೆ. 'ಉಷಾ ಕಸ್ಮಾದಚ್ಛತೀತಿ (ನಿ. ೨–೧೮) ಎಂದು ಇದು ಹಿಂದೆ ವ್ಯಾಖ್ಯಾತವಾಗಿದೆ. ಮುಂದಿನ ಮಂತ್ರವು ಉಷಾಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಲವತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತಚತ್ವಾರಿಂಶತ್ ಖಂಡಃ

## ನಲವತ್ತೇಳನೆಯ ಖಂಡವು

ಅಪೋಷಾ ಅನಸಃ ಸರತ್ಸಂಪಿಷ್ಟಾದಹಂ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ (ಋ. ಸಂ. ೪-೩೦-೧೦) ॥ ಅಪಾಸರದುಷಾ ಅನಸಃ ಸಂಪಿಷ್ಟಾನ್ಮೇಘಾದ್ಬಿಭ್ಯುಷ್ಯನೋ ವಾಯುರನಿತೇರಪಿ ವೋಪಮಾರ್ಥೇ ಸ್ಯಾದನಸ ಇವ ಶಕಟಾದಿವಾನಃ ಶಕಟಮಾನದ್ಧಮಸ್ಮಿಂಚ್ಛೀವರಮನಿತೇರ್ವಾ ಸ್ಯಾಜ್ಜೀವನಕರ್ಮಣ ಉಪಜೀವಂತ್ಯೇನನ್ಮೇಘೋಽಪ್ಯನ ಏತಸ್ಮಾದೇವ ಯನ್ನಿರಶಿಶ್ನಥದ್ವೃಷಾ ವರ್ಷಿತಾ ಮಧ್ಯಮಸ್ತಸ್ಯಾ ಏಷಾಪರಾ ಭವತಿ ॥೪೭॥

ಅಪೋಷಾ ಅನಸಃ ಸರತ್ಸಂಪಿಷ್ಟಾದಹಂ ಬಿಭ್ಯುಷೀ । ನಿಯತ್ಸೀಂ ಶಿಶ್ನಥದ್ವೃಷಾ ॥

(ಋ. ಸಂ. ೩–೬–೨೦)

ವೃಷ್ಟಿಯನ್ನು ಕೊಡುವ ವಾಯುವು ಎಲ್ಲಾ ಕಡೆಯಿಂದ ಮೇಘವನ್ನು ಹಿಂಸಿಸಿದಾಗ ಉಷಾದೇವತೆಯು ವಾಯುವಿನಿಂದ ಭಯಗೊಂಡು ತನ್ನನ್ನು ಹಿಂಸಿಸುವನೆಂದು ವಾಯುವಿನ ಹಿಂಸೆಗೊಳಗಾದ ಮೇಘದಿಂದ ಹೊರಗೆ ಬರುತ್ತಾಳೆ.

ಅಪಸರದುಷಾ ಅನಸಃ ಸಂಪಿಷ್ಟಾನ್ಮೇಘಾತ್ ಬಿಭ್ಯುಷಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ.

ಅನೋ ವಾಯುರಸಿತೇಃ| ಅಪಿವೋಪಮಾರ್ಥೇ ಸ್ಯಾದನಸ ಇವ ಶಕಟಾದಿವ ||

ಅನಃಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಅನಸ್ಸೆಂದರೆ ವಾಯು. ಅನ-ಪ್ರಾಣನೇ ಧಾತು. ಅಸುನ್‌ಪ್ರತ್ಯಯ. ಇದರಿಂದ ಪ್ರಾಣಿವರ್ಗವು ಜೀವಿಸುತ್ತದೆ ಎಂದು ತಾತ್ಪರ್ಯ. ಅಥವಾ ಅನಸಃ ಎಂಬುದು ಸಾದೃಶ್ಯಾರ್ಥದಲ್ಲಿ ಹೇಳಿದೆಯೆಂದು ತಿಳಿಯಬೇಕು. ಗಾಡಿಯಲ್ಲಿ ಸಂಚರಿಸುವನು ಆ ಗಾಡಿ ಅಕಸ್ಮಾತ್ತಾಗಿ ಮುರಿದು ಹೋಗುತ್ತಿದ್ದರೆ ಅದನ್ನು ಹೇಗೆ ಜಾಗ್ರತೆಯಾಗಿ ಬಿಡುತ್ತಾನೋ ಅದರಂತೆ ಮೇಘವನ್ನು ಬಿಟ್ಟು ಸರಿಯುತ್ತಾಳೆ ಎಂದರ್ಥ.

ಅನಃ ಶಕಟಮಾನದ್ಧಮಸ್ಮಿಂಶ್ಚೀವರಮ್ | ಅನಿತೇರ್ವಾಸ್ಯಾಜ್ಜೀವನ-
ಕರ್ಮಣಃ ಉಪಜೀವಂತ್ಯೇನತ್ ||

ಗಾಡಿಯೆಂಬ ಅರ್ಥದಲ್ಲಿ ಅನಃಶಬ್ದ ನಿರ್ವಚನವನ್ನು ತೋರಿಸುತ್ತಾರೆ. ಮುನಿಗಳ ವಲ್ಕಲ ಮುಂತಾದವುಗಳನ್ನು ಇದರಲ್ಲಿ ಸ್ತುತಿಸಿರುವಂತೆ. ಈಗ ವಸ್ತ್ರಾದಿಗಳಿಂದ ಗಾಡಿಯನ್ನು ಮುಚ್ಚುತ್ತಾರೆ. ಅಥವಾ ಇದನ್ನಿಟ್ಟುಕೊಂಡು ಜನರು ಜೀವಿಸುತ್ತಾರೆ. ದುರ್ಭಿಕ್ಷಕಾಲದಲ್ಲಿ ಒಂಬತ್ತು ಜೀವಿಕಾಸಾಧನಗಳೆಂದು ಅವುಗಳಲ್ಲಿ ಶಕಟವೂ ಒಂದಾಗಿರುತ್ತದೆಂದು ಪರಿಗಣಿಸಿರುತ್ತಾರೆ.

ಮೇಘೋಽಪ್ಯನ ಇತ್ಯಸ್ಮಾದೇವ ||

ಅನಃ ಎಂಬುದು ಪೂರ್ವೋಕ್ತವಾದ ಧಾತ್ವರ್ಥವನ್ನು ಆಶ್ರಯಿಸುವುದರಿಂದ ಮೇಘವೂ ಆಗುತ್ತದೆ. ಅನಧಾತುವಿಗೆ ಜೀವಿಸುವುದೆಂದರ್ಥ. ನೀರು ಜೀವನಕ್ಕೆ ಆಧಾರವೆಂದು ಪ್ರಸಿದ್ಧವಾಗಿದೆ. ಮೇಘವೂ ಮಳೆ ಸುರಿಸಿ ಪ್ರಾಣಿಗಳನ್ನು ಬದುಕಿಸುತ್ತವೆ. ಹೀಗೆ ಮೇಘಾರ್ಥ ಹೇಳುವಾಗ ವೃಷಾ ಎಂಬುದು, ಕರ್ತೃಕ್ವಿಬಂತ ಪ್ರಕೃತಿಕವಾದ ತೃತೀಯಾಂತವೆಂದು ತಿಳಿಯಬೇಕು. ಆಗ ವೃಷಾ ಅಂದರೆ ಮಳೆಸುರಿಸುವವನಿಂದ ಎಂದರ್ಥ. ಮಳೆಗೆ ಕಾರಣನಾದ ವಾಯುವಿನಿಂದ ಮರ್ದಿಸಲ್ಪಡುವ ಮೇಘದಿಂದ ಉಷಾದೇವಿಯು ಹೊರಗೆ ಹೊರಟುಬಂದಳೆಂದರ್ಥವಾಗುತ್ತದೆ.

ಯನ್ನಿರಶಿಶ್ನಥದ್ವೃಷಾ ವರ್ಷಿತಾ ಮಧ್ಯಮಃ |

ಯಾವ ಕಾರಣದಿಂದ ಇವನು ವಾಯುವಿನಿಂದ ಹಿಂಸಿಸಲ್ಪಟ್ಟನೋ ಆದುದರಿಂದ ಇವನು ವೃಷಾ ಎಂದಾದನು. ಇವನೂ ಮಧ್ಯಮ ದೇವನೇ ಆಗುತ್ತಾನೆ.

ತಸ್ಯಾ ಏಷಾಽಪರಾ ಭವತಿ || ೪೭ ||

ಮುಂದೆ ಹೇಳುವ ಇನ್ನೊಂದು ಮಂತ್ರವೂ ಉಷಾದೇವಿಯ ಸ್ತುತಿಯನ್ನೇ ಪ್ರತಿಪಾದಿಸುತ್ತದೆ. ಪುನಃ ಏಕೆಂದು ಆಕಾಂಕ್ಷೆ

ಬರಬಹುದು. ಆದರೆ ಉತ್ತಮಸ್ಥಾನೀಯಳಾದ ಉಷೆಯು ಆದಿತ್ಯ ಸಂಬಂಧಿಯಾಗಿರುತ್ತಾಳೆ. ಇವಳಾದರೋ ಮಧ್ಯಮ ಸ್ಥಾನೀಯಳಾಗಿ ಮೇಘಾಶ್ರಯವನ್ನು ಹೊಂದಿರುತ್ತಾಳೆ. ಇದನ್ನು ಸ್ಪಷ್ಟಪಡಿಸಲು ಪುನಃ ಉದಹರಿಸುತ್ತಾರೆಂದರ್ಥ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ
ನಲವತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಚತ್ವಾರಿಂಶತ್ ಖಂಡಃ

## ನಲವತ್ತೆಂಟನೆಯ ಖಂಡವು

ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಸ್ಯಾ । ಸಸಾರ ಸೀಂ ಪರಾವತಃ । (ಋ. ಸಂ. ೪-೩೦-೧೧) ॥ ಏತದಸ್ಯಾ ಅನ ಆಶೇತೇ ಸುಸಂಪಿಷ್ಟಮಿತರದಿವ ವಿಪಾತಿ ವಿಮುಕ್ತಪಾತಿ ಸಸಾರೋಷಾಃ ಪರಾವತಃ ಪ್ರೇರಿತವತಃ ಪರಾಗತಾದ್ವೇಳಾ ವ್ಯಾಖ್ಯಾತಾ ತಸ್ಯಾ ಏಷಾ ಭವತಿ ॥ ೪೮ ॥

ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಸ್ಯಾ ॥ ಸಸಾರ ಸೀಂ
ಪರಾವತಃ ॥

(ಋ. ಸಂ. ೩-೬-೨೧)

ನೀರಿನರೂಪವಾಗಿ ಕರಗಿ ಭೂಮಿಯನ್ನು ಒದ್ದೆಮಾಡಿ ಇರುವ ಮೇಘವನ್ನು ಕುರಿತು ಋಷಿಯು ಹೇಳುತ್ತಾನೆ. ಉಷಾದೇವಿಗೆ ಆಶ್ರಯವಾದ ಈ ಮೇಘವು ವಾಯುವಿನಿಂದ ಚೂರುಚೂರುಮಾಡಲ್ಪಟ್ಟಿದೆ. ತನ್ನ ಆಶ್ರಯವು ನಾಶವಾದುದರಿಂದ ಈ ಉಷಾದೇವಿಯು ಆ ಮೇಘವನ್ನು ಬಿಟ್ಟು ಹೊರಗೆ ಬರುತ್ತಾಳೆ. ಅದನ್ನು ತ್ಯಜಿಸಿ ದೂರ ಹೋದಳೆಂದರ್ಥ.

ಏತದಸ್ಯಾ ಅನ ಆಶೇತೇ ಸುಸಂಪಿಷ್ಟಮಿತರದಿವ ವಿಪಾತಿ ವಿಮುಕ್ತಪಾತಿ ।
ಸಸಾರೋಷಾಃ ಪ್ರೇರಿತವತಃ ಪರಾಗತಾದ್ವಾ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಹೇಗೆ ಗಾಡಿಯು ಭಿನ್ನಭಿನ್ನವಾಗುವುದೋ ಆದರಂತೆ ಈ ಮೇಘವು ವಾಯುವಿನಿಂದ ಪೀಡಿತವಾಗಿ ನೀರಸುರಿಸಿ ಜರ್ಝರಿತವಾಗಿದೆಯೆಂದರ್ಥ ॥

ಇಳಾ ವ್ಯಾಖ್ಯಾತಾ । ತಸ್ಯಾ ಏಷಾ ಭವತಿ ॥ ೪೮ ॥

ಇಳಾ ಕ್ರಮಪ್ರಾಪ್ತವಾಗಿದೆ. ಇದು ಈಟ್ಟೇಃ ಸ್ತುತಿಕರ್ಮಣಃ ಎಂದು (ನಿ. ೮-೮.೧) ಹಿಂದೆ ವ್ಯಾಖ್ಯಾತವಾಗಿದೆ. ಎಲ್ಲರಿಂದಲೂ ಸ್ತುತಿಸಲ್ಪಡುವವಳು ಎಂದರ್ಥ. ಮುಂದೆ ಹೇಳುವ ಮಂತ್ರವು ಇಳಾಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಲವತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕೋನಪಂಚಾಶತ್ ಖಂಡಃ

### ನಲವತ್ತೊಂಬತ್ತನೆಯ ಖಂಡವು

ಅಭಿ ನ ಈಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು । ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ (ಋ. ಸಂ. ೫-೪೧-೧೯) ॥ ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ (ಋ. ಸಂ. ೫-೪೧-೨೦) ॥ ಅಭಿಗೃಣಾತು ನ ಇಳಾ ಯೂಥಸ್ಯ ಮಾತಾ ಸ್ಮದಭಿನದೀಭಿರುರ್ವಶೀ ವಾ ಗೃಣಾತೂರ್ವಶೀ ವಾ ಬೃಹದ್ದಿವಾ ಮಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯ ಪ್ರಭೃತಸ್ಯಾಯೋ ರಯನಸ್ಯ ಜ್ಯೋತಿಷೋ ವೋದಕಸ್ಯ ವಾ ಸೇವತಾಂ ನೋಽನ್ನಸ್ಯ ಪುಷ್ಟೇ ರೋದಸೀ ರುದ್ರಸ್ಯ ಪತ್ನೀ ತಸ್ಯಾ ಏಷಾ ಭವತಿ ॥ ೪೯ ॥

ಅಭಿ ನ ಇಳಾ ಯೂಥಸ್ಯ ಮಾತಾಸ್ಮನ್ನದೀಭಿರುರ್ವಶೀ ವಾಗೃಣಾತು ।
ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾ-
ಯೋಃ ॥
ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥

(ಋ. ಸಂ. ೪-೩-೧೬-೪-೫)

ಇಳಾಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಮೇಘಸಮೂಹದ ತಾಯಿಯಾದ ಊರ್ವಶಿಯೆಂಬ ಇಳಾ (ಮಧ್ಯಮವಾಕ್) ದೇವತೆಯು ನಮ್ಮನ್ನು ನೀರಿನಿಂದ ತೃಪ್ತಿಪಡಿಸಲಿ. ಊರ್ವಶೀ ಅಪ್ಸರಃ ಸ್ತ್ರೀಯಂತೆ ಇವಳು ವಿದ್ಯುದಾದಿಗಳಿಂದ ಕೂಡಿ ಶಬ್ದಮಾಡುತ್ತಾ ಮಹತ್ತಾದ ಇಷ್ಟಾರ್ಥವನ್ನು ನೆರವೇರಿಸಲಿ. ಪ್ರಕೃಷ್ಟವಾಗಿ ಕೂಡಿರುವ ನೀರಿನಿಂದ ಯವ ಅನ್ನಾದಿಗಳ ಪುಷ್ಟಿಗೋಸ್ಕರ ನಮ್ಮನ್ನು ಸೇವಿಸಲಿ.

ಅಭಿ ಗೃಣಾತು ನ ಇಳಾ ಯೂಥಸ್ಯ ಮಾತಾ ಸರ್ವಸ್ಯ ಮಾತಾ ಸ್ಮದಭಿನದೀ-
ಭಿರುರ್ವಶೀ ವಾ ಗೃಣಾತೂರ್ವಶೀ ವಾ ಬೃಹದ್ದಿವಾ ಮಹದ್ದಿವಾ
ಗೃಣಾನಾಽಭ್ಯೂರ್ಣ್ವಾನಾ ಪ್ರಭೃಥಸ್ಯ ಪ್ರಭೃತಸ್ಯಾಯೋಃರಯ್ಯನಸ್ಯ
ಮನುಷ್ಯಸ್ಯ ಜ್ಯೋತಿಷೋ ವೋದಕಸ್ಯ ವಾ ಸೇವತಾಂ ನೋಽನ್ನಸ್ಯ
ಪುಷ್ಟೇಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪೂರ್ವಾರ್ಧದಲ್ಲಿ ಹೇಳಿರುವ ಅರ್ಥವನ್ನೇ ಉಪಮೆಯಿಂದ ಉತ್ತರಾರ್ಧದಲ್ಲಿ ವಿವರಿಸುತ್ತಾರೆ.

ರೋದಸೀ ರುದ್ರಸ್ಯ ಪತ್ನೀ | ತಸ್ಯಾ ಏಷಾ ಭವತಿ ||

ರೋದಸೀ ಪದವು ದ್ಯಾವಾಪೃಥಿವೀನಾಮದಲ್ಲಿ ವ್ಯಾಖ್ಯಾತವಾಗಿದೆ. ಇದು ಸ್ತ್ರೀಲಿಂಗ ದ್ವಿವಚನಾಂತವಾಗಿಯೂ ನಪುಂಸಕದ್ವಿವಚನಾಂತವಾಗಿಯೂ; ಅವ್ಯಯವಾಗಿಯೂ ವ್ಯವಸ್ಥಿತವಾಗಿದೆ. ಮಧ್ಯಮಸ್ಥಾನನಾದ ರುದ್ರನ ಪತ್ನಿ ಇಲ್ಲಿ ವಿವಕ್ಷಿತವಾಗಿದೆ. ಮುಂದೆ ಹೇಳುವ ಮಂತ್ರವು ರೋದಸೀಸ್ತುತಿ ಪ್ರತಿ ಪಾದಕವಾಗುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ನಲವತ್ತೊಂಬತ್ತನೆಯ ಖಂಡವು ಸಮಾಪ್ತವು.

---

## ಅಥ ಪಂಚಾಶತ್ ಖಂಡಃ

## ಐವತ್ತನೆಯ ಖಂಡವು

ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ | ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ (ಋ. ಸಂ. ೫-೫೬-೮) || ರಥಂ ಕ್ಷಿಪ್ರಂ ಮಾರುತಂ ಮೇಘಂ ವಯಂ ಶ್ರವಣೀಯಮಾಹ್ವಯಾಮಹ ಆ ಯಸ್ಮಿನ್ತಸ್ಥೌ ಸುರಮಣೀಯಾನ್ಯುದಕಾನಿ ಬಿಭ್ರತೀ ಸಚಾ ಮರುದ್ಭಿಃ ಸಹ ರೋದಸೀ ರೋದಸೀ || ೫೦ ||

ರಥಂ ನು ಮಾರುತಂ ವಯಂ ಶ್ರವಸ್ಯುಮಾಽಽ ಹುವಾಮಹೇ | ಆ
ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ||

(ಯ. ಸಂ. ೪-೨-೨೦)

ರೋದಸೀ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಆತ್ರೇಯರಾದ ನಾವು ಚಲಿಸುವ ಮೇಘವನ್ನು ಆಹ್ವಾನಿಸು

ತ್ತೀವೆ. ವಾಯುವಿನಿಂದ ಕೂಡಿರುವ ಯಶಸ್ವಿಯಾದ, ಈ ಮೇಘದಲ್ಲಿ ಕುಳಿತು ರಮಣೀಯವಾದ ಉದಕವನ್ನು ಧರಿಸಿ ರುದ್ರ ಪತ್ನಿಯು ಮರುದ್ದೇವತೆಗಳೊಡನೆ ಬರುತ್ತಾಳೆ.

ರಥಂ ನು ಮಾರುತಂ ವಯಂ ಶ್ರವಣೀಯಮಾಹ್ವಯಾಮಹೇ ಆಯಸ್ಮಿಂ
ಸ್ತಸ್ಥೌ ಸುರಮಣೀಯಾನ್ಯುದಕಾನಿ ಬಿಭ್ರತೀ ಸಚಾ ಮರುದ್ಭಿಃ
ಸಹ ರೋದಸೀ ರೋದಸೀ || ೫೦ ||

ಇತಿ ಶ್ರೀಮದ್ಯಾಸ್ಕಮುನಿ ...... ನಿ .... ಶಾಸ್ತ್ರೇ ಏಕಾದಶಾಧ್ಯಾಯೇ ಚತುರ್ಥಃ ಪಾದಃ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಧ್ಯಾಯಪರಿಸಮಾಪ್ತಿಯನ್ನು ಸೂಚಿಸಲು ರೋದಸೀ ಎಂದು ಎರಡುಸಾರಿ ಹೇಳಿರುತ್ತಾರೆ.

ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ |
ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ || ೮ ||

ಯಾವ ರಥದಲ್ಲಿ ಉದಕಗಳನ್ನು ಧರಿಸಿರುವ ಮರುತ್ತುಗಳ ಮಾತೆಯಾದ ರುದ್ರಪತ್ನೀ ಅಥವಾ ಮಾಧ್ಯಮಿಕಾ ವಾಕ್ಕು ಎಂಬ ದೇವತೆಯು ಸ್ಥಿತಳಾಗಿದ್ದಾಳೋ ಅಂತಹ ಮರುತ್ಸಂಬಂಧಿಯಾದುದೂ, ಅನ್ನೇಚ್ಛುವಾದುದೂ ಆದ ರಥವನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ.

ಈ ಋಕ್ಕಿನಲ್ಲಿ ಮರುದ್ದೇವತೆಗಳನ್ನು ರಥವನ್ನು ಸ್ತುತಿಸಲಾಗಿದೆ. ಮತ್ತು ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

ರಥಂ ಕ್ಷಿಪ್ರಂ ಮಾರುತಂ ಮೇಘಂ ವಯಂ ಶ್ರವಣೀಯಮಾಹ್ವಯಾಮಹ ಆ ಯಸ್ಮಿನ್ತಸ್ಥೌ ಸುರಮಣೀ
ಯಾನ್ಯುದಕಾನಿ ಬಿಭ್ರತೀ ಸಚಾ ಮರುದ್ಭಿಃ ಸಹ ರೋದಸೀರೋದಸೀ ||

(ನಿ. ೧೧–೫೦)

ಮರುದ್ದೇವತೆಗಳ ರಥವು ವೇಗಗಮನವುಳ್ಳದ್ದೂ ಯಶಸ್ಸಿನಿಂದ ಪ್ರಸಿದ್ಧವಾದುದೂ ಆಗಿದೆ. ಆ ರಥದಲ್ಲಿ ರುದ್ರಪತ್ನಿಯೂ ಮರುದ್ದೇವತೆಗಳ ಮಾತೆಯೂ ಆದ ರೋದಸೀ ಎಂಬ ದೇವತೆಯು ಉತ್ತಮವಾದ ಉದಕಗಳನ್ನು ಧರಿಸಿ ಮರುದ್ದೇವತೆಗಳೊಡನೆ ನಿಂತಿದ್ದಾಳೆ. ಅಂತಹ ಮರುದ್ದೇವತೆಗಳ ರಥವನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ರಥಂ—ರಥಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ—ರಥೋ ರಹಂತೇರ್ಗತಿಕರ್ಮಣಃ| ಸ್ಥಿರತೇರ್ವಾಸ್ಯಾದ್ವಿಪರೀತಸ್ಯ| ರಮಮಾಣೋऽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ (ನಿ. ೯–೧೧) ಎಂದು ಹೇಳಿರುವರು. ಎಂದರೆ ಗಮನಕರ್ಮವನ್ನು ಸೂಚಿಸುವ ರಂಹ್ ಧಾತುವಿನಿಂದಾಗಲಿ, ಸ್ಥಿರವಾಗಿರು ಎಂದರ್ಥವುಳ್ಳಸ್ಥಿರತಿ ಧಾತುವಿನಿಂದಾಗಲಿ, ನಿಷ್ಪನ್ನವಾಗಬಹುದು. ಈ ರಥವು ಯಾವಾಗಲೂ ಹೋಗುತ್ತಿರು(ಸಂಚರಿಸುತ್ತಿರು)ವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಇದರಲ್ಲಿ ಕುಳಿತುಕೊಳ್ಳುವ ಯೋಧನು ಸ್ಥಿರವಾಗಿರುವನು. ಅಶ್ವಾದಿ ವಾಹನಗಳ ಮೇಲೆ ಕುಳಿತುಕೊಂಡಾಗ ಶರೀರವು ಅಲುಗಾ

ಡುವಂತೆ, ರಥದಲ್ಲಿ ಕುಳಿತಾಗ ಅಲುಗಾಡದೆ ಸ್ಥಿರವಾಗಿ ಕುಳಿತುಕೊಳ್ಳಲು ಸಾಧ್ಯವಾಗುವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಈ ರಥದಲ್ಲಿ ಕುಳಿತು ವಿವರಿಸುವುದರಿಂದ ಇದಕ್ಕೆ ರಥವೆಂದು ಹೆಸರು. ಎಂದು ಅವಯವಾರ್ಥಗಳನ್ನು ವಿವರಿಸುವರು.

ರೋದಸೀ – ರೋದಸೀ ಎಂದರೆ ದ್ಯಾವಾಪೃಥಿವಿಗಳೆಂದು ಅರ್ಥ. ರೋದಸೀ ಎಂಬ ಅಂಕಿತನಾಮವೂ ಅನೇಕ ಸಂದರ್ಭಗಳಲ್ಲಿ ಒಂದು ವ್ಯಕ್ತಿಯು (ರುದ್ರಪತ್ನಿಯ) ಹೆಸರನ್ನೂ ಸೂಚಿಸುತ್ತದೆ. ಆದುದರಿಂದ ಈ ಪದವು ಏಕವಚ ಮತ್ತು ದ್ವಿವಚನ ಈ ಎರಡರಲ್ಲೂ ಪ್ರಯೋಗಿಸಲ್ಪಟ್ಟಿದೆ. ಆಯಾ ಸಂದರ್ಭಗಳಿಗನುಗುಣವಾಗಿ ಇದರ ಅರ್ಥವನ್ನು ಮಾಡಬೇಕು. ನಿರುಕ್ತಕಾರರು,

ಉತಾಭಯೇ ಪುರುಹೂತೆ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್।
ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥

(ಋ. ಸಂ. ೩-೩೦-೫)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ರೋದಸೀ ಎಂಬ ಪದದ ನಿರ್ವಚನವನ್ನು ಹೇಳುತ್ತಾ,

ರೋದಸೀ ದ್ಯಾವಾಪೃಥಿವ್ಯೌ ವಿರೋಧನಾತ್ ।

(ನಿ. ೬-೧)

ಒಂದು ಪರಿಮಿತವಾದ ಎಲ್ಲೆ (ಸೀಮಾ) ಯಿಂದ ಬಂಧಿತವೂ ಆಗಿರುವುದರಿಂದ ದ್ಯಾವಾಪೃಥಿವಿಗಳಿಗೆ ರೋದಸೀ ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಯಬೇಕು ಎಂದಿದ್ದಾರೆ. ಇದು ದ್ವಿವಚನಾಂತವಾದ ರೋದಸೀ ಎಂಬ ಪದದ ನಿರ್ವಚನವಾಗಿದೆ.

ರೋದಸೀ ರುದ್ರಸ್ಯ ಪತ್ನೀ

(ನಿ. ೧೧-೪೯)

ರೋದಸಿಯು ರುದ್ರನ ಪತ್ನಿಯು ಎಂದು ಹೆಸರು.

ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ ।
ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ॥

(ಋ. ಸಂ. ೫-೫೬-೮)

ಎಂಬ ಪ್ರಕೃತ ಋಕ್ಕನ್ನುದಹರಿಸಿ ಇಲ್ಲಿ ರೋದಸೀಯೆಂದರೆ ರುದ್ರಪತ್ನಿಯೆಂಬ ಅಂಕಿತನಾಮದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. ಆದರೆ ಇಲ್ಲಿ ಇನ್ನೊಂದು ಸಮಸ್ಯೆಯೇಳುತ್ತದೆ. ರುದ್ರಪತ್ನಿಯೆಂದರೆ, ರುದ್ರದೇವತೆಯ ಪತ್ನಿಯೇ ಅಥವಾ ರುದ್ರಶಬ್ದಕ್ಕೆ ಮರುತ್ತೆಂದರ್ಥವಾಗಿ ಮರುದ್ದೇವತೆಗಳ ಪತ್ನಿಯೇ ಎಂಬ ಸಂಶಯಕ್ಕೂ ಅವಕಾಶವಾಗುವಂತೆ ಸಾಯಣರು ಎರಡು ಕಡೆಗಳಲ್ಲಿಯೂ ವ್ಯಾಖ್ಯಾನಮಾಡಿದ್ದಾರೆ, ಪ್ರಕೃತವಾದ ಋಕ್ಕನ್ನು ವಿವರಿಸುತ್ತಾ,

ರೋದಸೀ ರುದ್ರಸ್ಯ ಪತ್ನೀ ಮರುತಾಂ ಮಾತಾ । ಯದ್ವಾ ರುದ್ರೋ ವಾಯುಃ ।
ತತ್ಪತ್ನೀ ಮಾಧ್ಯಮಿಕಾ ದೇವೀ ॥

(ಸಾ. ಭಾ.)

ರೋದಸಿಯು ರುದ್ರಪತ್ನಿ ಮತ್ತು ಮರುತ್ತುಗಳ ಮಾತೆಯೆಂದು ಒಂದರ್ಥವಾಗಬಹುದು ಅಥವಾ ರುದ್ರಶಬ್ದಕ್ಕೆ ವಾಯುವೆಂ ರ್ಥವಿರುವುದರಿಂದ ರೋದಸೀಯೆಂದರೆ ವಾಯುಪತ್ನಿಯಾದ ಮಾಧ್ಯಮಿಕಾವಾಕ್ಕೆಂದು ಎರಡನೆಯ ಅರ್ಥವಾಗುತ್ತದೆ. ಎಂದು ಎರಡು ವಿಧವಾಗಿ ವಿವರಿಸಿದ್ದಾರೆ. ಮತ್ತು,

ಪರಾ ಶುಭ್ರಾ ಅಯೋಸೋ ಯವ್ಯಾ ಸಾಧಾರಣ್ಯೇವ ಮರುತೋ ಮಿಮಿಕ್ಷುಃ ।
ನ ರೋದಸೀ ಅಪ ನುದಂತ ಘೋರಾ ಜುಷಂತ ವೃಧಂ ಸಖ್ಯಾಯ ದೇವಾಃ ॥

(ಋ. ಸಂ. ೧-೧೬೭-೪)

ಎಂಬ ಋಕ್ಕನ್ನು ವಿವರಿಸುವಾಗ ಹಿಂದೆ ತಿಳಿಸಿರುವಂತೆ,

ರೋದಸಾ ಶಬ್ದೇನ ರೋದನಸ್ವಭಾವೋ ರುದ್ರಃ ತಸ್ಯ ಸ್ತ್ರೀ ರೋದಸೀತಿ ಕೇಚಿದಾಹುಃ।
ಅಪರೇ ತು ಮರುತಾಂ ಸ್ತ್ರಿಯೋ ರೋದಸೀತಿ ನಾಮಧೇಯಮಿತ್ಯಾಹುಃ । ಅಯಮೇವ
ಪಕ್ಷೋ ಯುಕ್ತ ಉತ್ತರತ್ರೈವಂ ವ್ಯವಹಾರಾತ್ ॥

ರೋದಸಿಯು ರುದ್ರಪತ್ನಿಯೆಂಬುದು ಒಂದು ಮತ. ಮರುತ್ತುಗಳ ಪತ್ನಿಯೆಂಬುದು ಇನ್ನೊಂದು ಮತ. ಇವುಗಳಲ್ಲಿ ಎರಡನೆಯದೇ ಸರಿಯಾಗಿರುವಂತೆ ತೋರುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಅಲ್ಲದೇ,

ಜೋಷದ್ಯದೀಮಸುರ್ಯಾ ಸಚಧ್ಯೈ ವಿಷಿತಸ್ತುಕಾ ರೋದಸೀ ನೃಮಣಾಃ ॥

(ಋ. ಸಂ. ೧-೧೬೭.೫)

ಎಂಬ ಋಕ್ಕನ್ನು ವಿವರಿಸುವಾಗ ರೋದಸೀ ಮರುತ್ಪತ್ನೀ ವಿದ್ಯುದ್ವಾ । ರೋದಸಿಯು ಮರುತ್ತುಗಳ ಪತ್ನಿಯು ಅಥವಾ ವಿದ್ಯುತ್ತೇ ಈ ಹೆಸರಿನಲ್ಲಿ ಪ್ರಸಿದ್ಧವಾಗಿದೆ ಎಂದು ತಿಳಿಸಿದ್ದಾರೆ. ಮತ್ತು ಮರುತ್ತುಗಳ ಅನ್ವೇಷಣದಲ್ಲಿಯೇ ಈ ರೋದಸಿಯು ಇರುವುದಾಗಿಯೂ ವರ್ಣಿತವಾಗಿರುವ ವಿಷಯವನ್ನುದಾಹರಿಸಿದ್ದಾರೆ. ಮತ್ತು ರೋದಸೀ ಪದದ ಪ್ರಯೋಗವಿರುವ ಇನ್ನೂ ಕೆಲವು ಸನ್ನಿವೇಶಗಳನ್ನು ಪರಿಶೀಲಿಸಿದರೆ,

ತ ಇದುಗ್ರಾಃ ಶವಸಾ ಧೃಷ್ಣುಷೇಣಾ ಉಭೇ ಯುಜಂತ ರೋದಸೀ ಸುಮೇಕೇ ।
ಅಧ ಸ್ಮೈಷು ರೋದಸೀ ಸ್ವಶೋಚಿರಾಮವತ್ಸು ತಸ್ಥೌ ನ ರೋಕಃ ॥

(ಋ. ಸಂ. ೬-೬೬-೬)

ಎಂಬ ಒಂದೇ ಋಕ್ಕಿನಲ್ಲಿ ರೋದಸೀ ಶಬ್ದವು ಎರಡು ಅರ್ಥಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಇಲ್ಲಿ ಮೊದಲನೆಯ ಪದಕ್ಕೆ ಸಾಯಣರು ದ್ಯಾವಾಪೃಥಿವ್ಯೌ ಎಂದೂ, ಎರಡನೆಯ ಪದಕ್ಕೆ ರುದ್ರಸ್ಯ ಪತ್ನೀ ಮಾಧ್ಯಮಿಕಾ ವಾಕ್ ಎಂದೂ ಅರ್ಥಮಾಡಿದ್ದಾರೆ. ಮತ್ತು,

ಮಿಮ್ಯಕ್ಷಯೇಷು ರೋದಸೀ ನು ದೇವೀ ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ ।
ಶ್ರುತ್ವಾಹವಂ ಮರುತೋ ಯದ್ಧ ಯಾಥ ಭೂಮಾ ರೇಜಂತೇ ಅಧ್ವನಿ ಪ್ರವಿಕ್ತೇ ॥

(ಋ. ಸಂ. ೬-೫೦-೫)

ಎಂಬಲ್ಲಿಯೂ ದೇವೀ ದ್ಯೋತಮಾನಾ ಮಾಧ್ಯಮಿಕಾ ವಾಕ್ ಎಂದೇ ಅರ್ಥಮಾಡಿದೆ. ಋ. ಸಂ. ೧–೧೬೭–೩ ನೇ ಋಕ್ಕಿನ ವಿವರಣೆಯನ್ನು ಕೊಡುತ್ತಾ Max Muller ಎಂಬ ಪಂಡಿತನು ವಿದ್ಯುತ್, ಮಾಧ್ಯಮಿಕಾ ವಾಕ್ ಮತ್ತು ದ್ಯಾವಾಪೃಥಿವೀ ಈ ಅರ್ಥಗಳಲ್ಲಿ ಪ್ರಯುಕ್ತವಾಗಿರುವ ರೋದಸೀ ಎಂಬ ಪದದ ವಿಷಯವನ್ನು ಈ ರೀತಿ ತಿಳಿಸಿದ್ದಾನೆ.

In our verse, we take ವಾಕ್ in the sense of thunder, but as a feminine, of the lightning and thunder as the two companions of the Maruts, represents the first, ರೋದಸೀ or lightning, as the recognised wife, hiding herself in the house, while the other, the loud thunder, is represented as a more public companion of the Maruts. This contrast if it is relly what the poet intended throws a curions light on the social character of the Vedic times, as it presupposes tow classes of wives, not necessarily simultanious, however—, a house wife, who stays at home is not and much seen, and a wife who appears in public and takes part in the society.... The loud voice of the thunder as well as the usual hiding of the lightning might well suggest this comparison.

[ S. B. E. XXXII .P 276]

ಈ ವಿಧವಾಗಿ ಏಕವಚನದ ಪ್ರಯೋಗಕ್ಕೂ ದ್ವಿವಚನದ ಪ್ರಯೋಗಕ್ಕೂ ವ್ಯತ್ಯಾಸವನ್ನು ತೋರಿಸುತ್ತಾ ಬೃಹದ್ದೇವತೆಯಲ್ಲಿ ಈ ವಿಧವಾಗಿ ತಿಳಿಸಿದೆ.

ರೋದಸೀ ದೇವಪತ್ನೀನಾಂ ಅರ್ಥವಾಂಗಿರಸೇ ಯಥಾ ।

(ಬೃ. ದೇ. ೨–೧೪೩)

ಎಂಬಲ್ಲಿ ಅಥರ್ವಾಂಗಿರಸದ(ಅಥರ್ವವೇದ) ಮತದಂತೆ ರೋದಸಿಯು ದೇವಪತ್ನಿಯರಲ್ಲಿ ಒಬ್ಬಳು ಎಂದು ಏಕವಚನದ ಪ್ರಯೋಗವಿರುವ ಉದಾಹರಣೆಯಿದೆ. ಮತ್ತು,

ದ್ವೇ ದ್ವೇ ಪದೇ ಸಂಸ್ತುತೇ. ರೋದಸೀ. ಚ ದೇವಾಶ್ಚಾರ್ಥರ್ಚೇನ ವಿಭಕ್ತಮನ್ಯತ್ ।

(ಬೃ. ದೇ. ೪–೭)

ಇತ್ಯಾದಿ ದ್ವಿವಚನ ಪ್ರಯೋಗವಿರುವೆಡೆಗಳಲ್ಲೆಲ್ಲಾ ದ್ಯಾವಾಪೃಥಿವಿಗಳೆಂದರ್ಥವಾಗುತ್ತದೆ.

ಶ್ಯೇನ ಆದಾಯ ಸ್ವಾದಿಷ್ಠಾಯೂಸೋಮಂ ಮನ್ಯತೇ ಯತ್ತ್ವಾ ದೇವ ನವೋ ನವೋ ಪರಂ ಮೃತ್ಯೋಃ ತ್ವೇಷಮಿತ್ಥಾ ಪ್ರವೋಃಹ ಉದುಜ್ಯೋತಿರ್ಧಾತಾದದಾತು ಸೋಮಸ್ಯ ರಾಜ್ಞೋ ಥಾತೋ ಮಧ್ಯಸ್ಥಾನಾದೇವಗಣಾ . ಆವಿದ್ಯುನ್ಮದ್ಭಿರಾರುದ್ರಾಸೋ

ವಿಷ್ಟ್ವೀ ಶಮೀವಿರೂಪಾಸ ಉದೀರತಾ ಮಂಗಿರಸೋನಃ ಸೂರ್ಯಸ್ಯೇ ವಸ್ತುಷೇಯ್ಯ ಮಥಾತೋ ಮಧ್ಯಸ್ಥಾನಾಃ ಸ್ತ್ರಿಯೋ ದಕ್ಷಸ್ಯವಾಯುಸ್ಮೈತ್ವಂ ಕಿಮಿಚ್ಛಂತೀ ಪಾವಕಾನೋ ಮಹೋ ಅರ್ಣೋಯದ್ವಾಗ್ವದಂತೀ ದೇವಿಂವಾಚಮನ್ವಿದನುಮತೇ ರಾಕಾಮಹಂ ಸಿನೀವಾಲಿ ಕುಹೂಮಹಮನ್ಯ ಮೂಷೂರ್ವಶೀ ವಿದ್ಯುನ್ನವಳಿತ್ಥೀಂದ್ರಾಣೀಂ ನಾ ಹಮಿಂದ್ರಾಣಿ ಗೌರೀರ್ಮಿಮಾಯ ತಸ್ಯಾಃ ಸಮುದ್ರಾಗೌರಮೀಮೇದುಪಹ್ವಯೇ ಸೂಯವಸಾದ್ಧಿಂ ಕೃಣ್ವತೀಸ್ವಸ್ತಿರಿಧ್ಯಪೋಷಾ. ಏತದಸ್ಯಾ ಅಮಿ ನ ಇಳಾ ರಥಂ ನು ಪಂಚಾಶತ್ ॥

ಇತಿ ನಿರುಕ್ತ ಉತ್ತರಷಟ್ಕೇ ಪಂಚಮೋಧ್ಯಾಯಃ ॥

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ

ಐವತ್ತನೆಯ ಖಂಡವು ಸಮಾಪ್ತವಾಗಿದೆ.

---

# ನಿರುಕ್ತಂ

## ಅಥ ದ್ವಾದಶಾಧ್ಯಾಯೇ ಪ್ರಥಮಃ ಖಂಡಃ

### ಅಥ ಪ್ರಥಮ ಖಂಡಃ

### ಮೊದಲನೆಯ ಖಂಡವು

ಓಂ || ಅಥಾತೋ ದ್ಯುಸ್ಥಾನಾ ದೇವತಾಸ್ತಾಸಾಮಶ್ವಿನೌ ಪ್ರಥಮಾಗಾಮಿನೌ ಭವತೋಽಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯೋಽಶ್ವೈರಶ್ವಿನಾ ವಿತ್ಯೌರ್ಣವಾಭಸ್ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇಽಹೋರಾತ್ರಾವಿತ್ಯೇಕೇ ಸೂರ್ಯಾಚಂದ್ರಮಸಾವಿತ್ಯೇಕೇ ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಸ್ತಯೋಃ ಕಾಲ ಊರ್ಧ್ವಮರ್ಧರಾತ್ರಾತ್ ಪ್ರಕಾಶೀಭಾವಸ್ಯಾನುಷ್ಟಂಭಮನು ತಮೋಭಾಗೋಹಿ ಮಧ್ಯಮೋ ಜ್ಯೋತಿರ್ಭಾಗ ಆದಿತ್ಯಸ್ತಯೋರೇಷಾ ಭವತಿ || ೧ ||

ಅಥಾತೋ ದ್ಯುಸ್ಥಾನಾ ದೇವತಾ | ತಾಸಾಮಶ್ವಿನೌ ಪ್ರಥಮಾಗಾಮಿನೌ ಭವತಃ ||

ಮಧ್ಯಸ್ಥಾನ ದೇವತೆಗಳನ್ನು ಲಿಂಗ ವಚನ ವಿಶೇಷಪೂರ್ವಕವಾಗಿ ಪೂರ್ವದ ಅಧ್ಯಾಯದಲ್ಲಿ ವಿವರಿಸಿದುದಾಯಿತು. ಇನ್ನು ಮುಂದೆ ದ್ಯುಸ್ಥಾನದೇವತೆಗಳನ್ನು ಹೇಳಬೇಕು. ವಿಶೇಷಾಧಿಕಾರವನ್ನು ತಿಳಿಸಲು ಅಥ ಶಬ್ದವನ್ನು ಮೊದಲು ಹೇಳಿರುತ್ತಾರೆ. ಈ ಅಧ್ಯಾಯದಲ್ಲಿ ದ್ಯುಸ್ಥಾನದೇವತೆಗಳನ್ನು ವಿವರಿಸುತ್ತಾರೆ. ಅವರಲ್ಲಿ ಮೊದಲು ಅಶ್ವಿನೀ ದೇವತೆಗಳನ್ನು ತಿಳಿಸಲು ಯೋಗ್ಯರಾಗಿದ್ದಾರೆ. ಏಕೆಂದರೆ ಕಾಲದಿಂದ ದ್ವಿಸ್ಥಾನದೇವತೆಗಳ ವಿಶೇಷವು ಇಲ್ಲಿ ವಿವಕ್ಷಿತವಾಗಿದೆ. ಅಶ್ವಿನಸ್ತುತಿ ಶಸ್ತ್ರಕರ್ಮದಲ್ಲಿ ಅರ್ಧರಾತ್ರಿಯ ಮೇಲೆ ಸೂರ್ಯೋದಯದ ವರೆಗಿನ ಕಾಲದಲ್ಲಿ ಅಶ್ವಿನೀದೇವತೆಗಳನ್ನು ಬಿಟ್ಟರೆ ಇನ್ನಾರನ್ನೂ ಉಪಾಸಿಸುವುದಿಲ್ಲ. ಇವರು ಯಮಳರಾದುದರಿಂದ ಒಬ್ಬರು ಮಧ್ಯಸ್ಥಾನವುಳ್ಳವರೂ, ಇನ್ನೊಬ್ಬರು ದ್ಯುಸ್ಥಾನವುಳ್ಳವರೆಂದು ನೈರುಕ್ತಸಿದ್ಧಾಂತ. ಹೀಗೆ ದ್ವಿಸ್ಥಾನವುಳ್ಳವರಾದುದರಿಂದ ಮೊದಲು ಅಶ್ವಿನೀದೇವತೆಗಳು ಪ್ರಾಪ್ತರಾಗುತ್ತಾರೆ. ಇವರಲ್ಲಿ ಒಬ್ಬೊಬ್ಬರಿಗೆ ಬೇರೆ ಸ್ತುತಿ ಇರುವುದಿಲ್ಲ. ಅತ್ಯಂತ ಅವಿಯೋಗವಿರುವುದರಿಂದ ಯಾವಾಗಲೂ ದ್ವಂದ್ವವಾಗಿಯೇ ಉಪಸ್ಥಿತರಾಗುತ್ತಾರೆ. ದ್ವಿಸ್ಥಾನದೇವತೆಗಳಾದರೂ ಆ ಸ್ತುತಿಕಾಲದಲ್ಲಿ ಮಧ್ಯಸ್ಥಾನಕ್ಕೆ ಹೀನಾವಸ್ಥೆಯೂ, ದ್ಯುಸ್ಥಾನಕ್ಕೆ ವರ್ಧಮಾನಾವಸ್ಥೆಯೂ ಇರುವುದರಿಂದ ದ್ಯುಸ್ಥಾನದೇವತಾ ರೂಪಾಂತರ ಸಂಸ್ಥಾನವೇ ಇರುತ್ತದೆ.

**ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ, ಜ್ಯೋತಿಷಾನ್ಯಃ ॥**

ಅಶ್ವಿನ್‌ಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಇವರಿಬ್ಬರೂ ಸಕಲ ಭುವನವನ್ನು ವ್ಯಾಪಿಸುತ್ತಾರೆ. ಇವರಲ್ಲಿ ಒಬ್ಬನು ಮಧ್ಯಮಸ್ಥಾನನಾಗಿ ಉದಕದಿಂದ ಸಕಲವನ್ನೂ ವ್ಯಾಪಿಸುತ್ತಾನೆ. ಇನ್ನೊಬ್ಬನು ದ್ಯುಸ್ಥಾನವುಳ್ಳವನಾಗಿ ತೇಜಸ್ಸಿನಿಂದ ಭುವನವನ್ನು ವ್ಯಾಪಿಸುತ್ತಾನೆ. ಹೀಗಿ ವ್ಯಾಪಿಸುತ್ತಾ ಯಾವಾಗಲೂ ದ್ವಂದ್ವರೂಪವಾಗಿರುವುದರಿಂದ ದ್ವಿವಚನಾಂತವಾಗಿಯೇ ಪ್ರಯೋಗವಿರುತ್ತದೆ.

**ಅಶ್ವೈರಶ್ವಿನಾವಿತ್ಯೌರ್ಣವಾಭಃ ॥**

ಅಶ್ವಗಳಿಂದ ಕೂಡಿದ ಸುಕೃತವನ್ನು ಮಾಡಿರುವ ರಾಜರೆಂದು ಔರ್ಣವಾಭರೆಂಬ ಆಚಾರ್ಯರು ತಿಳಿಯುತ್ತಾರೆ. ವ್ಯಾಪ್ತ್ಯರ್ಥಕ ಅಶೂಧಾತುವಿಗೆ ಕ್ವನ್ ಪ್ರತ್ಯಯದಿಂದ ಅಶ್ವ ಎಂದಾಗುತ್ತದೆ. ಅಶ್ವಶಬ್ದದ ಮೇಲೆ ಮತ್ವರ್ಥದಲ್ಲಿ ಇನ್ ಪ್ರತ್ಯಯ ಅಶ್ವೀ. ಇದೂ ನಿತ್ಯ ದ್ವಿವಚನಾಂತವೆಂದು ಅವರ ಮತ.

**ತತ್ಕಾವಶ್ವಿನೌ ? । ದ್ಯಾವ್ಯಾಪೃಥಿವ್ಯಾವಿತ್ಯೇಕೇ। ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಾಸಾವಿತ್ಯೇಕೇ। ಪುಣ್ಯಕೃತಾವಿತ್ಯೈತಿಹಾಸಿಕಾಃ ॥**

ಈ ಅಶ್ವಿನೀದೇವತೆಗಳು ಯಾರು ಎಂದು ವಿಚಾರ. ತೌ ಯೌ ಪ್ರತ್ಯಕ್ಷದೈವತಮಶ್ವಿನಾವಿಮೇ ಏವತೇ ದ್ಯಾವಾಪೃಥಿವ್ಯೌ ಎಂದು ಹೇಳಿರುವುದರಿಂದ ದ್ಯಾವಾಪೃಥಿವಿಗಳೆಂದು ಕೆಲವರ ಮತ. ಇವುಗಳಲ್ಲಿ ದ್ಯೌಃ ಎಂಬುದು ಜ್ಯೋತಿಸ್ಸಿನಿಂದಲೂ, ಪೃಥಿವಿಯು ಅನ್ನದಿಂದಲೂ ಸಕಲವನ್ನು ವ್ಯಾಪಿಸುತ್ತವೆ. ಹಗಲೂ ರಾತ್ರಿಗಳೆಂದು ಇನ್ನು ಕೆಲವರ ಮತ. ಹಗಲು ಬೆಳಕಿನಿಂದಲೂ ರಾತ್ರಿಯು ಹಿಮದಿಂದಲೂ ಸಕಲವನ್ನೂ ವ್ಯಾಪಿಸುತ್ತವೆ. ಇವರು ಸೂರ್ಯಚಂದ್ರರೆಂದು ಕೆಲವರ ಮತ. ಸೂರ್ಯನು ಪ್ರಕಾಶದಿಂದಲೂ, ಚಂದ್ರನು ರಸದಿಂದಲೂ ಸಕಲವನ್ನು ವ್ಯಾಪಿಸುತ್ತಾರೆ. ಇತಿಹಾಸಕುಶಲರು ಅಶ್ವಗಳಿಂದ ಕೂಡಿರುವ ಪುಣ್ಯವಂತರಾದ ರಾಜರೆಂದು ಅಂಗೀಕರಿಸಿರುತ್ತಾರೆ.

**ತಯೋಃ ಕಾಲ ಊರ್ಧ್ವಮರ್ಧರಾತ್ರಾತ್ಪ್ರಕಾಶೀ ಭಾವಸ್ಯಾನು ವಿಷ್ಟಂಭಂ। ಅನುತ್ತಮೋ ಭಾಗೋ ಹಿ ಮಧ್ಯಮಃ। ಜ್ಯೋತಿರ್ಭಾಗ ಆದಿತ್ಯಃ॥ ತಯೋರೇ ಷಾ ಭವತಿ ॥ ೧ ॥**

ಅರ್ಧರಾತ್ರಿಯಮೇಲೆ ಬೆಳಗಿನ ಪ್ರಕಾಶವುಂಟಾಗುವವರೆಗಿನ ಕಾಲವು ಇವರದ್ದಾಗಿರುತ್ತದೆ. ಅಲ್ಲಿ ಕತ್ತಲೆ ಪ್ರಕಾಶವನ್ನು ಆಕ್ರಮಿಸಿರುವವರೆಗಿನ ಕಾಲವು ಮಧ್ಯಮನಿಗೂ ಪ್ರಕಾಶವು ಕತ್ತಲೆಯನ್ನು ಪ್ರವೇಶಿಸಿರುವ ಕಾಲವು ಆದಿತ್ಯನಿಗೆಂದೂ ಸಿದ್ಧಾಂತ. ಹೀಗೆ ಮಧ್ಯಮೋತ್ತಮರೇ ಅಶ್ವಿನೀ ದೇವತೆಗಳೆಂದು ನಿರುಕ್ತಕಾರರ ಮತ. ಮುಂದೆ ಹೇಳುವ ಮಂತ್ರವು ಈ ಅಶ್ವಿನೀಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಮದ್ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ
ಒಂದನೆಯ ಖಂಡವು ಸಮಾಪ್ತವಾಗಿದೆ.

# ಅಥ ದ್ವಿತೀಯ ಖಂಡಃ

## ಎರಡನೆಯ ಖಂಡವು

ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ । ಕದೇದಮುಶ್ವಿನಾ ಯುುವಮುಭಿ ದೇವಾಂ ಅಗಚ್ಛತಮ್ ॥ ಇತಿ ಸಾ ನಿಗದವ್ಯಾಖ್ಯಾತಾ ತಯೋಃ ಸಮಾನಕಾಲಯೋಃ ಸಮಾನಕರ್ಮಣೋಃ ಸಂಸ್ತುತಪ್ರಾಯಯೋಃ ರಸಂಸ್ತವೇನೈಷೋಽರ್ಧರ್ಚೋ ಭವತಿ ವಾಸಾತ್ಯೋ ಅನ್ಯ ಉಚ್ಯತ ಉಷಃ ಪುತ್ರಸ್ತವಾನ್ಯ ಇತಿ ತಯೋರೇಷಾಽಪರಾ ಭವತಿ ॥ ೨ ॥

ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ । ಕದೇದಮುಶ್ವಿನಾ
ಯುವಮುಭಿದೇವಾಂ ಅಗಚ್ಛತಮ್ ॥

ಅಶ್ವಿನೀಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಅಶ್ವಿನೀ ದೇವತೆಗಳೇ ನೀವು ರಾತ್ರಿಗಳಲ್ಲಿ ತಿರುಗುತ್ತಿರುವಿರೇನು ? ಕಪ್ಪುಮೇಘಗಳಂತಿರುವ ನಿಮ್ಮನ್ನು ನಾನು ಪ್ರಾತಃಕಾಲದಲ್ಲಿ ನೋಡಿದೆನು ನೀವು ಈ ಯಜ್ಞಕ್ಕೆ ಇತರದೇವತೆಗಳೊಡನೆ ಯಾವಾಗ ಬಂದಿರಿ ?

ಇತಿ ಸಾ ನಿಗದವ್ಯಾಖ್ಯಾತಾ ॥

ಮಂತ್ರಾರ್ಥವು ಸುಲಭವಾದುದರಿಂದ ಪಾಠಮಾತ್ರದಿಂದಲೇ ವ್ಯಾಖ್ಯಾತವಾದಂತಿದೆಯೆಂದು ತಿಳಿಸುತ್ತಾರೆ. ಬೇರೆ ವ್ಯಾಖ್ಯಾನ ಮಾಡಬೇಕಾಗಿಲ್ಲವೆಂದು ತಾತ್ಪರ್ಯ.

ತಯೋಃ ಸಮಾನಕಾಲಯೋಃ ಸಮಾನಕರ್ಮಣೋಃ ಸಂಸ್ತುತ-
ಪ್ರಾಯಯೋರಸಂಸ್ತವೇನೈಷೋಽರ್ಧರ್ಚೋ ಭವತಿ ॥

ಇಬ್ಬರಿಗೂ ಅರ್ಧರಾತ್ರಿಯಮೇಲಿನ ಕಾಲವಾದುದರಿಂದ ಸಮಾನಕಾಲವೂ, ಒಂದೇಕರ್ಮವಾದುದರಿಂದ ಸಮಾನಕರ್ಮವೂ, ಅಧಿಕವಾದ ಪರಿಚಯವೂ ಇರುತ್ತದೆ. ಆದರೆ ಪೂರ್ವೋಕ್ತವಾದ ಅರ್ಧರ್ಚವು ಅಪರಿಚಯದಿಂದ ಸ್ತುತಿಸಿದೆ.

ವಾಸತ್ಯೋಽನ್ಯ ಉಚ್ಯತೇ ಉಷಃ ಪುತ್ರಸ್ತವಾನ್ಯ ಇತಿ ॥ ತಯೋ
ರೇಷಾಽಪರಾ ಭವತಿ ॥ ೨ ॥

ಪೂರ್ವೋದಾಹೃತ ಋಕ್ಕಿನಲ್ಲಿ 'ವಸಾತಿಷು ಸ್ಮ ಚರಥ' ಎಂದು ಹೇಳಿದೆ. ವಸತಿಯೆಂದರೆ ದೇಶ. ಆಗ ದೇಶಾಧಿಪತಿಗಳಾದ ಸುಕೃತಮಾಡಿರುವ ರಾಜರು ಕುದುರೆಯುಳ್ಳವರು ಎಂದು ಕಲ್ಪಿಸಲು ಸಾಧ್ಯವಿದೆ. ಇವರು ಯಜ್ಞಕರ್ಮದಲ್ಲಿ ದೇವತೆಗಳೊಡನೆ

ಬಂದಾಗ ಒಬ್ಬ ಋಷಿಯು ಹೇಳುತ್ತಾನೆ. ನೀವಿಬ್ಬರು ದೇಶದಲ್ಲಿ ಸಮಾನವೇಷವುಳ್ಳವರಾಗಿ ನಿತ್ಯವೂ ಸಂಚರಿಸುವಿರಿ. ಈಗ ದೇವತೆಗಳಿರುವ ಈ ಯಜ್ಞಕರ್ಮದಲ್ಲಿ ನೀವು ಹೇಗೆ ಬಂದಿರಿ ಎಂದು ಮಂತ್ರಾರ್ಥವನ್ನೂ ಹೇಳಬಹುದು. ಆದರೆ ಹೀಗೆ ಮಂತ್ರಾರ್ಥಯೋಜನೆ ಇರಬಾರದೆಂದು ತಿಳಿಸುತ್ತಾರೆ. ಇಲ್ಲಿ ಅಶ್ವಿನೀದೇವತೆಗಳೆಂದರೆ ಒಬ್ಬನು ಮಧ್ಯಮನಾದ ರಾತ್ರಿಯ ಪುತ್ರನು. ಇನ್ನೊಬ್ಬನು ಉಷಾದೇವತೆಯ ಮಗನಾದ ಸೂರ್ಯನು. ಇವರಲ್ಲದೆ ಅನ್ಯರು ಆಗಬಾರದು. ಸೂರ್ಯಸಾಹಚರ್ಯದಿಂದ ಮಧ್ಯಮನಾದ ರಾತ್ರಿಪುತ್ರನಲ್ಲದೆ ಬೇರೆ ಯಾರೂ ಆಗುವುದಿಲ್ಲ. ಮಧ್ಯಮೋತ್ತರೇ ಅಶ್ವಿನಿಯರು ಎಂದು ದೃಢಪಡಿಸಲು ಇನ್ನೊಂದು ಮಂತ್ರವನ್ನು ಮುಂದೆ ಉದಾಹರಿಸುತ್ತಾರೆ.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ಎರಡನೆಯ ಖಂಡವು ಸಮಾಪ್ತವಾಗಿದೆ.

# ಅಥ ತೃತೀಯ ಖಂಡಃ

## ಮೂರನೆಯ ಖಂಡವು

ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ । ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ (ಋ. ಸಂ. ೧-೧೮೧-೪) ॥ ಇಹ ಚೇಹ ಚ ಜಾತೌ ಸಂಸ್ತೂಯೇತೇ ಪಾಪೇನಾಲಿಪ್ಯಮಾನಾಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾಮನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋಽನ್ಯಃ ಸುಭಗಃ ಪುತ್ರ ಉಹ್ಯತ ಆದಿತ್ಯಸ್ತಯೋರೇಷಾಪರಾ ಭವತಿ ॥ ೩ ॥

ಇಹೇಹ ಜಾತಾ ಸಮವಾವಶೀತಾ ಮರೇಪಸಾ ತನ್ವಾ ನಾಮಭಿಃ ಸ್ವೈಃ।
ಜಿಷ್ಣುರ್ವಾಮನ್ಯಃ ಸುಮಸ್ಖಸ್ಯ ಸೂರಿರ್ದೀವೋ ಅನ್ಯ ಸುಭಗಃ ಪುತ್ರಊಹೇ॥
(ಋ. ಸಂ. ೨-೪-೨೫

ಅಶ್ವಿನೀ ಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಅಶ್ವಿನೀದೇವತೆಗಳೇ ನೀವು ಈ ಮಧ್ಯಮಸ್ಥಾನದಲ್ಲಿಯಾ ಉತ್ಪನ್ನರಾಗಿರುವಿರಿ. ಪಾಪರಹಿತವಾದ ಸಂಕಲ್ಪಿತ ಶರೀರದಿಂದಲೂ, ಸ್ತುತಿನಿಮಿತ್ತನಾಮಗಳಿಂದಲೂ ನೀವು ಸ್ತುತಿಸಲ್ಪಡುವಿರಿ. ನಿಮ್ಮಲ್ಲಿ ಒಬ್ಬನಾದ ರಾತ್ರಿಪುತ್ರನು ಜಯಶೀಲನಾಗಿ ಅಧಿಕ ಬಲಶಾಲಿಯಾಗಿ ಶತ್ರುನಾಶಕನಾಗಿರುತ್ತಾನೆ. ಇನ್ನೊಬ್ಬನಾದ ಉತ್ತಮನು ದ್ಯುಸ್ಥಾನನಾಗಿ ಶೋಭನರಶ್ಮಿರೂಪಧನವುಳ್ಳವನೆಂದು ಊಹಿಸಲ್ಪಡುತ್ತಾನೆ.

ಇಹ ಚೇಹ ಚ ಜಾತೌ ಸಂಸ್ತೂಯೇತೇ ಪಾಪೇನಾಲಿಪ್ಯಮಾ ನಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾಮನ್ಯಃ ಸುಮಹತೋ ಬಲಸ್ಯೇರ ಯಿತಾ ಮಧ್ಯಮೋ, ದಿವೋ ಅನ್ಯಃ ಸುಭಗಃ ಪುತ್ರ ಊಹ್ಯತೇ ಆದಿತ್ಯ ತಯೋರೇಷಾಪರಾ ಭವತಿ ॥ ೩ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬಲಕಾರ್ಯಹೇಳಿರುವುದರಿಂದ ಮೊದಲಿನವನು ಮಧ್ಯಮಸ್ಥಾನನೆಂದು ನಿಶ್ಚಿತವಾಗುತ್ತದೆ. ಮುಂದೆ ಹೇಳುವ ಮಂತ್ರವು ಈ ಅಶ್ವಿನೀದೇವತೆಗಳ ಸ್ತುತಿಯನ್ನು ಪ್ರತಿಪಾದಿಸುತ್ತದೆ. ಸಮಾನಕಾಲವುಳ್ಳವರೂ, ಸಮಾನ ಕಾರ್ಯವುಳ್ಳವರೂ, ಸಂಸ್ತುತಪ್ರಾಯರೂ ಎಂದು ಹಿಂದೆ ಹೇಳಿರುವುದನ್ನು ಸಮರ್ಥಿಸಲು ಪುನಃ ಈ ಮಂತ್ರ ಉಪಾತ್ತವಾಗಿದೆ.

ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।
ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥

ಮಧ್ಯಮಲೋಕವಾದ ಅಂತರಿಕ್ಷ ಮತ್ತು ಉತ್ತಮಲೋಕನಾದ ಸ್ವರ್ಗಲೋಕ, ಇವುಗಳಲ್ಲಿ ಜನಿಸಿದವರೂ, ನಿರ್ದುಷ್ಟವಾದ ಶರೀರವುಳ್ಳವರೂ, ನಾಸತ್ಯದಸ್ರಾದಿ ನಿರ್ದುಷ್ಟನಾಮವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಮಿಳಿತರಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ (ಯಜ್ಞಗಮನೇಚ್ಛುಗಳಾಗುತ್ತೀರಿ); ಮಧ್ಯಲೋಕದವನೂ, ಜಯಶೀಲನೂ, ಓಷಧ್ಯಾದ್ಯಭಿವೃದ್ಧಿದ್ವಾರಾ ಯಜ್ಞಪ್ರೇರಕನೂ ಆದ ಚಂದ್ರರೂಪನಾಗಿ ಒಬ್ಬನೂ, ಉತ್ತಮಲೋಕವಾದ ದ್ಯುಲೋಕಕ್ಕೆ ಪುತ್ರಸ್ಥಾನೀಯನೂ, ರಶ್ಮಿದ್ವಾರಾ ಜಗದಭಿವೃದ್ಧಿಕಾರಕನೂ ಆದ ಸೂರ್ಯರೂಪನಾಗಿ ಮತ್ತೊಬ್ಬನೂ, ಈ ರೀತಿ ನೀವಿಬ್ಬರೂ ಈ ಪ್ರಪಂಚವನ್ನು ರಕ್ಷಿಸುತ್ತೀರಿ.

ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ । ಎಂಬ ವಾಕ್ಯದಲ್ಲಿ ಅಶ್ವಿನೀ ದೇವತೆಗಳ ವೈಯುಕ್ತಿಕವಾದ ಸ್ವರೂಪ ಮತ್ತು ಕಾರ್ಯನಿರ್ವಹಣೆಯನ್ನು ತೋರಿಸಿದೆ. ಅವರ ವೈಯಕ್ತಿಕವಾದ ಸ್ವರೂಪವನ್ನು ನಿಸ್ಸೃಷ್ಟವಾಗಿ ಹೀಗೆಯೇ ಎಂದು ವಿವರಿಸಲು ಸುಲಭಸಾಧ್ಯವಲ್ಲ. ಆದರೂ ಶ್ರುತಿ ವಾಕ್ಯಗಳ ಆಧಾರದ ಮೇಲೂ ವೈದಿಕಸಂಪ್ರದಾಯವನ್ನನುಸರಿಸುವ ಪಂಡಿತರ ಅಭಿಪ್ರಾಯದ ಮೇಲೂ ಮತ್ತು ಆಂಗ್ಲವಿಮರ್ಶಕರನ್ನು ದಾಹರಿಸಿಯೂ ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿರುವ ಭಾವವನ್ನು ಯಥಾಶಕ್ತಿ ವಿಮರ್ಶಿಸಲಾಗುತ್ತದೆ.

"ನಾಸತ್ಯಾದಿ ನಿರ್ದುಷ್ಟವಾದ ನಾಮವುಳ್ಳ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಮಿಳಿತರಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ. ಮಧ್ಯಲೋಕದವನೂ, ಜಯಶೀಲನೂ, ಓಷಧ್ಯಾದ್ಯಭಿವೃದ್ಧಿದ್ವಾರಾ ಯಜ್ಞಪ್ರೇರಕನೂ ಆದ ಚಂದ್ರ ರೂಪನಾಗಿ ಒಬ್ಬನೂ, ಉತ್ತಮ ಲೋಕವಾದ ದ್ಯುಲೋಕಕ್ಕೆ ಪುತ್ರಸ್ಥಾನೀಯನೂ, ರಶ್ಮಿದ್ವಾರಾ ಜಗದಭಿವೃದ್ಧಿಕಾರಕನೂ ಆದ ಸೂರ್ಯರೂಪನಾಗಿ ಮತ್ತೊಬ್ಬನೂ ಈ ಪ್ರಪಂಚವನ್ನು ರಕ್ಷಿಸುತ್ತೀರಿ" ಎಂದು ಅವರ ವೈಯಕ್ತಿಕವಾದ ಸ್ವರೂಪವನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ. ಪ್ರಕೃತವಾದ ಋಕ್ಕಿಗೆ ನಿರುಕ್ತದಲ್ಲಿ ಈ ರೀತಿ ವಿವರಣೆಯಿದೆ.

ಇಹ ಚೇಹ ಚ ಜಾತೌ ಸಂಸ್ತೂಯತೇ ಪಾಪೇನಾಲಿಪ್ಯಮಾನಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾ- ಮನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋ ಅನ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ ॥

(ನಿ. ೧೨-೩)

Born here and there, they two are praised together with reference to a body unstained by sin and to their own names. One of you two is the Victor, the furtherer of very greate strength, i.e, belongs to the middle region; the other is considered the blessed son of heaven, i.e, the Sun. ಈ ವಾಕ್ಯಗಳ ಅರ್ಥವು ಮೇಲೆ ಹೇಳಿರುವುದೇ ಆಗಿದೆ. ಹೀಗೆ ಸೂರ್ಯರೂಪನಾಗಿ ಒಬ್ಬನೂ ಮತ್ತು ಚಂದ್ರರೂಪನಾಗಿ ಇನ್ನೊಬ್ಬನೂ ಲೋಕರಕ್ಷಕರಾಗಿದ್ದಾರೆ ಎಂಬುದೇ ಈ ಋಕ್ಕಿನ ತಾತ್ಪರ್ಯವು. ಆದರೆ ಕೆಲವೆಡೆಗಳಲ್ಲಿ ಬೇರೆ ವಿಧವಾಗಿಯೂ ಸಹ ಸ್ತುತರಾಗಿದ್ದಾರೆ; ಆದ್ದರಿಂದಲೇ ನಿರುಕ್ತಕಾರರೂ ಸಹ ಈ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡದೆ, ಮತಾಂತರಗಳನ್ನು ತಿಳಿಸಿದ್ದಾರೆ. ಅದು ಈ ಪ್ರಕಾರವಾಗಿದೆ.

> ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ॥ (ನಿ. ೧೨-೧)

ಈ ದೇವತೆಗಳಲ್ಲಿ ಒಬ್ಬನು ಉದಕದಿಂದಲೂ ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು, ಎಂದು ಒಂದು ಮತ. ಅಶ್ವಗಳಿಂದ ಯುಕ್ತರಾದುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಔರ್ಣವಾಭರ ಮತ. ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು ಮತ್ತೆ ಕೆಲವರು ಇವರನ್ನೇ ಅಹೋರಾತ್ರಗಳೆಂದು ಹೇಳುವರು. ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯಾಚಂದ್ರಮಸ್ಸುಗಳಾಗಿರುವರು. ಐತಿಹಾಸಿಕಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದಿರುವರು ಎಂದಾಗುತ್ತದೆ. ಹೀಗೆ ಮತಭೇದಗಳನ್ನು ತಿಳಿಸಿ ಋಕ್ಸಂಹಿತೆಯಿಂದ ಪ್ರಕೃತವಾದ ಋಕ್ಕನ್ನೂ (೧-೧೮೧೪) ಮತ್ತು ಅನಿರ್ದಿಷ್ಟವಾದ ಇನ್ನೊಂದು ಮಂತ್ರವನ್ನೂ ಉದಾಹರಿಸಿ ಈ ವಿಷಯದಲ್ಲಿರುವ ವಿಪ್ರತಿಪತ್ತಿಯನ್ನು ತಿಳಿಸಿರುವರು. ಮೊದಲನೆಯದಾಗಿ

> ವಸಾತಿಷು ಸ್ಮ ಚರಥೋಽಸಿತಾ ಪೇತ್ವಾವಿವ ।
> ಕದೇದಮಶ್ವಿನಾ ಯುವಮಭಿ ದೇವಾ ಅಗಚ್ಛತಂ ॥

ಎಂಬ ಮಂತ್ರದಲ್ಲಿ ಹೇಳಿರುವಂತೆ, ಇವರಲ್ಲಿ ಒಬ್ಬನು ವಸಾತಿಪುತ್ರನು ಎಂದರೆ ರಾತ್ರಿಪುತ್ರನು; ಇನ್ನೊಬ್ಬನು ಉಷಃಪುತ್ರನು ಎಂದಾಗುತ್ತದೆ. ಎಂದು ಹೇಳಿ ಅನಂತರ ಪ್ರಕೃತವಾದ ಋಕ್ಕನ್ನುದಾಹರಿಸಿ ಮೇಲೆ ತಿಳಿಸಿರುವಂತೆ ವಿವರಿಸುತ್ತಾರೆ. Mecdonell ಎಂಬ ಪಂಡಿತನು ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾ ಈ ರೀತಿ ಹೇಳಿದ್ದಾನೆ.

"Though they (ಅಶ್ವಿನಿ) hold a distinct position among the Deities of light and their appellation is Indian, their connection with any definite Phenomena of light is so obscure that their original nature is to Puzzle to the Vedic interpreters from the earliest time."

[Vedic Mythology. P. 49]

ವೈದಿಕ ಮತ್ತು ಆಧುನಿಕ ಆಂಗ್ಲ ಪಂಡಿತರುಗಳ ಅಭಿಪ್ರಾಯಗಳನ್ನು ಕ್ರೋಡೀಕರಿಸಿದರೆ ಈ ಅಭಿಪ್ರಾಯಗಳು ಕಂಡು ಬರುತ್ತವೆ—

| Seholars | Their opinions |
|---|---|
| Yaska .... | .... Twilight before Dawn, half dark ahd half light. |

| | |
|---|---|
| Aurnavabha .... | .... Light rays. |
| Oldenberg .... | .... Morning or evening star. |
| Macdonell .... | .... Twilight or Morning stars. |
| Bloomfield .... | .... Morning or evening stars. |
| Hopekins .... | .... Transition from drakness to light. |
| Bergaine .... | .... Fire of heaven and of the altar. |
| ಐತಿಹಾಸಿಕಾಃ .... | .... Two pious kings. |
| E. N. Ghosh .... | .... Two stars of Asvini. (Aries) |
| Weber .. | .... Twin constellation of Gemini. |
| Shama Shastry | .... The Suu and the Moon. |
| Max Muller ... | .... Personification of Morning and evening. |

Dr. ಶ್ಯಾಮಶಾಸ್ತ್ರಿಗಳು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು Mythic Society journal ನಲ್ಲಿ (Vol. XX. No. 2. P. 80 - 88) ವಿಶದವಾಗಿ ತಿಳಿಸಿದ್ದಾರೆ, ಮತ್ತು ಇವರು ಸೂರ್ಯಾಚಂದ್ರಮಸ್ಸುಗಳೇ ಅಲ್ಲದೆ ಬೇರೆ ಯಾರೂ ಅಲ್ಲವೆಂಬ ವಿಷಯವನ್ನೂ ಸಮರ್ಥಿಸಿದ್ದಾರೆ. ಋಕ್ಸಂಹಿತಾವಾಕ್ಯಗಳಲ್ಲಿರುವ ವಿವರಣೆಗಳಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ನಿಷ್ಕರ್ಷಿಸುವುದಾದರೆ, ಕೆಳಗೆ ಉದಾಹರಿಸಿರುವ ಆಧಾರಗಳನ್ನು ವಿಮರ್ಶಿಸಬಹುದು.

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥
ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥

(ಋ ಸಂ. ೧೦-೧೭-೧ ರಿಂದ ೨)

ತ್ವಷ್ಟೃವು ತನ್ನ ಮಗಳ ವಿವಾಹದ ಕಾಲದಲ್ಲಿ ಸಕಲ ಪ್ರಪಂಚವೂ ಒಟ್ಟಿಗೆ ಸೇರಿ ಕಲೆಯಲಿ ಎಂದುದ್ದೇಶಿಸಿದನು. ಯಮನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಅವಳು ವಿವಾಹವಾದನಂತರವೇ ಅದೃಶ್ಯಳಾದಳು. ಎಂದರೆ, ಅವರು ಅಮರ್ತ್ಯಳಾದ ಅವಳನ್ನು ಮರ್ತ್ಯರ ದೃಷ್ಟಿಗೆ ಗೋಚರವಾಗದಂತೆ ಮರೆಸಿ ಇಟ್ಟರು. ಆಗ ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು. ಆನಂತರ ಅವಳು ಅಶ್ವಿನೀದೇವತೆಗಳನ್ನು ಹಡೆದಳು. ಸರಣ್ಯುವೆಂಬ ಹೆಸರಿನಿಂದ ಪ್ರಸಿದ್ಧಳಾದ ಅವಳು ಅಶ್ವಿನೀದೇವತೆಗಳನ್ನು ತನ್ನ ಪುತ್ರರನ್ನಾಗಿ ಬಿಟ್ಟುಹೋದಳು ಎಂದು ಮೇಲ್ಕಂಡ ಋಕ್ಕುಗಳ ಅಭಿಪ್ರಾಯವಾಗಿದೆ. ಮತ್ತು,

ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।
ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥

(ಋ. ಸಂ. ೩-೩೯-೩)

ಯಮಳರ (ಎಂದರೆ ಅಶ್ವಿನೀದೇವತೆಗಳ) ಮಾತೆಯು ಯಮಳರನ್ನು ಹಡೆದಳು. ಆ ಯಮಳರಿಬ್ಬರೂ ಸಹ ಸಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ. Max Muller ಎಂಬ ಪಂಡಿತನು ಈ ಋಕ್ಕನ್ನುದಹರಿಸಿ ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ಹೇಳಿದ್ದಾನೆ.

"We might have guessed from the text itself, even without the help of the Commentator, that 'the mother of the twins' here spoken of is Dawn : but it may be stated that the commentator, too, adopts this view".

(Science of Language. Vol. II. P. 530)

ಎಂದರೆ ಸಾಯಣರು ತಮ್ಮ ಭಾಷ್ಯದಲ್ಲಿ **ಯಮಸೂಃ** ಎಂಬ ಪದಕ್ಕೆ **ಉಷೋಽಭಿಮಾನಿನೀ ದೇವತಾ (ಅತ್ರ ಉಷಃ ಕಾಲೇ ಅಸೂತ)** ಎಂದು ಅಶ್ವಿನೀ ದೇವತೆಗಳ ಮಾತೆಯು ಉಷೋದೇವತೆಯೆಂದು ಹೇಳಿರುವುದು ಸರ್ವಸಮ್ಮತವಾಗಿದೆ ಯೆಂದು ಈ ಪಂಡಿತನು ಹೇಳಿದ್ದಾನೆ. ಅಲ್ಲದೇ ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟುದೂ ಅವರಿಂದ ಅಶ್ವಿನೀದೇವತೆಗಳು ಉತ್ಪನ್ನರಾದುದೂ ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ—

**ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ |**
**ಸ ವೈ ಸರಣ್ಯೂಂ ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ ||**
**ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ |**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ||**
**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ |**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ||**
**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ |**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ||**
**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ |**
**ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ||**
**ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ |**
**ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ||**
**ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ |**
**ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ||**
**ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ |**
**ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ||**
**ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವ್ಯೃಚೇ |**
**ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸಹ ಮನ್ಯತೇ ||**

(ಬೃ. ದೇ. ೬-೧೬೨ರಿಂದ ೭-೭)

ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟನು. ಅವಳು ಯಮ ಮತ್ತು ಯಮೀ ಎಂಬಿಬ್ಬರು ಯಮಳರನ್ನು ಹಡೆದಳು. ಸರಣ್ಯುವು ತನ್ನಂತೆಯೇ ಬೇರೊಂದು ಸ್ತ್ರೀರೂಪವನ್ನು ಸೃಷ್ಟಿಸಿ ತನ್ನ ಪತಿಗೆ ತಿಳಿಯದಂತೆ

ತನ್ನಿಬ್ಬರು ಮಕ್ಕಳ ರಕ್ಷಣೆಯನ್ನೂ ಅವಳಿಗೆ ವಹಿಸಿ ತಾನು ಒಂದು ಹೆಣ್ಣು ಅಶ್ವದ ರೂಪವನ್ನು ತಾಳಿದಳು. ಈ ರಹಸ್ಯವನ್ನು ತಿಳಿಯದೇ ವಿವಸ್ವಂತನು ಸರಣ್ಯುವಿನಿಂದ ಸೃಷ್ಟಳಾದ ಆ ಸ್ತ್ರೀಯಲ್ಲಿ ರಮಿಸಿ ಮನುವನ್ನು ಉತ್ಪನ್ನವಾಗುವಂತೆ ಮಾಡಿದನು. ಒಡನೆಯೇ ಅವಳು ಸರಣ್ಯುವಲ್ಲವೆಂದು ತಿಳಿದು ನಿಜವಾದ ಸರಣ್ಯುವನ್ನು ಹುಡುಕಿಕೊಂಡು ಹೊರಟನು. ಮತ್ತು ತಾನೂ ಪುರುಷಾಶ್ವದ ರೂಪವನ್ನು ಪಡೆದನು. ಆ ರೂಪವನ್ನು ನೋಡಿ ಅವಳೂ ಮೋಹಗೊಂಡು ಅವನ ಸಂಭೋಗಕ್ಕಾಶಿಸಿದಳು. ಆಗ ಅವನ ರೇತಸ್ಸಿನ ಪ್ರಭಾವದಿಂದ ನಾಸತ್ಯ ಮತ್ತು ದಸ್ರ ಎಂಬಿಬ್ಬರು ಪುತ್ರರು ಜನಿಸಿದರು. ಅವರೇ ಅಶ್ವಿನೀದೇವತೆಗಳು ಎಂಬ ಕಥೆಯು ವರ್ಣಿತವಾಗಿದೆ. ಇದೇ ಕಥೆಯು ಹರಿವಂಶದಲ್ಲಿಯೂ ಇದೇ ರೀತಿ ಹೇಳಲ್ಪಟ್ಟಿದೆ. ಅದು ಪೌರಾಣಿಕ ಸಂಪ್ರದಾಯವನ್ನನುಸರಿಸಿರುವುದರಿಂದಲೂ, ಪ್ರಕೃತವಾದ ವಿವರಣೆಗಳಲ್ಲೆಲ್ಲಾ ನಾವು ಕೇವಲ ವೈದಿಕವಾಕ್ಯಗಳ ಆಧಾರದ ಮೇಲೆಯೇ ವಿಮರ್ಶೆಯನ್ನು ಮಾಡುತ್ತಿರುವುದರಿಂದಲೂ ಹರಿವಂಶದ ವಿವರಣೆಯು ಈಗ ಅಪ್ರಕೃತವಾಗಿದೆ. ಮೇಲೆ ವಿವರಿಸಿರುವಂತೆ, ಅಶ್ವಿನೀದೇವತೆಗಳ ಉತ್ಪತ್ತಿಕ್ರಮವನ್ನು ಈ ರೀತಿ ತೋರಿಸಬಹುದು.




ಮತ್ತು
೧. ತ್ರಿಶಿರಾ ಮತ್ತು ಸರಣ್ಯುವೂ
೨. ಯಮ ಮತ್ತು ಯಮಿಯೂ
೩. ನಾಸತ್ಯ ಮತ್ತು ದಸ್ರನೂ ಸಹ
ಯಮಳರು.

ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವಂತೆ ಈ ಇಬ್ಬರೂ ಎರಡು ತೇಜೋರೂಪಗಳು ಎಂದಿರುವ ವಿಷಯವನ್ನು ಬೇರೆ ಕಡೆ ಬೇರೊಂದು ರೂಪದಲ್ಲಿ ವರ್ಣಿತವಾಗಿದೆ.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾಗಿದೆ.

---

# ಅಥ ಚತುರ್ಥಃ ಖಂಡಃ

## ನಾಲ್ಕನೆಯ ಖಂಡವು

ಪ್ರಾತರ್ಯುಜಾ ವಿಬೋಧಯಾಶ್ವಿನಾವೇಹ ಗಚ್ಛತಾಂ । ಅಸ್ಯ ಸೋಮಸ್ಯ ಪೀತಯೇ ॥ (ಋ. ಸಂ. ೧-೨೧-೧) ॥ ಪ್ರಾತರ್ಯೋಗಿನೌ ವಿಬೋಧಯಾಶ್ವಿನಾವಿಹಾ-ಗಚ್ಛತಾಮಸ್ಯ ಸೋಮಸ್ಯ ಪಾನಾಯ ತಯೋರೇಷಾಪರಾ ಭವತಿ ॥ ೪ ॥

ಪ್ರಾತರ್ಯುಜಾ ವಿಬೋಧಯಾಶ್ವಿನಾವೇಹ ಗಚ್ಛತಾಂ ।
ಅಸ್ಯ ಸೋಮಸ್ಯ ಪೀತಯೇ ॥

(ಋ. ಸಂ. ೮-೨-೪)

ಅಶ್ವಿನೀದೇವತೆಗಳ ಮಾನಕಾರ್ಯಾದಿಗಳನ್ನು ವ್ಯಕ್ತಪಡಿಸುವ ಮಂತ್ರವನ್ನು ಉದಾಹರಿಸುಸ್ತಾರೆ. ಸ್ತುತಿಪಾಠಕರೇ ಪ್ರಾತಃ ಕಾಲದಲ್ಲಿ ನಿತ್ಯವೂ ಹವಿಸ್ಸು ಸ್ತುತ್ಯಾದಿಗಳಿಂದ ಸೇವಿಸಲ್ಪಡುವ ಅಶ್ವೀನಿದೇವತೆಗಳನ್ನು ಸ್ಪಷ್ಟಸ್ತುತಿಗಳಿಂದ ತಿಳಿಸಿ ನಮ್ಮ ಕಾರ್ಯವನ್ನು ಮಾಡಿಸಿರಿ. ಅವರು ಕಾರ್ಯವನ್ನು ತಿಳಿದು ಈ ನಮ್ಮ ಕರ್ಮದಲ್ಲಿ ಅವರಿಗೋಸ್ಕರ ಸಿದ್ಧಪಡಿಸಿದ ಸೋಮಪಾನ ಕ್ಕೋಸ್ಕರ ಬರಲಿ.

ಪ್ರಾತರ್ಯೋಗಿನೌ ವಿಬೋಧಯಾಶ್ವಿನಾವಿಹಾಗಚ್ಛತಾಮಸ್ಯ ಸೋಮಸ್ಯ
ಪಾನಾಯ । ತಯೋರೇಷಾಪರಾ ಭವತಿ ॥ ೪ ॥

ಮಂತ್ರಾರ್ಥವನ್ನು ವಿವರಿಸುತ್ತಾ ಪೂರ್ವಾರ್ಥವನ್ನೇ ಸ್ಪಷ್ಟಪಡಿಸಲು ಮುಂದೆ ಹೇಳುವ ಮಂತ್ರವು ಅಶ್ವಿನೀಸ್ತುತಿಯನ್ನು ಪ್ರತಿಪಾದಿಸುತ್ತದೆ. ಇತರಕಾಲದಲ್ಲಿ ಇವರ ಪೂಜೆ ಇರುವುದಿಲ್ಲ. ಹಾಗೆ ಕಾಲಾತಿಕ್ರಮದಿಂದ ಮಾಡಿದರೂ ಅದು ಪೂಜೆಯೇ ಆಗುವುದಿಲ್ಲವೆಂದು ಸ್ಪಷ್ಟಪಡಿಸಲು ಪುನಃ ಉದಾಹೃತವಾಗಿದೆ.

ಪ್ರಾತರ್ಯುಜಾ ವಿ ಬೋಧಯಾಶ್ವಿನಾವೇಹ ಗಚ್ಛತಾಮ್ ।
ಅಸ್ಯ ಸೋಮಸ್ಯ ಪೀತಯೇ ॥ ೧ ॥

ಪ್ರಾತಃಸವನಕ್ಕೆ ಅವಶ್ಯಕರಾದ ಅಶ್ವಿನೀದೇವತೆಗಳನ್ನು, ಎಲೈ ಅಧ್ವರ್ಯುವೇ, ಪ್ರಬುದ್ಧರನ್ನಾಗಿ ಮಾಡು. (ಎಬ್ಬಿಸು) ಪ್ರಬುದ್ಧರಾಗಿ ಅವರು ಇಲ್ಲಿಗೆ ಬಂದು, ಸಂಸ್ಕಾರಮಾಡಿರುವ ಸೋಮರಸವನ್ನು ಪಾನಮಾಡಲಿ.

ಈ ಋಕ್ಕಿನ ಪೂರ್ವಾರ್ಧವು ಅಧ್ವರ್ಯುವೆಂಬ ಋತ್ವಿಕ್ಕನ್ನು ಉದ್ದೇಶಿಸಿ ಹೇಳಿರುವುದು.

ಪ್ರಾತರ್ಯುಜಾ— ಪ್ರಾತಃಸವನಗ್ರಹೇಣ ಸಂಯುಕ್ತೌ ॥ ಪ್ರಾತಸ್ಸವನಕಾಲದಲ್ಲಿ ಅಶ್ವಿನಕ್ರತುಸಂಬಂಧವಾದ ಸೋಮಪಾನಗ್ರಹಣಾರ್ಥವಾಗಿ ಸಿದ್ಧರಾಗುವಂತೆ ಎಂಬರ್ಥವನ್ನು ಭಾಷ್ಯಕಾರರು ಹೇಳಿರುವರು. ಸ್ಕಂದಸ್ವಾಮಿಯ ಅಭಿಪ್ರಾಯವೂ ಇದೇ ರೀತಿ ಇರುವುದು. ಆದರೆ ವೇದಾರ್ಥಯತ್ನಕಾರರು ಪ್ರಾತರ್ಯುಜಾ–ಪ್ರಾತಃಕಾಲೇ ಅಶ್ವೌರಥೇ ಯೋಜಯಂತೌ– ಪ್ರಾತಃಕಾಲದಲ್ಲಿ ಯಜ್ಞವೇದಿಕೆಗೆ ಬರುವುದಕ್ಕಾಗಿ ತಮ್ಮ ಅಶ್ವಗಳನ್ನು ರಥಕ್ಕೆ ಕಟ್ಟಿ ಸಿದ್ಧಪಡಿಸುತ್ತಿರುವ ಎಂಬರ್ಥವನ್ನು ಹೇಳಿರುವರು. ಇಲ್ಲಿ ರಥವೆಂಬ ಶಬ್ದವಾಗಲೀ ಅಶ್ವಶಬ್ದವಾಗಲೀ ಇಲ್ಲದಿರುವುದರಿಂದಲೂ ವಿಬೋಧಯ—ಎಚ್ಚರಗೊಳಿಸು ಎಂಬ ಶಬ್ದವಿರುವುದರಿಂದಲೂ, ಶಯ್ಯಾದಿಗಳಿಂದ ಎದ್ದು ರಥಕ್ಕೆ ಕುದುರೆಗಳನ್ನು ಕಟ್ಟುತ್ತಿರುವವರನ್ನು ಮತ್ತೆ ಎಚ್ಚರಗೊಳಿಸುವುದು ಎಂಬುವುದು ಅಸಂಭವವಾದುದ್ದರಿಂದ ಈ ಅರ್ಥವು ಸ್ವೀಕಾರಾರ್ಹವಲ್ಲ. ಸಾಯಣರ ಮತ್ತು ಸ್ಕಂದಸ್ವಾಮಿಯ ಅರ್ಥವೇ ಸಮಂಜಸವಾಗಿರುವುದು.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ನಾಲ್ಕನೆಯ ಖಂಡವು ಸಮಾಪ್ತವಾಗಿದೆ.

## ಅಥ ಪಂಚಮಃ ಖಂಡಃ

## ಐದನೆಯ ಖಂಡವು

ಪ್ರಾತರ್ಯುಜಧ್ವಮಶ್ವಿನಾ ಹಿನೋತ ನ ಸಾಯಮಸ್ತಿ ದೇವಯಾ ಅಜುಷ್ಟಂ। ಉತಾನ್ಯೋ ಅಸ್ಮದ್ಯಜತೇ ವಿ ಚಾವಃ ಪೂರ್ವಃ ಪೂರ್ವೋ ಯಜಮಾನೋ ವನೀಯಾನ್ (ಋ. ಸಂ. ೫-೭೭-೨) ಪ್ರಾತರ್ಯುಜಧ್ವಮಶ್ವಿನೌ ಪ್ರಹಿಣುತ ನ ಸಾಯಮಸ್ತಿ ದೇವೇಜ್ಯಾ ಅಜುಷ್ಟಮೇತದಪ್ಯನ್ಯೋಽಸ್ಮದ್ಯಜತೇ ವಿ ಚಾವಃ ಪೂರ್ವೋ ಯಜಮಾನೋ ವನೀಯಾನ್ವನಯಿತೃತಮಸ್ತಯೋಃ ಕಾಲಃ ಸೂರ್ಯೋದಯಪರ್ಯಂತಸ್ತಸ್ಮಿನ್ನನ್ಯಾ ದೇವತಾ ಓಪ್ಯಂತ ಉಷಾ ವಷ್ಟೇಃ ಕಾಂತಿಕರ್ಮಣ ಉಚ್ಛತೇರಿತರಾ ಮಾಧ್ಯಮಿಕಾ ತಸ್ಯಾ ಏಷಾ ಭವತಿ ॥ ೫ ॥

ಪ್ರಾತರ್ಯುಜಧ್ವಮಶ್ವಿನಾ ಹಿನೋತ ನ ಸಾಯಮಸ್ತಿ ದೇವಯಾ ಅಜುಷ್ಟಮ್ । ಉತಾನ್ಯೋ ಅಸ್ಮದ್ಯಜತೇ ವಿ ಚಾವಃ ಪೂರ್ವಃ ಪೂರ್ವೋ ಯಜಮಾನೋ ವನೀಯಾನ್ ॥

(ಋಂ. ಸಂ. ೪–೪–೧೮)

ಅಶ್ವಿನೀದೇವತೆಗಳ ಏಕಕಾಲಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಸ್ತುತಿಪಾಠಕರೇ ನೀವು ಈ ಅಶ್ವಿನೀದೇವತೆಗಳನ್ನು ಪ್ರಾತಃಕಾಲದಲ್ಲಿಯೇ ಸ್ತುತಿಸಿರಿ. ಅವರಿಗೆ ಹವಿಸ್ಸನ್ನು ನಿವೇದಿಸಿರಿ. ಸಾಯಂಕಾಲದಲ್ಲಿ ದೇವತೆಗಳಿಗೆ ಕೊಡುವ ಹವಿಸ್ಸಿರುವುದಿಲ್ಲ. ಅವರು ಅದನ್ನು ಸ್ವೀಕರಿಸುವುದೂ ಇಲ್ಲ. ಹಾಗೆ ಸ್ತುತಿಸಿದರೂ ಅದು ಅಶ್ವಿನೀದೇವತೆಗಳಿಂದ ಅಂಗಿಕರಿಸುವುದೂ ಇಲ್ಲ. ಆದುದರಿಂದ ವಿಲಂಬಿತವಾಗುವುದಾದರೆ ಇನ್ನೊಬ್ಬನು ಪೂಜಿಸಲಿ. ಸೋಮದಿಂದ ತೃಪ್ತಿಪಡಿಸಲಿ.

ಪ್ರಾತರ್ಯಜಧ್ವಮಶ್ವಿನಾ ಪ್ರಹಿಣುತ, ನ ಸಾಯಮಸ್ತಿ ದೇವಯಾ
ಅಜುಷ್ಟಮೇತತ್ | ಅಪ್ಯನ್ಯೋ ಅಸ್ಮದ್ಯಜತೇ ವಿ ಚಾವಃ ಪೂರ್ವಃ
ಪೂರ್ವೋ ಯಜಮಾನೋ ವನೀಯಾನ್ವನಯಿತೃತಮಃ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಾಯಂಕಾಲದಲ್ಲಿ ಈ ದೇವತೆಗಳನ್ನು ಪೂಜಿಸಿದರೂ ಅದು ಪೂಜಿಸದಂತೆಯೇ ಆಗುತ್ತದೆ. ಆದುದರಿಂದ ಪೂರ್ವ ಪೂರ್ವದಲ್ಲಿ ಯಾರು ಸೇವಿಸುವರೋ ಅವರು ಅಧಿಕದೇವತಾಪ್ರೀತಿಯನ್ನು ಗಳಿಸುತ್ತಾರೆ.

ತಯೋಃ ಕಾಲಃ ಸೂರ್ಯೋದಯಪರ್ಯಂತಃ | ತಸ್ಮಿನ್ನನ್ಯಾ ದೇವತಾ
ಓಪ್ಯಂತೇ ||

ಬೆಳಗಿನ ಜಾವದಿಂದ ಪ್ರಕಾಶವುಂಟಾಗುವವರೆಗಿನ ಅಂದರೆ ಸೂರ್ಯೋದಯ ಪರ್ಯಂತವಾದ ಕಾಲವು ಅಶ್ವನೀದೇವತೆಗಳ ಕಾಲವೆಂದು ಹಿಂದೆ ಹೇಳಿದೆ. ಅದರ ಮೇಲೆ ಯಾಗಕಾಲ ಪ್ರಾಪ್ತವಾಗುತ್ತದೆ ಈ ಸ್ತುತಿಕಾಲದಲ್ಲಿ ಆಶ್ವಿನಶಸ್ತ್ರದಲ್ಲಿ ಸ್ತುತಿ ಹೊಂದುವ ಇತರದೇವತೆಗಳೂ ಸಂಬದ್ಧರಾಗುತ್ತಾರೆ. ತತ್ಕಾಲಸ್ತುತಿಯಲ್ಲಿ ಅವರೂ ಸೇರುತ್ತಾರೆಂದರ್ಥ.

ಉಷಾಃ ವಷ್ಟೇಃ ಕಾಂತಿಕರ್ಮಣಃ | ಉಚ್ಛತೇರಿತರಾ ಮಾಧ್ಯಮಿಕಾ ತಸ್ಯಾ
ಏಷಾ ಭವತಿ || ೫ ||

ಇತರದೇವತಾಸ್ತುತಿಕಾಲದಲ್ಲಿ ಉಷಾದೇವಿಯು ಮೊದಲು ಉಪಸ್ಥಿತವಾಗುವುದರಿಂದ ಉಷಾದೇವತಾಕಸೂಕ್ತವು ಮೊದಲು ಸ್ತುತ್ಯರ್ಹವಾಗುತ್ತದೆ. ಕಾಂತ್ಯರ್ಥಕವಾದ ವಶಧಾತುವಿಗೆ ಕಸುನ್ಪ್ರತ್ಯಯ ಬಂದಾಗ ವಕಾರಕ್ಕೆ ಸಂಪ್ರಸಾರಣ (ಉಕಾರ) ವ್ಯತ್ಯಯದಿಂದ ಶಕಾರಕ್ಕೆ ಷಕಾರಾದೇಶ. ಉಷಾಃ ಸಾಂತವಾದ ಪದ. ಉಚ್ಛತೀತಿ ಸತ್ಯಾ (ನಿ–೨–೧೮) ಎಂದು ಹಿಂದೆ ವಿವೃತವಾಗಿದೆ. ದ್ಯುಸ್ಥಾನದೇವತಾರ್ಥದಲ್ಲಿ ಹೀಗೆ ವಿಕಲ್ಪವಾಗಿ ವ್ಯುತ್ಪತ್ತಿಯನ್ನು ತೋರಿಸಿರುತ್ತಾರೆ. ಮಾಧ್ಯಮಿಕದೇವತಾ ಉಷಾ ಆದರೆ ಆಗ ವಿಕಲ್ಪವಿಲ್ಲ. ಉಚ್ಛೀ–ವಿವಾಸೇ. ಧಾತು. ಹಿಂದಿನಂತೆ ಕಸುನ್ ಪ್ರತ್ಯಯ. ಮೇಘದಿಂದ ಉದಕವನ್ನು ಬೇರ್ಪಡಿಸುತ್ತಾಳೆ ಎಂದರ್ಥ. ಮುಂದೆ ಹೇಳುವ ಮಂತ್ರವು ಉಷಾದೇವತೆಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ
ಐದನೆಯ ಖಂಡವು ಸಮಾಪ್ತವಾಗಿದೆ.

———

# ಅಥ ಷಷ್ಠಃ ಖಂಡಃ

## ಆರನೆಯ ಖಂಡವು

ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ । ಯೇನ ತೋಕಂ ಚ ತನಯಂ ಚ ಧಾಮಹೇ (ಋ. ಸಂ. ೧-೯೨-೧೩) ॥ ಉಷಸ್ತಚ್ಚಿತ್ರಂ ಚಾಯನೀಯಂ ಮಂಹನೀಯಂ ಧನಮಾಹರಾಸ್ಮಭ್ಯಮನ್ನವತಿ ಯೇನ ಪುತ್ರಾಂಶ್ಚ ಪೌತ್ರಾಂಶ್ಚ ದಧೀಮಹಿ ತಸ್ಯಾ ಏಷಾಪರಾ ಭವತಿ ॥ ೬ ॥

ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ। ಯೇನ ತೋಕಂ ಚ
ತನಯಂ ಚ ಧಾಮಹೇ ॥

(ಋ. ಸಂ. ೧-೬-೨೬. ಯ. ವಾ. ಸ. ೩೪-೩೩)

ಉಷಾಸ್ತುತಿ ಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾ. ಹವಿರ್ಲಕ್ಷಣ ಅನ್ನಾದಿಕ್ರಿಯಾವಿಶಿಷ್ಟಳಾದ ಉಷಾದೇವತೆಯೇ ನಮಗೆ ಬಹುವಿಧವಾದ ಧನವನ್ನು ಅನುಗ್ರಹಿಸು. ಇದರಿಂದ ನಾವು ಪುತ್ರಪೌತ್ರಾದಿಗಳನ್ನು ಹೊಂದುತ್ತೇವೆ.

ಉಷಸ್ತಚ್ಚಿತ್ರಂ ಚಾಯನೀಯಂ ಮಂಹನೀಯಂ ಧನಮಾಹರಾಸ್ಮ-
ಭ್ಯಮನ್ನವತಿ ಯೇನ ಪುತ್ರಾಂಶ್ಚ ಪೌತ್ರಾಂಶ್ಚ ದಧೀಮಹಿ ।
ತಸ್ಯಾ ಏಷಾಽಪರಾ ಭವತಿ ॥ ೬ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಚಾಯೃ-ಪೂಜಾನಿಶಾಮನಯೋಃ-ಧಾತು. ಅನೀಯರ್ ಪ್ರತ್ಯಯ. ಪ್ರಶಸ್ತವಾದುದು ಎಂದರ್ಥ. ಮಂಹನೀಯಂ—ದಾನಮಾಡಲು ಯೋಗ್ಯವಾದುದು ಎಂದರ್ಥ. ಮಂಹ ಧಾತು ದಾನಾರ್ಥಕ ಧಾತುಗಳಲ್ಲಿ (ನಿಘ. ೩-೨-೧೦) ಪಠಿತವಾಗಿದೆ. ಅಥವಾ ಮಹಿ-ವೃದ್ಧೌ ಧಾತುವಿನಿಂದ ನಿಷ್ಪನ್ನವಾದುದರಿಂದ ವೃದ್ಧಿ ಹೊಂದುವುದು ಎಂದು ಅರ್ಥವಾಗುತ್ತದೆ. ಮುಂದಿನ ಮಂತ್ರವು ಈ ಉಷಾದೇವತೆಯ ಸ್ತುತಿಯನ್ನೇ ಪ್ರತಿಪಾದಿಸುತ್ತದೆ. ಈ ಹೇಳಿದ ಮಂತ್ರದಲ್ಲಿ ನಮಗೆ ಧನವನ್ನು ಕೊಡು ಎಂದು ಪ್ರಾರ್ಥಿಸುವುದರಿಂದ ಇದು ಮಧ್ಯಮೋತ್ತಮರೂಪದ್ವಿಸ್ಥಾನದ ಉಷಾದೇವತೆಯ ಸ್ತುತಿಯಾಗಬಹುದು. ಆದುದರಿಂದ ಉತ್ತಮ ಸ್ಥಾನಳಸ್ತುತಿಯನ್ನು ಅಸಾಧಾರಣವಾಗಿ ತಿಳಿಸಲು ಪುನಃ ಉದಾಹರಣೆ ಹೇಳಿರುತ್ತಾರೆ.

ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ ।
ಯೇನ ತೋಕಂ ಚ ತನಯಂ ಚ ಧಾಮಹೇ ॥ ೧೩ ॥

ಹವಿಸ್ಸನ್ನು ಅರ್ಪಿಸುವ ಯಜ್ಞಕರ್ಮಗಳೊಡನೆ ಕೂಡಿರುವ ಎಲೈ ಉಷೋದೇವಿಯೇ, ಯಾವ ಧನದಿಂದ ನಾವು ನಮ್ಮ ಮಕ್ಕಳನ್ನೂ ಮೊಮ್ಮೊಕ್ಕಳನ್ನೂ ಸಲಹುವೆವೋ ಅಂತಹ ಅಭಿಮತವಾದ ಧನವನ್ನು ನಮಗೆ ನಾನಾ ವಿಧದಲ್ಲಿ ತಂದೊದಗಿಸು.

ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಉಷ್ಣಿಕ್ ಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ ಉಷಸ್ತಚ್ಚಿತ್ರಂ ಎಂದು ಮೊದಲಾಗುವ ಈ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಿನಶಸ್ತ್ರ ಮಂತ್ರಪಠನಕಾಲದಲ್ಲಿಯೂ ಈ ಋಕ್ಕುಗಳ ವಿನಿಯೋಗವಿರುವುದೆಂದೂ ಆಶ್ವಲಾಯನ ಶ್ರೌತಸೂತ್ರದ ಅಥೋಷಸ್ಯ ಎಂಬ ಖಂಡದ ಉಷಸ್ತಚ್ಚಿತ್ರಮಾ ಭರ ಎಂಬ ಸೂತ್ರದಲ್ಲಿ ಹೇಳಿರುವುದು. (ಆ. ಶ್ರೌ. ೪–೧೪)

ತೋಕಂ ಚ ತನಯಂ ಚ । ತುಕ್, ತೋಕಂ, ತನಯಃ, ಇತ್ಯಾದಿ ಹದಿನೈದು ಅಪತ್ಯನಾಮುಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩–೨ ) ಎರಡು ಶಬ್ದಗಳಿಗೂ ಪುತ್ರನೆಂದೇ ಅರ್ಥವು ಸ್ಥೂಲವಾಗಿ ನೋಡಿದರೆ ಈ ಎರಡು ಶಬ್ದಗಳ ಅರ್ಥವು ಒಂದೇ ಆದರೊ ವ್ಯವಹಾರದಲ್ಲಿ ಪುತ್ರಪೌತ್ರಾದಿಗಳೆಂದು ಒಟ್ಟಿಗೆ ಹೇಳುವ ರೂಢಿಯಿದೆ. ಆದೂ ಅಲ್ಲದೆ ತೋಕಂ ತುದ್ಯತೇಃ। ತನಯಂ ತನೋತೇಃ। ಎಂದು ನಿರುಕ್ತಕಾರರು ಇವುಗಳ ಸೂಕ್ಷ್ಮವಾದ ವ್ಯತ್ಯಾಸವನ್ನು ತೋರಿಸುವರು. ಇದನ್ನೇ ವ್ಯಾಖ್ಯಾಕಾರರು ವಿವರಿಸುತ್ತಾ ತೋಕಂ ಇತಿ ಪುತ್ರಃ ಸ ಹಿ ನಿತ್ಯಂ ಪಿತ್ರಾ ವಿನಯತಾ ತುದ್ಯತೇ ಇದಂ ಕುರ್ವಿದಂ ಮಾ ಕಾರ್ಷೀರಿತಿ। ತನಯಂ—ತನೋತೇಃ ಪೌತ್ರಂ। ತದ್ಧ್ಯತಿತರಾಂ ಪಿತುಃ ಸಕಶಾತ್ ತತಂ ಭವತಿ । ಶಿಕ್ಷಣವನ್ನು ಕೊಡತಕ್ಕ ತಂದೆಯು ಯಾವಾಗಲೂ ಇದನ್ನು ಮಾಡು, ಇದನ್ನು ಮಾಡಬೇಡ ಎಂಬ ನಿರ್ಬಂಧವನ್ನಿಟ್ಟು ನಿಯಮದ ಜೀವನವನ್ನು ನಡೆಸುತ್ತಿರುವುದರಿಂದ ಅಂತಹ ಮಗನಿಗೆ ತೋಕಂ ಎಂದೂ; ಸಂತತಿಯನ್ನು ವಿಸ್ತರಿಸಿ ಬೆಳೆಸಲು ಸಾಧನವಾದುದರಿಂದ ಪೌತ್ರನಿಗೆ ತನಯನೆಂದೂ ಅರ್ಥವಾಗುತ್ತದೆಂದು ವಿವರಿಸುತ್ತಾರೆ. (ನಿ. ೦೧–೭)

ಧಾಮಹೇ—ದಧೀಮಹಿ। (ನಿ ೧೨–೬) ಭರಣ ಮಾಡಲು ಎಂದರೆ ಸಂರಕ್ಷಿಸುವೆವು. ಯಾವ ಧನದಿಂದ ನಾವು ನಮ್ಮ ಪುತ್ರಪೌತ್ರಾದಿಗಳನ್ನು ರಕ್ಷಿಸಲು ಸಮರ್ಥರಾಗುತ್ತೇವೆಯೋ ಅಂತಹ.

ಚಿತ್ರಂ—ಮಂಹನೀಯಂ । ( ನಿ. ೧೨–೬ ) ಪೂಜ್ಯವಾದ ಧನವನ್ನು ನಮಗೆ ತಂದುಕೊಡು ಎಂದು ಪ್ರಾರ್ಥನೆಯ ಅರ್ಥ.

ಇದೇ ಅನುಪೂರ್ವಿಯುಳ್ಳ ಪ್ರಾರ್ಥನೆಯ ಮುಂದೆ ವಾಮದೇವ ಋಷಿವಿರಚಿತವಾದ ಋಕ್ಕಿನಲ್ಲಿ ಉಷಸ್ಸನ್ನುದ್ದೇಶಿಸಿದೆ.

ಉಷೋ ಮಘೋನ್ಯಾ ಸಹ ಸೂನೃತೇ ವಾರ್ಯಾ ಕುರು।
ಅಸ್ಮಭ್ಯಂ ವಾಜಿನೀವತಿ।

( ಋ. ಸಂ. ೪–೫೫–೯ )

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಆರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತಮ ಖಂಡಃ

## ಏಳನೆಯ ಖಂಡವು

ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನು-ಮಂಜತೇ । ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀ-ರ್ಯಂತಿ ಮಾತರಃ (ಋ, ಸಂ. ೧-೯೨-೧) ॥ ಏತಾಸ್ತಾ ಉಷಸಃ ಕೇತುಮಕೃಷತ ಪ್ರಜ್ಞಾನಮೇಕಸ್ಯಾ ಏವ ಪೂಜನಾರ್ಥೇ ಬಹುವಚನಂ ಸ್ಯಾತ್ಪೂರ್ವೇಽರ್ಧೇಽಂತರಿಕ್ಷ ಲೋಕಸ್ಯ ಸಮಂಜತೇ ಭಾನುನಾ । ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನ ಏಮೀದೇಷಾಂ ನಿಷ್ಕೃತಂ ಜಾರಿಣೀವೇತ್ಯಪಿ ನಿಗಮೋ ಭವತಿ । ಪ್ರತಿಯಂತಿ ಗಾವೋ ಗಮನಾದರುಷೀರಾರೋಚನಾನ್ಮಾತರೋ ಭಾಸೋ ನಿರ್ಮಾತ್ರ್ಯಃ । ಸೂರ್ಯಾ ಸೂರ್ಯಸ್ಯ ಪತ್ನ್ಯೇಷೈವಾಭಿಸೃಷ್ಟಕಾಲತಮಾ ತಸ್ಯಾ ಏಷಾ ಭವತಿ ॥ ೭ ॥

ಏತಾ ಉತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ
ಭಾನುಮಂಜತೇ । ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ
ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥

(ಋ. ಸಂ. ೧-೬-೨೪, ಸಾ. ಸಂ. ಉ. ಆ. ೮-೩-೧೬-೧)

ಉತ್ತಮಸ್ಥಾನಉಷಾಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಅಂತರಿಕ್ಷದ ಪೂರ್ವಾರ್ಧದ ಪೂರ್ವದಿಕ್ಕಿನಲ್ಲಿ ಉಷಾದೇವತೆಯು ಪ್ರಕಾಶವನ್ನು ಪ್ರಸರಿಸುತ್ತದೆ. ಪ್ರಭಾತಕಲಾಭಿಮಾನಿದೇವತೆಗಳು ಅಂಧಕಾರಾವೃತವಾದ ಸಕಲಜಗತ್ತಿಗೆ ಜ್ಞಾನಪ್ರಕಾಶವನ್ನು ಮಾಡುತ್ತವೆ. ಯುದ್ಧಾಸಕ್ತರಾದ ಭಟರು ತಮ್ಮ ಆಯುಧಗಳನ್ನು ನಿತ್ಯವೂ ಉಜ್ಜಿ ಬೆಳಗಿಸುವಂತೆ ಉಷಸ್ಸುಗಳು ಕತ್ತಲೆಯನ್ನು ಹೋಗಲಾಡಿಸಿ ಪ್ರಜ್ಞಾನ ಪ್ರಕಾಶವನ್ನು ಕೊಡುತ್ತವೆ. ಚಲಿಸುವ ಸ್ವಭಾವವುಳ್ಳ, ಹೊಳೆಯುವ ಸೂರ್ಯಪ್ರಕಾಶವನ್ನುಂಟುಮಾಡುವ ಉಷಸ್ಸುಗಳು ಅವನಲ್ಲಿಯೇ ಲಯವನ್ನು ಹೊಂದುತ್ತವೆ.

ಏತಾಸ್ತಾ ಉಷಸಃ ಕೇತುಮಕೃಷತ ಪ್ರಜ್ಞಾನಮ್ । ಏಕಸ್ಯಾ ಏವ
ಪೂಜನಾರ್ಥೇ ಬಹುವಚನಂ ಸ್ಯಾತ್ ।

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸೂರ್ಯನ ಪ್ರಕಾಶವನ್ನೇ ಉಷಸ್ಸೆಂದು ಕರೆಯುತ್ತಾರೆ ಎಂದು ಭಾಷ್ಯಕಾರರ ತಾತ್ಪರ್ಯ. ವಾಸ್ತವವಾಗಿ ಇದು ಒಂದೇ ಆದರೂ ಪೂಜಾರ್ಥವನ್ನು ತೋರಿಸಲು ಬಹುವಚನವನ್ನು ಹೇಳಿರುತ್ತಾರೆ. ಪ್ರಕಾಶವು ಸೂರ್ಯನ ಕಾರ್ಯವಾದುದರಿಂದ ಅವನೇ ಸ್ತ್ರೀಲಿಂಗವಿಶಿಷ್ಟನಾಗಿ ಹೇಳಲ್ಪಟ್ಟಿರುತ್ತಾನೆ ಎಂದು ತಾತ್ಪರ್ಯ.

ಪೂರ್ವೇ ಅರ್ಧೇ ಅಂತರಿಕ್ಷಲೋಕಸ್ಯ ಸಮಂಜತೇ ಭಾನುನಾ ।
ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ನಿರಿತ್ಯೇಷಃ ಸಮಿತ್ಯೇತಸ್ಯ ಸ್ಥಾನೇ।

ಅಂತರಿಕ್ಷದ ಪೂರ್ವಾರ್ಧದಲ್ಲಿ ಇವು ಸೂರ್ಯನ ಕಾಂತಿಯಿಂದ ತಮ್ಮನ್ನೂ ಪ್ರಕಾಶಗೊಳಿಸುತ್ತವೆ. ದೃಷ್ಟಾಂತದಲ್ಲಿ ನಿಷ್ಕೃಣ್ವಾನಾಃ ಎಂದು ಹೇಳಿದೆ. ಅಲ್ಲಿ ಸಮ್‌ಸ್ಥಾನದಲ್ಲಿ ನಿಸ್ ಉಪಸರ್ಗ ಬಂದಿದೆಯೆಂದು ತಿಳಿಯಬೇಕು. ಸಂಸ್ಕುರ್ವಾಣಾಃ ಅಂದರೆ ಆಯುಧಗಳನ್ನು ಸಜ್ಜುಗೊಳಿಸುವವರಾಗಿ ಎಂದರ್ಥ. (ಸಾಣೆಹಿಡಿಯುವುದು)

ಏಮೀದೇಷಾಂ ನಿಷ್ಕೃತಂ ಜಾರಿಣೀವ— ಇತ್ಯಪಿ ನಿಗಮೋ ಭವತಿ ॥

(ಋ. ಸಂ. ೭–೮–೩–೫)

ಸಮ್‌ಸ್ಥಾನದಲ್ಲಿ ನಿಸ್ ಉಪಸರ್ಗ ಪ್ರಯೋಗಿಸಿದೆಯೆಂದು ಹಿಂದೆ ಹೇಳಿದೆ. ಹೀಗೆಯೇ ಉಪಸರ್ಗವ್ಯತ್ಯಯವಾಗುವುದು ಪ್ರಸಿದ್ಧವೆಂದು ತೋರಿಸಲು ಋಙ್ಮಂತ್ರವನ್ನು ಉದಾಹರಿಸುತ್ತಾರೆ. ದ್ಯೂತವ್ಯಸನದಿಂದ ಪೀಡಿತನಾದ ನಾನು ದ್ಯೂತಕಾರರ ಸಂಸ್ಕೃತವಾದ ಅಕ್ಷಸ್ಥಾನವನ್ನು ಕಾಮಪೀಡಿತಳಾದ ಸ್ತ್ರೀಯು ಚಾರಿತ್ರ್ಯವನ್ನು ಎಣಿಸದೆ ಸ್ವೈರಿಣಿಯಾಗಿ ಸಂಕೇತಸ್ಥಾನವನ್ನು ಹೊಂದುವಂತೆ ಜಾಗ್ರತೆಯಾಗಿ ಸೇರುತ್ತಾನೆ ಎಂದರ್ಥ. ಇಲ್ಲಿ ಸಂಸ್ಕೃತಂ ಎಂದು ಹೇಳಬೇಕಾಗಿರುವಾಗ ನಿಷ್ಕೃತಂ ಎಂದು ಪ್ರಯೋಗಿಸಿರುತ್ತಾರೆ.

ಪ್ರತಿಯಂತಿ ಗಾವೋ ಗಮನಾತ್, ಅರುಷೀರಾರೋಚನಾನ್ಮಾತರೋ
ಭಾಸೋ ನಿರ್ಮಾತ್ರ್ಯಃ ॥

ಉಳಿದಿರುವ ಮಂತ್ರಾರ್ಥವನ್ನು ವಿವರಿಸುತ್ತಾರೆ. ಸೂರ್ಯಪ್ರಕಾಶವನ್ನು ನಿರ್ಮಿಸುವರು, ಅಥವಾ ಜಗಜ್ಜನನಿಯಾದವರು ಮಾತೃಗಳಾಗಿರುತ್ತಾರೆ.

ಸೂರ್ಯಾ ಸೂರ್ಯಸ್ಯ ಪತ್ನೀ ಏಷೈವಾಭಿಸೃಷ್ಟಕಾಲತಮಾ ।
ತಸ್ಯಾ ಏಷಾ ಭವತಿ ॥ ೭ ॥

ಸೂರ್ಯಾಕ್ರಮಪ್ರಾಪ್ತವಾಗಿದೆ. ಈ ಉಷಾದೇವತೆಯೇ ಸೂರ್ಯಪತ್ನಿಯಾದುದರಿಂದ ಸೂರ್ಯಾ ಆಗಿರುತ್ತಾಳೆ. "ಸೂರ್ಯಾದ್ದೇವತಾಂ ಚಾಪ್ ವಾಚ್ಯಃ" ಎಂಬ ವಾರ್ತಿಕದಿಂದ ಪುಂಸಂಬಂಧವಿರುವಾಗ ಚಾಪ್‌ಪ್ರತ್ಯಯ. ಅಭಿಸೃಷ್ಟಕಾಲತಮಾ ಎಂದೂ ಇವಳ ಹೆಸರಿದೆ. ಸೂರ್ಯೋದಯಕಾಲದಲ್ಲಿ ಸೂರ್ಯನನ್ನೇ ಹೊಂದಿರುತ್ತಾಳೆ. ಮುಂದೆ ಹೇಳುವ ಮಂತ್ರವು ಸೂರ್ಯಾಸ್ತುತಿ ಪ್ರತಿಪಾದಕವಾಗುತ್ತದೆ.

ಏತಾ ಉತ್ಯಾಃ ಉಷಸಃ ಕೇತುಮಕ್ರತ ಅರ್ಧೇ ರಜಸೋ ಭಾನುಮಂಜತೇ।
ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ
ಮಾತರಂ ॥ ೧ ॥

ಕಗ್ಗತ್ತಿಲಿಂದ ಆವರಿಸಿದ್ದ ಲೋಕಕ್ಕೆ ಆ ಉಷೋದೇವತೆಗಳು ಪ್ರಕಾಶವನ್ನು ಹರಡಿದರು. ಅವರು ಅಂತರಿಕ್ಷದ ಪೂರ್ವಾರ್ಧದ ದಿಕ್ಕಿನಲ್ಲಿ ತಮ್ಮ ಪ್ರಭೆಯನ್ನು ಪ್ರಕಾಶಪಡಿಸುತ್ತಾರೆ. ಯೋಧರು ತಮ್ಮ ಆಯುಧಗಳನ್ನು ಮಸೆದು ಝುಳಪಿಸು ವಂತೆ ಉಷೋದೇವತೆಗಳು ತಮ್ಮ ಪ್ರಭೆಯಿಂದ ಜಗತ್ತನ್ನು ಬೆಳಗಿಸುತ್ತಾ ಶಮನಸ್ವಭಾವವುಳ್ಳವರೂ, ಪ್ರಾತಃಸಂಧ್ಯಾರಾಗವು ಳ್ಳವರೂ ಸೂರ್ಯಪ್ರಭೆಯ ಉತ್ಪಾದಕರೂ ಆದ ಅವರು ಪ್ರತಿದಿನವೂ ತಮ್ಮ ನಿಯಮದ ಪ್ರಕಾರ ಸಂಚರಿಸುತ್ತಾರೆ.

**ತ್ಯಾಃ ಉಷಸಃ**—ಹಿಂದಿನ ಪ್ರಭಾತಗಳಲ್ಲೆಲ್ಲಾ ಆವಿರ್ಭವಿಸಿ ಪ್ರಸಿದ್ಧರಾದ ಆ ಉಷಸ್ಸುಗಳೇ, ಅಥವಾ **ಏಕಸಾ ಏವ ಪೂಜನಾರ್ಥೇ ಬಹುವಚನಂ ಸ್ಯಾತ್** I (ನಿ. ೧೨-೭) ಎಂದು ನಿರುಕ್ತಕಾರರು ಹೇಳುವಂತೆ ಪೂಜಾರ್ಥದಲ್ಲಿ ಬಹು ಚನವಿರುತ್ತದೆ. ಒಂದೇ ಉಷಸ್ಸೇ ಪ್ರತಿದಿನವೂ ಆವಿರ್ಭವಿಸುವುದರಿಂದ ಅನೇಕ ಉಷಸ್ಸುಗಳೆಂದು ಭಾವಿಸಿ ಬಹುವಚನ ಪ್ರಯೋಗವನ್ನು ಮಾಡಲಾಗಿದೆ.

ಉಷೋದೇವತೆಯ ಸ್ವರೂಪ ಮತ್ತು ಮಹಿಮೆಗಳ ವಿವರಣೆಯನ್ನು ಋ. ಸಂ. ಭಾಗ ೫ ಪೇಜು 32–33 ಗಳಲ್ಲಿ ವಿಶದವಾಗಿ ತಿಳಿಸಿದೆ.

**ಕೇತುಂ**— **ಕೇತಃ, ಕೇತುಃ ಚೇತಃ** ಇತ್ಯಾದಿ ಪ್ರಜ್ಞಾನಾಮಗಳಲ್ಲಿ ಪಠಿತವಾಗಿರುವುದರಿದ (ನಿ. ೩-೧೩ )**ಕೇತುಂ** ಎಂದರೆ ಜಗತ್ತಿನ ಪ್ರಜ್ಞೆಯನ್ನು ಎಂದಾಗುತ್ತದೆ. ಅಥವಾ ಕೇತು ಶಬ್ದಕ್ಕೆ ಧ್ವಜವೆಂದರ್ಥವಾದರೆ ಧ್ವಜದಂತಿರುವ ದೀಪ್ತಿಯನ್ನು ಹರಡಿದರು ಎಂದಾಗುತ್ತದೆ.

**ಭಾನುಂ ಅಂಜತೇ**—ಪ್ರಕಾಶವನ್ನು ವ್ಯಕ್ತಪಡಿಸುತ್ತಾರೆಂದರ್ಥವು. ಇಲ್ಲಿ ಎರಡು ವಿಧವಾದ ಅನ್ವಯವು ಸಾಧ್ಯ ವಾಗುತ್ತದೆ. **ರಜಸಃ ಪೂರ್ವೇ ಅರ್ಧೇ ಭಾನುಂ ಅಂಜತೇ**। ಎಂದರೆ ಅಂತರಿಕ್ಷದ ಪೂರ್ವ ದಿಗ್ಭಾಗದಲ್ಲಿ ಪ್ರಭೆಯನ್ನು ಹರಡಿ ವ್ಯಕ್ತಪಡಿಸುತ್ತಾರೆ ಎಂದು ಸಾಯಣರೂ; **ರಜಸಃ ಪೂರ್ವೇ ಅರ್ಧೇಸ್ಮಿನ್ ಭಾನುನಾ ಅಂಜತೇ** I ಎಂದರೆ ಅಂತರಿಕ್ಷದ ಪೂರ್ವಭಾಗದಲ್ಲಿದ್ದುಕೊಂಡು ತಮ್ಮ ಪ್ರಭೆಯಿಂದ ಸಮಸ್ತವನ್ನೂ ವ್ಯಕ್ತಪಡಿಸುತ್ತಾರೆ ಎಂದು ಸ್ಕಂದಸ್ವಾಮಿಗಳು ವಿವರಿಸು ತ್ತಾರೆ. ಇಷ್ಟೇ ಅಲ್ಲದೆ, ಮುಂದಿನ **ನಿಷ್ಕೃಣ್ವಾನಾಃ ಧೃಷ್ಣವ ಇವ** I ಎಂಬ ಉಪಮಾನವನ್ನೂ ಸಹ ಸ್ಕಂದಸ್ವಾಮಿಗಳು ಅಂಜತೇ ಎನ್ನುವುದರೊಂದಿಗೆ ಸೇರಿಸುತ್ತಾರೆ. ಯೋಧರು ತಮ್ಮ ಆಯುಧಗಳನ್ನು ಮಸೆಯುವುದೇ ಮೊದಲಾದ ಸಂಸ್ಕಾರ ಗಳಿಂದ ಪ್ರಕಾಶಿಸುವಂತೆ ಹೇಗೆ ಮಾಡುತ್ತಾರೋ ಆ ರೀತಿ ಉಷಸ್ಸುಗಳು ಸಹ ತಮ್ಮ ಪ್ರಭೆಗಳಿಂದ ಅಂತರಿಕ್ಷವನ್ನೆಲ್ಲಾ ಪ್ರಕಾಶಗೊಳಿಸುತ್ತಾರೆಂದು ಅನ್ವಯವನ್ನು ಮಾಡುತ್ತಾರೆ.

**ನಿಷ್ಕೃಣ್ವಾನಾಃ**—**ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ** I (ನಿ. ೧೨-೭) ಎಂದರೆ ನಿರ್ ಎಂಬ ಉಪಸರ್ಗವು ಸಂ ಎಂಬುದರ ಸ್ಥಾನದಲ್ಲಿ ಬಂದಿದೆಯೆಂದೂ **ಸಂಸ್ಕುರ್ವಾಣಾಃ** ಅಂದರೆ ಇಲ್ಲಿ ಮೆಚಗುವಂತೆ ನಯವಾಗಿ ಮಾಡುತ್ತಾರೆ ಎಂದರ್ಥವೆಂದೂ ನಿರುಕ್ತಕಾರರು ವಿವರಿಸುತ್ತಾರೆ.

**ಗಾವಃ**—**ಗಾವೋ ಗಮನಾತ್** I (ನಿ. ೧೨-೭) ಸಂಚಾರ ಸ್ವಭಾವವುಳ್ಳವಾದ್ದರಿಂದ **ಗಾವಃ** ಎಂದೂ :

**ಅರುಷೀ**—**ಅರುಷಿರಾರೋಚನಾತ್** I (ನಿ. ೧೨-೭) ಆಕರ್ಷಕವಾಗಿ ಪ್ರಕಾಶಿಸುವುದರಿಂದ **ಅರುಷೀ** ಎಂದೂ :

ಮಾತರಃ—ಭಾಸೋ ನಿರ್ಮಾತ್ರ್ಯಃ (ನಿ ೧೨-೭) ಪ್ರಭೆಗಳ ನಿರ್ಮಾತೃಗಳಾದ್ದರಿಂದ ಮಾತರಃ ಎಂದೂ ಸಹ ಕಿರಣಗಳಿಗೆ ವಿಶೇಷಣಗಳಿರುತ್ತವೆಯೆಂದು ನಿರುಕ್ತಕಾರರು ವಿವರಿಸುತ್ತಾರೆ. ಈ ಭಾವಗಳನ್ನೇ ಮುಂದೆಯೂ ಸಹ—

ಪೂರ್ವೇ ಅರ್ಧೇ ರಜಸೋ ಅಪ್ತ್ಯಸ್ಯ ಗವಾಂ ಜನಿತ್ರ್ಯಕೃತ ಪ್ರ ಕೇತುಂ।
ವ್ಯು ಪ್ರಥತೇ ವಿತರಂ ವರೀಯ ಓಭಾ ಪೃಣಂತೀ ಪಿತ್ರೋರುಪಸ್ಥಾ ॥

(ಋ. ಸಂ. ೧-೧೨೪-೫)

ಎಂಬ ಋಕ್ಕಿನಲ್ಲಿ ವಿವರಿಸಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಏಳನೆಯ ಖಂಡವು ಸಮಾಪ್ತವಾಗಿದೆ.

•••••••••

## ಅಥ ಅಷ್ಟಮಃ ಖಂಡಃ

## ಎಂಟನೆಯ ಖಂಡವು

ಸುಕಿಂ ಶುಕಂ ಶಲ್ಮಲಿಂ ವಿಶ್ವರೂಪಂ ಹಿರಣ್ಯವರ್ಣಂ ಸುವೃತಂ ಸುಚಕ್ರಂ। ಆ ರೋಹ ಸೂರ್ಯೇ ಅಮೃತಸ್ಯ ಲೋಕಂ ಸ್ಯೋನಂ ಪತ್ಯೇ ವಹತುಂ ಕೃಣುಷ್ವ। (ಋ. ಸಂ. ೧೦-೮೫-೨೦) ॥ ಸುಕಾಶನಂ ಶನ್ನಮಲಂ ಸರ್ವರೂಪಮಪಿ ವೋಪ ಮಾರ್ಥೇ ಸ್ಯಾತ್ಸುಕಿಂಶುಕಮಿವ ಶಲ್ಮಲಿ ಮಿತಿ ಕಿಂಶುಂಕಂ ಕ್ರಂಶತೇಃ ಪ್ರಕಾಶಯತಿ ಕರ್ಮಣಃ ಶಲ್ಮಲಿಃ ಸುಶರೋ ಭವತಿ ಶರವಾನ್ವಾರೋಹ ಸೂರ್ಯೇ ಅಮೃತಸ್ಯ ಲೋಕಮುದಕಸ್ಯ ಸುಖಂ ಪತ್ಯೇ ವಹತುಂ ಕುರುಷ್ವ ಸವಿತಾ ಸೂರ್ಯೇ ಪ್ರಾಯಚ್ಛತ್ಸೋಮಾಯ ರಾಜ್ಞೇ ಪ್ರಜಾಪತಯೇ ವೇತಿ ಚ ಬ್ರಾಹ್ಮಣಂ ವೃಷಾಕ-ಪಾಯೀ ವೃಷಾಕಪೇಃ ಪತ್ನೀಷೈವಾಭಿಸೃಷ್ಟಕಾಲತಮಾ ತಸ್ಯಾ ಏಷಾ ಭವತಿ ॥ ೮ ॥

ಸುಕಿಂಶುಕಂ ಶಲ್ಮಲಿಂ ವಿಶ್ವರೂಪಂ ಹಿರಣ್ಯವರ್ಣಂ ಸುವೃತಂ
ಸುಚಕ್ರಮ್ । ಆರೋಹ ಸೂರ್ಯೇ ಅಮೃತಸ್ಯ ಲೋಕಂ ಸ್ಯೋನಂ
ಪತ್ಯೇ ವಹತುಂ ಕೃಣುಷ್ವ ॥

(ಋ. ಸಂ. ೮-೩-೨೩)

ಸೂರ್ಯಾಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸೂರ್ಯಪತ್ನಿಯೇ ನೀನು ಲೋಕಪ್ರಕಾಶಕಳೂ, ಕಲ್ಮಷ ರಹಿತಳೂ, ಸರ್ವರೂಪಳೂ, ಶೋಭನರಶ್ಮಿಗಳಿಂದ ಆವೃತಳೂ, ಉಜ್ವಲ ಕಾಂತಿಯುಳ್ಳವಳೂ, ನೀರಿಗೆ ಆಶ್ರಯಳೂ ಆಗಿ ಸೂರ್ಯಮಂಡಲವನ್ನು ಏರಿ ಮಂಡಲಾಧಿಷ್ಠಾತೃದೇವನಾದ ಆದಿತ್ಯನಿಗೆ ಸ್ವಾರೋಹಣಸುಖವನ್ನುಂಟುಮಾಡು.

ಸುಕಾಸನಂ ಶನ್ನಮಲಂ ಸರ್ವರೂಪಂ । ಅಪಿವೋಪಮಾರ್ಥೇ
ಸ್ಯಾತ್ಸುಕಿಂಶುಕಮಿವ ಶಲ್ಮಲಿಮಿತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪಲಾಶಪುಷ್ಪದಲ್ಲಿ ಕಿಂಶುಕಪದ ಪ್ರಸಿದ್ಧವಾಗಿದೆ. ಅದು ಕೆಂಪು ಹೂವಾದುದರಿಂದ ಸಾಮ್ಯಸಂಗತವಾಗುತ್ತದೆಂದು ಉಪಮಾರ್ಥ ಹೇಳುತ್ತಾರೆ. ಪುಷ್ಪಭರಿತವಾದ ಶಾಲ್ಮಲಿವೃಕ್ಷದಂತೆ ಇರುವುದೆಂದರ್ಥ. ಶಲ್ಮಲಿಯೆಂಬಲ್ಲಿ ಆರ್ಷವಾಗಿ ಹ್ರಸ್ವ ಬಂದಿದೆ.

ಕಿಂಶುಕಂ ಕ್ರಂಶತೇಃ । ಪ್ರಕಾಶಯುತಿಕರ್ಮಣಃ । ಶಲ್ಮಲಿಃ ಸುಶರೋ
ಭವತಿ । ಶರವಾನ್ವಾ ॥

ನಿಗಮಪ್ರಸಕ್ತವಾದ ಕಿಂಶುಕಪದದ ನಿರ್ವಚನವನ್ನು ತೋರಿಸುತ್ತಾರೆ. ಪ್ರಕಾಶಾರ್ಥದಲ್ಲಿ ಕ್ರಂಶಧಾತುವು ನಿರುಕ್ತದಲ್ಲಿ ಹೇಳಿದೆ. ಉಕಞಪ್ರತ್ಯಯ ಬಂದಾಗ ಧಾತುವಿಗೆ ಕಿಂಶಾದೇಶ. ಲೋಕದಲ್ಲಿ 'ಕಿಂಚಿಚ್ಛುಕ ಇವ' ಸ್ವಲ್ಪಗಿಣಿಯಂತಿರುವುದು ಎಂಬ ವ್ಯುತ್ಪತ್ತಿಯಿಂದ ಕಿಂಶುಕ ಎಂದಾಗುತ್ತದೆ. ಗಿಣಿಯ ಕೊಕ್ಕಿನಂತಿರುವ ಪುಷ್ಪಗಳಿಂದ ಕೂಡಿರುವ ಮರ. (ಮುತ್ತಗ). ಶೃ-ಹಿಂಸಾಯಾಂ ಧಾತುವಿನಿಂದ ಶಲ್ಮಲಿಪದ ನಿಷ್ಪನ್ನವಾಗಿದೆ. ಅತಿ ಮೃದುವಾದುದರಿಂದ ಹಿಂಸಿಸಲ್ಪಡುವುದು ಅಥವಾ ತಾನು ಮುಳ್ಳುಗಳಿಂದ ಕೂಡಿರುವುದರಿಂದ ಮರವನ್ನು ಏರುವವರನ್ನು ಹಿಂಸಿಸುತ್ತದೆಂದು ಅರ್ಥವಾಗುತ್ತದೆ.

ಆರೋಹ ಸೂರ್ಯೇ ಅಮೃತಸ್ಯ ಲೋಕಮ್ । ಉದಕಸ್ಯ ಸುಖಂ
ಪತ್ಯೇ ವಹತುಂ ಕುರುಷ್ವ । 'ಸವಿತಾ ಸೂರ್ಯಾಂ ಪ್ರಾಯಚ್ಛ-
ತ್ಸೋಮಾಯ ರಾಜ್ಞೇ ಪ್ರಜಾಪತಯೇವಾ' ಇತಿಚ
ಬ್ರಾಹ್ಮಣಮ್ ॥

ಮಂತ್ರಭಾಗ ವ್ಯಾಖ್ಯಾನವನ್ನು ತೋರಿಸುತ್ತಾರೆ. ಬ್ರಾಹ್ಮಣವಾಕ್ಯದಲ್ಲಿ ಸೂರ್ಯಾ ಅಂದರೆ ಬೆಳದಿಂಗಳು. ಸೂರ್ಯನಿಂದಲೇ ಚಂದ್ರನ ಬೆಳಕು ಎಂದು ಪ್ರಸಿದ್ಧವಾಗಿದೆ. ಸೂರ್ಯನು ಜ್ಯೋತಿಯನ್ನು ಚಂದ್ರನಿಗೆ ಕೊಡುತ್ತಾನೆ. ಅಥವಾ ಮಧ್ಯಸ್ಥಾನವಾದ ಪ್ರಜಾಪತಿಗೆ ಉಷೆಯನ್ನು ಕೊಡುತ್ತಾನೆ ಎಂದರ್ಥ.

ವೃಷಾಕಪಾಯಿ ವೃಷಾಕಪೇಃ ಪತ್ನೀ । ಏಷೈವಾಭಿಸೃಷ್ಟ ಕಾಲತಮಾ ।
ತಸ್ಯಾ ಏಷಾ ಭವತಿ ॥ ೮ ॥

ವೃಷಾಕಪಾಯೀ ಪದದ ನಿರ್ವಚನವನ್ನು ತೋರಿಸುತ್ತಾರೆ. ಇವಳೂ ಆದಿತ್ಯನ ಪತ್ನೀ. ಅಥವಾ ಅವನ ಸಂಪತ್ತು. ಸ್ತ್ರೀತ್ವದಲ್ಲಿ ಙೀಪ್‌ಬಂದಾಗ ಐಕಾರಾದೇಶ. ಆಯಾದೇಶ. ಉಷಃಕಾಲದಲ್ಲಿ ಹಿಮುವನ್ನು ಸುರಿಸುವುದರ ಮೂಲಕ ಜಗತ್ತಿಗೆ ನಡುಕವನ್ನುಂಟುಮಾಡುವವಳು ಎಂದು ತಾತ್ಪರ್ಯ. ಮುಂದೆ ಹೇಳುವ ಮಂತ್ರವು ವೃಷಾಕಪಾಯೀಸ್ತುತಿಯನ್ನು ಪ್ರತಿಪಾದಿಸುತ್ತದೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಎಂಟನೆಯ ಖಂಡವು ಸಮಾಪ್ತವು.

## ಅಥ ನವಮಃ ಖಂಡಃ

### ಒಂಬತ್ತನೆಯ ಖಂಡವು

ವೃಷಾಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ । ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ । (ಋ. ಸಂ. ೧೦-೮೬-೧೩) ॥ ವೃಷಾಕಪಾಯಿ ರೇವತಿ ಸುಪುತ್ರೇ ಮಧ್ಯಮೇನ ಸುಸ್ನುಷೇ ಮಾಧ್ಯಮಿಕಯಾ ವಾಚಾ ಸ್ನುಷಾ ಸಾಧುಸಾದಿನೀತಿ ವಾ ಸಾಧುಸಾನಿನೀತಿ ವಾ ಸ್ವಪತ್ಯಂ ತತ್ಸನೋತೀತಿ ವಾ ಪ್ರಾಶ್ನಾತು ತ ಇಂದ್ರ ಉಕ್ಷಣ ಏತಾನ್ಮಾಧ್ಯಮಿಕಾನ್‌ತ್ಸಂ ಸ್ತ್ಯಾಯಾನುಕ್ಷಣ ಉಕ್ಷತೇ ರ್ವೃದ್ಧಿಕರ್ಮಣ ಉಕ್ಷಂತ್ಯುದಕೇನೇತಿ ವಾ ಪ್ರಿಯಂ ಕುರುಷ್ವ ಸುಖಾಚಯಕರಂ ಹವಿಃ ಸುಖಕರಂ ಹವಿಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮ ಆದಿತ್ಯಂ ಸರಣ್ಯೂಃ ಸರಣಾತ್ತಸ್ಯಾ ಏಷಾ ಭವತಿ ॥ ೯ ॥

ವೃಷಾಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ । ಘಸತ್ತ ಇಂದ್ರ
ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ॥
(ಋ. ಸಂ. ೮-೪-೩)

ವೃಷಾಕಪಾಯಿ ಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ವೃಷಾಕಪಾಯಿ ದೇವತೆಯೇ ನೀನು ಧನವಂತಳೂ, ಮಧ್ಯಮ ಇಂದ್ರನಿಂದ ಅಥವಾ ಆದಿತ್ಯನಿಂದ ಸುಪುತ್ರಳೂ, ಮಾಧ್ಯಮಿಕ ವಾಕ್ಕಿನಿಂದ ಶೋಭನ ಸೊಸೆಯುಳ್ಳವಳೂ ಆಗಿರುವಿ. ಇಂದ್ರನು ಅಂದರೆ ಆದಿತ್ಯನು ನಿನ್ನ ಹಿಮಕಣರೂಪ ಉದಕವನ್ನು ಶೀಘ್ರವಾಗಿ ಕುಡಿಯಲಿ. ಈ ಸುಖಕರವಾದ ಉದಕವನ್ನು ಅನ್ನಭಾವದಿಂದ ಪರಿವರ್ತಿಸಿ ನಮ್ಮ ಇಷ್ಟಾರ್ಥವನ್ನುಂಟುಮಾಡು. ಆದಿತ್ಯನು ನಿನ್ನಿಂದಲೇ ಸಕಲ ದೇವತಾಉತ್ಕರ್ಷವನ್ನು ಸಂಪಾದಿಸಿರುತ್ತಾನೆ.

ವೃಷಾಕಪಾಯಿ ರೇವತಿ! ಸುಪುತ್ರೇ ಮಧ್ಯಮೇನ, ಸುಸ್ನುಷೇ
ಮಾಧ್ಯಮಿಕಯಾ ವಾಚಾ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಧ್ಯಮನು ಪುತ್ರನಾದುದರಿಂದ ಮಧ್ಯಮನ ಪತ್ನಿಯಾದ ಮಾಧ್ಯಮಿಕವಾದ ವಾಕ್ಕು ಸೊಸೆಯಾಗುತ್ತಾಳೆ.

ಸ್ನುಷಾ ಸಾಧು ಸಾದಿನೀತಿ ವಾ | ಸಾಧು ಸಾನಿನೀತಿ ವಾ | ಸು ಅಪತ್ಯಂ
ತತ್ಸನೋತೀತಿ ವಾ ||

ನಿಗಮಪ್ರಸಕ್ತವಾದ ಸ್ನುಷಾಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಶ್ವಶುರನ (ಮಾವ) ಸಂತಾನಲಕ್ಷಣದಲ್ಲಿ ಅಂಗಭಾವ ವನ್ನು ಹೊಂದುವವಳು. ಅಥವಾ ಸಾಧುಸಂತತಿಯನ್ನು ಹೊಂದುವವಳು. ಅಥವಾ ಸು = ಅಪತ್ಯವನ್ನು (ಮಕ್ಕಳು) ಹಡೆಯುವವಳು ಸ್ನುಷಾ ಆಗುತ್ತಾಳೆ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ.

ಪ್ರಾಶ್ನಾತು ತ ಇಂದ್ರ ಉಕ್ಷಣ ಏತಾನ್ಮಾಧ್ಯಮಿಕಾನ್ತ್ಸಂಸ್ತ್ಯಾಯಾನ್ ||
ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ | ಉಕ್ಷಂತ್ಯುದಕೇನೇತಿ ವಾ ||

ಇಂದ್ರನು ಮಾಧ್ಯಮಿಕವಾದ ನಿನ್ನ ಹಿಮಕಣಸಂಘಾತವನ್ನು ಪಾನಮಾಡಲಿ. 'ಅವಶ್ಯಾಯಸ್ತು ನೀಹಾರಃ' ಅಮರ. ಸಂಸ್ತ್ಯಾಯ ಅಂದರೆ ಸಂಘಾತ. ಉಕ್ಷಣ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ವೃದ್ಧ್ಯರ್ಥಕ ಉಕ್ಷಧಾತುವಿನಿಂದ ಇದು ನಿಷ್ಪನ್ನವಾಗಿದೆ. ಹಿಮಸಂತತಿ ಔಷಧಿಗಳನ್ನು ಬೆಳಸುತ್ತವೆ. ಅಥವಾ ಹಿಮಕಣಗಳೇ ಅಧಿಕವಾದರೆ ಅಭಿವೃದ್ಧವಾಗು ತ್ತವೆ. ಅಥವಾ ಸೇಚನಾರ್ಥಕ ಉಕ್ಷಧಾತುವಿನಿಂದ ನಿಷ್ಪನ್ನವಾದುದರಿಂದ ಇವು ನೀರಿನಿಂದ ಸಕಲವಸ್ತುಗಳನ್ನು ಒದ್ದೆ ಮಾಡುತ್ತವೆ ಎಂದರ್ಥವಾಗುತ್ತದೆ.

ಪ್ರಿಯಂ ಕುರುಷ್ವ ಸುಖಾಚಯಕರಂ ಹವಿಃ ಸುಖಕರಂ ಹವಿಃ |
ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಮ್ |

ಕಾಚಿತ್ಕರಂ ಎಂಬುದಕ್ಕೆ ಸುಖಾಚಯಕರಂ ಎಂದು ವ್ಯಾಖ್ಯಾನ. ಕ = ಸುಖ, ಅದರ ಚಿತ್ = ಸಂಘ. ಸುಖ ಪರಂಪರೆ ಯನ್ನುಂಟುಮಾಡುವುದು ಎಂದರ್ಥ. ಹವಿಃ ಉದಕನಾವ-ದಲ್ಲಿ (ನಿಘ. ೧–೧೨–೬೫) ಇಲ್ಲಿ ಇಂದ್ರನೆಂದರೆ ಆದಿತ್ಯನೆಂದೇ ಭಾಷ್ಯಕಾರರ ಮತ.

ಸರಣ್ಯೂಃ ಸರಣಾತ್ | ತಸ್ಯಾ ಏಷಾ ಭವತಿ || ೯ ||

ಕ್ರಮಪ್ರಾಪ್ತವಾದ ಸರಣ್ಯೂಪದದ ನಿರ್ವಚನವನ್ನು ತೋರಿಸುತ್ತಾರೆ. ಉಷಾದೇವಿಯೇ ಸೂರ್ಯನಿಂದ ಪ್ರಸೂತಳಾಗಿ ಸರಣ ಕ್ರಿಯಾವಿಶಿಷ್ಟಳಾದುದರಿಂದ ಸರಣ್ಯೂ ಎಂದಾಗಿರುತ್ತಾಳೆ. ಸೃ–ಗತೌ ಧಾತು. ಘಪ್ರತ್ಯಯ, ಗುಣ, ಸರ ಎಂದಾಗುತ್ತದೆ

ಸರೇಣ (ಸರಣೇನ) ನಯತಿ ಇತಿ ಸರಣ್ಯೂಃ. ಸರ ಉಪಪದವಾಗಿರುವಾಗ ಪ್ರಾಪಣಾರ್ಥಕ ಣೀ ಧಾತುವಿಗೆ ಊಕ್ ಪ್ರತ್ಯಯ. ಯಣಾದೇಶ. ಮುಂದೆ ಹೇಳುವ ಮಂತ್ರವು ಸರಣ್ಯೂಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ
ಒಂಬತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದಶಮಃ ಖಂಡಃ

## ಹತ್ತನೆಯ ಖಂಡವು

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ । ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ (ಋ. ಸಂ. ೧೦-೧೭-೨) ॥ ಅಪ್ಯಗೂಹನ್ನಮೃತಾಂ ಮರ್ತ್ಯೇಭ್ಯ ಕೃತ್ವೀ ಸವರ್ಣಾಮದದುರ್ವಿವಸ್ವತೇಽಪ್ಯಶ್ವಿನಾನಭರದ್ಯತ್ತದಾಸೀದಜಹಾದ್ ದ್ವೌಮಿಥುನೌ ಸರಣ್ಯೂರ್ಮಧ್ಯಮಂ ಚ ಮಾಧ್ಯಮಿಕಾಂ ಚ ವಾಚಮಿತಿ ನೈರುಕ್ತಾ ಯಮಂ ಚ ಯಮೀಂ ಚ ಚೇತ್ಯೈತಿಹಾಸಿಕಾಸ್ತತ್ರೇತಿಹಾಸಮಾಚಕ್ಷತೇ ತ್ವಾಷ್ಟ್ರೀ ಸರಣ್ಯೂರ್ವಿವಸ್ವತ ಆದಿತ್ಯಾದ್ಯಮೌ ಮಿಥುನೌ ಜನಯಾಂಚಕಾರ ಸಾ ಸವರ್ಣಾಮನ್ಯಾಂ ಪ್ರತಿನಿಧಾಯಾಶ್ವಂ ರೂಪಂ ಕೃತ್ವಾ ಪ್ರದುದ್ರಾವ ಸ ವಿವಸ್ವಾನಾದಿತ್ಯ ಆಶ್ವಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ ತತೋಽಶ್ವಿನೌ ಜಜ್ಞಾತೇ ಸವರ್ಣಾಯಾಂ ಮನುಸ್ತದಭಿವಾದಿನ್ಯೇಷರ್ಗ್ಭವತಿ ॥ ೧೦ ॥

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ । ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥
(ಋ. ಸಂ. ೭-೬-೨೩)

ಸರಣ್ಯೂ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ರಶ್ಮಿಗಳು ಮರಣರಹಿತಳಾದ ಉಷಸ್ಸನ್ನು ಮನುಷ್ಯೋತ್ಪತ್ತಿಗೋಸ್ಕರ ಮುಚ್ಚಿಟ್ಟರು. ಸಮಾನ ವರ್ಣವುಳ್ಳವಳನ್ನಾಗಿ ಮಾಡಿ ಈ ಸರಣ್ಯುವನ್ನು ಆದಿತ್ಯನಿಗೆ ಕೊಟ್ಟರು. ಅವಳು ಅಶ್ವಿನೀದೇವತೆಗಳನ್ನು ಸ್ತುತಿಸಿದಳು. ಹವಿಸ್ಸಿನಿಂದ ಸಂತೋಷಪಡಿಸಿದಳು. ಆಗ ಆ ಸರಣ್ಯುದೇವತೆಯು ಮಧ್ಯಮದೇವ ಮತ್ತು ಮಧ್ಯಮಾವಾಗ್ರೂಪ ಮಿಥುನವನ್ನು ಬಿಟ್ಟಳು.

ಅಪ್ಯಗೂಹನ್ನಮೃತಾಂ ಮರ್ತ್ಯೇಭ್ಯಃ । ಕೃತ್ವೀ ಸವರ್ಣಾಮದದುರ್ವಿ ವಸ್ವತೇ । ಅಪ್ಯಶ್ವಿನಾವಭರದ್ಯತ್ತದಾಸೀದಜಹಾದ್ದ್ವಾ ಮಿಥುನಾ ಸರಣ್ಯೂರ್ಮಾಧ್ಯಮಂ ಚ ಮಾಧ್ಯಮಿಕಾಂ ಚ ವಾಚಮಿತಿ ನೈರುಕ್ತಾಃ ॥

ನಿರುಕ್ತಕಾರರ ಮತದಂತೆ ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಾವಾಗ ಈ ಸರಣ್ಯೂದೇವಿಯು ಅವಿಭಾಗದಿಂದ ಆದಿತ್ಯ ಮಂಡಲವನ್ನು ಪ್ರವೇಶಿಸುವಳೋ ಆಗ ಆದಿತ್ಯೋದಯವಾದ ಮೇಲೆ ವಿಚ್ಛಿತ್ತಿ ಹೊಂದುತ್ತಾಳೆ. ಅದು ಮಧ್ಯಮಾಗ್ನಿಯ ಮತ್ತು ಮಾಧ್ಯಮಿಕ ವಾಕ್ಕಾಲವಾದುದರಿಂದ ಅವುಗಳ ತ್ಯಾಗವೆಂದು ತಾತ್ಪರ್ಯ.

ಯಮಂ ಯಮೀಂ ಚೇತ್ಯೈತಿಹಾಸಿಕಾಃ ॥

ಇತಿಹಾಸಕುಶಲರು ಮಿಥುನಪದಕ್ಕೆ ಯಮಯಮೀಯರ ಮಿಥುನವೆಂದು ಹೇಳುತ್ತಾರೆ. ತ್ವಷ್ಟೃಪ್ರಜಾಪತಿಯ ಮಗಳಾದ ಸರಣ್ಯೂ ಎಂಬವಳು ಅಶ್ವಿನೀದೇವತೆಗಳನ್ನು ಹಡೆದುದನ್ನು ನೋಡಿ ಮನುಷ್ಯರಿಗೋಸ್ಕರ ಅವಳನ್ನು ಉತ್ತರಕುರುದೇಶದಲ್ಲಿ ಅಡಗಿಸಿಟ್ಟರು. ಅವಳಂತಿರುವ ಇನ್ನೊಬ್ಬಳನ್ನು ಛಾಯೆಯಿಂದ ಸೃಷ್ಟಿಮಾಡಿ ಆದಿತ್ಯನಿಗೆ ಕೊಟ್ಟರು. ಅಲ್ಲಿ ಯಮಯಮೀ ಯುಗಲದ ಜನನವಾದೊಡನೆ ಅವಳೂ ಅದೃಶ್ಯಳಾದಳು.

ಅತ್ರೇತಿಹಾಸಮಾಚಕ್ಷತೇ-ತ್ವಾಷ್ಟ್ರೀ ಸರಣ್ಯೂರ್ವಿವಸ್ವತ ಆದಿತ್ಯಾದ್ಯಮೌ ಮಿಥುನೌ ಜನಯಾಂಚಕಾರ ಸಾ ಸವರ್ಣಾಮನ್ಯಾಂ ಪ್ರತಿನಿಧಾಯಾಶ್ವಂ ರೂಪಂ ಕೃತ್ವಾ ಪ್ರದುದ್ರಾವ, ಸವಿವಸ್ವಾನಾದಿತ್ಯ ಆಶ್ವಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ, ತತೋಽಶ್ವಿನೌ ಜಜ್ಞಾತೇ । ಸವರ್ಣಾಯಾಂ ಮನುಃ ॥

ಇತಿಹಾಸ ಕಥೆಯನ್ನು ವಿವರಿಸುತ್ತಾರೆ. ವಿಶ್ವಕರ್ಮ ಪ್ರಜಾಪತಿಯ ಪುತ್ರಿಯಾದ ಸರಣ್ಯೂ ಎಂಬ ದೇವತೆಯು ಸೂರ್ಯನಿಂದ ಯಮ ಯಮೀಯೆಂಬ ಗಂಡು ಹೆಣ್ಣು ಮಕ್ಕಳನ್ನು ಪಡೆದಳು. ಇವಳಿಗೆ ಸಂಜ್ಞಾ ಎಂಬ ಇನ್ನೊಂದು ಹೆಸರಿದೆ. ಇವಳು ಸೂರ್ಯನ ಅತಿ ತೇಜಸ್ಸಿನ ರೂಪವನ್ನು ನೋಡಲು ಸಹಿಸಲಾರದೆ ಪತಿಯ ಸೇವೆಗೆ ತನ್ನ ಸಮಾನ ವರ್ಣವುಳ್ಳ ಇನ್ನೊಬ್ಬ ಸ್ತ್ರೀಯನ್ನು ನೇಮಿಸಿ ತಂದೆಯ ಸಮೀಪಕ್ಕೆ ಹೋದಳು. ತಂದೆಯು ಪುನಃ ಪತಿಗೃಹಕ್ಕೇ ಹೋಗೆಂದು ಕಳುಹಿಸಿರುವುದರಿಂದ ಅಲ್ಲಿ ಹೋಗದೆ ಹೆಣ್ಣು ಕುದುರೆಯ ರೂಪವನ್ನು ಧರಿಸಿ ಉತ್ತರಕುರುದೇಶಕ್ಕೆ ತಪಸ್ಸನ್ನಾಚರಿಸಲು ಓಡಿಹೋದಳು. ಆದಿತ್ಯನೂ ಮಾವನ ಮನೆಯಲ್ಲಿ ಅವಳನ್ನು ನೋಡದೆ ಹುಡುಕುತ್ತಾ ಅದೇ ದಾರಿಯಲ್ಲಿ ಹೋಗಿ ತನ್ನ ಸ್ವರೂಪವೇ ಆದ ಬಡಬಾರೂಪ ದಿಂದಿರುವ ಪತ್ನಿಯನ್ನು ತಾನೂ ಅಶ್ವರೂಪವನ್ನು ಧರಿಸಿ ಮೈಥುನಧರ್ಮದಿಂದ ಹೊಂದಿದನು. ಪತಿಯೆಂದು ತಿಳಿಯದೆ ಅವಳು ಅವನ ವೀರ್ಯವನ್ನು ಮೂಗಿನಿಂದಲೇ ಧಾರಣೆಮಾಡಿದಳು. ಅದರಿಂದ ನಾಸತ್ಯರಾದ ಅಶ್ವಿನೀಕುಮಾರರು ಜನಿಸಿದರು. ಸವರ್ಣಾ ಎಂಬವಳಲ್ಲಿ ವೈವಸ್ವತಸಾವರ್ಣಿ ಮನುವು ಜನಿಸಿದನು

ತದಭಿವಾದಿನ್ಯೇಷರ್ಗ್ಭವತಿ ॥ ೧೦ ॥

ತ್ವಷ್ಟೃ ಮಗಳಾದ ಸರಣ್ಯೂ ಎಂಬವಳು ಆದಿತ್ಯನನ್ನು ವರಿಸಿ ಆಮೇಲೆ ಅದರ್ಶನ ಹೊಂದಿದಳು ಎಂಬ ವಿಷಯವನ್ನು ಮುಂದೆ ಹೇಳುವ ಋಙ್ಮಂತ್ರವು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ.

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥ ೨ ॥

ಮರಣರಹಿತಳಾದ ಸರಣ್ಯೂವನ್ನು ಮಾನವರಿಂದ ಮರೆಸಿ ಅದೇ ರೂಪದ ಬೇರೊಂದು ಸ್ತ್ರೀಯನ್ನು ಮಾಡಿ ವಿವಸ್ವಂತನಿಗೆ ದೇವತೆಗಳು ಕೊಟ್ಟರು. ಮತ್ತು ಯಾವಾಗ ಅಶ್ವರೂಪದ ರೇತಃಪತನವಾಯಿತೋ ಆಗ ಅಶ್ವಿನೀದೇವತೆಗಳನ್ನು ಆ ಸ್ತ್ರೀಯು ಪಡೆದಳು. ಸರಣ್ಯೂವು ಯಮ ಮತ್ತು ಯಮಿಯನ್ನು ಪಡೆದಳು.

ಯಾಸ್ಕರು ಸರಣ್ಯೂ ಶಬ್ದದ ನಿರ್ವಚನವನ್ನು ವಿವರಿಸುವಾಗ ಈ ಋಕ್ಕಿಗೆ ನಿರುಕ್ತವನ್ನು ಹೇಳಿ ಸರಣ್ಯೂ ವಿಷಯವಾದ ಒಂದು ಇತಿಹಾಸವನ್ನು ಹೇಳಿದಾರೆ.

ಸರಣ್ಯೂಃ । ಸರಣ್ಯೂಃ ಸರಣಾತ್ । ತಸ್ಯೈಷಾ ಭವತಿ । ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ । ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ॥ (ಋ. ಸಂ. ೧೦-೧೭-೨) । ಅಪ್ಯಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇಽಪ್ಯಶ್ವಿನಾವಭರದ್ಯತ್ತದಾಸೀದಜಹಾದ್ದ್ವೌ ಮಿಥುನೌ ಸರಣ್ಯೂರ್ಮಧ್ಯಮಂ ಚ ಮಾಧ್ಯಮಿಕಾಂ ಚ ವಾಚಮಿತಿ ನೈರುಕ್ತಾಃ । ಯಮಂ ಚ ಯಮೀಂ ಚೇತ್ಯೈತಿಹಾಸಿಕಾಃ ॥

ತತ್ರೇತಿಹಾಸಮಾಚಕ್ಷತೇ-ತ್ವಾಷ್ಟ್ರೀ ಸರಣ್ಯೂರ್ವಿವಸ್ವತ ಆದಿತ್ಯಾದ್ಯಮೌ ಮಿಥುನೌ ಜನಯಾಂಚಕಾರ। ಸಾ ಸವರ್ಣಾಮನ್ಯಾಂ ಪ್ರತಿನಿಧಾಯಾಶ್ವಂ ರೂಪಂ ಕೃತ್ವಾ ಪ್ರದುದ್ರಾವ । ಸ ವಿವಸ್ವಾನಾದಿತ್ಯ ಆಶ್ವಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ । ತತೋಽಶ್ವಿನೌ ಜಜ್ಞಾತೇ ಸವರ್ಣಾಯಾಂ ಮನುಃ ॥

(ನಿ. ೧೨-೧೦)

ಚಲಿಸು ಎಂಬರ್ಥವುಳ್ಳ ಸೃ ಧಾತುವಿನಿಂದ ಸರಣ್ಯೂಶಬ್ದವು ನಿಷ್ಪನ್ನವಾಗಿದೆ. ಮುಂದುಮುಂದಕ್ಕೆ ಸರಿಯುವವಳು, ಚಲಿಸುತ್ತಿರುವವಳು ಎಂದು ಈ ಶಬ್ದದ ಅವಯವಾರ್ಥವು. ಈ ಶಬ್ದಪ್ರಯೋಗವಿರುವ ಅಪಾಗೂಹನ್ನೆಂಬ ಋಕ್ಕಿನ ನಿರ್ವಚನವು ಈ ರೀತಿ ಇದೆ—ಮರಣವಿಲ್ಲದ ಎಂದರೆ ನಾಶರಹಿತವಾದ ಆ ಸರಣ್ಯೂದೇವಿಯನ್ನು ಮನುಷ್ಯರ ಕಣ್ಣಿಗೆ ಕಾಣಿಸದಂತೆ ದೇವತೆಗಳು ಮರೆಮಾಡಿ ಅವಿಸಿಟ್ಟರು ಮತ್ತು ಅದೇ ರೂಪ ಮತ್ತು ಆಕಾರವುಳ್ಳ ಬೇರೊಬ್ಬ ಸ್ತ್ರಿಯನ್ನು ನಿರ್ಮಿಸಿ ಆದಿತ್ಯನಿಗೆ ಕೊಟ್ಟರು. ಈ ಕಾಲದಲ್ಲಿ ಎಂದರೆ ಸರಣ್ಯೂದೇವಿಯು ಅದೃಶ್ಯವಾದಾಗ (ಅಶ್ವರೂಪವನ್ನು ಧರಿಸಿ ಬೇರೆ ಪ್ರದೇಶದಲ್ಲಿದ್ದಾಗ ಅಶ್ವರೂಪಿಯಾದ ಆದಿತ್ಯನ (ವಿವಸ್ವಂತನ) ಸಂಭೋಗದ ಫಲವಾಗಿ) ಅಶ್ವಿನೀ ದೇವತೆಗಳನ್ನು ಪಡೆದಳು ಮತ್ತು ಹಿಂದೆ ತಾನು ಪಡೆದಿದ್ದ ಅವಳೀಮಕ್ಕಳಾದ ಯಮಯಮಿಯರನ್ನು ತ್ಯಜಿಸಿದಳು. ಇಲ್ಲಿ ಮಿಥುನೌ ಎಂಬ ಶಬ್ದಕ್ಕೆ ಎರಡು ವಿಧ ಅರ್ಥ

ಮಾಡಿದಾರೆ. ಮಧ್ಯಮಸ್ಥಾನ ಎಂದರೆ ಅಂತರಿಕ್ಷಸ್ಥನಾದ ಇಂದ್ರ ಮತ್ತು ಅಂತರಿಕ್ಷಸ್ಥವಾದ ವಾಗ್ದೇವತೆ ಎಂದು ನಿರುಕ್ತಕಾರರ ಮತವು. ಯಮ ಮತ್ತು ಯಮೀ ಎಂದು ಇತಿಹಾಸಕಾರರ ಮತವು.

ಈ ವಿಷಯದಲ್ಲಿ ಒಂದು ಇತಿಹಾಸವಿರುವುದು—ತ್ವಷ್ಟೃಪುತ್ರಿಯಾದ ಸರಣ್ಯೂದೇವಿಯು ಆದಿತ್ಯನಿಂದ (ವಿವಸ್ವಂತನಿಂದ) ಯಮಯಮಿಯರೆಂಬ ಇಬ್ಬರು ಅವಳೀ ಮಕ್ಕಳನ್ನು ಪಡೆದಳು. ಅನಂತರ ಅವಳು ತನ್ನ ಹಾಗೆಯೇ ಇರುವ ಬೇರೊಬ್ಬ ದೇವತಾಸ್ತ್ರೀಯನ್ನು ತನ್ನ ಪ್ರತಿನಿಧಿಯಾಗಿ ಆದಿತ್ಯನ ಸಮೀಪದಲ್ಲಿರಿಸಿ ತಾನು ಅಶ್ವರೂಪದಿಂದ ಓಡಿಹೋದಳು. (ಈ ಸವರ್ಣರೂಪಿಯಾದ ದೇವತಾಸ್ತ್ರೀಯನ್ನು ಛಾಯಾ ಎಂಬ ಹೆಸರಿನಿಂದ ಕರೆಯುವುದು ರೂಢಿಯಾಗಿದೆ. ಮತ್ತು ಈ ಸ್ತ್ರೀಯಲ್ಲಿ ಆದಿತ್ಯನಿಂದ ಮನುವು ಹುಟ್ಟಿದನು. ಅನಂತರ ಆದಿತ್ಯನು ಈ ಸ್ತ್ರೀಯು ತನ್ನ ಪತ್ನಿಯಾದ ಸರಣ್ಯೂ ಅಲ್ಲವೆಂದು ತಿಳಿದು) ಅನಂತರ ತಾನೂ ಅಶ್ವರೂಪವನ್ನು ಧರಿಸಿ ಅಶ್ವರೂಪಿಣಿಯಾದ ಸರಣ್ಯುವನ್ನು ಅನುಸರಿಸಿ ಹೋಗಿ ಅವಳ ಸಮೀಪದಲ್ಲಿಯೇ ಇದ್ದನು. ಆಗ ಇವರಿಬ್ಬರ ಅನ್ಯೋನ್ಯ ಸಮಾಗಮದ ಫಲವಾಗಿ ಅಶ್ವಿನೀದೇವತೆಗಳು ಉತ್ಪನ್ನರಾದರು ಮತ್ತು ಸವರ್ಣರೂಪದ ಸ್ತ್ರೀಯಲ್ಲಿ ಮನುವು ಹುಟ್ಟಿದನು ಎಂದು ನಿರುಕ್ತವಚನದ ಅಭಿಪ್ರಾಯವು.

ಈ ರೀತಿ ಶ್ರೀಮದ್ಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡವು ಸಮಾಪ್ತವಾಗಿದೆ.

———

## ಅಥ ಏಕಾದಶ ಖಂಡಃ

### ಹನ್ನೊಂದನೆಯ ಖಂಡವು

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ । ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ (ಋ. ಸಂ. ೧೦-೧೭-೧) ॥ ತ್ವಷ್ಟಾ ದುಹಿತುರ್ವಹನಂ ಕರೋತೀತೀದಂ ವಿಶ್ವಂ ಭುವನಂ ಸಮೇತೀಮಾನಿ ಚ ಸರ್ವಾಣಿ ಭೂತಾನ್ಯಭಿಸಮಾಗಚ್ಛಂತಿ ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹತೋ ಜಾಯಾ ವಿವಸ್ವತೋ ನನಾಶ ರಾತ್ರಿರಾದಿತ್ಯಸ್ಯಾದಿತ್ಯೋದಯೇಽಂತರ್ಧೀಯತೇ ॥ ೧೧ ॥

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ
ಸಮೇತಿ । ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ
ಜಾಯಾ ವಿವಸ್ವತೋ ನನಾಶ ॥

(ಋ. ಸಂ. ೮-೬-೧೩)

ತ್ವಷ್ಟೃ ಪ್ರಜಾಪತಿಯು ಮಗಳಿಗೆ ವಿವಾಹಮಾಡುವನೆಂದು ಭೂತಜಾತವೆಲ್ಲಾ ಒಂದು ಕಡೆ ಸೇರಿತು. ಮಗಳೂ ಆದಿತ್ಯನೊಡನೆ ಮದುವೆಯಾಗಿ ಯಮ ಯಮಿಯರನ್ನು ಹಡೆದು ಅವರಿಬ್ಬರನ್ನು ಅವನ ಸಮೀಪದಲ್ಲಿಯೇ ಬಿಟ್ಟು ತಾನು ಅಶ್ವರೂಪವನ್ನು ಹೊಂದಿ ಅದರ್ಶನವಾದಳು.

ತ್ವಷ್ಟಾ ದುಹಿತುರ್ವಹನಂ ಕರೋತೀದಂ ವಿಶ್ವಂ ಭುವನಂ ಸೇಮೇ-
ತೀಮಾನಿ ಚ ಸರ್ವಾಣಿ ಭೂತಾನ್ಯಭಿ ಸಮಾಗಚ್ಛಂತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಜಾಯಾ ವಿವಸ್ವತೋ
ನನಾಶ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿವಾಹ ಕಾಲದಲ್ಲಿ ಎಲ್ಲರೂ ಸೇರುವುದು ಸ್ವಾಭಾವಿಕ. ಮಹತಃ ಎಂಬಲ್ಲಿ ಆರ್ಷವಾಗಿ ವರ್ಣಲೋಪ ಬಂದಿದೆ. ಮುಂದಿನ ವಿಷಯವನ್ನು ಊಹಿಸಿ ಯಮನ ತಾಯಿಯು ಮದುವೆಯಾಗಿ ಎಂದು ಹೇಳಿದೆ.

ರಾತ್ರಿರಾದಿತ್ಯಸ್ಯಾದಿತ್ಯಸ್ಯೋದಯೇಽಂತರ್ಧೀಯತೇ ॥ ೧೧ ॥

ನಿರುಕ್ತಕಾರರ ಮತದಂತೆ ತಾತ್ಪರ್ಯವನ್ನು ವಿವರಿಸುತ್ತಾರೆ ಮಧ್ಯಮನಾದ ತ್ವಷ್ಟೃದೇವನು ಉಷಸ್ಸಿನ ಪುತ್ರಿಯಾದ ಪ್ರಕಾಶವನ್ನು ಸೂರ್ಯನೊಡನೆ ಸೇರಿಸಿದನು. ಆಗ ಪ್ರಪಂಚವು ಪ್ರಭಾತವಾಯಿತೆಂದು ತನ್ನ ವ್ಯಾಪಾರದಲ್ಲಿ ನಿರತವಾಗುತ್ತದೆ. ಆಗ ಮಧ್ಯಮನ ತಾಯಿಯಾದ ರಾತ್ರಿಯು ಸೂರ್ಯನ ಉದಯದಿಂದ ಅದೃಶ್ಯಳಾಗುತ್ತಾಳೆ.

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ
ನನಾಶ ॥ ೧ ॥

ತ್ವಷ್ಟೃನಾಮಕನಾದ ದೇವನು ತನ್ನ ಮಗಳಾದ ಸರಣ್ಯೂವಿಗೆ ವಿವಾಹವನ್ನು ನೆರವೇರಿಸುತ್ತಾನೆ ಎಂಬ ಸಮಾಚಾರ ವನ್ನು ಕೇಳಿ ಸಕಲ ಭೂತಜಾತವೂ ಒಂದುಗೂಡಿದವು. ಆದರೆ, ವಿವಾಹಕ್ಕೆ ಸಿದ್ಧಳಾಗಬೇಕಾದವಳೂ, ಯಮನಿಗೆ ಮಾತೆಯೂ, ಮಹಾತ್ಮನಾದ ವಿವಸ್ವಂತನ ಭಾರ್ಯೆಯೂ ಆದ ಸರಣ್ಯುವು ಅದೃಶ್ಯಳಾದಳು.
ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀದಂ ವಿಶ್ವಂ ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥

(ಋ. ಸಂ. ೧೦–೧೭–೧)

ತ್ವಷ್ಟಾ ದುಹಿತುರ್ವಹನಂ ಕರೋತೀದಂ ವಿಶ್ವಂ ಭುವನಂ ಸಮೇತೀಮಾನಿ ಚ ಸರ್ವಾಣಿ ಭೂತಾನ್ಯಭಿಸಮಾಗಚ್ಛಂತಿ ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹತೋ ಜಾಯಾ ವಿವಸ್ವತೋ ನನಾಶ । ರಾತ್ರಿರಾದಿತ್ಯಸ್ಯಾದಿತ್ಯೋದಯೇಽನ್ತರ್ಧೀಯತೇ ॥

(ನಿ. ೧೨–೧೧)

ಈ ಋಕ್ಕಿಗೆ ಯಾಸ್ಕರು ತ್ವಷ್ಟೃಪಕ್ಷದಲ್ಲಿ ಮತ್ತು ಆದಿತ್ಯಪಕ್ಷದಲ್ಲಿ ಎಂದು ಎರಡು ವಿಧ ಅರ್ಥವಿವರಣೆ ಮಾಡಿದಾರೆ ತ್ವಷ್ಟೃಪಕ್ಷದಲ್ಲಿ—

ಇಲ್ಲಿ ತ್ವಷ್ಟೃವೆಂದರೆ ಸರ್ವವನ್ನೂ ಸೃಷ್ಟಿಮಾಡುವ ವಿಶ್ವಕರ್ಮನು, ಪ್ರಜಾಪತಿಯು ಎಂದು ಹೇಳಿದಾರೆ. ಈ ತ್ವಷ್ಟೃಪ್ರಜಾಪತಿಯು ತನ್ನ ಮಗಳಾದ ಸರಣ್ಯೂದೇವಿಯನ್ನು ವಿವಸ್ವಂತನಿಗೆ ಮದುವೆಮಾಡಿಕೊಡಬೇಕೆಂದು ಪ್ರಯತ್ನಿಸಿದಾಗ ಈ ಜಗತ್ತಿನಲ್ಲಿರುವ ಸಮಸ್ತ ಭೂತಜಾತಗಳೂ (ದೇವತೆಗಳು, ಮನುಷ್ಯರು, ಪ್ರಾಣಿಗಳು ಮೊದಲಾಗಿ ಸರ್ವರೂ ಸಹ ಆ ವಿವಾಹವನ್ನು ನೋಡುವುದಕ್ಕಾಗಿ ಒಂದುಕಡೆ ಎಂದರೆ ವಿವಾಹಮಂಟಪದಲ್ಲಿ ಸೇರಿದರು. ವಿವಾಹಕಾಲದಲ್ಲಿ ಈ ರೀತಿ ಬಂಧು ಬಾಂಧವರೂ, ಇತರರೂ, ಸಂತೋಷಾರ್ಥವಾಗಿ ಒಟ್ಟಿಗೆ ಸೇರುವುದು ಸ್ವಭಾವವೇ ಆಗಿದೆ. ಆಗ ಎಂದರೆ ವಿವಾಹವಾದನಂತರ ಯಮನ ತಾಯಿಯೂ ಮಹನೀಯನಾದ ವಿವಸ್ವಂತನ ಭಾರ್ಯೆಯೂ ಆದ ಸರಣ್ಯೂದೇವಿಯು ಎಲ್ಲಿಯೋ ಅದೃಶ್ಯಳಾದಳು ಎಂದರೆ ತನ್ನ ಸ್ಥಳದಲ್ಲಿ ತನಗೆ ಬದಲಾಗಿ ಓರ್ವ ದೇವತಾಸ್ತ್ರೀಯನ್ನು ನಿರ್ಮಿಸಿ ಅಲ್ಲಿಟ್ಟು ತಾನು ಅಶ್ವರೂಪವನ್ನು ಧರಿಸಿ ಹೊರಟುಹೋದಳು ಎಂದಭಿಪ್ರಾಯವು.

ನೈರುಕ್ತಪಕ್ಷ ಅಥವಾ ಆದಿತ್ಯಪಕ್ಷದಲ್ಲಿ—ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ಆದಿತ್ಯನ ಪರವಾಗಿ ಬರೆದಿರುವ ಭಾಷ್ಯವನ್ನೂ ವಿವರಣೆಯನ್ನೂ ಕೆಳಗೆ ವಿವರಿಸಿದೇವೆ—

ತ್ವಷ್ಟಾ ಮಧ್ಯಮಃ ತಮೋಭಾಗಸ್ಯ ಉಷಸಃ ದುಹಿತ್ರೇ ದುಹಿತುಃ ದೂರೇ ಹಿತಾಯಾಃ ಪ್ರಕಾಶ ರೂಪಾಯಾಃ ವಹತುಂ ವಹನಂ ವಿವಸ್ವತಃ ಕರೋತಿ । ಇದಂ ವಿಶ್ವಂ ಭುವನಂ ಸಮೇತಿ । ಪ್ರಭಾತಮಿತಿ ಮತ್ವಾ ಸರ್ವಾಣಿ ಭೂತಾನಿ ಸ್ವಾಸು ಸ್ವಾಸ್ವಿತಿ ಕರ್ತವ್ಯತಾಸು ಅಭಿಸಮಾಗಚ್ಛಂತಿ । ಯಮಸ್ಯ ಮಾತಾ ಪರ್ಯುಹ್ಯಮಾನಾ–ಯಮಸ್ಯ ಮಧ್ಯಮಸ್ಯ ಮಾತಾ ದೇವಧರ್ಮೇಣ ಅಥವಾ ದ್ಯುಸ್ಥಾನಸ್ಯ ಯೈವ ಜಾಯಾ ಸಾ ಮಾತೇತಿ । ಜಾಯತೇಽಸ್ಯಾಂ ಪುತ್ರತ್ವೇನ ಪತಿಃ ಜಾಯಾ ಭಾರ್ಯಾ । ಮಹತೋ ವಿವಸ್ವತಃ ಪ್ರಕಾಶೇನ ಪ್ರೋತ್ಸಾರ್ಯಮಾಣಾ ನನಾಶ ನಶ್ಯತಿ । ಸಂಕ್ಷೇಪತೋ ಭಾಷ್ಯಕಾರೋಽರ್ಥಂ ನಿರಾಹರಾತ್ರಿರಾದಿತಸ್ಯ । ಉಷಾ ಜಾಯಾ ಸಾ ಆದಿತ್ಯಸ್ಯೋ–ದಯೇಽನ್ತರ್ಧೀಯತೇ ಇತಿ ॥

(ನಿ. ಭಾಷ್ಯ)

ಎಂದರೆ, ಇಲ್ಲಿ ತ್ವಷ್ಟಾ ಎಂದರೆ ಮಧ್ಯಸ್ಥಾನದೇವತೆ, ಸೂರ್ಯ ಅಥವಾ ಆದಿತ್ಯನು ದುಹಿತ್ರೇ ವಹತುಂ ಎಂದರೆ, ದೂರದಲ್ಲಿರುವ (ಸೂರ್ಯನು) ಪ್ರಕಾಶವನ್ನು ವಹಿಸುವುದಕ್ಕೆ ಅಥವಾ ಸುತ್ತಲೂ ಬೀರುವುದಕ್ಕೆ; ರಾತ್ರಿಯ ಕೊನೆಯಭಾಗದಲ್ಲಿ ಉಷಃಕಾಲವು ಪ್ರಾರಂಭವಾಗುವಾಗ ಇರುವ ಕತ್ತಲೆಯನ್ನು ಹೋಗಲಾಡಿಸಲು ದೂರದಲ್ಲಿ ಸೂರ್ಯನು ಉದಯಿಸುತ್ತಿರುವುದನ್ನು ಲೋಕದಲ್ಲಿರುವ ಸಮಸ್ತ ಪ್ರಾಣಿಗಳೂ ನೋಡಿ, ಈಗ ಕತ್ತಲೆಯು ನಾಶವಾಗಿ ಪ್ರಾತಃಕಾಲವು ಆಗಿದೆಯೆಂದು ತಿಳಿದು ತಮ್ಮತಮ್ಮ ವ್ಯವಹಾರಗಳಲ್ಲಿ ತೊಡಗುವರು. ಯಮಸ್ಯ ಮಾತಾ ಪರ್ಯುಹ್ಯಮಾನಾ—ಯಮ ಅಥವಾ ಮಧ್ಯಮ ದೇವತೆಯಾದ ಆದಿತ್ಯನ ತಾಯಿಯಾದ ದ್ಯುಲೋಕವು (ಅಂತರಿಕ್ಷವು) ಅಥವಾ ಆತ್ಮಾ ವೈ ಪುತ್ರನಾಮಾಸಿ ಎಂಬ ಶ್ರುತಿ ವಾಕ್ಯದಲ್ಲಿ ಹೇಳಿರುವಂತೆ ತಾನೇ ತನ್ನ ಅಂಶರೂಪದಿಂದ ತನ್ನ ಪತ್ನಿಯಲ್ಲಿ ಪುತ್ರನಾಗಿ ಹುಟ್ಟುವುದರಿಂದ ಪತ್ನಿಗೆ ಜಾಯಾ ಎಂಬ ಹೆಸರು. ಆದ್ದರಿಂದ ರಾತ್ರಿಯೇ ಅಥವಾ ಉಷಸ್ಸೇ ಸೂರ್ಯನ ಪತ್ನಿಯು ಆ ರಾತ್ರಿಯಿಂದ (ರಾತ್ರಿಯು ಕಳೆದ ನಂತರ) ಸೂರ್ಯನು ಅಂಶರೂಪದಿಂದ ಹುಟ್ಟುವುದರಿಂದ ರಾತ್ರಿಯು ಸೂರ್ಯನಿಗೆ ಪತ್ನಿಯಾಯಿತು ಎಂದರೆ ರಾತ್ರಿಯು ಅಥವಾ ಉಷೋದೇವಿಯು ಸೂರ್ಯನ ಪತ್ನಿಯೆಂದು ಹೇಳಲ್ಪಡುವಳು. ಜಾಯಾ ವಿವಸ್ವತೋ ನನಾಶ ಎಂದರೆ ರಾತ್ರಿರಾದಿತ್ಯಸ್ಯಾದಿತ್ಯೋದಯೇಽನ್ತರ್ಧೀಯತೇ ಸೂರ್ಯನ ಪತ್ನಿಯಾದ ರಾತ್ರಿ ಅಥವಾ ಉಷಸ್ಸು ಸೂರ್ಯೋದಯಾ ನಂತರ ನಾಶವಾಗುವುದು ಎಂದರೆ ಅದೃಶ್ಯವಾಗುವುದು ಎಂದು ಆದಿತ್ಯಪಕ್ಷದ ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಾದಶಃ ಖಂಡಃ

## ಹನ್ನೆರಡನೆಯ ಖಂಡವು

**ಸವಿತಾ ವ್ಯಾಖ್ಯಾತಸ್ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾಕೀರ್ಣರಶ್ಮಿರ್ಭವತಿ ತಸ್ಯೈಷಾ ಭವತಿ ॥ ೧೨ ॥**

**ಸವಿತಾ ವ್ಯಾಖ್ಯಾತಃ । ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾ ಕೀರ್ಣರಶ್ಮಿರ್ಭವತಿ ॥ ತಸ್ಯೈಷಾ ಭವತಿ ॥ ೧೨ ॥**

ಕ್ರಮಪ್ರಾಪ್ತವಾದ ಸವಿತೃಪದದ ನಿರ್ವಚನವನ್ನು ತೋರಿಸುತ್ತಾರೆ. 'ಸವಿತಾ ಸರ್ವಸ್ಯ ಪ್ರಸವಿತಾ' ಎಂದು ಇದು (ನಿ. ೧೦–೩೧) ಹಿಂದೆ ವ್ಯಾಖ್ಯಾತವಾಗಿದೆ. ಇಲ್ಲಿ ಸವಿತೃ ಎಂದರೆ ಆದಿತ್ಯನೆಂದು ತಿಳಿಯಬೇಕು. ಯಾವಾಗ ದ್ಯುಲೋಕವು ಕತ್ತಲೆಯಿಲ್ಲದೆ ಶುದ್ಧವಾಗಿರುವುದೋ, ಈ ಸವಿತೃವೂ ಕೂಡಾ ಸುತ್ತಲೂ ಚೆಲ್ಲಿದ ರಶ್ಮಿಯುಳ್ಳವನಾಗಿರುತ್ತಾನೋ ಆದು

ಸವಿತೃ ಸಂಬಂಧಿಕಾಲವೆಂದು ತಿಳಿಯಬೇಕು. ಆಗ ಭೂಮಿಯು ಕತ್ತಲೆಯಿಂದ ಆವೃತವಾಗಿಯೇ ಇರುತ್ತದೆ. ಈ ಸಮಯದಲ್ಲಿ ಆದಿತ್ಯನಿಗೇ ಸವಿತೃವೆಂದು ಹೆಸರು. ಮುಂದೆ ಹೇಳುವ ಮಂತ್ರವು ಸವಿತೃದೇವತಾ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಹನ್ನೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ಭದ್ರೇ ದ್ವಿಪದೇ ಚತುಷ್ಪದೇ । ವಿನಾಕಮುಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ (ಋ. ಸಂ. ೫-೮೧-೨) ಸರ್ವಾಣಿ ಪ್ರಜ್ಞಾನಾನಿ ಪ್ರತಿಮುಂಚತೇ ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ ಪ್ರಸುವತಿ ಭದ್ರೇ ದ್ವಿಪಾದ್ಭ್ಯಶ್ಚ ಚತುಷ್ಪಾದ್ಭ್ಯಶ್ಚ ವ್ಯಚಿಖ್ಯಾಪಯನ್ನಾಕಂ ಸವಿತಾ ವರಣೀಯಃ ಪ್ರಯಾಣಮನೂಷಸೋ ವಿರಾಜತ್ಯಧೋರಾಮಃ ಸಾವಿತ್ರ ಇತಿ ಪಶುಸಮಾಮ್ನಾಯೇ ವಿಜ್ಞಾಯತೇ ಕಸ್ಮಾತ್ಸಾಮಾನ್ಯದಿತ್ಯಧಸ್ತಾತ್ತದ್ವೇಲಾಯಾಂ ತಮೋ ಭವತ್ಯೇತಸ್ಮಾತ್ಸಾಮಾನ್ಯಾದಧಸ್ತಾದ್ರಾಮೋಽಧಸ್ತಾತ್ಕೃಷ್ಣ ತಸ್ಮಾತ್ಸಾಮಾನಾದಿತ್ಯಗ್ನಿಂ ಚಿತ್ವಾ ನ ರಾಮಾಮುಪೇಯದ್ರಾಮಾ ರಮಣಾಯೋಪೇಯತೇ ನ ಧರ್ಮಾಯ ಕೃಷ್ಣ ಜಾತೀಯೈತಸ್ಮಾತ್ಸಾಮಾನ್ಯಾತ್ ಕೃಕವಾಕುಃ ಸಾವಿತ್ರ ಇತಿ ಪಶುಸಮಾಮ್ನಾಯೇ ವಿಜ್ಞಾಯತೇ ಕಸ್ಮಾತ್ಸಾಮಾನ್ಯಾದಿತಿ ಕಾಲಾನುವಾದ ಪರೀತ್ಯ ಕೃಕವಾಕೋಃ ಪೂರ್ವಂ ಶಬ್ದಾನುಕರಣಂ ವಚೇರುತ್ತರಪದಂ ಭಗೋ ವ್ಯಾಖ್ಯಾತಸ್ತಸ್ಯ ಕಾಲಃ ಪ್ರಾಗುತ್ಸರ್ಪಣಾತ್ತಸ್ಯೈಷಾ ಭವತಿ ॥ ೧೩ ॥

ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ
ಚತುಷ್ಪದೇ । ವಿನಾಕಮುಖ್ಯತ್ಸವಿತಾ ವರೇಣ್ಯೋನ್ವುಪ್ರಯಾ-
ಣಮುಷಸೋ ವಿ ರಾಜತಿ ॥

ಸವಿತೃಸ್ತುತಿ ಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಮೇಧಾವಿಯಾದ ಸವಿತೃದೇವನು ಸಕಲರೂಪಗಳನ್ನೂ ಪ್ರಕಾಶಪಡಿಸಿದನು ಸರ್ವಾತ್ಮನಾದುದರಿಂದ ತನ್ನಲ್ಲಿಯೇ ಸೇರಿಸಿಕೊಂಡನು. ಮನುಷ್ಯ ಮತ್ತು ಪ್ರಾಣಿಗಳ ವ್ಯಾಪಾರವನ್ನು ಪ್ರೇರೇಪಿಸುತ್ತಾನೆ. ಆದುದರಿಂದ ಇವನು ಸರ್ವಶ್ರೇಷ್ಠನಾಗಿರುತ್ತಾನೆ. ಆಗ ರಶ್ಮಿಗಳು ಪ್ರಸರಿಸಿರುವುದರಿಂದ ಇವನು ದ್ಯುಲೋಕವನ್ನು ಪ್ರಕಾಶಪಡಿಸುತ್ತಾನೆ. ಉಷಸ್ಸಿನ ಉದಯವಾದ ಮೇಲೆ ವಿರಾಜಿಸುವ ಈ ಸವಿತೃದೇವನು ನಮ್ಮ ಇಷ್ಟಾರ್ಥವನ್ನು ನೆರವೇರಿಸಲಿ.

ಸರ್ವಾಣಿ ಪ್ರಜ್ಞಾನಾನಿ ಪ್ರತಿ ಪ್ರತಿಮುಂಚತೇ । ಮೇಧಾವೀ ಕವಿಃ
ಕ್ರಾಂತದರ್ಶನೋ ಭವತಿ । ಕವತೇ ವಾ । ಪ್ರಸುವತಿ ಭದ್ರಂ
ದ್ವಿಪಾದ್ಭ್ಯಶ್ಚ, ವ್ಯಚಿಖ್ಯಾಪಯನಾಕಂ ಸವಿತಾ ವರೇಣ್ಯಃ
ಪ್ರಯಾಣಮನೂಷಸೋ ವಿರಾಜತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಕವಿಶಬ್ದ ಮೇಧಾವಿನಾಮದಲ್ಲಿ (ನಿಘ. ೩–೧೫–೧೦) ಪಠಿತವಾದುದರಿಂದ ಮೇಧಾವಿಯೆಂದು ವ್ಯಾಖ್ಯಾನ ಮಾಡಿರುತ್ತಾರೆ. ಕ್ರಮುಧಾತುವಿಗೆ ಇನ್ಪ್ರತ್ಯಯ ಬಂದಾಗ ಮಕಾರಕ್ಕೆ ವಕಾರ, ರೇಫಲೋಪ ಬಂದಿದೆ. ಅತೀತಾನಾಗತ ವಿಪ್ರಕೃಷ್ಟವಿಷಯಕವಾಗಿ ಏಕಕಾಲದಲ್ಲಿ ಉಂಟಾಗುವ ಜ್ಞಾನವುಳ್ಳವನೇ ಕ್ರಾಂತದರ್ಶಿ. ಅಥವಾ ಶಬ್ದಾರ್ಥಕ ಕವತಿಧಾತುವಿನಿಂದ ಇದು ನಿಷ್ಪನ್ನವಾಗಿರುತ್ತದೆ. ಪ್ರಸುವತಿ. ಷು–ಪ್ರಸವೈಶ್ವರ್ಯಯೋಃ ಧಾತು. ಪ್ರಸವವೆಂದರೆ ಅಭ್ಯನುಜ್ಞಾನ.

ಅಧೋರಾಮಃ ಸವಿತ್ರ ಇತಿ ಪಶುಸಮಾಮ್ನಾಯೇ ವಿಜ್ಞಾಯತೇ ।
ಕಸ್ಮಾತ್ '(ಗುಣ) ಸಾಮಾನ್ಯಾದ್ ಇತಿ । ಅಧಸ್ತಾತ್ತದ್ವೇ-
ಲಾಯಾಂ ತಮೋ ಭವತಿ । ಏತಸ್ಮಾತ್ಸಾಮಾನ್ಯಾತ್ । ಅಧ-
ಸ್ತಾದಾಮೋಽಧಸ್ತಾನ್ ಕೃಷ್ಣಃ ॥

'ವಿನಾಕಮಖ್ಯತ್' ಎಂದು ಮಂತ್ರದಲ್ಲಿ ಸವಿತೃದೇವನ ಕಾಲೋಪಲಕ್ಷಣವಾಗಿ ಹೇಳಿದೆ. ಪಶುಗುಣಸಾಮಾನ್ಯದಿಂದ ಅದನ್ನು ಸಮರ್ಥಿಸುತ್ತಾರೆ. ಅಧೋರಾಮಃ ಸವಿತ್ರ ಎಂದು ಪಶುಸಮಾಮ್ನಾಯದಲ್ಲಿ ಹೇಳಿದೆ. ಕೆಳಭಾಗದಲ್ಲಿ ಕಪ್ಪುಬಣ್ಣವುಳ್ಳ ಒಂದು ಪ್ರಾಣಿಯಂತೆ ಈ ಸವಿತೃವಿನ ಕಾಲದಲ್ಲಿಯೂ ದ್ಯುಲೋಕದಲ್ಲಿ ಕಿರಣಗಳು ಪ್ರಸರಿಸಿರುವುದರಿಂದ ಬೆಳ್ಳಗೂ ಕೆಳಗಿನ ಭೂಭಾಗದಲ್ಲಿ ಕತ್ತಲೆ ವ್ಯಾಪಿಸಿರುವುದರಿಂದ ಕಪ್ಪಾಗಿಯೂ ಇರುತ್ತದೆ. ಹೀಗೆ ಗುಣಸಾಮ್ಯದಿಂದ ಅಧೋರಾಮಃ ಎಂದು ಹೇಳಿದೆ.

ಕಸ್ಮಾತ್ಸಾಮಾನ್ಯಾತ್ ಇತಿ । ಅಗ್ನಿಂ ಚಿತ್ವಾ ನ ರಮಾಮುಪೇಯಾತ್ ।
ರಾಮಾ ರಮಣಾಯೋಪೇಯತೇ ನ ಧರ್ಮಾಯ ಕೃಷ್ಣಜಾ-
ತೀಯಾ । ಏತಸ್ಮಾತ್ಸಾಮಾನ್ಯಾತ್ ।

ಇನ್ನೊಂದು ರೀತಿಯಿಂದ ಸಾಮ್ಯವನ್ನು ವ್ಯಕ್ತಪಡಿಸುತ್ತಾರೆ. ಅಘೋರಾಮಃ ಎಂಬುದಕ್ಕೆ ಕೆಳಗೆ ಕತ್ತಲೆಯಾದುದರಿಂದ ಅಧಃ ಕೃಷ್ಣಃ ಎಂದು ಹೇಳಿದೆ. ಇದು ರಾಮಾ ಸಾಮಾನ್ಯದಿಂದ ಹೇಳಿದೆ ಅಗ್ನಿಚಯನವಾದ ಮೇಲೆ ರಾಮಾಗಮನ ಮಾಡಬಾರದು ಎಂದು ಶ್ರುತಿವಚನ. ಇಲ್ಲಿ ರಾಮಾ ಅಂದರೆ ಶೂದ್ರ ಹೆಂಗಸು. ಇವಳು ಕೇವಲ ಸಂಭೋಗಸುಖಕ್ಕೋಸ್ಕರ ದ್ವಿಜನಿಂದ ಸ್ವೀಕರಿಸಲ್ಪಡುತ್ತಾಳೆ. ಧರ್ಮಕಾರ್ಯಸಂಬಂಧ ಹೊಂದುವುದಿಲ್ಲ. ಕೃಷ್ಣಜಾತಿಯ ಶೂದ್ರಸ್ತ್ರೀಯನ್ನು ರಾಮಾ ಎಂದು ಕರೆಯುತ್ತಾರೆ. ಹೀಗೆ ಸ್ತ್ರೀವಿಶೇಷವನ್ನು ಹೇಳುವ ರಾಮಾ ಶಬ್ದವು ಗುಣಸಾಮಾನ್ಯದಿಂದ ಪಶುವಿಶೇಷದಲ್ಲಿಯೂ ಪ್ರಯುಕ್ತವಾಗುತ್ತದೆ.

ಕೃಕವಾಕುಃ ಸಾವಿತ್ರಃ ಇತಿ ಪಶುಸಮಾಮ್ನಾಯೇ ವಿಜ್ಞಾಯತೇ ।
ಸಃ ತಸ್ಮಾತ್ಸಾಮಾನ್ಯಾತ್? ಇತಿ । ಕಾಲಾನುವಾದಂ ಪರೀತ್ಯ ।
ಕೃತವಾಕೋಃ ಪೂರ್ವಂ ಶಬ್ದಾನುಕರಣವ್ । ವಚೇರುತ್ತರ-
ಪದವ್ ॥

ಸಾವಿತ್ರಕಾಲವನ್ನು ಕೃಕವಾಕು ಪ್ರಾಣಿ ದೃಷ್ಟಾಂತದಿಂದ ವ್ಯಕ್ತಪಡಿಸುತ್ತಾರೆ. ಕೃಕವಾಕುವೆಂದರೆ ಕೋಳಿ. ಇದು ಸಾವಿತ್ರ ಕಾಲದಲ್ಲಿ ಸ್ಪಷ್ಟವಾಗಿ ಶಬ್ದಮಾಡುತ್ತದೆ. ಬೆಳಗಿದ ಜಾವದಲ್ಲಿ ಕೋಳಿಯ ಕೂಗು ಪ್ರಸಿದ್ಧವಾಗಿದೆ. ಕೃಕವಾಕುಪದದ ನಿರ್ವಚನವನ್ನು ತೋರಿಸುತ್ತಾರೆ. ಕೃಕವೆಂಬುದು ಶಬ್ದಾನುಕರಣ. ಕೃಕವೆಂಬ ಶಬ್ದವನ್ನು ಮಾಡುತ್ತದೆ. ವಚಧಾತು ಉತ್ತರಪದ. 'ಕೃಕೇ ವಚಃ ಕಶ್ಚ' ಎಂಬುದರಿಂದ ಕೃಕ ಉಪಪದವಾಗಿರುವಾಗ ವಚಧಾತುವಿಗೆ ಉಣ್ ಪ್ರತ್ಯಯ. ಚಕಾರಕ್ಕೆ ಕಕಾರ. ಉಪಧಾವೃದ್ಧಿ. 'ಕೃಕವಾಕುಸ್ತಾಮ್ರಚೂಡಃ ಕುಕ್ಕುಟಶ್ಚರಣಾಯುಧಃ' ಎಂದು ಅಮರ.

ಭಗೋ ವ್ಯಾಖ್ಯಾತಃ । ತಸ್ಯ ಕಾಲಃ ಪ್ರಾಗುತ್ಸರ್ಪಣಾತ್ । ತಸ್ಯೈಷಾ
ಭವತಿ ॥ ೧೩ ॥

ಭಗಶಬ್ದದ ನಿರ್ವಚನವನ್ನು ಹೇಳಬೇಕು. 'ಭಗೋ ಭಜತೇಃ' (ನಿ. ೩-೧೬) ಎಂದು ಇದು ಹಿಂದೆಯೇ ವ್ಯಾಖ್ಯಾತವಾಗಿದೆ ಅಲ್ಲಿ ಶಬ್ದವ್ಯುತ್ಪತ್ತಿಯಿಂದ ಸ್ತ್ರೀಭಗವಾದರೂ ಇಲ್ಲಿ ಸೂರ್ಯನೆಂದೇ ಅರ್ಥ. ಸಾವಿತ್ರಕಾಲವಾದ ಮೇಲೆ ಇವನ ಕಾಲ ವಾದುದರಿಂದ ಭಗವೆಂಬ ಜ್ಯೋತಿಸ್ಸೆಂದು ಹೇಳುತ್ತಾರೆ. ಮುಂದೆ ಹೇಳುವ ಮಂತ್ರವು ಭಗಸ್ತುತಿಯನ್ನು ಪ್ರತಿಪಾದಿಸುತ್ತದೆ.

ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾದೀದ್ಭದ್ರಂ ದ್ವಿಪದೇ
ಚತುಷ್ಪದೇ ।
ವಿ ನಾಕಮಖ್ಯತ್ಸವಿತಾ ವರೇಣ್ಯೋನು ಪ್ರಯಾಣಮುಷಸೋ ವಿ ರಾಜತಿ ॥

ಮೇಧಾವಿಯಾದ ಸವಿತೃವು ಸಮಸ್ತವಾದ ರೂಪಗಳನ್ನೂ ತನ್ನಲ್ಲೇ ಧರಿಸಿಕೊಳ್ಳುತ್ತಾನೆ. ಎರಡು ಕಾಲುಳ್ಳ ಮಾನವಾದಿಗಳಿಗೂ, ನಾಲ್ಕುಕಾಲುಳ್ಳ ಗವಾದಿಗಳಿಗೂ ಕಲ್ಯಾಣವನ್ನುಂಟುಮಾಡಿದ್ದಾನೆ. ಅತ್ಯಂತ ಪೂಜ್ಯನಾದ ಸವಿತೃವು

ಸ್ವರ್ಗವನ್ನು ಪ್ರಕಾಶಿಸುವಂತೆ ಮಾಡಿದ್ದಾನೆ. ಉಷೋದೇವಿಯ ಉದಯದ ಮಾರ್ಗವನ್ನನುಸರಿಸಿ ಅದನ್ನು ಪ್ರಕಾಶಿಸುವಂತೆ ಮಾಡಿ ತಾನೂ ಪ್ರಕಾಶಿಸುತ್ತಾನೆ.

ಹವಿರ್ಧಾನಪ್ರವರ್ತನವೆಂಬ ಸೋಮಾನಯನಕ್ಕಾಗಿ ಇರುವ ಗಾಡಿಗಳನ್ನು ತರುವಾಗ ವಿಶ್ವಾ ರೂಪಾಣಿ ಎಂಬ ಈ ಋಕ್ಕನ್ನು ಅನುವಚನೀಯಾ ಋಕ್ಕನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂಕ್ತದ—ವಿಶ್ವರೂಪಾಣಿ ಪ್ರತಿಮುಂಚತೇ ಕವಿರಿತಿ ವ್ಯವಸ್ತಾಯಾಂ ಎಂಬ ಸೂಕ್ತದಿಂದ (ಅ. ೪–೯) ವಿವೃತವಾಗಿರುವುದು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ದಶಃ ಖಂಡಃ

## ಹದಿನಾಲ್ಕನೆಯ ಖಂಡವು

ಪ್ರಾತರ್ಜಿತಂ ಭಗಮುಗ್ರಂ ಹುವೇವ ವಯಂ ಪುತ್ರಮದಿತೇರ್ಯೋ ವಿಧರ್ತಾ । ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯ ಭಗಂ ಭಕ್ಷೀತ್ಯಾಹ (ಋ. ಸಂ. ೭-೪೧-೨) ॥ ಪ್ರಾತರ್ಜಿತಂ ಭಗಮುಗ್ರಂ ಹ್ವಯೇಮ ವಯಂ ಪುತ್ರಮದಿತೇರ್ಯೋ ವಿಧಾರಯಿತಾ ಸರ್ವಸ್ಯಾಧ್ರಶ್ಚಿದ್ಯಂ ಮನ್ಯಮಾನ ಆಢ್ಯಾಲುರಿದ್ರುಸ್ತುರಶ್ಚಿತ್ತುರ ಇತಿ ಯಮನಾಮ ತರತೇರ್ವಾ ತ್ವರತೇರ್ವಾ ತ್ವರಯಾ ತೂರ್ಣಗತಿರ್ಯಮೋ ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹಾಂಧೋ ಭಗ ಇತ್ಯಾಹುರನುತ್ಸೃಪ್ತೋ ನ ದೃಶ್ಯತೇ ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನೇತಿ ಚ ಬ್ರಾಹ್ಮಣಂ ಜನಂ ಭಗೋ ಗಚ್ಛತೀತಿ ವಾಜನಂ ಗಚ್ಛತ್ಯಾದಿತ್ಯ ಉದಯೇನ ಸೂರ್ಯಃ ಸರ್ತೇರ್ವಾ ಸುವತೇರ್ವಾ ಸ್ವೀರ್ಯತೇರ್ವಾ ತಸ್ಯೈಷಾ ಭವತಿ ॥ ೧೪ ॥

ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ
ವಿಧರ್ತಾ । ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ
ಭಗಂ ಭಕ್ಷೀತ್ಯಾಹ ।

(ಋ. ಸಂ ೫–೪–೮)

ಭಗನಾಮಕಾದಿತ್ಯನ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಾವು ಪ್ರಭಾತಕಾಲದಲ್ಲಿ ಕತ್ತಲೆಯನ್ನು ಹೋಗಲಾಡಿಸಿರುವ, ಅಭಿವ್ಯಕ್ತನಾದ, ಭಗದೇವನನ್ನು ಆಹ್ವಾನಿಸುತ್ತೇವೆ. ಅವನ್ನು ತನ್ನ ಅನುಗ್ರಹದಿಂದ ಪ್ರಪಂಚವನ್ನು ಧರಿಸಿರುತ್ತಾನೆ. ದರಿದ್ರನೂ ಇವನನ್ನು ಅಪೇಕ್ಷಿಸಿ ಪೂಜಿಸುತ್ತಾನೆ. ಯಮನೂ ತನ್ನ ಕರ್ತವ್ಯವನ್ನು ನೆರವೇರಿಸಲು ಇವನನ್ನು ಸೇವಿಸುತ್ತಾನೆ. ರಾಜನೂ ಸರ್ವಸೇವ್ಯವಾದ ಇವನನ್ನು ಧನವನ್ನನುಗ್ರಹಿಸು ಎಂದು ಪ್ರಾರ್ಥಿಸುತ್ತಾನೆ. ಈ ರೀತಿ ಮಹಾಮಹಿಮನಾದ ಇವನನ್ನು ಪ್ರಾತಃಕಾಲದಲ್ಲಿಯೇ ಪೂಜಿಸಲು ಆಹ್ವಾನಿಸುತ್ತೇವೆ.

ಪ್ರಾತರ್ಜಿತಂ ಭಗಮುಗ್ರಂ ಹ್ವಯೇಮ ವಯಂ ಪುತ್ರಮದಿತೇರ್ಯೋ
ವಿಧಾರಯಿತಾ ಸರ್ವಸ್ಯಾಧ್ರಶ್ಚಿದ್ಯಂ ಮನ್ಯಮಾನ ಆಧ್ಯಾಲುರ್ದರಿದ್ರ
ಸ್ತುರಶ್ಚಿತ್ । ತುರ ಇತಿ ಯಮನಾಮ, ತರತೇರ್ವಾ, ತ್ವರತೇರ್ವಾ,
ತ್ವರಯಾತೂರ್ಣಗತಿರ್ಯಮಃ । ರಾಜಾ ಚಿದ್ಯಂ ಭಗಂಭಕ್ಷೀತ್ಯಾಹ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಆಧ್ರಪದಕ್ಕೆ ಆಧ್ಯಾಲು ಎಂದು ವ್ಯಾಖ್ಯಾನ. ಧನಿಕರನ್ನಾಶ್ರಯಿಸಿ ಇರುವವನು. ಆಢ್ಯಪದ ಉಪಪದವಾಗಿರುವಾಗ ಧ್ರಿಧಾತುವಿಗೆ ಕಪ್ರತ್ಯಯ. ಪೃಷೋದರಾದಿಯಲ್ಲಿ ಸೇರಿರುವುದರಿಂದ ವರ್ಣಲೋಪ ಬಂದು ಆಧ್ರ ಎಂದಾಗಿದೆ. ತುರಃ ಅಂದರೆ ಯಮನು. ಇವನ್ನು ಪ್ರಾಣಿಗಳನ್ನು ತನ್ನ ಕಡೆಗೆ ಸೇರಿಸಿಕೊಳ್ಳಲು ತ್ವರೆಪಡುತ್ತಾನೆ. ಞಿತ್ವರಾ-ಸಂಭ್ರಮೇ ಧಾತು. ಘಪ್ರತ್ಯಯ ಬಂದಾಗ ವಕಾರಕ್ಕೆ ಸಂಪ್ರಸಾರಣ. ತ್ವರೆಪಡುವುದರಿಂದಲೇ ತ್ವರಿತ ಗಮನವುಳ್ಳವನಾಗುತ್ತಾನೆ.

ಅಂಧೋ ಭಗ ಇತ್ಯಾಹುಃ । ಅನುತ್ಸೃಪ್ತೋ ನ ದೃಶ್ಯತೇ ।
ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನ ಇತಿ ಚ ಬ್ರಾಹ್ಮಣಮ್ ।
ಜನಂ ಭಗೋ ಗಚ್ಛತಿ ಇತಿ ವಾ ವಿಜ್ಞಾಯತೇ । ಜನಂ
ಗಚ್ಛತ್ಯಾದಿತ್ಯ ಉದಯೇನ ॥

ಭಗದೇವನನ್ನು ಅಂಧನೆಂದು ಕರೆಯುತ್ತಾರೆ. ಇವನು ಕಣ್ಣಿಲ್ಲದ ಕುರುಡನಲ್ಲ. ಆದಿತ್ಯನೊಡನೆ ಸಂಮಿಶ್ರಿತನಾದುದರಿಂದ ಜನರು ಇವನನ್ನು ನೋಡುವುದಿಲ್ಲ. ಇದರಿಂದ ಯಾರಿಗೂ ತೋರದಿರುವುದರಿಂದ ಅಂಧತ್ವವನ್ನು ಆರೋಪಿಸಿರುತ್ತಾರೆ. ಆದುದರಿಂದಲೇ ಉದಯದಿಂದ ಆದಿತ್ಯನು ಜನರನ್ನು ಹೊಂದುವುದರಿಂದ ಭಗದೇವನೂ ಜನರನ್ನು ಕುರಿತು ಹೋಗುತ್ತಾನೆ ಎಂದು ಹೇಳುತ್ತಾರೆ.

ಸೂರ್ಯಃ ಸರ್ತೇರ್ವಾ ಸುವತೇರ್ವಾ ಸ್ವೀರ್ಯತೇರ್ವಾ ।
ತಸ್ಯೈಷಾ ಭವತಿ ॥ ೧೪ ॥

ಕ್ರಮಪ್ರಾಪ್ತವಾದ ಸೂರ್ಯಪದದ ನಿರ್ವಚನವನ್ನು ತೋರಿಸುತ್ತಾರೆ. ಭಗದೇವನ ಕಾಲವಾದ ಮೇಲೆ ಸೂರ್ಯನಕಾಲ. ಭಗಕಾಲದಿಂದ ಮುಂದೆ ಸರ್ಪಣ ಅಂದರೆ ಹೋಗುವುದು ಇರುವುದರಿಂದ ಸೂರ್ಯನೆಂದಾಗಿದ್ದಾನೆ. ಗತ್ಯರ್ಥಕ ಸೃಧಾತುವಿ

ನಿಂದ ನಿಷ್ಪನ್ನವಾಗಿದೆ. ಸರತಿ ಆಕಾಶೇ ಇತಿ ಸೂರ್ಯ. ಅಥವಾ ಪ್ರೇರಣಾರ್ಥಕ ಸೂಧಾತುವಿನಿಂದ ಇದು ನಿಷ್ಪನ್ನವಾಗಿದೆ. ಲೋಕವನ್ನು ಸ್ವಸ್ವವ್ಯಾಪಾರದಲ್ಲಿ ಪ್ರೇರೇಪಿಸುವವನು ಎಂದರ್ಥ. 'ರಾಜಸೂಯ ಸೂರ್ಯ'—ಸೂತ್ರದಿಂದ ಸೂರ್ಯ ಎಂದು ನಿಪಾತಮಾಡಿರುತ್ತಾರೆ. ಅಥವಾ ಸುಪೂರ್ವದಲ್ಲಿರುವಾಗ ಗತ್ಯರ್ಥಕ ಈರಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಯಬೇಕು. ವಾಯುವಿನಿಂದ ಇವನು ಆಕಾಶದಲ್ಲಿ ಹೋಗುವಂತೆ ಆಗುತ್ತಾನೆ ಎಂದರ್ಥ. ಮುಂದೆ ಹೇಳುವ ಮಂತ್ರವು ಸೂರ್ಯಸ್ತುತಿಯನ್ನು ಪ್ರತಿಪಾದಿಸುತ್ತದೆ.

ಪ್ರಾತರ್ಜಿತಂ ಭಗಮುಗ್ರಂ ಹ್ವಯೇಮ ವಯಂ ಪುತ್ರಮದಿತೇರ್ಯೋ
ವಿಧರ್ತಾ ।
ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ॥ ೨ ॥

ಸ್ತೋತೃವು ದರಿದ್ರನಾಗಲಿ ಅಥವಾ ಪ್ರಭುವಾಗಲಿ, ಯಾವ ಸ್ಥಿತಿಯಲ್ಲಿದ್ದರೂ ಸಹ ಪೂಜ್ಯನಾದ ಭಗನನ್ನೇ ಪ್ರಾರ್ಥಿಸುತ್ತ "ನನಗೆ ಪೂಜ್ಯವಾದ ಧನವನ್ನು ಕೊಡು" ಎಂಬುದಾಗಿ ಯಾವ ಭಗನನ್ನು ಪ್ರಾರ್ಥಿಸುವರೋ, ಯಾರು ಸಕಲ ಜಗತ್ತಿಗೂ ಧಾರಕನೋ, ಅಂತಹ ಜಯಶೀಲನೂ, ಅಧಿಕವಾದ ಬಲವುಳ್ಳವನೂ, ಅದಿತಿಪುತ್ರನೂ ಆದ ಭಗದೇವನನ್ನು ನಾವು ಈ ಪ್ರಾತಃಕಾಲದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ.

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ಪ್ರಾತರ್ಜಿತಂ ಧನಮುಗ್ರಂ ಹ್ವಯೇಮ ವಯಂ ಪುತ್ರಮದಿತೇರ್ಯೋ ವಿಧಾರಯಿತಾ ಸರ್ವಸ್ಯಾಧ್ರಶ್ಚಿದ್ಯಂ ಮನ್ಯಮಾನ ಆಢ್ಯಾಲುರ್ದರಿದ್ರಸ್ತುರಶ್ಚಿತ್ । ತುರ ಇತಿ ಯಮನಾಮ ತರತೇರ್ವಾ ತ್ವರತೇರ್ವಾತ್ವರಯಾ ತೂರ್ಣಗತಿರ್ಯಮೋ ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ॥ ಅಂಧೋ ಭಗ ಇತ್ಯಾಹುರನುತ್ಸೃಪ್ತೋ ನ ದೃಶ್ಯತೇ । ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನೇತಿ ಚ ಬ್ರಾಹ್ಮಣಂ । ಜನಂ ಭಗೋ ಗಚ್ಛತೀತಿ ವಾ ವಿಜ್ಞಾಯತೇ ಜನಂ ಗಚ್ಛತ್ಯಾದಿತ್ಯ ಉದಯೇನ ॥

(ನಿ. ೧೨–೧೪)

ಪ್ರಾತಃಕಾಲದಲ್ಲಿ ಜಯಶೀಲನಾದವನೂ, ಬಲಶಾಲಿಯೂ, ಆದಿತಿಯ ಪುತ್ರನೂ, ಸಮಸ್ತವನ್ನೂ ಧರಿಸಿ ಕಾಪಾಡುವವನೂ ಇದ ಭಗನೆಂಬ ದೇವತೆಯನ್ನು ನಾವು ಈ ಪಾತಃಕಾಲದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ. ದರಿದ್ರನಾಗಲಿ, ಧನಿಕನಾಗಲಿ ಧನಪ್ರಾಪ್ತಿಗಾಗಿ ಈ ಭಗನನ್ನು ಧನವನ್ನು ಕೊಡೆಂದು ಧ್ಯಾನಿಸುತ್ತಾ ಪ್ರಾರ್ಥಿಸಬೇಕು. ತುರಃ ಎಂಬ ಶಬ್ದವು ದಾಟು ಎಂಬರ್ಥವುಳ್ಳ ತರತಿ ಧಾತುವಿನಿಂದಾಗಲಿ, ಜಾಗ್ರತೆಮಾಡು ಎಂಬರ್ಥವುಳ್ಳ ತ್ವರತಿಧಾತುವಿನಿಂದಾಗಲಿ, ನಿಷ್ಪನ್ನವಾಗ ಬಹುದು. ಯಮನು ವೇಗಗಮನವುಳ್ಳವನು. ರಾಜನೂ ಸಹ ಈ ಭಗದೇವನನ್ನು ನನಗೆ ಪೂಜ್ಯವಾದ ಧನವನ್ನು ಕೊಡು ಕೇಳಿಕೊಳ್ಳುವನು.

ಈ ಭಗನು ಅಂಧನೆಂದು (ಕುರುಡನೆಂದು) ಕೆಲವರು ಹೇಳುವರು. ಎಂದರೆ ಈ ದೇವನು ಯಾರ ದೃಷ್ಟಿಗೂ ಬೀಳುವುದಿಲ್ಲ. (ಭಗನು ಸೂರ್ಯನು ಎಂಬರ್ಥದಲ್ಲಿ) ಇನ್ನೂ ಉದಯವಾಗದಿರುವಾಗ ಈ ದೇವನು ಯಾರಿಗೂ ಗೋಚರಿಸುವು

ದಿಲ್ಲ. ಈ ವಿಷಯದಲ್ಲಿ ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನ । ಪ್ರಾಶಿತ್ರನೆಂಬುವನು ಈ ದೇವನ ಎರಡು ಕಣ್ಣುಗಳನ್ನು ನಾಶಮಾಡಿದನು ಎಂದು ಹೇಳುವ ಬ್ರಾಹ್ಮಣವಾಕ್ಯವೂ ಉದಾಹರಣೆಯಾಗಿರುವುದು. ಈ ಭಗವು (ಅದೃಷ್ಟ, ಐಶ್ವರ್ಯ) ಮನುಷ್ಯರ ಬಳಿಗೆ ಹೋಗುವುದೆಂದು ತಿಳಿಯಬೇಕು. ಎಂದರೆ, ಭಗವು ಅಥವಾ ಆದಿತ್ಯನು ಉದಯಾನಂತರ ರಶ್ಮಿಗಳ ಮೂಲಕ ಜನರ ಬಳಿಗೆ ಹೋಗುವನು ಎಂದು ನಿರ್ವಚನಾಭಿಪ್ರಾಯವು.

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ಹದಿನಾಲ್ಕನೆಯ ಖಂಡವು ಸಮಾಪ್ತವಾಗಿದೆ.

## ಅಥ ಪಂಚದಶ ಖಂಡಃ

## ಹದಿನೈದನೆಯ ಖಂಡವು

ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ (ಋ. ಸಂ. ೧-೫೦-೧) ॥ ಉದ್ವಹಂತಿ ತಂ ಜಾತವೇದಸಂ ರಶ್ಮಯಃ ಕೇತವಃ ಸರ್ವೇಷಾಂ ಭೂತಾನಾಂ ದರ್ಶನಾಯ ಸೂರ್ಯಮಿತಿ ತಸ್ಯೈಷಾಪರಾ ಭವತಿ ॥ ೧೫ ॥

ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥

(ಋ. ಸಂ. ೧-೪-೭) (ಯ. ವಾ. ಸಂ. ೭-೪೧) (ಸಾ. ಛಂ. ಛ. ಆ. ೧-೧-೩೧-೧೦)

ಸೂರ್ಯಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಪ್ರಜ್ಞಾಪಕಗಳಾದ ರಶ್ಮಿಗಳು ಸಕಲ ಪ್ರಪಂಚಕ್ಕೆ ನೋಡಲು ಸೂರ್ಯನ ಉದಯವನ್ನುಂಟುಮಾಡುತ್ತವೆ. ಈ ಸಕಲ ಪ್ರಾಣಿಗಳನ್ನೂ ತಿಳಿಯುವ ಸೂರ್ಯನನ್ನು ಸ್ತುತಿಸುತ್ತೇವೆ.

ಉದ್ವಹಂತಿ ತಂ ಜಾತವೇದಸಂ ರಶ್ಮಯಃ ಕೇತವಃ । ಸರ್ವೇಷಾಂ ಭೂತಾನಾಂ ದರ್ಶನಾಯ ಸೂರ್ಯಮಿತಿ । ಕಮನ್ಯಮಾದಿತ್ಯಾ-ದೇವಮವಕ್ಷ್ಯತ್ । ತಸ್ಯೈಷಾಽಪರಾ ಭವತಿ ॥ ೧೫ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಕೇತು ಶಬ್ದ ಪ್ರಜ್ಞಾನಾಮದಲ್ಲಿ (ನಿಘ. ೩-೯-೨) ಪಠಿತವಾಗಿದೆ. ಜನರು ನೋಡುವುದಕ್ಕೋಸ್ಕರ ಸೂರ್ಯನನ್ನು ಪ್ರಕಾಶಪಡಿಸುತ್ತವೆ. ಇದು ಸೂರ್ಯನನ್ನಲ್ಲದೆ ಇನ್ನಾವ ದೇವತೆಯನ್ನು ಸ್ತುತಿಸುತ್ತದೆ. ಆದರೂ ಜಾತವೇದಸಂ ಎಂದುದರಿಂದ ಅಗ್ನಿಯನ್ನೇ ಅಥವಾ ಸೂರ್ಯನನ್ನೇ ಎಂದು ಸಂದೇಹಪಡಬಹುದು. ಅದಕ್ಕೋಸ್ಕರ ಸ್ಪಷ್ಟವಾಗಿ ಸೂರ್ಯನನ್ನೇ ಸ್ತುತಿಸುವ ಇನ್ನೊಂದು ಮಂತ್ರವನ್ನು ಉದಾಹರಿಸುತ್ತಾರೆ.

ಉದು ತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ ।
ದೃಶೇ ವಿಶ್ವಾಯ ಸೂರ್ಯಂ ॥ ೧ ॥

ಸರ್ವರನ್ನೂ ತಮ್ಮ ತಮ್ಮ ವ್ಯವಹಾರದಲ್ಲಿ ಪ್ರೇರಿಸತಕ್ಕ ಸೂರ್ಯದೇವನು ಲೋಕಪ್ರಸಿದ್ಧನು. ಉತ್ಪನ್ನವಾದ ಸಕಲವನ್ನೂ ತಿಳಿದವನು. ಉತ್ಪನ್ನವಾದ ಧನವುಳ್ಳವನು. ಮತ್ತು ಪ್ರಕಾಶಮಾನನು. ಇಂತಹ ದಿವ್ಯಗುಣಗಳುಳ್ಳ ಸೂರ್ಯನನ್ನು ಅವನ ಆಗಮನವನ್ನು ಸೂಚಿಸತಕ್ಕ ಕುದುರೆಗಳು ಅಥವಾ ಅವನ ಕಿರಣಗಳು ಸಮಸ್ತ ಲೋಕದ ದರ್ಶನಕ್ಕಾಗಿ ಮೇಲೆತ್ತಿ ಹಿಡಿಯುತ್ತವೆ.

ಈ ಸೂಕ್ತವು ಸೂರ್ಯದೇವತಾಕವು. ಋಗ್ವೇದದಲ್ಲಿ ಸೂರ್ಯದೇವತಾಕವಾದ ಋಕ್ಕಗಳು ಒಟ್ಟು ಅವತ್ತೂವರೆ ಇರುವವು. ಇವುಗಳನ್ನು ಒಟ್ಟುಗೂಡಿಸಿ ಸೌರಸೂಕ್ತವೆಂದು ಕರೆಯುವರು. ಸೂರ್ಯೋಪಸ್ಥಾನದಲ್ಲಿಯೂ ಸೂರ್ಯನಮಸ್ಕಾರ ಮುಂತಾದ ಪೂಜಾಕರ್ಮಗಳಲ್ಲಿಯೂ ಈ ಸೌರಸೂಕ್ತವನ್ನು ಪಠಿಸುವರು. ಸೂರ್ಯ, ಆದಿತ್ಯ, ಸವಿತೃ ಎಂಬ ದೇವತೆಗಳು ಒಂದೇ ವ್ಯಕ್ತಿಯಾದ ಸೂರ್ಯನನ್ನು ಸೂಚಿಸುವುದಾದರೂ ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಸೂರ್ಯಪ್ರತಿಪಾದಿತವಾದ ಋಕ್ಕುಗಳು ಹೆಚ್ಚಾಗಿಲ್ಲ. ಆದಿತ್ಯಸವಿತೃದೇವತಾಕವಾದ ಅನೇಕ ಸೂಕ್ತಗಳಿರುವವು.

ಸೂರ್ಯಶಬ್ದಕ್ಕೆ ಯಾಸ್ಕರು—**ಸೂರ್ಯಃ ಸರ್ತೇರ್ವಾ । ಸುವತೇರ್ವಾ । ಸ್ವೀರ್ಯತೇರ್ವಾ ॥** (ನಿ. ೧೨-೧೪) ಎಂದರೆ ಚಲಿಸುವುದರಿಂದ, ಸಮಸ್ತವನ್ನು ಹುಟ್ಟಿಸುವುದರಿಂದ ಅಥವಾ ಸಮಸ್ತ ಪ್ರಾಣಿವರ್ಗವನ್ನು ಪ್ರೇರಿಸುವುದರಿಂದ ಸೂರ್ಯನೆಂದು ಹೆಸರು ಎಂದು ಸೂರ್ಯ ಶಬ್ದಕ್ಕೆ ನಿಷ್ಪತ್ತಿಯನ್ನು ಹೇಳಿರುವರು ಮತ್ತು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

**ಉದ್ವಹಂತಿ ತಂ ಜಾತವೇದಸಂ ರಶ್ಮಯಃ ಕೇತವಃ ಸರ್ವೇಷಾಂ ಭೂತಾನಾಂ ದರ್ಶನಾಯ ಸೂರ್ಯಮಿತಿ । ಕಮನ್ಯಮಾದಿತ್ಯಾದೇವಮವಕ್ಷ್ಯತ್ ॥** (ನಿ. ೧೨-೧೫).

ಈ ನಿರ್ವಚನವು ಭಾಷ್ಯಕಾರರು ಹೇಳಿರುವ ಅರ್ಥದಂತೆಯೇ ಇರುವುದರಿಂದ ಇದರ ವಿವರಣೆಯ ಅವಶ್ಯಕವಿಲ್ಲ.

**ತ್ಯಂ**—ಈ ಶಬ್ದವು ತಚ್ಛಬ್ದಾರ್ಥವನ್ನು ಸೂಚಿಸುವುದು. ತ್ಯಂ ಎಂದರೆ ತಂ ಎಂದರ್ಥವು.

**ಜಾತವೇದಸಂ**— **ಜಾತಾನಿ ವೇತ್ತೀತಿ ಜಾತವೇದಾಃ ತಂ।** ಪ್ರಪಂಚದಲ್ಲಿ ಹುಟ್ಟಿದ ಸಮಸ್ತವನ್ನೂ ತಿಳಿಯುವವನು

**ದೇವಂ**—ಪ್ರಕಾಶಮಾನವಾದ, ಸ್ವರ್ಗದಲ್ಲಿ ಬೆಳಗುತ್ತಿರುವ.

ಉತ್ ವಹಂತಿ—ಮೇಲೆ ವಹಿಸುತ್ತವೆ. ಅಥವಾ ಧರಿಸುತ್ತವೆ. ಸೂರ್ಯಾಶ್ವಗಳು ಅಥವಾ ಸೂರ್ಯನ ರಶ್ಮಿಗಳು ಸೂರ್ಯನನ್ನು ಎಲ್ಲರಿಗೂ ಕಾಣಿಸುವಂತೆ ಅಂತರಿಕ್ಷದ ಮೇಲುಭಾಗದಲ್ಲಿ ಸೂರ್ಯನನ್ನು ಎತ್ತಿ ಹಿಡಿಯುತ್ತವೆ ಎಂದರೆ ಎತ್ತರವಾದ ಮಾರ್ಗದಿಂದ ಕೊಂಡೊಯ್ಯುತ್ತವೆ.

ಕೇತವಃ— ಕೇತು ಶಬ್ದಕ್ಕೆ ಪ್ರಜ್ಞೆಯೆಂದೂ (ನಿ. ೩–೧೩) ರಶ್ಮಿಯೆಂದೂ ಅರ್ಥವಿರುವುದರಿಂದ ಇಲ್ಲಿ ಪ್ರಜ್ಞೆಯಿಂದ ಕೂಡಿದ ಸೂರ್ಯಾಶ್ವಗಳು ಅಥವಾ ಸೂರ್ಯನ ರಶ್ಮಿಗಳು ಎಂಬರ್ಥವನ್ನು ಭಾಷ್ಯಕಾರರೂ ಸ್ಕಂದಸ್ವಾಮಿಯೂ ಹೇಳಿರುವರು.

ದೃಶೇ—ದ್ರಷ್ಟುಂ । ದರ್ಶನಾಯ । ಎಲ್ಲರಿಗೂ ಕಾಣಿಸುವುದಕ್ಕಾಗಿ, ಎಲ್ಲರೂ ನೋಡುವುದಕ್ಕಾಗಿ.

ವಿಶ್ವಾಯ—ವಿಶ್ವಸ್ಮೈ ಭುವನಾಯ । ಸಮಸ್ತ ಪ್ರಪಂಚ ಅಥವಾ ಸಮಸ್ತ ಜನರ(ಪ್ರಾಣಿಗಳ)ದರ್ಶನಾರ್ಥವಾಗಿ

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಹದಿನೈದನೆಯ ಖಂಡವು ಸಮಾಪ್ತವು.

---

## ಅಥ ಷೋಡಶ ಖಂಡಃ

## ಹದಿನಾರನೆಯ ಖಂಡವು

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆ ಪ್ರಾದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ । (ಋ. ಸಂ. ೧-೧೧೫-೧) ॥ ಚಾಯನೀಯಂ ದೇವಾನಾಮುದಗಪದನೀಕಂ ಖ್ಯಾನಂ ಮಿತ್ರಸ್ಯ ವರುಣಸ್ಯಾಗ್ನೇಶ್ಚಾಪೂಪುರದ್ ದ್ಯಾವಾಪೃಥಿವ್ಯಾ ಚಾಂತರಿಕ್ಷಂಚ ಮಹತ್ತ್ವೇನ ತೇನ ಸೂರ್ಯ ಆತ್ಮಾ ಜಂಗಮಸ್ಯ ಚ ಸ್ಥಾವರಸ್ಯ ಚಾಥ ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ತಸ್ಯೈಷಾ ಭವತಿ ॥ ೧೬ ॥

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾ-
ಗ್ನೇಃ । ಆ ಪ್ರಾದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ
ಜಗತಸ್ತಸ್ಥುಷಶ್ಚ ॥

(ಋ. ಸಂ. ೧–೮–೭. ಯ. ವಾ. ಸಂ. ೭–೪೨)

ಸ್ಪಷ್ಟಸೂರ್ಯಸ್ತುತಿ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಪೂಜನೀಯವಾದ ರಶ್ಮಿಗಳ ಸಮುದಾಯವು ಉದಯಾಚಲವನ್ನು ಹೊಂದಿರುತ್ತದೆ. ಇದರಲ್ಲಿ ಮಿತ್ರ ವರುಣ ಅಗ್ನಿಗಳ ಸಾಯುಜ್ಯವಿರುತ್ತದೆ. ಸೂರ್ಯನು ಉದಯಹೊಂದಿ ದ್ಯಾವಾಪೃಥಿವಿಗಳನ್ನೂ ಅಂತರಿಕ್ಷವನ್ನೂ ಸ್ವಕೀಯತೇಜಸ್ಸಿನಿಂದ ತುಂಬುತ್ತಾನೆ ಇವನು ಅಂತರ್ಯಾಮಿಯಾಗಿ ಸಕಲ ಪ್ರೇರಕನಾದುದರಿಂದ ಸ್ಥಾವರಜಂಗಮಾತ್ಮಕ ಜಗತ್ತಿನ ಜೀವಾತ್ಮನಾಗಿರುತ್ತಾನೆ.

ಚಾಯನೀಯಂ ದೇವಾನಾಮುದಗಮುದನೀಕಂ ಖ್ಯಾನಂ ಮಿತ್ರಸ್ಯ ವರುಣಸ್ಯಾಗ್ನೇಶ್ಚ । ಅಪೂಪುರದ್ದ್ಯಾವಾಪೃಥಿವ್ಯೌ ಚಾಂತರಿಕ್ಷಂ ಚ ಮಹತ್ವೇನ ತೇನ ಸೂರ್ಯ ಆತ್ಮಾ ಜಂಗಮಸ್ಯ ಚ ಸ್ಥಾವರಸ್ಯ ಚ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಇವನು ಸ್ಥಾವರಜಂಗಮಾತ್ಮಕವಾದ ಪ್ರಾಣಿಜಾತದ ಜೀವಾತ್ಮನು. ಪೂರ್ವದಲ್ಲಿ ಮೃತಪ್ರಾಯವಾದ ಜಗತ್ತು ಸೂರ್ಯೋದಯವಾದೊಡನೆ ಪುನಃ ಚೈತನ್ಯವನ್ನು ಹೊಂದುತ್ತದೆ.

ಅಥ ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ಭವತಿ । ತಸ್ಯೈಷಾ ಭವತಿ ॥ ೧೬ ॥

ಯಾವಾಗ ಈ ಸೂರ್ಯನು ಉದಯವಾದಮೇಲೆ ತೇಜಸ್ಸಿನಿಂದ ತುಂಬಿ ರಶ್ಮಿಗಳನ್ನು ಧರಿಸುತ್ತಾನೋ ಆಗ ಇವನಿಗೆ ಪೂಷಾ ಎಂದು ಕರೆಯುತ್ತಾರೆ. ಪುಷ ಪುಷ್ಟೌ ಧಾತು ಶ್ವನ್ನುಕ್ಷನ್ಪೂಷನ್ ಎಂದು ಕನಿನ್ಪ್ರತ್ಯಯಾಂತವಾಗಿ ನಿಪಾತ ಮಾಡಿರುತ್ತಾರೆ. ಮುಂದೆ ಹೇಳುವ ಮಂತ್ರವು ಪೂಷನ್‌ದೇವತೆಯ ಸ್ತುತಿಯನ್ನು ತಿಳಿಸುತ್ತದೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।
ಆಪ್ರಾ ದ್ಯಾವ್ಯಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥ ೧ ॥

ಅತ್ಯಾಶ್ಚರ್ಯಕರವಾದುದೂ ಮಿತ್ರ, ವರುಣ, ಅಗ್ನಿಯೇ ಆದಿಯಾದ ಸಮಸ್ತ ಪ್ರಪಂಚಕ್ಕೂ, ಕಣ್ಣಿನಂತಿರುವುದೂ ಪ್ರಕಾಶಮಾನವಾದ ಕಿರಣಗಳ ಸಮೂಹವೆಂಬ ಸೂರ್ಯಮಂಡಲವು ಉದಿಸಿ, ಸ್ವರ್ಗಭೂಮ್ಯಾಕಾಶಗಳನ್ನು ವ್ಯಾಪಿಸಿದೆ. ಆ ಮಂಡಲಾಂತರ್ವರ್ತಿಯಾದ ಸೂರ್ಯನು ಚರಾಚರಾತ್ಮಕವಾದ ಈ ಜಗತ್ತಿಗೇ (ಅಂತರ್ಯಾಮಿಯಾಗಿ ಪ್ರೇರಕನಾದುದರಿಂದ) ಸ್ವರೂಪಭೂತನು.

ದೇವಾನಾಂ—ಅನೇಕಾರ್ಥಗಳುಳ್ಳ ದಿವ್ ಧಾತುವಿಗೆ ಕಾಂತಿ ಎಂಬ ಅರ್ಥವನ್ನು ನಿಮಿತ್ತ ಮಾಡಿಕೊಂಡು ದೀವ್ಯಂತಿ—ಪ್ರಕಾಶವನ್ನು ಉಂಟುಮಾಡುವುದು ಎಂದು ದೇವಶಬ್ದಕ್ಕೆ ಇಲ್ಲಿ ರಶ್ಮಿ-ಕಿರಣ ಎಂದು ಅರ್ಥವು ಅವಯಾ

ವಾರ್ಥವನ್ನು ಆಶ್ರಯಿಸಿ ಧರ್ಮಮಾತ್ರವನ್ನು ಅರ್ಥವನ್ನಾಗಿ ಅಂಗೀಕರಿಸುವಾಗ ರಶ್ಮಿ ಎಂತಲೂ ಅವಯವವನ್ನು ಹೊಂದಿರುವ ಅವಯವಿಯನ್ನು ವಿವಕ್ಷಾಮಾಡಿದಾಗ ಪ್ರಕಾಶಮಾನರಾದ ದೇವತೆಗಳು ಎಂದೂ ಅರ್ಥವನ್ನು ಬೋಧಿಸುವುದು.

ಅನೀಕಂ—ಸಮೂಹಃ । ಅನೀಕ ಶಬ್ದವು—

ಮಾತಾ ದೇವಾನಾಮದಿತೇರನೀಕಂ ಯಜ್ಞಸ್ಯ ಕೇತುರ್ಬೃಹತೀ ವಿ ಭಾಹಿ ।

(ಋ. ಸಂ ೧–೧೧೩–೧೯)

ಎಂಬ ಋಕ್ಕಿನಲ್ಲಿ ಅನೀಕಂ ಪ್ರತಿಸ್ಪರ್ಧಿ, ಅನೀಕಂ ಮುಖಂ ಎಂಬುದಾಗಿ ಅನೇಕಾರ್ಥವುಳ್ಳದ್ದಾಗಿರುವುದು. ಕಾವ್ಯ ಶೈಲಿಯನ್ನು ಅನುಸರಿಸುವ ಸೂರ್ಯನ ಮತ್ತು ಉದಯಕಾಲದ ವರ್ಣನಾಪರವಾದ ಈ ಋಕ್ಕಿನಲ್ಲಿ ಸೂರ್ಯನ ಕಿರಣಗಳು ಉದಯವನ್ನು ಹೊಂದಿರುವುದು. ಮತ್ತು ಈ ಸಮೂಹವು ಅನಿರ್ವಚನೀಯವಾಗಿರುತ್ತವೆ ಎಂದು ವರ್ಣಿಸಿರುವುದು.

ಚಿತ್ರಂ—ವಿಚಿತ್ರಂ ಆಶ್ಚರ್ಯಕರಂ ಎಂದು ಸಾಯಣರು ಚಿತ್ರಪದಕ್ಕೆ ಅರ್ಥವನ್ನು ಹೇಳಿರುವರು. ಇದರಿಂದ ಸೂರ್ಯೋದಯ ವರ್ಣನೆಯಾದರೆ ಸ್ವಭಾವೋಕ್ತಿಯೂ, ಸೂರ್ಯನ ವರ್ಣನೆಯು ಆದಲ್ಲಿ ಸೂರ್ಯನು ರಶ್ಮಿಗಳ ಸಮೂಹವಾಗಿರುವನು ಎಂದು ಅರ್ಥವಾಗುವ ಕಾರಣ ರೂಪಕಾಲಂಕಾರವೂ ಆಗುತ್ತದೆ ಎಂದು ತಿಳಿಯಬೇಕು.

ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ–ಮಿತ್ರ, ವರುಣ, ಅಗ್ನಿ ಎಂಬ ಈ ಮೂರು ಹೆಸರುಗಳನ್ನು ನಿರ್ದೇಶ ಮಾಡಿ ಇರುತ್ತದೆ. ಈ ಪದಾರ್ಥಸಾಮಾನ್ಯವನ್ನು ನೋಡಿ ತಿಳಿಯತಕ್ಕ ಜ್ಞಾನವನ್ನು ಉಂಟುಮಾಡುವ ಚಕ್ಷುರಿಂದ್ರಿ ಸೂರ್ಯನಾಗಿರುವನೆಂದು ಉಪಲಕ್ಷಣದ ರೀತಿಯಿಂದ ಇಲ್ಲಿ ಹೇಳುತ್ತದೆ. ಇದರಿಂದ ಸೂರ್ಯನು ರಶ್ಮಿಗಳ ಸಮೂಹವೆಂದು ಪ್ರಥಮವಾಕ್ಯದಿಂದ ನಿರ್ದಿಷ್ಟನಾಗಿ ಈ ವಾಕ್ಯದಿಂದ ಮಿತ್ರಾಗ್ನಿ ವರುಣರ ಅಥವಾ ಜಗತ್ತಿನ ಕಣ್ಣು ಎಂದು ಪ್ರತೀತವಾಗಿರುವ ಎಂದು ಅರ್ಥವು.

ಆ ಅಪ್ರಾಃ—ಪೂರಣಾರ್ಥಕವಾದ ಪ್ರಾ ಧಾತುವಿನ ರೂಪವಾದ ಪ್ರಾಶಬ್ದದ ಸಂಗಡ ಆ ಎಂಬ ಉಪಸರ್ಗವು ಸೇರಿ ಇಲ್ಲಿ ಪ್ರಯುಕ್ತವಾಗಿರುವುದು. ಇದರಿಂದ ದೇವತೆಗಳು ಮತ್ತು ಪುಣ್ಯವಂತರೂ ಆದ ತಪಸ್ವಿಗಳ ಸಮೂಹವಾಗಿರುವ ಈ ಲೋಕಕ್ಕೆ ಚಕ್ಷುಸ್ಸ್ಥಾನೀಯನೂ ಚರಸ್ಥಿರಾತ್ಮಕವಾದ ಪ್ರಪಂಚದ ಆತ್ಮನೂ ಆಗಿರುವ ಸೂರ್ಯನು ತನ್ನ ತೇಜಸ್ಸುಗಳಿಂದ ಭೂಮಿ, ಅಂತರಿಕ್ಷ ಮತ್ತು ಸ್ವರ್ಗ ಇವೆಲ್ಲವನ್ನೂ (ತುಂಬಿ ಇರುವನು) ವ್ಯಾಪಿಸಿರುವನು. ಎಂದರೆ ಸೂರ್ಯನು ಉದಯಿಸಿ ಸಮಸ್ತ ಲೋಕವನ್ನು ತನ್ನ ಕಾಂತಿಯಿಂದ ಬೆಳಗುತ್ತಿರುವನು ಎಂದಭಿಪ್ರಾಯವು.

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ—ಕಾಂತಿ ಸಮೂಹವಾಗಿರುವ (ಸೂರ್ಯನು) ಮಂಡಲದ ಮಧ್ಯದಲ್ಲಿ ಇರುವವನಾದರೂ ಎಲ್ಲವನ್ನೂ ವ್ಯಾಪಿಸಿ ಇರುವ ಕಾರಣ ಎಲ್ಲಕ್ಕೂ ಅಂತರ್ಯಾಮಿಯಾಗಿ ಆಯಾಯ ಕಾರ್ಯಗಳನ್ನು ಆಯಾಯ ಕಾಲಕ್ಕನುಗುಣವಾಗಿ ಮಾಡುವಂತೆ ಪ್ರೇರಿಸುವವನಾಗಿರುವನು. ಆದ್ದರಿಂದಲೇ ಚರವಾದ (ಸಂಚರಿಸುವ) ಮತ್ತು ಸ್ಥಿರವಾದ (ಸಂಚರಿಸದಿರುವ) ರೂಪವುಳ್ಳ ಕಾರ್ಯವರ್ಗದ ಉತ್ಪತ್ತಿಗೆ ಕಾರಣನಾಗಿ ಇರುವನು. ಕಾರಣರೂಪವನ್ನು ಹೊಂದಿ ಇರುವ ಆತ್ಮಸ್ವರೂಪವು ಕಾಲದೇಶಾದಿಗಳನ್ನು ಅನುಸರಿಸಿ ಕಾರ್ಯವಾಗಿರುವುದು ಈ ಅಭಿಪ್ರಾಯವನ್ನು ವೇದಾಂತಸೂತ್ರಗಳನ್ನು ರಚಿಸಿರುವ ವ್ಯಾಸಮಹರ್ಷಿಗಳು ತದನನ್ಯತ್ವಮಾರಂಭಣಶಬ್ದಾದಿಭ್ಯಃ ಎಂಬ ಈ ಸೂತ್ರದಿಂದ ಹೇಳಿರುವರು. ಕಾರಣವಾಗಿರುವುದು ಕಾರ್ಯಕ್ಕಿಂತಲೂ ಬೇರೆಯಾಗಿರದೆ ಕಾರ್ಯ

ಕಾರಣಗಳಿಗೆ ಅಭೇದವು ಇರುವುದು ಎಂದು ಸೂತ್ರದ ಅರ್ಥ. ಈ ಸೂತ್ರದ ಅರ್ಥವನ್ನು ಅನುಸರಿಸಿ ಸೂರ್ಯನು ಪರಮಾತ್ಮನಾಗಿರುವನು ಎಂದು ಒಂದು ಅರ್ಥ ಅಥವಾ ಸೂರ್ಯನು ಉದಯವನ್ನು ಹೊಂದಿದಕೂಡಲೇ ಮೃತನಂತೆ ನಿಶ್ಚೇಷ್ಟವಾಗಿ ಯಾವ ಕಾರ್ಯವನ್ನೂ ಮಾಡಲು ಜ್ಞಾನವೂ ಶಕ್ತಿಯೂ ಇಲ್ಲದ್ದಾಗಿರುವ ಚರಸ್ಥಿರರೂಪವಾದ ಜಗತ್ತು ಜ್ಞಾನಶಕ್ತಿಗಳಿಂದ ಕೂಡಿ ಪ್ರಕಾಶಿಸುವ ಕಾರಣ ಜೀವನಂತೆ ಇರುವನು. ಯೋಽಸೌತಪನ್ನುದೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣನಾದಾಯೋದೇತಿ (ತೈ. ಆ. ೧-೧೪-೧) ಎಂದು ಶ್ರುತಿಯೂ ಈ ಅಭಿಪ್ರಾಯವನ್ನು ವ್ಯಕ್ತವಾಗಿ ವಿವರಿಸುವುದು. ಸೂರ್ಯನು ಲೋಕವೆಲ್ಲಕ್ಕೂ ಜ್ಞಾನವನ್ನು ಕೊಟ್ಟು ತನ್ನ ಉದಯಾಸ್ತಗಳಿಂದ ಚೇತನಾ ಚೇತನವುಳ್ಳದ್ದನ್ನಾಗಿ ಮಾಡುವುದರಿಂದ ಆತ್ಮನೂ ಜೀವಾತ್ಮನೂ ಆಗಿರುವನೆಂದು ಸೂರ್ಯನ ಮಹತ್ವವನ್ನು ಈ ಋಕ್ಕಿನಿಂದ ವ್ಯಕ್ತಪಡಿಸಿರುತ್ತದೆ.

ಇದಲ್ಲದೆ ಈಗಿನ ವಿಜ್ಞಾನಶಾಸ್ತ್ರಪ್ರಕಾರವಾಗಿಯೂ (secientific view) ಸೂರ್ಯನೇ ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳ ಚಲನವಲನಗಳಿಗೂ ಕಾರಣನು. ಸೂರ್ಯನಿಂದಲೇ ನಾವು ಎಲ್ಲಾ ವಿಧವಾದ ಶಕ್ತಿಯನ್ನೂ (energy) ಪಡೆಯುತ್ತೇವೆ. ಪ್ರಾಣಿವರ್ಗದಲ್ಲಿ ನಡೆಯುತ್ತಿರುವ ಚಲನವಲನಾದಿಗಳಿಗೂ ಅಂತರಿಕದಲ್ಲಿ ನಡೆಯುವ ವಾಯುವಿನ ಚಲನ ಮೇಘಗಳ ಉತ್ಪತ್ತಿ, ವೃಷ್ಟಿವರ್ಷಣ ಮೊದಲಾದ ಕಾರ್ಯಗಳಿಗೂ, ಭೂಮಿಯಲ್ಲಿ ಎಡಬಿಡದೆ ನಡೆಯುತ್ತಿರುವ ಸಸ್ಯೋತ್ಪತ್ತಿ ನದಿಗಳ ಪ್ರವಾಹರೂಪವಾದ ಚಲನ, ಮೊದಲಾದ ಎಲ್ಲಾ ವಿಧವಾದ ಕಾರ್ಯಗಳಿಗೂ ಸೂರ್ಯನು ಅಥವಾ ಸೂರ್ಯನ ಕಿರಣಗಳೇ ಕಾರಣವು. ಸೂರ್ಯನ ಪ್ರಕಾಶವಿಲ್ಲದಿದ್ದರೆ ಈ ಪ್ರಪಂಚದಲ್ಲಿ ಗಾಢವಾದ ಅಂಧಕಾರವು ಆವರಿಸುವುದಲ್ಲದೆ ಒಂದು ಹುಲ್ಲುಕಡ್ಡಿಯ ಚಲನವು ಸಹ ನಡೆಯಲಾರದು. ಆದುದರಿಂದ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಎಂಬ ವಾಕ್ಯಕ್ಕೆ The sun is the source of all energies so far as this world (earth) is concerned ಎಂಬ ಅಭಿಪ್ರಾಯವನನ್ನು ಹೇಳುವುದು ಯುಕ್ತವಾಗಿರುವುದು

ಈ ರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ಹದಿನಾರನೆಯ ಖಂಡವು ಸಮಾಪ್ತವಾಗಿದೆ.

## ಅಥ ಸಪ್ತದಶಖಂಡಃ

## ಹದಿನೇಳನೆಯ ಖಂಡವು

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀದ್ಯೌರಿವಾಸಿ । ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು (ಋ. ಸಂ. ೬-೫೮-೧) ॥ ಶುಕ್ರಂ ತೇ ಅನ್ಯಲ್ಲೋಹಿತಂ ತೇ ಅನ್ಯದ್ಯಜತಂ ತೇ ಅನ್ಯದ್ಯಜ್ಞಿಯಂ

ತೇ ಅನ್ಯದ್ವಿಷಮರೂಪೇ ತೇ ಅಹನೀಕರ್ಮ ದ್ಯಾರಿವ ಚಾಸಿ ಸರ್ವಾಣಿ ಪ್ರಜ್ಞಾ-ನಾನ್ಯವಸ್ಯನ್ನವನ್ ಭಾಜನವತೀ ತೇ ಪೂಷನ್ನಿಹ ರಾತಿರಸ್ತು ತಸ್ಯೈಷಾಪರಾ ಭವತಿ || ೧೭ ||

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯಾರಿ
ವಾಸಿ | ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷ
ನ್ನಿಹ ರಾತಿರಸ್ತು ||

(ಋ ಸಂ. ೪-೮-೨೪)

ಪೂಷಸ್ತುತಿ ಪ್ರತಿಪಾದಕ ಮಂತ್ರವನ್ನು ಉದಹರಿಸುತ್ತಾರೆ. ಎಲೈ ಪೂಷದೇವತೆಯೇ ಯಜ್ಞಾರ್ಹವಾಗಿರುವ ಶುಕ್ಲರೂಪವುಳ್ಳ ಒಂದು ದಿನದ ಭಾಗವು ಅಂದರೆ ಹಗಲು ನಿನ್ನದಾಗಿರುತ್ತದೆ. ಇನ್ನೊಂದು ಯಜ್ಞಾರ್ಹವಾದ ಕೃಷ್ಣರೂಪವಾದ ರಾತ್ರಿಯೂ ನಿನ್ನದಾಗಿದೆ. ಹೀಗೆ ಅಂತರಿಕ್ಷದಂತೆ ನೀನು ನಾನಾರೂಪವುಳ್ಳವನಾಗಿರುವಿ. ಅನ್ನೈಶ್ವರ್ಯವಂತನೇ ನೀನೇ ಸಕಲ ಪ್ರಜ್ಞಾನವನ್ನು ಕೊಡುವಿ. ನಿನ್ನ ಮಂಗಲಕರವಾದ ದಾನವು ಈ ಯಜ್ಞಕರ್ಮದಲ್ಲಿ ನಮಗೆ ಉಂಟಾಗಲಿ.

ತಸ್ಯ ಏಷಾಽಪರಾ ಭವತಿ || ೧೭ ||

ಮುಂದೆ ಹೇಳುವ ಇನ್ನೊಂದು ಮಂತ್ರವೂ ಈ ಪೂಷದೇವತೆಯ ಸ್ತುತಿಯನ್ನು ತಿಳಿಸುತ್ತದೆ. ದಾರಿಯಲ್ಲಿ ರಕ್ಷಿಸುವ ಕಾರ್ಯ ಇವನವೆಂದು ಇದು ಸ್ಪಷ್ಟವಾಗಿ ತಿಳಿಸುತ್ತದೆ. ಅಥವಾ ಇಯಂ ವೈ ಪೂಷಾ ಎಂದು ಸ್ತ್ರೀಲಿಂಗದಲ್ಲಿ ಹೇಳಿರುವುದರಿಂದ ಇದು ಸ್ತ್ರೀದೇವತೆಯೆಂಬ ಶಂಕಾನಿರಾಸಕ್ಕೋಸ್ಕರ ಪುನಃ ಈ ಮಂತ್ರ ಹೇಳಿದೆ.

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯಾರಿವಾಸಿ |
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ||

ಎಲೈ ಪೂಷದೇವನೇ, ನಿನ್ನ ರೂಪಗಳಲ್ಲಿ ಒಂದಾದ ಅಹಸ್ಸು ಶುಭ್ರವರ್ಣವುಳ್ಳದ್ದಾಗಿದೆ. ನಿನ್ನ ಪೂಜ್ಯವಾದ ಇನ್ನೊಂದು ರೂಪವು ಕೃಷ್ಣವರ್ಣದ ರಾತ್ರಿರೂಪದಲ್ಲಿದೆ. ನಿನ್ನ ಸ್ವರೂಪಗಳೇ ಆದ ಅಹೋರಾತ್ರಗಳು ಬೇರೆ ಬೇರೆ ರೂಪವುಳ್ಳದ್ದಾಗಿರುತ್ತವೆ. ನೀನು ಆದಿತ್ಯನಂತೆ ಪ್ರಕಾಶಮಾನನಾಗಿರುತ್ತೀಯೆ. ಅನ್ನವಂತನಾದ ಎಲೈ ಪೂಷದೇವನೇ, ನೀನು ಸಮಸ್ತವಾದ ಪ್ರಜೆಗಳನ್ನೂ ರಕ್ಷಿಸುತ್ತೀಯೆ. ನಿನ್ನ ಕಲ್ಯಾಣಕಾರಕವಾದ ದಾನವು ನಮಗಿರಲಿ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿರುವರು—

ಶುಕ್ರಂ ತೇ ಅನ್ಯಲ್ಲೋಹಿತಂ ತೇ ಅನ್ಯದ್ಯಜತಂ ತೇ ಅನ್ಯದ್ಯಜ್ಞಿಯಂ ತೇ ಅನ್ಯದ್ವಿಷಮರೂಪೇ ಅಹನೀ ಕರ್ಮ ದ್ಯಾರಿವ ಚಾಸಿ ಸರ್ವಾಣಿ ಪ್ರಜ್ಞಾನಾನ್ಯವಸ್ಯನ್ನವನ್ ಭಾಜನವತೀ ತೇ ಪೂಷನ್ನಿಹ ರಾತಿರಸ್ತು ||

(ನಿ. ೧೨-೧೭)

ಎಲೈ ಪೂಷದೇವನೇ, ನಿನ್ನ ಒಂದು ರೂಪವು ಲೋಹಿತವರ್ಣವುಳ್ಳದ್ದಾಗಿದೆ ಅಥವಾ ಅತ್ಯಂತ ಪ್ರಕಾಶಮಾನವಾದದ್ದಾಗಿದೆ. ಮತ್ತೊಂದು ರೂಪವು ಯಜ್ಞಾರ್ಹವಾಗಿದೆ ಎಂದರೆ ಯಜ್ಞಾದಿಗಳಿಂದ ಪೂಜಿಸಲ್ಪಡಲು ಯೋಗ್ಯವಾಗಿದೆ. ನಿನ್ನ ಎರಡು ರೂಪಗಳಾದ ಅಹೋರಾತ್ರಿಗಳು ಪರಸ್ಪರ ವಿರೋಧಾಕಾರವುಳ್ಳದ್ದಾಗಿವೆ. ಎಂದರೆ ಅಹಸ್ಸು ಪ್ರಕಾಶಮಾನವಾಗಿಯೂ ರಾತ್ರಿಯು ಕತ್ತಲಿನಿಂದ ಕೂಡಿಯೂ ಇರುವುದರಿಂದ ಒಂದಕ್ಕೊಂದು ವಿರೋಧವಾಗಿವೆ. ಮತ್ತೆ ನೀನು ಆದಿತ್ಯನಂತೆ ಅಥವಾ ಆದಿತ್ಯನ ಪ್ರಕಾಶದಂತೆ ಸರ್ವತ್ರ ವ್ಯಾಪ್ತನಾಗಿದ್ದೀಯೆ. ನೀನು ಪ್ರಜ್ಞಾವಂತರಾದ ಸಮಸ್ತ ಜನರನ್ನೂ (ಅಥವಾ ಸಮಸ ಪ್ರಜ್ಞೆ ಅಥವಾ ಶಾಸ್ತ್ರಗಳನ್ನು) ರಕ್ಷಿಸುತ್ತೀಯೆ. ಇದಲ್ಲದೆ ನೀನು ಅನ್ನವಂತನು ಎಂದರೆ ಎಲ್ಲರಿಗೂ ಅನ್ನ (ಆಹಾರ ವನ್ನೊದಗಿಸಿಕೊಡುವವನು. ಆದುದರಿಂದ ಎಲೈ ಪೂಷದೇವನೇ, ಕಲ್ಯಾಣಕಾರಕವಾದ ಆಹಾರ ಮೊದಲಾದ ವಸ್ತುಗಳ ದಾನವು ಕೊಡಲ್ಪಡಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಈರೀತಿ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ
ಹದಿನೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಾದಶ ಖಂಡಃ

### ಹದಿನೆಂಟನೆಯ ಖಂಡವು

ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ । ಸ ನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರಪೂಷಾ (ಋ. ಸಂ. ೬-೪೯-೮) ॥ ಪಥಸ್ಪಥೋಽಧಿಪತಿಂ ವಚನೇನ ಕಾಮೇನ ಕೃತೋಽಭ್ಯಾನಡರ್ಕನ್ ಅಭ್ಯಾಪನ್ನೋಽರ್ಕಮಿತಿ ವಾ ಸ ನೋ ದದಾತು ಚಾಯನೀಯಾಗ್ರಾಣಿ ಧನಾನಿ ಕರ್ಮ ಕರ್ಮ ಚ ನಃ ಪ್ರಸಾಧಯತು ಪೂಷೇತ್ಯಥಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ ತಸ್ಯೈಷಾ ಭವತಿ ॥ ೧೮ ॥

ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಮ್।
ಸನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರ
ಪೂಷಾ ॥

(ಋ. ಸಂ. ೬-೪೯-೮) (ಯ. ವಾ. ಸಂ. ೩೪-೪೨)

ಪೂಷ ದೇವತೆಯ ಸ್ಪಷ್ಟ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸಕಲಮಾರ್ಗದ ಅಧಿಪತಿಯಾದ ಪೂಜ್ಯನಾದ ಪೂಷನನ್ನು ಫಲಕಾಮನೆಯಿಂದ ವಶೀಕರಿಸಲ್ಪಟ್ಟ ಸ್ತೋತೃವು ಸ್ತುತಿಯಿಂದ ಅವನನ್ನು ಹೊಂದಲಿ. ಆ ದೇವನೂ ದುಃಖ ನಿರೋಧಕವಾದ ಸಂಪತ್ತನ್ನು ಅನುಗ್ರಹಿಸಲಿ ಮತ್ತು ಪ್ರತಿ ಕರ್ಮದಲ್ಲಿಯೂ ಅವಿಘ್ನವಾಗಿ ನೆರವೇರುವಂತೆ ಅನುಗ್ರಹಿಲಿ.

ಪಥಸ್ಪಥೋಽಧಿಪತಿಂ ವಚನೇನ ಕಾಮೇನ ಕೃತೋಽಭ್ಯಾನಡರ್ಕಮ್ ।
ಅಭ್ಯಾಪನ್ನೋಽರ್ಕಮಿತಿ ವಾ । ಸನೋ ದದಾತು ಚಾಯನೀ-
ಯಾಗ್ರಾಣಿ ಧನಾನಿ ಕರ್ಮ ಕರ್ಮ ಚನಃ ಪ್ರಸಾಧಯತು
ಪೂಷೇತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಭ್ಯಾಪನ್ನೋಽರ್ಕಂ ಎಂಬಲ್ಲಿ ಅಹಂ ಎಂದು ಕರ್ತೃ ಪದವನ್ನು ತಿಳಿಯಬೇಕು ಸ್ತುತಿ ಯಿಂದ ಇಷ್ಟಾರ್ಥಸಿದ್ಧಿಗೋಸ್ಕರ ಪೂಷನನ್ನು ನಾನು ಹೊಂದಿರುತ್ತೇನೆ ಎಂದರ್ಥ. ಹೀಗೆ ಹೊಂದಿದ ಅವನು ನಮಗೆ ಸಂಪತ್ತನ್ನು ಕೊಡಲಿ ಎಂದು ಪೂರ್ವದಲ್ಲಿ ಹೇಳಿದಂತೆಯೇ ತಿಳಿಯಬೇಕು. ಧೀಃ ಕರ್ಮನಾಮದಲ್ಲಿ (ನಿಘ. ೨-೧-೨೧) ಹೇಳಿದೆ.

ಅಥ ಯದ್ವಿಷಿತೋ ಭವಃ ತದ್ವಿಷ್ಣುರ್ಭವತಿ । ವಿಷ್ಣುರ್ವಿಶತೇರ್ವಾ
ವ್ಯಶ್ನೋತೇರ್ವಾ । ತಸ್ಯೈಷಾ ಭವತಿ ॥ ೧೮ ॥

ಕ್ರಮಪ್ರಾಪ್ತವಾದ ವಿಷ್ಣುಪದದ ನಿರ್ವಚನವನ್ನು ತೋರಿಸುತ್ತಾರೆ. ಈ ಸೂರ್ಯನೇ ರಶ್ಮಿಗಳಿಂದ ವ್ಯಾಪಿಸುತ್ತಾನೋ ಆಗ ವಿಷ್ಣುವೆಂದು ಕರೆಯಲ್ಪಡುತ್ತಾನೆ. ವಿಷ್‌ಲೃ—ವ್ಯಾಪ್ತೌ. ಧಾತು. 'ವಿಷೇಃ ಕಿಚ್ಚ' ಸೂತ್ರದಿಂದ ನುಪ್ರತ್ಯಯ. ಅಥವಾ ವಿಶ—ಪ್ರವೇಶನೇ ಧಾತು. ಇದಕ್ಕೆ ನು ಬಂದಾಗ ಷತ್ವಣತ್ವಾದಿಗಳು ಬರುತ್ತವೆ. ರಶ್ಮಿಯಿಂದ ಆವಿಷ್ಟನಾದಾಗ ಸೂರ್ಯನು ವಿಷ್ಣುವಾಗುತ್ತಾನೆ. ಅಥವಾ ವಿ ಉಪಸರ್ಗಪೂರ್ವಕವಾದ ವ್ಯಾಪ್ತ್ಯರ್ಥಕ ಅಶೂಧಾತುವಿನಿಂದ ಇದು ನಿಷ್ಪನ್ನವಾಗಿದೆ. ರಶ್ಮಿಗಳಿಂದ ಪ್ರಪಂಚವನ್ನು ಆವರಿಸಿದಾಗ ಆದಿತ್ಯನು ವಿಷ್ಣುವಾಗುತ್ತಾನೆ. ಮುಂದೆ ಹೇಳುವ ಮಂತ್ರವು ವಿಷ್ಣುವಿನ ಸ್ತುತಿಯನ್ನು ಪ್ರತಿಪಾದಿಸುತ್ತದೆ,

ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ
ಸನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ
ಪ್ರ ಪೂಷಾ ॥ ೮ ॥

ಸಕಲ ಮಾರ್ಗಗಳಿಗೂ ಉತ್ತಮವಾದ ಪಾಲಕನೂ, ಪೂಜ್ಯನೂ ಆದ ಪೂಷದೇವನನ್ನು ಫಲಪ್ರಾಪ್ತಿಯ ಆಸೆಯಿಂದ ತನ್ನ ವಶಮಾಡಿಕೊಂಡ ಸ್ತೋತೃವು ತನ್ನ ಸ್ತುತಿಯಿಂದ ಸಮೀಪಿಸಿ ಅವನನ್ನು ಹೊಂದಲಿ. ಅದೇ ಪೂಷದೇವನು ನಮಗೆ ಸುವರ್ಣಮಯವಾದ ಶೃಂಗಗಳುಳ್ಳ ಗೋವುಗಳನ್ನು ಕೊಡಲಿ. ನಮ್ಮ ಸಕಲ ಕರ್ಮಗಳನ್ನೂ ಪೂರ್ಣವಾಗಿ ಅಲಂಕರಿಸಲಿ.

ಏಕಾದಶಿನ್ ಎಂಬ ಇಷ್ಟಿಯಲ್ಲಿ ಪೂಷದೇವತಾಕವಾದ ಪಶುಹೋಮದಲ್ಲಿ ಹವಿಸ್ಸನ್ನು ಹೋಮಮಾಡುವಾಗ ಪಥಸ್ಪಥಃ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಪಥಸ್ಪಥಃ ಪರಿಪತಿಂ ವಚಸ್ಯಾ ಬೃಹಸ್ಪತೇ ಯಾ ಪರಮಾ ಪರಾವದಿತಿ ದ್ವೇ ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಪಥಸ್ಪಥೋಽಧಿಪತಿಂ ವಚನೇನ ಕಾಮೇನ ಕೃತೋಽಭ್ಯಾನಡರ್ಕಮಭ್ಯಾಪನ್ನೋಽರ್ಕಮಿತಿ ವಾಸನೋ ದದಾತು ಚಾಯನೀಯಾಗ್ರಾಣಿ ಧನಾನಿ ಕರ್ಮಕರ್ಮ ಚ ನಃ ಪ್ರಸಾಧಯತು ಪೂಷೇತಿ ॥

ಪೂಷನೆಂಬ ಈ ದೇವನು ಸಮಸ್ತಮಾರ್ಗಗಳಿಗೂ ಅಧಿಪತಿಯು, ಸಮಸ್ತರಿಂದಲೂ ಪೂಜನೀಯನು. ಇಂತಹ ದೇವನನ್ನು ಸ್ತೋತೃವು ತನ್ನ ಇಷ್ಟಾರ್ಥಗಳ ಪ್ರಾಪ್ತಿಗಾಗಿ ಸ್ತೋತ್ರದಿಂದ ಸಮೀಪಿಸಲಿ ಎಂದರೆ ಸ್ತುತಿಸಲಿ. ಆ ದೇವನು ಪ್ರತಿಕರ್ಮದಲ್ಲಿಯೂ ಎಂದರೆ ಯಜ್ಞಯಾಗಾದಿ ಸಮಸ್ತ ಕರ್ಮಗಳಲ್ಲಿಯೂ ನಾನಾವಿಧವಾದವೂ, ಶ್ರೇಷ್ಠವಾದವೂ, ಆದ ಧನಗಳನ್ನು ನಮಗೆ ಕೊಡಲಿ ಮತ್ತು ಅನುಗ್ರಹಿಸಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಹದಿನೆಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕೋನವಿಂಶತಿ ಖಂಡಃ

### ಹತ್ತೊಂಬತ್ತನೆಯ ಖಂಡವು

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ । ಸಮೂಳ್ಹಮಸ್ಯ ಪಾಂಸುರೇ (ಋ. ಸಂ ೧-೨೨-೧೭) ॥ ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ಪೃಥಿವ್ಯಾಮಂತರಿಕ್ಷೇ ದಿವೀತಿಶಾಕಪೂಣಿಃ ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ ಸಮೂಳ್ಹಮಸ್ಯ ಪಾಂಸುರೇಪ್ಯಾಯನೇಽಂತರಿಕ್ಷೇ ಪದಂ ನ ದೃಶ್ಯತೇಽಪಿವೋಪಮಾರ್ಥೇ ಸ್ಯಾತ್ಸಮೂಳ್ಹಮಸ್ಯ ಪಾಂಸುಲ ಇವ ಪದಂ ನ ದೃಶ್ಯತ ಇತಿ ಪಾಂಸವಃ ಪಾದೈಃ ಸೂಯಂತ ಇತಿ ವಾ ಪನ್ನಾಃ ಶೇರತ ಇತಿ ವಾ ಪಿಂಶನೀಯಾ ಭವಂತೀತಿ ವಾ ॥ ೧೯ ॥

**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ । ಸಮೂಳ್ಹ ಮಸ್ಯ, ಪಾಂಸುರೇ ॥**

(ಋ. ಸಂ. ೧-೨-೭, ಯಾ. ವಾ. ಸಂ. ೫-೧೫)

ವಿಷ್ಣುಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಈ ಆದಿತ್ಯನು ವಿಭಾಗದಿಂದ ಇರುವ ಇದನ್ನು ವಿವಿಧವಾಗಿ ಆಕ್ರಮಿಸುತ್ತಾನೆ, ಮೂರು ರೀತಿಯಿಂದ ತನ್ನ ಸ್ಥಾನವನ್ನು ಹೊಂದುತ್ತಾನೆ. ಸರ್ವಭೂತವೃದ್ಧಿಕಾರಣವಾದ ಅಂತರಿಕ್ಷದಲ್ಲಿ ಈ ವಿಷ್ಣುವಿನ ವಿದ್ಯುದೆಂಬ ಸ್ಥಾನವು ಅಂತರ್ಹಿತವಾಗಿರುತ್ತದೆ.

**ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾ ಭಾವಾಯ, ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ । ಸಮೂಳ್ಹಮಸ್ಯ ಪಾಂಸುರೇ ಪ್ಯಾಯನೇಽಂತರಿಕ್ಷೇ, ಪದಂ ನ ದೃಶ್ಯತೇ, ಅಪಿವೋಪಮಾರ್ಥೇ ಸ್ಯಾತ್ ಸಮೂಳ್ಹಮಸ್ಯ ಪಾಂಸುಲ ಇವ ಪದಂ ನ ದೃಶ್ಯತ ಇತಿ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮೂರು ಸ್ಥಾನಗಳಲ್ಲಿ ವ್ಯಾಪಿಸುತ್ತಾನೆ ಅಂದರೆ ಪೃಥಿವೀ, ಅಂತರಿಕ್ಷ ದ್ಯುಲೋಕವೆಂದು ಶಾಕಪೂಣಿಗಳ ಮತ. ಪಾರ್ಥಿವಾಗ್ನಿರೂಪದಿಂದ ಪೃಥಿವಿಯಲ್ಲಿಯೂ, ವಿದ್ಯುದ್ರೂಪದಿಂದ ಅಂತರಿಕ್ಷ ದಲ್ಲಿಯೂ, ಸೂರ್ಯರೂಪದಿಂದ ದ್ಯುಲೋಕದಲ್ಲಿಯೂ ಇರುತ್ತಾನೆ ಎಂದು ತಾತ್ಪರ್ಯ. ಸಮಾರೋಹಣ, ವಿಷ್ಣುಪದ ಗಯಶಿರಸ್ಸು ಎಂದು ಔರ್ಣವಾಭರ ಮತ, ಸಮಾರೋಹವೆಂದರೆ ಉದಯಗಿರಿ. ಅಲ್ಲಿ ಒಂದು ಪಾದವನ್ನಿಡುತ್ತಾನೆ. ವಿಷ್ಣುಪದವೆಂದರೆ ಆಕಾಶ. ಅಲ್ಲಿ ಎರಡನೆಯ ಪಾದವನ್ನೂ, ಗಯಶಿರವೆಂದರೆ ಅಸ್ತಗಿರಿ. ಅಲ್ಲಿ ಮೂರನೆಯ ಪಾದವನ್ನೂ ಇಡುತ್ತಾನೆ. ಅಪಿವಾ ಎಂಬುದು ಉಪಮಾರ್ಥದಲ್ಲಿ ಪ್ರಯೋಗಿಸಿದೆ. ಧೂಳಿಸಮುದಾಯದಲ್ಲಿ ಹೆಜ್ಜೆಯಿಟ್ಟು ತೆಗೆದಕೂಡಲೇ ಅದು ಮುಚ್ಚಿಹೋಗಿ ಹೇಗೆ ತೋರುವುದಿಲ್ಲವೋ ಅದರಂತೆ ಇವನ ಮಧ್ಯಮವಾದ ವಿದ್ಯುದ್ರೂಪಪಾದವು ಪ್ರಕಟವಾದೊಡನೆಯೇ ನಶಿಸಿ ಹೋಗುತ್ತದೆ.

**ಪಾಂಸವಃ-ಪಾದ್ಯೈಃ ಸೂಯಂತ ಇತಿ ವಾ, ಪನ್ನಾಃ ಶೇರತ ಇತಿವಾ । ಪಿಂಶನೀಯಾ ಭವಂತೀತಿ ವಾ ॥ ೧೯ ॥**

ನಿಗಮಪ್ರಸಕ್ತವಾದ ಪಾಂಸುಪದದ ನಿರ್ವಚನವನ್ನು ತೋರಿಸುತ್ತಾರೆ. ಧೂಳಿಯು ಪಾದದಿಂದ ಉಂಟಾಗುತ್ತದೆ. ಅಥವಾ ಕೆಳಗೆ ಬಿದ್ದಿರುವವುಗಳು. ಅಥವಾ ನಾಶಯೋಗ್ಯವಾದವುಗಳು ಎಂದರ್ಥವಾಗುತ್ತದೆ. ಪಿಶ ಅವಯವೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅವಯವಕ್ಕೆ ಚೂರ್ಣೀಭಾವವೆಂದರ್ಥ.

ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ | ಸಮೂಳ್ಹಮಸ್ಯ ಪಾಂಸುರೇ || ೧೭ ||

ವಿಷ್ಣುವು (ತ್ರಿವಿಕ್ರಮಾವತಾರ ಮಾಡಿ) ಈ ಸಮಸ್ತ ಜಗತ್ತನ್ನೂ ಮೂರು ವಿಧವಾದ ಪಾದಪ್ರಕ್ಷೇಪಣದಿಂದ ಆಕ್ರಮಿಸಿದನು. ಆ ವಿಷ್ಣುವಿನ ಧೂಳಿಯುಕ್ತವಾದ ಪಾದಸ್ಥಾನದಲ್ಲಿ ಈ ಜಗತ್ತು ಮುಚ್ಚಿಹೋಗಿ ಕಾಣದಂತಾಯಿತು.

ವಿಷ್ಣುಸಂಬಂಧವಾದ ಉಪಾಂಶುಯಾಗದಲ್ಲಿ ಇದಂ ವಿಷ್ಣುರ್ವಿಚಕ್ರಮೇ (ಋ ಸಂ. ೧–೨೨–೧೭) ಮತ್ತು ತಿ.ರ್ದೇವಃ ಪೃಥಿವೀಮೇಷ ಏತಾಂ (ಋ. ಸಂ. ೭–೧೦೦–೩) ಎಂಬ ಋಕ್ಕುಗಳು ಪುರೋನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಉಕ್ತಾ ದೇವತಾ ಎಂಬ ಖಂಡದಲ್ಲಿ (ಆ. ೨–೬) ಹೇಳಿರುವುದರಿಂದ ಪ್ರಸಕ್ತವಾದ ಈ ಇದಂ ವಿಷ್ಣುರ್ವಿಚಕ್ರಮೇ ಎಂಬ ಋಕ್ಕು ಪುರೋನುವಾಕ್ಯಾ ಮಂತ್ರವಾಗಿರುವುದು. ಯಜ್ಞದಲ್ಲಿ ಪ್ರತಿಷ್ಠಿತವಾಗಿರುವ ಗಾರ್ಹಪತ್ಯ ಮತ್ತು ಆಹವನೀಯುವೆಂಬ ಅಗ್ನಿಕುಂಡಗಳ ನಡುವೆ ನಾಯಿಯು ಪ್ರವೇಶಿಸಿದಲ್ಲಿ ಆ ದೋಷಪರಿಹಾರಕ್ಕಾಗಿ ನಾಯಿ ಕುಳಿತ ಸ್ಥಳದ ಮೇಲೆ ಇದಂ ವಿಷ್ಣುರ್ವಿಚಕ್ರಮೇ ಎಂಬ ಮಂತ್ರದಿಂದ ಭಸ್ಮವನ್ನು ಹಾಕಬೇಕು ಎಂದು ವಿಧ್ಯಪರಾಧ ಎಂಬ ಖಂಡದಲ್ಲಿ ಹೇಳಿರುವುದು (೩೩–೧೦). ಮತ್ತು ಆತಿಥ್ಯವೆಂಬ ಹೋಮದಲ್ಲಿ ಪ್ರಧಾನವಾದ ಅಥವಾ ಮುಖ್ಯವಾದ ಹವಿಸ್ಸನ್ನು ಹೋಮಮಾಡುವಾಗ ಈ ಇದಂ ವಿಷ್ಣುರ್ವಿಚಕ್ರಮೇ ಎಂಬ ಮಂತ್ರವೇ ಪುರೋನುವಾಕ್ಯಾ ಮಂತ್ರವಾಗಿರುವುದು. ಅಥಾತಿಥ್ಯೇಳಾಂತೇತಿ ಎಂಬ ಖಂಡದಲ್ಲಿ ಇದಂ ವಿಷ್ಣುರ್ವಿಚಕ್ರಮೇ (ಋ. ಸಂ. ೧–೨೨–೧೭) ಮತ್ತು ತವಸ್ಯ ಪ್ರಿಯಮಭಿಪಾಥೋ ಅಶ್ಯಾಂ (ಋ. ಸಂ. ೧–೧೫೪–೫) ಎಂಬ ಋಕ್ಕುಗಳನ್ನು ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ (ಆ. ೪–೫) ಹೇಳಿರುವುದು. ಆತಿಥ್ಯವೆಂದರೆ ಸೋಮಯಾಗದಲ್ಲಿ ಸೋಮವನ್ನು ತರುವಾಗ ಸೋಮವು ರಾಜನೆಂದೂ ಗಾಯತ್ರ್ಯಾದಿ ಸಪ್ತಛಂದಸ್ಸುಗಳು ಅವನ ಅನುಚರರೆಂದೂ ಭಾವಿಸಲ್ಪಟ್ಟು ರಾಜನಿಗೂ ರಾಜನ ಅನುಚರರಿಗೂ ಆತಿಥ್ಯವನ್ನು (Hospitality) ಮಾಡುವಂತೆ ಗಾಯತ್ರ್ಯಾದಿ ಛಂದಸ್ಸುಗಳ ಪ್ರೀತ್ಯರ್ಥವಾಗಿ ಹೋಮ ಮಾಡುವುದು ಪದ್ಧತಿಯಾಗಿದೆ. ಈ ವಿಷಯವಾಗಿ ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ—

> ಯಾವದ್ಭಿರ್ವೈ ರಾಜಾನುಚರೈರಾಗಚ್ಛತಿ ಸರ್ವೇಭ್ಯೋ ವೈ ತೇಭ್ಯ ಆತಿಥ್ಯಂ ಕ್ರಿಯತೇ ಛಂದಾಗ್ಂಸಿ ಖಲು ವೈ ಸೋಮಸ್ಯ ರಾಜ್ಞೋಽನುಚರಾಣ್ಯಗ್ನೇರಾತಿಥ್ಯಮಸಿ ವಿಷ್ಣವೇತ್ವೇತ್ಯಾಹ ತ್ರಿಷ್ಟುಭ ಗಾಯತ್ರಿಯಾ ಏವೈತೇನ ಕರೋತಿ ಸೋಮಸಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ಏವೈತೇನ ಕರೋತ್ಯತಿಥೇರಾತಿಥ್ಯಮಸಿ ವಿಷ್ಣವೇತ್ವೇತ್ಯಾಹ ಜಗತ್ಯಾ ಏವೈತೇನ ಕರೋತ್ಯಗ್ನಯೇತ್ವಾ ರಾಯ ಸ್ಪೋಷದಾವ್ನ್ನೇ ವಿಷ್ಣವೇತ್ವೇತ್ಯಾಹಾನುಷ್ಟುಭ ಏವೈತೇನ ಕರೋತಿ ಶ್ಯೇನಾಯ ತ್ವಾಸೋಮ ಭೃತೇ ವಿಷ್ಣವೇ ತ್ವೇತ್ಯಾಹ ಗಾಯತ್ರಿಯಾ ಏವೈತೇನ ಕರೋತಿ ||

ಇತ್ಯಾದಿ. ಈ ಹೋಮಗಳಲ್ಲಿ ವಿಷ್ಣುವೇ ಮುಖ್ಯ ದೇವತೆಯು. ಅದರಂತೆ ಉಪಸದವೆಂಬ ಹೋಮದಲ್ಲಿಯೂ ಗಯಸ್ಫಾನೋ ಅಮೀವಹಾ (ಋ. ಸಂ. ೧–೯೧–೧೨) ಇದಂ ವಿಷ್ಣುರ್ವಿಚಕ್ರಮೇ (ಋ. ಸಂ. ೧–೨೨–೧೭) ಎಂಬ ಋಕ್ಕುಗಳನ್ನು ಯಾಜ್ಯಾಪುರೋನುವಾಕ್ಯಾ ಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಅಥೋಪಸತ್ ಎಂಬ ಖಂಡದಲ್ಲಿ ಹೇಳಿದೆ (ಆ ೪–೮) ಇದು ಈ ಋಕ್ಕಿನ ವಿನಿಯೋಗಕ್ರಮವು ಮತ್ತು ಗೃಹಕರ್ಮಗಳಲ್ಲಿಯೂ ಸ್ಮಾರ್ತಪ್ರಯೋಗಾದಿಗಳಲ್ಲಿಯೂ ಈ ಋಕ್ಕನ್ನು ವಿಷ್ಣುಸಂಬಂಧವಾದ್ಯಮಂತ್ರಗಳನ್ನು ಪಠಿಸುವ ಸಂದರ್ಭದಲ್ಲಿ ಉಪಯೋಗಿಸುವುದು ರೂಢಿಯಾಗಿದೆ.

ಯಾಸ್ಕಮಹರ್ಷಿಯು ಈ ಋಕ್ಕಿಗೆ ನಿರುಕ್ತವನ್ನು ಹೇಳಿರುವರು—

ವಿಷ್ಣುಃ । ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ ॥

(ನಿ. ೧೨೧೮)

ವಿಷ್ಣುಶಬ್ದಕ್ಕೆ ಈ ರೀತಿ ಅರ್ಥವನ್ನು ವಿವರಿಸಿರುವರು—

ಯದಾ ವಿಷಿತಃ ವ್ಯಾಪ್ತೋಽಯಮನೇವ ಸೂರ್ಯೋ ರಶ್ಮಿಭಿಃ ಭವತಿ ತದಾ ವಿಷ್ಣುರ್ಭವತಿ । ವಿಶತೇರ್ವಾ ಯದಾ ವಿಷ್ಟಃ ಪ್ರವಿಷ್ಟಃ ಸರ್ವತೋ ರಶ್ಮಿಭಿರ್ಭವತಿ ತದಾ ವಿಷ್ಣುರ್ಭವತಿ । ವ್ಯಶ್ನೋತೇರ್ವಾ ವಿಪೂರ್ವಸ್ಯ ವಾಶ್ನೋತೇ ಯದಾ ರಶ್ಮಿಭಿರತಿಶಯೇನಾಯಂ ವ್ಯಾಪ್ತೋ ಭವತಿ ವ್ಯಾಪ್ನೋತಿ ವಾ ರಶ್ಮಿಭಿರಯಂ ಸರ್ವಂ ತದಾ ವಿಷ್ಣುರಾದಿತ್ಯೋ ಭವತಿ ॥

ಎಂದರೆ ಸೂರ್ಯನು ತನ್ನ ರಶ್ಮಿಯಿಂದ ಯಾವಾಗ ಸಮಸ್ತವನ್ನೂ ವ್ಯಾಪ್ತವನ್ನಾಗಿ ಮಾಡುವನೋ ಆಗ ವಿಷ್ಣುವೆಂದು ಹೇಳಲ್ಪಡುವನು ; ಅಥವಾ ರಶ್ಮಿಗಳಮೂಲಕ ಎಲ್ಲವನ್ನೂ ಪ್ರವೇಶಿಸುವುದರಿಂದ ವಿಷ್ಣುವೆಂದು ಹೇಳಲ್ಪಡುವನು ; ಅಥವಾ ರಶ್ಮಿಗಳಿಂದ ಅತಿಶಯವಾಗಿ ಎಲ್ಲವನ್ನೂ ವ್ಯಾಪಿಸಿ ಪ್ರಕಾಶಿಸುವುದರಿಂದ ಆದಿತ್ಯನೇ ವಿಷ್ಣುವೆಂದು ಹೇಳಲ್ಪಡುವನು ಮತ್ತು—

ತಸ್ಯೈಷಾ ಭವತಿ ॥ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿಧದೇ ಪದಂ । ಸಮೂಳ್ಹಮಸ್ಯ ಪಾಂಸುರೇ॥ ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಸಮಾರೋಹಣೇ ವಿಷ್ಣುಪದೇ ಗಯಶಿರಸೀ ತ್ಯೌರ್ಣವಾಭಃ । ಸಮೂಳ್ಹಮಸ್ಯ ಪಾಂಸುಲ ಇವ ಪದಂ ನ ದೃಶ್ಯತ ಇತಿ ॥ ಪಾಂಸವಃ ಪಾದೈಃ ಸೂಯಂತ ಇತಿ ವಾ ಪನ್ನಾಃ ಶೇರತ ಇತಿ ವಾ, ಪಿಂಶನೀಯಾ ಭವಂತೀತಿ ವಾ॥ ನಿ. (೧೨–೧೯).

ವಿಷ್ಣು ಶಬ್ದಾರ್ಥ ಪ್ರತಿಪಾದನೆಗಾಗಿ ಇದಂ ವಿಷ್ಣುರ್ವಿಚಕ್ರಮೇ ಎಂಬ ಋಕ್ಕನ್ನೇ ಉದಾಹರಣೆಯನ್ನಾಗಿ ಕೊಟ್ಟು ಅದರ ಅರ್ಥ ವಿವರಣೆ ಮಾಡಿರುವರು–

ವಿಷ್ಣುವು (ಆದಿತ್ಯನು) ಈ ಜಗತ್ತನ್ನು ಮೂರು ವಿಧವಾಗಿ ಭಾಗಿಸುವುದಕ್ಕಾಗಿ ಮೂರು ಪಾದಗಳನ್ನು ಇಟ್ಟು ಪೃಥಿವೀ ಅಂತರಿಕ್ಷ, ಸ್ವರ್ಗಗಳೆಂಬ ಮೂರು ಭಾಗಗಳನ್ನಾಗಿ ವಿಂಗಡಿಸುವುದಕ್ಕಾಗಿ ಮೂರು ಪಾದವಿಕ್ಷೇಪಮಾಡಿರುವನು ಎಂದು ಶಾಕಪೂಣಿಯ ಮತವು. ಹೇಗೆಂದರೆ ಭೂಮಿಯಮೇಲೆ ರಶ್ಮಿಗಳ ಮೂಲಕವೂ,ಅಂತರಿಕ್ಷದಲ್ಲಿ ವಿದ್ಯುತ್ತಿನ (ಮಿಂಚಿನ) ಮೂಲಕವೂ ಸ್ವರ್ಗದಲ್ಲಿ ಸೂರ್ಯಮಂಡಲದ ಮೂಲಕವೂ ಪ್ರಕಟವಾಗುವುದರಿಂದ ತ್ರೇಧಾ ಎಂದರೆ ಮೂರು ವಿಧವಾಗಿ ಪ್ರಕಟವಾಗುವನು ಎಂದಭಿಪ್ರಾಯವು.

ಸೂರ್ಯನು ಪ್ರಾತಃಕಾಲದಲ್ಲಿ ಉದಯಿಸುವಾಗ (ಸಮಾರೋಹಣೇ) ಉದಯಗಿರಿಯಲ್ಲಿಯೂ, ಮಧ್ಯಾಹ್ನದಲ್ಲಿ (ವಿಷ್ಣುಪದೇ) ಅಂತರಿಕ್ಷದಲ್ಲಿಯೂ, ಸಾಯಂಕಾಲದಲ್ಲಿ (ಗಯಶಿರಸಿ) ಅಸ್ತಮಾನಪರ್ವತದಲ್ಲಿಯೂ ಕಾಣಲ್ಪಡುವುದರಿಂದ ತ್ರೇದಾ ನಿದಧೇ ಪದಂ ಎಂಬುದಕ್ಕೆ ಇದೇ ಅರ್ಥವೆಂದು ಔರ್ಣವಾಭನೆಂಬುವರು ಅಭಿಪ್ರಾಯಪಡುವರು. ಸಮೂಳ್ಹಮಸ್ಯ ಪಾಂಸುರೇ ಎಂದರೆ ಅಂತರಿಕದಲ್ಲಿ ಮಧ್ಯಂದಿನಪದವಾದ ವಿದ್ಯುತ್ತು ಯಾವಾಗಲೂ ಕಾಣಿಸದೆ ಅಂತರ್ಹಿತನಾಗಿರುವ

ದೆಂದರ್ಥವು. ಅಥವಾ ಧೂಳಿನಿಂದ ಮುಚ್ಚಲ್ಪಟ್ಟ ವಸ್ತುವು (ಅಥವಾ ಹೆಜ್ಜೆಯ ಗುರುತು) ಯಾವ ರೀತಿ ಕಾಣಿಸುವುದಿಲ್ಲವೋ ಅದರಂತೆ ಎಂದು ಉಪಮಾರ್ಥವನ್ನು ಬೇಕಾದರೂ ಹೇಳಬಹುದು.

ಪಾಂಸುರೇ ಎಂಬ ಶಬ್ದಕ್ಕೆ ' ಪಾದೈಃ ಸೂಯಂತೇ ಜನ್ಯಂತ ಇತ್ಯರ್ಥಃ 'ಪಾದಗಳಿಂದ ಜನಿಸುವುವು ಉಂಟಾಗುವವು ಎಂದರೆ ಉದುರುವವು. ಆದುದರಿಂದ ಪಾದಗಳಿಂದ ಉದುರಿದ ಧೂಳಿಗೆ ಪಾಂಸುರ ಎಂದು ಹೆಸರು. ಅಥವಾ ಪನ್ನಾಃ ಶೇರತ ಇತಿ ವಾ । ಪಿಂಶನೀಯಾಃ ಧ್ವಂಸನೀಯಾ ಧ್ವಂಸನಾರ್ಹಾಸ್ತೇ ಭವಂತಿ ಎಂದರೆ ಪಾದದಲ್ಲಿ ಸೇರುವುದರಿಂದ ಅಥವಾ ಪಾದದಲ್ಲಿರುವ ಅದನ್ನು ಕೊಡವಿ ಧ್ವಂಸಿ (ನಾಶ) ಮಾಡಬೇಕಾದುದರಿಂದ ಪಾದದ ಧೂಳಿಗೆ ಪಾಂಸುರ ಎಂದು ಹೆಸರು.

ಮೇಲೆ ಹೇಳಿದ ವಿಷಯಗಳೆಲ್ಲಾ ಯಾಸ್ಕಮಹರ್ಷಿಯ ವಿವರಣೆಗಳು. [ಪುರಾಣಾದಿ ಗ್ರಂಥಗಳಲ್ಲಿ ವಿಷ್ಣುವಿಗೆ ಒಂದು ಪ್ರಾಮುಖ್ಯವಾದ ಸ್ಥಾನವಿದೆ. ಸಮಸ್ತ ವಿಶ್ವವನ್ನೂ ವ್ಯಾಪಿಸಿರುವುದರಿಂದ ವಿಷ್ಣುವನ್ನು ಪರಮೇಶ್ವರನೆಂದೂ ಪರಬ್ರಹ್ಮನೆಂದೂ ಹೇಳುವರು. ಅಥವಾ ಜಗದುತ್ಪತ್ತಿಸ್ಥಿತಿಲಯಗಳನ್ನು ನಡೆಸುವ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ವಿಷ್ಣುವು ಒಬ್ಬನಾಗಿ ಜಗತ್ತನ್ನು ಪಾಲಿಸುವನೆಂದು ಪ್ರಸಿದ್ಧಿಯು. ಈ ಜಗತ್ಪಾಲನಕಾರ್ಯಕ್ಕಾಗಿ ವಿಷ್ಣುವು ಅನೇಕ ಅವತಾರಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆಯುಂಟಾದುದರಿಂದ ಆ ಅವತಾರಗಳಲ್ಲಿ ಒಂದಾದ ವಾಮನ ಅಥವಾ ತ್ರಿವಿಕ್ರಮಾವತಾರವೇ ಈ ಋಕ್ಕಿನಲ್ಲಿ ವರ್ಣಿತವಾಗಿರುವುವೆಂದು ಭಾಷ್ಯಕಾರರ ಮತ್ತು ಇತರ ಪಂಡಿತರ ಅಭಿಪ್ರಾಯವು. ಋಗ್ವೇದದಲ್ಲಿ ವಿಷ್ಣುವಿನ ಅವತಾರಾದಿಗಳು ನಿರ್ದೇಶಿಸಲ್ಪಡದಿರುವುದರಿಂದಲೂ, ವೇದದಲ್ಲಿ ಅಲ್ಲಲ್ಲಿ ಕಂಡುಬರುವ ದೇವತಾ ಕಾರ್ಯಗಳೇ ಪುರಾಣಗಳಲ್ಲಿ ವಿಶೇಷರೀತಿಯಿಂದ ವರ್ಣಿತವಾಗಿರುವುದರಿಂದಲೂ, ಪುರಾಣಕಥೆಗಳಿಗೆ ಮೂಲವು ವೇದವೇ ಆಗಿರುವುದರಿಂದಲೂ ಪುರಾಣಾಂತರ್ಗತವಾದ ಅವತಾರಾದಿಗಳನ್ನು ವೇದಮಂತ್ರಗಳಿಗೆ ಹೊಂದಿಸಿ ಅರ್ಥಮಾಡುವುದು ಸರಿಯಲ್ಲವೆಂದು ಪಾಶ್ಚಾತ್ಯ ಮತ್ತು ಆಧುನಿಕ ಪಂಡಿತರ ಅಭಿಪ್ರಾಯಪಡುವರು.

ಪುರಾಣಗಳಲ್ಲಿ ಹೇಳಿರುವ ಕಥೆಯಂತೆ. ಬಲಿಚಕ್ರವರ್ತಿಯೆಂಬ ಅಸುರನು ದೇವತೆಗಳನ್ನು ಗೆದ್ದು ರಾಜ್ಯಭಾರ ಮಾಡುತ್ತಿರುವಾಗ ಸೋತುಹೋದ ದೇವತೆಗಳು ವಿಷ್ಣುವಿನಲ್ಲಿ ಮೊರೆಯಿಡಲು ವಿಷ್ಣುವು ಅದರನ್ನು ಸಂರಕ್ಷಿಸುವುದಕ್ಕಾಗಿ ವಾಮನಾವತಾರವನ್ನು ಮಾಡಿ ಬಲಿಚಕ್ರವರ್ತಿಯು ಯಾಗದೀಕ್ಷೆಯನ್ನು ಕೈಗೊಂಡಿರುವಾಗ ಅವನಲ್ಲಿ ಹೋಗಿ ತನಗೆ ಮೂರು ಪಾದದಷ್ಟು ಭೂಮಿಯನ್ನು ಕೊಡಬೇಕೆಂದು ಕೇಳಲು ಅದಕ್ಕೆ ಬಲಿಯು ಸಮ್ಮತಿಸಿ ಅದರಂತೆ ಕೊಡುವನೆಂದು ಹೇಳಿದನು. ಬಳಿಕ ವಾಮನಾವತಾರಿಯಾದ ವಿಷ್ಣುವು ತ್ರಿವಿಕ್ರಮಾತಾರವನ್ನು ತಾಳಿ ಎಂದರೆ ಭೂಮ್ಯಂತರಿಕ್ಷಗಳೆಲ್ಲಾ ವ್ಯಾಪಿಸುವಂತೆ ಬೃಹದಾಕಾರವನ್ನು ತಾಳಿ ಒಂದು ಪಾದದಿಂದ ಭೂಮಿಯೆಲ್ಲವನ್ನೂ ಮತ್ತೊಂದು ಪಾದದಿಂದ ಅಂತರಿಕ್ಷವನ್ನೂ ಆಕ್ರಮಿಸಿ ಮೂರನೇಪಾದವನ್ನು ಎಲ್ಲಿಡಲೆಂದು ಬಲಿಯನ್ನು ಕೇಳಲು ಆ ರಾಜನು ಸತ್ಯಸಂಧನಾದುದರಿಂದ ಮೂರನೇ ಪಾದವನ್ನು ಬೇರೆ ಸ್ಥಳವಿಲ್ಲದ್ದರಿಂದ ತನ್ನ ತಲೆಯಮೇಲೆ ಇಟ್ಟು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು ಅದರಂತೆ ತ್ರಿವಿಕ್ರಮನು ತನ್ನ ಮೂರನೆಯ ಪಾದವನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಲೋಕಕ್ಕೆ ಹೋಗಿ ಅಲ್ಲಿ ರಾಜ್ಯಭಾರಮಾಡುತ್ತ ಸುಖದಿಂದಿರುವಂತೆ ಮಾಡಿ ಅವನಿಗೆ ಬೇಕಾದ ವರವನ್ನು ಕೊಟ್ಟನೆಂದು ವಿಸ್ತಾರವಾದ ವರ್ಣನೆ ಇರುವುದು.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಹತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

## ಅಥ ವಿಂಶತಿಃ ಖಂಡಃ

### ಇಪ್ಪತ್ತನೆಯ ಖಂಡವು

ವಿಶ್ವಾನರೋ ವ್ಯಾಖ್ಯಾತಸ್ತಸ್ಯೈಷ ನಿಗಮೋ ಭವತ್ಯೈಂದ್ರ್ಯಾಮೃಚಿ ॥ ೨೦ ॥

ವಿಶ್ವಾನರೋ ವ್ಯಾಖ್ಯಾತಸ್ತಸ್ಯೈಷ ನಿಗಮೋ ಭವತ್ಯೈಂದ್ರ್ಯಾಮೃಚಿ ॥

ಕ್ರಮಪ್ರಾಪ್ತವಾದ ವಿಶ್ವಾನರ ಪದದ ನಿರ್ವಚನವನ್ನು ತೋರಿಸುತ್ತಾರೆ. 'ಪ್ರತ್ಯೃತಃ ಸರ್ವಾಣಿ ಭೂತಾನಿ' (ನಿ. ೭-೨೧) ಎಂಬಲ್ಲಿ ಇದು ವ್ಯಾಖ್ಯಾತವಾಗಿದೆ. ಇಲ್ಲಿ ಅವನು ದ್ಯುಸ್ಥಾನನೆಂದು ತಿಳಿಯಬೇಕು. ಅಪ್ರಾಧಾನ್ಯಭಕ್ತಿಗೆ ನಿಪಾತವೆಂದು ಹೆಸರು. ಇನ್ನು ಅನ್ಯದೇವತಾಕಮಂತ್ರದಲ್ಲಿ ಸೇರಿರುತ್ತಾನೆ. ಮುಂದೆ ಹೇಳುವ ಇಂದ್ರಮಂತ್ರದಲ್ಲಿ ಇವನು ಸ್ತುತಿಸಲ್ಪಡುತ್ತಾನೆ.

ಈ ರೀತಿ ಶ್ರೀಮದ್ಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕವಿಂಶತಿಃ ಖಂಡಃ

### ಇಪ್ಪತ್ತೊಂದನೆಯ ಖಂಡವು

ವಿಶ್ವಾನರಸ್ಯ ವನಸ್ಪತಿಮನಾನತಸ್ಯ ಶವಸಃ । ಏವೈಶ್ಚ ಚರ್ಷಣೀನಾಮೂತೀ ಹುವೇ ರಥಾನಾಮ್ । (ಋ. ಸಂ. ೮-೬೮-೪) ॥ ವಿಶ್ವಾನರಸ್ಯಾನಾನತಸ್ಯ ಶವಸೋ ಮಹತೋ ಬಲಸ್ಯೈವೈಶ್ಚ ಕಾಮೈರಯನರವನ್ನೈರ್ವಾ ಚರ್ಷಣೀನಾಂ ಮನುಷ್ಯಾಣಾ ಮೂತ್ಯಾ ಚ ಪಥಾ ರಥಾನಾಮಿಂದ್ರ ಮಸ್ಮಿನ್ಯಜ್ಞೇ ಹ್ವಯಾಮಿ ವರುಣೋ ವ್ಯಾಖ್ಯಾತ ಸ್ತಸ್ಯೈಷಾ ಭವತಿ ॥ ೨೧ ॥

ವಿಶ್ವಾನರಸ್ಯ ವನಸ್ಪತಿಮನಾನತಸ್ಯ ಶವಸಃ । ಏವೈಶ್ಚ ಚರ್ಷಣೀನಾ
ಮೂತೀ ಹುವೇ ರಥಾನಾಮ್ ॥

(ಋ. ಸಂ. ೯-೫೮-೧)

ವಿಶ್ವಾನರಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಇತರ ಜ್ಯೋತಿಗಳಿಂದ ತಿರಸ್ಕೃತವಾಗದಿರುವ ಪ್ರಕಾಶವುಳ್ಳ ಆದಿತ್ಯನ ಮಹಾಬಲವನ್ನು ರಕ್ಷಿಸುವ ಇಂದ್ರನನ್ನು ಈ ಯಜ್ಞದಲ್ಲಿ ನಿಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ಆಹ್ವಾನಿಸುತ್ತೇನೆ. ಮನುಷ್ಯರ ಕಾಮನೆಗೆನಿಮಿತ್ತವಾದ ರಶ್ಮಿಗಳ ಮಾರ್ಗದಿಂದ ಬರುವ ಆ ಇಂದ್ರನನ್ನು ಕರೆಯುತ್ತೇನೆ.

**ವಿಶ್ವಾನರಸ್ಯಾನಾನತಸ್ಯ ಶವಸೋ ಮಹತೋ ಬಲಸ್ಯೈರೈಶ್ಚ ಕಾಮೈರ-
ಯನೈರವನೈರ್ವಾ ಚರ್ಷಣೀನಾಂ ಮನುಷ್ಯಾಣಾಮೂತ್ಯಾಚ
ಪಥಾ ರಥಾನಾಮ್ । ಇಂದ್ರಮಸ್ಮಿನ್ಯಜ್ಞೇ ಹ್ವಯಾಮಿ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಚರ್ಷಣೀ ಮನುಷ್ಯನಾಮದಲ್ಲಿ (ನಿಘ.೨-೩-೮) ಪಠಿತವಾಗಿದೆ. ಗತ್ಯರ್ಥಕ ಇಣ್ ಧಾತುವಿಗೆ ನ ಪ್ರತ್ಯಯ ಬಂದಾಗ ಗುಣ. ಅಥವಾ ಕಾಂತ್ಯರ್ಥಕ ಅವಧಾತುವಿಗೆ ಭಾವಾರ್ಥಕ ಘಇಞ್ ಪ್ರತ್ಯಯ. ಕಾಂತಿ ಎಂದರೆ ಇಚ್ಛಾ. ವಿಶ್ವಾನರಸ್ಯ ವನಸ್ಪತಿಂ ಎಂದುದರಿಂದ ವಿಶ್ವಾನರನೆಂದರೆ ದ್ಯುಸ್ಥಾನನಾದ ಆದಿತ್ಯನೆಂದು ಸಿದ್ಧವಾಗುತ್ತದೆ.

**ವರುಣೋ ವ್ಯಾಖ್ಯಾತಸ್ತಸ್ಯೈಷ ಭವತಿ ॥ ೨೧ ॥**

ಕ್ರಮಪ್ರಾಪ್ತವಾದ ವರುಣಪದದ ನಿರ್ವಚನವನ್ನು ತೋರಿಸುತ್ತಾರೆ. ಪೂರ್ವದಲ್ಲಿ (ನಿ. ೧೦-೩) ಇದು ವ್ಯಾಖ್ಯಾತವಾಗಿದೆ. ಇಲ್ಲಿ ವರುಣನೆಂದರೆ ಆದಿತ್ಯನೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ವರುಣಸ್ತುತಿಯನ್ನು ಪ್ರತಿಪಾದಿಸುತ್ತದೆ.

**ವಿಶ್ವಾನರಸ್ಯ ವನಸ್ಪತಿಮನಾನತಸ್ಯ ಶವಸಃ । ಏವೈಶ್ಚ ಚರ್ಷಣೀನಾಮೂತೀ
ಹುವೇ ರಥಾನಾಂ ॥ ೪ ॥**

ಎಲೈ ಮರುತ್ತುಗಳೇ, ನಿಮ್ಮ ಸೈನ್ಯರೂಪದ ಗಮನಗಳೊಡನೆ ಕೂಡಿದವನೂ, ನಿಮ್ಮ ರಥಗಳ ರಕ್ಷಣೆಗಳೊಡನೆ ಕೂಡಿದವನೂ ಮತ್ತು ಸಕಲ ಶತ್ರುಜನರನ್ನೂ ನಾಶಪಡಿಸುವುದೂ ಯಾವ ಶತ್ರುವಿಗೂ ಬಗ್ಗದಿರುವುದೂ ಆದ ಬಲಕ್ಕೆ ಒಡೆಯನೂ ಆದ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತೇನೆ.

ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಎರಡನೆಯ ದಿವಸ ವಿಶ್ವಾನರಸ್ಯ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೪-೬ ಋಕ್ಕುಗಳನ್ನು) ಮರುತ್ವತೀಯ ಶಸ್ತ್ರಮಂತ್ರಪಠನಕಾಲದಲ್ಲಿ ಪ್ರತಿಗೃಚವನ್ನಾಗಿ ಪಠಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ ವಿಶ್ವಾನರಸ್ಯ ವನಸ್ಪತಿಮಿಂದ್ರ ಇತ್ಥೋಮಸಾ ಏಕ ಇತಿ ಮರುತ್ವತೀಯಸ್ಯ ಪ್ರದಿಪದನುಚರೌ ಎಂಬ ಸೂತ್ರದಿಂದ (೮ ೭-೬) ವಿವೃತವಾಗಿರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದಲ್ಲಿ ಹನ್ನೆರಡನೆಯ ಅಧ್ಯಾಯದಲ್ಲಿ

ಇಪ್ಪತ್ತೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಾವಿಂಶತಿಖಂಡಃ

### ಇಪ್ಪತ್ತೆರಡನೆಯ ಖಂಡವು

ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು । ತ್ವಂ ವರುಣ ಪಶ್ಯಸಿ (ಋ. ಸಂ. ೧-೫೦-೬) ॥ ಭುರಣ್ಯುರಿತಿ ಕ್ಷಿಪ್ರನಾಮ ಭುರಣ್ಯುಃಶಕುನಿರ್ಭೂರಿಮಧ್ವಾನಂ ನಯತಿ ಸ್ವರ್ಗಸ್ಯ ಲೋಕಸ್ಯಾಪಿ ವೋಳ್ಹಾ ತತ್ಸಂಪಾತಿ ಭುರಣ್ಯುರನೇನ ಪಾವಕಖ್ಯಾನೇನ। ಭುರಣ್ಯಂ ತಂ ಜನಾ ಅನು । ತ್ವಂ ವರುಣ ಪಶ್ಯಸಿ । ತತ್ತೇ ವಯಂ ಸ್ತುಮ ಇತಿ ವಾಕ್ಯಶೇಷೋಪಿ ವೋತ್ತರಸ್ಯಾನ್ ॥ ೨೨ ॥

ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಂ ಅನು ॥ ತ್ವಂ ವರುಣ ಪಶ್ಯಸಿ ॥

(ಋ. ಸಂ. ೧-೪-೭-೫)

ವರುಣ ಸ್ತುತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸರ್ವಶೋಧಕನಾದ, ಅನಿಷ್ಟನಿವಾರಕನಾದ ಸೂರ್ಯನೇ ನಿನ್ನ ಅನುಗ್ರಾಹಕ ಪ್ರಕಾಶದಿಂದ, ಪುಣ್ಯಶಾಲಿ ಮನುಷ್ಯರನ್ನು ಅನುಸರಿಸಿ ದೇವಯಾನದಿಂದ ಹೋಗುವದನ್ನು ನೋಡುವಿ. ಆ ನಿನ್ನನ್ನು ಸ್ತುತಿಸುತ್ತೇವೆ.

ಭುರಣ್ಯುರಿತಿ ಕ್ಷಿಪ್ರನಾಮ । ಭುರಣ್ಯುಃ ಶಕುನಿರ್ಭೂರಿ ಮಧ್ವಾನಂ ನಯತಿ ಸ್ವರ್ಗಸ್ಯ ಲೋಕಾಸ್ಯಪಿ ವೋಢಾ ತತ್ಸಂಪಾತೀ ಭುರಣ್ಯುಃ॥

ಮಂತ್ರಾರ್ಥನ್ನು ವಿವರಿಸುತ್ತಾರೆ. ಭುರಣ್ಯು ಅಂದರೆ ಶೀಘ್ರವಾಗಿ ಹೋಗುವ ಒಂದು ಪಕ್ಷಿ. ಭೂರಿನಯುಃ ಎಂಬುದು ಭುರಣ್ಯು ಎಂದಾಗಿದೆ. ಬಹು ಪರ್ಯಾಯದಲ್ಲಿ (ನಿಘೆ. ೩-೧-೪) ಭೂರಿಶಬ್ದ ಹೇಳಿದೆ. ಭುರಣ್ಯುವಿನಂತೆ ಆಚರಿಸುವುದು ಎಂಬರ್ಥದಲ್ಲಿ ಕ್ವಿಪ್ ಬಂದಿದೆ, ಭುರಣ್ಯುವು ಶೀಘ್ರಗಾಮಿಯಾದಂತೆ ಅಗ್ನಿಚಯನಮಾಡಿದವನೂ ಸ್ವರ್ಗಕ್ಕೆ ಶೀಘ್ರವಾಗಿ ಹೋಗುತ್ತಾನೆ.

ಅನೇನ ಪಾವಕ । ಖ್ಯಾನೇನ । ಭುರಣ್ಯಂತಂ ಜನಾಂ ಅನು । ತ್ವಂ ವರುಣ । ಪಶ್ಯಸಿ । ತತ್ತೇ ವಯಂ ಸ್ತುಮಃ ಇತಿ ವಾಕ್ಯಶೇಷಃ ॥

ಮಂತ್ರಾರ್ಥವು ಸಾಕಾಂಕ್ಷವಾಗಬಾರದೆಂದು ಶೇಷವಾಕ್ಯವನ್ನು ಅಧ್ಯಾಹಾರಮಾಡಿಕೊಂಡು ವಿವರಿಸುತ್ತಾರೆ. ನಿನ್ನ ಅನುಗ್ರಹ ದಿಂದಲೇ ಶೀಘ್ರವಾಗಿ ದೇವಯಾನದಿಂದ ಹೋಗುವವರನ್ನು ನೋಡುತ್ತಿರುವಿ. ಆ ನಿನ್ನನ್ನು ಸ್ತುತಿಸುತ್ತೇವೆಂದರ್ಥ.

ಅಪಿ ವೋತ್ತರಸ್ಯಾಮ್ ॥ ೨೨ ॥

ಅಥವಾ ಮುಂದಿನ ' ವಿದ್ಯಾಮೇಷಿ ' ಎಂಬ ಋಕ್ಕಿನಲ್ಲಿ ಅನ್ವಯ ಹೇಳಬೇಕು. ಉತ್ತರ ಮಂತ್ರದೊಡನೆ ಏಕವಾಕ್ಯತಾಬೋಧ ಬರುತ್ತದೆಂದು ತಿಳಿಸಲು ಪುನಃ ಪೂರ್ವೋಕ್ತ ಮಂತ್ರವನ್ನು ಹೇಳಿ ಉತ್ತರಮಂತ್ರವನ್ನು ತೋರಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಇಪ್ಪತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಯೋವಿಂಶತಿಖಂಡಃ

### ಇಪ್ಪತ್ತಮೂರನೆಯ ಖಂಡವು

ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಂ ಅನು । ತ್ವಂ ಜನಾಂ ಅನು । ತ್ವಂ ವರುಣ ಪಶ್ಯಸಿ (ಋ.ಸಂ. ೧-೫೦-೬) ॥ ವಿದ್ಯಾಮೇಷಿ ರಜಸ್ಪೃಥ್ವಹಾ। ಮಿಮಾನೋ ಅಕ್ತುಭಿಃ । ಪಶ್ಯನ್ ಜನ್ಮಾನಿ ಸೂರ್ಯ (ಋ. ಸಂ. ೧-೫೦-೭) ॥ ವ್ಯೇಷಿ ದ್ಯಾಂ ರಜಶ್ಚ ಪೃಥು ಮಹಾಂತಂ ಲೋಕಮಹಾನಿ ಚ ಮಿಮಾನೋ ಅಕ್ತುಭೀ ರಾತ್ರಿಭಿಃ ಸಹ ಪಶ್ಯನ್ ಜನ್ಮಾನಿ ಜಾತಾನಿ ಸೂರ್ಯಾಪಿ ವಾ ಪೂರ್ವಸ್ಯಾಮ್ ॥ ೨೩ ॥

ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಂ ಅನು । ತ್ವಂ ವರುಣ ಪಶ್ಯಸಿ ॥ ವಿದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ ಪಶ್ಯಞ್ಜನ್ಮಾನಿ ಸೂರ್ಯ ॥

ಉತ್ತರ ಮಂತ್ರನೊಡನೆ ಏಕವಾಕ್ಯತೆಯಿಂದ ವರುಣಸ್ತುತಿಯನ್ನು ಪ್ರತಿಪಾದಿಸುವ ಮಂತ್ರಗಳನ್ನು ಉದರಿಸುತ್ತಾರೆ. ಎಲೈ ಪಾವಕ, ವರುಣ, ಸೂರ್ಯನೇ ಯಾವ ಪ್ರಜ್ಞಾನದಿಂದ ನೀನು ಶೀಘ್ರವಾಗಿ ದೇವಯಾನದಿಂದ ಹೋಗುವವರನ್ನು ನೋಡುವಿಯೋ ಅದೇ ಪ್ರಜ್ಞಾನದಿಂದ ಕೂಡಿದ ನೀನು ದ್ಯುಲೋಕದಲ್ಲಿ ನಾನಾ ರೀತಿಯಾಗಿ ಸಂಚರಿಸುವಿ. ಹಾಗೆಯೇ ಅಂತರಿಕ್ಷದಲ್ಲಿಯೂ ತಿರುಗುವಿ. ಹಾಗೆಯೇ ಹಗಲೂ ರಾತ್ರಿಗಳನ್ನುಂಟುಮಾಡುತ್ತಾ ಜಾತವಾದ ಭೂತ ಪ್ರಪಂಚವನ್ನು ನೋಡುತ್ತಾ ಸಂಚರಿಸುವಿ.

ವ್ಯಷಿ ದ್ಯಾಂ ರಜಶ್ಚ ಪೃಥು ಮಹಾಂತಂ ಲೋಕಂ ಅಹಾನಿ ಚ ಮಿಮಾನೋ ಅಕ್ತುಭೀ ರಾತ್ರಿಭಿಃ ಸಹ ಪಶ್ಯಞ್ಜನ್ಮಾನಿ ಜಾತಾನಿ ಸೂರ್ಯ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಕ್ತು ರಾತ್ರಿ ಪರ್ಯಾಯದಲ್ಲಿ (ನಿಘ.೧-೭-೪) ಪಠಿತವಾಗಿದೆ. ಜನ್ಮ ಪದಕ್ಕೆ ಜನ್ಮಹೊಂದಿದ ಪ್ರಾಣಿಗಳೆಂದರ್ಥ.

ಅಪಿ ವಾ ಪೂರ್ವಸ್ಯಾಂ || ೨೩ ||

ಉತ್ತರಮಂತ್ರದೊಡನೆ ಏಕವಾಕ್ಯತಾ ಹೇಳಿದುದಾಯಿತು. ಪೂರ್ವ ವಾಕ್ಯದಿಂದಲೂ ಪೂರ್ವೋಕ್ತಮಂತ್ರಕ್ಕೆ ಏಕವಾಕ್ಯತೆ ಸಂಭವಿಸುತ್ತದೆಂದು ತೋರಿಸುತ್ತಾರೆ.

ಇಲ್ಲಿಗೆ ಶ್ರೀ ಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ

ಇಪ್ಪತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥಚತುರ್ವಿಂಶತಿ ಖಂಡಃ

## ಇಪ್ಪತ್ತನಾಲ್ಕನೆಯ ಖಂಡವು

ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು | ವರುಣ ಪಶ್ಯಸಿ(ಋ.ಸಂ. ೧-೫೦-೬) || ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಂನ್ | ಪ್ರತ್ಯಙ್ ವಿಶ್ವ ಸ್ವರ್ದೃಶೇ (ಋ-ಸಂ. ೧-೫೦-೫) ಪ್ರತ್ಯಙ್ಙಿದಂ ಸರ್ವಮುದೇಷಿ ಜ್ಯೋತಿರುಚ್ಯತೇ ಪ್ರತ್ಯಙ್ಙಿದಂ ಸರ್ವಮಭಿಪಶ್ಯಸೀತ್ಯಪಿ ವೈತಸ್ಯಾಮೇವ ||೨೪ ||

ಯೇ ನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಂ ಅನು ತ್ವಂ ವರುಣ ಪಶ್ಯಸಿ ||

ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ | ಪ್ರತ್ಯಙ್ ವಿಶ್ವಂ ಸ್ವರ್ದೃಶೇ ||

ಪೂರ್ವ ಮಂತ್ರಾರ್ಥದೊಡನೆ ಏಕವಾಕ್ಯತಾ ಹೇಳಲು ಪೂರ್ವಮಂತ್ರವನ್ನು ಉದಾಹರಿಸುತ್ತಾರೆ. ಪೂರ್ವೋಕ್ತ ಪ್ರಜ್ಞಾನದಿಂದ ಕೂಡಿರುವ ನೀನು ದೇವತೆಗಳ ಮಧ್ಯದಲ್ಲಿ ವೈಶ್ಯರಾದ ಮರುದ್ದೇವತೆಗಳ ಅಭಿಮುಖವಾಗಿ ಉದಯ ಹೊಂದುವಿ. ಹೀಗೆಯೇ ಮನುಷ್ಯರಿಗಭಿಮುಖವಾಗಿಯೂ ಉದಯವಾಗುವಿ. ಸೂರ್ಯನೇ, ಎಲ್ಲಾ ಪ್ರಪಂಚವನ್ನು ವ್ಯಾಪಿಸಿ ನೀನು ಎಲ್ಲರಿಗೂ ಅಭಿಮುಖವಾಗಿ ತೋರುತ್ತಿರುವಿ.

**ಪ್ರತ್ಯಙ್ಙಿದಂ ಸರ್ವಮುದೇಷಿ ಪ್ರತ್ಯಙ್ಙಿದಂ ಸರ್ವಮಭಿ ವಿಪಶ್ಯಸೀತಿ||**

ಪೂರ್ವಮಂತ್ರಾರ್ಥವನ್ನು ವಿವರಿಸುತ್ತಾರೆ. ಪಾಠಮಾತ್ರದಿಂದ ಸ್ಪಷ್ಟವಾಗಿದೆ.

**ಅಪಿ ವೈತಸ್ಯಾಮೇವ || ೨೪ ||**

ಪೂರ್ವೋತ್ತರ ಮಂತ್ರಗಳೊಡನೆ ಏಕವಾಕ್ಯತೆ ಹೇಳಿದುದಾಯಿತು. ಪ್ರಕೃತ ಋಙ್ಮಂತ್ರದಲ್ಲಿಯೇ ನಿರಾಕಾಂಕ್ಷವಾಗಿ ವಿವರಿಸಬಹುದೆಂದು ಪುನಃ ಅದೇ ಮಂತ್ರವನ್ನು ಉದಾಹರಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಪಂಚವಿಂಶತಿ ಖಂಡಃ

## ಇಪ್ಪತ್ತೈದನೆಯ ಖಂಡ

**ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾँ ಅನು | ತ್ವಂ ವರುಣ ಪಶ್ಯಸಿ | ತೇನ ನೋ ಜನಾನಭಿವಿಪಶ್ಯಸಿ ಕೇಶೀ ಕೇಶಾ ರಶ್ಮಯಸ್ತೈಸ್ತದ್ವಾನ್ ಭವತಿ ಕಾಶನಾದ್ವಾ ತಸ್ಯೈಷಾ ಭವತಿ || ೨೫ ||**

**ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಂ | ಅನು ತ್ವಂ ವರುಣ ಪಶ್ಯಸಿ ||**

ಎಲೈ ಪಾವಕ; ಸೂರ್ಯನೇ ಯಾವ ಅನುಗ್ರಹದರ್ಶನದಿಂದ ದೇವಯಾನ ಮೂಲಕವಾಗಿ ಶೀಘ್ರವಾಗಿ ಹೋಗುವ ಪುಣ್ಯವಂತ ಜನರನ್ನು ನೋಡುವಿಯೋ ಅದೇ ಅನುಗ್ರಾಹಕ ಪ್ರಜ್ಞೆಯಿಂದ ನಮ್ಮನ್ನೂ ನೋಡು. ಪೂರ್ವದಲ್ಲಿಯೂ ವ್ಯಾಕ್ಯಾಧ್ಯಾಹಾರದಿಂದಲೇ ಅರ್ಥ ವಿವರಿಸಿದೆ, ಇಲ್ಲಿ ವಿಶೇಷವೇನು ? ಎಂದು ಜಿಜ್ಞಾಸೆ ಬರಬಹುದು. ಆದರೆ ಅಲ್ಲಿ ಆ ನಿನ್ನನ್ನು ಸ್ತುತಿಸುತ್ತೇವೆ ಎಂದು ಸ್ತುತಿಯಲ್ಲಿ ಸಮಾಪ್ತಿಗೊಳಿಸಿದೆ. ಇಲ್ಲಿ ಆಶೀರ್ವಾದದಿಂದ ಸಮಾಪ್ತಿಗೊಳಿಸಿದೆ. ಸ್ತುತ್ಯಾಶೀರ್ವಾದಗಳಿಗೆ ಯಾವಾಗಲೂ ಸಂಬಂಧವಿರುತ್ತದೆ.

ಕೇಶೀ ಕೇಶಾ ರಶ್ಮಯಸ್ತೈಸ್ತದ್ವಾನ್ ಭವತಿ । ಕಾಶನಾದ್ವಾ। ತಸ್ಯೈಷಾ ಭವತಿ ॥ ೨೫ ॥

ಕೇಶೀ ಎಂಬುದು ಕ್ರಮ ಪ್ರಾಪ್ತವಾಗಿದೆ. ಕೇಶವೆಂದರೆ ರಶ್ಮಿಗಳು ಕೇಶಗಳಿಂದ ಕೂಡಿರುವವರು ಕೇಶೀ ಮಧ್ಯಾಹ್ನದಲ್ಲಿರುವ ಆದಿತ್ಯನೇ ಕೇಶಿಯಾಗುತ್ತಾನೆ. ಪ್ರಶಂಸಾರ್ಥದಲ್ಲಿ ಇನಿಪ್ರತ್ಯಯ ಬಂದಿದೆ. ಅಥವಾ ಕಾಶೃ–ದೀಪ್ತೌ. ಧಾತು ಭಾವಾರ್ಥದಲ್ಲಿ ಘೇಞ್ಪ್ರತ್ಯಯ ಕಾಶವೆಂದರೆ ದೀಪ್ತಿ ಪ್ರಕಾಶವುಳ್ಳವನು ಕೇಶೀ ಆದಿತ್ಯನೆಂದರ್ಥ. ಮುಂದೆ ಹೇಳುವ ಮಂತ್ರವು ಕೇಶೀಸ್ತುತಿ ಪ್ರತಿಪಾದಕವಾಗುತ್ತದೆ.

ಈರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ಇಪ್ಪತ್ತೈದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಷಡ್ವಿಂಶತಿ ಖಂಡಃ

## ಇಪ್ಪತ್ತಾರನೆಯ ಖಂಡವು

ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ । ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ (ಋ. ಸಂ. ೧೦-೧೩೬-೧) ॥ ಕೇಶ್ಯಗ್ನಿಂ ಚ ವಿಷಂಚ ವಿಷಮಿತ್ಯುದಕನಾಮ ವಿಷ್ಣಾತೇರ್ವಿಪೂರ್ವಸ್ಯ ಸ್ನಾತೇಃ ಶುದ್ಧ್ಯರ್ಥಸ್ಯ ವಿಪೂರ್ವಸ್ಯ ವಾ ಸಚತೇರ್ದ್ಯಾವಾಪೃಥಿವ್ಯೌ ಚ ಧಾರಯತಿ ಕೇಶೀದಂ ಸರ್ವಮಭಿ ವಿಪಶ್ಯತಿ ಕೇಶೀದಂ ಜ್ಯೋತಿರುಚ್ಯತ ಇತ್ಯಾದಿತ್ಯಮಾಹಾಥಾಪ್ಯೇತೇ ಇತರೇ ಜ್ಯೋತಿಷೀ ಕೇಶಿನೀ ಉಚ್ಯೇತೇ ಧೂಮೇನಾಗ್ನೀ ರಜಸಾ ಚ ಮಧ್ಯಮಸ್ತೇಷಾಮೇಷಾ ಸಾಧಾರಣಾ ಭವತಿ ॥

ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ । ಕೇಶೀ ವಿಶ್ವಂ
ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥

(ಋ. ಸಂ. ೮–೭–೨೪)

ಕೇಶೀಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ರಶ್ಮಿಗಳಿಂದ ಪ್ರಕಾಶಿಸುವ ಸೂರ್ಯನು ಮಳೆಯಿಂದ ಓಷಧ್ಯಾದಿಗಳನ್ನುಂಟಮಾಡಿ ಅಗ್ನಿಯನ್ನು ಧರಿಸಿರುತ್ತಾನೆ. ಸೆಖೆಗಾಲದಲ್ಲಿ ನೀರನ್ನು ಆಕರ್ಷಿಸಿ ಧರಿಸುತ್ತಾನೆ. ವರ್ಷಾ ಕಾಲದಲ್ಲಿ ವೃಷ್ಟಿಯಿಂದ ದ್ಯಾವಾಭೂಮಿಗಳನ್ನು ಧರಿಸುತ್ತಾನೆ. ಹೀಗೆ ಈ ಆದಿತ್ಯನು ಸಕಲವಿಶ್ವವನ್ನೂ ಅನುಗ್ರಹದೃಷ್ಟಿ ಯಿಂದ ನೋಡುತ್ತಿರುತ್ತಾನೆ. ಸೂರ್ಯಮಂಡಲದಲ್ಲಿರುವ ಜ್ಯೋತಿಯನ್ನೇ ಕೇಶಿಯೆಂದು ಕರೆಯುತ್ತಾರೆ.

ಕೇಶ್ಯಗ್ನಿಂ ಚ ವಿಷಂ ಚ, ವಿಷಮಿತ್ಯುದಕನಾಮ ವಿಷ್ಣಾತೇರ್ವಿ
ಪೂರ್ವಸ್ಯ ಸ್ನಾತೇಃ ಶುದ್ಧ್ಯರ್ಥಸ್ಯ, ವಿಪೂರ್ವಸ್ಯ ವಾ ಸಚತೇಃ ।
ದ್ಯಾವಾಪೃಥಿವ್ಯೌ ಚ ಧಾರಯತಿ । ಕೇಶೀದಂ ಸರ್ವಮಭಿವಿಪಶ್ಯತಿ,
ಕೇಶೀದಂ ಜ್ಯೋತಿರುಚ್ಯತ ಇತ್ಯಾದಿತ್ಯಮಾಹ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿಷ ಉದಕನಾಮದಲ್ಲಿ (ನಿಘ-೧-೧೨-೧೫) ಪಠಿತವಾಗಿದೆ. ವಿಷ್ಣಾತೇಃ ಎಂಬ ತಮ್ಮ ವಚನಕ್ಕೇ ವಿಪೂರ್ವಸ್ಯ ಸ್ನಾತೇಃ ಎಂದು ವ್ಯಾಖ್ಯಾನಮಾಡುತ್ತಾರೆ. ಭಾಷ್ಯದ ಲಕ್ಷಣವನ್ನೂ ಹೀಗೆಯೇ ಹೇಳಿರುತ್ತಾರೆ.

ಸೂತ್ರಸ್ಥಂ ಪದಮಾದಾಯ ವಾಕ್ಯೈಃ ಸೂತ್ರಾನುಸಾರಿಭಿಃ ।
ಸ್ವಪದಾನಿಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

ಎಂದು ಭಾಷ್ಯಲಕ್ಷಣ. ಸೂತ್ರದ ಪದವನ್ನು ತೆಗೆದುಕೊಂಡು ಸೂತ್ರಾನುಸಾರ ವಾಕ್ಯಗಳಿಂದ ವಿವರಿಸುವುದಲ್ಲದೆ ತಮ್ಮ ಪದಗಳಿಗೂ ವ್ಯಾಖ್ಯಾನಮಾಡುತ್ತಾರೆ. ಪ್ರಕೃತ ಷ್ಣಾ—ಶೌಚೇ—ಧಾತು. ವಿ ಉಪಸರ್ಗವಿರುವಾಗ ಡ ಪ್ರತ್ಯಯ. ಇದರಿಂದ ವಿಶೇಷವಾಗಿ ಸ್ನಾನಮಾಡುತ್ತಾರೆ ಎಂದು ವಿಷಪದಕ್ಕೆ ಅರ್ಥ. ನೀರು ಮೊದಲನೆಯ ಶೌಚಸಾಧನ. ಅಥವಾ ವಿಪೂರ್ವಕ ಷಚ—ಸೇಚನೇ ಸೇವನೇ ಚ ಧಾತುವಿಗೆ ಹಿಂದಿನಂತೆ ಪ್ರತ್ಯಯ. ಸ್ನಾನಪಾನಾವಗಾಹನಾದಿಗಳಿಂದ ಸೇವಿಸಲ್ಪಡುವುದೆಂದರ್ಥ.

ಅಥಾಪ್ಯೇತೇ ಇತರೇ ಜ್ಯೋತಿಷೀ ಕೇಶಿನೀ ಉಚ್ಯೇತೇ ॥

ಮಧ್ಯಾಹ್ನ ಸೂರ್ಯನಿಗೆ ಕೇಶೀ ಎಂದು ಹೆಸರು. ಇದೂ ಅಲ್ಲದೆ ಇತರ ಪ್ರಥಮ ಮಾಧ್ಯಮಿಕ ಜ್ಯೋತಿಗಳಿಗೂ ಕೇಶಿಯೆಂದು ಕರೆಯುತ್ತಾರೆ.

ಧೂಮೇನಾಗ್ನಿಃ । ರಜಸಾ ಚ ಮಧ್ಯಮಃ ॥

ಆ ಎರಡು ಜ್ಯೋತಿಗಳು ಯಾವುವು? ಎಂದು ವಿವರಿಸುತ್ತಾರೆ. ಧೂಮದಿಂದ ಅಗ್ನಿಯು ಕೇಶಿಯಾಗುತ್ತಾನೆ. ಗೂಢವಾಗಿದ್ದರೂ ಹೊಗೆಯಿಂದ ಅಗ್ನಿಯಿದೆಯೆಂದು ತಿಳಿಯುವುದರಿಂದ ಅದು ಪ್ರಕಾಶಕವಾಗುತ್ತದೆ. ಮಧ್ಯಮನಾದ ವಾಯುವು ಧೂಳಿಯಿಂದ ಪ್ರಕಾಶಿತನಾಗುತ್ತಾನೆ. ವಾಯುವಿಗೆ ರೂಪವಿಲ್ಲದಿರುವುದಿಂದ ಎಲ್ಲಿಯಾದರೂ ಧೂಳಿ ಎದ್ದರೆ ಆಗ ವಾಯುವು ಆದರಿಂದ ಊಹಿಸಲ್ಪಡುತ್ತಾನೆ ಅಥವಾ ನೀರಿನಿಂದ ವೈದ್ಯುತ ಪ್ರಕಾಶವೆಂದು ತಿಳಿಯಬೇಕು. .

ತೇಷಾಮೇಷಾ ಸಾಧಾರಣೀ ಭವತಿ ॥ ೨೬ ॥

ಮುಂದೆ ಹೇಳುವ ಮಂತ್ರವು ಈ ಮೂವರು ಕೇಶಿಯರ ಅಂದರೆ ಅಗ್ನಿ ವಾಯು ಆದಿತ್ಯರ ಸಾಧಾರಣ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ । ಕೇಶೀ ವಿಶ್ವಂ
ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥ ೧ ॥

ಪ್ರಕಾಶಮಾನವಾದ ಮತ್ತು ರಶ್ಮಿಯುಕ್ತನಾದ ಸೂರ್ಯನು ಅಗ್ನಿಯನ್ನು ಹವಿಸ್ಸಿನಿಂದ ಪೋಷಿಸುತ್ತಾನೆ. ಅದೇ ಸೂರ್ಯನು ಉದಕವನ್ನು ಆಕರ್ಷಿಸಿ ಧರಿಸುತ್ತಾನೆ, ದ್ಯಾವಾಪೃಥಿವಿಗಳನ್ನು ಧರಿಸುತ್ತಾನೆ. ಸ್ವರ್ಗಲೋಕವನ್ನು ಎಲ್ಲರಿಗೂ ಕಾಣುವಂತೆ ಬೆಳಗುತ್ತಾನೆ. ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಸೂರ್ಯನು.

**ಕೇಶೀ ಅಗ್ನಿಂ ಕೇಶೀ ವಿಷಂ (ಬಿಭರ್ತಿ)**—ಕೇಶಃ ಎಂದರೆ ರಶ್ಮಿಗಳು. ಆ ರಶ್ಮಿಗಳುಳ್ಳವರಿಗೆ ಕೇಶಿನಃ ಎಂದು ಹೆಸರು. ಪ್ರಕೃತ ಋಕ್ಕಿನಲ್ಲಿ ಅಗ್ನಿ, ವಾಯು, ಸೂರ್ಯ ಎಂಬವರನ್ನು ಕೇಶಿನಃ ಎಂದು ಕರೆಯಲಾಗಿದೆ. ಈ ವಾಕ್ಯದಲ್ಲಿ ಸೂರ್ಯನು ಅಗ್ನಿಯನ್ನು ಧರಿಸುತ್ತಾನೆ ಎಂದಿದೆ. ಅಗ್ನಿಯಲ್ಲಿ ಹೋಮಮಾಡಬೇಕಾದರೂ, ಯಜ್ಞ ಯಾಗಾದಿಗಳನ್ನು ಮಾಡಬೇಕಾದರೂ ಕೆಲವು ನಿರ್ದಿಷ್ಟ ಕಾಲಗಳಲ್ಲಿ ಮಾಡುವರು. ಯಜ್ಞಯಾಗಾದಿಗಳನ್ನು ಮಾಡುವಾಗ ಮಾಸ, ಪಕ್ಷ, ತಿಥಿ, ನಕ್ಷತ್ರ, ಪೌರ್ಣಮಾಸ, ಅಮಾವಾಸ್ಯ, ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲ, ರಾತ್ರಿ ಇತ್ಯಾದಿ ಕಾಲವಿಭಾಗಗಳನ್ನು ವಿವೇಚಿಸಬೇಕು. ಇಂತಹ ಕರ್ಮಗಳು ಇಂತಹ ಕಾಲಗಳಲ್ಲಿಯೇ ಮಾಡಬೇಕೆಂಬ ನಿಯಮವಿರುವುದು. ಈ ಕಾಲ ವಿಭಾಗಗಳು ಸೂರ್ಯನ ಗತಿಯಿಂದಲೇ ಉಂಟಾಗುವುದರಿಂದಲೂ ಅವುಗಳಿಗೆ ಅಧಿಪತಿಯಾಗಿರುವುದರಿಂದಲೂ ಆಯಾಕಾಲ ಗಳಲ್ಲಿ ಮಾಡಲ್ಪಡುವ ಹೋಮಾದಿಗಳಿಗೆ ಸೂರ್ಯನ ಸಹಾಯವು ಬೇಕು. ಆದ್ದರಿಂದ ಸೂರ್ಯನ ಸಹಾಯದಿಂದ ನಡೆಸಲ್ಪಡುವ ಹೋಮಾದಿಗಳಿಂದ ಅಗ್ನಿಯು ಪೋಷಿಸಲ್ಪಡುವುದರಿಂದ ಇಲ್ಲಿ ಸೂರ್ಯನು ಅಗ್ನಿಯನ್ನು ಪೋಷಿಸಿ ಧರಿಸುವನೆಂದು ಹೇಳಲಾಗಿದೆ.

**ವಿಷಂ**—ಎಂಬ ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. ಸಮುದ್ರಾದಿಜಲಾಶಯಗಳಲ್ಲಿರುವ ಉದಕವನ್ನು ಸೂರ್ಯನು ಬೇಸಿಗೆಯಲ್ಲಿ ತನ್ನ ರಶ್ಮಿಗಳಿಂದ ಆಕರ್ಷಿಸಿ, ಆವಿಯ ರೂಪದಲ್ಲಿ ಅದು ವರ್ಷಾಕಾಲದಲ್ಲಿ ಮೇಘಗಳಾಗಿ ಪರಿವರ್ತಿಸುವಂತೆ ಮಾಡುವನು. ಆದ್ದರಿಂದ ವೃಷ್ಟ್ಯರ್ಥವಾಗಿ ಸೂರ್ಯನು ಉದಕವನ್ನು ಧರಿಸುವನು ಎಂದು ಇಲ್ಲಿ ಹೇಳಿದೆ.

**ಕೇಶೀ ಬಿಭರ್ತಿ ರೋದಸೀ**—ಸೂರ್ಯನು ದ್ಯಾವಾಪೃಥಿಗಳನ್ನು ಧರಿಸಿ ಪೋಷಿಸುವನು. ಸೂರ್ಯನು ತನ್ನ ಪ್ರಕಾಶದಿಂದ ಭೂಮ್ಯಂತರಿಕ್ಷಗಳನ್ನು ಬೆಳಗುವನು ಮತ್ತು ಮತ್ತು ತನ್ನ ರಶ್ಮಿಗಳ ಮೂಲಕ ಉದಕದನ್ನು ಆಕರ್ಷಿಸಿ ಆ ಉದಕವನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತೆ ಮಾಡಿ ಆ ಮೂಲಕ ಭೂಮಿಯಮೇಲೆ ಸಸ್ಯಾದಿಗಳು ಬೆಳೆಯುವಂತೆ ಮಾಡುವನು. ಈ ರೀತಿ ಬೆಳಕು, ವೃಷ್ಟ್ಯುದಕ, ಆಹಾರಾರ್ಥವಾಗಿ ಸಸ್ಯಾದಿಗಳು ಇವುಗಳನ್ನೆಲಾ ಒದಗಿಸುವುದರಿಂದ ಸೂರ್ಯನು ದ್ಯಾವಾಪೃಥಿವಿಗಳನ್ನು ಧರಿಸಿ ಪೋಷಿಸುವನು ಎಂದು ಹೇಳಿದೆ.

**ಕೇಶೀ ವಿಶ್ವಂ ಸಃ ದೃಶೇ ಇದಂ ಜ್ಯೋತಿಃ ಉಚ್ಯತೇ**—ಪ್ರಪಂಚದಲ್ಲಿರುವ ಸಮಸ್ತ ಜನರೂ ತಮ್ಮ ಕಣ್ಣು ಗಳಿಂದ ಇತರ ವಸ್ತುಗಳನ್ನು ನೋಡಲು ಸಹಾಯವಾಗುವಂತೆ ಸೂರ್ಯನು ತನ್ನ ಪ್ರಕಾಶವನ್ನು ಎಲ್ಲಾ ಕಡೆಯಲ್ಲಿಯೂ ಬೀರುವನು. ಸೂರ್ಯನ ಪ್ರಕಾಶವಿಲ್ಲದಿದ್ದರೆ ಯಾವ ಪ್ರಾಣಿಗಳೂ ಏನನ್ನೂ ನೋಡಲಾಗುವುದಿಲ್ಲ. ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ. ಸೂರ್ಯನ ಪ್ರಕಾಶವಿಲ್ಲದಿದ್ದರೆ ಯಾವ ಪ್ರಾಣಿಗಳೂ ಏನನ್ನೂ ನೋಡಲಾಗುವುದಿಲ್ಲ. ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ. ಸೂರ್ಯನ ಪ್ರಕಾಶವುಎಲ್ಲರಿಗೂ ಅತ್ಯವಶ್ಯಕವು. ನಮ್ಮ ಕಣ್ಣೆದುರಿಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಸೂರ್ಯನು.

ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

**ಕೇಶ್ಯಗ್ನಿಂ ಚ ವಿಷಂ ಚ । ವಿಷಮಿತ್ಯುದಕನಾಮ । ವಿಷ್ಣಾತೇರ್ವಿಪೂರ್ವಸ್ಯ ಸ್ನಾತೇಃ ಶುದ್ಧ್ಯರ್ಥಸ್ಯ ವಿಪೂರ್ವಸ್ಯ ವಾ ಸಚತೇಃ । ದ್ಯಾವಾಪೃಥಿವ್ಯಾ ಚ ಧಾರಯತಿ ಕೇಶೀದಂ ಸರ್ವಮಿದಮಭಿವಿಪಶ್ಯತಿ,**

ಕೇಶೀದಂ ಜ್ಯೋತಿರುಚ್ಯತ ಇತ್ಯಾದಿತ್ಯಮಾಹ ॥ ಅಥಾಪ್ಯೇತೇ ಇತರೇ ಜ್ಯೋತಿಷೀ ಕೇಶಿನೀ ಉಚ್ಯೇತೇ । ಧೂಮೇನಾಗ್ನೀ ರಜಸಾ ಚ ಮಧ್ಯಮಃ ॥

(ನಿ. ೧೨-೩೬)

ಈ ಕೇಶಿಯು (ಆದಿತ್ಯನು) ಅಗ್ನಿಯನ್ನೂ ಉದಕವನ್ನೂ ಧರಿಸುತ್ತಾನೆ. ವಿಷವೆಂದರೆ ಉದಕಕ್ಕೆ ಹೆಸರು. ಶುದ್ಧಿಮಾಡು ಎಂಬರ್ಥವುಳ್ಳ ವಿ ಎಂಬ ಉಪಸರ್ಗಪೂರ್ವಕವಾದ ಸ್ನಾ ಎಂಬ ಧಾತುವಿನಿಂದ ವಿಷಂ ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಅಥವಾ ಅನುಸರಿಸು ಜತೆಯಲ್ಲಿರು ಎಂಬರ್ಥವುಳ್ಳ ಸಚ್ ಧಾತುವಿನಿಂದಲಾದರೂ ವಿಷಶಬ್ದದ ನಿಷ್ಪತ್ತಿಯಾಗಬಹುದು. ಈ ಕೇಶಿಯು (ಆದಿತ್ಯನು) ದ್ಯಾವಾಪೃಥಿವಿಗಳನ್ನು ಧರಿಸಿ ಪೋಷಿಸುತ್ತಾನೆ ಮತ್ತು ಈ ಸಮಸ್ತ ಜಗತ್ತನ್ನೂ ನೋಡುತ್ತಾನೆ (ರಶ್ಮಿಗಳಿಂದ ವ್ಯಾಪಿಸುತ್ತಾನೆ). ನಮಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಆದಿತ್ಯನು ಎಂದು ಹೇಳುವರು ಇದಲ್ಲದೆ ಇನ್ನೆರಡು ವಿಧವಾದ ಜ್ಯೋತಿಗಳು ಇರುವುದು. ಅವುಗಳನ್ನು ಕೇಶೀ ಎಂದು ಕರೆಯುವುದು. ಅವು ಯಾವುವೆಂದರೆ ಭೂಮಿಯಲ್ಲಿರುವ ಪ್ರಸಿದ್ಧವಾದ ಅಗ್ನಿಯು' ಈ ಅಗ್ನಿಯ ಧೂಮವು (ಹೊಗೆ) ಕೇಶದಂತೆ ಇರುವುದು. ಆದ್ದರಿಂದ ಅಗ್ನಿಗೂ ಕೇಶಿ ಎಂದು ಹೆಸರು. ಮಧ್ಯಮಸ್ಥಾನದೇವತೆಯಾದ ವಾಯುವು ವಿದ್ಯುದಗ್ನಿಯಿಂದ ಕೂಡಿರುವನು. ಅಂತರಿಕ್ಷದಲ್ಲಿ ವಾಯುವು ಮಂಜಿನಿಂದ ಕೂಡಿರುವುದು. ಈ ಮಂಜು ಕೇಶರೂಪದಲ್ಲಿರುವುದು. ಆದ್ದರಿಂದ ವಾಯುವನ್ನೂ ಕೇಶೀ ಎಂದು ಕರೆಯಬಹುದು. ಈ ಕೇಶಿನಃ ಎಂಬ ಹೆಸರಿನ ದೇವತೆಗಳನ್ನು ಸ್ತುತಿಸುವ ಮತ್ತೊಂದು ಋಕ್ಕಿರುವುದು—

ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।
ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಂ ॥

(ಋ. ಸಂ. ೧-೧೬೪-೪೪)

ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಕಾಲೇಕಾಲೇಽಭಿಪಶ್ಯಂತಿ ಸಂವತ್ಸರೇ ವಪತ ಏಕ ಏಷಾಮಿತ್ಯಗ್ನಿಃ ಪೃಥಿವೀಂ ದಹತಿ ಸರ್ವಮೇಕೋಽಭಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯ ॥

(ನಿ. ೧೨-೨೭)

ಕೇಶಿನಃ ಎಂಬ ಹೆಸರಿನಿಂದ ಕರೆಯಲ್ಪಡುವ ಮೂರು ಮಂದಿ ದೇವತೆಗಳು (ಅಗ್ನಿ, ಸೂರ್ಯ, ವಾಯುಗಳು) ಆಯಾ ಕಾಲಗಳಲ್ಲಿ ತಮ್ಮ ಕೆಲಸಕಾರ್ಯಗಳನ್ನು ನಿರ್ವಹಿಸುವರು, ಅವರಲ್ಲಿ ಒಬ್ಬನು ಭೂಮಿಯಲ್ಲಿ ದಹಿಸುವನು ಇವನೇ ಅಗ್ನಿಯು; ಇನ್ನೊಬ್ಬ ತನ್ನ ವೃಷ್ಟಿಪ್ರಕಾಶಶಾದಿಕರ್ಮಗಳಿಂದ ಸಮಸ್ತ ಜಗತ್ತನ್ನು ಅನುಗ್ರಹಬುದ್ಧಿಯಿಂದ ನೋಡುವನು. ಇವನೇ ಆದಿತ್ಯನು, ಇನ್ನೊಬ್ಬನ ಗಮನವು ಮಾತ್ರ ಕಾಣಲ್ಪಡುವುದು ರೂಪವು ಕಾಣಿಸುವುದಿಲ್ಲ. ಇವನೇ ವಾಯುವು. ಎಂದರೆ ಗಾಳಿಯು ಬೀಸುವುದನ್ನು ನಾವು ತಿಳಿಯಬಲ್ಲೆವು. ಆದರೆ ಅದರ ರೂಪವನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

# ಅಥ ಸಪ್ತವಿಂಶತಿ ಖಂಡಃ

## ಇಪ್ಪತ್ತೇಳನೆಯ ಖಂಡವು

ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ॥ ವಿಶ್ವಮೇಕೋಽಭಿ ಚಷ್ಟೇ ಶಚೀಭಿರ್ಧ್ರಾಜಿ ರೇಕಸ್ಯ ದದೃಶೇ ನ ರೂಪಮ್ (ಋ. ಸಂ. ೧-೧೬೪-೪೪) ॥ ತ್ರಯಃ ಕೇಶಿನ ಋತುಥಾ ವಿಚಕ್ಷತೇ ಕಾಲೇ ಕಾಲೇಽಭಿವಿಪಶ್ಯಂತಿ ಸಂವತ್ಸರೇ ವಪತ ಏಕ ಏಷಾಮಿತ್ಯಗ್ನಿಃ ಪೃಥಿವೀಂ ದಹತಿ ಸರ್ವಮೇಕೋಽಭಿವಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯಾಥ ಯದ್ರಶ್ಮಿಭಿರಭಿ-ಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ ವೃಷಾಕಂಪನಸ್ತಸ್ಯೈಷಾ ಭವತಿ ॥ ೨೭ ॥

ತ್ರಯಃ ಕೇಶಿನ ಋತುಥಾ ವಿಚಕ್ಷತೇ ಸಂವತ್ಸರೇ ವಪತ ಏಕ ಏಷಾಮ್ । ವಿಶ್ವಮೇಕೋ ಅಭಿಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಮ್ ॥

(ಋ. ಸಂ. ೨-೩-೨೨, ಅಥ. ಸಂ. ೯-೧-೯೬)

ಕೇಶಿದೇವತೆಗಳ ಸಾಧಾರಣ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಈ ಮೂವರು ಕೇಶಿಗಳು ಅಂದರೆ ಅಗ್ನಿ, ವಾಯು, ಸೂರ್ಯರು ಋತುಕಾಲದಲ್ಲಿ ಸ್ವಕರ್ಮಾಧಿಕಾರ ಪ್ರಯುಕ್ತವಾದ ಅನುಗ್ರಹದಿಂದ ಲೋಕವನ್ನು ಅನುಗ್ರಹಿಸುತ್ತಾರೆ. ಇವರ ಮಧ್ಯದಲ್ಲಿ ಪೃಥಿವೀಸ್ಥಾನನಾದ ಅಗ್ನಿಯು ಸಂವತ್ಸರಾಂತ್ಯದಲ್ಲಿ ಭೂಮಿಯನ್ನು ಸುಡುತ್ತಾನೆ. ದ್ಯುಸ್ಥಾನವಾದ ಆದಿತ್ಯನು ಪ್ರಕಾಶವೃಷ್ಟ್ಯಾದಿಗಳಿಂದ ಪ್ರಪಂಚವನ್ನು ಅನುಗ್ರಹಿಸುತ್ತಾನೆ. ಇನ್ನೊಬ್ಬ ಮಧ್ಯಮನಾದ ವಾಯುವಿನ ಗತಿಯು ಧೂಳಿಯ ಚಲನದಿಂದ ಅಥವಾ ನೀರಿನ ಚಲನದಿಂದ ತಿಳಿಯುತ್ತದೆ, ಇವನಿಗೆ ರೂಪವಿಲ್ಲದಿರುವುದರಿಂದ ಧೃತ್ಯಾದಿಗಳಿಂದ ಅನುಮಿತನಾಗುತ್ತಾನೆ.

ತ್ರಯಃ ಕೇಶಿನ ಋತುಥಾ ವಿಚಕ್ಷತೇ । ಕಾಲೇ ಕಾಲೇ ಅಭಿವಿಪ-ಶ್ಯಂತಿ । ಸಂವತ್ಸರೇ ವಪತ ಏಕ ಏಷಾಮ್ । ಇತ್ಯಗ್ನಿಃ ಪೃಥಿವೀಂ ದಹತಿ । ಸರ್ವಮೇಕೋಽಭಿವಿಪಶ್ಯತಿ ಕರ್ಮಭಿರಾದಿತ್ಯೋ ಗತಿ ರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಧ್ರಜತಿಯೆಂದು ಗತಿಕರ್ಮಕ ಧಾತುಗಳಲ್ಲಿ ಪಠಿತವಾಗಿದೆ (ನಿಘ. ೨-೧೪) ಇಞ್ ಪ್ರತ್ಯಯ ಬಂದಾಗ ಉಪಧಾವೃದ್ಧಿ ಬಂದಿದೆ. ಬೀಜಹಾಕುವ ಮೊದಲು ಗದ್ದೆಗಳನ್ನು ಸುಡುವುದರಿಂದ ಮುಂದೆ ಅದು ಬೀಜಾಪವಾಕ್ಕೆ ಅನುಕೂಲವಾಗುತ್ತದೆ. ಸೂರ್ಯನು ನೋಡುವುದೆಂದರೆ ತನ್ನ ಪ್ರಕಾಶನಾದಿಕಾರ್ಯಗಳಿಂದ ಅನುಗ್ರಹಿಸುವುದು.

ಅಥ ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ ।
ವೃಷಾಕಂಪನಸ್ತಸ್ಯೈಷಾ ಭವತಿ ॥ ೨೭ ॥

ಕ್ರಮಪ್ರಾಪ್ತವಾದ ವೃಷಾಕಪಿ ಪದದ ನಿರ್ವಚನನ್ನು ತೋರಿಸುತ್ತಾರೆ. ಪೂರ್ವೋಕ್ತನಾದ ಆದಿತ್ಯನೇ ಕಿರಣಗಳನ್ನು ಉಪಸಂಹಾರಮಾಡಿಕೊಳ್ಳುವುದರ ಮೂಲಕ ಯಾವಾಗ ಜಗತ್ತಿಗೆ ಭಯವನ್ನುಂಟುಮಾಡುತ್ತಾನೋ ಆಗ ವೃಷಾಕಪಿಪದವಾಚ್ಯನಾಗುತ್ತಾನೆ. ಸಾಯಂಕಾಲದಲ್ಲಿ ಸೂರ್ಯಕಿರಣ ತೀಕ್ಷ್ಣವಾಗಿರದಿರುವುದರಿಂದ ಮಂಜು ಸುರಿಯುತ್ತದೆ. ಕತ್ತಲೆಯನ್ನು ಊಹಿಸಿ ಜನರು ಭಯಗ್ರಸ್ತರಾಗುತ್ತಾರೆ. ಮುಂದೆ ಹೇಳುವ ಮಂತ್ರವು ವೃಷಾಕಪಿಯ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।
ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ
ರೂಪಂ ॥ ೪೪ ॥

ಕೇಶದಂತಿರತಕ್ಕ ರಶ್ಮಿಗಳೊದಗೂಡಿದ ಅಗ್ನಿ, ಆದಿತ್ಯ ಮತ್ತು ವಾಯುಗಳು ಆಯಾ ಕಾಲಕ್ಕೆ ಸರಿಯಾಗಿ ವಿಶೇಷ ರೀತಿಯಲ್ಲಿ ಭೂಮಿಯನ್ನು ನೋಡುತ್ತಿರುತ್ತಾರೆ. ಇವರಲ್ಲಿ ಅಗ್ನಿಯು ಸಂವತ್ಸರಾತೀತವಾದನಂತರ ಓಷಧ್ಯಾದಿಗಳನ್ನು ಛೇದಿಸುತ್ತಾನೆ. ಇನ್ನೊಬ್ಬನಾದ ಆದಿತ್ಯನು ಸಕಲ ಜಗತ್ತನ್ನೂ ತನ್ನ ಪ್ರಕಾಶನಾದಿ ಕರ್ಮಗಳಿಂದ ಸರ್ವತ್ರ ನೋಡುತ್ತಾರೆ. ಇನ್ನೊಬ್ಬನಾದ ವಾಯುವಿನ ಚಲನವಲನಾದಿಗಳು ಮಾತ್ರ ಕಾಣುತ್ತವೆ. ಅವನ ರೂಪವು ಕಾಣಿಸುವುದಿಲ್ಲ.

ತ್ರಯಃ ಕೇಶಿನಃ—ಕೇಶಸ್ಥಾನೀಯಪ್ರಕೃಷ್ಟರಶ್ಮಿಯುಕ್ತಾಃ । ಕೇಶಸ್ಥಾನಗಳಲ್ಲಿ ಅತಿಶಯವಾದ ರಶ್ಮಿಗಳುಳ್ಳವರೆಂದು ಅಗ್ನಿ, ವಾಯು ಮತ್ತು ಆದಿತ್ಯ ಈ ಮೂವರಿಗೂ ಸಮಾನವಾದ ವಿಶೇಷಣವಾಗಿದೆ. ಇದೇ ವರ್ಣನೆಯನ್ನು ಬೃಹದ್ದೇವತೆಯಲ್ಲಿಯೂ ತಿಳಿಸುತ್ತಾ ಅಗ್ನಿವಾಯ್ವಾದಿತ್ಯರ ವಿಶೇಷಸ್ವರೂಪವನ್ನು ತಿಳಿಸಿದೆ.

ಅರ್ಚಿಭಿಃ ಕೇಶ್ಯಯಂ ತ್ವಗ್ನಿರ್ವಿದ್ಯುದ್ಭಿಶ್ಚೈವ ಮಧ್ಯಮಃ ।
ನಿಪಾತಮಾತ್ರೇ ಕಥ್ಯಂತೇ ತಥಾಗ್ನೇಯಾನಿ ಕಾನಿಚಿತ್ ।

(ಬೃ ದೇ ೧–೯೪)

ಪಾರ್ಥಿವಾಗ್ನಿಯು ಜ್ವಾಲೆಯು ಕೇಶಗಳಂತಿರುವುದರಿಂದ ಅಗ್ನಿಗೆ ಕೇಶಿಯೆಂದು ಹೆಸರು. ಅಂತರಿಕ್ಷಸ್ಥನಾದ ವಾಯುವು ವಿದ್ಯುದ್ರೂಪವಾದ ಪ್ರಭೆಗಳಿಂದಲೂ, ದ್ಯುಲೋಕಸ್ಥನಾದ ಆದಿತ್ಯನು ತನ್ನ ರಶ್ಮಿಗಳಿಂದ ಪ್ರಕಾಶಿಸುತ್ತಿರುವುದರಿಂದಲೂ, ಇವೆಲ್ಲವೂ ಅವರವ ಕೇಶಸ್ಥಾನಗಳಲ್ಲಿದ್ದು ಅವರ ಪ್ರಭಾವವನ್ನು ವೃದ್ಧಿಮಾಡುತ್ತಿರುವುದರಿಂದಲೂ ಅಗ್ನಿವಾಯ್ವಾದಿತ್ಯರಿಗೆ ಕೇಶಿಗಳೆಂದು ಹೆಸರು.

ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ।
ಸಂಲಕ್ಷ್ಯಂತೇ ಪ್ರಕ್ರಿಯಾಸು ತ್ರಯಃ ಕೇಶಿನ ಇತ್ಯೃಚಿ ॥

(ಬೃ. ದೇ. ೧–೯೫)

ಈ ಮೂರು ವಿಧವಾದ ಕೇಶಿಗಳ ಸ್ವರೂಪಗಳು ಬೇರೆಬೇರೆಯಾಗಿರುವುದರಿಂದ ಅವರವರ ಪ್ರಕ್ರಿಯಾ ಭೇದಗಳನ್ನೂ ಸಹ "ತ್ರಯಃ ಕೇಶಿನಃ" ಎಂಬ ಋಕ್ಕಿನಲ್ಲಿ (೧೧೬-೪-೪೪) ಹೇಳಿದೆ. ಆದರೆ, ಅವರ ಉತ್ಪತ್ತಿ, ಅವರ ಕ್ರಿಯಾವ್ಯಾಪ್ತಿ ಇವುಗಳನ್ನು ವಿಭಾಗಿಸಿ ಇದಮಿತ್ಥಂ (ಇದು ಹೀಗಿಯೇ ಸರಿ) ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಎಲ್ಲರೂ ಸರ್ವ ವ್ಯಾಪ್ತಿಗಳಾದುದರಿಂದ ಸ್ಥಾನವಿಭಾಗವೂ ಸಾಧ್ಯವಿಲ್ಲ ಎಂಬಂಶವನ್ನು ತಿಳಿಸುತ್ತಾ ಬೃಹದ್ದೇವತೆಯಲ್ಲಿ,

ನ ಚೈವೈಷಾಂ ಪ್ರಸೂತಿರ್ವಾ ವಿಭೂತಿಸ್ಥಾನಜನ್ಮ ವಾ ।
ನಿರ್ವಕ್ತುಂ ಶಕ್ಯನೇತೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್ ॥

(ಬೃ. ದೇ. ೧-೯೬)

ಇವರ ಪ್ರಸೂತಿಯಾಗಲಿ, ಪ್ರಭಾವವಾಗಲಿ, ಸ್ಥಾನಭೇದಗಳಾಗಲಿ ನಿಷ್ಕೃಷ್ಟವಾಗಿ ಹೇಳಲ್ಪಡತಕ್ಕವಲ್ಲ. ಸಮಸ್ತ ಜಗತ್ತೂ ಸಹ ಇವರಿಂದ ವ್ಯಾಪ್ತವಾಗಿದೆ. ಇವರ ಸರ್ವವ್ಯಾಪಕತೆಯನ್ನು ಋಕ್ಸಂಹಿತಾವಾಕ್ಯಗಳಲ್ಲೂ ವರ್ಣಿಸಿ ಇವರ ಪ್ರಭಾವವೂ, ಕ್ರಿಯೆಗಳೂ ಸ್ಥಾನದ ದೃಷ್ಟಿಯಿಂದಾಗಲಿ, ಕಾಲದೃಷ್ಟಿಯಿಂದಾಗಲಿ ಪರಿಮಿತವಾದುದಲ್ಲವೆಂದು ತಿಳಿಸಿದೆ. (ಇದಕ್ಕೆ ಆಧಾರ ಗಳನ್ನು ಮುಂದೆ ಕೊಡಲಾಗುತ್ತದೆ.) ಮೊದಲು ಇವರಿಗೆ ಕೇಶಿ ಎಂಬ ವಿಶೇಷಣವು ಪ್ರಸಿದ್ಧವಾಗಿರಲು ಕಾರಣವೇನೆಂದು ತಿಳಿಯಲು ನಿರುಕ್ತದ ನಿರ್ವಚನವನ್ನು ನೋಡಬೇಕಾಗುತ್ತದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನೂ, ಈ ವಿಶೇಷಣವು ಅಗ್ನ್ಯಾದಿಗಳ ಯಾವ ವಿಶೇಷ ಗುಣಗಳನ್ನೂ ತಿಳಿಸುತ್ತದೆ ಎಂಬುದನ್ನೂ ಈ ರೀತಿ ವಿವರಿಸಿದ್ದಾರೆ.

ಕೇಶೀ—ಕೇಶೀ ಕೇಶಾ ರಶ್ಮಯಸ್ತೈಸ್ತದ್ವಾನ್, ಕಾಶನಾದ್ವಾ, ಪ್ರಕಾಶನಾದ್ವಾ ।

(ನಿ. ೧೨-೨೫)

ಕೇಶವುಳ್ಳವನು ಕೇಶಿ. ಕೇಶವೆಂದರೆ ರಶ್ಮಿಗಳೆಂದರ್ಥ. ರಶ್ಮಿಯುಕ್ತನಾದವನಿಗೆ ಕೇಶಿಯೆಂಬ ಪರ್ಯಾಯನಾಮವಿದೆ. ಪ್ರಕಾಶವನ್ನುಂಟುಮಾಡು ಎಂಬರ್ಥವನ್ನು ಕೊಡುವ ಕಾಶ್ ಧಾತುವಿನಿಂದಾಗಲಿ ಅಥವಾ ತಾನೇ ಅತ್ಯಂತ ಪ್ರಕಾಶಮಾನ ವಾಗಿದೆ ಎಂದು ತೋರಿಸುವ ಪ್ರ+ಕಾಶ್ ಎಂಬುದರಿಂದಾಗಲಿ ಈ ಪದವು ನಿಷ್ಪನ್ನವಾಗಬಹುದು, ಎಂದ ಈ ಪದದ ನಿರ್ವಚನವನ್ನು ತೋರಿಸಿ ಅನಂತರ ಆದಿತ್ಯಪರವಾದ ಈ ಪದದ ಪ್ರಯೋಗಕ್ಕೆ ಋಕ್ಸಂಹಿತಾವಾಕ್ಯವನ್ನುದಹರಿಸಿದ್ದಾರೆ.

ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।
ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥

(ಋ. ಸಂ. ೧೦-೧೩೬-೧)

ಕೇಶಿಯು, ಎಂದರೆ ಪ್ರಕಾಶಮಾನನಾದ ಆದಿತ್ಯನು ಅಗ್ನಿಯನ್ನೂ, ಉದಕವನ್ನೂ ಧರಿಸಿದ್ದಾನೆ. (ವಿಷವು ಇಲ್ಲಿ ಉದಕ ಪರ್ಯಾಯವಾದ ಪದವು). ಅವನೇ ದ್ಯಾವಾಪೃಥಿವಿಗಳನ್ನೂ ಧರಿಸಿದ್ದಾನೆ. ಸಕಲಜಗತ್ತೂ ಅವನ ಪ್ರಭಾಮಯವಾದ ಸ್ವರೂಪವನ್ನು ನೋಡುತ್ತದೆ. ಇಂತಹ ಜ್ಯೋತೀರೂಪವಾದ ಮೂರ್ತಿಗೆ ಕೇಶಿಯೆಂಬ ಹೆಸರು ಎಂದು ಆದಿತ್ಯನ ಸ್ವರೂಪ ವರ್ಣನೆಗೆ ಋಕ್ಕನ್ನುದಹರಿಸಿ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಸಹ ಅಗ್ನ್ಯಾದಿಗಳ ಸ್ವರೂಪವು ಈ ವಿಶೇಷಣದಿಂದ ಹೇಗೆ ವರ್ಣಿತವಾಗಿದೆಯೆಂದೂ ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿಗೆ ನಿರುಕ್ತಕಾರರ ನಿರ್ವಚನವು ಈ ರೀತಿ ಇದೆ.

ತ್ರಯಃ ಕೇಶಿನಃ ಋತುಥಾ ವಿಚಕ್ಷತೇ ಕಾಲೇಕಾಲೇಽಭಿವಿಪಶ್ಯಂತಿ ಸಂವತ್ಸರೇ ವಪತ ಏಕ ಏಷಾಮಿತ್ಯಗ್ನಿಃ ಪೃಥಿವೀಂ ದಹತಿ ಸರ್ವಮೇಕೋಽಭಿವಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯ ।

(ನಿ. ೧೨–೨೭)

ಇದರ ಅರ್ಥವು ಮೇಲೆ ಭಾವಾರ್ಥದಲ್ಲಿ ವಿವರಿಸಿದಂತೆಯೇ ಇರುತ್ತದೆ. ಈ ಋಕ್ಕಿನಲ್ಲಿ ಅಗ್ನಿ, ವಾಯು, ಆದಿತ್ಯ ಎಂಬ ಮೂರು ದೇವತೆಗಳನ್ನು ನಿರ್ದೇಶಿಸಿದ್ದರೂ ಸಹ ಇವರ ಕ್ರಿಯೆಗಳು ಆಯಾ ಲೋಕಕ್ಕೆ ಮಾತ್ರ ಪರಿಮಿತವಾದುವಲ್ಲ. ಇವರ ಸ್ಥಾನವಿಭಾಗವನ್ನು ತೋರಿಸುವಾಗ ಹಿಂದೆ ನಿರುಕ್ತಕಾರರು ಇವರ ವ್ಯಾಪ್ತಿಯ ಪರಿಮಿತಿಯನ್ನು ತೋರಿಸಿದ್ದಾರೆ.

ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಃ ।

(ನಿ. ೭–೫)

ಅಗ್ನಿಯ ಸ್ಥಾನವು ಪೃಥ್ವಿಯೆಂದೂ, ವಾಯು (ಅಥವಾ ಇಂದ್ರನ) ವಿನ ಸ್ಥಾನವು ಅಂತರಿಕ್ಷವೆಂದೂ, ಆದಿತ್ಯನ ಸ್ಥಾನವು ದ್ಯುಲೋಕವೆಂದೂ ತಿಳಿಸಿದ್ದಾರೆ. ಈ ಸ್ಥಾನದ ಪರಿಮಿತಿಯಿಲ್ಲ. ವಿಶ್ವಮೇಕೋ ಅಭಿ ಚಷ್ಟೇ।ಸರ್ವಮೇಕೋಽಭಿವಿಪಶ್ಯತಿ ಆದಿತ್ಯನು ಸಕಲಲೋಕವನ್ನೂ ವೀಕ್ಷಿಸುತ್ತಾನೆ ಇತ್ಯಾದಿಯಾಗಿ ವರ್ಣಿಸಿದೆ.

ಇವರಲ್ಲಿ ಅಗ್ನಿ ಮತ್ತು ಆದಿತ್ಯನ ರೂಪವು ಜಗತ್ತಿಗೆ ಗೋಚರವಾಗುತ್ತದೆ. ಆದರೆ ವಾಯುವಿನ ರೂಪವು ಗೋಚರ ವಾಗುವುದಿಲ್ಲ. ಅವನ ಗತಿಯಿಂದ ಮಾತ್ರ ಅವನ ವ್ಯಾಪಾರವನ್ನು ಊಹಿಸಬೇಕಾಗುತ್ತದೆ. ಇದನ್ನು ಧ್ರಾಜಿರೇಕಸ್ಯ ದದೃಶೇ ನ ರೂಪಂ ಎಂದು ತಿಳಿಸಿದೆ.

ಧ್ರಾಜಿಃ—ಈ ಪದವು ಗತಿಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩೯) ಸಾಧಾರಣವಾಗಿ ಇದು ವಾಯುವಿನ ಗತಿಯನ್ನು ತಿಳಿಸುವ ಪದವಾಗಿದೆ. ಉದಾಹರಣೆಗೆ—

ಮುನಯೋ ವಾತರಶನಾಃ ಪಿಶಂಗಾ ವಸತೇ ಮಲಾ ।

ವಾತಸ್ಯಾನು ಧ್ರಾಜಿಂ ಯಂತಿ ಯದ್ದೇವಾಸೋ ಅವಿಕ್ಷತ ॥

(ಋ. ಸಂ. ೧೦–೧೩೬–೨)

ಎಂಬಲ್ಲಿ ವಾತಸ್ಯ ಧ್ರಾಜಿಂ ಎಂದು ವಾಯುವಿನ ವೇಗದ ಗತಿಯನ್ನು ವರ್ಣಿಸಿ ಅಲೌಕಿಕವಾದ ಶಕ್ತಿಯನ್ನು ಸಂಪಾದಿಸಿದ ಋಷಿಗಳು ವಾಯುವಿನ ಸಂಚಾರಕ್ರಮವನ್ನರಿತಂತಿದೆ. ಅಥವಾ ಈ ಪದವು ಇತರ ಸನ್ನಿವೇಶಗಳಲ್ಲಿ ಉಪಯೋಗಿಸಿದ್ದರೂ ಸಹ ಆಗಲೂ, ವಾಯುವಿನ ಗತಿಗೇ ಹೋಲಿಸಿದೆ. ಉದಾಹರಣೆಗೆ—

ಹಿರಣ್ಯಕೇಶೋ ರಜಸೋ ವಿಸಾರೇಽಹಿರ್ಧುನಿರ್ವಾತ ಇವ ಧ್ರಜೀಮಾನ್ ।

ಶುಚಿಭ್ರಾಜಾ ಉಷಸೋ ನವೇದಾ ಯಶಸ್ವತೀರಪಸ್ಯುವೋ ನ ಸತ್ಯಾಃ ॥

(ಋ. ಸಂ. ೧–೭೯–೧)

ಎಂಬಲ್ಲಿ ಅಗ್ನಿಯ ಗಮನದ ವೇಗವನ್ನು ವರ್ಣಿಸುವುದೇ ಉದ್ದೇಶವಾದರೂ ಸಹ, ಅದನ್ನು ವಾತ ಇವ ಧ್ರಜೀಮಾನ್ ಎಂದು ವಾಯುವಿನ ಗತಿಗೆ ಹೋಲಿಸಿದೆ.

ಅಗ್ನಿ, ವಾಯು, ಆದಿತ್ಯ ಎಂಬ ಹೆಸರುಗಳಿಂದ ಮೂರು ಲೋಕಗಳಲ್ಲಿಯೂ ಮೂರು ವಿಧವಾಗಿ ತಮ್ಮ ಕರ್ತವ್ಯಗಳನ್ನು ಋತುಕಾಲಗಳಿಗನುಸಾರವಾಗಿ ನಡೆಸುತ್ತಿರುವ ಈ ಮೂರು ದೇವತೆಗಳೂ ಭಿನ್ನಾತ್ಮಕರೇ ಅಥವಾ ಒಂದೇ ತತ್ವದ ಮೂರು ಬೇರೆ ಸ್ವರೂಪಗಳೇ ಎಂದು ಪರಿಶೀಲಿಸಬೇಕು. ಈ ಸೂಕ್ತದಲ್ಲಿ ಮೊದಲಿನಿಂದಲೂ ಸಹ ಸಕಲವಿಶ್ವವ್ಯಾಪಿಯಾದ ಏಕತತ್ತ್ವದ ಪ್ರತಿಪಾದನೆಯೇ ಮುಖ್ಯವಾದ ಗುರಿಯೆಂದು ತಿಳಿದುಬರುತ್ತದೆ. ಕೆಲವು ಋಕ್ಕುಗಳಲ್ಲಿ ಅದನ್ನು ಪರಬ್ರಹ್ಮವೆಂದೂ, ಇನ್ನು ಕೆಲವೆಡೆಗಳಲ್ಲಿ ಆದಿತ್ಯಾಂತರ್ಗತನೂ, ಹಿರಣ್ಮಯರೂಪನೂ ಆದ ಪರಮಪುರುಷನೆಂದೂ ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಭಿನ್ನಾತ್ಮಕರಾದ ದೇವತೆಗಳ ವರ್ಣನೆಯಿರುವಂತೆ ಕಂಡರೂ ಸಹ ಇವರೆಲ್ಲರಿಗೂ ಮೂಲತತ್ತ್ವವು ಒಂದೇ ಎಂದೂ, ಇವರೆಲ್ಲರೂ ಆ ಮೂಲತತ್ತ್ವದ ಬೇರೆಬೇರೆ ಸ್ವರೂಪಗಳೆಂದೂ ಅನೇಕಕಡೆಗಳಲ್ಲಿ ವರ್ಣಿತವಾಗಿರುವುದನ್ನು ತಿಳಿಯಬಹುದು. ಆ ಮೂಲತತ್ತ್ವವನ್ನು ಕೆಲವೆಡೆಗಳಲ್ಲಿ ಆದಿತ್ಯನೆಂದೂ ಇನ್ನು ಕೆಲವೆಡೆಗಳಲ್ಲಿ ಅಗ್ನಿಯೆಂದೂ ಹೇಳಿದೆ.

ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥
ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ ।
ಯದಕ್ಷರಂ ಚ ವಾಚ್ಯಂ ಚ ಯಥೈತತ್ಬ್ರಹ್ಮ ಶಾಶ್ವತಂ ॥
ಕೃತ್ವೈಷ ಹಿ ತ್ರಿಧಾತ್ಮಾನಂ ಏಷ ಲೋಕೇಷು ತಿಷ್ಠತಿ ।
ದೇವಾನ್ಯಥಾಯಥಂ ಸರ್ವಾನ್ ನಿವೇಶ್ಯ ಸ್ವೇಷು ರಶ್ಮಿಷು ॥
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋ ಗೀರ್ಭಿರರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ॥

(ಬೃಹದ್ದೇವತಾ ೧-೬೧-೬೪)

ವರ್ತಮಾನಕಾಲದಲ್ಲಿರುವುದಕ್ಕೂ, ಹಿಂದೆ ಇದ್ದುದಕ್ಕೂ, ಮುಂದೆ ಉತ್ಪನ್ನವಾಗುವುದಕ್ಕೂ ಜಂಗಮಾತ್ಮಕವಾಗಿರುವುದಕ್ಕೂ, ಸ್ಥಿರವಾಗಿಡುವುದಕ್ಕೂ, ವಿಶ್ವದ ಸಕಲ ಕಾಲದ ಮತ್ತು ಸಕಲ ಪ್ರದೇಶದ ಭೂತಗಳಿಗೂ ಸಹ ಆದಿತ್ಯನೇ ಉತ್ಪತ್ತಿಸ್ಥಾನವು. ಇವನೇ ಸೃಷ್ಟಿಕರ್ತನು ಮತ್ತು ಇವನೇ ಪ್ರಲಯಕರ್ತನು. ಈ ಆದಿತ್ಯನೇ ವಿಶ್ವಕರ್ತನಾದ ಪ್ರಜಾಪತಿಯು. ಸತ್ತಿಗೂ ಅಸತ್ತಿಗೂ ಇವನೇ ಆಶ್ರಯನು. ಇವನೇ ಶಾಶ್ವತನಾದ ಪರಬ್ರಹ್ಮನು. ಇವನೇ ಅನಿರ್ವಾಚ್ಯನಾದ ಅಕ್ಷರನು. (ಅಕ್ಷರನ ಸ್ವರೂಪವನ್ನು ಹಿಂದೆ ವಿವರಿಸಿದೆ.) ವಾಚ್ಯನಾದ ದೈವವೂ ಇವನೇ.

ಆದಿತ್ಯರೂಪನಾದ ಈ ಪ್ರಜಾಪತಿಯೇ ಮೂರು ರೂಪಗಳಲ್ಲಿ ವಿಭಕ್ತನಾಗಿ ಮೂರು ಲೋಕಗಳಲ್ಲೂ ಪ್ರಕಾಶಿಸುತ್ತಿದ್ದಾನೆ. ವಿಶ್ವವ್ಯಾಪಕವಾದ ತನ್ನ ರಶ್ಮಿಗಳಲ್ಲಿ ದೇವಾದಿಸಕಲಭೂತಗಳನ್ನೂ ಸ್ಥಾಪಿಸಿ ನೆಲೆಸುವಂತೆ ಮಾಡಿದ್ದಾನೆ. ಇದೇ ಆದಿತ್ಯರೂಪನಾದ ಪ್ರಜಾಪತಿಯು ಅಗ್ನಿಯ ರೂಪದಲ್ಲೂ ಸಹ ಮೂರು ಲೋಕಗಳಲ್ಲೂ ಮೂರು ರೂಪಗಳಲ್ಲಿರುತ್ತಾನೆ. ಈ ಅಗ್ನಿಯೇ ಆದಿತ್ಯನು, ಇವನೇ ಪಾರ್ಥಿವಾಗ್ನಿಯು. ಇವನೇ ವಾಯುವು. ಪ್ರಕೃತವಾದ ಋಕ್ಕಿನಲ್ಲಿ ಮೂರು ರೂಪಗಳಲ್ಲಿ ವರ್ಣಿತವಾಗಿರುವ ಮೂರು ದೇವತೆಗಳಿಗೂ ಇವನೇ ಮೂಲತತ್ತ್ವವು. ಅವರೆಲ್ಲರೂ ಇವನ ಬೇರೆಬೇರೆ ರೂಪಗಳು. ಅಗ್ನಿ

ರೂಪವಾದ ಈ ಮೂಲತತ್ವವನ್ನೂ, ಅಗ್ನಿ, ವಾಯು, ಆದಿತ್ಯ ಈ ಮೂವರೂ ಈ ಮೂಲತತ್ತ್ವದ ಬೇರೆ ಬೇರೆ ರೂಪ ಗಳೆಂಬುದನ್ನೂ ಅನೇಕ ಶ್ರುತಿಗಳಲ್ಲಿ ವರ್ಣಿತವಾಗಿರುವುದನ್ನೂ ನೋಡಬಹುದು. ವಿಶ್ವಾಪ್ಸುವಾದ ಅಗ್ನಿಯೇ ರುದ್ರನೆಂದೂ, ಪಶುಪತಿಯೆಂದೂ, ವಾಯುವೆಂದೂ, ಪ್ರಜಾಪತಿಯೆಂದೂ, ಸಕಲ ದೇವತೆಗಳೂ ಅಗ್ನಿಯೇ ಎಂದೂ ಶತಪಥಾದಿಗಳಲ್ಲಿ ವರ್ಣಿತ ವಾಗಿರುವುದನ್ನು ಹಿಂದೆ ತಿಳಿಸಿದೆ. [ಋಗ್ವೇದಸಂಹಿತಾ ಭಾಗ ೧೧; ಪುಟ 426–428]

ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವ್ಯಕ್ತಬರ್ಹಿಷಃ ।

........................................ ........

........................................................

ತಾಸಾಮಿಯಂ ವಿಭೂತಿರ್ಹಿ ನಾಮಾನಿ ಯದನೇಕಶಃ ।
ಆಹುಸ್ತಾಸಾಂ ತು ಮಂತ್ರೇಷು ಕವಯೋಽನ್ಯೋನ್ಯಯೋನಿತಾಂ ॥

(ಬೃ. ದೇ. ೧–೭–೧)

ಬೇರೆ ಬೇರೆ ರೂಪಗಳಲ್ಲಿ ಆವಿರ್ಭೂತರಾಗಿ ಅಗ್ನಿ, ವಾಯು ಮತ್ತು ಆದಿತ್ಯರು ತಮ್ಮ ತಮ್ಮ ವಿಭೂತಿಗಳನ್ನು ನಾನಾ ವಿಧವಾಗಿ ಪ್ರಕಾಶಪಡಿಸುತ್ತಾರೆ, ಆದರೆ ಇವರೆಲ್ಲರಿಗೂ ಸಹ ಒಂದೇ ಉತ್ಪತ್ತಿಸ್ಥಾನವು; ಎಲ್ಲರಿಗೂ ಮೂಲತತ್ತ್ವವು ಒಂದೇ ಆಗಿದೆ ಯೆಂದು ಕವಿಗಳು ಈ ಮೂಲತತ್ತ್ವವನ್ನು ಸ್ತುತಿಸಿದ್ದಾರೆ. ಈ ವಿಷಯವನ್ನು ಇದೇ ಸೂಕ್ತದ ೪೬ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗುತ್ತದೆ.

ಧ್ರಾಜಿಃ ಏಕಸ್ಯ ದದೃಶೇ ನ ರೂಪಂ–ವಾಯೋಃ ಗತಿಃ ಸರ್ವೈಃ ದೃಶ್ಯತೇ ನ ರೂಪಂ ಅಪ್ರತ್ಯಕ್ಷತ್ವಾತ್ । ವಾಯುವು ಪ್ರತ್ಯಕ್ಷಗೋಚರನಲ್ಲದಿರುವುದರಿಂದ ಇವನ ರೂಪವು ಕಣ್ಣಿಗೆ ಕಾಣಿಸುವುದಿಲ್ಲ. ಇವನ ಚಲನವಲನಗಳು ಮಾತ್ರ ದೃಷ್ಟಿಗೋಚರವಾಗುತ್ತದೆ ಎಂಬ ಈ ವರ್ಣನೆಯಲ್ಲಿ ರಹಸ್ಯವಾದ ಅರ್ಥವಿರಬೇಕು. ಉಳಿದೆಡೆಗಳಲ್ಲಿ ವಾಯುವಿನ ರೂಪ ವರ್ಣನೆಗಳು ವಾಯುವಿನ ಸೌಂದರ್ಯಾದಿಗಳನ್ನು ತಿಳಿಸುತ್ತವೆ. ಉದಾಹರಣೆಗೆ—

ತ್ವಾಂ ಹಿ ಸುಪ್ಸರಸ್ತಮಂ ನೃಷದನೇಷು ಹೂಮಹೇ । ಗ್ರಾವಾಣಂ ನಾಶ್ವಪೃಷ್ಠಂ ಮಂಹನಾ ।

(ಋ. ಸಂ. ೮–೨೬–೨೪)

ಎಂಬಲ್ಲಿ ವಾಯುವಿನ ಅತಿಶಯವಾದದೂ ಶೋಭನಾತ್ಮಕವಾದುದೂ ಆದ ರೂಪದ ವರ್ಣನೆಯಿದೆ. ಇದು ದದೃಶೇ ನ ರೂಪಂ ಎಂಬುದಕ್ಕೆ ವಿರುದ್ಧವಾಗಿದೆ ಮತ್ತು,

ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ॥

(ಋ. ಸಂ. ೧೨–೧)

ಇತ್ಯಾದಿ ಕಡೆಗಳಲ್ಲಿ ದರ್ಶತ–ದರ್ಶನೀಯ ಇತ್ಯಾದಿ ವಿಶೇಷಣಗಳನ್ನೇ ಉಪಯೋಗಿಸಿದೆ. ಪ್ರಕೃತವಾದ ಋಕ್ಕಿನ ವಿವರಣೆ ಯಲ್ಲಿ ಸಾಯಣರಾಗಲಿ, ನಿರುಕ್ತಕಾರರಾಗಲಿ ಈ ವಿಷಯದಲ್ಲಿ ಏನನ್ನೂ ಹೇಳಿಲ್ಲವಾದ್ದರಿಂದ ಶ್ರುತಿವಾಕ್ಯಗಳಲ್ಲಿ ವಿರೋಧವಿದೆ ಯೆಂದು ನಾವು ತೋರಿಸುವುದು ಸಾಹಸದ ಕಾರ್ಯವಾಗಬಹುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಾವಿಂಶತಿ ಖಂಡಃ

### ಇಪ್ಪತ್ತೆಂಟನೆಯ ಖಂಡವು

ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ । ಯ ಏಷ ಸ್ವಪ್ನನಂಶ-ನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ (ಋ. ಸಂ. ೧೦-೮೬-೨೧) ॥ ಪುನರೇಹಿ ವೃಷಾಕಪೇ ಸುಪ್ರಸೂತಾನಿ ವಃ ಕರ್ಮಾಣಿ ಕಲ್ಪಯಾವಹೈ ಯ ಏಷ ಸ್ವಪ್ನನಂಶನಃ ಸ್ವಪ್ನಾನ್ನಾಶಯಸ್ಯಾದಿತ್ಯ ಉದಯೇನ ಸೋಽಸ್ತಮೇಷಿ ಪಥಾ ಪುನಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮ ಆದಿತ್ಯಂ ಯಮೋ ವ್ಯಾಖ್ಯಾತ-ಸ್ತಸ್ಯೈಷಾ ಭವತಿ ॥ ೨೮ ॥

ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ಯ ಏಷಃ ಸ್ವಪ್ನ-
ನಂಶನೋಽಸ್ಮಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ।

(ಋ. ಸಂ. ೮-೪-೪)

ವೃಷಾಕಪಿಸ್ತುತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಉದಯವಾಗಿ ಅಸ್ತಹೊಂದುವ ಸೂರ್ಯನನ್ನು ಋಷಿಯು ಪ್ರಾರ್ಥಿಸುತ್ತಾನೆ. ವೃಷಾಕಪಿಯೇ ನೀನು ಉದಯದಿಂದ ಸಕಲಪ್ರಾಣಿಗಳ ಸ್ವಪ್ನವನ್ನು ಹೋಗಲಾಡಿಸಿದ ಸೂರ್ಯನಾಗಿ ಕ್ಲುಪ್ತಮಾರ್ಗದಿಂದ ಈಗ ನಿನ್ನ ಸ್ಥಾನವನ್ನು ಹೊಂದುವಿ. ಸಕಲಜಗತ್ತಿಗೆ ಈಶ್ವರನಾದ ನೀನು ಉದ್ಧತನಾಗಿ ಪುನಃ ಉದಯ ವನ್ನು ಹೊಂದು. ಆಗ ನಾವು ಕರ್ಮವನ್ನಾರಂಭಿಸೋಣ.

ಪುನರೇಹಿ ವೃಷಾಕಪೇ । ಸುಪ್ರಸೂತಾನಿ ವಃ ಕರ್ಮಾಣಿ ಕಲ್ಪಯಾ-
ವಹೈ । ಯ ಏಷ ಸ್ವಪ್ನನಂಶನಃ ಸ್ವಪ್ನಾನ್ನಾಶಯಸ್ತ್ಯಾದಿತ್ಯ
ಉದಯೇನ ಸೋಽಸ್ತಮೇಷಿ ಪಥಾ ಪುನಃ ಸರ್ವಸ್ಮಾದಿಂದ್ರ
ಉತ್ತರಸ್ತಮೇತದ್ಬ್ರೂಮ ಆದಿತ್ಯಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅವನನ್ನು ಅಧಿಕರಿಸಿ ಈ ವಿಷಯವನ್ನು ಹೇಳುತ್ತೇವೆ. ಆ ಆದಿತ್ಯನೇ ವೃಷಾಕಪಿಯೆಂದು ಆಚಾರ್ಯರ ಅಭಿಪ್ರಾಯ.

ಯಮೋ ವ್ಯಾಖ್ಯಾತಸ್ತಸ್ಯೈಷಾ ಭವತಿ ॥ ೨೮ ॥

ಕ್ರಮಪ್ರಾಪ್ತವಾದ ಯಮಶಬ್ದಾರ್ಥವನ್ನು ಹೇಳಬೇಕು. ಇದು ಹಿಂದೆ (ನಿ-೧೦-೧೯) ವ್ಯಾಖ್ಯಾತವಾಗಿದೆ. ಇಲ್ಲಿ ಆದಿತ್ಯ ನೆಂದು ಅರ್ಥ ಹೇಳಬೇಕು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

## ಅಥ ಏಕೋನತ್ರಿಂಶತ್ ಖಂಡಃ

### ಇಪ್ಪತ್ತೊಂಬತ್ತನೆಯ ಖಂಡವು

ಯಸ್ಮಿನ್ ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ । ಅತ್ರಾ ನೋ ವಿಶ್ಪತಿಃ ಪಿತಾ ಪುರಾಣಾ ಅನು ವೇನತಿ (ಋ. ಸಂ. ೧೦-೧೩೫-೧) ॥ ಯಸ್ಮಿನ್ ವೃಕ್ಷೇ ಸುಪಲಾಶೇ ಸ್ಥಾನೇ ವೃತಕ್ಷಯೇ ವಾಪಿ ವೋಪಮಾರ್ಥೇ ಸ್ಯಾದ್ವೃಕ್ಷ ಇವ ಸುಪಲಾಶ ಇತಿ ವೃಕ್ಷೋ ವ್ರಶ್ಚನಾತ್ಪಲಾಶಂ ಪಲಾಶನಾದ್ದೇವೈಃ ಸಂಗಚ್ಛತೇ ಯಮೋ ರಶ್ಮಿಭಿರಾದಿತ್ಯಸ್ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾ ವಾ ಪುರಾಣಾನನುಕಾಮಯೇತಾಜ ಏಕಪಾದಜನ ಏಕಃ ಪಾದ ಏಕೇನ ಪಾದೇನ ಪಾತೀತಿ ವೈಕೇನ ಪಾದೇನ ಪಿಬತೀತಿ ವೈಕೋಽಸ್ಯ ಪಾದ ಇತಿ ವಾ । ಏಕಂ ಪಾದಂ ನೋತ್ಖಿನತೀತ್ಯಪಿ ನಿಗಮೋ ಭವತಿ ತಸ್ಯೈಷ ನಿಪಾತೋ ಭವತಿ ವೈಶ್ವದೇವ್ಯಾಮೃಚಿ ॥ ೨೯ ॥

> ಯಸ್ಮಿನ್ ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ । ಅತ್ರಾ
> ನೋ ವಿಶ್ಪತಿಃ ಪಿತಾ ಪುರಾಣಾ ಅನು ವೇನತಿ ॥
>
> (ಋ ಸಂ. ೮-೭-೨೩)

ಯಮನನ್ನು ಸ್ತುತಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಶೋಭನವಾದ ಎಲೆಗಳುಳ್ಳ ಪಲಾಶಮರದಲ್ಲಿ ಎಂಬಂತೆ ತನ್ನ ಗಮನದಿಂದ ಸರ್ವಭೂತಗಳ ಆಯಸ್ಸನ್ನು ನಾಶಮಾಡುವ ಮಂಡಲದಲ್ಲಿರುವ ಆದಿತ್ಯನು ಅಸ್ತ ಹೊಂದುವವನಾಗಿ ರಶ್ಮಿಗಳೊಡನೆ ಕೂಡಿರುತ್ತಾನೆ. ಮಂಡಲದಲ್ಲಿರುವ ಅವನು ಸರ್ವರಕ್ಷಕನಾಗಿ ಪುಣ್ಯದಿಂದ ತನ್ನ ಮಂಡಲದಲ್ಲಿ ಹಿಂದಿನಿಂದಲೂ ವಾಸಿಸುವವರನ್ನೆಂಬಂತೆ ನಮ್ಮನ್ನು ಸಂತೋಷಪಡಿಸಲಿ.

> ಯಸ್ಮಿನ್ ವೃಕ್ಷೇ ಸುಪಲಾಶೇ, ಸ್ಥಾನೇ ವೃತಕ್ಷಯೇ ವಾಽಪಿ ವೋಪಮಾರ್ಥೇ ಸ್ಯಾತ್ । ವೃಕ್ಷ ಇವ ಸುಪಲಾಶ ಇತಿ । ವೃಕ್ಷೋವ್ರಶ್ಚನಾತ್ । ಪಲಾಶಂ ಪಲಾಶನಾತ್ । ದೇವೈಃ ಸಂಗಚ್ಛತೇ ಯಮೋ ರಶ್ಮಿಭಿರಾದಿತ್ಯಸ್ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾವಾ ಪುರಾಣಾನನು ಕಾಮಯೇತ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ, ಪಲಾಶವೆಂದರೆ ಎಲೆ. ಪಲವೆಂದರೆ ಮಾಂಸ. ಅದನ್ನು ತಿನ್ನುವುದು. ಅಶ ಭೋಜನೇ ಧಾತು ಕರ್ಮಣಿಯಲ್ಲಿ ಅಣ್ ಪ್ರತ್ಯಯ. ಎಲೆ ಮಂತಾದವನ್ನು ತಿನ್ನುವ ಶಾಕಾಹಾರಿಗಳು ಸಾಮಾನ್ಯವಾಗಿ ಮಾಂಸವನ್ನು ತಿನ್ನುವುದಿಲ್ಲ. ಇಲ್ಲಿ ಮಾತ್ರ ಎಲೆಯೆಂದರ್ಥ. ಪಲಾಶಃ ಕಿಂಶುಕೇಽಸ್ರಪೇ | ಹರಿತೇ ಪಲಾಶಂ ಪತ್ರೇ—ಎಂದು ಹೈಮ ಕೋಶ. ವೃತಕ್ಷಯವೆಂದರೆ ಪುಣ್ಯವಂತರ ಆವಾಸಸ್ಥಾನ. ಕತ್ತರಿಸಲ್ಪಡುವುದರಿಂದ ವೃತವೆಂದಾಗಿದೆ. ಪ್ರಕಾಶನದಿಂದ ದೇವವೆಂದರೆ ಕಿರಣಗಳೆಂದರ್ಥ. ದೇವೈಃ ರಶ್ಮಿಭಿಃ ಯಮಃ ಆದಿತ್ಯ ತತ್ರ ಸಂಗಚ್ಛತೇ ಎಂದು ಅನ್ವಯ.

**ಅಜ ಏಕಪಾಜನನಏಕಃ ಪಾದಃ ||**

ಕ್ರಮಪ್ರಾಪ್ತಭಾದ ಅಜಏಕ್‌ಪಾತ್ ಪದದ ನಿರ್ವಚನ ತೋರಿಸುತ್ತಾರೆ, ಇಲ್ಲಿ ಅಸ್ತ್ರವನ್ನು ಹೊಂದುವ ಆದಿತ್ಯನೆಂದರ್ಥ. ಇಲ್ಲಿ ಎರಡುಪದಗಳಿವೆ. ಗತ್ಯರ್ಥಕ ಅಜಧಾತುವಿಗೆ ಅಚ್ ಪ್ರತ್ಯಯ ಬಂದಾಗ ಬಹುಲಗ್ರಹಣದಿಂದ ವೀ ಭಾವ ಬರುವುದಿಲ್ಲ. ಅಜನಃ ಎಂದು ಲ್ಯುಟ್ ಪ್ರತ್ಯಯಾಂತ್ಯದಿಂದ ಇದನ್ನು ನಿವರಿಸುತ್ತಾರೆ. ಏಕ್‌ಪಾತ್. ಬ್ರಹ್ಮನ ಒಂದು ಪಾದವೆಂದರ್ಥ. ಅಗ್ನಿ, ವಾಯು, ಆದಿತ್ಯ, ಬ್ರಹ್ಮನಪಾದಗಳೆಂದು ಹೇಳಿದೆ. ಅಜಶ್ಚಾಸೌ ಏಕಪಾಚ್ಚ ಅಜ ಏಕಪಾತ್. ಬಹುವ್ರೀಹಿಯಾಗ ದಿದ್ದರೂ ಪಾದಶಬ್ದದ ಅಕಾರಕ್ಕೆ ಲೋಪಬಂದಿದೆ.

**ಏಕೇನ ಪಾದೇನ ಪಾತೀತಿ ವಾ ||**

ಅಥವಾ ಆದಿತ್ಯನು ಸಕಲಜಗತ್ತನ್ನೂ ಒಂದು ಅಂಶದಿಂದ ಜ್ಯೋತಿರೂಪವಾಗಿ ಪ್ರವೇಶಿಸಿ ರಕ್ಷಿಸುತ್ತಾನೆ ಎಂದರ್ಥ. ಮಲಗಿರು ವಾಗ ಪ್ರಾಣರೂಪದಿಂದ ಆಹಾರವನ್ನು ಜೀರ್ಣಿಸುವಂತೆ ಮಾಡುತ್ತಾನೆ. ಇವನು ಜನ್ಮರಹಿತನಾದುದರಿಂದ ಅಜನನು.

**ಏಕೇನ ಪಾದೇನ ಪಿಬತೀತಿ ವಾ || ಏಕೋಽಸ್ಯ ಪಾದ ಇತಿ ವಾ ||**

ಅಥವಾ ಒಂದು ಪಾದಾಂಶದಿಂದ ಸಕಲ ಜಗತ್ತಿನ ನೀರನ್ನು ಕುಡಿಯುವವನು ಏಕಪಾತ್. ಈ ಅರ್ಥದಲ್ಲಿ ತಕಾರ ಆರ್ಷವಾಗಿ ಅಧಿಕವಾಗಿ ಬರುತ್ತದೆ. ಅಜನನವುಳ್ಳವನೂ ಏಕಪಾದದವನೂ ಅಜ ಏಕಪಾತ್ ಅಥವಾ ಅಜನವೆಂದರೆ ಗಮನವು ಏಕಪಾದ ವಾಗಿರುವನು. ಸಕಲ ಜಗತ್ತಿನಲ್ಲಿ ಜೀವರೂಪನಾಗಿ ಒಂದು ಪಾದದಿಂದ ಪ್ರವೇಶಸಿದವನು. ಈ ಅರ್ಥದಲ್ಲಿ ಪಾದಾಂತ್ಯ ಲೋಪ ಆರ್ಷವಾಗಿ ಬಂದಿದೆ.

**ಏಕಂ ಪಾದಂ ನೋತ್ಖಿದದಿ—ಇತ್ಯಪಿ ನಿಗಮೋ ಭವತಿ ||**

ಪೂರ್ವೋಕ್ತಾರ್ಥದಲ್ಲಿ ನಿಗಮಪ್ರಮಾಣವನ್ನು ತೋರಿಸುತ್ತಾರೆ. ಸಲಿಲಾದ್ಧಂಸ ಉಚ್ಚರನ್ | ಸ ಚೇತ್ತಮುದ್ಧರೇದಂಗ ನ ಮೃತ್ಯುರ್ನಾಮೃತಂ ಭವೇತ್ || ಎಂದು ಮಂತ್ರದ ಶೇಷಾಂಶ. ಬ್ರಹ್ಮನಲ್ಲಿ ಲೀನವಾದ ಜಗತ್ತಿನ ಒಂದು ಜೀವಭೂತವಾದ ಪಾದವನ್ನು ಪ್ರತಿಹಗಲಿನಲ್ಲಿಯೂ ಉದ್ಧರಿಸಿ ವ್ಯಾಪಾರರತವನ್ನಾಗಿ ಮಾಡುವವನೆಂದು ತಾತ್ಪರ್ಯ.

**ತಸ್ಯೈಷ ನಿಪಾತೋ ಭವತಿ ವೈಶ್ವದೇವ್ಯಾಮೃಚಿ || ೨೯ ||**

ಅಜ ಏಕಪಾತ್ ಅಂದರೆ ಆದಿತ್ಯದೇವತೆ. ವಿಶ್ವೇ ದೇವದೇವತಾಕವಾದ ಮಂತ್ರದಲ್ಲಿ ಈ ಆಜ ಏಕಪಾದ್ದೇವತೆಯ ಸ್ತುತಿ ಅಪ್ರಾಧಾನ್ಯವಾಗಿ ಹೇಳಿದೆ.

ಯಸ್ಮಿನ್ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ |
ಅತ್ರಾ ನೋ ವಿಶ್ಪತಿಃ ಪಿತಾ ಪುರಾಣಾ ಅನು ವೇನತಿ || ೧ ||

ಉತ್ತಮವಾದ ಎಲೆಗಳಿಂದ ದಟ್ಟವಾಗಿ ನಿಬಿಡವಾದ ವೃಕ್ಷದ ನೆರಳು ಯಾವ ರೀತಿ ವಿಶ್ರಾಂತಿಗೆ ಸುಖಕರವಾಗಿರುವುದೋ ಅದರಂತೆ ಸುಖಕರವಾದ ಯಮನ ಸ್ಥಾನದಲ್ಲಿ (ಯಮಲೋಕದಲ್ಲಿ) ವಿವಸ್ವಂತನ ಪುತ್ರನಾದ ಯಮನು ತನ್ನ ಪರಿಜನರೊಡನೆ ಸುಖವಾಗಿ ವಾಸಮಾಡುತ್ತಾನೆ. ಇಂತಹ ಈ ಯಮಲೋಕದಲ್ಲಿ ಬಹುಕಾಲದಿಂದ ವಾಸಮಾಡುತ್ತಿರುವ ಪಿತೃಗಳ ಸಮೀಪದಲ್ಲಿಯೇ ನಾನೂ ವಾಸಮಾಡಬೇಕೆಂದು ಜನರಲ್ಲಿ ಶ್ರೇಷ್ಠವಾದ ನನ್ನ ತಂದೆಯು ಅಪೇಕ್ಷಿಸುತ್ತಾನೆ.

ಪೂರ್ವದಲ್ಲಿ ವಾಜಶ್ರವಾಃ ಎಂಬ ಋಷಿಗೆ ನಚಿಕೇತನೆಂಬ ಪುತ್ರನಿದ್ದನು. ಅವನು ಒಂದು ಸಮಯದಲ್ಲಿ ಯಾವುದೋ ಕಾರಣಕ್ಕಾಗಿ ತನ್ನ ತಂದೆಯನ್ನು ಬೇಜಾರಾಗುವಂತೆ ಮಾಡಲು ತಂದೆಯು ಕೋಪದ ಭರದಲ್ಲಿ ತನ್ನ ಕುಮಾರನಿಗೆ ಯಮಲೋಕಕ್ಕೆ ಹೋಗೆಂದು ಹೇಳಿದನು. ನಚಿಕೇತನು ತನ್ನ ತಂದೆಯ ಮಾತನ್ನೇ ನಿಜವೆಂದು ತಿಳಿದು ಅದರಂತೆ ಯಮಲೋಕಕ್ಕೆ ಹೋಗಿ ಅಲ್ಲಿ ಯಮನೊಡನೆ ಸಂಭಾಷಣೆ ಮಾಡಿ ಅವನ ಅನುಗ್ರಹದಿಂದ ಮತ್ತೆ ಈ ಭೂಲೋಕಕ್ಕೆ ಬಂದನು. ಈ ವಿಷಯವು ಈ ಋಕ್ಕಿನಲ್ಲಿಯೂ ಈ ಸೂಕ್ತದ ಮುಂದಿನ ಋಕ್ಕುಗಳಲ್ಲಿಯೂ ಹೇಳಲಾಗಿದೆ.

ಯಸ್ಮಿನ್ ವೃಕ್ಷೇ ಸುಪಲಾಶೇ—ಶೋಭನಪರ್ಣೋಪೇತಸ್ಯ ವೃಕ್ಷಸ್ಯ ಮೂಲಂ ಯಥೌಷ್ಣ್ಯಜನಿತಶ್ರಮಾಪನೋದನೇನ ಸುಖಕರಂ ಭವತಿ ತದ್ವತ್ ಸುಖಕರೇ ಯಸ್ಮಿನ್ ಸ್ಥಾನೇ ಇಲ್ಲಿ ವೃಕ್ಷ ಶಬ್ದವನ್ನು ದೃಷ್ಟಾಂತರೂಪವಾಗಿ ಹೇಳಿದೆ. ಬಿಸಲಿನಲ್ಲಿ ನಡೆಯುವ ಪುರುಷನು ಮಾರ್ಗಾಯಾಸದಿಂದ ಬಳಲಿರುವಾಗ ದಟ್ಟವಾದ ಎಲೆಗಳಿಂದ ಕೂಡಿದ ವೃಕ್ಷದ ಬುಡದಲ್ಲಿ ಎಂದರೆ ನೆರಳಿನಲ್ಲಿ ಆಯಾಸಪರಿಹಾರಾರ್ಥವಾಗಿ ಎಂದರೆ ವಿಶ್ರಾಂತಿಗಾಗಿ ಕುಳಿತು ಕೊಳ್ಳುವುದು ಸಹಜವು. ಆ ರೀತಿ ಎಲೆಗಳಿಂದ ನಿಬಿಡವಾದ ವೃಕ್ಷದ ಬುಡವು ಕುಳಿತುಕೊಳ್ಳುವುದಕ್ಕೆ ಸುಖಕರವಾಗಿರುವುದು. ಯಮನ ಸ್ಥಾನವೂ ಅದರಂತೆ ಸುಖಕರವಾಗಿರುವುದು ಎಂದು ಯಮನ ಸ್ಥಾನಕ್ಕೆ ವೃಕ್ಷವನ್ನು ಹೋಲಿಸಿ ವರ್ಣಿಸಲಾಗಿದೆ.

ದೇವೈಃ ಸಂಪಿಬತೇ ಯಮಃ—ಪರಿಜನಭೂತೈಃ ಯಮಃ ನಿಯಂತಾ ವೈವಸ್ವತಃ ಸಹಃ ಭುಂಕ್ತೇ | ವಿವಸ್ವಂತನ ಪುತ್ರನಾದ ಯಮನು ತನ್ನ ಸ್ವಸ್ಥಾನವಾದ ಯಮಲೋಕದಲ್ಲಿ ತನ್ನ ಪರಿಜನರೊಡನೆ ಎಂದರೆ ಪಿತೃಗಳೊಡನೆ ಸುಖವಾಗಿ ವಾಸಮಾಡುತ್ತಿರುವನು ಎಂದಭಿಪ್ರಾಯವು.

ಅತ್ರ ನಃ ವಿಶ್ಪತಿಃ ಪಿತಾ ಪುರಾಣಾನ್ ಅನು ವೇನತಿ—ಪುರಾಣಾನ್ ಎಂದರೆ ಅತ್ರ ಚಿರಕಾಲಂ ನಿವಸತಃ ಪಿತೄನ್-ಈ ಯಮಲೋಕದಲ್ಲಿ ಬಹುಕಾಲದಿಂದಲೂ ವಾಸಮಾಡುತ್ತಿರುವ ಪಿತೃಗಳು. ಇಂತಹ ಪಿತೃಗಳ ಬಳಿ ನಾನು (ನಚಿಕೇತನಾದ) ವಾಸಮಾಡಬೇಕೆಂದು ಎಂದರೆ ಇರಬೇಕೆಂದು ನನ್ನ ತಂದೆಯು ಅಪೇಕ್ಷಿಸುವನು ಎಂದರೆ ನನ್ನ ತಂದೆಯ ಮಾತಿನ ಪ್ರಕಾರವೇ ನಾನು ಇಲ್ಲಿಗೆ ಬಂದಿರುವೆನು ಎಂದು ನಚಿಕೇತನು ಹೇಳುತ್ತಾನೆ.

॥ ಆದಿತ್ಯಪರವಾದ ಅರ್ಥವು ॥

ಈ ಸೂಕ್ತದ ೩–೪–೫ ನೇ ಋಕ್ಕುಗಳಲ್ಲಿ ಇರುವ ಕುಮಾರಶಬ್ದಕ್ಕೆ ಯಮನ ಪರವಾಗಿ ಅರ್ಥವಿವರಣೆ ಮಾಡುವಾಗ ವಿಶ್ರವಸ ಪುತ್ರನಾದ ನಚಿಕೇತನೆಂದೂ, ಆದಿತ್ಯಪರವಾಗಿ ಅರ್ಥಮಾಡುವಾಗಿ ನಚಿಕೇತನಲ್ಲದ ಕುಮಾರನೆಂಬ ಹೆಸರಿನ ಬೇರೊಬ್ಬ ಋಷಿಯೆಂದೂ ಅರ್ಥಮಾಡಬೇಕು. ಈ ಕುಮಾರನೆಂಬ ಋಷಿಯು ಈ ಸೂಕ್ತದಲ್ಲಿ ಆದಿತ್ಯನನ್ನು ಸ್ತುತಿಸಿರುವನು

ಸುಪಲಾಶೇ—ಉತ್ತಮವಾದ ಎಲೆಗಳಿಂದ ನಿಬಿಡಿವಾದ | ವೃಕ್ಷೇ—ವೃಕ್ಷಮೂಲದಂತೆ ಸುಖಕರವಾದ | ಯಸ್ಮಿನ್ ಯಾವ ಅಂತರಿಕ್ಷ ಅಥವಾ ಸ್ವರ್ಗಸ್ಥಾನದಲ್ಲಿ | ಯಮಃ—ಆದಿತ್ಯನು | ದೇವೈಃ— ಪ್ರಕಾಶಮಾನವಾದ ತನ್ನ ಕಿರಣಗಳಿಂದ ಸಹಿತನಾಗಿ | ಸಂಪಿಬತೇ—ಸಂಚರಿಸುವನೋ | ಅತ್ರ—ಅಂತಹ ಸ್ಥಾನದಲ್ಲಿರುವ | ವಿಶ್ಪತಿಃ—ಪ್ರಜೆಗಳನ್ನು ವೃಷ್ಟಿ ಪ್ರಕಾಶ ನಾದಿಗಳಿಂದ ಪಾಲಿಸುವವನೂ | ಪಿತಾನಃ—ಸರ್ವರಿಗೂ ಪ್ರಾಣಭೂತನೂ ಜನಕನೂ ಆದ ಆದಿತ್ಯನು | ಪುರಾಣಾನ್—ಪುರಾತನರಾದ ಸ್ತೋತೃಜನರನ್ನು | ನಃ – ನಮ್ಮನ್ನೂ | ಅನು ವೇನತಿ—ಅನುಗ್ರಹಿಸಬೇಕೆಂಬ ಬುದ್ಧಿಯಿಂದ ಅಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ಉತ್ತಮವಾದ ಎಲೆಗಳಿಂದ ನಿಬಿಡವಾದ ವೃಕ್ಷದ ನೆರಳಿನಂತೆ ಸುಖಕರವಾದ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಪ್ರಕಾಶಮಾನವಾದ ತನ್ನ ಕಿರಣಗಳಿಂದ ಆದಿತ್ಯನು ಬೆಳಗುತ್ತಿರುವನು. ಪ್ರಜೆಗಳಿಗೆ ವೃಷ್ಟಿಪ್ರಕಾಶನಾದಿಗಳನ್ನು ಕೊಟ್ಟು ಸಲಹುವವನೂ ಸರ್ವರಿಗೂ ಪ್ರಾಣಭೂತನೂ ಜನಕನೂ ಆದ ಆ ಆದಿತ್ಯನು ಹಿಂದಿನ ಸ್ತೋತೃಜನರನ್ನೂ ನಮ್ಮನ್ನೂ ಅನುಗ್ರಹ ಮಾಡಬೇಕೆಂದು ಬಯಸುತ್ತಾನೆ.

॥ ವಿಶೇಷ ವಿಷಯಗಳು ॥

ಯಮ ಶಬ್ದಕ್ಕೆ ನಿರ್ವಚನವನ್ನು ಹೇಳುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಯಮಃ ಯಮೋ ಯಚ್ಛತೀತಿ ಸತಃ । ತಸ್ಯೈಷಾ ಭವತಿ ॥** (ನಿ. ೧೦–೧೯)

ಯಚ್ಛತಿ ಎಂದರೆ ಉಪರಮಯತಿ ಜೀವಿತಾನ್ ಪ್ರಾಣಿಗಳ ಜೀವನವನ್ನು ಅಂತ್ಯಗೊಳಿಸುವವನಾದ್ದರಿಂದ ಯಮನೆಂದು ಹೆಸರು ಇಲ್ಲಿ ಯಮಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿದ್ದಾರೆ. ಈ ಶಬ್ದ ಪ್ರಯೋಗವಿರುವ ಋಕ್ಕಿನ ನಿರ್ವಚನವನ್ನು ಇಲ್ಲಿ ವಿವರಿಸಲಾಗಿದೆ—

**ಯಸ್ಮಿನ್ ವೃಕ್ಷೇ ಸುಪಲಾಶೇ ಸ್ಥಾನೇ ವೃತಕ್ಷಯೇ ವಾಪಿ ವೋಪಮಾರ್ಥೇ ಸ್ಯಾತ್ ವೃಕ್ಷ ಇವ ಸುಪಲಾಶ ಇತಿ ವೃಕ್ಷೋ ವೃಶ್ಚನಾತ್ಪಲಾಶಂ ಪಲಾಶನಾದ್ದೇವೈಃ ಸಂಗಚ್ಛತೇ ಯಮೋರಶ್ಮಿಭಿರಾದಿತ್ಯೈಸ್ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾ ವಾ ಪುರಾಣಾನನು ಕಾಮಯೇತ ॥**

(ನಿ. ೧೨–೨೯)

ಯಸ್ಮಿನ್ ವೃಕ್ಷೇ ಸುಪಲಾಶೇ ಸ್ಥಾನೇ ವೃತಕ್ಷಯೇ ವಾಪಿ ವೋಪಮಾರ್ಥೇ ಸ್ಯಾತ್ ವೃಕ್ಷ ಇವ ಸುಪಲಾಶ ಇತಿ— ಉತ್ತಮವಾದ ಎಲೆಗಳಿಂದ ಕೂಡಿದ ವೃಕ್ಷದಲ್ಲಿ ಎಂದರೆ ವೃಕ್ಷಗಳ ಮನೋಹರವಾದ ಮತ್ತು ಮತ್ತು ಸುಖಕರವಾದ ಸ್ಥಾನದಲ್ಲಿ ಎಂದರ್ಥವು. ಅಥವಾ ವೃತಕ್ಷಯೇ—ಎಂದರೆ ಉತ್ತಮವಾದ ಸತ್ಕರ್ಮಗಳನ್ನು ಮಾಡಿರುವ ಜನರು ವಾಸಿಸುವ ಸ್ಥಾನದಲ್ಲಿ

ಎಂದರೆ ಉತ್ತಮ ಲೋಕದಲ್ಲಿ ಅಥವಾ ವೃಕ್ಷಶಬ್ದವನ್ನು ಇಲ್ಲಿ ಉಪಮಾನಾರ್ಥವಾಗಿ ಉಪಯೋಗಿಸಲಾಗಿದೆ. ವೃಕ್ಷದ ನೆರಳಿನಂತೆ ಹಿತಕರವಾದ ಸ್ಥಾನವನ್ನು ವರ್ಣಿಸುವುದಕ್ಕಾಗಿ ವೃಕ್ಷಶಬ್ದದ ಪ್ರಯೋಗವಿದೆ ಎಂದು ತಿಳಿಯಬೇಕು.

ವೃಕ್ಷೋ ವ್ರಶ್ಚನಾತ್ಪಲಾಶಂ ಪಲಾಶನಾತ್—ಕಾಷ್ಠಾದಿಗಳಿಗಾಗಿ ವೃಕ್ಷವನ್ನು ವ್ರಶ್ಚನ ಎಂದರೆ ಜನರು ಕತ್ತರಿಸುವುದರಿಂದ ಗಿಡಕ್ಕೆ ವೃಕ್ಷವೆಂದು ಹೆಸರು. ವೃಕ್ಷದ ಎಲೆಗಳು ಪಲಾಶನಾತ್ ಕೆಳಗೆ ಉದುರುವುದರಿಂದ ಎಂದರೆ ಬೀಳುವುದರಿಂದ ಎಲೆಗಳಿಗ ಪಲಾಶವೆಂದು ಹೆಸರು.

ದೇವೈಃ ಸಂಗಚ್ಛತೇ ಯಮೋ ರಶ್ಮಿಭಿರಾದಿತ್ಯಃ—ದೇವೈಃ ಎಂದರೆ ಪ್ರಕಾಶಮಾನವಾದ ರಶ್ಮಿಗಳಿಂದ. ಯಮಃ ಎಂದರೆ ಆದಿತ್ಯನು. ಸಂಪಿಬತೇ ಎಂದರೆ ಸಂಗಚ್ಛತೇ ಸಂಚರಿಸುತ್ತಾನೆ ಅಥವಾ ಅಸ್ತಂಗತನಾಗುತ್ತಾನೆ. ಆದಿತ್ಯನು ತನ್ನ ಪ್ರಕಾಶಮಾನವಾದ ಕಿರಣಗಳಿಂದ ಬೆಳಗುತ್ತಾ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಅಥವಾ ರಶ್ಮಿಗಳಿಂದ ಸಹಿತನಾಗಿ ಅಸ್ತಂಗತನಾಗುತ್ತಾನೆ (ಮುಳುಗುತ್ತಾನೆ) ಎಂದಭಿಪ್ರಾಯವು.

ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾ ವಾ ಪುರಾಣಾನನುಕಾಮಯೇತ—ತತ್ರ ಎಂದರೆ ಸೂರ್ಯನು ಪ್ರಕಾಶಿಸುತ್ತಿರುವ ಸ್ವರ್ಗಸ್ಥಾನದಲ್ಲಿ ವಿಶ್ಪತಿಃ ಎಂದರೆ ಸರ್ವರನ್ನೂ ಕಾಪಾಡುವವನು. ಸಂರಕ್ಷಕನು. ಎಂದರ್ಥವು, ಪತಿಃ ಮತ್ತು ಪಿತಾ ಎಂಬ ಶಬ್ದಗಳಿಗೆ ಪಾಲಿಸುವವನು ಅಥವಾ ಸಂರಕ್ಷಕನು, ಎಂದರ್ಥವು. ಪತಿಃ ಮತ್ತು ಪಿತಾ ಎಂಬ ಶಬ್ದಗಳಿಗೆ ಪಾಲಿಸುವವನು ಅಥವಾ ಸಂರಕ್ಷಕನು ಎಂದರ್ಥಮಾಡಿದ್ದಾರೆ. ಇಂತಹ ಆದಿತ್ಯನು ಬಹುಕಾಲದಿಂದಲೂ ಸ್ವರ್ಗದಲ್ಲಿ (ಅಥವಾ ಭೂಮಿಯ ಮೇಲೆ) ವಾಸಿಸುತ್ತಿರುವ ಜನರನ್ನು ಸಂತೋಷಪಡಿಸುತ್ತಾನೆ ಎಂದು ನಿರುಕ್ತಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹನ್ನೆರಡನೆಯ ಅಧ್ಯಾಯದಲ್ಲಿ
ಇಪ್ಪತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಿಂಶತ್ ಖಂಡಃ

## ಮೂವತ್ತನೆಯ ಖಂಡವು

ಸಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ । ವಿಶ್ವೇ ದೇವಾಸಃ ಶೃಣವನ್ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ (ಋ. ಸಂ. ೧೦-೬೫-೧೩) ॥ ಪವಿಃ ಶಲ್ಯೋ ಭವತಿ ಯದ್ವಿಪುನಾತಿ ಕಾಯಂ ತದ್ವತ್ಕುವೀರ ವಾಯುಧಂ ತದ್ವಾನಿಂದ್ರಃ ಪವೀರವಾನ್ । ಅತಿತಸ್ಥೌ ಪವೀರವಾನಿತ್ಯಪಿ ನಿಗಮೋ ಭವತಿ । ತದ್ದೇವತಾ ವಾಕ್ಪಾವೀರವೀ ಪಾವೀರವೀ ಚ ದಿವ್ಯಾ ವಾಕ್ತನ್ಯತುಸ್ತನಿತ್ರೀ

ವಾಚೋಽನ್ಯಸ್ಯಾ ಅಜಶ್ಚೈಕಪಾದ್ದಿವೋ ಧಾರಯಿತಾ ಚ ಸಿಂಧುಶ್ಚಾಪಶ್ಚ ಸಮುದ್ರಿಯಾಶ್ಚ ಸರ್ವೇ ಚ ದೇವಾಃ ಸರಸ್ವತೀ ಚ ಸಹ ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ ಧೀಭಿಃ ಕರ್ಮಭಿರ್ಯುಕ್ತಾನಿ ಶೃಣ್ವಂತು ವಚನಾನೀಮಾನೀರಿ ಪೃಥಿವೀ ವ್ಯಾಖ್ಯಾತಾ ತಸ್ಯಾ ಏಷ ನಿಪಾತೋ ಭವತ್ಯೈಂದ್ರ್ಯಾಗ್ನ್ಯಾಮೃಚಿ ॥ ೩೦ ॥

ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ
ಸಮುದ್ರಿಯಃ॥ವಿಶ್ವೇ ದೇವಾಸಃ ಶೃಣವನ್ವಚಾಂಸಿ ಮೇ ರಸಸ್ವತೀ
ಸಹ ಧೀಭಿಃ ಪುರಂಧ್ಯಾ ॥

(ಋ-ಸಂ-೮-೨-೧೧)

ಅಜ ಏಕಪಾದ್ದೇವತೆಯ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಮಾಧ್ಯಮಿಕವಾದ ಐಂದ್ರೀವಾಕ್ ಇತರ ವಾಕ್ಕನ್ನು ವಿಸ್ತರಿಸುತ್ತದೆ. ದ್ಯುಲೋಕವನ್ನು ಧರಿಸಿರುವ ಅಜಏಕಪಾತ್ ದೇವತೆಯೂ ನದವೂ. ಜಲವೂಂ ಸಮುದ್ರದಲ್ಲಿ ಉತ್ಪನ್ನವಾದವುಗಳೂ ವಿಶ್ವೇದೇವತೆಗಳೂ ಬಹುಪುತ್ರಿಯರಿಂದ ಕೂಡಿದ ಮಾಧ್ಯಮಿಕವಾಕ್ಕಿನಿಂದ ಕೂಡಿದ ಸರಸ್ವತಿಯೂ ಹವಿರ್ದಾನದಿಂದ ಕೂಡಿದ ನಮ್ಮ ಸ್ತುತಿರೂಪ ಮಾತುಗಳನ್ನು ಕೇಳಲೆಂದು ಪ್ರಾರ್ಥಿಸುತ್ತೇವೆ.

ಪವಿಃ ಶಲ್ಯೋ ಭವತಿ, ಯದ್ವಿಪುನಾತಿ ಕಾಯಂ, ತದ್ವತ್ಪವೀರಮಾ
ಯುಧಂ, ತದ್ವಾನಿಂದ್ರಃ ಪವೀರವಾನ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪವಿಃ ಅಂದರೆ ಬಾಣದತುದಿ ಆಯುಧವಿಶೇಷವೂ ಆಗುತ್ತದೆ. ಶಲತೀತಿ ಶಲ್ಯಃ ಶಲ-ಗತೌ ಧಾತುಅಘ್ನ್ಯಾದಿಗಣಪಠಿತವಾದುದರಿಂದ ಯಪ್ರತ್ಯಯ ಸಂಖ್ಯಾಕೀಲಕಯೋಃ ಶಂಕುಃ ಶಂಕುಃ ಪ್ರಹರಣಾಂತರೇ। ಶಲ್ಯಂತು ನಸ್ತ್ರಿಯಾಂ ಶಕೌ ಕ್ಲೀಬಂ ಕ್ಷ್ವೇಡೇತು ತೋಮರೇ ॥ ಎಂದು ಮೇದಿನೀ ಕೋಶ. ಇದರಿಂದ ಶರೀರವನ್ನು ಸೀಳುತ್ತಾರೆ. ಪವಿಉಳ್ಳದ್ದು ಪವೀರ ಮತ್ವರ್ಥದಲ್ಲಿ ರಪ್ರತ್ಯಯ. ಪವೀರವೆಂದರೆ ವಜ್ರಾಯುಧ ಅದು ಉಳ್ಳವನು ಪವೀರವಾನ್ ಇಂದ್ರನೆಂದರ್ಥ.

"ಅತಿತಸ್ಥೌ ಪವೀರವಾನ್" ಇತ್ಯಪಿ ನಿಗಮೋಭವತಿ ॥

(ಋ-ಸಂ-೮-೧-೨೪)

ಪವೀರವಾನ್ ಇಂದ್ರನೆಂಬುದಕ್ಕೆ ಪ್ರಮಾಣತೋರಿಸುತ್ತಾರೆ. ಯೋ ಜನಾನ್ಮಹಿಷಾ ಇವಾತಿತಸ್ಥೌ ಪವೀರವಾನ್ । ಉತಾಪವೀರಾವಾನ್ಯುಧಾ ॥ ಎಂದು ಮಂತ್ರಶೇಷ ಇಂದ್ರನು ಆಯುಧದಿಂದ ಕೂಡಿರಲಿ ಅಥವಾ ಆಯುಧರಹಿತನಾಗಲಿ ಶತ್ರುಗಳನ್ನು ನಾಶಮಾಲು ಸಮರ್ಥನಾಗುತ್ತಾನೆ ಎಂದು ತಾತ್ಪರ್ಯ.

ತದ್ದೇವತಾ ವಾಕ್ ಪಾವೀರವೀ । ಪಾವೀರವೀ ಚ ದಿವ್ಯಾ ವಾಕ್ ।
ತನ್ಯತುಸ್ತನಿತ್ರೀ ವಾಚೋಽನ್ಯಸ್ಯಾಃ । ಅಜಶ್ಚೈಕಪಾದ್ದಿವೋ
ಧಾರಯಿತಾ ಚ ಸಿಂಧುಶ್ಚಾಪಶ್ಚ ಸಮುದ್ರಿಯಾಶ್ಚ ಸರ್ವೇ ಚ
ದೇವಾಃ ಸರಸ್ವತೀ ಚ ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ ಧೀಭಿಃ
ಕರ್ಮಭಿರ್ಯುಕ್ತಾನಿ ಶೃಣ್ವಂತು ವಚನಾನೀಮಾನೀತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪಾವೀರವೀ ಇಂದ್ರದೇವತಾಕವಾದ ಮಾಧ್ಯಮಿಕವಾದ ವಾಕ್. ಇತರ ಪದಗಳು ಸ್ಪಷ್ಟಾರ್ಥಕಗಳಾಗಿವೆ.

ಪೃಥಿವೀ—ವ್ಯಾಖ್ಯಾತಾ, ತಸ್ಯಾ ಏಷ ನಿಪಾತೋ
ಭವತ್ಯೈಂದ್ರಾಗ್ನ್ಯಾಮೃಚಿ ॥ ೩೦ ॥

ಕ್ರಮಪ್ರಾಪ್ತವಾದ ಪೃಥಿವೀಶಬ್ದ ವ್ಯಾಖ್ಯಾತವಾಗಿದೆ (ನಿ-೧-೧೩). ಇಲ್ಲಿ ದ್ಯುಲೋಕದ ಹೆಸರಾಗುತ್ತದೆ. ಮುಂದೆ ಹೇಳುವ ಇಂದ್ರಾಗ್ನಿದೇವತಾಕವಾದ ಮಂತ್ರದಲ್ಲಿ ಈ ಪೃಥಿವಿಯ ಅಪ್ರಾಧಾನ್ಯ ಸಂನಿವೇಶವಿರುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕತ್ರಿಂಶತ್ ಖಂಡಃ

## ಮೂವತ್ತೊಂದನೆಯ ಖಂಡವು

ಯದಿಂದ್ರಾಗ್ನೀ ಪರಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಮವಮಸ್ಯಾಮುತ ಸ್ಥಃ । ಅತಃ ಪರಿ ವೃಷಣಾ ವಾ ಹಿ ಯಾತಮಥಾ ಸೋಮಸ್ಯ ಪಿಬತಂ ಸುತಸ್ಯ (ಋ, ಸಂ, ೧-೧೦೮-೧೦) ॥ ಇತಿ ಸಾ ನಿಗದವ್ಯಾಖ್ಯಾತಾಸಮುದ್ರೋ ವ್ಯಾಖ್ಯಾತಸ್ತಸ್ಯೈಷ ನಿಪಾತೋ ಭವತಿ ಪಾವಮಾನ್ಯಾಮೃಚಿ ॥ ೩೧ ॥

ಯದಿಂದ್ರಾಗ್ನೀ ಪರಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಮವಮಸ್ಯಾ-
ಮು ತ ಸ್ಥಃ । ಅತಃ ಪರಿ ವೃಷಣಾ ವಾಹಿ ಯಾತಮಥಾ ಸೋಮಸ್ಯ
ಪಿಬತಂ ಸುತಸ್ಯ ॥

(ಋ. ಸಂ. ೧-೭-೨೭)

ಪೃಥಿವೀ ಸಂನಿವೇಶವನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಇಂದ್ರಾಗ್ನಿಯರೇ ವರ್ಷಣಸ್ವಭಾವವುಳ್ಳ ನೀವಿಬ್ಬರು ಉತ್ಕೃಷ್ಟವಾದ ದೂರದಲ್ಲಿರುವ ದ್ಯುಲೋಕದಲ್ಲಿಯೂ ಅಂತರಿಕ್ಷದಲ್ಲಿಯೂ, ಈ ಭೂಮಿಯಲ್ಲಿಯೂ ಇರುವವರಾಗಿ ನಾವು ಇರುವಲ್ಲಿಗೆ ಬನ್ನಿರಿ. ಬಂದು ನಿಮಗೋಸ್ಕರ ಸಿದ್ಧಪಡಿಸಿರುವ ಸೋಮದಲ್ಲಿ ನಿಮ್ಮ ಅಂಶವನ್ನು ಕುಡಿಯಿರಿ ದ್ವಿತೀಯಾರ್ಥದಲ್ಲಿ ಷಷ್ಠೀ ಬಂದಿದೆ. ಇಲ್ಲಿ ಪೃಥಿವೀಶಬ್ದ ಮೂರು ಲೋಕಗಳಲ್ಲಿಯೂ ಹೇಳಿದೆ 'ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇತಿ' ಎಂದು ತೈತ್ತರೀಯ ಸಂಹಿತಾದಲ್ಲಿಯೂ ಹೀಗೆಯೇ ಹೇಳಿದೆ.

ಇತಿ ಸಾ ನಿಗದವ್ಯಾಖ್ಯಾತಾ ॥

ಈ ಋಕ್ಕು ಪಾಠಮಾತ್ರದಿಂದಲೇ ವ್ಯಾಖ್ಯಾತವಾದಂತಿದೆ ಅತಿಸುಗಮವೆಂದರ್ಥ

ಸಮುದ್ರೋ ವ್ಯಾಖ್ಯಾತಸ್ತಸ್ಯೈಷ ನಿಪಾತೋ ಭವತಿ
ಪಾವಮಾನ್ಯಾಮೃಚಿ ॥ ೩೧ ॥

ಕ್ರಮಪ್ರಾಪ್ತವಾದ ಸಮುದ್ರವು ಅಂತರಿಕ್ಷನಾಮದಲ್ಲಿ (ನಿ-೨-೧೦) ಹಿಂದೆ ವ್ಯಾಖ್ಯಾತವಾಗಿದೆ. ಇಲ್ಲಿಮಾತ್ರ ಅಂತರಿಕ್ಷದಲ್ಲಿರುವ ಆದಿತ್ಯನೆಂದು ತಿಳಿಯಬೇಕು. ಇವನಿಂದ ನೀರು ಉಂಟಾಗುವುದರಿಂದ ನಿರ್ವಚನರೀತಿ ಹಿಂದಿನಂತೆಯೇ ತಿಳಿಯಬೇಕು. ಮುಂದೆ ಹೇಳುವ ಪಾವಮಾನೀಋಕ್ಕಿನಲ್ಲಿ ಈ ಸಮುದ್ರದ ಅಪ್ರಾಧಾನ್ಯ ಸ್ತುತಿಯನ್ನು ಅಂದರೆ ನೈಘಂಟುಕರೂಪದಿಂದ ಸನ್ನಿವೇಶರೂಪವಾದ ಸ್ತುತಿಯನ್ನು ಹೇಳುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಾತ್ರಿಂಶತ್ ಖಂಡಃ

## ಮೂವತ್ತೆರಡನೆಯ ಖಂಡವು

ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿರಕ್ಷತಿ ವ್ರತಂ ।
ಮಹಃ ಸಮುದ್ರಂ ವರುಣಸ್ತಿರೋ ದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಮ್

(ಋ. ಸಂ. ೯-೭೩-೩) || ಪವಿತ್ರವಂತೋ ರಶ್ಮಿವಂತೋ ಮಾಧ್ಯಮಿಕಾ ವಹದೇಣಾಃ ಪರ್ಯಾಸತೇ ಮಾಧ್ಯಮಿಕಾಂ ವಾಚಂ ಪಿತೈಷಾಂ ಪ್ರಸ್ನಃ ಪುರಾಣೋಽಭಿರಕ್ಷತಿ ವ್ರತಂ ಕರ್ಮ ಮಹಃ ಸಮುದ್ರಂ ವರುಣಸ್ತಿರೋಽಂತರ್ದಧಾತ್ಯಥ ಧೀರಾಃ ಶಕ್ನುವಂತಿ ಧರುಣೇ ಷೂದಕೇಷು ಕರ್ಮಣ ಆರಂಭಮಾರಬ್ಧುಮುಜಸಿಕಪಾದ್ವ್ಯಾಖ್ಯಾತಃಪೃಥಿವೀ ವ್ಯಾಖ್ಯಾತಾ ಸಮುದ್ರೋ ವ್ಯಾಖ್ಯಾತಸ್ತೇಷಾಮೇಷ ನಿಪಾತೋ ಭವತ್ಯಪರಸ್ಯಾಂ ಬಹುದೇವತಾ-ಯಾಮೃಚಿ || ೩೨ ||

ಪವತ್ರುವಂತಃ ಪರಿವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿರಕ್ಷತಿ
ವ್ರತಮ್ | ಮಹಃ ಸಮುದ್ರಂ ವರುಣಸ್ತಿರೋದಧೇ ಧೀರಾ
ಇಚ್ಛೇಕುರ್ಧರುಣೇಷ್ವಾರಭಮ್ ||

(ಋ-ಸಂ-೭-೩-೩೮)

ಸಮುದ್ರದ ಅಪ್ರಾಧಾನ್ಯಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ರಶ್ಮಿಯಿಂದಕೂಡಿದ ಮಾಧ್ಯಮಿಕದೇವ ಗಣಗಳು, ಸೋಮನಲ್ಲಿರುವ ಮಾಧ್ಯಮಿಕವಾಕ್ಕನ್ನು ಸುತ್ತುವರಿದು ಇರುತ್ತವೆ. ಪುರಾಣನಾದ, ಸಕಲ ಜಗದ್ರಕ್ಷಕನಾದ ವಿದ್ಯುದಾಖ್ಯ ಮಧ್ಯಮನ ಮರುತ್ತಾನ್ನಾರಂಭಿಸಿ ಮಾಧ್ಯಮಿಕನವರೆಗಿರುವ ಸ್ವಾಧಿಕಾರಪ್ರಯುಕ್ತವಾದ ಕರ್ಮವನ್ನು ಮಾಡುತ್ತಿರುತ್ತಾನೆ. ಮಹಾತ್ಮನಾದ ಆ ವರುಣನು ಆದಿತ್ಯನನ್ನು ಮೇಘಸಮೂಹದಿಂದ ಯಾವಾಗ ಮುಚ್ಚಿ ಮಳೆಯನ್ನು ಸುರಿಸುವನೋ ಆಗ ವಿದ್ವಾಂಸರು ನೀರು ಅಧಿಕವಾಗಿರುವಾಗ ತಮ್ಮ ಕಾರ್ಯವನ್ನು ಆರಂಭಿಸಲು ಶಕ್ತರಾಗುತ್ತಾರೆ.

ಪವಿತ್ರವಂತೋ ರಶ್ಮಿವಂತೋ ಮಾಧ್ಯಮಿಕಾ ದೇವಗಣಾಃ ಪರ್ಯಾ-
ಸಂತೇ ಮಾಧ್ಯಮಿಕಾಂ ವಾಚಂ | ಮಧ್ಯಮಃ ಪಿತೈಷಾಂ ಪ್ರತ್ನಃ
ಪುರಾಣೋಽಭಿರಕ್ಷತಿ ವ್ರತಂ-ಕರ್ಮ, ಮಹಃ ಸಮುದ್ರಂ ವರುಣ
ಸ್ತಿರೋಽನ್ತರ್ದಧಾತ್ಯಥ ಧೀರಾಃ ಶಕ್ನುವಂತಿ ಧರುಣೇಷೂದಕೇಷು
ಕರ್ಮಣ ಆರಂಭಮಾರಬ್ಧುಮ್ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪವಿತ್ರ ಶಬ್ದ ಉದಕನಾಮದಲ್ಲಿ ಪಠಿತವಾಗಿದ್ದರೂ ಪುನಾತ್ಯನೇನ ಇತಿ ಪವಿತ್ರಂ ಎಂಬ ಅನ್ವಯಾರ್ಥವನ್ನು ಅಂಗೀಕರಿಸುವುದರಿಂದ ರಶ್ಮಿಗಳು ಸರ್ವರೀತಿಯಿಂದಲೂ ಶುದ್ಧಿಹೇತುಗಳಾದುದರಿಂದ ಪವಿತ್ರವೆಂಬುದಕೆ ರಶ್ಮಿಗಳೆಂದು ವ್ಯಾಖ್ಯಾನಮಾಡಿದೆ. ಆದಿತ್ಯರಶ್ಮಿಗಳು ಮಾಧ್ಯಮಿಕದೇವಗಣಗಳನ್ನು ಸ್ಪರ್ಶಿಸಿ ಅವರನ್ನು ಪವಿತ್ರವಂತರನ್ನಾಗಿ ಮಾಡುತ್ತವೆ. ಆದಿತ್ಯನು ರಶ್ಮಿಗಳಿಂದಲೇ ಜಗತ್ತನ್ನು ಪವಿತ್ರವನ್ನಾಗಿ ಮಾಡುತ್ತಾನೆ. ವ್ರತಶಬ್ದವು ಕರ್ಮನಾಮದಲ್ಲಿ ಪಠಿತವಾಗಿದೆ (ನಿಘ-೧-೭) ಧೀರರ ಕಾರ್ಯವೆಂದರೆ ಕೃಷಿಕರ್ಮ ಅಥವಾ ವೈದಿಕಕರ್ಮವೆಂದು ತಿಳಿಯಬೇಕು.

ಅಜ ಏಕಪಾದ್ ವ್ಯಾಖ್ಯಾತಃ । ಪೃಥಿವೀ—ವ್ಯಾಖ್ಯಾತಾ । ಸಮುದ್ರೋ —ವ್ಯಾಖ್ಯಾತಃ । ತೇಷಾಮೇಷ ನಿಪಾತೋ ಭವತ್ಯಪರಸ್ಯಾಂ ಬಹುದೇವತಾಯಾಮೃಚಿ ॥ ೩೨ ॥

ಪೂರ್ವದಲ್ಲಿ ವಿವರಿಸಿದ ಅಜಏಕಪಾದ್, ಪೃಥಿವೀ, ಸಮುದ್ರ ಈ ಮೂರರ ಅನುಪ್ರವೇಶರೂಪಸ್ತುತಿಯು ಮುಂದೆ ಹೇಳುವ ಅಹಿರ್ಬುಧ್ನ್ಯಾದಿಬಹುದೇವತಾಕವಾದ ಮಂತ್ರದಲ್ಲಿ ಪ್ರಸಿದ್ಧವಾಗಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತೆರಡನೆಯ ಖಂಡವು ಸಮಾಪ್ತವಾಗಿದೆ

## ಅಥ ತ್ರಯಸ್ತ್ರಿಂಶತ್ ಖಂಡಃ

## ಮೂವತ್ತಮೂರನೆಯ ಖಂಡವು

ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ ಸಮುದ್ರಃ । ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು (ಋ. ಸ. ೬-೫೦-೧೪) ॥ ಅಪಿ ಚ ನೋಽಹಿರ್ಬುಧ್ನ್ಯಃ ಶೃಣೋತ್ವಜಶ್ಚೈಕಪಾತ್ ಪೃಥಿವೀ ಚ ದೇವಾಃ ಸತ್ಯವೃಧೋ ವಾ ಯಜ್ಞವೃಧೋ ವಾ ಹೂಯಮಾನಾ ಮಂತ್ರೈಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ಮೇಧಾವಿಶಸ್ತಾ ದಧಙ್‌ಪ್ರತ್ಯಕ್ತೋ ಧ್ಯಾನಮಿತಿ ವಾ ಪ್ರತ್ಯಕ್ತ ಮಸ್ಮಿನ್ ಧ್ಯಾನಮಿತಿ ವಾಥರ್ವಾ ವ್ಯಾಖ್ಯಾತೋ ಮನುರ್ಮನನಾತ್ತೇಷಾಮೇಷ ನಿಪಾತೋ ಭವತ್ಯೈಂದ್ರ್ಯಾಮೃಚಿ ॥ ೩೩ ॥

ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ
ಸಮುದ್ರಃ । ವಿಶ್ವೇದೇವಾ ಋತಾವೃಧೋ ಹುವಾನಾಃ ಸ್ತುತಾ
ಮಂತ್ರಾಃ ಕವಿಶಸ್ತಾ ಅವಂತು ॥

(ಋ-ಸಂ-೪-೪-೧೧.)

ಅಜಏಕಪಾತ್, ಪೃಥಿವೀ, ಸಮುದ್ರರ ಅಪ್ರಧಾನಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಅಹಿರ್ಬುಧ್ನನೆಂಬ ಮಾಧ್ಯಮಿಕದೇವನು ನಮ್ಮ ಸ್ತೋತ್ರವನ್ನು ಕೇಳಲಿ. ಮತ್ತು ಅಜಏಕಪಾತ್, ಪೃಥಿವೀ, ಸಮುದ್ರ, ವಿಶ್ವೇದೇವತೆ ಮುಂತಾದ ದೇವತೆಗಳು ಯಜ್ಞವನ್ನು ಅಭಿವೃದ್ಧಿಗೊಳಿಸುವವರಾಗಿ, ನಮ್ಮಿಂದಯಜುರ್ವೇದಮಂತ್ರಗಳಿಂದ ಕರೆಯಲ್ಪಡುವವರಾಗಿ, ಸಾಮದಿಂದ, ಋಷಿಗಳಿಂದ ಸ್ತುತಿಸಲ್ಪಡುವವರಾಗಿ ನಮ್ಮನ್ನು ರಕ್ಷಿಸಲಿ.

ಅಪಿ ಚ ನೋऽಹಿರ್ಬುಧ್ನ್ಯಃ ಶೃಣೋತ್ವಜಶ್ಚೈಕಪಾತ್ಪೃಥಿವೀ ಚ ಸಮುದ್ರಶ್ಚ, ಸರ್ವೇ ಚ ದೇವಾಃ ಸತ್ಯಾವೃಧೋ ವಾ ಯಜ್ಞವೃಧೋ ವಾ ಹೂಯಮಾನಾ—ಮಂತ್ರೈಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ಮೇಧಾವಿಶಸ್ತಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಹಿರ್ಬುಧ್ನ್ಯ ಮಾಧ್ಯಮಿಕ ದೇವನೆಂದು (ನಿ-೧೦-೪೪) ಹಿಂದೆ ವ್ಯಾಖ್ಯಾತವಾಗಿದೆ. ಆದಿತ್ಯನೇ ಆಯಾಯಗುಣಸಂಬಂಧದಿಂದ ದಧ್ಯಙ್, ಮನು, ಅಥರ್ವಾ ಎಂಬ ನಾಮದಿಂದ ಪ್ರಸಿದ್ಧರಾಗಿರುತ್ತಾರೆ. ಇವರನ್ನು ದ್ಯುಸ್ಥಾನದಲ್ಲಿ ಹೇಳಿರುತ್ತಾರೆ. ಇವರು ಬೇರೆಯೆಂದು ಅಂಗೀಕರಿಸಿದರೆ ಆಗ ದ್ವಿಸ್ಥಾನರೆಂದ ಅವರ ಸಹಚಾರಿಗಳಾದ ಋಷಿಗಳೆಂದು ತಿಳಿಯಬೇಕು. ಅವರಲ್ಲಿ ಮೊದಲಿನ ದಧ್ಯಙ್ ಪದನಿರ್ವಚನವನ್ನು ತೋರಿಸುತ್ತಾರೆ.

ದಧ್ಯಙ್ ಪ್ರತ್ಯಕ್ತೋ ಧ್ಯಾನಮಿತಿ ವಾ । ಪ್ರತ್ಯಕ್ತಮಸ್ಮಿನ್ ಧ್ಯಾನ-ಮಿತಿ ವಾ ॥

ಧ್ಯಾನಪದ ಉಪಪದವಾಗಿರುವಾಗ ಅಂಚೂ–ಗತಿಪೂಜನಯೋಃ ಧಾತುವಿಗೆ ಕ್ವಿನ್‌ಪ್ರತ್ಯಯ ಪೃಷೋದರಾದಿಯಲ್ಲಿ ಸೇರಿರುವುದರಿಂದ ಧ್ಯಾನ ಶಬ್ದಕ್ಕೆ ದಧಿ ಆದೇಶ ಯಣ್ ಕ್ವಿನ್‌ಪ್ರತ್ಯಯಸ್ಯ—ಸೂತ್ರದಿಂದ ನಕಾರಕ್ಕೆ ಕುತ್ವದಿಂದ ಙಕಾರ ಪೂಜಾರ್ಥದಲ್ಲಿ ನಲೋಪಬಾರದಿರುವುದರಿಂದ ಸಂಯೋಗಾಂತಲೋಪ ಎರಡುರೀತಿಯಿಂದ ನಿರ್ವಚನ ತೋರಿಸುತ್ತಾರೆ. ಇವನು ಲೋಕಪಾಲನಾದುದರಿಂದ ಇಲ್ಲಿ ಧ್ಯಾನವೆಂದರೆ ಲೋಕದ ಕೃತ್ಯಾಕೃತ್ಯ ವಿಷಯಕವಾದ ಜ್ಞಾನವೆಂದರ್ಥ. ಅದನ್ನು ಪ್ರತ್ಯಕ್ತಃ ಅಂದರೆ ಹೊಂದಿದವನೆಂದರ್ಥ. ಧ್ಯಾನದಿಂದ ತನ್ನ ಅಧಿಕಾರವನ್ನು ಪರಿಪಾಲಿಸುತ್ತಾನೆ ಎಂದರ್ಥ. ಅಥವಾ ಅಧಿಕರಣಾರ್ಥದಲ್ಲಿ ಕ್ವಿಪ್. ಧ್ಯಾನಂ ಪ್ರತ್ಯಕ್ತಮಸ್ಮಿನ್: ಅವನಲ್ಲಿ ಧ್ಯಾನಕಾರ್ಯವು ಸಫಲವಾಗುತ್ತದೆ ಎಂದರ್ಥ.

ಅಥರ್ವಾ ವ್ಯಾಖ್ಯಾತಃ । ಮನುರ್ಮನನಾತ್ ॥

ಅಥರ್ವಾಪದದ ನಿರ್ವಚನ (ನಿ. ೧೧–೧೮) ವ್ಯಾಖ್ಯಾತವಾಗಿದೆ. ಇವನು ತನ್ನ ಅಧಿಕಾರದಿಂದ ಚ್ಯುತನಾಗುವುದಿಲ್ಲ. ಒಂದು ದಿನವೂ ಅದನ್ನು ಬಿಡುವುದಿಲ್ಲವೆಂದರ್ಥ. ಮನನಕರ್ಮದಿಂದ ಮನು ಎಂದಾಗಿದೆ. ಇವನು ತಿಳಿಯದಿರುವ ವಸ್ತುವೇ ಇರುವುದಿಲ್ಲ.

ತೇಷಾಮೇಷನಿಪಾತೋ ಭವತ್ಯೈಂದ್ರ್ಯಾಮೃಚಿ ॥ ೩೩ ॥

ದಧ್ಯಙ್ ಅಥರ್ವಾ, ಮನುಗಳ ಅಪ್ರಧಾನವಾದ ಸ್ತುತಿಯನ್ನು ಮುಂದೆ ಹೇಳುವ ಇಂದ್ರದೇವತಾಕವಾದ ಋಕ್ಕಿನಲ್ಲಿ ವಿವರಿಸುತ್ತಾರೆ.

ಉತ ನೋಽಹಿರ್ಬುಧ್ನ್ಯಃ ಶೃಣೋತ್ವಜ ಏಕಪಾತ್ಪೃಥಿವೀ
ಸಮುದ್ರಃ । ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ
ಮಂತ್ರಾಃ ಕವಿಶಸ್ತಾ ಅವಂತು ॥ ೧೪ ॥

ಅಹಿರ್ಬುಧ್ನ್ಯ, ಅಜ ಏಕಪಾತ್, ಪೃಥಿವೀ, ಸಮುದ್ರಾಧಿದೇವತೆ ಇವರೆಲ್ಲರೂ ನಮ್ಮ ಸ್ತೋತ್ರವನ್ನು ಕೇಳಲಿ. ಯಜ್ಞವರ್ಧಕರೂ, ನಮ್ಮಿಂದ ಕರೆಯಲ್ಪಡುವವರೂ, ನಮ್ಮ ಸ್ತುತಿಗೂ ಧ್ಯಾನಕ್ಕೂ, ಅರ್ಹರೂ, ಪ್ರಾಜ್ಞರ ಪ್ರಶಂಸೆಗೆ ಪಾತ್ರರೂ ಆದ ವಿಶ್ವೇದೇವತೆಗಳೆಲ್ಲರೂ ನಮ್ಮನ್ನು ರಕ್ಷಿಸಲಿ.

ಅಗ್ನಿಮಾರುತಶಸ್ತ್ರಮಂತ್ರಗಳನ್ನು ಪಠಿಸುವಾಗ ಉತ ನೋಽಹಿಃ ಎಂಬ ಈ ಋಕ್ಕನ್ನು ಸೇರಿಸಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಉತ ನೋಽಹಿರ್ಬುಧ್ನ್ಯಃ ಶೃಣೋತು ದೇವಾನಾಂ ಪತ್ನೀರುಶತೀರವಂತು ನಃ ಎಂಬ ಸೂತ್ರದಿಂದ (ಆ. ೫–೨೦) ವಿವೃತವಾಗಿರುವುದು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುಸ್ತ್ರಿಂಶತ್ ಖಂಡಃ

### ಮೂವತ್ತನಾಲ್ಕನೆಯ ಖಂಡವು

ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ । ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಮ್ (ಋ. ಸಂ. ೧-೫-೩೧) ॥ ಯಾಮಥರ್ವಾ ಚ ಮನುಶ್ಚ ಪಿತಾ ಮಾನವಾನಾಂ ದಧ್ಯಙ್ ಚ ಧಿಯಮತನಿಷತ ತಸ್ಮಿನ್‌ಬ್ರಹ್ಮಾಣಿ ಕರ್ಮಾಣಿ ಪೂರ್ವೇಂದ್ರಉಕ್ಥಾನಿ ಚ ಸಂಗಚ್ಛಂತಾಮರ್ಚನ್ಯೋಽನೂಪಾಸ್ತೇ ಸ್ವಾರಾಜ್ಯಮ್ ॥ ೩೪ ॥

ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ । ತಸ್ಮಿನ್
ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು
ಸ್ವರಾಜ್ಯಮ್ ॥ ೧೬ ॥

ಅಥರ್ವಾದಿಗಳ ಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಅಥರ್ವಾ ಎಂಬ ಮಹರ್ಷಿಯು, ಸಕಲಮಾನವರಿಗೆ ಪಿತೃಭೂತನಾದ ಮನುವು, ಅಥರ್ವಣನ ಪುತ್ರನಾದ ದಧ್ಯಙ್ ಎಂಬ ಋಷಿಯು ಯಾವ ಕರ್ಮವನ್ನು ಮಾಡಿದರೋ ಆ ಕರ್ಮವಿಶಿಷ್ಟನಾದ ಆದಿತ್ಯನು ಸಕಲಕರ್ಮಗಳಲ್ಲಿ ಇಂದ್ರನಂತೆ ಸ್ತೋತ್ರಾದಿಗಳನ್ನು ಹೊಂದಲಿ. ಯಾವ ಇಂದ್ರನು ವೃತ್ರವಧಾದಿರೂಪ ತನ್ನ ಅಧಿಕಾರವನ್ನು ಪ್ರಕಟಪಡಿಸುತ್ತಾ ಸ್ವರಾಜ್ಯವನ್ನು ಹೊಂದಿರುವನೋ.

ಯಮಥರ್ವಾ ಚ ಮನುಶ್ಚ ಪಿತಾ ಮಾನವಾನಾಂ ದಧ್ಯಙ್ ಚ
ಧಿಯ ಮತನಿಷತ । ತಸ್ಮಿನ್ ಬ್ರಹ್ಮಾಣಿ ಕರ್ಮಾಣಿ ಪೂರ್ವೇಂದ್ರ
ಉಕ್ಥಾನಿ ಚ ಸಂಗಚ್ಛಂತಾಮರ್ಚನ್ನ್ಯೋನೂಪಾಸ್ತೇ ಸ್ವಾರಾ
ಜ್ಯವತ್ ॥ ೩೪ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಧೀ ಕರ್ಮನಾಮದಲ್ಲಿ ಪಠಿತವಾಗಿದೆ. (ನಿಘ ೨-೧) ಬ್ರಹ್ಮ ಅನ್ನನಾಮದಲ್ಲಿ ಪಠಿತವಾಗಿದೆ. (ನಿಘ-೨-೭) ಅತ್ನತ ಎಂಬಲ್ಲಿ ಛಾಂದಸವಾಗಿ ವಿಕರಣಕ್ಕೆ ಲುಕ್ ಬಂದಿದೆ. ಪೂರ್ವೇಂದ್ರ ಎಂಬಲ್ಲಿ ಪೂರ್ವಸ್ಮಿನ್ ಇಂದ್ರ ಇವ ಎಂದರ್ಥವಾಗುವುದರಿಂದ ಇವ ಶಬ್ದಕ್ಕೆ ಆರ್ಷವಾಗಿ ಲೋಪ ಬಂದಿದೆ ಅಥವಾ ರೂಪಕವೆಂದು ತಿಳಿಯಬೇಕು.

ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ । ತಸ್ಮಿ-
ನ್ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು
ಸ್ವರಾಜ್ಯಂ ॥ ೧೬ ॥

(ವೃತ್ರವಧಾದಿಗಳಿಂದ) ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಿರುವ ಇಂದ್ರನಿಗೆ, ಅಥರ್ವನೆಂಬ ಋಷಿಯೂ (ಮಾನವ ವರ್ಗಕ್ಕೇ) ಪಿತೃವಾದ ಮನುವೂ ಮತ್ತು ದಧೀಚಿಋಷಿಯೂ ಇವರುಗಳು (ಅರ್ಪಿಸಿದ) ಹವಿಸ್ಸುಗಳು, ಶಸ್ತ್ರರೂಪವಾದ ಸ್ತುತಿ ವಾಕ್ಯಗಳೂ, ಹಿಂದೆ (ವಸಿಷ್ಠಾದಿಗಳು ಮಾಡಿದ ಯಜ್ಞದಲ್ಲಿ ಇಂದ್ರನಿಗೇ ಸೇರಿದಂತೆ) ಸೇರಿದವು.

ಮನುಃ—ಅಶ್ವಿನೌ, ಉಷಾಃ ಮೊದಲಾದ ಮಧ್ಯಸ್ಥಾನುದೇವತಾ ಪದಗಳಲ್ಲಿ ಮನುಃ, ದಧ್ಯಙ್, ಅಥರ್ವಾ ಎಂಬ ಪದಗಳು (ನಿ. ೧೨-೩೪) ಪಠಿತವಾಗಿರುತ್ತವೆ. ಅಥರ್ವಾ ಎಂಬ ಋಷಿಯೂ, ಮನು ಎಂಬುವನೂ ದಧ್ಯಙ್ ಅಥರ್ವನೆಂಬ ಋಷಿಯೂ ಕೂಡ ಆಚರಿಸಿ ಇರುವ ಕ್ರಮವು ಎಲ್ಲವೂ ಇಂದ್ರನಿಗೆ ಸಂಬಂಧಪಟ್ಟವುಗಳಾಗಿ ಇರುತ್ತವೆ.

ಉಕ್ಥಾ —ಯಜ್ಞಗಳಲ್ಲಿ ಆಯಾಯ ದೇವತೆಗಳ ಮಹಿಮೆಯನ್ನು ಪ್ರಕಟಗೊಳಿಸುವ ಸ್ತೋತ್ರಗಳು.

ಬ್ರಹ್ಮಾಣಿ—ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಹೋಮಮಾಡುವ ಹವಿಸ್ಸೇ ಮೊದಲಾದವುಗಳು ಎಂದು ಅರ್ಥವು.

ಪೂರ್ವಥಾ—ಈ ಪದದಿಂದ ದೃಷ್ಟಾಂತ ದಾರ್ಷ್ಟಾಂತಿಕಭಾವವು ತೋರಿಬರುವುದು. ಪೂರ್ವಿಕರಾದ ವಸಿಷ್ಠರೇ ಮೊದಲಾದ ಋಷಿಗಳು ಯಜ್ಞಗಳನ್ನು ಮಾಡಿದ ಕಾಲದಲ್ಲಿ ಹವಿಸ್ಸುಗಳೂ, ಸ್ತೋತ್ರಗಳೂ ಇಂದ್ರನಿಗೆ ಸಂಬಂಧಪಟ್ಟು ಇದ್ದಂತೆಯೂ, ಮನು, ದಧ್ಯಙ್, ಅಥರ್ವ ಎಂಬ ಋಷಿಗಳು ಆಚರಿಸಿದ ಕ್ರಮದಂತೆಯೂ, ಸ್ತೋತ್ರಾದಿಗಳು ಇಂದ್ರನಿಗೆ ಸಂಬಂಧಿಸಿರುವುವು ಎಂದು ತಾತ್ಪರ್ಯ.

ಅರ್ಚನ್ ಅನು ಸ್ವರಾಜ್ಯಂ—ಇಂದ್ರನು ತಾನು ರಾಜನಾಗಿರುವಿಕೆಯನ್ನು ಅನುಸರಿಸಿ ಅದಕ್ಕೆ ಗೌರವಿಸಿ ವೃತ್ರ ವಧೆಯೇ ಮೊದಲಾದ ಕರ್ಮಗಳನ್ನು ಮಾಡುತ್ತಾ ತನ್ನ ಆಧಿಪತ್ಯವನ್ನು ಪ್ರಕಟಗೊಳಿಸುತ್ತಿರುವನೆಂದು ಅರ್ಥವನ್ನು ವಿವರಿಸಿರುವರು.

ದಧ್ಯಙ್—ಪ್ರತ್ಯಕ್ತೋ ಧ್ಯಾನಮಿತಿ ವಾ। ಧ್ಯಾನವನ್ನು ಆರಂಭಿಸುವುವರಲ್ಲಿ ತನ್ನ ಅರ್ಹತೆಯನ್ನು ಹೊಂದಿರುವ ವನು. ಇವನಲ್ಲಿ ಧ್ಯಾನದ ಸಕಲಕಾರ್ಯಗಳೂ ಹೊಂದಲ್ಪಡುವವು. ದಧ್ಯಙ್, ಅಥರ್ವಾ, ಮನುಃ ಎಂಬ ಈ ಪದಗಳಿಂದ ಬೋಧ್ಯರಾಗಿರುವವರು ಮೂವರೂ ಒಬ್ಬನೇ ಆಗಿರುವನೆಂದು ಹೇಳುವುದಾದರೆ ಆದಿತ್ಯನೆಂದು ಅರ್ಥವು. ಇವರು ಮೂವರೂ ಬೇರೆ ಬೇರೆಯಾಗಿರುವರೆಂದು ಹೇಳುವುದಾದರೆ ಪುನಃ ದ್ಯುಸ್ಥಾನವುಳ್ಳವರಾದ ಮೂರುಜನ ಋಷಿಗಳು ಎಂದು ತಿಳಿಯಬೇಕು. ಎಂದು ನಿರುಕ್ತದಲ್ಲಿ ವ್ಯಾಖ್ಯಾನಮಾಡಿರುವರು.

ದಧ್ಯಙ್—ದಧ್ಯಂಚ್ ಅಥವಾ ದಧೀಚಿ ಎಂಬ ಋಷಿ ಯು ಪುರಾಣಾದಿಗಳಲ್ಲಿ ಪ್ರಸಿದ್ಧನಾದವನು. ಭಾಷ್ಯಕಾರರು ಇಲ್ಲಿ ಉಪಾಖ್ಯಾನವನ್ನು ಹೇಳಿರುವ—ಅಥರ್ವನೆಂಬುವನ ಪುತ್ರನಾದ ದಧ್ಯಂಚ್ ಎಂಬ ಋಷಿಯು ಜೀವಿಸಿದ್ದಾಗ ಅವನ ದರ್ಶನ ದಿಂದ ಅಸುರರು ಭೀತರಾಗಿ ಓಡಿಹೋಗಿದ್ದರು. ಅವನು ಮೃತನಾಗಿ ಸ್ವರ್ಗಕ್ಕೆ ಹೋದ ಬಳಿಕ ಅಸುರರು ನಿರ್ಭಯವಾಗಿ ಭೂಮಿ ಯೆಲ್ಲವನ್ನೂ ವ್ಯಾಪಿಸಿದರು. ಬಳಿಕ ಇಂದ್ರನು ಈ ಅಸುರರೊಡನೆ ಯುದ್ಧಮಾಡಲಶಕ್ತನಾಗಿ ಆ ಋಷಿಯನ್ನು ಹುಡುಕಿದನು. ಋಷಿಯು ಸ್ವರ್ಗಸ್ಥನಾದನೆಂದು ತಿಳಿಯಬಂದಿತು. ಆಗ ಇಂದ್ರನು ಸಮೀಪದಲ್ಲಿದ್ದವರನ್ನು ಕುರಿತು ಆ ಋಷಿಯ ಅಂಗಗಳಲ್ಲಿ ಯಾವುದಾದರೂ ಅವಶೇಷವಿದೆಯೇ ಎಂದು ಕೇಳಲು ಆಗ ಅವರು —ದಧೀಚಿಯು ಒಂದಾನೊಂದು ಕಾಲದಲ್ಲಿ ಅಶ್ವಿನೀದೇವತೆ ಗಳಿಗೆ ಮಧುವಿದ್ಯವನ್ನು ಕಲಿಸಿದ ಕುದುರೆಯ ತಲೆಬುರುಡೆಯು ಮಾತ್ರ ಇರುವುದೆಂದೂ, ಅದೂ ಸಹ ಎಲ್ಲಿರುವುದೋ ಗೊತ್ತಿಲ್ಲ ವೆಂದೂ ಹೇಳಿದರು. ಆಗ ಇಂದ್ರನು ಅದನ್ನು ಹುಡುಕುವಂತೆ ಅವರಿಗೆ ಹೇಳಲು, ಅವರು ಅದು ಕುರುಕ್ಷೇತ್ರದ ಸಮೀಪ ದಲ್ಲಿರುವ ಶರ್ಯಣಾವತ್ ಎಂಬ ಸರೋವರದಲ್ಲಿ ಬಿದ್ದಿರುವುದನ್ನು ಹುಡುಕಿ ತೆಗೆದುಕೊಂಡು ಬಂದರು. ಇಂದ್ರನು ಆ ತಲೆ ಬುರುಡೆಯ ಮೂಳೆಗಳಿಂದ ಅಸುರನನ್ನು ಜಯಿಸಿದನು ಎಂದರೆ, ಒಂಭತ್ತುಸಲ ತೊಂಭತ್ತು ಎಂದರೆ ಎಂಟನೂರು ಹತ್ತಾವರ್ತಿ ಅಸುರರ ಮಾಯಾಜಾಲವನ್ನು ವಿಫಲಗೊಳಿಸಿದನು. ಇಲ್ಲಿ ಒಂಭತ್ತು ಸಲ ತೊಂಭತ್ತು ಎಂಬ ಸಂಖ್ಯೆಯನ್ನು ವಿವರಿಸುವಾಗ ಭಾಷ್ಯಕಾರರು—ಮೂರು ಲೋಕಗಳಲ್ಲಿರುವ ದೇವತೆಗಳನ್ನು ಜಯಿಸಲು ಮೊದಲು ಅಸುರರಿಗೆ ಮೂರು ವಿಧವಾದ ಮಾಯಾ ಭೇದಗಳಿದ್ದವು. ಅವುಗಳಲ್ಲಿ ಒಂದೊಂದೂ ವರ್ತಮಾನ ಭೂತ ಭವಿಷ್ಯತ್ ಎಂದು ಮೂರುವಿಧವಾಗಿದ್ದುದರಿಂದ ಒಟ್ಟು ಒಂಭತ್ತು ವಿಧಗಳಾದವು ಮತ್ತೆ ಆ ಒಂಭತ್ತು ಮಾಯೆಗಳು ಉತ್ಸಾಹಾದಿ ಶಕ್ತಿತ್ರಯಗಳಿಂದ ಕೂಡಿ ೯×೩ = ೨೭ ಆದುವು. ಮತ್ತೆ ಅವು ಸಾತ್ವಿಕಾದಿ ಗುಣತ್ರಯಗಳಿಂದ ಕೂಡಿ ೨೭×೩= ೮೧ ಆದುವು. ಈ ಎಂಭತ್ತೊಂದು ಮಾಯೆಗಳು ದಶದಿಕ್ಕುಗಳಲ್ಲಿ ಆಚರಿಸ ಲ್ಪಡುವುದರಿಂದ ಒಟ್ಟು ೮೧×೧೦= ೮೧೦ ಅಥವಾ ಒಂಭತ್ತುಸಲ ತೊಂಭತ್ತು ೯×೯೦= ೮೧೦ ಆದುವು. ಈ ವಿಧವಾದ ವೃತ್ರರೂಪವಾದ ಅಸುರರ ಮಾಯಾಜಾಲಗಳನ್ನು ಇಂದ್ರನು ನಿರರ್ಥಕಗೊಳಿಸಿದನು ಎಂದು ವಿವರಿಸಿರುವರು.

ಸ್ಕಂದಸ್ವಾಮಿಯು ಬೇರೊಂದು ಇತಿಹಾಸವನ್ನು ಹೇಳಿರುವರು—ಪೂರ್ವದಲ್ಲಿ ಕಾಲಕಂಜರೆಂಬ ಅಸುರರಿದ್ದರು, ಅವರು ಪ್ರಬಲರಾಗಿ ದೇವತೆಗಳನ್ನು ಕೊಲ್ಲುತ್ತಾ ತುಂಬಾ ತೊಂದರೆಕೊಡುತ್ತಿದ್ದರು. ಆಗ ದೇವತೆಗಳು ಬ್ರಹ್ಮನ ಸಮೀಪಕ್ಕೆ ಹೋಗಿ ಈ ಅಸುರರನ್ನು ಸಂಹಾರಮಾಡಲು ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಲು ಬ್ರಹ್ಮನು—ಎಲೈ ದೇವತೆಗಳಿರಾ, ದಧ್ಯಙ್ ಎಂಬ ಋಷಿಯು ಇರುವನು. ನೀವು ಅವನ ಸಮೀಪಕ್ಕೆ ಹೋಗಿರಿ, ಅವನು ಅಸುರರ ಸಂಹಾರ ವಿಷಯದಲ್ಲಿ ತಕ್ಕ ಉಪಾಯ ವನ್ನು ತಿಳಿಸುವನು ಎಂದನು. ದೇವತೆಗಳು ಬ್ರಹ್ಮನ ಮಾತಿನಂತೆ ದಧೀಚಿ ಋಷಿಯ ಸಮೀಪಕ್ಕೆ ಹೋಗಿ ಬ್ರಹ್ಮನು

ತಮ್ಮನ್ನು ಕಳಹಿಸಿರುವನೆಂದು ಅರಿಕೆಮಾಡಿದರು. ಆ ಋಷಿಯು ಯೋಗದೃಷ್ಟಿಯಿಂದ ಅವರು ಬಂದ ಕಾರ್ಯವನ್ನು ತಿಳಿದು ಯೋಗಸಮಾಧಿಯಿಂದ ತನ್ನ ಪ್ರಾಣಗಳನ್ನು ವಿಸರ್ಜಿಸಿದನು. ಆಗ ಆ ಋಷಿಯ ಮೂಳೆಗಳಿಂದ ಇಂದ್ರನು ಅಸುರರನ್ನು ಸಂಹಾರಮಾಡಿದನು. ಈ ವಿಷಯವೇ ಈ ಋಕ್ಕಿನಲ್ಲಿ ವಿವರಿಸಲ್ಪಟ್ಟಿರುವುದೆಂದು ಸ್ಕಂದಸ್ವಾಮಿಯು ಹೇಳಿರುವರು.

ದಧೀಚಿಋಷಿಯ ತಲೆಯು ಕುದುರೆಯ ತಲೆಯಹಾಗಿದ್ದಿತೆಂದೂ ಅದು ಅಶ್ವಿನಿದೇವತೆಗಳಿಂಡ ಅವನಿಗೆ ಕೊಡಲ್ಪಟ್ಟದ್ದಿತೆಂದೂ ಪ್ರತೀತಿ ಇರುವುದು. ದಧೀಚಿಋಷಿಯು ಮೃತನಾದಮೇಲೆ ಕುದುರೆಯ ತಲೆಯಂತಿದ್ದ ಅವನ ಶಿರಸ್ಸನ್ನು ಇಂದ್ರನು ಹುಡುಕಿದನು. ಅದು ಒಂದು ಪರ್ವತದ ಮರೆಯಲ್ಲಿ ಶರ್ಯಣಾವತಿ ಎಂಬ ಒಂದು ಸರೋವರದಲ್ಲಿ ಸಿಕ್ಕಿತೆಂದು ಋ. ಸಂ ೧–೮೪–೧೩ ರಲ್ಲಿ ವಿವರಿಸಲಾಗಿರುವುದು.

ದಧೀಚಿಋಷಿಗೆ ಕುದುರೆಯ ಶಿರಸ್ಸು ಹೇಗೆ ಬಂದಿತೆಂಬ ವಿಚಾರದಲ್ಲಿ ಸ್ಕಂದಸ್ವಾಮಿಯು ಒಂದು ಪೂರ್ವೇತಿಹಾಸವನ್ನು ಹೇಳಿರುವರು.—ಅಥರ್ವಣ ಪುತ್ರನಾದ ದಧೀಚಿಋಷಿಗೆ ಇಂದ್ರನು ಮಧುವೆಂಬ ಪರಬ್ರಹ್ಮನ ಸ್ವರೂಪವನ್ನು ಉಪದೇಶಮಾಡಿ ಇದನ್ನು ಯಾರಿಗೂ ಹೇಳಕೂಡದೆಂದೂ ಹಾಗೆ ಒಂದು ವೇಳೆ ಹೇಳಿದರೆ ನಿನ್ನ ತಲೆಯು ಬಿದ್ದುಹೋಗುವುದೆಂದೂ ಹೇಳಿದ್ದನು. ಕೆಲವು ಕಾಲದಮೇಲೆ ಅಶ್ವಿನಿದೇವತೆಗಳು ಆ ದಧೀಚಿಋಷಿಯ ಸಮೀಪಕ್ಕೆ ಬಂದು, ಇಂದ್ರನು ನಿನಗೆ ತಿಳಿಸಿದ ಬ್ರಹ್ಮಸ್ವರೂಪವನ್ನು ವಿವರಿಸೆನಲು, ದಧೀಚಿಯು ಅವರನ್ನು ಕುರಿತು ಈ ವಿಷಯವನ್ನು ನಾನು ನಿಮಗೆ ತಿಳಿಸಿದಲ್ಲಿ ನನ್ನ ತಲೆ ಬಿದ್ದುಹೋಗುವುದೆಂದು ಇಂದ್ರನು ಹೇಳಿರುವನು. ಆ ಭಯದಿಂದ ನಾನು ಹೇಳುವುದಿಲ್ಲವೆನ್ನಲು, ಅಶ್ವಿನಿದೇವತೆಗಳು ಅದಕ್ಕಾಗಿ ಚಿಂತಿಸಬೇಡ, ನಿನ್ನ ತಲೆಯು ಬಿದ್ದುಹೋದರೆ ನಮ್ಮ ತಲೆಯನ್ನು ನಿನಗೆ ಕೊಡುವೆವೆಂದರು. ದಧೀಚಿಯು ಅದಕ್ಕೆ ಸಮ್ಮತಿಸಿ ಹೇಳಿದನು ಅದರಿಂದ ದಧೀಚಿಯ ಶಿರಸ್ಸು ಬಿದ್ದುಹೋಗಲು ಅಶ್ವಿನಿದೇವತೆಗಳು ಒಂದು ಕುದುರೆಯ ಶಿರಸ್ಸನ್ನು ಕತ್ತರಿಸಿ ತಂದು ದಧೀಚಿಯ ಶರೀರಕ್ಕೆ ಸೇರಿಸಿದರು. ಅದರಿಂದ ದಧೀಚಿಋಷಿಯ ಶಿರಸ್ಸು ಕುದುರೆಯ ಶಿರಸ್ಸಿನಂತಿರುವುದು ಎಂದು ವರ್ಣಿತವಾಗಿದೆ. ಈ ವಿಷಯವನ್ನು ಕಕ್ಷಿವಾನ್ ಎಂಬ ಋಷಿಯು ಋ. ಸಂ. ೧–೧೧೭–೨೨ ಋಕ್ಕಿನಲ್ಲಿ ವರ್ಣಿಸಿರುವನು.

ಈ ಋಷಿಯ ಹೆಸರು ಋಗ್ವೇದ ಸಂಹಿತೆಯಲ್ಲಿ ೧–೮೦–೧೬; ೧–೮೪–೧೩; ೧–೮೪–೧೪; ೧–೧೧೬–೧೨, ೧–೧೧೭–೨೨, ೧–೧೧೯–೯ ಮೊದಲಾದ ಋಕ್ಕುಗಳಲ್ಲಿಯೂ ತೈತ್ತಿರೀಯ, ಸಂಹಿತಾ, ೫–೧–೪–೪; ೫–೬–೬–೩ ಕಾಠಕ ಸಂಹಿತಾ ೧೯–೪: ಶತಪಥಬ್ರಾಹ್ಮಣ ೪–೧–೧೪–೫; ೬–೪–೨–೩; ೧೪–೧–೧–೧೮, ೧೪–೧–೧–೨೦ ೧೫–೧–೧–೨೫. ೧೪–೧–೪–೧೩, ಬೃಹದಾರಣ್ಯಕೋಪನಿಷತ್ ೨–೫–೨೨ , ೬–೫–೨೮ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ.

ಅಥರ್ವಾ—ಅಥವಾ ಎಂಬ ಹೆಸರಿನ ಋಷಿಯು ಪ್ರಸಿದ್ಧವಾದ ಒಂದು ಋಷಿವಂಶಕ್ಕೆ ಮೂಲ ಪುರುಷನು. ಈ ಶಬ್ದದ ಬಹುವಚನಪ್ರಯೋಗವಿರುವ ಸ್ಥಳಗಳಲ್ಲಿ ಈ ಋಷಿಯ ವಂಶಸ್ಥರೆಂದು ಅರ್ಥವು. ಕೆಲವುಕಡೆ ಎಂದರೆ—

ದಶ ರಥಾನ್ ಪ್ರಷ್ಟಿಮತಃ ಶತಂ ಗಾ ಅಥರ್ವಭ್ಯಃ ।
ಅಶ್ವಥಃ ಪಾಯವೇಽದಾತ್ ॥

(ಋ. ಸಂ. ೬–೪೭–೨೪)

ಮೊದಲಾದ ಋಕ್ಕುಗಳಲ್ಲಿ ಅಶ್ವಥನೆಂಬ ರಾಜನು ಅಥರ್ವವಂಶದವರಿಗೆ ರಥ, ಗೋವುಗಳ ಮೊದಲಾದವುಗಳನ್ನು ಕೊಟ್ಟ ದಾನಸ್ತುತಿಯ ಪ್ರಶಂಸೆ ಇರುವುದು.

ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ ।
ದೇವಂ ದೇವಾಯ ದೇವಯು ॥

(ಋ. ಸಂ. ೯-೧೧-೨)

ಎಂಬ ಋಕ್ಕಿನಲ್ಲಿ ಈ ಅಥರ್ವವಂಶದವರು ಸೋಮನಿಗೆ ಹಾಲನ್ನು ಬೆರೆಸಿದ ಸೋಮರಸವನ್ನು ಅರ್ಪಿಸಿದ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಈ ಋಷಿಯ ಹೆಸರು—

ಯಜ್ಞೈರಥರ್ವಾ ಪ್ರಥಮಃ ಪಥಸ್ತತೇ ತತಃ ಸೂರ್ಯೋ ವ್ರತಪಾ ವೇನ ಆಜನಿ ।

(ಋ. ಸಂ. ೧-೮೩-೫).

ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।

(ಋ. ೬-೧೬-೧೩).

ಏವಾ ಮಹಾನ್ಬೃಹದ್ದಿವೋ ಅಥರ್ವಾವೋಚತ್ಸ್ವಾಂ ತನ್ವ ೧ ಮಿಂದ್ರಮೇವ ।

(ಋ. ಸಂ. ೧೦-೧೨೦-೯).

ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು. ಈ ಅಥರ್ವಋಷಿಯ ವಂಶಸ್ಥನಾದ ಬೃಹದ್ದಿವ ಎಂಬ ಋಷಿದೃಷ್ಟವಾದ ಇಂದ್ರದೇವತಾಕವಾದ ಒಂದು ಸೂಕ್ತವು ಋಗ್ವೇದದ ಹತ್ತನೆಯ ಮಂಡಲದಲ್ಲಿ (ಋ. ಸಂ. ೧೦-೧೨೦) ಇರುವುದು.

ಮನುಃ— ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ. ಮನುವು ಮಾನವ ಕುಲಕ್ಕೆ ಮೂಲಪುರುಷನೆಂದೂ ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿಯಬರುವುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಅವನಿಗೆ ಯಾವ ದಯಾಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸ ಮುಗಿಸಿಕೊಂಡು ಬಂದು ತಂದೆಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಇವನನ್ನು—ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರು ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು ಹೇಳಿಕಳುಹಿಸಿದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ ವಿವರಿಸಿರುವುದು. ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩: ೬-೫-೧೫-೩; ೨-೫-೯-೧; ೨-೬-೭-೧; ೩-೩-೨-೧; ೫-೪-೧೦-೫; ೬-೬-೬-೧.) ಕಾಠಕಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨) ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು.

ಮನುವಿಗೆ ವಿವಸ್ವಾನ್ (ಋ. ಸಂ. ೮-೫೨-೧) ಎಂದೂ ವಿವಸ್ವಂತನ (ಒಬ್ಬ ದೇವತೆ) ಮಗನಾದುದರಿಂದ ವೈವಸ್ವತನೆಂದೂ (ಅಥ. ೮-೧೦ ೨೪; ಶತ. ಬ್ರಾ. ೧೩-೪-೩-೩) ಸವರ್ಣಾ ಎಂಬುವಳ ವಂಶಸ್ಥನಾದುದರಿಂದ ಸಾವರ್ಣಿ ಎಂದೂ. ಸಂವರಣನ ವಂಶಸ್ಥನಾದುದರಿಂದ ಸಾಂವರಣಿ (ಋ. ಸಂ. ೮-೫೧-೧) ಎಂದೂ ಅನೇಕ ಹೆಸರುಗಳಿವೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

# ಅಥ ಪಂಚತ್ರಿಂಶತ್ ಖಂಡಃ

## ಮೂವತ್ತೈದನೆಯ ಖಂಡ

ಅಥಾತೋ ದ್ಯುಸ್ಥಾನಾ ದೇವಗಣಾಸ್ತೇಷಾಮಾದಿತ್ಯಾಃ ಪ್ರಥಮಾಗಾಮಿನೋ ಭವಂತ್ಯಾದಿತ್ಯಾ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೩೫ ||

ಅಥಾತೋ ದ್ಯುಸ್ಥಾನಾ ದೇವಗಣಾಃ ||

ಇನ್ನು ಮುಂದೆ ಈ ಉತ್ತಮ ಜ್ಯೋತಿರೂಪಾದಿತ್ಯನೇ ಗಣ ಶಬ್ದದಿಂದ ವಿವರಿಸಲ್ಪಡುತ್ತಾನೆ. ಗುಣವಿಕಾರದಿಂದ ಮಂತ್ರದೃಷ್ಟಃ ಋಷಿಗಳು ಭೇದಾಭೇದ ದೃಷ್ಟಿಯಿಂದ ವೀಕ್ಷಿಸಿ ಸ್ತುತಿಸುತ್ತಾರೆ. ವಿಶೇಷಾಧಿಕಾರವನ್ನು ತಿಳಿಸಲು ಅಥ ಶಬ್ದ ಹೇಳಿದೆ. ಮಿತ್ರ ಮುಂತಾದ ದೇವತೆಗಳ ಸಮುದಾಯಕ್ಕೆ ದೇವಗಣಗಳೆಂದು ಹೆಸರು. ಪೃಥಕ್ತ್ವಪಕ್ಷದಲ್ಲಿ ಬಹುವಚನ ಸಂಗತ ವಾಗುತ್ತದೆ- ಇವರು ಆದಿತ್ಯಸ್ವರೂಪರೇ ಆದುದರಿಂದ ಇವರಿಗೆ ದ್ಯುಲೋಕವೇ ಸ್ಥಾನವಾಗಿರುತ್ತದೆ.

ತೇಷಾಮಾದಿತ್ಯಾಃ ಪ್ರಥಮಾಗಾಮಿನೋ ಭವಂತಿ ||

ಮಿತ್ರಾದಿದೇವಗಣದಲ್ಲಿ ಆದಿತ್ಯರು ಪ್ರತ್ಯಕ್ಷವಾಗುವುದರಿಂದ ಮೊದಲು ಉಪಸ್ಥಿತರಾಗುತ್ತಾರೆ. ಇತರ ಸಪ್ತಋಷಿ ಮುಂತಾದ ವರು ಪ್ರತ್ಯಕ್ಷಗೋಚರವಾಗದಿರುವುದರಿಂದ ಪರೋಕ್ಷರಾಗಿರುತ್ತಾರೆ.

ಆದಿತ್ಯಾ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೩೫ ||

ಆದಿತ್ಯರು ಹಿಂದೆ ಅಭಿಧಾನ ನಿರ್ವಚನದಿಂದ ವ್ಯಾಖ್ಯಾತರಾಗಿರುತ್ತಾರೆ (ನಿ. ೨-೧೩) ಇಲ್ಲಿ ಬಹುವಚನಮಾತ್ರ ವಿಶೇಷವೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ಆದಿತ್ಯರ ಪ್ರಧಾನಸ್ತುತಿಯನ್ನು ತಿಳಿಸುತ್ತದೆ. ಅದರಲ್ಲಿ ಇವರು ದ್ಯುಸ್ಥಾನದಲ್ಲಿದ್ದು ಗಣವೆಂಬ ಹೆಸರಿನಿಂದ ಪ್ರತಿಪಾದಿತರಾಗಿರುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ಮೂವತ್ತೈದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಟ್‌ತ್ರಿಂಶಂತ್ ಖಂಡಃ

### ಮೂವತ್ತಾರನೆಯ ಖಂಡವು

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ। ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ (ಋ. ಸಂ. ೨-೨೭- ೧) ॥ ಘೃತಸ್ನೂರ್ಘೃತಪ್ರಸ್ನಾವಿನ್ಯೋ ಘೃತಪ್ರಸ್ರಾವಿಣ್ಯೋ ಘೃತಸಾನಿನ್ಯೋ ಘೃತಸಾರಿಣ್ಯ ಇತಿ ವಾಹುತೀರಾದಿತ್ಯೇಭ್ಯಶ್ಚಿರಂ ಜುಹ್ವಾ ಜುಹೋಮಿ ಚಿರಂ ರಾಜಭ್ಯ ಇತಿ ವಾ ಶೃಣೋತುನ ಇಮಾ ಗಿರೋ ಮಿತ್ರಶ್ಚಾರ್ಯಮಾ ಚ ಭಗಶ್ಚ ಬಹುಜಾತಶ್ಚ ಧಾತಾ ದಕ್ಷೋವರುಣೋಂಶಶ್ಚಾಂಶೋಂಶುನಾ ವ್ಯಾಖ್ಯಾತಃ ಸಪ್ತ ಋಷಯೋ ವ್ಯಾಖ್ಯಾ ತಾಸ್ತೇಷಾಮೇಷಾ ಭವತಿ ॥ ೩೬ ॥

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ
ಜುಹ್ವಾ ಜುಹೋಮಿ ॥ ಶೃಣೋತು ಮಿತ್ರೋ ಅರ್ಯಮಾ
ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥

(ಋ. ಸಂ. ೨-೨-೬)

ಆದಿತ್ಯರ ಪ್ರಧಾನಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ನಾನು (ಹೋತೃ) ವಿರಾಜಿಸುತ್ತಿರುವ ಅದಿತಿ ಪುತ್ರರಾದ ಮಿತ್ರಾದಿಗಳಿಗೆ ಆಹುತಿಯನ್ನು ತಿಳಿಸುವ ಸ್ತುತಿಲಕ್ಷಣವಾದ ವಾಕ್ಕಿನಿಂದಲೂ ಯಾವಾಗಲೂ ಜುಹೂಸಂಜ್ಞಕ ಪಾತ್ರೆಯಿಂದಲೂ ಹೋಮಿಸಿ ಪೂಜಿಸುತ್ತೇನೆ. ನಮ್ಮ ಆಶೀರ್ಯುಕ್ತವಾದ ಸ್ತುತಿಮಂತ್ರಗಳನ್ನು ಮಿತ್ರಾದಿಗಳು ಪ್ರತ್ಯೇಕವಾಗಿ ಕೇಳಲಿ.

ಘೃತಸ್ನೂರ್ಘೃತಪ್ರಸ್ನಾವಿನ್ಯೋ ಘೃತಪ್ರಸ್ರಾವಿಣ್ಯೋ ಘೃತಸಾ-
ನಿನ್ಯೋ ಘೃತಸಾರಿಣ್ಯ ಇತಿ ವಾ, ಆಹುತೀರಾದಿತ್ಯೇಭ್ಯಶ್ಚಿರಂ
ಜುಹ್ವಾ ಜುಹೋಮಿ, ಚಿರಂಜೀವಿನಾಯ ರಾಜಭ್ಯ ಇತಿ ವಾ,
ಶೃಣೋತು ನ ಇಮಾ ಗಿರೋ ಮಿತ್ರಶ್ಚಾರ್ಯಮಾ ಚ ಭಗಶ್ಚ
ಬಹುಜಾತಶ್ಚ ಧಾತಾ ದಕ್ಷೋ ವರುಣೋಂಶಶ್ಚ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ ಷ್ಣು-ಪ್ರಸ್ರವಣೇ ಧಾತುವಿಗೆ ತಾಚ್ಛೀಲ್ಯಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬಂದು ಘೃತಸ್ನೂ ಎಂದಾಗಿದೆ. ನಾನಾರೀತಿಯಾಗಿ ಅದರ ಅರ್ಥವನ್ನು ವಿವರಿಸುತ್ತಾರೆ. ಆಹುತಿ ಲಕ್ಷಣವಾದ ಘೃತತವನ್ನು ಸುರಿಸುವವು ಗಳುಎಂದರ್ಥ. ಘೃತಪ್ರಸ್ರಾವಿಣ್ಯ ಎಂಬಲ್ಲಿ ಧಾತುಮಾತ್ರ ಬೇರೆ, ಅರ್ಥ ಮೊದಲಿನಂತೆಯೇ ತಿಳಿಯಬೇಕು. ಘೃತಂ

ಸಾನಯಂತಿ ಇತಿ ಘೃತಸಾನಿನ್ಯಃ ಸಂಭಜನಾರ್ಥಕ ಸನಧಾತುವಿನಿಂದ ಈ ರೂಪ ನಿಷ್ಪನ್ನವಾಗಿದೆ, ದೇವತೆಗಳಿಗೋಸ್ಕರ ಘೃತದಿಂದ ಪೂಜಿಸುವವುಗಳೆಂದರ್ಥ. ಅಥವಾ ಗತ್ಯರ್ಥಕ ಸೃಧಾತುವಿನ ರೂಪ. ದೇವತೆಗಳಿಗೆ ಘೃತವು ಸೇರುವಂತೆ ಮಾಡುವುದು ಎಂದರ್ಥ. ಸನಾತ್ ಅವ್ಯಯ. ಜೀವಿತಕಾಲಾವಧಿಯವರೆಗೆ ಎಂದರ್ಥ. ಇದು ಕ್ರಿಯಾವಿಶೇಷ. ನಾಮವಿಶೇಷಣದಿಂದಲೂ ಅರ್ಥ ವಿವರಿಸುತ್ತಾರೆ. ಬಹುಕಾಲವಿದ್ದು ವಿರಾಜಿಸುವವರಿಗೆ ಎಂದರ್ಥ. ತುವಿ ಬಹುನಾಮದಲ್ಲಿ ಹೇಳಿದೆ (ನಿಘ. ೩-೧). ಸರ್ವವಿಧಾತನಾದುದರಿಂದ ಬಹುಜನ್ಯವುಳ್ಳವನೆಂದರ್ಥ.

ಅಂಶೋಂ ಶುನಾ ವ್ಯಾಖ್ಯಾತಃ ||

ಮಂತ್ರದಲ್ಲಿರುವ ಅಂಶವೆಂಬ ಪದವು ಅಂಶುಪದವಾದೊಡನೆ ಹಿಂದೆ ವ್ಯಾಖ್ಯಾತವಾಗಿದೆ (ನಿ. ೨-೫). ಇಲ್ಲಿ ಪ್ರತ್ಯೇಕ ವಾಗಿಯೂ ಈ ಮಿತ್ರಾದಿಗಳು ದ್ಯುಸ್ಥಾನದಲ್ಲಿರುವರೆಂದು ತಿಳಿಯಬೇಕು. ಶಾಸ್ತ್ರಗೌರವದಿಂದ ಬೇರೆಬೇರೆಯಾಗಿ ದ್ಯುಸ್ಥಾನ ರೆಂದು ಹೇಳಿಲ್ಲ. ಆದಿತ್ಯ ಲಿಂಗೋಪೇತ ಮಂತ್ರಗಳಲ್ಲಿ ಬೇರೆಬೇರೆಯಾಗಿ ಅವರನ್ನು ತಿಳಿಯಬೇಕು.

ಸಪ್ತ ಋಷಯೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೩೬ ||

ಕ್ರಮಪ್ರಾಪ್ತವಾದ ಸಪ್ತಋಷಿಗಳ ನಿರ್ವಚನ ತೋರಿಸುತ್ತಾರೆ. ಇವರು ಹಿಂದೆ (ನಿ. ೧೦-೨೬) ವ್ಯಾಖ್ಯಾತರಾಗಿದ್ದಾರೆ. ಇಲ್ಲಿ ಸಪ್ತಋಷಿಗಳು ಅಂದರೆ ರಶ್ಮಿಗಳೆಂದು ತಿಳಿಯಬೇಕು. ಅಥವಾ ಮನಸ್ಸು ಆರನೆಯ, ವಿದ್ಯಾ ಏಳನೆಯದಾಗಿರುವ ಇಂದ್ರಿಯಗಳೆಂದರ್ಥ ಸಪ್ತ ಸೃಪ್ತಾ ಸಂಖ್ಯಾ (ನಿ. ೪-೨೬) ಎಂದು ಹಿಂದೆ.ಈ ವಿಷಯ ವಿವೃತವಾಗಿದೆ. ಋಷಿರ್ದರ್ಶನಾತ್ (ನಿ. ೨-೧೧) ಎಂದೂ ಹಿಂದೆ ಹೇಳಿದೆ ಸಪ್ತ ತೇ ಋಷಿಯಶ್ಚ ಸಪ್ತರ್ಷಯಃ | ಮುಂದೆ ಹೇಳುವ ಮಂತ್ರವು ಸಪ್ತಋಷಿಗಳ ಪ್ರಧಾನಸ್ತುತಿಯನ್ನು ಪ್ರತಿಪಾದಿಸುತ್ತಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತಾರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಸಪ್ತತ್ರಿಶಂತ್ ಖಂಡಃ

## ಮೂವತ್ತೇಳನೆಯ ಖಂಡವು

ಸಪ್ತ ಋಷಯಃ ಪ್ರತಿಹಿತಾಃ ಶರೀರೇ ಸಪ್ತ ರಕ್ಷಂತಿ ಸದಮಪ್ರಮಾದಂ | ಸಪ್ತಾಪಃ ಸ್ವಪತೋ ಲೋಕಮೀಯುಸ್ತತ್ರ ಜಾಗೃತೋ ಅಸ್ವಪ್ನಜೌ ಸತ್ರಸದೌ ಚ ದೇವೌ (ವಾ. ಸಂ. ೩೪-೫೫) ಸಪ್ತ ಋಷಯಃ ಪ್ರತಿಹಿತಾಃ ಶರೀರೇ ರಶ್ಮಯ ಆದಿತ್ಯೇ ಸಪ್ತ ರಕ್ಷಂತಿ ಸದಮಪ್ರಮಾದಂ ಸಂವತ್ಸರಮಪ್ರಮಾದ್ಯಂತಃ ಸಪ್ತಾಪನಾಸ್ತ ಏವ ಸ್ವಪತೋ ಲೋಕಮಸ್ತಮಿತಮಾದಿತ್ಯಂ ಯಂತಿ ತತ್ರ ಜಾಗೃತೋಽಸ್ವಪ್ನಜೌ ಸತ್ರಸದೌ ಚ ದೇವೌ ವಾಯ್ವಾದಿತ್ಯಾವಿತ್ಯಧಿದೈವತಮಥಾಧ್ಯಾತ್ಮಂ ಸಪ್ತ ಋಷಯಃ ಪ್ರತಿಹಿತಾಃ ಶರೀರೇ

ಷಡಿಂದ್ರಿಯಾಣಿ ವಿದ್ಯಾಸಪ್ತಮ್ಯಾತ್ಮನಿ ಸಪ್ತ ರಕ್ಷಂತಿ ಸದಮಪ್ರಮಾದಂ ಶರೀರಮಪ್ರ-ಮಾದ್ಯಂತಿ ಸಪ್ತಾಪಸನಾನೀಮಾನ್ಯೇವ ಸ್ವಪತೋ ಲೋಕಮಸ್ತಮಿತಮಾತ್ಮಾನಂ ಯಂತಿ ತತ್ರ ಜಾಗೃತೋಽಸ್ವಪ್ನಜೌ ಸತ್ರಸದೌ ಚ ದೇವೌ ಪ್ರಾಜ್ಞಶ್ಚಾತ್ಮಾ ತೈಜಸಶ್ಚೇತ್ಯಾತ್ಮ-ಗತಿಚಷ್ಟೇ ತೇಷಾಮೇಷಾಪರಾ ಭವತಿ ॥ ೩೭ ॥

ಸಪ್ತ ಋಷಯಃ ಪ್ರತಿಹಿತಾಃ ಶರೀರೇ ಸಪ್ತ ರಕ್ಷಂತಿ ಸದಮ-
ಪ್ರಮಾದಮ್ । ಸಪ್ತಾಪಃ ಸ್ವಪತೋ ಲೋಕಮೀಯುಸ್ತತ್ರ
ಜಾಗೃತೋ ಅಸ್ವಪ್ನಜೋ ಸತ್ರಸದೌ ಚ ದೇವೌ ॥

(ಯ. ವಾ. ಸಂ. ೩೪)

ಸಪ್ತಋಷಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಸರ್ವವನ್ನು ಹಿಂಸಿಸುವ, ಅಥವಾ ಸರ್ವಾಶ್ರಿತನಾದ ಆದಿತ್ಯನಲ್ಲಿ ರಶ್ಮಿಗಳು ಪ್ರತ್ಯೇಕವಾಗಿ ಏಳುರೀತಿಯಾಗಿರುತ್ತವೆ. ಅನ್ಯೂನಾಧಿಕಗಳಾಗಿ ಸಕಲದಿಕ್ಕಿನಿಂದಲೂ ಯಾವಾಗಲೂ ಆದಿತ್ಯನನ್ನು ವ್ಯಾಪಿಸಿ ಪ್ರಮಾದಹೊಂದದೆ ರಕ್ಷಿಸುತ್ತಿರುತ್ತವೆ. ಗಮನಸ್ವಭಾವವಿರುವ, ಸಕಲಲೋಕವ್ಯಾಪಕವಾದ ನೀನು ಈ ಆದಿತ್ಯನಲ್ಲಿಯೇ ಲೀನವಾಗಿರುತ್ತವೆ. ಹೀಗೆ ಶರೀರದಲ್ಲಿ ರಶ್ಮಿಜಲಗಳನ್ನು ಅಡಗಿಸಿರುವ ವಾಯ್ವಾದಿತ್ಯರು ಸಜ್ಜನರಕ್ಷಣ ಕರ್ಮದಲ್ಲಿ ಜಾಗೃತರಾಗಿರುತ್ತಾರೆ.

ಸಪ್ತಋಷಯಃ ಪ್ರತಿಹಿತಾಃ ಶರೀರೇ—ರಶ್ಮಯ ಆದಿತೇಂ । ಸಪ್ತ
ರಕ್ಷಂತಿ ಸದಮಪ್ರಮಾದಂ ಸಂವತ್ಸರಮಪ್ರಮಾದ್ಯಂತಃ । ಸಪ್ತಾಪ
ನಾಸ್ತ ಏವ ಸ್ವಪತೋ ಲೋಕಮಸ್ತಮಿತಮಾದಿತ್ಯಂ ಯಂತ್ಯತ್ರ
ಜಾಗೃತೋ ಅಸ್ವಪ್ನಜೌ ಸತ್ರಸದೌ ಚ ದೇವೌ ವಾಯ್ವಾದಿತ್ಯಾ
ವಿತ್ಯಧಿದೈವತಮ್ ॥

ಆದಿದೈವತವನ್ನಾಶ್ರಯಿಸಿ ಮಂತ್ರವ್ಯಾಖ್ಯಾನ ತೋರಿಸುತ್ತಾರೆ. ಸಪ್ತಋಷಿಗಳೆಂದರೆ ಇಲ್ಲಿ ರಶ್ಮಿಗಳು ಆದಿತ್ಯಮಂಡಲದಲ್ಲಿರುವ ಪುರುಷನೇ ಆಧಿಷ್ಠಾತೃನೇವತೆ. ಈಯು ಎಂಬುದಕ್ಕೆ ಯಂತಿ ಎಂದು ವ್ಯಾಖ್ಯಾನ ವರ್ತಮಾನಾರ್ಥದಲ್ಲಿ ಛಾಂದಸವಾಗಿ ಲಿಟ್ ಬಂದಿದೆ. ತತ್ರಎಂಬುದಕ್ಕೆ ಅತ್ರ ಎಂದು ವ್ಯಾಖ್ಯಾನ.

ಅಥಾಧ್ಯಾತ್ಮಮ್—ಸಪ್ತ ಋಷಯಃ ಪ್ರತಿಹಿತಾಃ ಶರೀರೇ । ಷಡಿಂದ್ರಿ
ಯಾಣಿ ವಿದ್ಯಾಸಪ್ತಮಾನಿ, ಆತ್ಮನೀ । ಸಪ್ತರಕ್ಷಂತಿ ಸದಮ
ಪ್ರಮಾದಮ್ । ಶರೀರಮಪ್ರಮಾದ್ಯಂತಿ, ಸಪ್ತಾಪಸನಾನೀ ಮಾನ್ಯೇವ
ಸ್ವಪತೋ ಲೋಕಮಸ್ತಮಿತಮಾತ್ಮಾನಂ, ಯಂತ್ಯತ್ರ ಜಾಗೃತಾ
ಅಸ್ವಪ್ನಜೌ ಸತ್ರಸದೌ ಚ ದೇವೌ ಪ್ರಾಜ್ಞಶ್ಚಾತ್ಮಾ ತೈಜಸಶ್ಚೇತ್ಯಾತ್ಮ
ಗತಿಮಾಚಷ್ಟೆ ॥

ಆಧ್ಯಾತ್ಮರೀತಿಯಿಂದ ವ್ಯಾಖ್ಯಾನಮಾಡುತ್ತಾರೆ. ಆದಿತ್ಯಮಂಡಲದಂತೆ ನಮ್ಮ ಶರೀರದಲ್ಲಿ ರಶ್ಮಿಗಳಂತೆ ವಿದ್ಯೆಯಿಂದ ಕೂಡಿದ ಆರು ಇಂದ್ರಿಯಗಳೆಂಬ ಸಪ್ತರಶ್ಮಿಗಳಿರುತ್ತವೆ. ಇವುಗಳು ಅವಲೋಕನಾದಿ ಕಾರ್ಯಗಳಿಂದ ನಿತ್ಯವೂ ಅದನ್ನು ಅಪ್ರಮಾದಗಳಿಂದ ರಕ್ಷಿಸುತ್ತವೆ. ಇವು ಶರೀರಕ್ಕೆ ಅಥವಾ ವಿಷಯಗಳಿಗೆ ವ್ಯಾಪಕವಾಗಿರುತ್ತವೆ. ಜೀವನು ಸ್ವಾಪಾವಸ್ಥೆಯಲ್ಲಿರುವಾಗ ಇವು ಬುದ್ಧಿರೂಪದಿಂದ ಆ ಶರೀರದಲ್ಲಿ ಲೀನವಾಗಿರುತ್ತವೆ. ಜೀವನ ಭಾವನೆಗಳನ್ನು ಪ್ರಚೋದಿಸುವ ಸ್ವಪ್ನವು ಈ ಸ್ವಾಪ ಕಾಲದಲ್ಲಾಗುತ್ತದೆ. ಶರೀರಪರಿಪಾಲನೆಗೋಸ್ಕರ ಜಾಗೃತಿಯನ್ನು ಹೊಂದಿರುವ ಚಿತ್ಸ್ವರೂಪನಾದ ಆತ್ಮನು ಶರೀರವನ್ನು ವ್ಯಾಪಿಸಿರುತ್ತಾನೆ. ತೈಜಸನಾದ ಪ್ರಾಣನೂ ಅನ್ನಾದಿಗಳನ್ನು ಜೀರ್ಣಿಸುತ್ತಾ ಈ ಆತ್ಮನೊಡನಿರುತ್ತಾನೆ.

ತೇಷಾಮೇಷಾಽಪರಾ ಭವತಿ || ೩೭ ||

ಸಪ್ತಋಷಿಗಳು ರಶ್ಮಿಗಳೆಂದೇ ದೃಢಪಡಿಸಲು ಮುಂದೆ ಇನ್ನೊಂದು ಮಂತ್ರವನ್ನು ಉದಾಹರಿಸುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ ಮೂವತ್ತೇಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟತ್ರಿಂಶತ್ ಖಂಡಃ

### ಮೂವತ್ತೆಂಟನೆಯ ಖಂಡ

ತಿರ್ಯಗ್ಬಿಲಶ್ಚಮಸ ಊರ್ಧ್ವಬುಧ್ನೋ ಯಸ್ಮಿನ್ಯಶೋ ನಿಹಿತಂ ವಿಶ್ವರೂಪಂ || ಅತ್ರಾಸತ ಋಷಯಃ ಸಪ್ತ ಸಾಕಂ ಯೇ ಅಸ್ಯ ಗೋಪಾ ಮಹತೋ ಬಭೂವುಃ (ಅಥ. ಸಂ. ೧೦-೮-೯) || ತಿರ್ಯಗ್ಬಿಲಶ್ಚಮಸ ಊರ್ಧ್ವಬಂಧನ ಊರ್ಧ್ವಬೋಧನೋ ವಾ ಯಸ್ಮಿನ್ಯಶೋ ನಿಹಿತಂ ಸರ್ವರೂಪಮತ್ರಾಸತ ಋಷಯಃ ಸಪ್ತ ಸಹಾದಿತ್ಯರಶ್ಮಿಯೋ ಯೇ ಅಸ್ಯ ಗೋಪಾ ಮಹತೋ ಬಭೂವುರಿತ್ಯಧಿದೈವತಮಥಾಧ್ಯಾತ್ಮಂ ತಿರ್ಯಗ್ಬಿ-ಲಶ್ಚಮಸ ಊರ್ಧ್ವಬಂಧನ ಊರ್ಧ್ವಬೋಧನೋ ವಾ ಯಸ್ಮಿನ್ಯಶೋ ನಿಹಿತಂ ಸರ್ವ-ರೂಪಮತ್ರಾಸತ ಋಷಯಃ ಸಪ್ತ ಸಹೇಂದ್ರಿಯಾಣಿ ಯಾನ್ಯಸ್ಯ ಗೋಪ್ತ್ರ್ಯಾಣಿ ಮಹತೋ ಬಭೂವುರಿತ್ಯಾತ್ಮಗತಿಮಾಚಷ್ಟೇ ದೇವಾ ವ್ಯಾಖ್ಯಾತಾಸ್ತೇಷಾಮೇಷಾ ಭವತಿ || ೩೮ ||

ತಿರ್ಯಗ್ಬಿಲಶ್ಚಮಸ ಊರ್ಧ್ವಬುಧ್ನೋ ಯಸ್ಮಿನ್ಯಶೋ ನಿಹಿತಂ ವಿಶ್ವ
ರೂಪಮ್ | ಅತ್ರಾಸತ ಋಷಯಃ ಸಪ್ತ ಸಾಕಂ ಯೇ ಅಸ್ಯ
ಗೋಪಾ ಮಹತೋ ಬಭೂವುಃ ||

(ಅಥ. ಸಂ. ೧೦-೨೭)

ರಶ್ಮ್ಯರ್ಥವನ್ನು ಕೊಡುವ ಸಪ್ತಋಷಿಗಳ ಸ್ತುತಿಪ್ರತಿಪಾದಕಮಂತ್ರವನ್ನು ಉದಾಹರಿಸುತ್ತಾರೆ. ಆದಿತ್ಯಮಂಡಲವು ತಿರ್ಯ ಙ್ಮುಖವಾದ ರಶ್ಮಿಚ್ಛಿದ್ರಗಳಿಂದ ಕೂಡಿ ಪ್ರಕಾಶನದಿಂದ ಚೋದಕವಾಗಿರುತ್ತದೆ. ಇದು ಊರ್ಧ್ವಮುಖವಾಗಿದ್ದರೂ ಸರ್ವ ಪ್ರಕಾಶಕವಾಗಿರುತ್ತದೆ. ಈ ರಶ್ಮಿಮಂಡಲದಲ್ಲಿ ಅನೇಕರೂಪವಾದ ಉದಕವು ಅಧಿಕವಾಗಿ ಸಂಗ್ರಹೀತವಾಗಿರುತ್ತದೆ. ಜಗತ್ತನ್ನ ರಕ್ಷಿಸುವ ರಶ್ಮಿಗಳು ಇದರಲ್ಲಿ ಏಕೀಭೂತವಾಗಿದ್ದು ಮಂಡಲದ ಅಧಿಷ್ಠಾತೃದೇವತೆಯಿಂದ ಕೂಡಿರುತ್ತವೆ. ಇವು ನಾಲ್ಕು ದಿಕ್ಕುಗಳಲ್ಲಿಯೂ ಪ್ರಸರಣಸ್ವಭಾವದಿಂದ ವಿರಾಜಿಸುತ್ತವೆ.

**ತಿರ್ಯಗ್ಬಿಲಶ್ಚಮಸ ಊರ್ಧ್ವಬಂಧನ ಊರ್ಧ್ವಬೋಧನೋ ವಾ ಯಸ್ಮಿನ್ ಯಶೋ ನಿಹಿತಂ ಸರ್ವರೂಪಮತ್ರಾಸತ ಋಷಯಃ ಸಪ್ತ ಸಹಾದಿತ್ಯರಶ್ಮಯೋ ಯೇ ಅಸ್ಯ ಗೋಪಾ ಮಹತೋ ಬಭೂವುಃ । ಇತ್ಯಧಿದೈವತಮ್ ॥**

ಅಧಿದೈವತದೃಷ್ಟಿಯಿಂದ ಮಂತ್ರವ್ಯಾಖ್ಯಾನ ಮಾಡುತ್ತಾರೆ. ಯಶಸ್ಸು ಉದಕಪರ್ಯಾಯದಲ್ಲಿ (ನಿಘ. ೧-೧೨) ಪಠಿತವಾಗಿದೆ ಆದಿತ್ಯಮಂಡಲದಲ್ಲಿರುವ ರಶ್ಮಿಗಳೇ ಉದಕವನ್ನು ಸಂಗ್ರಹಿಸಿ ರಕ್ಷಿಸುತ್ತಿರುತ್ತವೆ. ಬಭೂವುಃ ಎಂದು ವರ್ತಮಾನಾರ್ಥದಲ್ಲಿ ಲಿಟ್ ಬಂದಿದೆ.

**ಅಥಾಧ್ಯಾತ್ಮಮ್—ತಿರ್ಯಗ್ಬಿಲಶ್ಚಮಸ ಊರ್ಧ್ವಬಂಧನ ಊರ್ಧ್ವ ಬೋಧನೋ ವಾ, ಯಸ್ಮಿನ್ಯಶೋ ನಿಹಿತಂ ಸರ್ವರೂಪಮತ್ರಾಸತ ಋಷಯಃ ಸಪ್ತ ಸಹೇಂದ್ರಿಯಾಣಿ ಯಾನ್ಯಸ್ಯ ಗೋಪ್ತೃಣಿ ಮಹತೋ ಬಭೂವುರಿತ್ಯಾತ್ಮಗತಿಮಾಚಷ್ಟೇ**

ಅಧಿದೈವತರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ. ತಿರ್ಯಗ್ಬಲವುಳ್ಳದ್ದು ಇಲ್ಲಿ ಶಿರಸ್ಸು. ಇದು ರಸವನ್ನು ಹೀರುವುದರಿಂದ ಚಮಸವಾಗುತ್ತವೆ. ಶರೀರವನ್ನು ಎತ್ತಿಹಿಡಿದು ಮೇಲ್ಭಾಗದಲ್ಲಿರುತ್ತದೆ. ಜ್ಞಾನಪ್ರದವಾದುದೂ ಶಿರಸ್ಸೇ. ಇದು ಹೋದರೆ ಸಕಲಶರೀರವೂ ನಾಶಹೊಂದುತ್ತದೆ. ಇದರಲ್ಲಿ ಯಶೋವಾಚ್ಯವಾದ ಇಂದ್ರಿಯವು (ಅಥವಾ ಜ್ಞಾನವು) ನಾನಾರೂಪವಾಗಿ ಸೇರಿದ್ದು ಶರೀರವನ್ನು ರಕ್ಷಿಸುತ್ತದೆ.

**ದೇವಾ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೩೮ ॥**

ದೇವಾ ಎಂಬುದು ಕ್ರಮಪ್ರಾಪ್ತವಾಗಿದೆ. ಇದು ಹಿಂದೆ (ನಿ. ೭-೧೫) ದಾನಕರ್ಮವಿರುವುದರಿಂದ, ಪ್ರಕಾಶಿಸುವುದರಿಂದ ದೇವನಾಗಿರುತ್ತಾನೆಂದು ವ್ಯಾಖ್ಯಾತವಾಗಿದೆ. ಇಲ್ಲಿ ಪ್ರಕೃತ ಬಹುವಚನದಿಂದ ಹೇಳಿರುವುದರಿಂದ ರಶ್ಮಿಗಳೆಂದು ತಿಳಿಯಬೇಕು. ಮುಂದೆ ಹೇಳುವ ಮಂತ್ರವು ದೇವಪ್ರಧಾನಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ ಮೂವತ್ತೆಂಟನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕೋನಚತ್ವಾರಿಂಶತ್ ಖಂಡಃ

### ಮೂವತ್ತೊಂಬತ್ತನೆಯ ಖಂಡ

ದೇವಾನಾಂ ಭದ್ರಾಸುಮತಿರ್ಋಜೂಯತಾಂ ದೇವಾನಾಂ ರಾತಿರಭಿನೋ ನಿವರ್ತತಾಂ ॥ ದೇವಾನಾಂ ಸಖ್ಯಮುಪಸೇದಿಮಾ ವಯಂ ದೇವಾ ನ ಆಯುಃ ಪ್ರತಿರಂತು ಜೀವಸೇ (ಋ. ಸಂ. ೧-೮೯-೨) ॥ ದೇವಾನಾಂ ವಯಂ ಕಲ್ಯಾಣ್ಯಾಂ ಮತಾವೃಜುಗಾಮಿನಾಮಿತಿ ವಾ ದೇವಾನಾಂ ದಾನಮಭಿನೋ ನಿವರ್ತತಾಂ ದೇವಾನಾಂ ಸಖ್ಯಮುಪಸೀದೇಮ ವಯಂ ದೇವಾ ನ ಆಯುಃ ಪ್ರವರ್ಧಯಂತು ಜೀವನಾಯ ವಿಶ್ವೇ ದೇವಾಃ ಸರ್ವೇ ದೇವಾಸ್ತೇಷಾಮೇಷಾ ಭವತಿ ॥ ೩೯ ॥

ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ ರಾತಿರಭಿ
ನೋ ನಿವರ್ತತಾಮ್ । ದೇವಾನಾಂ ಸಖ್ಯಮುಪಸೇದಿಮಾ ವಯಂ
ದೇವಾ ನ ಆಯುಃ ಪ್ರ ತಿರಂತು ಜೀವಸೇ ॥

(ಋ. ಸಂ. ೧-೬-೧೩)

ದೇವಪ್ರಧಾನಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸರ್ವದಿಕ್ಕಿನಲ್ಲಿಯೂ ಪ್ರಸರಿಸುವ ಆದಿತ್ಯಮಂಡಲದ ರಶ್ಮಿಗಳ ಪ್ರಸಾದಾಭಿಮುಖವಾದ ಬುದ್ಧಿಯು ನಮಗೋಸ್ಕರವಾಗಲಿ ಅವುಗಳ ಧನಲಾಭಾತ್ಮಕವಾದ ದಾನವು ನಮಗಾಗಲಿ. ನಾವು ಆ ರಶ್ಮಿಗಳ ಸಖ್ಯವನ್ನು ಯಜ್ಞಕಾರ್ಯಗಳಲ್ಲಿ ಹೊಂದೋಣ. ನಮ್ಮ ಆಯುಸ್ಸು ಬಹುಕಾಲವಿರಲು ಆ ರಶ್ಮಿಗಳು ಅಭಿವೃದ್ಧಿ ಪಡಿಸಲಿ.

ದೇವಾನಾಂ ವಯಂ ಸುಮತೌ ಕಲ್ಯಾಣ್ಯಾಂ ಮತಾವೃಜುಗಾಮಿನಾ
ಮೃತುಗಾಮಿನಾಮಿತಿ ವಾ, ದೇವಾನಾಂ ದಾನಮಭಿತೋ ನಿವರ್ತ
ತಾಂ, ದೇವಾನಾಂ ಸಖ್ಯಮುಪಸೀದೇಮ ವಯಂ ದೇವಾ ನ
ಆಯುಃ ಪ್ರವರ್ಧಯಂತು ಚಿರಂಜೀವನಾಯ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಂಡಲದಲ್ಲಿ ಆವರಣವಿಲ್ಲದಿರುವುದರಿಂದ ರಶ್ಮಿಗಳು ಋಜುಗಾಮಿಗಳಾಗಿರುತ್ತವೆ. ಸರ್ವತೋಗಾಮಿಗಳಾದ ರಶ್ಮಿಗಳೇ ಇಲ್ಲಿ ದೇವಪದವಾಚ್ಯವಾಗಿವೆ. ಛಾಂದಸವಾದುದರಿಂದ ಪ್ರಾರ್ಥನಾರ್ಥದಲ್ಲಿ ಲಿಟ್ ಬಂದಿದೆ. ವಿಶ್ವೇದೇವಶಬ್ದದ ನಿರ್ವಚನ ತೋರಿಸುತ್ತಾರೆ. ಇದೂ ವ್ಯಾಖ್ಯಾತವಾಗಿದೆ. ಇಲ್ಲಿ ರಶ್ಮಿಗಳೆಂದೇ ಅದರ ಅರ್ಥವಾಗುತ್ತದೆ. ಮುಂದೆ ಹೇಳುವ ಮಂತ್ರವು ವಿಶ್ವೇದೇವವಾಚ್ಯ ರಶ್ಮಿಗಳ ಪ್ರಧಾನಸ್ತುತಿಯನ್ನು ಪ್ರತಿಪಾದಿಸುತ್ತದೆ.

ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ
ರಾತಿರಭಿ ನೋ ನಿ ವರ್ತತಾಂ |
ದೇವಾನಾಂ ಸಖ್ಯಮುಪ ಸೇದಿಮಾ ವಯಂ ದೇವಾ ನ ಆಯುಃ
ಪ್ರ ತಿರಂತು ಜೀವಸೇ || ೨ ||

ಪ್ರಾಮಾಣಿಕನಾದ ಯಜ್ಞಕರ್ತನನ್ನು ಪಡೆಯಲಿಚ್ಛೆಯುಳ್ಳ ದೇವತೆಗಳ ಪೂಜ್ಯವಾದುದೂ ಮತ್ತು ಶ್ರೇಷ್ಠವಾದುದೂ ಆದ ಬುದ್ಧಿಯು ನಮಗೆ ಅನುಗ್ರಹವನ್ನುಂಟು ಮಾಡುವಂತಾಗಲಿ. ದೇವತೆಗಳ ಉದಾರವಾದ ದಾನವು ನಮಗೆ ಅಭಿಮುಖವಾಗಿರಲಿ. ನಾವೂ ಸಹ ಆ ದೇವತೆಗಳ ಸ್ನೇಹವನ್ನು ಬೆಳೆಸೋಣ. ಆ ದೇವತೆಗಳು ನಮ್ಮ ಆಯಸ್ಸನ್ನು ಬೆಳೆಯುವಂತೆ ಮಾಡಲಿ.

ದೇವಾನಾಂ ಭದ್ರಾಸುಮತಿಃ—ನಮಗೆ ಒಳ್ಳೆಯದನ್ನು ಮಾಡಬೇಕೆಂಬ ದೇವತೆಗಳ ಬುದ್ಧಿಯು ಅಥವಾ ಅನುಗ್ರಹವು.

ಋಜೂಯತಾಂ—ಋಜುಮಾರ್ಜವಯುಕ್ತಂ ಸಮ್ಯಗನುಷ್ಠಾತಾರಂ ಆತ್ಮನ ಇಚ್ಛತಾಂ | ಋಜುಮಾರ್ಗದಲ್ಲಿರುವ ಎಂದರೆ ಯಜ್ಞಾದಿಸತ್ಕರ್ಮಾನುಷ್ಠಾನಗಳಲ್ಲಿ ತೊಡಗಿರುವ ಯಜಮಾನರನ್ನು ಅಪೇಕ್ಷಿಸುವ ಯಜಮಾನರು ಮಾಡುವ ಯಜ್ಞಗಳನ್ನು ಸ್ತೋತ್ರಗಳನ್ನು ದೇವತೆಗಳು ಅನುಮೋದಿಸುವರೆಂದಭಿಪ್ರಾಯವು.

ರಾತಿಃ—ರಾ ದಾನೇ | ದೇವತೆಗಳು ಅನುಗ್ರಹಿಸುವ ಅಥವಾ ಕೊಡುವ ಐಶ್ವರ್ಯಾದಿದಾನಗಳು.

ಉಪ ಸೇದಿಮ—ಷದ್ಲೃ ವಿಶರಣಗತ್ಯವಸಾದನೇಷು | ಹೊಂದೋಣ, ಪಡೆಯೋಣ.

ಪ್ರ ತಿರಂತು—ಪ್ರಪೂರ್ವಸ್ತಿರತಿರ್ವರ್ಧನಾರ್ಥಃ | (ನಮ್ಮ ಆಯಸ್ಸನ್ನು ) ಅಭಿವೃದ್ಧಿಮಾಡಲಿ ಯಾಸ್ಕರು—ದೇವಾ ನ ಆಯುಃ ಪ್ರವರ್ಧಯಿತುಂ ಚಿರಂ ಜೀವನಾಯ(ನಿ. ೧೨-೩೯) ದೇವತೆಗಳು ನಮ್ಮ ಆಯಸ್ಸನ್ನು ಬಹಳಕಾಲ ಬದುಕಿರುವಂತೆ ವೃದ್ಧಿಪಡಿಸಲಿ ಎಂದು ಹೇಳಿರುವರು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ಮೂವತ್ತೊಂಬತ್ತನೆಯ ಖಂಡವು ಸಮಾಪ್ತವಾಗಿದೆ.

# ಅಥ ಚತ್ವಾರಿಂಶತ್ ಖಂಡಃ

## ನಲವತ್ತನೆಯ ಖಂಡವು

ಓಮಾಸಶ್ಚರ್ಷಣೀ ಧೃತೋ ವಿಶ್ವೇ ದೇವಾಸ ಆಗತ । ದಾಶ್ವಾಂಸೋ ದಾಶುಷಃ ಸುತಮ್ (ಋ.ಸಂ. ೧-೩-೭) ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ಚ ದೇವಾಃ ಇಹಾ ಗಚ್ಛತ ದತ್ತವಂತೋ ದತ್ತವತಃ ಸುತಮಿತಿ ತದೇತದೇಕ ಮೇವ ವೈಶ್ವ ದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿ ರನ ತ್ಯಂತಗತಸ್ತ್ವೇಷ ಉದ್ದೇಶೋ ಭವತಿ ಬಭ್ರುರೇಕ ಇತಿ ದಶ ದ್ವಿಪದಾ ಅಲಿಂಗಾಃ ॥ (ಋ. ಸಂ. ೮-೨೯) ಭೂತಾಂಶಃ ಕಾಶ್ಯಪ ಆಶ್ವಿನಮೇಕಲಿಂಗಮಭಿತಷೀಯಂ ಸೂಕ್ತ ಮೇಕಲಿಂಗಂ ಸಾಧ್ಯಾ ದೇವಾಃ ಸಾಧನಾತ್ತೇಷಾಮೇಷಾ ಭವತಿ ॥ ೪೦ ॥

ಓಮಾಸಶ್ಚರ್ಷಣೀ ಧೃತೋ ವಿಶ್ವೇದೇವಾಸ ಆಗತ । ದಾಶ್ವಾಂಸೋ
ದಾಶುಷಃ ಸುತಮ್ ॥

(ಋ. ಸಂ. ೧-೧-೩, ಯ. ವಾ. ಸಂ. ೭-೩೩)

ವಿಶ್ವೇದೇವಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವಿಶ್ವೇದೇವತೆಗಳೇ ನೀವು ಮನುಷ್ಯರನ್ನು ಪರಿಪಾಲಿಸುತ್ತೀರಿ. ಅವರ ಸ್ಥಿತಿಯನ್ನುಂಟುಮಾಡುವವರೂ ನೀವೇ ಆಗಿರುತ್ತೀರಿ. ಇವರಿಗೆ ಇಂತಹದಾನಮಾಡಬೇಕೆಂದು ಸಂಕಲ್ಪಮಾಡಿಕೊಂಡು ಹವಿಸ್ಸನ್ನು ಕೊಡುವ ಯಜಮಾನನಿಂದ ಅಭಿಮತವಾದ ಸೋಮವನ್ನು ಪಾನಮಾಡಲು ಬನ್ನಿರೆಂದು ಪ್ರಾರ್ಥಿಸುತ್ತೇನೆ.

ಅವಿತಾರೋ ವಾ ಅವನಿಯಾ ವಾ ಮನುಷ್ಯಧೃತಃ ಸರ್ವೇ ಚ ದೇವಾ
ಇಹಾಗಚ್ಛತ ದತ್ತವಂತೋ ದತ್ತವತಃ ಸುತಮಿತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿಶ್ವಶಬ್ದವು ಸರ್ವಶಬ್ದಪರ್ಯಾಯವೆಂದು ಯಾಸ್ಕರಮತ. ದೇವವಿಶೇಷಕ್ಕೇ ಅಸಾಧಾರಣಾಲಿಂಗವೆಂದು ಶಾಕಪೂಣಿ ಆಚಾರ್ಯರ ಮತ. ಈ ಸಕಲದೇವತೆಗಳನ್ನಧಿಕರಿಸಿ ಅಧಿಯಜ್ಞದಲ್ಲಿ ಕೆಲವು ವಿಚಾರಗಳನ್ನು ತಿಳಿಸಲು ಉಪೋದ್ಘಾತನ್ನು ತೋರಿಸುತ್ತಾರೆ.

ತದೇತದೇಕಮೇವ ವೈಶ್ವ ದೇವಂ ಗಾಯತ್ರಂ ತೃಚಂ ದಶತಯೀಷು
ವಿದ್ಯತೇ ॥

ಇದೊಂದೇ ವಿಶ್ವದೇವದೇವತಾಕವಾದ ತೃಚವು ಗಾಯತ್ರಿ ಛಂದಸ್ಸಿನಿಂದ ಕೂಡಿರುವುದು. ಅಧಿಯಜ್ಞದಲ್ಲಿ ಹೀಗೆ ವಿಶ್ವೇದೇವ ದೇವತಾಕಗಳಾದ ಗಾಯತ್ರೀ ಛಂದಸ್ಸಿನ ಬಹುಮಂತ್ರಗಳಿಂದ ಉಪಯೋಗ ಹೇಳುತ್ತಾರೆ.

**ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ ॥**

ಬಹುದೈವತಗಳುಳ್ಳ ಮಂತ್ರಸಮುದಾಯವು ಗಾಯತ್ರೀ ಛಂದಸ್ಸಿನಿಂದ ಕೂಡಿವೆ. ಯುಜ್ಯತೇ ಎಂಬುದಕ್ಕೆ ನ್ಯಾಯವೆಂದರ್ಥ. ಯಾಸ್ಕರು ಇದನ್ನು ನ್ಯಾಯವೆಂದು ಅಂಗೀಕರಿಸಿರುತ್ತಾರೆ. ಆದರೆ ಯಾವುದು ವಿಶ್ವಶಬ್ದದಿಂದ ಕೂಡಿದ ಮಂತ್ರಜಾತವಿದೆಯೋ ಅಥವಾ ಸೂಕ್ತವಿದೆಯೋ ಅದೇ ವಿಶ್ವೇದೇವಸ್ಥಾನದಲ್ಲಿ ಉಪಯೋಗಿಸಲ್ಪಡುತ್ತದೆಂದೂ, ಬಹು ದೇವತಾ ಮಾತ್ರದಿಂದ ಅಪೇಕ್ಷಿತವಲ್ಲವೆಂದೂ ಶಾಕಪೂಣಿ ಆಚಾರ್ಯರ ಮತ.

**ಅನತ್ಯಂತಗತಸ್ತ್ವೇಷ ಉದ್ದೇಶೋ ಭವತಿ । ಬಭ್ರುರೇಕ ಇತಿ ದಶ ದ್ವಿಪದಾ ಅಲಿಂಗಾಃ ॥**

ಅನತ್ಯಂತ ಗತವೆಂದರೆ ವ್ಯಭಿಚರಿತ ಹೇತುವಿನಿಂದ ಕೂಡಿದೆಯೆಂದರ್ಥ. ಉದ್ದೇಶವೆಂದರೆ ಪ್ರತಿಜ್ಞೆ. ವಿಶ್ವಲಿಂಗದಿಂದ ಕೂಡಿದ ಮಂತ್ರವಾಗಲೀ, ಸೂಕ್ತ ವಾಗಲೀ ವೈಶ್ವದೇವಸ್ಥಾನದಲ್ಲಿ ವಿನಿಯೋಗಿಸಲ್ಪಡುತ್ತದೆ ಎಂಬ ಶಾಕಪೂಣಿಆಚಾರ್ಯರ ಮತವು ಯಾಸ್ಕರಿಗೆ ಸಮ್ಮತವಲ್ಲ. ವೈಶ್ವದೇವಮಂತ್ರಜಾತವು ಕ್ರಿಯಾರ್ಥಕ್ಕೋಸ್ಕರ ಇರುವುದಾಗಿ ಗಾಯತ್ರೀ ಛಂದಸ್ಸಿನಲ್ಲಿ ಉತ್ಪತ್ತಿ ಹೊಂದುತ್ತದೆ, ಇದು ಸಕಲ ದಶತಯಿಗಳಲ್ಲಿ ಕರ್ಮೋತ್ಪಾದ ಸಮರ್ಥವಾಗಿಲ್ಲವಾದುದರಿಂದ ಬಹುದೇವತಾಕವಾದ ಸೂಕ್ತ ಗಳನ್ನೇ ಆವಾಪೋದ್ವಾಪಮಾಡಿ ಕೊಳ್ಳಬೇಕು. ಬಹು ವಿಶ್ವಶಬ್ದಗಳಿಗೆ ಇತರೇತರಾರ್ಥಾಭಿಧಾನ ಪ್ರತ್ಯಾಸತ್ತಿ ಇರುವುದರಿಂದ ವೈಶ್ವದೇವಸ್ಥಾನದಲ್ಲಿಯೂ ಬಹುದೇವತಾಕವೇ ವಿನಿಯೋಗಿಸಲ್ಪಡುತ್ತದೆ.

**ಭೂತಾಂಶಃ ಕಾಶ್ಯಪ ಆಶ್ವಿನಮೇಕಲಿಂಗಮ್ ॥**

ಹಿಂದಿನ ಉದ್ದೇಶ ಅಂದರೆ ಪ್ರತಿಜ್ಞೆಯು ವ್ಯಭಿಚರಿತವಾಗಿದೆಯೆಂದು ವಿವರಿಸುತ್ತಾರೆ. ಕಶ್ಯಪರ ಪುತ್ರರಿಗೆ ಭೂತಾಂಶವೆಂಬ ನಾಮಧೇಯವಿದೆ ಅವರು ಒಂದು ಅಶ್ವಿಲಿಂಗದಿಂದ ಕೂಡಿದ ಅನೇಕ ಋಕ್ಕುಗಳುಳ್ಳ ಸೂಕ್ತವನ್ನು ಕಂಡುಹಿಡಿದಿರುತ್ತಾರೆ. ಯಾವ ಋಕ್ಕುಗಳಲ್ಲಿ ಅಶ್ವಿಲಿಂಗವಿಲ್ಲವೋ ಅವುಗಳಿಗೂ ಅಶ್ವಿಸಂಬಂಧವನ್ನೇ ಒಂದು ಅಶ್ವಿಲಿಂಗದಿಂದಲೇ ಹೇಳಿರುತ್ತಾರೆ. ಇದು ಛತ್ರಿಯನ್ನು ಹಿಡಿದು ಅನೇಕರು ಹೋಗುವಾಗ ಅವರ ಮಧ್ಯದಲ್ಲಿ ಅನೇಕರು ಛತ್ರಿಹಿಡಿಯದಿದ್ದರೂ ಛತ್ರಿಯುಳ್ಳವರು ಹೋಗುತ್ತಾರೆಂದು ಲೋಕದಲ್ಲಿ ವ್ಯವಹರಿಸುತ್ತಾರೆ. ಇದರಿಂದ ಒಂದು ವಿಶ್ವಲಿಂಗದಿಂದ ಎಷ್ಟು ಬಹುದೇವತಾಕಸೂಕ್ತಗಳು ವಿನಿಯೋಗಿಸಲ್ಪಡುತ್ತವೆಯೋ ಅವು ವಿಶ್ವಲಿಂಗದಿಂದಕೂಡಿರದಿದ್ದರೂ ಅದೇ ಕರ್ಮಸಾಧಕಗಳಾಗುತ್ತವೆ. ಋಧ್ಯಾಮ ಸ್ತೋಮಂ ಎಂಬುದು ಅಶ್ವಿಲಿಂಗದಿಂದ ಕೂಡಿದೆ. ಇದರಿಂದ ಉಭಾ ಇತ್ಯಾದಿ ಹನ್ನೊಂದು ಘರ್ಘರೀ ಸೂಕ್ತದಲ್ಲಿರುವ ಋಕ್ಕು ಗಳೂ ಅಶ್ವಿನವೆಂದೇ ವ್ಯವಹರಿಸಲ್ಪಡುತ್ತವೆ.

ಋಧ್ಯಾಮ ಸ್ತೋಮಂ ಸನುಯಾಮ ವಾಜಮಾನೋ ಮಂತ್ರಂ
ಸರಥೇ ಹೋಪಯಾತಂ | ಯಶೋ ನ ಪಕ್ವಂ ಮಧು ಗೋಷ್ವಂ
ತರಾ ಭೂತಾಂಶೋ ಅಶ್ವಿನೋಃ ಕಾಮಮಪ್ರಾಃ ||

(ಋ. ಸಂ. ೮-೬-೨)

ಅಶ್ವಿಲಿಂಗದಿಂದ ಕೂಡಿದ ಋಧ್ಯಾಮವೆಂಬ ಋಕ್ಕು ಇದು. ನಾವು ತ್ರಿವೃತ್ ಪಂಚದಶಾದಿ ಸ್ತೋಮವನ್ನು ಅಧಿಕಗೊಳಿಸ ತ್ತೇವೆ. ಹವಿರ್ಲಕ್ಷಣ ಅನ್ನವನ್ನು ನಿಮಗೆ ಕೊಡುತ್ತೇವೆ, ಆದುದರಿಂದ ನೀವಿಬ್ಬರೂ ಸಮಾನರಥದಲ್ಲಿ ಕುಳಿತು ಬಂದು ಈ ಕಾರ್ಯದಲ್ಲಿ ನಮ್ಮ ಸ್ತೋತ್ರವನ್ನು ಕೇಳಿರಿ. ನಿಮಗೋಸ್ಕರ ಪಕ್ವಮಾಡಿರುವ ಮಧುರವಾದ ಅನ್ನವನ್ನು ನೋಡಿ ಬನ್ನಿರಿ. ಈ ರೀತಿಯಾಗಿ ಭೂತಾಂಶನೆಂಬ ಋಷಿಯು ಅಶ್ವಿನೀ ದೇವತೆಗಳಿಗೆ ಅಭಿಲಷಿತವಾದುದನ್ನು ತನ್ನ ಸುತ್ತಿಗಳಿಂದ ಪೂರ್ಣಮಾಡಿದನು.

ಅಭಿತಷ್ಟೀಯಂ ಸೂಕ್ತಮೇಕಲಿಂಗಮ್ ||

'ತಿತಕ್ಷಂತೇ ಅಭಿಶಸ್ತಿಂ' ಎಂದು ಅಭಿಶಸ್ತಿ ಪದಘಟಿತವಾದುದರಿಂದ ಇದಕ್ಕೆ ಅಭಿತಷ್ಟೀಯ ಸೂಕ್ತವೆಂದಂದು ಹೆಸರುಬಂದಿದೆ ಇಂದ್ರದೇವತಾಕವಾದ ಈ ಸೂಕ್ತವೂ ಏಕಲಿಂಗವಾಗಿದೆ.

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜ
ಸಾತೌ | ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ
ಸಂಜಿತಂ ಧನಾನಾಮ್ ||

(ಋ. ಸಂ. ೨-೩-೪)

ಇಂದ್ರಲಿಂಗವಾದ ಋಕ್ಕನ್ನು ಉದಹರಿಸುತ್ತಾರೆ. ನಾವು ಅನ್ನಸಾಧನವಾದ ಈ ಯಜ್ಞದಲ್ಲಿ ರಕ್ಷಣೆಗೋಸ್ಕರ ವಿಜಯಸಿದಿ ಗೋಸ್ಕರವೂ ನಿರತಿಶಯ ಐಶ್ವರ್ಯದಿಂದ ಆ ಇಂದ್ರದೇವನನ್ನು ಕರೆಯುತ್ತೇವೆ. ಅವನು ಧನವಂತನೂ ಯುದ್ಧದಲ್ಲಿ ಉತ್ಸಾಹ ಭರಿತನೂ ಸಕಲಲೋಕದ ನೇತೃವೂ ನಮ್ಮ ಸ್ತುತಿಗಳನ್ನು ಕೇಳುವವನೂ, ಶತ್ರು ಸಮುದಾಯವನ್ನು ವಿಜಯಕ್ಕೋಸ್ಕರ ನಾಶಪಡಿಸುವವನೂ, ಶತ್ರುಧನವನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವವನಾದುದರಿಂದ ಅವನನ್ನು ಆಹ್ವಾನಿಸುತ್ತೇವೆ.

ಸಾಧ್ಯಾಃ ದೇವಾಃ ಸಾಧನಾತ್ ತೇಷಾಮೇಷಾ ಭವತಿ || ೪೦ ||

ಸಾಧ್ಯಪದದ ನಿರ್ವಚನವನ್ನು ತೋರಿಸುತ್ತಾರೆ. ಸಾಧ್ಯ ದೇವರೆಂದರೆ ನೈರುಕ್ತಪಕ್ಷದಲ್ಲಿ ಆದಿತ್ಯ ರಶ್ಮಿಗಳು ಐತಿಹಾಸಿಕರ ಮತದಲ್ಲಿ ದೇವಸಮೂಹವಾಗುತ್ತದೆ. ಅದರು ವಿಶ್ವಸೃಡೆಂಬ ಹನ್ನೆರಡು ಋಷಿಗಳಾಗುತ್ತಾರೆ. ಸಾಧನಕರ್ಮದಿಂದ ಸಾಧ್ಯ ರಾಗಿರುತ್ತಾರೆ. ಸಂಸಿದ್ಧ್ಯರ್ಥಕ ಸಾಧಧಾತುವಿಗೆ ಣ್ಯತ್ ಪ್ರತ್ಯಯ ಬಂದಿದೆ. ಬಹುಲಗ್ರಹಣದಿಂದ ಆಪ್ರತ್ಯಯವು ಇಲ್ಲಿ ಕರ್ತ್ರರ್ಥದಲ್ಲಿ ಬಂದಿದೆಯೆಂದು ತಿಳಿಯಬೇಕು. ರಸಾಹರಣ ಮುಂತಾದ ತಮ್ಮ ವ್ಯಾಪಾರವನ್ನು ಸಾಧಿಸುವುದರಿಂದ ಸಾಧ್ಯ

ರೆಂದು ಸ್ಕಂದಸ್ವಾಮಿಯ ವ್ಯಾಖ್ಯಾನ. ಸಾಧ್ಯಂತೆ ಇತಿ ಸಾಧ್ಯಾಃ ಆರಾಧಿಸಲ್ಪಡುವ ದೇವತೆಗಳು ಸಾಧ್ಯರೆಂದು ಕ್ಷೀರಸ್ವಾಮಿ ವ್ಯಾಖ್ಯಾನ. ಇತರರಿಂದ ಸಾಧ್ಯವಾಗದ ಕಾರ್ಯವನ್ನು ಇವರು ಸಾಧಿಸುವುದರಿಂದ ಸಾಧ್ಯರೆಂದು ದುರ್ಗಾಚಾರ್ಯರ ವ್ಯಾಖ್ಯಾನ. ವಿಶ್ವಸೃಟ್ ಋಷಿಗಳೇ ಸಾಧ್ಯರು. ಇವರು ಸಹಸ್ರಸಂವತ್ಸರ ಸತ್ರದಿಂದ ಇಷ್ಟವಾದ ಪ್ರಪಂಚವನ್ನು ಸೃಷ್ಟಿಸಿದ ರೆಂದು ಪ್ರಸಿದ್ಧಿಯಿದೆ. ಅಧಿದೈವನ್ನಾಶ್ರಯಿಸಿದರೆ ರಶ್ಮಿಗಳಾಗುತ್ತವೆ. ಮುಂದೆ ಹೇಳುವ ಮಂತ್ರವು ಇವರ ಪ್ರಧಾನ ಸ್ತುತಿಯನ್ನು ಪ್ರತಿಪಾದಿಸುತ್ತದೆ.

**ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆ ಗತ ದಾಶ್ವಾಂಸೋ ದಾಶುಷಃ ಸುತಂ ॥ ೭ ॥**

ಎಲೈ ವಿಶ್ವೇದೇವತೆಗಳೇ, ನೀವು ಮನುಷ್ಯರನ್ನು (ಅಥವಾ ಯಜ್ಞಮಾಡತಕ್ಕವರನ್ನು) ಸಂರಕ್ಷಿಸುವವರು ಮತ್ತು ಯಜ್ಞಕರ್ಮಗಳಿಗೆ ಫಲವನ್ನು ಕೊಟ್ಟು ಮನುಷ್ಯರನ್ನು ಪೋಷಿಸತಕ್ಕವರು. ಇಂತಹ ನೀವು ಯಜಮಾನನು ನಿಮಗಾಗಿ ಸಿದ್ಧಪಡಿಸಿರುವ ಸೋಮವನ್ನು ಪಾನಮಾಡುವುದಕ್ಕಾಗಿ ಇಲ್ಲಿಗೆ ಬನ್ನಿರಿ.

ಇಲ್ಲಿಂದ ಮುಂದಿನ ಮೂರು ಋಕ್ಕುಗಳಿಗೆ ವೈಶ್ವದೇವಸ್ತ್ರೃಚವೆಂದು ಹೆಸರು. ಈ ಋಕ್ಕುಗಳನ್ನು ಅಭಿಜಿತ್ ಸವನದಲ್ಲಿ ಹೇಳುವರು. ಮತ್ತು ಚಾತುರ್ಮಾಸ್ಯವೆಂಬ ಯಾಗದಲ್ಲಿ ಸೋಮರಸವನ್ನು ತೆಗೆಯುವ ದಿವಸ ಅಧ್ವರ್ಯುವು ಸೋಮವನ್ನು ದ್ರೋಣಕಲಶವೆಂಬ ಒಂದು ದೊಡ್ಡ ಮರದಪಾತ್ರೆಯಿಂದ ಸೋಮವನ್ನು ತೆಗೆಯುವಾಗ ಈ ಮಂತ್ರಗಳನ್ನು ಪಠಿಸುವನು.

**ಓಮಾಸಃ**— ಸಂಬೋಧನಪ್ರಥಮಾಬಹುವಚನವು. ಈ ಶಬ್ದಕ್ಕೆ ರಕ್ಷಕರು, ಸಹಾಯಮಾಡುವವರು ಎಂದರ್ಥವು. ಋಗ್ವೇದದಲ್ಲಿ ಇನ್ನೆಲ್ಲಿಯೂ ಈ ಶಬ್ದದ ಪ್ರಯೋಗವಿಲ್ಲ.

**ಚರ್ಷಣೀಧೃತಃ**—ಚರ್ಷಣೀಶಬ್ದವು ಮನುಷ್ಯಾರ್ಥಸೂಚಕವಾದ ಇಪ್ಪತ್ತೈದು ಶಬ್ದಗಳ ಮಧ್ಯದಲ್ಲಿ ಪಠಿತ ವಾಗಿರುವುದು (ನಿ. ೨-೩).

**ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯಸಿ** । (ಋ. ಸಂ. ೧-೭-೯)

**ಧರ್ತಾರಾ ಚರ್ಷಣೀನಾಂ** । (ಋ. ಸಂ. ೧-೧೭-೨)

**ಸೇದು ರಾಜಾಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ಪರಿ ತಾ ಬಭೂವ** ॥ (ಋ. ಸಂ. ೧-೩೨-೧೫) ಇವೇ ಮೊದಲಾದ ಋಕ್ಕುಗಳಲ್ಲಿ ಚರ್ಷಣೀನಾಂ ಎಂಬ ಶಬ್ದಕ್ಕೆ ಭಾಷ್ಯಕಾರರೂ, ಇತರರೂ ಮನುಷ್ಯರೆಂದೇ ಅರ್ಥ ಮಾಡಿರುವರು. Monier Williams ಎಂಬ ಪಂಡಿತನು ಚರ್ಷಣೀ ಶಬ್ದವು ಕೃಷ್—ಉಳು, ವ್ಯವಸಾಯಮಾಡು ಎಂಬ ಧಾತುವಿನಿಂದ ಉಂಟಾಗಿರುವುದರಿಂದ ಚರ್ಷಣೀ ಎಂದರೆ ಉಳುವವರು, ವ್ಯವಸಾಯಮಾಡುವ ಜನರು ಎಂದರ್ಥ ಮಾಡಿದಾರೆ. ಈ ಅರ್ಥವೂ ಸಾಧುವಾದುದೆಂದು ತೋರುತ್ತದೆ. ಇತರ ಪಾಶ್ಚಾತ್ಯ ಪಂಡಿತರು ಇದಕ್ಕೆ ಅರ್ಥಮಾಡುವಾಗ

Man, people, race, stock, tribe ಎಂಬ ಶಬ್ದಗಳನ್ನು ಉಪಯೋಗಿಸಿದಾರೆ. ಈ ಪದವನ್ನು ವಿಶೇಷಣವಾಗಿ ಉಪಯೋಗಿಸುವ ಸಂದರ್ಭದಲ್ಲಿ, hastening, brisk, active ಎಂಬ ಅರ್ಥವಿರುವುದೆಂದು ಹೇಳುವರು. Griffith ಎಂಬುವರು ಈ ಶಬ್ದವು ಚರ್ ಸಂಚರಿಸು ಎಂಬ ಧಾತುವಿನಿಂದ ಉಂಟಾಗಿರುವುದರಿಂದ ಈ ಚರ್ಷಣೀಶಬ್ದವು Living being ಪ್ರಾಣಿಗಳು ಎಂಬ ಅರ್ಥವನ್ನು ಸೂಚಿಸುವುದೆಂದು ಹೇಳುರು. ಋಗ್ವೇದಕಾಲದಲ್ಲಿ ಆರ್ಯರು ವ್ಯವಸಾಯದಲ್ಲಿ ನಿರತರಾಗಿದ್ದುದರಿಂದ Cultivating people ಎಂಬ ಅರ್ಥವೇ ಸಮಂಜಸವಾಗಿರುವುದೆಂದು ಅನೇಕ ಅಭಿಮತವು. ಧೃ ಎಂಬ ಧಾತುವಿಗೆ ಧಾರಣೆ ಪೋಷಣೆ ಎಂಬರ್ಥವಿರುದರಿಂದ ಚರ್ಷಣೀಧೃತಃ ಎಂಬ ಶಬ್ದಕ್ಕೆ ಮನುಷ್ಯರನ್ನು ಪೋಷಿಸ ತಕ್ಕವರು, ರಕ್ಷಿಸತಕ್ಕವರು ಎಂಬು ಅರ್ಥಮಾಡುವ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ.

ವಿಶ್ವೇ ದೇವಾಸಃ—ಅಶ್ವಿನಾ ಮೊದಲಾದ ದೇವತಾವಿಶೇಷಗಳು ಸೂಚಿಸುವ ಮೂವತ್ತೊಂದು ನಾಮಗಳ ಮಧ್ಯದಲ್ಲಿ ಈ ದೇವತೆಗಳ ಹೆಸರು ಪಠಿತವಾಗಿರುವುದು. ಇವರು ಪ್ರತ್ಯೇಕವಾದ ವಿಶೇಷದೇವತೆಗಳೆಂದು ಭಾಷ್ಯಕಾರರು ಹೇಳುವರು. ಕೆಲವರು ಎಲ್ಲಾ ದೇವತೆಗಳೆಂದು ಹೇಳುವರು. ಆದರೆ ವಿಶ್ವೇದೇವತೆಗಳೆಂದು ಪ್ರತ್ಯೇಕವಾದ ದೇವತೆಗಳನ್ನು ಋಷಿಗಳು ಆರಾಧಿಸುತ್ತಿದ್ದರೆಂದು ಇತರ ಸೂಕ್ತಗಳಲ್ಲಿರುವ ವಿಷಯಗಳಿಂದ ಸ್ಪಷ್ಟವಾಗಿ ಹೇಳಬಹುದು. ಈ ವಿಚಾರದಲ್ಲಿ ಯಾಸ್ಕರು ಈ ಋಕ್ಕಿಗೆ ವಿವರಣೆಯನ್ನು ಬರೆದಿರುವರು—ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ದೇವಾ ಇಹಾಗಚ್ಛತ ದತ್ತವಂತೋ ದತ್ತವತಃ ಸುತಮಿತಿ, ತದೇತದೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ (ನಿ. ೧೨-೪೦) ಈ ಋಕ್ಕಿನ ಅರ್ಥವಿಚಾರದಲ್ಲಿ ನಾವು ಹೇಳಿರುವ ಅರ್ಥಕ್ಕೂ ಯಾಸ್ಕರ ಅರ್ಥಕ್ಕೂ ಏನೂ ವ್ಯತ್ಯಾಸವಿಲ್ಲ. ಆದರೆ ಯಾಸ್ಕರ ಅಭಿಪ್ರಾಯದಂತೆ ವಿಶ್ವೇದೇವಾಃ ಎಂದರೆ ಎಲ್ಲಾ ದೇವತೆಗಳು ಎಂದು ಮತ್ತು ವಿಶ್ವೇದೇವರೆಂದರೆ ಆ ಹೆಸರಿನಿಂದ ಕರೆಯಲ್ಪಡುವ ವಿಶೇಷದೇವತೆಗಳೆಂದು ಶಾಕಪೂಣಿ ಎಂಬುವರ ಮತವೆಂದು ಯಾಸ್ಕರೇ ಹೇಳಿರುವರು. ಆದುದರಿಂದ ಅವರ ಕಾಲದಲ್ಲಿಯೇ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ದೃಢವಾಗಿ ಹೇಳಬಹುದು. ಈಗ ಗೃಹ್ಯಾದಿಕರ್ಮಗಳಲ್ಲಿ ರೂಢಿಯಿರುವಂತೆ ಹೇಳುವುದಾದರೆ ಈ ವಿಶ್ವೇದೇವತೆಗಳು ಸಾಧಾರಣದೇವತೆಗಳ ಗುಂಪಿಗೆ ಸೇರಿದವರಲ್ಲವೆಂದೂ ಇವರದೇ ಹದಿಮೂರು ಜನರ ವಿಶೇಷ ಗುಂಪೆಂದೂ ತಿಳಿಯಬರುವುದು. ಅದು ಹೇಗಾದರೂ ಇರಲಿ ಋಗ್ವೇದದಲ್ಲಿ ವರ್ಣಿಸಿರುವ ವಿಶ್ವೇದೇವತೆಗಳು ಪ್ರತ್ಯೇಕವಾದ ದೇವತೆಗಳ ಗುಂಪಿಗೆ ಸೇರಿದವರೆಂದು ಹೇಳುವುದೇ ಯುಕ್ತವಾಗಿ ತೋರುವುದು.

ಆ ಗತ—ಮಧ್ಯಮಪುರುಷ ಬಹುವಚನವು. ಈಗಿನ ಸಂಸ್ಕೃತದಲ್ಲಿ ಇದು ಆಗಚ್ಛತ ಎಂದಾಗುವುದು.

ದಾಶ್ವಾಂಸಃ—ದಾಶೃ ದಾನ ಎಂಬ ಧಾತುವಿನಿಂದ ಉಂಟಾದ ಈ ಪದಕ್ಕೆ ಕೊಡುವವರು, ಎಂದರೆ ತಮ್ಮನ್ನು ಸ್ತೋತ್ರಮಾಡುವ ಮನುಷ್ಯರಿಗೆ ಫಲವನ್ನು ಕೊಡುವವರು ಎಂದರ್ಥವು. ಪಾಶ್ಚಾತ್ಯಪಂಡಿತು ಈ ಶಬ್ದವನ್ನು Donors, distributors, bestowers of riches. ಮೊದಲಾದ ಶಬ್ದಗಳಿಂದ ವಿವರಿಸಿರುವರು.

ದಾಶುಷಃ—ಈ ಶಬ್ದವು ಷಷ್ಠ್ಯೈಕವಚನವು, (ದೇವತೆಗಳಿಗೆ ಹವಿಸ್ಸನ್ನು) ಕೊಡುವ ಅಥವಾ ಕೊಡುತ್ತಿರುವ ಎಂದರ್ಥವು. ಇದು ದಾಶ್ವಾಂಸಃ ಎಂಬ ಶಬ್ದದಂತೆಯೇ ಇದೆ. ಇದಕ್ಕೆ ಪಾಶ್ಚಾತ್ಯಪಂಡಿತರ ಅರ್ಥವು Of the

distributors (Ludwing, Benefey), of the worshipper (Rosen, Griffith, Williams), of the offeres ಮೊದಲಾದ ಶಬ್ದಗಳಿಂದ ವಿವರಿಸಲ್ಪಟ್ಟಿದೆ.

ವಿಶ್ವೇದೇವತೆಗಳ ವಿಷಯದಲ್ಲಿ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಹೇಳುವುದು ಅವಶ್ಯಕವಾಗಿರುವುದು. ಋಗ್ವೇದದಲ್ಲಿ ವಿಶ್ವೇದೇವತೆಗಳನ್ನು ಮಾತ್ರ ಸ್ತೋತ್ರಮಾಡಿರುವ ೬೩ ಸೂಕ್ತಗಳಿವೆ. ಇದಲ್ಲದೆ ಋ. ಸಂ. ೧-೧೬೪ ನೆಯ ಸೂಕ್ತದಲ್ಲಿ ಮೊದಲನೆಯ ೪೧ ಋಕ್ಕುಗಳು ವಿಶ್ವೇದೇವತೆಗಳ ಪರವಾಗಿವೆ. ಇವುಗಳಲ್ಲೆಲ್ಲಾ—ಋ. ಸಂ. ೧೦-೧೫೫ ಈ ಸೂಕ್ತವನ್ನು ಬಿಟ್ಟು—ಉಳಿದ ಎಲ್ಲಾ ಸೂಕ್ತಗಳಲ್ಲಿಯೂ ಅನೇಕ ದೇವತೆಗಳನ್ನು ಎಂದರೆ ಇತರ ಸೂಕ್ತಗಳಲ್ಲಿರುವಂತೆ ಅಗ್ನಿ, ಇಂದ್ರ ಮೊದಲಾದ ದೇವತೆಗಳನ್ನು ಸ್ತುತಿಸಿರುವುದಲ್ಲದೆ ವೃಕ್ಷಗಳು, ನದಿಗಳು, ಪರ್ವತಗಳು, ಗೋವುಗಳು, ಅಶ್ವಗಳು ಮೊದಲಾದವುಗಳೂ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲದೆ ಇತರ ದೇವತಾಕವಾದ ಸೂಕ್ತಗಳಲ್ಲಿ ಅನೇಕ ಕಡೆ ಒಟ್ಟು ೧೭ ಋಕ್ಕುಗಳು ವಿಶ್ವೇದೇವತಾಕವಾಗಿವೆ. ಈ ಸ್ಥಳಗಳಲ್ಲೆಲ್ಲಾ ವಿಶ್ವೇದೇವತೆಗಳೇ ಈ ಋಕ್ಕುಗಳಿಗೆ ದೇವತೆಗಳೆಂದು ಹೇಳಲ್ಪಟ್ಟಿದೆ. ಮತ್ತು ಋ. ಸಂ. ೧೦-೧೨೫-೧ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಜೊತೆಯಲ್ಲಿ ವಸುರುದ್ರಾದಿತ್ಯರೂ ಸೇರಿದಾರೆ.

ವಾಜಸನೇಯ ಸಂಹಿತೆಯ (ಶುಕ್ಲಯಜುರ್ವೇದ) ೨-೨೨ ನೆಯ ಮಂತ್ರದಲ್ಲಿ ಇಂದ್ರನು, ಆದಿತ್ಯರು, ವಸುಗಳು, ಮರುತ್ತು ವಿಶ್ವೇದೇವತೆಗಳೊಡನೆ ಸೇರಬೇಕೆಂದು ಪ್ರಾರ್ಥಿಸಲ್ಪಟ್ಟಿರುವರು. ಅದೇ ಸಂಹಿತೆಯ ೩೩-೪೫ ರಿಂದ ೪೭ ಮಂತ್ರಗಳಲ್ಲಿ ಇಂದ್ರ, ವಾಯು ಮತ್ತು ಇತರ ದೇವತೆಗಳು ವಿಶ್ವೇದೇವತೆಗಳ ಜೊತೆಯಲ್ಲಿ ಸ್ತುತಿಸಲ್ಪಟ್ಟಿದ್ದಾರೆ.

ಅಥರ್ವಣವೇದದ ೨೦-೬೨-೬ ನೆಯ ಮಂತ್ರದಲ್ಲಿ ವಿಶ್ವೇದೇತೆಗಳನ್ನು ಏಕವಚನದಲ್ಲಿ ಸೂಚಿಸಲಾಗಿದೆ ಮತ್ತು ವಿಶ್ವೇದೇವತೆಗಳ ಪರವಾದ ಅನೇಕ ಸೂಕ್ತಗಳು ಅಥರ್ವಣವೇದದಲ್ಲಿವೆ.

ಬ್ರಾಹ್ಮಣಗಳಲ್ಲಿಯೂ ಸಹ ವಿಶ್ವೇದೇವತೆಗಳ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಕೌಶೀತಕೀ ಬ್ರಾಹ್ಮಣದ ೪-೧೪, ಗೋಪಥ ಬ್ರಾಹ್ಮಣದ ೧-೨೦ ನೆಯ ಮಂತ್ರಗಳಲ್ಲಿ ಎಲ್ಲಾ ದೇವತೆಗಳನ್ನು ವಿಶ್ವೇದೇವತೆಗಳೆಂಬ ಹೆಸರಿನಿಂದಲೇ ಸಂಭೋದನೆ ಮಾಡಲಾಗಿದೆ. ಶತಪಥ ಬ್ರಾಹ್ಮಣದ ೩-೯-೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳು ಸೂರ್ಯನ ಕಿರಣಗಳೆಂದೂ ಶ. ಬ್ರಾ. ೧೪-೨-೨-೩೭ ರಲ್ಲಿ ಪ್ರಾಣಾದಿವಾಯುಗಳೆಂದೂ ಶ. ಬ್ರಾ. ೭-೧-೧-೪೨ ರಲ್ಲಿ ಯಜ್ಞಕರ್ಮಗಳೆಂದೂ, ಶ. ಬ್ರಾ. ೨-೪-೪-೧೩ ರಲ್ಲಿ ಇಂದ್ರಾಗ್ನಿಗಳೆಂದೂ ಕರೆಯಲ್ಪಟ್ಟಿದ್ದಾರೆ. ತೈತ್ತಿರೀಯ ಆರಣ್ಯಕದಲ್ಲಿ (ತೈ. ಆ. ೫-೧-೬) ವಿಶ್ವೇದೇವತೆಗಳ ಜೊತೆಯಲ್ಲಿ ಇಂದ್ರಾಗ್ನಿಗಳು ಸ್ತುತಿಸಲ್ಪಟ್ಟಿದ್ದಾರೆ.

ಪುರಾಣಗಳಲ್ಲಿ ಕೆಲವುಕಡೆ ಈ ವಿಶ್ವೇದೇವತೆಗಳು ದಿಕ್ಕುಗಳಿಗೆ ಅಧಿಪತಿಗಳೆಂದು ಹೇಳಲ್ಪಟ್ಟಿದೆ. ನಿರುಕ್ತದಲ್ಲಿ (ನಿ. ೧೨-೩೯) ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳೂ ಎಂದಿದೆ. ನಿರುಕ್ತದ ಭಾಷ್ಯಕಾರರಾದ ದುರ್ಗಾಚಾರ್ಯರೆಂಬುವರು ವಿಶ್ವೇದೇವತೆಗಳೆಂದರೆ ಸೂರ್ಯನ ಕಿರಣಗಳೆಂದು ಅರ್ಥಮಾಡಿದಾರೆ. ನಿರುಕ್ತಕಾರರಾದ ಯಾಸ್ಕರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವುದಲ್ಲದೆ ಶಾಕಪೂಣಿ ಎಂಬುವರ ಅಭಿಪ್ರಾಯವನ್ನು ಸೂಚಿಸಿರುವರು. ಶೌನಕರು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ (ಬೃ. ದೇ. ೧-೧೨೮ ರಿಂದ ೧೩೪ ಶ್ಲೋಕಗಳು) ವಿಶ್ವೇದೇವತೆಗಳ ವಿಷಯವಾಗಿ ಹೇಳುವಾಗ. ವಿಶ್ವೇದೇವಾಃ ಎಂದರೆ ಸಮಸ್ತದೇವತೆಗಳು; ಎಂದು ಯಾಸ್ಕರು ಮತ್ತು ಶಾಂಡಿಲ್ಯರು ಅಭಿಪ್ರಾಯಪಡುವರೆಂದು ಹೇಳಿದಾರೆ; ಶೌನಕರ ಮತವೂ ಅದೇರೀತಿ ಇದೆ.

ಸಾಯಣಾಚಾರ್ಯರು ಈ ಋಕ್ಕಿಗೆ ವ್ಯಾಖ್ಯಾನಮಾಡುವಾಗ ವಿಶ್ವೇದೇವರೆಂದರೆ ಅಶ್ವಿನೀದೇವತೆಗಳೇ ಮೊದಲಾದ ಮೂವತ್ತೊಂದು ಮಂದಿ ದೇವತೆಗಳು ಸೇರಿ ವಿಶ್ವೇದೇವತೆಗಳೆಂದು ಕರೆಯುಲ್ಪಡುವರೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾರೆ.

ಪಾಶ್ಚಾತ್ಯಪಂಡಿತರಲ್ಲಿ Langlois, Kaegi, Hopkins ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದೂ Wilson, Griffith, Macdonell ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳು ಅಥವಾ ವಿಶ್ವೇದೇವತೆಗಳೆಂಬ ಪ್ರತ್ಯೇಕವಾದ ದೇವತೆಗಳ ಸಮೂಹ ಎಂಬ ಎರಡು ವಿಧವಾದ ಅರ್ಥವನ್ನು ಅನುಮೋದಿಸುವರು.

ಮುಖ್ಯಾಭಿಪ್ರಾಯವೇನೆಂದರೆ—ಪೂರ್ವದಲ್ಲಿ ಎಂದರೆ ಬಹುಪ್ರಾಚೀನಕಾಲದಲ್ಲಿ ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳೆಂಬ ಅರ್ಥವೇ ರೂಢಿಯಲ್ಲಿದ್ದು ಕಾಲಕ್ರಮೇಣ ವಿಶ್ವೇದೇವರೆಂದರೆ, ಆ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹ ವೆಂದು ಭಾವಿಸುವುದು ಬಳಕೆಗೆ ಬಂತೆಂದೂ ಹೇಳಬಹುದು. ಅನೇಕ ಬ್ರಾಹ್ಮಣಗಳಲ್ಲಿಯೂ ಪುರಾಣಗಳಲ್ಲಿಯೂ ವಿಶ್ವೇ ದೇವತೆಗಳೇ ಒಂದು ಪ್ರತ್ಯೇಕವಾದ ದೇವತೆಗಳು ಗುಂಪೆಂದು ಸೂಚಿಸಲ್ಪಟ್ಟಿದೆ. ಆದರೆ ಯಾಸ್ಕರ ಕಾಲದಲ್ಲಿಯೂ ಸಹ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ಯಾಸ್ಕರ ನಿರುಕ್ತದಿಂದಲೇ ತಿಳಿದುಬರುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ನಲವತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕಚತ್ವಾರಿಂಶತ್ ಖಂಡಃ

## ನಲವತ್ತೊಂದನೆಯ ಖಂಡವು

ಯಜ್ಞೇನ ಯಜ್ಞಮಯಜಂತ ದೇವಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ (ಋ. ಸಂ. ೧-೧೬೪-೫೦- ॥ ೧೦-೯೦-೧೬) ಯಜ್ಞೇನ ಯಜ್ಞಮಯಜಂತ ದೇವಾ ಅಗ್ನಿನಾಗ್ನಿಮಯ ಜಂತ ದೇವಾ ಅಗ್ನಿಃ ಪಶುರಾಸೀತ್ತಮಾಲಭಂತ ತೇನಾಯಜಂತೇತಿ ಚ ಬ್ರಾಹ್ಮಣಂ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಮಸೇವಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ಸಾಧನಾದ್ ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ

ಪೂರ್ವಂ ದೇವಯುಗಮಿತ್ಯಾಖ್ಯಾನಂ ವಸವೋ ಯದ್ವಿವಸತೇ ಸರ್ವಮಗ್ನಿರ್ವೆ ಸುಭಿ ರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಸ್ಥಾನಾ ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ ದ್ಯುಸ್ಥಾನಾಸ್ತೇಷಾಮೇಷಾ ಭವತಿ ॥ ೪೧ ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾ
ಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ
ಸಾಧ್ಯಾಃ ಸಂತಿ ದೇವಾಃ ॥

(ಋ. ಸಂ. ೨-೩-೨೩) ೮-೪-೧೯೬ ಯ. ವಾ. ಸಂ, ೩೦-೧೯)

ಸಾಧ್ಯ ಪ್ರಧಾನಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ದೇವಭಾವವನ್ನು ಹೊಂದುವ ಮೊದಲು ಜ್ಞಾನಕರ್ಮ ಸಮುಚ್ಚಯಕಾರಿಗಳಾದ, ಯಜಮಾನ ಭಾವವನ್ನು ಹೊಂದಿರುವ ಸಾಧ್ಯರು ಅಂದರೆ ವಿಶ್ವಸೃಜರಾದ ಪ್ರಾಣಾಖ್ಯ ಋಷಿಗಳು ಸ್ಥಾವರಜಂಗಮ ಭಾವವನ್ನು ಹೊಂದಿರುವ ಹವಿಸ್ಸಿನ ರೂಪವಾದ ಅಗ್ನಿಯಿಂದ, ಅಗ್ನಿಯನ್ನೇ ಅಂದರೆ ಆತ್ಮನನ್ನು ಸರ್ವ ದೇವತಾಭೂತವಾದ ಆದಿತ್ಯಾದಿ ನಾಡಿಕಾದಿಂದ ಪೂಜಿಸಿದರು. ಈ ಪೂಜಾಕರ್ಮದಿಂದ ಆ ರೀತಿಯಾದ ಜ್ಞಾನಯುಕ್ತ ಕರ್ಮ ಗಳು ಆತ್ಮಭಾವ ಹೊಂದಲು ಸಾಧನಗಳಾದವು. ಆ ಋಷಿಗಳೂ ಅದರಿಂದ ಆತ್ಮಭಾವಹೊಂದಿ ಮಹತ್ತಾದ ಆತ್ಮಾನಂದವನ್ನು ಪಡೆದರು. ಮೊದಲು ಅವರು ಜ್ಞಾನಕರ್ಮ ಸಮುಚ್ಚಯಕಾರಿಗಳಾಗಿದ್ದರು. ವಿಶ್ವಸೃಜಃ ಪ್ರಥಮೇ ಸತ್ರಮಾಸತ ಎಂದು ಶ್ರುತಿಯಲ್ಲಿ ಇದು ಪ್ರಸಿದ್ಧವಾಗಿದೆ.

ಯಜ್ಞೇನ ಯಜ್ಞಮಯಜಂತ ದೇವಾಃ । ಅಗ್ನಿನಾಗ್ನಿ ಮಯಜಂತ
ದೇವಾಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಜ್ಞಪದದಿಂದ ಅಗ್ನಿ ವಿವೃತವಾಗಿದೆ. ಉಕ್ತಾರ್ಥವನ್ನು ಬ್ರಾಹ್ಮಣದಿಂದ ವಿವರಿಸು ತ್ತಾರೆ.

ಅಗ್ನಿಃ ಪಶುರಾಸೀತ್ತಮಾಲಭಂತ ತೇನಾಯಜಂತೇತಿ ಚ ಬ್ರಾಹ್ಮಣಂ
ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇಹನಾಕಂ ಮಹಿಮಾನಃ
ಸಮಸೇವನಾಃ । ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ।
ಸಾಧನಾಃ । ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವಂ
ದೇವಯುಗಮಿತಾಖ್ಯಾನಮ್ ॥

ಹೋಮಿಸಲ್ಪಡುವ ಹವಿಸ್ಸೂ ಅಗ್ನಿಯೆಂದು ಬ್ರಾಹ್ಮಣದಲ್ಲಿ ವಿವೃತವಾಗಿದೆ. ಸಾಧನಾ ಎಂದು ಸಾಧ್ಯಶಬ್ದದ ಪರ್ಯಾಯವನ್ನು ತೋರಿಸುತ್ತಾರೆ. ಇವರು ದ್ಯುಸ್ಥಾನದ ದೇವಗಣರೆಂದು ನೈರುಕ್ತ ಸಿದ್ಧಾಂತ ಶಿರಸ್ಸೂ ಅಧ್ಯಾತ್ಮವಾದುದುರಿಂದ ದ್ಯುಸ್ಥಾನಭಕ್ತಿಯಾಗುತ್ತದೆ. ಸಪ್ತಋಷಿಗಳೂ, ದೇವತೆಗಳೂ, ವಿಶ್ವೇದೇವತೆಗಳೂ ಸಾಧ್ಯರೆಂದರ್ಥ. ಇವೆಲ್ಲವೂ ಪ್ರಾಣಿಗಳೂ ಅಥವಾ ರಶ್ಮಿಗಳಾದುದರಿಂದ ಪೂರ್ವೋಕ್ತವ್ಯಾಖ್ಯಾನ ಸಂಗತವಾಗುತ್ತದೆ. ಪೂರ್ವದಲ್ಲಿ ಸಾಧ್ಯರೆಂದರೆ ದೇವಯುಗವಾಗಿತ್ತು. ವಿರಾಡುಪಾಸ್ತಿಸಾಧಕದೇವತೆಗಳನ್ನು ಸಾಧ್ಯರೆಂದು ಇತಿಹಾಸಕುಶಲರು ಹೇಳುತ್ತಾರೆ. ಅವರು ಈ ಮಂತ್ರಕ್ಕೆ ನಾರಾಯಣನೆಂಬ ಋಷಿಯನ್ನೂ ತ್ರಿಷ್ಟುಪ್ ಛಂದಸ್ಸನ್ನೂ ಹೇಳುತ್ತಾರೆ ಅವ್ಯಕ್ತಮಹದಾದಿಗಳಿಂದ ವಿಲಕ್ಷಣನಾದ ಚೇತನಸ್ವರೂಪ ಪುರುಷನು ಇಲ್ಲಿ ಪ್ರತಿಪಾದಿತನಾಗುತ್ತಾನೆ. ಪ್ರಜಾಪತಿಪ್ರಾಣರೂಪಗಳು ಮಾನಸಸಂಕಲ್ಪದಿಂದ ಯಥೋಕ್ತಸ್ವರೂಪವುಳ್ಳ ಪ್ರಜಾಪತಿಯನ್ನು ಪೂಜಿಸಿದುವು. ಆ ಪೂಜೆಯಿಂದ ಪ್ರಸಿದ್ಧವಾದ ಜಗದ್ರೂಪವಿಕಾರಗಳನ್ನು ಧರಿಸುವ ಅವು ಪ್ರಮುಖ ಸ್ಥಾನವನ್ನು ಹೊಂದಿದುವು ಇಲ್ಲಿಯವರೆಗೆ ಸೃಷ್ಟಿಪ್ರತಿಪಾದಿತಸೂಕ್ತಭಾಗದ ಅರ್ಥವು ಸಂಗ್ರಹಿಸಲ್ಪಟ್ಟಿದೆ. ಮುಂದೆ ಉಪಾಸನಾ ಆದರಫಲವನ್ನು ಸಂಗ್ರಹದಿಂದ ನಿರೂಪಿಸಿರುತ್ತಾರೆ. ಯಾವ ವಿರಾಟ್‌ಪ್ರಾಪ್ತಿರೂಪಸ್ವರ್ಗದಲ್ಲಿ ವಿರಾಡುಪಾಸನಾಸಾಧಕರಾದ ದೇವತೆಗಳು ಇರುತ್ತಾರೋ ಆ ವಿರಾಟ್‌ಪ್ರಾಪ್ತಿರೂಪ ಸ್ವರ್ಗವನ್ನು ಅವನನ್ನುಪಾಸಿಸುವ ಮಹಾತ್ಮರು ಹೊಂದುತ್ತಾರೆ. ಹೀಗೆ ಇತಿಹಾಸಜ್ಞರು ವ್ಯಾಖ್ಯಾನ ಮಾಡುತ್ತಾರೆ.

**ವಸವೋ ಯದ್ವಿವಸತೇ ಸರ್ವಮ್ ॥**

ವಸುಗಳು ಕ್ರಮಪ್ರಾಪ್ತರಾಗಿರುತ್ತಾರೆ. ವಸ-ಆಚ್ಛಾದನೇ ಧಾತು ಇದಕ್ಕೆ ಉಪ್ರತ್ಯಯ ಒಂದು ವಸು ಎಂದಾಗಿದೆ. ಇವರು ತ್ರಿಸ್ಥಾನರಾಗುತ್ತಾರೆ. ಸಕಲವನ್ನೂ ಆಚ್ಛಾದನಮಾಡುವ ಸ್ವಭಾವವುಳ್ಳವರು ವಸುಗಳು.

**ಅಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ, ತಸ್ಮಾತ್ಪೃಥಿವೀ ಸ್ಥಾನಾಃ ॥**

ವಸುಗಳು ತ್ರಿಸ್ಥಾನರೆಂದುದರಿಂದ ಮೊದಲು ಪೃಥಿವೀಸ್ಥಾನದಿಂದ ಅಗ್ನಿಭಕ್ತಿಯನ್ನು ತೋರಿಸುತ್ತಾರೆ. ಸಮಾಖ್ಯಾ ಅಂದರೆ ಯೌಗಿಕವಾದ ಶಬ್ದ. ಪೃಥಿವಿಯಲ್ಲಿ ಸಕಲವೂ ಅಗ್ನಿಯಿಂದ ಆಚ್ಛಾದಿತವಾದುದರಿಂದ ಅಲ್ಲಿ ಅಗ್ನಿವಾಸವ ಶಬ್ದದಿಂದ ಹೇಳಿದೆ.

**ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ, ತಸ್ಮಾನ್ಮಧ್ಯಸ್ಥಾನಾಃ ॥**

ಮಧ್ಯಸ್ಥಾನದಲ್ಲಿ ಎಲ್ಲವೂ ಇಂದ್ರಸಂಬಂಧಿಯಾದುದರಿಂದ ವಾಸವವೆಂದರೆ ಇಂದ್ರನಾಗುತ್ತಾನೆ.

**ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ಯುಸ್ಥಾನಾಃ ॥**

ದ್ಯುಸ್ಥಾನದಲ್ಲಿ ವಸುಗಳೆಂದರೆ ಆದಿತ್ಯರಶ್ಮಿಗಳಾಗುತ್ತವೆ. ತಮಸ್ಸು ಅಂದರೆ ಕತ್ತಲೆಯನ್ನು ದೂರಮಾಡುವುದರಿಂದ ರಶ್ಮಿಗಳು ವಸುಗಳಾಗುತ್ತವೆ. ಅಥವಾ ವೃಷ್ಟ್ಯಾದಿದಾನದಿಂದ ಲೋಕವು ಜೀವಿಸಿರುವಂತೆ ಮಾಡುತ್ತವೆ. ಆಗ ಣಿಚ್ ಬಂದಿದ್ದರೂ ಛಾಂದಸವಾಗಿ ಲುಕ್ ಬಂದಿದೆಯೆಂದು ತಿಳಿಯಬೇಕು.

**ತೇಷಾಮೇಷಾ ಭವತಿ ॥ ೪೧ ॥**

ಮುಂದೆ ಹೇಳುವ ಮಂತ್ರವು ವಸುಗಳ ಪ್ರಧಾನಸ್ತುತಿಯನ್ನು ಪ್ರತಿಪಾದಿಸುತ್ತವೆ.

**ಯಜ್ಞೇನ ಯಜ್ಞಮಯಜಂತ ದೇವಸ್ತಾನಿ ಧರ್ಮಾಣಿ ಪ್ರಥಮಾನ್ಯಾ ಸನ್ । ತೇಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೫೦ ॥**

ಯಜ್ಞಕರ್ತರು ಯಜ್ಞದಿಂದ ಯಜ್ಞವನ್ನು ನಿರ್ವಹಿಸಿದರು. ಆ ವಿಧವಾಗಿ ನೆರವೇರಿಸಿದ ಯಜ್ಞಕರ್ಮಗಳು ಅತ್ಯಂತ ಶ್ರೇಷ್ಠವಾಗಿ ಆದವು ಅನಂತರ, ಪ್ರಾಚೀನರೂ, ಹಿಂದೆ ನೆರವೇರಿಸಿದ ಯಜ್ಞಾದಿಸಾಧನಗಳಿಂದ ಕೂಡಿದವರೂ ಮತ್ತು ದೇವತ್ವವನ್ನು ಪಡೆದವರೂ ಸಹ ಸೇರಿ ಸೇವಿಸುತ್ತಿರುವ ಸ್ವರ್ಗವನ್ನು ಈ ಯಜಮಾನರೂ ಪಡೆದು ತಮ್ಮ ಅತ್ಯಂತ ಪ್ರಭಾವ ಶಾಲಿಯಾದ ಮಹಿಮೆಯಿಂದ ಕೂಡಿಕೊಂಡು ಸ್ವರ್ಗಸುಖವನ್ನನುಭವಿಸುತ್ತಾರೆ.

[ಅಗ್ನಿಮಂಥನಕಾಲದಲ್ಲಿ ಯಜ್ಞೇನ ಯಜ್ಞಂ ಎಂಬ ಈ ಋಕ್ಕನ್ನು ಪರಿಧಾನಮಂತ್ರವನ್ನಾಗಿ ಉಪಯೋಗಿಸ ಬೇಕೆಂದು ಅಶ್ವಲಾಯನಶ್ರೌತಸೂತ್ರದ ಯಜ್ಞೇನ ಯಜ್ಞಮಯಜಂತ ದೇವಾ ಇತಿ ಪರಿದಧ್ಯಾತ್ ಎಂಬ ಸೂತ್ರದಿಂದ ವಿವೃತವಾಗಿರುವುದು. (ಅ. ೨-೧೬)

ಇದು ಯಜ್ಞಫಲವನ್ನು ಸ್ತುತಿಸತಕ್ಕ ಮಂತ್ರವಾಗಿದೆ. ಶ್ರೇಷ್ಠವಾದ ಯಜ್ಞಕ್ಕೆ ಉತ್ತಮವಾದ ಸ್ವರ್ಗಪ್ರಾಪ್ತಿಯೇ ಫಲವೆಂದು ತೇ ಹ ನಾಕಂ ಮಹಿಮಾನಃ ಸಚಂತೇ ಎಂದು ಪ್ರಶಂಸಿಸಿದೆ.

ನಾಕಂ—ನಾಕಂ ಸ್ವರ್ಗಲೋಕವನ್ನು ನಾಸ್ಮಿನ್ನಕಮಸ್ತೀತಿ ನಾಕಃ ಸ್ವರ್ಗಃ ದುಃಖವಿಲ್ಲದಿರುವುದರಿಂದ ಸ್ವರ್ಗಕ್ಕೆ ನಾಕವೆಂಬ ಹೆಸರು ಪ್ರಸಿದ್ಧವಾಗಿದೆ. ನಾಕಶಬ್ದವನ್ನು ಋಕ್ಸಂಹಿತೆಯಲ್ಲಿ ಬೇರೆಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಯಜ್ಞ, ಸ್ವರ್ಗ, ಆದಿತ್ಯ ಇತ್ಯಾದ್ಯರ್ಥಗಳಲ್ಲಿ ಈ ಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ಆರು ಸಾಧಾರಣ ನಾಮ ಗಳಲ್ಲಿ ಸೇರಿಸಿ ಅವುಗಳ ಅರ್ಥವನ್ನು ಸಾಧಾರಣವೆಂದು ವಿವರಿಸುತ್ತಾ ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ। ದ್ಯುಲೋಕಕ್ಕೂ ಆದಿತ್ಯನಿಗೂ ಸಾಧಾರಣವಾದ ಪರ್ಯಾಯಪದಗಳೆಂದೂ ತಿಳಿಸಿದ್ದಾರೆ. (ನಿ. ೨-೧೩) ಅನಂತರ ಈ ಶಬ್ದದ ನಿರ್ವಚನವನ್ನು ತಿಳಿಸುತ್ತಾ,

**ನಾಕ ಆದಿತ್ಯೋ ಭವತಿ; ನೇತಾ ರಸಾನಾಂ । ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ ।**

(ನಿ. ೨-೧೪)

ರಸದ ವಾಹಕನೂ ಮತ್ತು ತೇಜೋವಾಹಕನೂ ಆದ ಆದಿತ್ಯನಿಗೆ ನಾಕವೆಂದು ಹೆಸರು ಎಂದು ಆದಿತ್ಯನ ಪರ್ಯಾಯವಾಗಿ ಈ ಪದವಿರುವುದನ್ನು ತಿಳಿಸಿ ಅನಂತರ,

**ಅಥ ದ್ಯೌಃ; ಕಮಿತಿ ಸುಖನಾಮ, ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ ।**

(ನಿ. ೨-೧೪)

ಕಂ ಎಂಬುದು ಸುಖದ ಪರ್ಯಾಯವಾಗಿದೆ: ಸುಖವಿಲ್ಲದಿರುವುದು ಅಕಂ, ಆದರ ಅಭಾವವಿಲ್ಲದಿರುವುದು ಎಂದರೆ ಸುಖಾಭಾವಾಭಾವ (ಸುಖಾಭಾವವಿಲ್ಲದಿರುವುದು) ದುಃಖರಹಿತವಾದುದು ಎಂದು ವಿವರಿಸಿ,

ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಂ ।

(ಕಾಠಕ. ಸಂ. ೨೧-೨)

ಎಂಬ ವಾಕ್ಯವನ್ನುದಹರಿಸಿ ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ । ಈ ಲೋಕಕ್ಕೆ ಹೋದವರಿಗೆ ದುಃಖವೇ ಇಲ್ಲಿ. ಸುಕೃತಿಗಳಿಗೆ ಮಾತ್ರ ಈ ಲೋಕಕ್ಕೆ ಪ್ರವೇಶವುಂಟು ಎಂದು ನಾಕಶಬ್ದದ ಅರ್ಥವನ್ನು ತಿಳಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪದವು ಆದಿತ್ಯನ ಪರ್ಯಾಯವಾಗಿ ಕೆಲವು ಕಡೆಯೂ, ಸ್ವರ್ಗದ ಪರ್ಯಾಯವಾಗಿ ಕೆಲವು ಕಡೆಯೂ ಉಪಯೋಗಿಸಲ್ಪಟ್ಟದೆ.

ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರುಕ್ತುಭಿರ್ಹಿತಂ ।

(ಋ. ಸಂ. ೧-೩೪-೮)

ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ । ಮರುದ್ಭಿರಗ್ನ ಆ ಗಹಿ ॥

(ಋ. ಸಂ. ೧-೧೯-೬)

ಇತ್ಯಾದಿಋಕ್ಕುಗಳಲ್ಲಿ ನಾಕಶಬ್ದಕ್ಕೆ ಸೂರ್ಯನೆಂದರ್ಥಮಾಡಿದೆ.

ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ ॥
ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನಧಿ ಬರ್ಹಿಷಿ ಪ್ರಿಯೇ ।

(ಋ. ಸಂ. ೧-೮೫-೭)

ಇತ್ಯಾದಿಋಕ್ಕುಗಳಲ್ಲಿ ನಾಕಶಬ್ದಕ್ಕೆ ಸ್ವರ್ಗವೆಂದರ್ಥಮಾಡಿದೆ.

ವೃಷ್ಣೇವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।

(ಬೃ. ದೇ. ೨-೬೬)

ಎಂಬ ಬೃಹದ್ದೇವತಾವಾಕ್ಯದಲ್ಲಿ ಅಂತರಿಕ್ಷವೆಂದಿದೆ.

ಇತೋಽಸಾವಾದಿಯೋ ದ್ವಾಮಿಶೇನ ಪರಮಾದಿತ್ಯಾಜ್ಜ್ಯಾಯಃ ತನ್ನಾಕಂ ತದ್ವಿಶೋಕಂ ।

(ಛಾ. ಉ. ೨-೧೦-೫)

ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ ಶೋಕರಹಿತವಾದ ಸ್ವರ್ಗಲೋಕವು ಆದಿತ್ಯನ ಲೋಕಕ್ಕಿಂತ ಪರವಾದುದೆಂದು ಹೇಳಿದೆ.

ಶತಪಥಬ್ರಾಹ್ಮಣದಲ್ಲಿಯೂ ತೈತ್ತಿರೀಯ ಉಪನಿಷತ್ತಿನಲ್ಲಿಯೂ ಬ್ರಹ್ಮವಿತ್ತಾದ ಮುದ್ಗಲಪುತ್ರನಿಗೆ ನಾಕ ಎಂಬ ಹೆಸರು ಪ್ರಸಿದ್ಧವಾಗಿದೆ ದುಃಖರಹಿತನೆಂದರ್ಥ.

ಯಜ್ಞೇನ ಯಜ್ಞಮಯಜಂತ ಎನ್ನುವಾಗ ಯಜ್ಞಶಬ್ದಕ್ಕೆ ಎರಡು ಮೂರು ಅರ್ಥಗಳು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ.

೧) ಯಜ್ಞೇನ ನಿರ್ಮಥ್ಯಾಗ್ನಿನಾ ; ಯಜ್ಞಂ–ಹೋಮಸಾಧನಮಾಹವನೀಯಂ ಅಯಜಂತಪೂಜಿತ-ವಂತಃ । ನಿರ್ಮಂಥ್ಯಾಗ್ನಿಯಿಂದ ಹೋಮಸಾಧನವಾದ ಆಹವನೀಯಾಗ್ನಿಯನ್ನು ಸಂಯೋಜಿಸಿ ಪೂಜಿಸಿದರು ಎಂದರ್ಥ ಎರಡನೆಯದಾಗಿ,

೨) ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮಯಜಂತ ಪೂಜಿತವಂತಃ. ಪಶುರೂಪವಾದ ಅಗ್ನಿಯಿಂದ ಯಜ್ಞಾಗ್ನಿಪೂಜಿಸಿದರು ಎಂದೂ, ಮೂರನೆಯದಾಗಿ,

೩) ಯಜ್ಞೇನ ಜ್ಞಾನಾದಿಯಜ್ಞೇನ ಯಜ್ಞಂ ವಿಷ್ಣುಮಯಜಂತ । ಜ್ಞಾನ ರೂಪವಾದ ಯಜ್ಞದಿಂದ ವಿಷ್ಣುರೂಪವಾದ ಯಜ್ಞವನ್ನು ಪೂಜಿಸಿದರು ಎಂದೂ ಅರ್ಥ ಸಾಯಣರು ಈ ಮೂರು ಅರ್ಥಗಳಿಗೂ ಶ್ರುತಿವಾಕ್ಯಗಳನ್ನು ದಹರಿಸಿ ತಮ್ಮ ಅರ್ಥಗಳನ್ನು ಸಮರ್ಥಿಸಿದ್ದಾರೆ.

ಈ ಮೂರರಲ್ಲಿ ಮೊದಲನೆಯ ಅರ್ಥದ ಸಮರ್ಥನೆಗೆ ಸಾಯಣರು ಕೆಳಗಿನ ತೈತ್ತಿರೀಯಸಂಹಿತಾವಾಕ್ಯವನ್ನು ದಹರಿಸಿ ವಿವರಿಸಿದ್ದಾರೆ.

> ಅಗ್ನಿಶ್ಚ ವಾ ಏತೌ ಸೋಮಶ್ಚ ಕಥಾ ಸೋಮಾಯಾತಿಥ್ಯಂ ಕ್ರಿಯತೇ ನಾಗ್ನಯ ಇತಿ ಯದಗ್ನಾವಗ್ನಿ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ ಕ್ರಿಯತೇಽಥೋ ಖಲ್ವಾಹುರಗ್ನಿಸ್ಸರ್ವಾ ದೇವತಾ ಇತಿ ಯದ್ಧವಿರಾಸಾದ್ಯಾಗ್ನಿಂ ಮಂಥತಿ ಹವ್ಯಾಯೈವಾಸನ್ನಾಯ ಸರ್ವಾ ದೇವತಾ ಜನಯತಿ ॥
>
> (ತೈ. ಸಂ. ೬–೨.೧–೭)

ದೇವತೆಗಳಿಗೂ ವೈಷಮ್ಯವು ಪ್ರಾಪ್ತವಾದಾಗ ಅಸುರರನ್ನು ಓಡಿಸಲು ಮಾಡಿದ ಪ್ರಯತ್ನದಲ್ಲಿ ನೆರವೇರಿಸಿದ ಯಜ್ಞವಿಧಾನ ವನ್ನು ಈ ಪ್ರಕರಣದಲ್ಲಿ ಹೇಳಿದೆ. ಆ ಸಂದರ್ಭದಲ್ಲಿ ಯಜ್ಞಕ್ಕೆ ಪಾದಗಳಂತಿರುವ ಅಗ್ನಿ ಸೋಮ ಎಂಬ ದೇವತೆಗಳು ಪಡೆ ಯುವ ಆತಿಥ್ಯದ ಸ್ವರೂಪವನ್ನು ಮೇಲಿನ ಸಂಹಿತಾವಾಕ್ಯಗಳಲ್ಲಿ ವರ್ಣಿಸಿದೆ. ಅದರಲ್ಲಿ ಪ್ರಥಮತಃ ಒಂದು ಶಂಕೆಯು ಸೂಚಿತವಾಗಿದೆ. ಸ್ಥೂಲವಾಗಿ ನೋಡುವುದಕ್ಕೆ ಈ ಸಂದರ್ಭದಲ್ಲಿ ಸೋಮನಿಗೆ ಮಾತ್ರ ಅರ್ಪಿಸುವಂತೆಯೂ, ಅಗ್ನಿಗೆ ಆ ಆತಿಥ್ಯಲಾಭವಿಲ್ಲದಿರುವಂತೆಯೂ ತಿಳಿದಿರುತ್ತದೆ. ಇಬ್ಬರೂ ಒಂದೇ ವಿಧವಾದ ಪೂಜೆಗೆ ಅರ್ಹರಾಗಿರುವಾಗ ಸೋಮನಿಗೆ ಲಭಿಸಿದ ಆತಿಥ್ಯವು ಅಗ್ನಿಗೆ ಏತಕ್ಕಾಗಿ ಲಭಿಸಲಿಲ್ಲ ಎಂಬ ಪ್ರಶ್ನೆಯು ಸಂಭವಿಸಿದಾಗ ಅದಕ್ಕೆ ಉತ್ತರವಾಗಿ ಅಗ್ನಿಂ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ " ಅಗ್ನಿಮಂಥನವನ್ನು ಮಾಡಿ ಅಗ್ನಿಯನ್ನು ಅದರಮೇಲೆ ಸ್ಥಾಪಿಸುವುದರಿಂದಲೇ ಅಗ್ನಿಗೆ ಪೂರ್ಣವಾಗಿ ಆತಿಥ್ಯವನ್ನು ಅರ್ಪಿಸಿದಂತಾಯಿತು. ಅದೂ ಅಲ್ಲದೆ ಅಗ್ನಿಯೇ ಸಕಲದೇವತೆಗಳೂ ಆದುದರಿಂದ ಅಗ್ನಿಯನ್ನು ಮಂಥನಮಾಡಿ ಅಗ್ನಿಯಲ್ಲಿ ಆಹುತ್ಯಾರ್ಪಣವನ್ನು ಮಾಡುವುದರಿಂದ ಸಲಕಲ ದೇವತೆಗಳಿಗೂ ಸಹ ಪೂಜೆಯನ್ನು ಸಲ್ಲಿಸಿದಂತೆ

ಎಂದು ಹೇಳಿದೆ. "ಯಜ್ಞೇನ ಯಜ್ಞಮಯಜಂತ" ಎಂಬುದರಲ್ಲಿ ಈ ಭಾವವು ಸೂಚಿತವಾಗಿದೆ ಎಂದರ್ಥ. ಅಗ್ನಿ ಮಂಥನವನ್ನು ಮಾಡಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸುವುದರಿಂದ ಸಕಲ ದೇವತಾಪೂಜೆಯೂ ನೆರವೇರಿದಂತಾಗುವುದರಿಂದ ಈ ಯಜನವನ್ನು "ತಾನಿ ಧರ್ಮಾಣಿ ಪ್ರಥಮಾನ್ಯಾಸನ್" ಈ ಕರ್ಮಗಳು ಅತ್ಯಂತ ಶ್ರೇಷ್ಠವಾದುದೂ, ಫಲಗಳನ್ನುಕೊಡ ತಕ್ಕದ್ದೂ ಆದವೆಂದು ಪ್ರಶಂಸಿಸಿದೆ.

ಪ್ರಥಮಾನಿ–ಪ್ರಥಮ ಇತಿ ಮುಖ್ಯನಾಮ । ಪ್ರಥಮಾನಿ ಪ್ರಕೃಷ್ಟತಮಾನಿ । ಅತ್ಯಂತ ಶ್ರೇಷ್ಠವಾದ ಧರ್ಮಗಳು ಎಂದರ್ಥ. ನಿರುಕ್ತಕಾರರು.

> ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।
> ತ್ರಯಸ್ತಪಂತಿ ಪೃಥಿವೀ ಮನೂಷಾ ದ್ವಾ ಬೃಬೂಕಂ ವಹತಃ ಪುರೀಷಂ ॥
>
> (ಋ. ಸಂ. ೧೦–೨೭–೨೩)

ಅಲ್ಲಿ ಪ್ರಥಮಶಬ್ದಕ್ಕೆ ಪ್ರಥಮ ಇತಿ ಮುಖ್ಯನಾಮ । ಪ್ರಥಮೋ ಭವತಿ (ನಿ. ೨–೨೪) ಎಂದೇ ವಿವರಿಸಿರುವುದನ್ನೂ ಉದಹರಿಸಿ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವೆಂದು ಸಾಯಣರು ತಿಳಿಸಿದ್ದಾರೆ.

ಎರಡನೆಯದಾಗಿ, ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮಯಜಂತ । ಪಶುಭೂತ ವಾದ ಅಗ್ನಿಯಿಂದ ಅಗ್ನಿರೂಪವಾದ ಯಜ್ಞವನ್ನು ಪೂಜಿಸಿದರು ಎಂದಿದೆ. ನಿರುಕ್ತಕಾರರ ವಿವರಣೆಯು ಈ ಎರಡನೆಯ ಅರ್ಥ ವನ್ನು ಸಮರ್ಥಿಸುತ್ತದೆ.

> ಯಜ್ಞೇನ ಯಜ್ಞಮಯಜಂತ ದೇವಾಃ । ಅಗ್ನಿನಾಗ್ನಿಮಯಜಂತ ದೇವಾಃ । 'ಅಗ್ನಿಃ ಪಶುರಾಸೀ ತ್ತಮಾಲಭಂತ ತೇನಾಯಜಂತ' ಇತಿ ಚ ಬ್ರಾಹ್ಮಣಂ ॥

ದೇವತೆಗಳು ಯಜ್ಞಾದಿಕರ್ಮಗಳಿಂದ ಯಜ್ಞವನ್ನು ಸೇವಿಸಿದರು. ಎಂದರೆ, ದೇವತೆಗಳು ಅಗ್ನಿಮಂಥನದಿಂದ ಅಗ್ನಿಯನ್ನು ಪೂಜಿಸಿದರು ಎಂಬುದು ಒಂದು ವಿಧ, ಅಥವಾ ಪಶುವಾಗಿದ್ದ ಅಗ್ನಿಯನ್ನು ಕರತಂದು ಆ ಪಶುವನ್ನು ಅರ್ಪಿಸಿ ಯಜ್ಞವನ್ನು ಸೇವಿಸಿದರು ಎಂದೂ ಆಗಬಹುದು. ಅಗ್ನಿಯು ಪಶುರೂಪನಾಗಿದ್ದನು ಎಂಬುದರ ಅರ್ಥವೇನು ? ಇದಕ್ಕೆ ಆಧಾರವೇನು ಎಂದರೆ, ನಿರುಕ್ತಕಾರರು ಐತರೇಯಬ್ರಾಹ್ಮಣದ ವಾಕ್ಯವನ್ನುದಹರಿಸಿ ಈ ಅರ್ಥವನ್ನು ಹೇಳಿದ್ದಾರೆ. ಐತರೇಯಬ್ರಾಹ್ಮಣದಲ್ಲಿ ಈ ವಿಷಯವನ್ನು ಕೆಳಗೆ ಉದಹರಿಸಿರುವ ವಾಕ್ಯಗಳಲ್ಲಿ ತಿಳಿಸಿದೆ.

> ಅಗ್ನಿಂ ಮಂಥಂತಿ ಸೋಮೇ ರಾಜನ್ಯಾಗತೇ ತದ್ಯಥೈವಾದೋ ಮನುಷ್ಯರಾಜ ಆಗತೇಽನ್ಯಸ್ಮಿನ್ ವಾರ್ಹ ತ್ಯುಕ್ಷಾಣಂ ವಾ ವೇಹತಂ ವಾಕ್ಷದಂತ ಏವಮೇವಾಸ್ಮಾ ಏತತ್ ಕ್ಷದಂತೇ ಯದಗ್ನಿಮಂಥಂ ತ್ಯಗ್ನಿರ್ಹಿ ದೇವಾನಾಂ ಪಶುಃ ॥
>
> (ಐ. ಬ್ರಾ. ೧–೧೫)

ಸೋಮರಾಜನು ಅತಿಥಿಯಾಗಿ ಬಂದಾಗ ಅಗ್ನಿಯನ್ನು ಮಥನಮಾಡಿದರು. ಇದು ಸಹಜವಾದುದು. ಯಾವ ರೀತಿ ಮಾನವರು ತಮ್ಮ ರಾಜನು ತಮ್ಮ ಮನೆಗೆ ಅತಿಥಿಯಾಗಿ ಬಂದಾಗ ವೃಷಭಾದಿಗಳನ್ನು ಅರ್ಪಿಸಿ ಅತಿಥಿಸತ್ಕಾರವನ್ನು

ಮಾಡವರೋ ಅದರಂತೆಯೇ ದೇವತೆಗಳೂ ಸಹ ಅಗ್ನಿರೂಪವಾದ ಪಶುವನ್ನು ಅರ್ಪಿಸಿ ಸೋಮರಾಜನನ್ನು ಸತ್ಕರಿಸಿದರು. ಅಗ್ನಿಯು ದೇವತೆಗಳ ಪಶುವೆಂಬುದು ಪ್ರಸಿದ್ಧವಾದ ವಿಷಯವಾಗಿದೆ. ಅಗ್ನಿಗೆ ಯಜ್ಞಪಶುವೆಂಬ ಹೆಸರು ಏತಕ್ಕೆ ಬಂದಿತು, ಹೇಗೆ ಪ್ರಸಿದ್ಧವಾಯಿತು ಎಂದು ತಿಳಿಸುವ ಸನ್ನಿವೇಶವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

ಪ್ರಜಾಪತಿರಗ್ನಿರೂಪಾಣ್ಯಭ್ಯಧ್ಯಾಯತಃ । ಸ ಯೋಽಯಂ ಕುಮಾರೋ ರೂಪಾಣ್ಯನುಪ್ರವಿಷ್ಟ ಆಸೀತ್ತ ಮನ್ವೈಚ್ಛತ್ಸೋಽಗ್ನಿರವೇದನು ವೈ ಮಾ ಪಿತಾ ಪ್ರಜಾಪತಿರಿಚ್ಛತಿ ಹಂತ ತದೂ ಪಮಸಾನಿ ಯನ್ಮ ಏಷ ನ ವೇದೇತಿ ॥

(ಶ. ಬ್ರಾ. ೬-೨-೧-೧)

ಪ್ರಜಾಪತಿಯು ಅಗ್ನಿಯ ರೂಪಗಳನ್ನು ಕುರಿತು ಧ್ಯಾನಮಾಡಿದನು. ಬೇರೆಬೇರೆ ರೂಪಗಳಲ್ಲಿ ಪ್ರವೇಶಿಸಿರುವ ಕುಮಾರನನ್ನು ಹುಡುಕಿದನು. ಆಗ ಅಗ್ನಿಗೆ ಈ ಅನ್ವೇಷಣವು ತಿಳಿಯಿತು. ಆಗ ಅವನು "ಪ್ರಜಾಪತಿಯು ನನ್ನನ್ನೇ ಹುಡುಕುತ್ತಿದ್ದಾನೆ. ನಾನು ಅವನಿಗೆ ತಿಳಿಯದಂತಾಗುತ್ತೇನೆ" ಎಂದುಕೊಂಡನು.

ಸ ಏತಾನ್ಪಂಚ ಪಶೂನಪಶ್ಯತ್ । ಪುರುಷಮಶ್ವಂ ಗಾಮವಿಮಜಂ ಯದಪಶ್ಯತ್ತಸ್ಮಾದೇತೇ ಪಶವಃ ॥
ಸ ಏತಾನ್ಪಂಚ ಪಶೂನ್ಪ್ರಾವಿಶತ್ । ಏತೇ ಪಂಚ ಪಶವೋಽಭವತ್ತಮು ವೈ ಪ್ರಜಾಪತಿರನ್ವೈಚ್ಛತ್॥

(ಶ. ಬ್ರಾ. ೬-೨-೧-೨)

ಆಗ ಪುರುಷನನ್ನೂ, ಅಶ್ವವನ್ನೂ, ಗೋವನ್ನೂ, ಮೇಷವನ್ನೂ, ಅಜವನ್ನೂ ನೋಡಿದನು. ಅಗ್ನಿಯು ಅವುಗಳನ್ನು ನೋಡಿದುದರಿಂದ (ಅಪಶ್ಯತ್.... ಪಶ್) ಅವುಗಳಿಗೆ ಪಶುಗಳೆಂಬ ಪರ್ಯಾಯನಾಮವು ಪ್ರಸಿದ್ಧವಾಯಿತು.

ಸ ಏತಾನ್ಪಂಚ ಪಶೂನ್ಪ್ರಾವಿಶತ್ । ಸ ಏತೇ ಪಂಚ ಪಶವೋಽಭವತ್ತಮು ವೈ ಪ್ರಜಾಪತಿರನ್ವೈಚ್ಛತ್ ॥

(ಶ. ಬ್ರಾ. ೬-೨-೧-೩)

ಅಗ್ನಿಯು ಆ ಐದು ಪಶುಗಳಲ್ಲಿಯೂ ಪ್ರವೇಶಿಸಿದನು. ಅವುಗಳ ತಾದಾತ್ಮ್ಯವನ್ನೇ ಪಡೆದನು. ಆದರೂ ಸಹ ಪ್ರಜಾಪತಿಯು ಅಗ್ನಿಯನ್ನು ಹುಡುಕುತ್ತಲೇ ಇದ್ದನು.

ಸ ಏತಾನ್ಪಂಚ ಪಶೂನಪಶ್ಯತ್ । ಯದಪಶ್ಯತ್ತಸ್ಮಾದೇತೇ ಪಶವಸ್ತೇಷ್ವೇನಮಪಶ್ಯತ್ತಸ್ಮಾದ್ವೇವೈತೇ ಪಶವಃ ॥

(ಶ. ಬ್ರಾ. ೬-೨-೧-೪)

ಪ್ರಜಾಪತಿಯೂ ಸಹ ಆ ಐದು ಪಶುಗಳನ್ನೂ ನೋಡಿದನು. ಅವನು ದರ್ಶನಮಾಡಿದ್ದರಿಂದಾಗಲಿ (ಪಶ್) ಅಥವಾ ಅವುಗಳಲ್ಲಿ ಅಗ್ನಿಯನ್ನು ದರ್ಶನಮಾಡಿದ್ದರಿಂದಾಗಲಿ (ಪಶ್) ಅವುಗಳಿಗೆ ಪಶುಗಳೆಂಬ ಹೆಸರು ಪ್ರಸಿದ್ಧವಾಯಿತು. ಆಗ ಪ್ರಜಾಪತಿಯು ಈ ರೀತಿಯಾಗಿ ಆಲೋಚಿಸಿದನು.

ಸ ಐಕ್ಷತ । ಇಮೇ ವಾ ಅಗ್ನಿರಿಮಾನೇವಾತ್ಮಾನಮಭಿಸಂಸ್ಕರವೈ ಯಥಾ ವಾ ಅಗ್ನಿಃ ಸಮಿದ್ಧೋ ದೀಪ್ಯತ ಏವಮೇಷಾಂ ಚಕ್ಷುರ್ದೀಪ್ಯತೇ ಯಥಾಗ್ನೇರ್ಧೂಮ ಉದಯತ ಏವಮೇಷಾಮೂ-

ಷ್ಮೋಪಯತೇ ಯಥಾಗ್ನಿರಭ್ಯಾಹಿತಂ ಪಹತ್ಯೇವಂ ಬಪ್ಸತಿ ಯಥಾಗ್ನೇರ್ಭಸ್ಮ ಸೀದತ್ಯೇವಮೇಷಾಂ ಪುರುಷಗ್‌ಂ ಸೀದತೀನೋ ವಾ ಅಗ್ನಿರಿಮಾನೇವಾತ್ಮಾನಭಿಸಂಸ್ಕರವಾ ಇತಿ ತಾನ್ನಾನಾ ದೇವತಾಭ್ಯ ಅಲಿಪ್ಸತ ವೈಶ್ವಕರ್ಮಾಣಂ ಪುರುಷಂ ವಾರುಣಮಶ್ವನ್ಯೆಂದ್ರಮೃಷಭಂ ತ್ವಾಷ್ಟ್ರಮವಿಮಾಗ್ನೇ-ಯಮಜಂ ॥

(ಶ. ಬ್ರಾ. ೬-೨-೧-೫)

"ಇವೇ ಅಗ್ನಿಗಳು. ಇವನ್ನು ನನ್ನ ಆತ್ಮದಲ್ಲಿ ಐಕ್ಯಮಾಡುತ್ತೇನೆ. ಪ್ರಜ್ವಲಿತನಾದ ಅಗ್ನಿಯು ಯಾವ ರೀತಿ ಪ್ರಕಾಶಿಸುತ್ತಾನೆಯೋ, ಈ ಪಶುಗಳ ಕಣ್ಣುಗಳೂ ಅದೇ ರೀತಿ ಪ್ರಕಾಶಿಸುತ್ತಿವೆ. ಅಗ್ನಿಯಿಂದ ಧೂಮವು ಹೇಗೆ ಊರ್ಧ್ವಮುಖವಾಗಿ ಹೊರಡುವುದೋ ಅದೇ ರೀತಿ ಇವುಗಳ ಮುಖಗಳಿಂದಲೂ ಧೂಮವು (ಉಸಿರು) ಊರ್ಧ್ವಮುಖವಾಗಿ ಹೊರಡುತ್ತಿದೆ. ಅಗ್ನಿಯೊಳಕ್ಕೆ ಅರ್ಪಿಸಿದ ಆಹುತಿಗಳನ್ನು ಅಗ್ನಿಯು ಯಾವ ರೀತಿ ಭಕ್ಷಿಸುತ್ತಾನೋ ಅದರಂತೆ ಈ ಪಶುಗಳೂ ಸಹ ತಮ್ಮ ಬಾಯಲ್ಲಿ ಹಾಕಿದ ಸಕಲ ವಸ್ತುಗಳನ್ನೂ ನುಂಗುತ್ತವೆ. ಅಗ್ನಿಯ ಭಸ್ಮವು ಕೆಳಗೆ ಬೀಳುವಂತೆ ಈ ಪಶುಗಳ ಪುರೀಷವೂ ಕೆಳಗೆ ಬೀಳುತ್ತದೆ. ಆದುದರಿಂದ ಇವುಗಳೇ ಅಗ್ನಿಯ ರೂಪಾಂತರಗಳು. ಆದುದರಿಂದ ಇವನ್ನು ನನ್ನಲ್ಲೇ ಐಕ್ಯಮಾಡಿಕೊಳ್ಳುತ್ತೇನೆ" ಎಂದು ಯೋಚಿಸಿ ಅವುಗಳನ್ನು ಬೇರೆಬೇರೆ ದೇವತೆಗಳಿಗೆ ಆಹುತಿಗಳನ್ನಾಗಿ ಅರ್ಪಿಸಲು ಮನಸ್ಸು ಮಾಡಿದನು. ಪುರುಷನನ್ನು ವಿಶ್ವಕರ್ಮನಿಗೂ, ಅಶ್ವವನ್ನು ವರುಣನಿಗೂ, ವೃಷಭವನ್ನು ತ್ವಷ್ಟೃವಿಗೂ, ಅಜವನ್ನು ಅಗ್ನಿಗೂ ವಿಭಾಗ ಮಾಡಿದನು. ಆಮೇಲೆ ಪುನಃ ಹೀಗೆ ಯೋಚಿಸಿದನು.

ಸ ಐಕ್ಷತ । ನಾನಾ ವಾ ಇದಂ ದೇವತಾಭ್ಯ ಆಲಿಪ್ಸೇಽಗ್ನೇರ್ವಹಗ್‌ಂ ರೂಪಾಣಿ ಕಾಮಯೇ ಹಂತೈ-ನಾನಗ್ನಿಭ್ಯಃ ಕಾಮಾಯಾಲಭಾ ಇತಿ ತಾನಗ್ನಿಭ್ಯಃ ಕಾಮಾಯಾಲಭತ ತದ್ಯದಗ್ನಿಭ್ಯ ಇತಿ ಬಹೂನಿ ಹ್ಯಗ್ನಿರೂಪಾಣ್ಯಭ್ಯಧ್ಯಾಯದಥ ಯತ್ಕಾಮಾಯೇತಿ ಕಾಮೇನ ಹ್ಯಾಲಭತ ತಾನಾಪ್ರೀತಾನ್ಪರ್ಯಗ್ನಿ-ಕೃತಾನುದೀಚೋ ನೀತ್ವಾ ಸಮಜ್ಞಪಯತ್ ।

(ಶ. ಬ್ರಾ. ೬-೨-೧-೬)

"ಇವುಗಳನ್ನು ಪ್ರತ್ಯೇಕವಾಗಿ ಬೇರೆಬೇರೆ ದೇವತೆಗಳಿಗೆ ಅರ್ಪಿಸಲು ಮನಸ್ಸು ಮಾಡಿದೆನು. ಆದರೆ ನಾನೇ ಸ್ವತಃ ಅಗ್ನಿಯ ರೂಪವನ್ನು ಇಚ್ಛಿಸುತ್ತೇನೆ. ಆ ಇಚ್ಛೆಯು ನೆರವೇರುವಂತೆ ಇವುಗಳನ್ನು ಅಗ್ನಿಯ ರೂಪಾಂತರಗಳಿಗಾಗಿ ಆಹುತಿರೂಪದಿಂದ ಅರ್ಪಿಸುತ್ತೇನೆ" ಎಂದು ಸಂಕಲ್ಪಿಸಿ ಹಾಗೆಯೇ ಮಾಡಿದನು. ಅಗ್ನಿಯ ರೂಪಗಳು ಬಹಳವಾಗಿದ್ದವು. ಅವನ ಇಚ್ಛೆಗನುಗುಣವಾಗಿ ಅವುಗಳನ್ನು ಉತ್ತರದಿಕ್ಕಿಗೆ ಕರೆದುಕೊಂಡು ಹೋಗಿ ಅವುಗಳನ್ನು ಆಹುತಿಯಾಗರ್ಪಿಸಿದನು.

ತ ಏತೇ ಸರ್ವೇ ಪಶವೋ ಯದಗ್ನಿಃ । ತಸ್ಮಾದಗ್ನೌ ಪಶವೋ ರಮಂತೇ ಪಶುಭಿರೇವ ತತ್ಪಶವೋ ರಮಂತೇ ತಸ್ಮಾದ್ಯಸ್ಯ ಪಶವೋ ಭವಂತಿ ತಸ್ಮಿನ್ನಗ್ನಿರಾಧೀಯತೇಽಗ್ನಿರ್ಹ್ಯೇಷ ಯತ್ಪಶವಸ್ತತೋ ವೈ ಪ್ರಜಾಪತಿರಗ್ನಿರಭವತ್ ।

(ಶ. ಬ್ರಾ. ೬-೨-೧-೧೨)

ಅಗ್ನಿಯೇ ಈ ಆಹುತಿಪಶುಗಳಾಗಿರುವುದರಿಂದ ಪಶುಗಳೆಲ್ಲವೂ ಅಗ್ನಿಯ ಹತ್ತಿರವಿರಲು ಸಂತೋಷಪಡುತ್ತವೆ. ಒಂದು ಪಶುವು

ಇನ್ನೊಂದು ಪಶುವಿನೊಂದಿಗೆ ಕ್ರೀಡಿಸುತ್ತದೆ. ಆದುದರಿಂದಲೇ ಪಶುಸಂಪತ್ತಿನಿಂದ ಕೂಡಿದವನ ಹತ್ತಿರ ಅಗ್ನಿಯು ಅಧೀನವಾಗಿರುತ್ತದೆ. ಅಗ್ನಿಯೇ ಆ ಪಶುವಾದುದರಿಂದ ಪ್ರಜಾಪತಿಯೂ ಅಗ್ನಿರೂಪವನ್ನು ಪಡೆದನು.

ಯಜ್ಞಮಯಜಂತ ದೇವಾಃ—ಎಂಬುದಕ್ಕೆ ಸಾಯಣರು ಅಗ್ನೇರೇವ ಮೂರ್ತಿಭೇದೇನ ದೇವತ್ವಂ ಚ ಪಶುತ್ವಂ ಚ ದ್ರಷ್ಟವ್ಯಂ । ಮೂರ್ತಿಭೇದದಿಂದ ಅಗ್ನಿಗೇ ದೇವತ್ವವೂ, ಪಶುತ್ವವೂ ಇರುವುದೆಂದೂ ತಿಳಿಸಿದ್ದಾರೆ. ದೇವಾಃ ಎಂದರೆ ಯಜಮಾನರೆಂದೂ ಆಗಬಹುದು. ಅಥವಾ ದೇವತೆಗಳೆಂದಾದರೂ ಆಗಬಹುದು.

ಮೂರನೆಯದಾಗಿ, ಯಜ್ಞೇನ ಯಜ್ಞಮಯಜಂತ ಎನ್ನುವುದಕ್ಕೆ ಯಜ್ಞೇನ ಜ್ಞಾನಾದಿ ಯಜ್ಞೇನ ಯಜ್ಞಂ ವಿಷ್ಣುಮಯಜಂತ । ಯಜ್ಞರೂಪನಾದ ವಿಷ್ಣುವನ್ನು ಪೂಜಿಸಿದರು ಎಂದರ್ಥಮಾಡಿದೆ.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥

(ಭಗವದ್ಗೀತಾ ೪-೨೮)

ಎಂದು ಯಜ್ಞದಲ್ಲಿ ಅನೇಕ ಬಗೆಗಳನ್ನು ಹೇಳಿದೆ. ಅದರಲ್ಲಿ ಜ್ಞಾನಯಜ್ಞವೂ ಒಂದಾಗಿದೆ. ಜ್ಞಾನಂ ಶಾಸ್ತ್ರಾರ್ಥಪರಿಜ್ಞಾನಂ ಯಜ್ಞಃ ಯೇಷಾಂ ತೇ ಜ್ಞಾನಯಜ್ಞಾಃ (ಶಾಂಕರಭಾಷ್ಯ) ಶಾಸ್ತ್ರಾರ್ಥಪರಿಜ್ಞಾನರೂಪವಾದ ಯಜ್ಞವುಳ್ಳವರು ಯಾರೋ ಅವರನ್ನು ಜ್ಞಾನಯಜ್ಞರೆಂದು ಕರೆದಿದೆ.

ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥

(ಭಗವದ್ಗೀತಾ ೪-೩೦-೩೧)

ಎಲ್ಲಾ ವಿಧವಾದ ಯಜ್ಞಗಳನ್ನೂ ತಿಳಿದವರು ಯಜ್ಞದಿಂದಲೇ ಅವರ ದೋಷಗಳನ್ನು ನಾಶಮಾಡಿಕೊಂಡು ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುತ್ತಾರೆ. ಯಜ್ಞರಹಿತನಾದವನಿಗೆ ಇಹದಲ್ಲಿಯೇ ಉತ್ತಮವಾದ ಸ್ಥಾನವಿರುವುದಿಲ್ಲ. ಇನ್ನು ಬ್ರಹ್ಮಲೋಕದ ಪ್ರಾಪ್ತಿಯೆಲ್ಲಿ ಎಂದು ಯಜ್ಞದ ಮಹತ್ತ್ವವನ್ನು ಸ್ತುತಿಸಿದೆ.

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥

(ಭಗವದ್ಗೀತಾ ೪-೩೨)

ಈ ರೀತಿ ನಾನಾವಿಧವಾದ ಯಜ್ಞಗಳು ಬ್ರಹ್ಮನ ಮುಖದಿಂದ ವಿಸ್ತೃತವಾಗಿವೆ. [ಇಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂದಾದರೂ ಅರ್ಥವಾಗಬಹುದು; ಅಥವಾ ಪರಬ್ರಹ್ಮತತ್ತ್ವವನ್ನು ಪ್ರತಿಪಾದಿಸುವ ವೇದವೆಂದಾದರೂ ಅರ್ಥವಾಗಬಹುದು.] ಇವುಗಳೆಲ್ಲವೂ ಕಾಯಿಕ, ವಾಚಿಕ, ಮಾನಸಿಕ ಕರ್ಮೋದ್ಭವಗಳೆಂದು ತಿಳಿಯಬೇಕು. ಇವುಗಳ ಸ್ವರೂಪವನ್ನು ಅರಿತವನಿಗೆ ಮೋಕ್ಷವು ಲಭಿಸುತ್ತದೆ. ಯಜ್ಞದಲ್ಲಿ ಪ್ರಭೇದಗಳಿದ್ದರೂ ಸಹ,

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥

(ಭಗವದ್ಗೀತಾ ೪-೩೩)

ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಅತ್ಯುತ್ತಮವಾದದ್ದು. ಸಕಲ ಕರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತಿಯನ್ನು ಪಡೆಯುತ್ತವೆ. ಇತ್ಯಾದಿಯಾಗಿ ಜ್ಞಾನಯಜ್ಞದ ವೈಶಿಷ್ಟ್ಯವನ್ನು ನಾನಾಕಡೆಗಳಲ್ಲಿ ಪ್ರಶಂಸಿಸಿದೆ. ಇಂತಹ ಜ್ಞಾನಾತ್ಮಕವಾದ ಯಜ್ಞದಿಂದ ಯಜ್ಞಂ ಅಯಜಂತ ಎನ್ನುವಾಗ, ಎರಡನೆಯ ಯಜ್ಞಶಬ್ದಕ್ಕೆ ವಿಷ್ಣುವೆಂದಾಗಲೀ ಅಥವಾ ಪ್ರಜಾಪತಿಯೆಂದಾಗಲಿ ಅರ್ಥವನ್ನು ಹೇಳಬಹುದು. ಯಜ್ಞೋ ವಿಷ್ಣುಃ ಪ್ರಜಾಪತಿಃ (ಮೈತ್ರೋಪನಿಷತ್ ೪-೧೬) ಇತ್ಯಾದಿ ವಾಕ್ಯಗಳಿಂದ ಯಜ್ಞಕ್ಕೂ ವಿಷ್ಣುವಿಗೂ, ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನೇ ಹೇಳಿದೆ ಆದುದರಿಂದ ಜ್ಞಾನಯಜ್ಞದಿಂದ ವಿಷ್ಣುವನ್ನು ಪೂಜಿಸಿ ಸಾಧ್ಯರು ವಿಷ್ಣುಲೋಕವನ್ನು ಹೊಂದಿದರು ಎಂದು ತಾತ್ಪರ್ಯ. ಪವಿತ್ರವಾದ ಈ ನಾಕದಲ್ಲಿ ಹಿಂದೆ ಯಜ್ಞದಿಂದ ಯಜ್ಞವನ್ನು ಆರಾಧಿಸಿದ ಸಾಧ್ಯಾದಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಪಡೆದಿರುತ್ತಾರೆಂದರ್ಥ.

ಸಾಧ್ಯಾಃ—ಈ ಪದವನ್ನು ರಶ್ಮಿನಾಮಗಳಲ್ಲಿ ಪಠಿಸಿದೆ. (ನಿ. ೨-೧೫) ಮತ್ತು ಇದೇ ಋಕ್ಕನ್ನು ವಿವರಿಸುವಾಗ ಮುಂದೆ ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವ ದೇವಯುಗಮಿತ್ಯಾಖ್ಯಾನಂ । ನಿರುಕ್ತಕಾರರ ಮತ ದಂತೆ ದ್ಯುಲೋಕದ ದೇವತೆಗಳೆಂದರ್ಥ. ಅಥವಾ ದೇವತೆಗಳಲ್ಲಿ ಪ್ರಥಮರು ಎಂಬುದು ಸಾಂಪ್ರದಾಯಕವಾದ ಮತವೆಂದ ಯಾಸ್ಕರು ತಿಳಿಸಿದ್ದಾರೆ. (ನಿ. ೧೨-೪೧) ಸಾಧ್ಯರ ಸ್ವರೂಪವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ತಿಳಿಸಿದೆ. ಉದಾಹರಣೆಗೆ ಐತರೇಯ ಬ್ರಾಹ್ಮಣದಲ್ಲಿ ಇದೇ ಭಾಗವನ್ನು ವಿವರಿಸುತ್ತಾ :

ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥
ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥

(ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯರು. ಅವರು ಪೂರ್ವದಲ್ಲಿ ಅಗ್ನಿಯಿಂದ (ಅಗ್ನಿಮಂಥನದಿಂದ) ಅಗ್ನಿಯನ್ನು ಪೂಜಿಸಿದರು. ಅದರ ಫಲ ವಾಗಿ ಸ್ವರ್ಗಲೋಕವನ್ನು ಪಡೆದರು. ಎಂದಿದೆ. ಇದನ್ನೇ ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ । ಆದಿತ್ಯರೂ ಅಂಗಿರಸ್ಸುಗಳೂ ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿದ್ದಾರೆಂದು ಸಾಯಣರು ತಿಳಿಸಿದ್ದಾರೆ ಅಂಗಿರಸ್ಸುಗಳು ಅಗ್ನಿ ಯನ್ನು ಹುಡುಕಿತಂದದೂ ಅಗ್ನಿಪೂಜೆಯನ್ನು ಮಾಡಿದುದೂ ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಋಕ್ಸಂಹಿತೆಯಲ್ಲಿಯೂ ಇತರ ಕಡೆಗಳಲ್ಲಿಯೂ ಈ ಪದಕ್ಕೆ ಅಂಕಿತನಾಮವಾಗಿಯೂ ಒಂದು ಋಷಿಸಂತತಿಯ ನಾಮಧೇಯವಾಗಿಯೂ ಮತ್ತು ದೇವತೆಗಳ ಗುಂಪಿಗೆ ಸೇರಿದ ಹೆಸರಾಗಿಯೂ ಮೂರು ವಿಧವಾದ ಅನ್ವಯವಿದೆ. ಈ ಮೂರು ಸನ್ನಿವೇಶಗಳಲ್ಲಿಯೂ ಸಹ ಅಂಗಿರಸ್ಸುಗಳಿಗೂ ಯಜ್ಞರೂಪಿಯಾದ ಅಗ್ನಿಗೂ ಸಾಕ್ಷಾತ್ಸಂಬಂಧವನ್ನು ಹೇಳಿದೆ. ಮೊದಲನೆಯದಾಗಿ,

ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ। ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥

(ಮುಂಡಕೋಪನಿಷತ್. ೧-೧-೩)

ಎಂಬಲ್ಲಿ ಅಂಗಿರಸ್ಸು ತತ್ತ್ವಜ್ಞಾನಿಯಾದ ಒಬ್ಬ ಋಷಿಯೆಂದೂ ಅವನು ಶೌನಕನಿಗೆ ಯಜ್ಞಾಗ್ನಿವಿದ್ಯೆಯನ್ನು ಉಪದೇಶಿಸಿದನೆಂದೂ ತಿಳಿಸಿದೆ. ಎರಡನೆಯದಾಗಿ,

ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನು ಯಜ್ಞಾಗ್ನಿಯು, ಆ ಯಜ್ಞಾಗ್ನಿಯಿಂದಲೇ ಅಂಗಿರಸ್ಸೆಂಬ ಋಷಿಯು ಉತ್ಪನ್ನನಾಗಿ ಆ ಸಂತತಿಯು ಪ್ರವರ್ಧಮಾನವಾಗಿ ಬೆಳೆಯಿತು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ ತಿಳಿಸಿದೆ.

ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।

(ಋ. ಸಂ. ೧–೩೧–೧)

ಇತ್ಯಾದಿ ಋಕ್ಕುಗಳಲ್ಲಿ ಈ ವಿಷಯವನ್ನು ಸೂಚಿಸಿರುವಂತೆ ಐತರೇಯಬ್ರಾಹ್ಮಣದಲ್ಲೂ ಸಹ, ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್ (ಐ. ಬ್ರಾ. ೩೩–೪) ಇತ್ಯಾದಿವಾಕ್ಯಗಳಲ್ಲಿ ತಿಳಿಸಿದೆ. ಹೀಗೆಯೇ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಯಜ್ಞಾಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯನ್ನು,

ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।
ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥

(ಋ. ಸಂ. ೫–೧೧–೬)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲೂ ಮತ್ತು

ಸಮಿದ್ಭಿರ್ಹ್ಯೇತಮಂಗಿರಸ ಐಂಧತೆ ।

(ಶ. ಬ್ರಾ. ೧–೪–೧–೨೫)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ವಿವರಿಸಿದೆ. ಯಜ್ಞಾಗ್ನಿಯನ್ನು ಪಡೆದು, ಆ ಯಜ್ಞಾಗ್ನಿಯನ್ನು ಅಗ್ನಿಯಿಂದಲೇ ಪೂಜಿಸಿದ ಅಂಗಿರಸ್ಸುಗಳನ್ನು ಕೃತಜ್ಞತೆಯಿಂದಲೂ, ಭಕ್ತಿಯಿಂದಲೂ,

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।
ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥

(ಋ. ಸಂ. ೧೦–೧೪–೬)

ಎಂದು ಪ್ರಶಂಸಿಸಿದೆ. ಆ ಅಂಗಿರಸ್ಸುಗಳನ್ನೇ ಸಾಧ್ಯರೆಂದು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿದೆಯೆಂದು ಒಂದು ಮತ. ಅದನ್ನು ಐತರೇಯಬ್ರಾಹ್ಮಣದ ವಿವರಣೆಯಿಂದಲೂ, ಸಾಯಣ ಭಾಷ್ಯದ ವಿವರಣೆಯಿಂದಲೂ ತಿಳಿಯಬಹುದು. ಇದಲ್ಲದೆ ಸಾಧ್ಯರೆಂಬುವರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದರೆಂದೂ ಅವರನ್ನು ಬಹಳವಾಗಿ ಪ್ರಶಂಸಿಸಿದೆ.

ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥

(ಛಾ. ಉ ೩-೧೦-೧)

ಬ್ರಹ್ಮಮುಖದ ಸಹಾಯದಿಂದ ಸಾಧ್ಯರು ಐದನೆಯ ಅಮೃತವನ್ನು ಸೇವಿಸುತ್ತಾರೆ. [ಐದನೆಯ ಅಮೃತವೆಂದರೆ ಉಪನಿಷತ್ತೆಂದರ್ಥ. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಆನಂದವನ್ನನುಭವಿಸುತ್ತಾರೆಂದು ತಾತ್ಪರ್ಯ.] ಸೇವಿಸುವುದೆಂದರೆ ಭುಜಿಸುವುದೆಂದಾಗಲಿ, ಪಾನಮಾಡುವುದೆಂದಾಗಲಿ ಅರ್ಥವಲ್ಲ. ದೇವತೆಗಳಾದ ಸಾಧ್ಯರು ಭುಜಿಸುವುದೂ ಇಲ್ಲ, ಪಾನಮಾಡುವುದೂ ಇಲ್ಲ. ಉಪನಿಷದ್ರೂಪವಾದ ಅಮೃತವನ್ನು ಕೇವಲ ವೀಕ್ಷಿಸುತ್ತಾ ಆನಂದವನ್ನನುಭವಿಸುವರೆಂದು ತಾತ್ಪರ್ಯ.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥

(ಛಾ. ಉ. ೩-೧೦-೨, ೩)

ಈ ಸಾಧ್ಯರು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ. ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಪಡೆಯುತ್ತಾರೆ. ಈ ತತ್ತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬನಾಗುತ್ತಾನೆ. ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತಾ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾದ ರೂಪವನ್ನೇ ಪಡೆಯುತ್ತಾನೆ.

ಸ ಯಾವದಾದಿತ್ಯ ಉತ್ತರತ ಉದೇತಾದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥

(ಛಾ. ಉ. ೩-೧-೦೪)

ಸಾಧ್ಯರೂಪವನ್ನು ಹೊಂದಿದ ಈ ಯಜ್ಞಕರ್ತನೂ, ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವಾರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರಮಾರ್ಗವಾದುದೂ, ಊರ್ಧ್ವಾರ್ವಾಗ್ರೂಪವಾದುದೂ ಆದ ಸಂಚಾರವು ಇರುವ ವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕನ್ನೇ ಶತಪಥ ಬ್ರಾಹ್ಮಣದಲ್ಲಿ ಉದಹರಿಸಿ ಈ ರೀತಿ ವಿವರಿಸಿದೆ.

ಯೋನ್ವೈ ತಾನ್ತ್ಸಪ್ತಪುರುಷಾನ್ । ಏಕಂ ಪುರುಷಮಕುರ್ವನ್ತ್ಸ ಪ್ರಜಾಪತಿರಭವತ್ಸ ಪ್ರಜಾ ಅಸೃಜತ ಪ್ರಜಾಃ ಸೃಷ್ಟ್ವೋರ್ಧ್ವ ಉದಕ್ರಾಮತ್ಸ ಏತಂ ಲೋಕಮಗಚ್ಛದ್ಯತ್ರೈಷ ಏತತ್ತಪತಿ ನೋ ಹ ತರ್ಹ್ಯನ್ಯ ಏತಸ್ಮಾದತ್ರ ಯಜ್ಞಿಯ ಆಸ ತಂ ಯಜ್ಞೇನೈವ ಯಷ್ಟುಮಧ್ರಿಯಂತ ।

(ಶ. ಬ್ರಾ. ೧೦-೨-೨-೧)

‘ಸಪ್ತ ಪುರುಷಾನೇಕಂ ಪುರುಷಮಕುರ್ವನ್’ ಸಪ್ತಪುರುಷರನ್ನೂ ,ಒಂದೇ ಪುರುಷನನ್ನಾಗಿ ಪರಿವರ್ತಿಸಿದರು ಎಂದು ಹಿಂದೆ ತಿಳಿಸಿದೆ. (ಶ. ಬ್ರಾ. ೬-೧-೧-೩) ಅದ್ವಿತೀಯನಾದ ಈ ಪುರುಷನೇ ಪ್ರಜಾಪತಿಯು. ಈ ಪ್ರಜಾಪತಿಯು ಪ್ರಜೆಗಳನ್ನು

ಸೃಷ್ಟಿಸಿ ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋದನು. ಆಗ ಯಜ್ಞಕ್ಕೆ ಬೇರೆ ಪಶುಗಳಿಲ್ಲದಿದ್ದರಿಂದ ದೇವತೆಗಳು ಈ ಪ್ರಜಾಪತಿಯನ್ನೇ ಯಜ್ಞಪಶುವನ್ನಾಗಿ ಮಾಡಿದರು. ಆದುದರಿಂದಲೇ–

ತಸ್ಮಾದೇತದೃಷಿಣಾಭ್ಯನೂಕ್ತಂ । ಯಜ್ಞೇನ ಯಜ್ಞಮಯಜಂತ ದೇವಾ ಇತಿ ಯಜ್ಞೇನ ಹಿ ತಂ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ನಿತಿ ತೇ ಹಿ ಧರ್ಮಾಃ ಪ್ರಥಮೇ-ಕ್ರಿಯೊಂತ ತೇ ಹ ನಾಕಂ ಮಹಿಮಾನಃ ಸಚಂತೇತಿ ಸ್ವರ್ಗೋ ವೈ ಲೋಕೋ ನಾಕೋ ದೇವಾ ಮಹಿಮಾನಸ್ತೇ ದೇವಾಃ ಲೋಕಗ್ಂಸಚಂತ ಯೇ ತಂ ಯಜ್ಞಮಯಜನ್ನಿತ್ಯೇತತ್ ।

(ಶ. ಬ್ರಾ. ೧೦–೨–೨–೨)

ಯಜ್ಞದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನರ್ಪಿಸಿದರು; ಈ ನಿಯಮವೇ ಪ್ರಥಮತಃ ಸ್ಥಾಪಿತವಾದುದರಿಂದ ಇದನ್ನೇ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ಎಂದು ಋಷಿಗಳು ಹೇಳಿದ್ದಾರೆ. ಈ ನಿಯಮಗಳು ಅಂತರಿಕ್ಷಕ್ಕೆ ವ್ಯಾಪ್ತವಾದವು. ಆದುದರಿಂದಲೇ ಈ ಯಜ್ಞದಿಂದ ಪ್ರಜಾಪತಿರೂಪವಾದ ಯಜ್ಞವನ್ನು ನೆರವೇರಿಸುವವರು ಸ್ವರ್ಗಕ್ಕೆ ಸೇರುವರು ಎಂದು ತಿಳಿಸಿದೆ. ಅದೇ ಪ್ರಕಾರವಾಗಿ ಯಜ್ಞಕರ್ತರಾದ ದೇವತೆಗಳೆಲ್ಲರೂ ಸ್ವರ್ಗವಾಸಿಗಳಾಗಿದ್ದಾರೆ.

ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ಇತಿ । ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮ-ಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಪ್ಯೇತರ್ಹಿ ಸಾಧಯಂತಿ ಪಶ್ಚೇದಮನ್ಯದಭವದ್ಯ-ಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ ಪಶ್ಚಾ ಹ್ಯೆವೇವಮನ್ಯದ್ಯಜ್ಞಿಯಮಾಸ ಯತ್ಕಿಂಚಾಮೃತಂ ॥

(ಶ. ಬ್ರಾ. ೧೦–೨–೨–೩)

ಸಾಧ್ಯರು ಪೂರ್ವದಿಂದಲೇ ಈ ಸ್ವರ್ಗನಿವಾಸಿಗಳಾಗಿದ್ದಾರೆ. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯ ದೇಹರೂಪಿಗಳಾಗಲು ಪ್ರಾರಂಭದಲ್ಲಿ ಸಪ್ತಪ್ರಾಣಗಳೇ ಅವನನ್ನು ಸಾಧ್ಯನನ್ನಾಗಿ ಮಾಡಿದವು. ಆದುದರಿಂದಲೇ ಇದೇ ವಿಷಯವನ್ನು ಋಕ್ಸಂಹಿತಾವಾಕ್ಯದಲ್ಲಿಯೂ ಈ ರೀತಿ ವರ್ಣಿಸಿದೆ.

ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನಾ ।
ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥

(ಋ. ಸಂ. ೧೦–೧೪೯–೩)

ಅನಂತರವೇ ಪೂಜ್ಯವಾದ ಈ ದೇವತೆಯು ಅಮರ್ತ್ಯವಾದ ಲೋಕದೊಡನೆ ಉತ್ಪನ್ನವಾಯಿತು. ಈ ಪರವಸ್ತುವನ್ನೇ ಸುಪರ್ಣನಾದ ಗರುತ್ಮಂತನೆಂದು ಕರೆಯುತ್ತಾರೆ. ಈ ಮೂಲವಸ್ತುವಿನ ಸಹಾಯದಿಂದಲೇ ಉಳಿದ ಅಮರ್ತ್ಯವಾದ ವಸ್ತುಗಳೆಲ್ಲವೂ ಪೂಜಾರ್ಹವಾದುವು, ಎಂಬುದಾಗಿ ಸಾಧ್ಯಶಬ್ದಕ್ಕೂ, ಯಜ್ಞಶಬ್ದಕ್ಕೂ ಅರ್ಥವನ್ನು ಹೇಳಿ ಅವೆರಡರ ಸಂಬಂಧವನ್ನು ತಿಳಿಸಿದೆ. ಇದೇ ಮಂತ್ರವು ಪುರುಷಸೂಕ್ತದಲ್ಲಿ ಪಠಿತವಾದಾಗ ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ. (ಋ. ಸಂ. ೧೦–೯೦–೧೬)

ದೇವಾಃ—ಪ್ರಜಾಪತಿಪ್ರಾಣರೂಪಾಃ ; ಯಜ್ಞೇನ ಯಥೋಕ್ತೇನ ಮಾನಸೇನ ಸಂಕಲ್ಪೇನ ; ಯಜ್ಞಂ —ಯಥೋಕ್ತಯಜ್ಞಸ್ವರೂಪಂ ಪ್ರಜಾಪತಿಂ ; ಅಜಯಂತ—ಪೂಜಿತವಂತಃ । ಪ್ರಜಾಪತಿಯ ಪ್ರಾಣರೂಪ

ವಾದ ದೇವತೆಗಳನ್ನು ತಮ್ಮ ಮಾನಸಸಂಕಲ್ಪದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನು ನೆರವೇರಿಸಿದರು. ಆ ಪೂಜಾ ವಿಶೇಷವು ಜಗತ್ತಿನ ಧಾರಣೆಗೆ ಸಹಾಯಕವಾಯಿತು.

ಯತ್ರ—ಯಸ್ಮಿನ್ವಿರಾಟ್‌ಪ್ರಾಪ್ತಿರೂಪೇ ನಾಕೇ ; ಪೂರ್ವೇ ಸಾಧ್ಯಾಃ ಪುರಾತನಾ ವಿರಾಡುಪಾಸ್ತಿ ಸಾಧಕಾಃ ಸಂತಿ । ತೇ ವಿರಾಟ್‌ಪ್ರಾಪ್ತಿರೂಪಂ ಸ್ವರ್ಗಂ ಪ್ರಾಪ್ನುವಂತಿ । ವಿರಾಟ್ಪುರುಷನನ್ನು ಆರಾಧಿಸತಕ್ಕ ಈ ಪ್ರಜಾಪತಿಪ್ರಾಣರೂಪರಾದ ಸಾಧ್ಯರೆಲ್ಲರೂ, ವಿರಾಟ್‌ಪುರುಷನ ಪ್ರಾಪ್ತಿಗೆ ಯೋಗ್ಯವಾದ ಸ್ವರ್ಗವನ್ನು ಪಡೆಯುತ್ತಾರೆ ಎಂದ ಪುರುಷಸೂಕ್ತದಲ್ಲಿರುವ ಈ ಋಕ್ಕಿಗೆ ಅರ್ಥಮಾಡಿದೆ ಐತರೇಯಬ್ರಾಹ್ಮಣದಲ್ಲಿ ಈ ಯಜ್ಞ ಸೇವನೆಯನ್ನು ಸ್ತುತಿಸುತ್ತಾ,

ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರು-
ಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ॥
(ಐ. ಬ್ರಾ. ೧–೧೬)

" ಯಜ್ಞೇನ ಯಜ್ಞಮಯಜಂತ " ಎಂಬ ಮಂತ್ರದಲ್ಲಿ ವರ್ಣಿತವಾಗಿರುವ ನಿಯಮದಂತೆಯೂ ಸಾಧ್ಯಾದಿ ದೇವತೆಗಳು ಅನುಸರಿಸಿದಂತೆಯೂ ಯಜ್ಞಾಗ್ನಿಯಿಂದ ಯಜ್ಞವನ್ನು ಸೇವಿಸುವವರು ಸ್ವರ್ಗಲೋಕವನ್ನು ಪಡೆಯುತ್ತಾರೆ. ಈ ತತ್ತ್ವವನ್ನರಿತು ಯಜ್ಞವನ್ನು ನಿರ್ವಹಿಸುವವನ ಆಹುತಿಗಳು ಸ್ವರ್ಗವಾಸಿಗಳಾದ ದೇವತೆಗಳನ್ನು ಸೇರುತ್ತವೆ. ಅವನು ಅಬ್ರಾಹ್ಮಣನಾದರೂ ಸರಿ ಅಥವಾ ಇತರ ವಿಧದಲ್ಲಿ ದೂಷ್ಯನಾಗಿದ್ದರೂ ಸರಿ ಅವನಿಗೆ ಸ್ವರ್ಗಲಾಭವು ಸಿದ್ಧವು. ಅವನು ಪಾಪರಹಿತನಾಗುತ್ತಾನೆ, ಎಂದು ತಿಳಿಸಿದೆ. ಈ ರೀತಿ ಪ್ರಕೃತವಾದ ಋಕ್ಕಿಗೆ ಅಧಿದೈವತಪಕ್ಷದಲ್ಲಿಯೂ ಸಹ ಶತಪಥಾದಿಬ್ರಾಹ್ಮಣಗಳಲ್ಲಿಯೂ, ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿಯೂ ತಾತ್ಪರ್ಯವನ್ನು ವಿವರಿಸಿದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ನಲವತ್ತೊಂದನೆಯ ಖಂಡವು ಸಮಾಪ್ತವಾಗಿದೆ.

## ಅಥ ದ್ವಿಚತ್ವಾರಿಂಶತ್ ಖಂಡಃ

## ನಲವತ್ತೆರಡನೆಯ ಖಂಡವು

ಸುಗಾವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಾಃ। ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇಧತ್ತ ವಸವೋ ವಸೂನಿ॥ ಸ್ವಾಗಮನಾನಿ ವೋ ದೇವಾಃ ಸುಪಥಾನ್ಯಕರ್ಮ ಯ ಆಗಚ್ಛತ ಸವನಾನೀಮಾನಿ ಜುಷಾಣಾಃ ಖಾದಿತವಂತಃ ಪೀತವಂತಶ್ಚ ಸರ್ವೇಽಸ್ಮಾಸು ಧತ್ತ ವಸವೋ ವಸೂನಿ ತೇಷಾ ಮೇಷಾ-ಪರಾ ಭವತಿ ॥ ೪೨ ॥

ಸುಗಾವೋ ದೇವಾಃ ಸುಪಥಾ ಅಕರ್ಮ ಯ ಅಜಗ್ಮಃ ಸವನಮಿದಂ ಜುಷಾಣಾಃ ಜಕ್ಷಿವಾಂಸಶ್ಚ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ||

(ಯ. ವಾ. ಸಂ. ೮)

ವಸುಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ವಸುನಾಮಕ ದೇವತೆಗಳೇ ನೀವೆಲ್ಲರೂ ಈ ನಮ್ಮ ಯಜ್ಞವನ್ನು ಕುರಿತು ಸಂತೋಷಪಡುತ್ತಾ ನಿತ್ಯವೂ ಬನ್ನಿರಿ. ನಿಮ್ಮ ಸುಗಮನಕೋಸ್ಕರ ಗಮನಾಗಮನಯೋಗ್ಯವಾದ ಸವನಗಳನ್ನು ಮಾಡಿರುತ್ತೇವೆ. ನೀವು ನಮ್ಮ ಯಜ್ಞದಲ್ಲಿ ಹವಿಸ್ಸನ್ನು ಸೇವಿಸಿ ಸೋಮರಸನ್ನು ಕುಡಿದು ನಮಗೆ ಅಧಿಕವಾದ ಧನವನ್ನು ಅನುಗ್ರಹಿಸಿರೆಂದು ಪ್ರಾರ್ಥಿಸುತ್ತೇವೆ.

ಸ್ವಾಮನಾನಿ ವೋ ದೇವಾಃ ಸುಪಥಾನ್ಯಕರ್ಮ ಯ ಆಗಚ್ಛತ ಸವನಾನೀಮಾನಿ ಜುಷಾಣಾಃ, ಖಾದಿತವಂತಃ ಪೀತವಂತಶ್ಚ ಸರ್ವೇಽಸ್ಮಾಸು ಧತ್ತ ವಸವೋ ವಸೂನಿ ||

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಮಷ್ಟಿಯಜುಸ್ಸಿನಲ್ಲಿ ತೃತೀಯಸವನದಲ್ಲಿ ಇದರ ವಿನಿಯೋಗ ಹೇಳಿರುವುದರಿಂದ ಇಲ್ಲಿ ವಸುಗಳೆಂದರೆ ದ್ಯುಸ್ಥಾನಗಳೇ ಆಗುತ್ತವೆ.

ತೇಷಾ ಮೇಷಾಪರಾ ಭವತಿ || ೪೨ ||

ವಸುವೆಂಬುದು ತ್ರಿಸ್ಥಾನದಲ್ಲಿಯೂ ಇದೆಯೆಂದು ಹಿಂದೆ ಹೇಳಿದ ದ್ಯುಸ್ಥಾನದ ದೇವತೆಗೆ ಉದಾಹರಣೆ ತೋರಿಸಿದುದಾಯಿತು ಮುಂದೆ ಹೇಳುವ ಮಂತ್ರವು ಉಳಿದ ಎರಡುಸ್ಥಾನದ ದೇವತೆಗಳ ಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ
ನಲವತ್ತೆರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತ್ರಿಚತ್ವಾರಿಂಶತ್ ಖಂಡಃ

## ನಲವತ್ತಮೂರನೆಯ ಖಂಡವು

ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ | ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ (ಋ. ಸಂ. ೭-೩೯-೩) || ಜ್ಮಯಾ ಅತ್ರ ವಸವೋಽರಮಂತ ದೇವಾ ಜ್ಮಾ ಪೃಥಿವೀ

ತಸ್ಯಾಂ ಭವಾ ಉತಾ ಚಾಂತರಿಕ್ಷೇ ಮರ್ಜಯಂತ ಗಮಯಂತ ಶುಭ್ರಾಃ ಶೋಭಮಾನಾ ಅರ್ವಾಚ ಏನಾನ್ಪಥೋ ಬಹುಜವಾಃ ಕುರುಧ್ವಂ ಶೃಣುತ ದೂತಸ್ಯ ಜಗ್ಮುಷೋ ನೋಽಸ್ಯಾಗ್ನೇರ್ವಾಜಿನೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೪೩ ॥

ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜ-
ಯಂತ ಶುಭ್ರಾಃ। ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ
ದೂತಸ್ಯ ಜಗ್ಮುಷೋ ನೋ ಅಸ್ಯ ॥

(ಋ. ಸಂ. ೫-೪-೬)

ಉಭಯಸ್ಥಾನಕವಸುದೇವತಾಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಪೃಥಿವೀಸಂಬಂಧಿ ವಸುದೇವತೆಗಳೇ ಈ ಕರ್ಮದಲ್ಲಿ ಅಥವಾ ಲೋಕದಲ್ಲಿ ಸಂತೋಷಹೊಂದಿರಿ. ವಿಸ್ತೃತವಾದ ಅಂತರಿಕ್ಷದಲ್ಲಿ ಸಂಚರಿಸುವ ದೇವತೆಗಳೂ ವಿರಾಜಿಸುತ್ತಾ ಇಲ್ಲಿ ಸಂತೋಷಪಡಲಿ. ನಿಮ್ಮ ದೂತನಾದ ಅಗ್ನಿಯು ನಮ್ಮ ಆಹ್ವಾನವನ್ನು ನಿಮಗೆ ತಲುಪಿಸಿರುವುದನ್ನು ಕೇಳಿರಿ. ಕೇಳಿ ನಮ್ಮಾಭಿಮುಖವಾಗಿ ಅತಿಶಯವೇಗ ವುಳ್ಳವರಾಗಿ ನಾನಾಗಮನದಿಂದ ಬನ್ನಿರಿ.

ಜ್ಮಯಾ ಅತ್ರ ವಸವೋಽರಮಂತ ದೇವಾಃ । ಜ್ಮಾ ಪೃಥಿವೀ ತಸ್ಯಾಂ
ಭವಾಃ। ಉರೌ ಚಾಂತರಿಕ್ಷೇ ಮರ್ಜಯಂತ ಗಮಯಂತ ಶುಭ್ರಾಃ
ಶೋಭಮಾನಾ ಅರ್ವಾಚ ಏನಾನ್ ಪಥೋ ಬಹುಜವಾಃ
ಕುರುಧ್ವಂ, ಶೃಣುತ ದೂತಸ್ಯ ಜಗ್ಮುಷೋ ನೋ ಅಸ್ಯಾಗ್ನೇಃ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಜ್ಮಾಪೃಥಿವೀನಾಮದಲ್ಲಿ (ನಿಘ ೧-೧) ಪಠಿತವಾಗಿದೆ. ಗತ್ಯರ್ಥದಲ್ಲಿ ಮಾರ್ಷ್ಟಿ [ನಿಘ. ೨-೧೪] ಪಠಿತವಾಗಿದೆ. ಉರುಜಯಾಃ ಅಂದರೆ ಬಹುವೇಗವುಳ್ಳವರು. ಜ್ರಯವೆಂಬುದು ವೇಗಾರ್ಥದಲ್ಲಿ [ನಿಘ. ೨-೧೪] ಪಠಿತವಾಗಿದೆ. ಅರ್ವಾಕ್ ಶಬ್ದವನ್ನು ದ್ವಿತೀಯಾ ಬಹುವಚನಾಂತವಾಗಿ ವಿಪರಿಣಾಮಮಾಡಿಕೊಂಡು ಪಥಃ ಎಂಬ ಮಾರ್ಗವಾಚಕ ದ್ವಿತೀಯಾ ಬಹುವಚನಾಂತಕ್ಕೆ ವಿಶೇಷಣಮಾಡಿರುತ್ತಾರೆ. ಶುಭ್ರಾಃ ಶೋಭಿಸುವ ಎಂಬ ವಿಶೇಷಣವೂ ಮಾರ್ಗಕ್ಕೇ ಹೇಳಿರುತ್ತಾರೆ. ಯಾವುದರಲ್ಲಿ ವಿಹರಿಸುತ್ತಾ ಸುಖಪಡುತ್ತಿದ್ದರೋ ಆ ಮಾರ್ಗಗಳನ್ನು ಹೊಂದಿ ಆಗಮಿಸಿರಿ ಎಂದು ಅನ್ವಯ.

ವಾಜಿನೋ ವ್ಯಾಖ್ಯಾತಾಸ್ತೇಷಾಮೇಷಾ ಭವತಿ ॥ ೪೩ ॥

ಕ್ರಮಪ್ರಾಪ್ತವಾದ ವಾಜಿಶಬ್ದ ಹಿಂದೆ (ನಿ. ೨-೨೮) ವ್ಯಾಖ್ಯಾತವಾಗಿದೆ. ಅಪಿ ವಾವಾಜಿ ವೇಜನವಾನ್ ಎಂದು ಅತಿವೇಗ

ವುಳ್ಳದ್ದು ವಾಜೀ ಅಂದರೆ ಕುದುರೆಯೆಂದು ಹೇಳಿದೆ. ಇಲ್ಲಿ ಬಹುವಚನಾಂತವಾಗಿ ಹೇಳಿರುವುದಲ್ಲದೆ ರಶ್ಮಿಗಳು ಅರ್ಥವೆಂದು ತಿಳಿಯಬೇಕು. ಪೃಥಕ್ತ್ವಪಕ್ಷದಲ್ಲಿ ಸೂರ್ಯನ ಕುದುರೆಗಳಾಗುತ್ತವೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ನಲವತ್ತಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುಶ್ಚತ್ವಾರಿಂಶತ್ ಖಂಡಃ

## ನಲವತ್ತನಾಲ್ಕನೆಯ ಖಂಡವು

ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ । ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ (ಋ-ಸಂ-೭-೩೮-೭) ಸುಖಾ ನೋ ಭವಂತು ವಾಜಿನೋ ಹ್ವಾನೇಷು ದೇವತಾತೌ ಯಜ್ಞೇ ಮಿತದ್ರವಃ ಸ್ವರ್ಕಾಃ ಸ್ವಂಚನಾಃ ಇತಿ ವಾ ಸ್ವರ್ಚನಾ ಇತಿ ವಾ ಸ್ವರ್ಚಿಷ ಇತಿ ವಾ ಜಂಭಯಂತೋಹಿಂ ಚ ವೃಕಂ ಚ ರಕ್ಷಾಂಸಿ ಚ ಕ್ಷಿಪ್ರಮಸ್ಮದ್ಯಾವಯಂತ್ವಮೀವಾ ದೇವಾಶ್ವಾ ಇತಿ ವಾ ದೇವಪತ್ನ್ಯೋ ದೇವಾನಾಂ ಪತ್ನ್ಯಸ್ತಾಸಾಮೇಷಾ ಭವತಿ ॥ ೪೪ ॥

ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ। ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಭ್ಯಸ್ಮದ್ಯುಯವನ್ನಮೀವಾಃ ॥

(ಋ. ಸಂ. ೫-೪-೫ ಯ-ವಾ-ಸಂ-೯-೧೬)

ವಾಜಿಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ, ಈ ದೇವತೃಪ್ತಿ ಲಕ್ಷಣವಾದ ಯಾಗದಲ್ಲಿ ನಮ್ಮ ಆಹ್ವಾನರೂಪ ಸ್ತುತಿಗಳನ್ನು ಕೇಳಿ ಸಂತೋಷಪಡುವ, ಸುಗಮನವುಳ್ಳ ವಾಜಿನಾಮಕ ದೇವತೆಗಳು ನಮಗೆ ಸುಖವನ್ನುಂಟುಮಾಡಲಿ, ಈ ಯಜ್ಞದಲ್ಲಿ ಬಂದು ಶತ್ರುವನ್ನೂ, ರಾಕ್ಷಸರನ್ನೂ ನಾಶಪಡಿಸಲಿ ಪುರಾತನ ರೋಗದಿಂದ ನಮ್ಮನ್ನು ದೂರಮಾಡಲಿ ಎಂದು ಪ್ರಾರ್ಥಿಸುತ್ತೇವೆ.

ಸುಖಾ ನೋ ಭವಂತು ವಾಜಿನೋ ಹ್ವಾನೇಷು ದೇವತಾತೌ ಯಜ್ಞೇ ಮಿತ-ದ್ರುವಃ ಸ್ವರ್ಕಾಃ ಸ್ವಂಚನಾ ಇತಿ ವಾ ಸ್ವರ್ಚನಾ ಇತಿ ವಾ ಸ್ವರ್ಚಿಷ ಇತಿ ವಾ, ಜಂಭ-

**ಯಂತೋಽಹಿಚಂ ಚ ವೃಕಂ ರಕ್ಷಾಂಸಿ ಚ ಕ್ಷಿಪ್ರಮಸ್ಮದ್ಯಾವಯಂತ್ವಮೀವಾಃ ದೇವಾಶ್ವಾ ಇತಿ ವಾ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ದೇವವೆಂದರೆ ಯಜ್ಞ. ಇಲ್ಲಿ ದೇವತೆಗಳು ಸ್ತುತಿಸಲ್ಪಡುತ್ತಾರೆ. ದೇವವೇ ದೇವದಾತಿ. ಸ್ವಾರ್ಥದಲ್ಲಿ ತಾತಿಲ್‌ಪ್ರತ್ಯಯ. ಇದು ಯಜ್ಞಪರ್ಯಾಯದಲ್ಲಿ (ನಿಘ. ೩-೧೭) ಪಠಿತವಾಗಿದೆ. ಸ್ವರ್ಕಾಃ ಎಂಬುದಕ್ಕೆ ಸುಗಮವುಳ್ಳವರು, ಶೋಭನವಾದ ಪೂಜೆಯುಳ್ಳವರು, ಉಜ್ವಲವಾದ ಕಾಂತಿಯುಳ್ಳವರು ಎಂದು ನಾನಾರ್ಥವಾಗುತ್ತದೆ. ಅರ್ಕವೆಂಬುದು ಅನ್ನನಾಮದಲ್ಲಿಯೂ (ನಿಘ. ೨-೭) ಪಠಿತವಾಗಿದೆ. ವೃಕಶಬ್ದ ಸ್ತೇನಪರ್ಯಾಯದಲ್ಲಿ (ನಿಘ. ೩-೨೪) ಹೇಳಿದೆ. ಸನೇಮಿ ಪದವು ಪುರಾತನಾರ್ಥದಲ್ಲಿ (ನಿಘ. ೩-೨೭) ಹೇಳಿದರೂ ಕ್ಷಿಪ್ರಾರ್ಥದಲ್ಲಿ ಪ್ರಯೋಗಿಸಿರುತ್ತಾರೆ.

**ದೇವಪತ್ನ್ಯೋ ದೇವಾನಾಂ ಪತ್ನ್ಯಸ್ತಾಸಾಮೇಷಾ ಭವತಿ ॥ ೪೪ ॥**

ದೇವಪತ್ನಿಯರನ್ನು ಹೇಳಬೇಕು. ಇವರು ದೇವತೆಗಳನ್ನು ಪಾಲಿಸುವರು, ಅಥವಾ ದೇವತೆಗಳಿಂದ ರಕ್ಷಿಸಲ್ಪಡುವರು. ಪತ್ನೀ ಸಂಯಾಜದಲ್ಲಿ ಇವರು ಪ್ರಸಕ್ತರಾಗುವುದರಿಂದ ತೃತೀಯಸವನಭಕ್ತಿತ್ವದಿಂದ ಆದಿತ್ಯನನ್ನು ಹೊಂದಿರುತ್ತಾರೆ, ಇದನ್ನು ಅಥೈತಾನಾದಿತ್ಯಭಕ್ತೀನ್ಯಸೌ ಲೋಕಸ್ತೃತೀಯ ಸವನಂ (ನಿ. ೭-೧೧) ಎಂದು ಹಿಂದೆ ಹೇಳಿದೆ. ಮುಂದೆ ಹೇಳುವ ಮಂತ್ರವು ದೇವಪತ್ನಿಯರ ಪ್ರಧಾನ ಸ್ತುತಿಯನ್ನು ತಿಳಿಸುತ್ತದೆ.

**ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।**
**ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ॥ ೭ ॥**

ನಿಯಮಿತವಾದ ಮಾರ್ಗಗಳುಳ್ಳವರೂ, ಉತ್ತಮವಾದ ಅನ್ನವಂತರೂ ಶಕ್ತಿಯುತರೂ ಆದ ದೇವತೆಗಳು ಯಜ್ಞದಲ್ಲಿ ಸ್ತುತಿಪಾತವಾಗುತ್ತಿರುವಾಗ ನಮ್ಮ ಸುಖಾರ್ಥವಾಗಿರಲಿ, ಮಾರ್ಗನಿರೋಧಕನೂ, ಲೋಭಿಯೂ ಆದ ಚೋರನನ್ನೂ ರಾಕ್ಷಸರನ್ನೂ ಹಿಂಸಿಸುವ ದೇವತೆಗಳು ಪುರಾತನಗಳಾದ ರೋಗಗಳನ್ನು ನಮ್ಮಿಂದ ಬೇರೆಮಾಡಲಿ.

ವೈಶ್ವದೇವಪರ್ವದಲ್ಲಿ ವಾಜಿ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಶಂ ನೋ ಭವಂತು ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ಕ್ರಮವಾಗಿ ಯಾಜ್ಯಾ ಮತ್ತು ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಶಂ ನೋ ಭವಂತು ವಾಜಿನೋ ಹವೇಷು ವಾಜೇವಾಜೇಽವತ ವಾಜಿನೋ ನ ಇತ್ಯೋರ್ಧ್ವರ್ಜಜ್ಞಿರನವಾನಂ ಯಾಜ್ಯಾಂ ಎಂಬ ಸೂತ್ರದಿಂದ (ಆ. ೨-೧೬) ವಿವೃತವಾಗಿರುವುದು.

ವಾಜಿನಃ—ವಾಜಿನ್ ಶಬ್ದಕ್ಕೆ ಯಾಸ್ಕರು ವಾಜೀ ವೇಜನವಾನ್ (ನಿ. ೨-೨೮) ವೇಗಗಮನವುಳ್ಳ ಅಶ್ವವು ಎಂದು ಅರ್ಥವಿವರಣೆಮಾಡಿದಾರೆ. ಪ್ರಕೃತ ಋಕ್ಕಿನಲ್ಲಿ ವಾಜಿನಃ ಎಂಬ ಶಬ್ದವು ಪ್ರಥಮಾಬಹುವಚನಾಂತವಾಗಿದ್ದು ವಾಜಿಗಳೆಂಬ ಹೆಸರಿನ ದೇವತೆಗಳನ್ನು ಸೂಚಿಸುವುದು. ಈ ಶಬ್ದಕ್ಕೆ ರಶ್ಮಿಗಳು ಎಂಬ ಇನ್ನೊಂದು ಅರ್ಥವೂ ಇರುವುದು. ವಾಜಿನಃ ಎಂಬ ಹೆಸರಿನ ದೇವತೆಗಳನ್ನು ಸೂಚಿಸುವುದು. ಈ ಶಬ್ದಕ್ಕೆ ರಶ್ಮಿಗಳು ಎಂಬ ಇನ್ನೊಂದು ಅರ್ಥವೂ ಇರುವುದು. ವಾಜಿನಃ ಎಂಬ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿದಾರೆ.—

ಸುಖಾ ನೋ ಭವಂತು ವಾಜಿನೋ ಹ್ವಾನೇಷು ದೇವತಾತಾ ಯಜ್ಞೇ ಮಿತದ್ರವಃ ಸುಮಿತದ್ರವಃ। ಸ್ವರ್ಕಾಃ ಸ್ವಂಚನಾ ಇತಿ ವಾ ಸ್ವರ್ಚಿಷ ಇತಿ ವಾ । ಜಂಭಯಂತೋಽಹಿಂ ಚ ವೃಕಂ ಚ ರಕ್ಷಾಂಸಿ ಚ ಕ್ಷಿಪ್ರಮಸ್ಮದ್ಯಾವಯಂತ್ವಮೀವಾ ದೇವಾಶ್ವಾ ಇತಿ ವಾ ॥

(ನಿ. ೧೨-೪೪)

ವಾಜಿನ್ ಶಬ್ದಕ್ಕೆ ವೇಗಗಮನವುಳ್ಳ ಅಶ್ವವು ಅಥವಾ ದೇವಾಶ್ವವು ಎಂದರ್ಥವು. ಇಲ್ಲಿ ವಾಜಿನಃ ಎಂಬ ಶಬ್ದವು ಬಹುವಚನದಲ್ಲಿರುವುದರಿಂದ ಅತ್ಯಂತ ವೇಗಗಮನವುಳ್ಳ ದೇವಾಶ್ವಗಳು ಅಥವಾ ದೇವತೆಗಳು ಎಂದರ್ಥವು. ದೇವತಾತಾ ಎಂದರೆ ಯಜ್ಞದಲ್ಲಿ;

ಮಿತದ್ರವಃ ಸುಮಿತದ್ರವಃ ಮಿತಪ್ರವಣಾ ಮಿತಮಾರ್ಗಾಃ । ಸಾಧಾರಣವಾಗಿ ಅಶ್ವವು ಸಾರಥಿಯ ಅಧೀನಕ್ಕೊಳಪಟ್ಟಿರುವುದರಿಂದ ಅದು ಹೋಗುವ ವೇಗಕ್ಕೆ ಸಾರಥಿಯ ಇಷ್ಟದಂತೆ ಒಂದು ಮಿತಿಯುಂಟು. ಸಾರಥಿಯ ಇಷ್ಟಾನುಸಾರವಾಗಿ ಅದು ನಿಧಾನವಾಗಿ ಅಥವಾ ಬೇಗಬೇಗನೆ ಹೋಗಬೇಕಾಗಿರುವುದು. ಆದ್ದರಿಂದ ಅದರ ವೇಗವು ಮಿತವಾಗಿರುವುದು ಎಂದರೆ ನಿಯಮನಕ್ಕೆ ಒಳಪಟ್ಟಿರುವುದು ಎಂದರ್ಥವು. ಅಥವಾ ಭಾಷ್ಯಕಾರರು ಹೇಳಿರುವಂತೆ ಮಿತಮಾರ್ಗಾಃ ಒಂದು ಗೊತ್ತಾದ ಎಂದರೆ ಸಾರಥಿಗೆ ಇಷ್ಟವಾದ ಮಾರ್ಗದಲ್ಲಿಯೇ ಹೋಗಬೇಕಾಗಿರುವುದು. ಆದ್ದರಿಂದ ಮಿತಮಾರ್ಗ ಅಥವಾ ಮಿತದ್ರವಃ ಎಂಬ ಶಬ್ದವು ಈ ಅರ್ಥವನ್ನೂ ಸೂಚಿಸುವುದು.

ಸ್ವರ್ಕಾಃ—ಸ್ವರ್ಕಶಬ್ದಕ್ಕೆ ಯಾಸ್ಕರು—ಸ್ವಂಚನಾ ಇತಿ ವಾ । ಶೋಭನಂ ಅಂಚಂತಿ ಗಚ್ಛಂತಿ । ಚೆನ್ನಾದ ಅಥವಾ ಉತ್ತಮವಾದ ಪದವಿಕ್ಷೇಪದಿಂದ ಹೋಗುವುದಾದ್ದರಿಂದ ಸ್ವರ್ಕಾಃ ಎಂದು ಹೆಸರು; ಅಥವಾ ಸ್ವರ್ಚನಾಃ ಶೋಭನಂ ವಾ ಅರ್ಚನಂ ಯೇಷಾಂ ಸ್ತುತಿಃ ಚೆನ್ನಾಗಿ ಪ್ರಶಂಸಿಸಲ್ಪಡುವುದು ಎಂದರೆ ಇದರ ಗುಣಗಳನ್ನು ಶ್ಲಾಘಿಸುವರು ಆದ್ದರಿಂದ ಸ್ವರ್ಚನಾಃ ಅಥವಾ ಸ್ವರ್ಕಾಃ ಎಂದು ಹೆಸರು; ಅಥವಾ ಸ್ವರ್ಚಿಷಃ ವಾ ಯೇಷಾಂ ಶೋಭನಾ ಅರ್ಚಿಷೋ ದೀಪ್ತಯಃ ತ ಆಗಚ್ಛಂತು । ಇದರ ಶರೀರಕಾಂತಿಯು ಬಹಳ ಪ್ರಕಾಶಮಾನವಾಗಿರುವುದು. ಧಷ್ಟಪುಷ್ಟವಾದ ಶರೀರದಿಂದಲೂ ಚೆನ್ನಾಗಿ ಬೆಳೆದು ಕೊಬ್ಬಿ ಅತ್ಯುತ್ಸಾಹದಿಂದ ಇರುವುದೂ ಮಿಂಚುತ್ತಿರುವ ಶರೀರಕಾಂತಿಯಿಂದ ಕೂಡಿರುವುದೂ ಆದ್ದರಿಂದ ಇದಕ್ಕೆ ಸ್ವರ್ಚಿಷಃ ಅಥವಾ ಸ್ವರ್ಕಾಃ ಎಂದು ಹೆಸರು. ಎಂದ ಸ್ವರ್ಕಾಃ ಎಂಬ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮಿತದ್ರವಃ ಸ್ವರ್ಕಾಃ ಎಂಬ ಎರಡು ಶಬ್ದಗಳೂ ವಾಜಿನಃ ಎಂಬ ಶಬ್ದಕ್ಕೆ ವಿಶೇಷಣಗಳು.

ಅಹಿಂ ಚ ವೃಕಂ ಚ ರಕ್ಷಾಂಸಿ—ಅಹಿಂ ಆಗತ್ಯ ಹಂತಾರಂ । ಅಟ್ಟಿಸಿಕೊಂಡುಬಂದು ಕೊಲ್ಲುವ ಶತ್ರುವಿಗೆ ಅಹಿಂ ಎಂದು ಹೆಸರು; ವೃಕಂ ವಸೂನಾಮಾದಾತಾರಂ ಅಥವಾ ಯಶ್ಚ ವೃಕಸ್ತಸ್ಕರೋ ಮುಷ್ಣಾತಿ । ಧನಗಳನ್ನು ಅಪಹರಿಸುವ ಕಳ್ಳನಿಗೆ ವೃಕ ಎಂದು ಹೆಸರು: ರಕ್ಷಾಂಸಿ ಯೇಽಸ್ಮಾನ್ ರಹಸಿ ಕ್ಷಿಣ್ವಂತಿ । ನಮಗೆ ತಿಳಿಯದಂತೆ ಗೂಢನಾಗಿದ್ದುಕೊಂಡು ಅಥವಾ ರಹಸ್ಯಸ್ಥಳದಲ್ಲಿದ್ದುಕೊಂಡು ನಮ್ಮನ್ನು ಹಿಂಸಿಸುವ ರಾಕ್ಷಸಗಣಕ್ಕೆ ರಕ್ಷಾಂಸಿ ಎಂದು ಹೆಸರು. ಈ ಮೂರುವಿಧವಾದ ಶತ್ರುಗಳನ್ನು ಈ ದೇವತೆಗಳು ಹಿಂಸಿಸಲಿ ಮತ್ತು ನಮ್ಮನ್ನು ರಕ್ಷಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ನಲವತ್ತನಾಲ್ಕನೆಯ ಖಂಡವು ಸಮಾಪ್ತವಾಗಿದೆ.

## ಅಥ ಪಂಚ ಚತ್ವಾರಿಂಶತ್ ಖಂಡಃ

### ನಲವತ್ತೈದನೆಯ ಖಂಡವು

ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತು ನಸ್ತುಜಯೇ ವಾಜ-ಸಾತಯೇ। ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾನೋ ದೇವೀಃ ಸಹವಾಃ ಶರ್ಮ ಯಚ್ಛತ। (ಋ. ಸಂ. ೫-೪೬-೭)॥ ದೇವಾನಾಂ ಪತ್ನ್ಯ ಉಶತ್ಯೋಽವಂತು ನಃ ಪ್ರಾವಂತು ನಸ್ತುಜಯೇಽಪತ್ಯಜನನಾಯ ಚಾನ್ನಸಂಸನನಾಯ ಚ ಯಾಃ ಪಾರ್ಥಿ-ವಾಸೋ ಯಾ ಅಪಾಮಪಿ ವ್ರತೇ ಕರ್ಮಣಿ ತಾ ನೋ ದೇವ್ಯಃ ಸುಹವಾಃ ಶರ್ಮ ಯಚ್ಛಂತು ಶರಣಂ ತಾಸಾಮೇಷಾಪರಾ ಭವತಿ ॥ ೪೫ ॥

ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತು ನಸ್ತುಜಯಂ ವಾಜ ಸಾತಯೇ। ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾನೋ ದೇವೀಃ ಸುಹವಾಃ ಶರ್ಮ ಯಚ್ಛತ ॥

(ಋ. ಸಂ. ೪-೨-೨೮)

ದೇವಪತ್ನೀ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಇಂದ್ರಾದಿದೇವ ಪತ್ನಿಯರು ನಮ್ಮಿಂದ ಹವಿಸ್ಸನ್ನು ಬಯಸುವವರಾಗಿ ನಮ್ಮನ್ನು ಧನಾದಿಗಳಿಂದ ಸಂತೋಷಪಡಿಸಲಿ. ನಮ್ಮನ್ನು ಪುತ್ರಾದಿಸಂಪತ್ತಿಗೋಸ್ಕರವೂ, ಅನ್ನಾದಿ ಆಹಾರಸಂಪತ್ತನ್ನು ಪಡೆಯಲು ಸದಾ ರಕ್ಷಿಸಲಿ. ಪೃಥಿವಿಯಲ್ಲಿರುವ, ಮತ್ತು ಅಂತರಿಕ್ಷದಲ್ಲಿ ದೇವಿಯರು ನಮ್ಮ ಆಹ್ವಾನವನ್ನು ಸ್ವೀಕರಿಸಿ ನಮಗೆ ಮನೆಯನ್ನೂ ಸುಖವನ್ನೂ ಕೊಡಲಿ.

ದೇವಾನಾಂ ಪತ್ನ್ಯ ಉಶತ್ಯೋಽವಂತು ನಃ ಪ್ರಾವಂತು ನೋಽಪತ್ಯಜನನಾಯ ಚಾನ್ನಸಂಸನನಾಯ ಚ । ಯಾಃ ಪಾರ್ಥಿವಾಸೋ ಯಾ ಅಪಾಮಪಿ ಕರ್ಮಣಿ ವ್ರತೇ ತಾ ನೋ ದೇವ್ಯಃ ಸುಹವಾಃ ಶರ್ಮ ಯಚ್ಛಂತು ಶರಣಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ತುಜಯೇ ಎಂಬಲ್ಲಿ ಗಕಾರಕ್ಕೆ ಛಾಂದಸವಾಗಿ ಲೋಪಬಂದಿದೆ. ತುಕ್ ಅಪತ್ಯ (ಮಕ್ಕಳು) ನಾಮದಲ್ಲಿ (ನಿಘ-೨-೨)ಪಠಿತವಾಗಿದೆ. ವ್ರತಪದವು ಕರ್ಮನಾಮದಲ್ಲಿ (ನಿಘ-೨-೧) ಪಠಿತವಾಗಿದೆ.

ತಾಸಾಮೇಷಾಽಪರಾ ಭವತಿ ॥ ೪೫ ॥

ಮುಂದೆ ಉದಾಹರಿಸುವ ಇನ್ನೊಂದು ಮಂತ್ರವೂ ದೇವಪತ್ನಿಯರ ಸ್ತುತಿಯನ್ನು ತಿಳಿಸುತ್ತದೆ. ಪೂರ್ವೋಕ್ತವಾದ

ಋಕ್ಕಿನಲ್ಲಿ ಸಾಮಾನ್ಯಸ್ತುತಿಯೂ, ಮುಂದೆ ಹೇಳುವ ಮಂತ್ರದಲ್ಲಿ ವಿಶೇಷಸ್ತುತಿಯೂ ಪ್ರತಿಪಾದಿತವಾಗುವುದರಿಂದ ಭೇದ ತಿಳಿಯಬೇಕು.

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥ ೩ ॥**

ವಸುಸಂಜ್ಞಕರಾದ ದೇವತೆಗಳು ಈ ಯಜ್ಞದಲ್ಲಿ ಪೃಥ್ವಿಯಲ್ಲಿ ಇದ್ದುಕೊಂಡು ಕ್ರೀಡಿಸಲಿ. ವಿಸ್ತೃತವಾದ ಅಂತರಿಕ್ಷಸ್ಥರೂ ಪ್ರಕಾಶಮಾನರೂ ಆದ ಮರುತ್ತುಗಳು ಸೇವಿಸಲ್ಪಡುತ್ತಾರೆ. ವೇಗಗಾಮಿಗಳಾದ ಎಲೈ ಮರುತ್ತುಗಳೇ, ಮತ್ತು ಎಲೈ ವಸುಗಳೇ, ನಿಮ್ಮ ಸಂಚಾರವು ನಮ್ಮ ಯಜ್ಞಕ್ಕೆ ಅಭಿಮುಖವಾಗಿರುವಂತಿರಲಿ. ನಿಮ್ಮಕಡೆಗೆ ಬರುತ್ತಿರುವವನೂ, ನಮ್ಮ ಪರವಾದ ದೇವದೂತನೂ ಆದ ಈ ಅಗ್ನಿಯ ಆಹ್ವಾನವನ್ನು ಕೇಳಿರಿ.

ಈ ಋಕ್ಕಿನಲ್ಲಿ ವಸುಗಳನ್ನೂ, ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ವಸುಗಳು ಯಾರು ಎಂಬ ವಿಷಯದಲ್ಲಿ ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿದಾರೆ—.

ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಪೃಥಿವೀಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಸ್ಥಾನಾಃ । ವಸವ ಆದಿತ್ಯ ರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ ॥

[ನಿ. ೧೨-೪೧]

ವಸವಃ ಎಂಬ ಶಬ್ದಕ್ಕೆ ಸರ್ವವನ್ನೂ ಆಚ್ಛಾದಿಸಿ ವ್ಯಾಪಿಸಿರುವವರು ಎಂದರ್ಥವು. ಹೇಗೆಂದರೆ ವಸವಃ ಎಂಬ [ಅಷ್ಟೌ ವಸವಃ) ದೇವದೆಗಳ ಗುಂಪಿನಲ್ಲಿ ಅಗ್ನಿಯೂ ಸೇರಿರುವುದರಿಂದಲೂ ಅಗ್ನಿಯು ಪೃಥಿವೀಸ್ಥಾನದೇವತೆಯಾಗಿದ್ದರಿಂದಲೂ ವಸುಗಳು ಪೃಥಿವಿಯನ್ನು ವ್ಯಾಪಿಸಿದಂತಾಯಿತು. ಮತ್ತೂ ಇವರ ಗುಂಪಿನಲ್ಲಿ ಇಂದ್ರನೂ ಸೇರಿರುವುದರಿಂದಲೂ ಇಂದ್ರನು ಮಧ್ಯಸ್ಥಾನದೇವತೆಯಾದ್ದರಿಂದಲೂ ವಸುಗಳು ಮಧ್ಯಸ್ಥಾನವನ್ನು (ಅಂತರಿಕ್ಷವನ್ನು) ವ್ಯಾಪಿಸಿದಂತಾಯಿತು. ಇನ್ನು ವಸವಃ ಎಂಬ ಶಬ್ದಕ್ಕೆ ಆದಿತ್ಯನ ರಶ್ಮಿಗಳು ಎಂದರ್ಥವಿರುವುದರಿಂದಲೂ ಆದಿತ್ಯನ ರಶ್ಮಿಗಳು ಸ್ವರ್ಗವನ್ನೆಲ್ಲಾ ವ್ಯಾಪಿಸಿ ಪ್ರಕಾಶಪಡಿಸುವುದರಿಂದಲೂ ವಸುಗಳು ಸ್ವರ್ಗ ಅಥವಾ ದ್ಯುಸ್ಥಾನವನ್ನು ವ್ಯಾಪಿಸಿದಂತಾಯಿತು. ಆದ್ದರಿಂದ ಈ ವಸುಗಳು ತ್ರಿಸ್ಥಾನ ಎಂದರೆ ಪೃಥಿವೀ, ಅಂತರೀಕ್ಷ, ದ್ಯೌಃ ಎಂಬ ಲೋಕಗಳನ್ನೆಲ್ಲಾ ವ್ಯಾಪಿಸಿರುವುದರಿಂದ ಇವರಿಗೆ ವಸವಃ ಎಂಬ ಹೆಸರುಬಂದಿದೆ. ಈ ವಸವಃ ಎಂಬ ಶಬ್ದಪ್ರಯೋಗವಿರುವ ಎರಡು ಮಂತ್ರಗಳನ್ನು ಯಾಸ್ಕರು ಇಲ್ಲಿ ಉದಾಹರಣೆಗಾಗಿ ಕೊಟ್ಟಿದಾರೆ. ಒಂದು ವಾಜಸನೇಯಸಂಹಿತೆಯ (ಶುಕ್ಲಯಜುರ್ವೇದ) ಮಂತ್ರವು, ಮತ್ತೊಂದು ಪ್ರಕೃತ ಋಕ್ಕು. ಈ ಋಕ್ಕಿಗೂ ನಿರ್ವಚನವನ್ನು ಹೇಳಿದಾರೆ.—

ಜ್ಮಯಾ ಅತ್ರ ವಸವೋಽರಮಂತ ದೇವಾ ಜ್ಮಾ ಪೃಥಿವೀ ತಸ್ಯಾಂ ಭವಾ ಉರೌ ಚಾಂತರಿಕ್ಷೇ ಮಾರ್ಜಯಂತ ಗಮಯಂತ ಶುಭ್ರಾಃ ಶೋಭಮಾನಾ ಅರ್ವಾಚ ಏನಾನ್ ಪಥೋ ಬಹು ಜವಾಃ ಕುರುಧ್ವಂ ಶೃಣುತ ದೂತಸ್ಯ ಜಗ್ಮುಷೋ ನೋ ಅಸ್ಯಾಗ್ನೇಃ ॥

(ನಿ. ೧೨-೪೩)

ಭೂಮಿಯಲ್ಲಿರುವ ವಸುಗಳು ಭೂಮಿಯಿಂದ ಸಹಿತರಾಗಿ ಸಂತೋಷಚಿತ್ತರಾಗಿ ಕ್ರೀಡಿಸಲಿ. ಇಲ್ಲಿ ಜ್ಮಾ ಎಂದರೆ ಪೃಥಿವಿಯು [ನಿ- ೨-೫] ಆ ಪೃಥಿವಿಯಲ್ಲಿ ಇರುವವರು ವಸುಗಳು, ಮತ್ತು ಈ ವಸುಗಳು ವಿಸ್ತಾರವಾದ ಅಂತರಿಕ್ಷದಲ್ಲಿಯೂ ವಾಸಿಸುವರು ಇವರು ಬಹಳ ಪ್ರಕಾಶಮಾನರಾಗಿಯೂ ಇರುವರು. ಎಲೈ ಶೀಘ್ರಗಾಮಿಗಳಾದ ಮರುತ್ತುಗಳೇ ಮತ್ತು ವಸುಗಳೇ ನಮ ಅಭಿಮುಖವಾಗಿರುವ ಈ ಮಾರ್ಗದಲ್ಲಿ ಬನ್ನಿರಿ. ಮತ್ತೂ ದೂತಭಾವವನ್ನು ವಹಿಸಿ ನಿಮ್ಮ ಬಳಿಗೆ ಬರುತ್ತಿರುವ ಈ ಅಗ್ನಿಯ ಆಹ್ವಾನರೂಪವಾದ ವಚನಗಳನ್ನು ಕೇಳಿರಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ

ನಲವತ್ತೈದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಟ್‌ಚತ್ವಾರಿಂಶತ್ ಖಂಡಃ

## ನಲವತ್ತಾರನೆಯ ಖಂಡವು

ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ಗ್ನಾಯ್ಯಶ್ವಿನೀ ರಾಟ್| ಆರೋದಸಿ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಮ್ (ಋ.ಸಂ.೫-೪೬-೮) ಅಪಿ ಚಗ್ನಾ ವ್ಯಂತು ದೇವಪತ್ನ್ಯ ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯಶ್ವಿನ್ಯಶ್ವಿ- ನೋಃ ಪತ್ನೀ ರಾಡ್ರಾಜತೇ ರೋದಸೀ ರುದ್ರಸ್ಯ ಪತ್ನೀ ವರುಣಾನೀ ಚ ವರುಣಸ್ಯ ಪತ್ನೀ ವ್ಯಂತು ದೇವ್ಯಃ ಕಾಮಯಂತಾಂ ಯ ಋತುಃ ಕಾಲೋ ಜಾಯಾನಾಂ ಯ ಋತುಃ ಕಾಲೋ ಜಾಯಾನಾಂ ಯ ಋತುಃ ಕಾಲೋ ಜಾಯಾನಾಮ್ ‖ ೪೬ ‖

ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯಾ೧ಗ್ನಾಯ್ಯಶ್ವಿನೀ ರಾಟ್ । ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಮ್ ‖

(ಋ. ಸಂ. ೪-೨-೨೮. ಅಥ. ಸಂ. ೭-೪-೧೧-೨)

ಉದಾಹರಿಸುತ್ತಾರೆ. ಅಗ್ನ್ಯಾದಿಪುರುಷರಿಂದ ಪಾನಮಾಡಿವ ದೇವ ಪತ್ನಿಯರ ವಿಶೇಷ ಸ್ತುತಿಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಇಂದ್ರಾಣೀ ಇಂದ್ರನ ಪತ್ನಿಯೂ ಆಜ್ಯಾದಿಗಳನ್ನು ಅವರ ಪತ್ನಿಯರು ಅಪೇಕ್ಷಿಸಲಿ, ದೇವಪತ್ನಿಯರು ಯಾರೆಂದು ತಿಳಿಸುತ್ತಾರೆ, ಇಂದ್ರಾಣೀ ಇಂದ್ರನ ಪತ್ನಿಯೂ ಆಗ್ನಾಯೀ ಅಗ್ನಿಯ ಪತ್ನಿಯೂ, ಅಶ್ವಿನೀ ಅಶ್ವಿನೀದೇವತೆಗಳ ಪತ್ನಿಯರೂ, ರೋದಸೀ ರುದ್ರನ ಪತ್ನಿಯೂ, ವರುಣಾನೀ ವರುಣನ ಪತ್ನಿಯೂ, ಸ್ವಪ್ರಕಾಶದಿಂದಲೇ ಪ್ರಕಾಶಿಸುವವರಾಗಿ ನಮ್ಮ ಸ್ತೋತ್ರಗಳನ್ನು ಅಭಿಮುಖರಾಗಿದ್ದು ಕೇಳಲಿ. ಇವರೆಲ್ಲರೂ ತಮ್ಮ ಕಾಲದಲ್ಲಿ ಪುರುಷರ ಭಕ್ಷ್ಯಾದಿಗಳನ್ನು ಸೇವಿಸಲಿ.

ಅಪಿ ಗ್ನಾ ವ್ಯಂತು ದೇವಪತ್ನ್ಯ ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯ-ಶ್ವಿನ್ಯಶ್ವಿನೋಃ ಪತ್ನೀ । ರಾಟ್ ರಾಜತೇಃ ರೋದಸೀ ರುದ್ರಸ್ಯ ಪತ್ನೀ ವರುಣಾನೀ ಚ ವರುಣಸ್ಯ ಪತ್ನೀ ವ್ಯಂತು ದೇವ್ಯಃ ಕಾಮಯಂತಾಂ ಯ ಋತುಃ ಕಾಲೋ ಜಾಯಾ-ನಾಂ, ಯ ಋತುಃ ಕಾಲೋ ಜಾಯಾನಾಮ್ ॥ ೪೬ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಥರ್ವಣದಲ್ಲಿ ರೋದಿಸಿ ಎಂಬುದು ಪೃಗೃಹ್ಯವಿಲ್ಲದೇ ಹೇಳಿರುವುದರಿಂದ ಭಾಷ್ಯಕಾರರು ಅದನ್ನಾಶ್ರಯಿಸಿ ಏಕವಚನದಿಂದ ನಿರ್ವಚನಮಾಡಿರುತ್ತಾರೆ. ಗ್ನಾಃ ಎಂಬುದು ಸ್ತ್ರೀಪರ್ಯಾಯದಲ್ಲಿ [ನಿಘ--೩-೧] ಪಠಿತ ವಾಗಿದೆ. ಋತು ವಿಶೇಷ ಕಾಲವಾಚಕವಾದರೂ ಇಲ್ಲಿ ಸಾಮಾನ್ಯಾರ್ಥ ಸ್ವೀಕಾರದಿಂದ ಕಾಲಸಾಮಾನ್ಯವೆಂಬ ಅರ್ಥಹೇಳಿದೆ. ಇಂದ್ರಪದದಮೇಲೆ ಜೀಷ್ ಆನುಗಾಗಮ ಬಂದು ಇಂದ್ರಾಣೀ ಎಂದಾಗಿದೆ. ವೃಷಾಕಪಿ— ಸೂತ್ರದಿಂದ ಅಗ್ನಿಪದದ ಇಕಾರಕ್ಕೆ ಆಯಾದೇಶವೂ ಜೀಷ್ ಪ್ರತ್ಯಯವೂ ಬಂದು ಅಗ್ನಾಯೀ ಎಂದಾಗಿದೆ. ಗ್ರಂಥಸಮಾಪ್ತಿಯನ್ನು ತಿಳಿಸಲು ವಾಕ್ಯದ ಪುನರಾವೃತ್ತಿಯನ್ನು ತೋರಿಸಿರುತ್ತಾರೆ,

(ಅಥಾತೋ ದ್ಯುಸ್ಥಾನಾವಸಾತಿ ಷುಸ್ಮೇ ಹೇಹ ಜಾತಾಪ್ರಾತರ್ಯುಜಾ ಪ್ರಾತ-ರ್ಯುಜಧ್ವ ಸುಷಸ್ತಚ್ಚಿತ್ರಮೇತಾ ..ತ್ಯಾಃ ಸುಕಿಂಶುಕಂ ವೃಷೋಕಪಾಯ್ಯಪಾಗೂಹಂ ತ್ವಷ್ಟಾ ದುಹಿತ್ರೇ ಸವಿತಾ ವಿಶ್ವಾರೂಪಾಣಿ ಪ್ರಾತರ್ಜಿತ ಮುದುತ್ಯಂ ಚಿತ್ರಂ ಶುಕ್ರಂ ತೇ ಪಥಸ್ಪಥ ಇದಂ ವಿಷ್ಣುರ್ವಿಶ್ವಾನರೋ ವ್ಯಾಖ್ಯಾತೋ ವಿಶ್ವಾನರಸ್ಯ ಯೇನಾಪಾವಕೇತಿ ಚತುಷ್ಕಂ ಕೇಶ್ಯಗ್ನಿಂ ತ್ರಯಃ ಕೇಶಿನಃ ಪುನರೇಹಿ ಯಸ್ಮಿನ್ವೃಕ್ಷೇ ಪಾವೀರವೀ ಯದಿಂದ್ರಾಗ್ನೀ ಪವಿತ್ರವಂತ ಉತನೋಹಿರ್ಯಾಮಥರ್ವಾಥಾತೋದ್ಯುಸ್ಥಾನಾ ದೇವ-ಗಣಾ ಇಮಾಗಿರಃ ಸಪ್ತಋಷಯ ಸ್ತ್ರಿರ್ಯಗ್ಬಿಲೋ ದೇವಾನಾಮುದಾ್ರ ಮಾಂಸೋ ಯಜ್ಞೇನ ಸುಗಾವೋ ದೇವಾಜ್ಮಯಾ ಅತ್ರ ಶಂನೋ ಭವಂತು ದೇವಾನಾಂ ಪತ್ನೀರುತ-ಗ್ನಾವ್ಯಂತು ಷಟ್‌ಚತ್ವಾರಿಂಶತ್ ॥)

ಈರೀತಿ ಶ್ರೀಮದ್ಯಾಸ್ಕಮುನಿಪ್ರಣೀತ ನಿರುಕ್ತಶಾಸ್ತ್ರದ ದೈವತಾಕಾಂಡದ ಹದಿನೆರಡನೆಯ ಅಧ್ಯಾಯದಲ್ಲಿ

ನಲವತ್ತಾರನೆಯ ಖಂಡವು ಸಮಾಪ್ತವಾಗಿದೆ,

# ನಿರುಕ್ತಂ

## ಅಥ ತ್ರಯೋದಶಾಧ್ಯಾಯಃ ಪ್ರಥಮಪಾದಃ

## ಹದಿಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಪಾದ

### ಅಥ ಪ್ರಥಮಃ ಖಂಡಃ

### ಮೊದಲನೆಯ ಖಂಡವು

ಓಂ ಅಥೇಮಾ ಅತಿಸ್ತುತಯ ಇತ್ಯಾಚಕ್ಷತೇಽಪಿ ವಾ ಸಂಪ್ರತ್ಯಯ ಏವ ಸ್ಯಾನ್ಮಾಹಾಭಾಗ್ಯಾದ್ದೇವತಾಯಾಃ ಸೋಽಗ್ನಿಮೇವ ಪ್ರಥಮಮಾಹ ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿರಿತಿ ಯಥೈತಸ್ಮಿನ್‌ತ್ಸೂಕ್ತೇ ನ ಹಿ ತ್ವದಾರೇ ನಿಮಿಷಶ್ಚನೇಶ ಇತಿ ವರುಣಸ್ಯಾಥೈಷೇಂದ್ರಸ್ಯ ॥ ೧ ॥

ಅಥೇಮಾ ಅತಿಸ್ತುತಯ ಇತ್ಯಾಚಕ್ಷತೇ ॥

ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ಎಂಬ ವಚನದಂತೆ ಋಷಿಗಳು ಯಾವ ಕಾಮನೆಯಿಂದ ಯಾವ ದೇವತೆಯು ಸಮರ್ಥನೆಂದು ಸ್ತುತಿಸುವನೋ ಆ ದೇವತೆಯು ಅಧಿಕಾರದಲ್ಲಿದ್ದು ಸ್ತುತಿಗೆ ಲಕ್ಷ್ಯನಾಗಿರುತ್ತಾನೆ. ಆ ದೇವತಾವಿಷಯ ಪ್ರಕೃತ ಹೇಳಬೇಕಾಗಿವೆ. ಆ ಸ್ತುತಿಗಳೆಲ್ಲವೂ ಕರ್ಮಾಧಿಕಾರದಿಂದ ಕೂಡಿರುತ್ತವೆ. ಅವರವರ ಕರ್ಮಾಧಿಕಾರವನ್ನು ಅತಿಕ್ರಮಿಸಿಯಾಗಲೀ, ಅವರವರ ಗುಣವನ್ನು ಮೀರಿಯಾಗಲೀ ಸ್ತುತಿಸುವುದಿಲ್ಲ. ಅಂದರೆ ಯೋಗ್ಯಸ್ಥಾನಮಾನಾದಿಗಳಿಂದಲೇ ಅವರನ್ನು ಸ್ತುತಿಸುತ್ತಾರೆಂದು ಇಲ್ಲಿ ಹೇಳುತ್ತಾರೆ. ಈ ವಿಶೇಷವನ್ನು ತಿಳಿಸಲು ಅಧಿಕಾರಾಂತವನ್ನು ಪ್ರಾರಂಭಿಸಿರುತ್ತಾರೆ. ಅಥಶಬ್ದ ಅಧಿಕಾರಾಂತವನ್ನು ತಿಳಿಸುತ್ತವೆ. ಮುಂದೆ ಹೇಳುವ ಸ್ತುತಿಗಳಿಗೆ ಅತಿಸ್ತುತಿಯೆಂದು ಪೂರ್ವಮಹರ್ಷಿಗಳು ತಮ್ಮ ಶಿಷ್ಯರಿಗೆ ಹೇಳುತ್ತಾರೆ. ಈ ಸಂಜ್ಞೆ ಪ್ರಸಿದ್ಧವಾಗಿದೆ.

ಅಪಿ ವಾ ಸಂಪ್ರತ್ಯಯ ಏವ ಸ್ಯಾನ್ಮಾಹಾಭಾಗ್ಯಾದ್ದೇವತಾಯಾಃ ॥

ಅಥವಾ ಇದು ಅತಿಸ್ತವನವಾಗುವುದಿಲ್ಲ. ಅತಿಸ್ತುತಿಯೆಂದರೆ ಇಲ್ಲದಿರುವುದನ್ನೂ ಸೇರಿಸಿ ಹೇಳುವುದು. ಇಲ್ಲಿ ಹಾಗಿಲ್ಲ. ಆದುದರಿಂದ ಇದು ಸಂಪ್ರತ್ಯಯವಾಗುತ್ತದೆ ಸಂಗಮನ ಅಥವಾ ಸಮಾನವಾದ ಜ್ಞಾನಕ್ಕೆ ಸಂಪ್ರತ್ಯಯವೆಂದು ಹೆಸರು. ಅತಿಶಯವಾಗಿ ಸ್ತುತಿಸಿದರೂ ಕೂಡಾ ಅಯಾಯ ದೇವತೆಯಲ್ಲಿ ಅದೆಲ್ಲವೂ ಸಂಗತವಾಗಿಯೇ ಇರುತ್ತದೆ. ದೇವತಾಸ್ತುತಿ

ಅತಿಶಯವಾಗಿ ಎಲ್ಲಿಯೂ ಇರುವುದಿಲ್ಲ. ನಾರ್ವಾಗಿಂದ್ರಂ ಪ್ರತಿಮಾನಾನಿ ನೇಭುಃ ಎಂದು ಇತರ ಸ್ಥಳದಲ್ಲಿ ಹೇಳಿರುವಂತೆ ಯಾವ ದೇವತೆಯಾದರೂ ಮಹಾಭಾಗ್ಯ ಸಂಪನ್ನವಾಗಿರುವುದರಿಂದ ಅವನ ವಿಭೂತಿ ಅಂದರೆ ಐಶ್ವರ್ಯ ಇಷ್ಟೆಂದು ನಿರ್ಣಯಿಸಲು ಅಸಾಧ್ಯವಾದುದರಿಂದ ಅತಿಸ್ತವನವೆಲ್ಲಿಯೂ ಇಲ್ಲ.

ಸೋಽಗ್ನಿಮೇವ ಪ್ರಥಮಮಾಹ ॥

ನೈರುಕ್ತ ಸಮಯಾನುಸರಣೆಗೋಸ್ಕರ ಅತಿಸ್ತುತಿಯನ್ನು ತೋರಿಸುತ್ತಾರೆ. ಸಃ ಅಂದರೆ ಸ್ತೋತೃವಾದ ಆಚಾರ್ಯನು ಸ್ತುತಿ ಕ್ರಮವನ್ನನುಸರಿಸಿ ಮೊದಲು ಅಗ್ನಿಯನ್ನಧಿಕರಿಸಿ ಹೇಳುತ್ತಾರೆ. ಕಾರಣವಿಲ್ಲದೆ ಮುಖ್ಯ ರೀತಿಯನ್ನು ಅತಿಕ್ರಮಿಸುವುದು ನ್ಯಾಯವಲ್ಲ. ಆದುದರಿಂದ ಯಾವುದೊಂದು ಮುಖ್ಯಕ್ರಮದಿಂದ ಸ್ತುತಿಯನ್ನು ಹಿಂದೆ ತೋರಿಸಿರುವರೋ ಅದೇ ಕ್ರಮದಿಂದ ಅತಿಸ್ತುತಿಯನ್ನು ವಿವರಿಸುವುದು ಯುಕ್ತವಾಗಿದೆ.

ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಃ ॥

(ಋ.ಸಂ. ೨-೫-೧೭-೧)

ಅತಿಸ್ತುತಿಗೆ ಉದಾಹರಣೆ ತೋರಿಸುತ್ತಾರೆ. ಇಲ್ಲಿ ಪೃಥಿವೀಸ್ಥಾನವಾದ ಅಗ್ನಿಗೆ ಸ್ವಕರ್ಮಾಧಿಕಾರಕ್ಕಿಂತಲೂ ಬೇರೆಯಾಗಿ, ಅಥವಾ ಅತಿಶಯವಾಗಿ ಸ್ತುತಿ ಹೇಳಿದೆ.

ಯಥೈತಸ್ಮಿನ್ಸೂಕ್ತೇ ॥

ದ್ವಿತೀಯ ಮಂಡಲವನ್ನು ಗೃತ್ಸಮದನೆಂಬ ಮಹರ್ಷಿಯು ಕಂಡುಹಿಡಿದಿರುತ್ತಾರೆ. ಈ ಉಪಾಖ್ಯಾನವು ಸಾಯಣಭಾಷ್ಯದಲ್ಲಿ ವಿವೃತವಾಗಿದೆ. ಪ್ರಕೃತ ಉದಾಹೃತವಾದ ಮಂತ್ರವು ಗಾರ್ತ್ಸಮದವಾಗುತ್ತದೆ. ಅಗ್ನಿದೇವತಾಕವಾದ ಈ ಸೂಕ್ತದಲ್ಲಿ ಹದಿನಾರು ಋಕ್ಕುಗಳಿವೆ. ಈ ಮಂತ್ರವು ಹಿಂದೆ (ನಿ. ೬-೧) ವ್ಯಾಖ್ಯಾತವಾದುದರಿಂದ. ಇಲ್ಲಿ ಅದರ ಒಂದು ಭಾಗವನ್ನು ಮಾತ್ರ ಉದ್ದಾಹರಿಸುತ್ತಾರೆ.

ನ ಹಿ ತ್ವದಾರೇ ನಿಮಿಷಶ್ಚನೇಶೇ ಇತಿ ವರುಣಸ್ಯ ॥

(ಋ. ಸಂ. ೨-೭-೧೦)

ಇಲ್ಲಿ ಮಧ್ಯಸ್ಥಾನನಾದ ವರುಣನ ಅತಿಸ್ತುತಿಯು ಹೇಳಿದೆ.

ಅಪೋ ಸುಮುಕ್ಷ ವರುಣ ಭಿಯಸಂ ಮತ್ಸಮ್ರಾಳೃತಾವೋನುಮಾಗೃ-
ಭಾಯ। ದಾಮೇವ ವತ್ಸಾದ್ವಿಮುಮುಗ್ಧ್ಯಂ ಹೋನ ಹಿ ತ್ವದಾರೇ
ನಿಮಿಷಶ್ಚನೇಶೇ ॥

ಪೂರ್ಣಮಂತ್ರ ಋಕ್ಕನ್ನು ಉದಾಹರಿಸುತ್ತಾರೆ. ಸತ್ಯವಂತನಾಗಿ ಅಥ ಯಜ್ಞವಿಶಿಷ್ಟನಾಗಿ ಚನ್ನಾಗಿ ಶೋಭಿಸುವ ವರುಣನೇ ಹಾಲು ಕರೆಯುವವನು ಹೇಗೆ ಕರುವನ್ನು ಕಟ್ಟಿರುವ ಹಗ್ಗವನ್ನು ಶೀಘ್ರವಾಗಿ ಬಿಚ್ಚಿಬಿಡುವನೋ ಅದರಂತೆ ನಮ್ಮಲ್ಲಿರುವ

ಕಾಯಕೃತವಾದ ಭಯಂಕರವಾದ ಪಾಪವನ್ನು ಹೋಗಲಾಡಿಸು. ಶೀಘ್ರವಾಗಿ ಅವುಗಳನ್ನು ನಾಶಪಡಿಸು. ನಿನ್ನಿಂದ ಬೇರೆಯಾದವನು ಹತ್ತಿರವಿರುವವನಾಗಲೀ ಅಥವಾ ದೂರವಿರುವವನಾಗಲೀ ಯಾರೂ ಈ ಕಾರ್ಯವನ್ನು ಮಾಡಲು ಸಮರ್ಥ ರಾಗಲಾರರು. ನೀನೊಬ್ಬನೇ ಸಕಲರಿಗೂ ಈಶ್ವರನಾಗಿರುವಿ.

ಅಥ ಐಷೇಂದ್ರಸ್ಯ ॥ ೧ ॥

ಮುಂದೆ ಹೇಳುವ ಮಂತ್ರವು ಇಂದ್ರನ ಅತಿ ಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ಮೊದಲನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಿತೀಯಃ ಖಂಡಃ

### ಎರಡನೆಯ ಖಂಡವು

ಯದ್ ದ್ಯಾವ ಇಂದ್ರ ತೇ ಶತಂ ಶತಂ ಭೂಮೀರುತ ಸ್ಯುಃ । ನ ತ್ವಾ ವಜ್ರಿನ್ತ್ಸಹಸ್ರಂ ಸೂರ್ಯಾ ಅನು ನ ಜಾತಮಷ್ಟ ರೋದಸೀ (ಋ. ಸಂ. ೮-೭೦-೫) ಯದಿ ತ ಇಂದ್ರ ಶತಂ ದಿವಃ ಶತಂ ಭೂಮಯಃ ಪ್ರತಿಮಾನಾನಿ ಸ್ಯುರ್ನ ತ್ವಾ ವಜ್ರಿನ್ತ್ಸಹಸ್ರಮಪಿ ಸೂರ್ಯಾನ ದ್ಯಾವಾಪೃಥಿವ್ಯಾವಪ್ಯಭ್ಯಶ್ನುವೀತಾಮಿತ್ಯಥೈ-ಷಾದಿತ್ಯಸ್ಯ ॥ ೨ ॥

ಯದ್ ದ್ಯಾವ ಇಂದ್ರ ತೇ ಶತಂ ಶತಂ ಭೂಮೀರುತ ಸ್ಯುಃ ॥ ನ ತ್ವಾ
ವಜ್ರಿನ್ತ್ಸಹಸ್ರಂ ಸೂರ್ಯಾ ಅನು ನ ಜಾತಮಷ್ಟ ರೋದಸೀ ॥
(ಋ. ಸಂ. ೬-೫-೮ ಸಾ. ಸಂ. ಛ. ಆ ೩-೨-೪-೬)

ಇಂದ್ರನ ಅತಿಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ಇಂದ್ರನೇ ಯದ್ಯಪಿ ನಿನಗೆ ನೂರುದ್ಯುಲೋಕಗಳೂ ನೂರು ಭೂಲೋಕಗಳೂ, ಸಹಸ್ರ ಸೂರ್ಯರೂ, ದ್ಯಾವಾಪೃಥಿವಿಗಳೂ ಉಪಮಾನವಾಗಿ ಇರಬಹುದು. ಆದರೆ ವಜ್ರಾಯುಧ ದಿಂದ ಕೂಡಿರುವ ಇಂದ್ರನೇ ನೀನು ಹುಟ್ಟಿದೊಡನೆಯೇ ಅವು ನಿನಗೆ ವ್ಯಾಪಕವಾಗಲಾರವು. ನೀನೊಬ್ಬನೇ ಅವೆಲ್ಲವುಗಳನ್ನೂ ವ್ಯಾಪಿಸಿರುವಿ. ಈ ಅರ್ಥವು ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾಯಾನ್ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ಎಂದು ಬೃಹದಾರಣ್ಯಕದಲ್ಲಿಯೂ ವಿವರಿಸಿರುತ್ತಾರೆ.

ಯದಿ ತ ಇಂದ್ರ ಶತಂ ದಿವಃ ಶತಂ ಭೂಮಯಃ ಪ್ರತಿಮಾನಾನಿಸ್ಯು
ರ್ನ ತ್ವಾ ವಜ್ರಿನ್ । ಸಹಸ್ರಮಪಿ ಸೂರ್ಯಾನ ದ್ಯಾವಾಪೃಥಿವ್ಯಾವ-
ಪ್ಯಶ್ನುವೀತಾ ಽಿತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಸಹಸ್ರ ಸೂರ್ಯರೂ ನಿನಗೆ ಸಂಸಮಾನರಾಗಲಾರರು ಅಂದರೆ ಅವರು ಸಹಸ್ರ ಸಂಖ್ಯಾಕರಾಗಿದ್ದರೂ ಈ ದ್ಯಾವಾಪೃಥಿವಿಯನ್ನು ವ್ಯಾಪಿಸಲು ಶಕ್ತರಾಗಲಾರರು. ನೀನೊಬ್ಬನೇ ಅವುಗಳನ್ನು ವ್ಯಾಪಿಸಲು ಸಮರ್ಥನಾಗಿರುವಿ.

ಅಥ ಏಷಾಽಽದಿತ್ಯಸ್ಯ ॥ ೨ ॥

ಮುಂದೆ ಹೇಳುವ ಮಂತ್ರವು ಆದಿತ್ಯನ ಅಂದರೆ ದ್ಯುಲೋಕಸ್ಥಾನ ದೇವತೆಯ ಅತಿಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ಎರಡನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತೃತೀಯಃ ಖಂಡಃ

## ಮೂರನೆಯ ಖಂಡವು

ಯದುದಂಚೋ ವೃಷಾಕಪೇ ಗೃಹಮಿಂದ್ರಾ ಜಗಂತನ । ಕ್ವಸ್ಯ ಪುಲ್ವಘೋ ಮೃಗಃ ಕಮುಮುಂಜನಯೋಽಷನೋ ಶಿಶ್ವಸ್ಮಾದಿಂದ್ರ ಉತ್ತರಃ (ಋ. ಸಂ. ೧೦-೮೬-೨೨) ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಮತ ಕ್ವ ಸ್ಯ ಪುಲ್ವಘೋ ಮೃಗಃ ಕ್ವ ಸ ಬಹ್ವಾದೀ ಮೃಗೋ ಮೃಗೋ ಮಾರ್ಷ್ಟೇರ್ಗತಿಕರ್ಮಣಃ ಕಮುಗಮುದ್ದೇಶಂ ಜನಯೋಽಪನಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮ ಆದಿತ್ಯಮಥೈ-ಷಾದಿತ್ಯ ರಶ್ಮೀನಾಮ್ ॥ ೩ ॥

ಯದುದಂಚೋ ವೃಷಾಕಪೇ ಗೃಹಮಿಂದ್ರಾ ಜಗಂತನ । ಕ್ವಽಸ್ಯ
ಪುಲ್ವಘೋ ಮೃಗಃ ಕಮುಗಂಜನಯೋಽಷನೋ ವಿಶ್ವಸ್ಮಾದಿಂದ್ರ
ಉತ್ತರಃ ॥

 (ಋ-ಸಂ-೧೦-೮೬-೨೨).

ಆದಿತ್ಯನ ಅತಿಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ಎಲೈ ವೃಷಾಕಪಿಯಾದ ಆದಿತ್ಯನೇ ಯಾವಾಗಲೂ ನೀನು ಪ್ರದಕ್ಷಿಣಾಕಾರದಿಂದ ಭುವನಗಳಲ್ಲಿ ತಿರುಗುತ್ತಾ ಯಾವಾಗ ಅಸ್ತವನ್ನು ಹೊಂದುವೆಯೋ ಆಗ ಜಗತ್ತೆಲ್ಲವೂ ಅಂಧಕಾರದಿಂದ ವ್ಯಾಪ್ರುತವಾಗುತ್ತದೆ. ಅಸ್ತಗಮನವೆಂದರೆ ಅವನ ಮನೆಯನ್ನು ಹೊಂದುವುದು. ಹೊರಗಿದ್ದವರು ಮನೆಗೆ ಬಂದರೆ ಆಗ ಮನೆಯ ಒಳಗಿರುವುದರಿಂದ ಯಾರಿಗೂ ತೋರುವುದಿಲ್ಲ. ಹೀಗೆ ಅದೃಶ್ಯನಾದ ಸೂರ್ಯನನ್ನು ನೋಡಿ ಜನರು ಆಶ್ಚರ್ಯಚಿಕಿತರಾಗಿ ಹೇಳುತ್ತಾರೆ. ಸತತಗಮನವುಳ್ಳ, ಸಕಲಪ್ರಾಣಿಗಳ ಹೃದಯವನ್ನೂ ಪ್ರವೇಶಿಸಿರುವ ಈ ಜನಮೋಹನನಾದ ದೇವನು ಯಾವ ದೇಶಕ್ಕೆ ಹೋದನು ? ಪೂಜ್ಯನಾದ ಆದಿತ್ಯನೇ ಸಕಲ ಜಗತ್ತಿನಲ್ಲಿ ನೀನೊಬ್ಬನೇ ಉತ್ಕೃಷ್ಟನಾಗಿರುವಿ.

ಯದುದಂಚೋ ವೃಷಾಕಪೇ ಗೃಹಮಿಂದ್ರಾ ಜಗಮತ ಕ್ವ ಸ್ಯ
ಪುಲ್ವಘೋ ಮೃಗಃ। ಕ್ವ ಸ ಬಹ್ವಾದೀ। ಮೃಗೋ ಮಾರ್ಷ್ಟೇರ್ಗ-
ತಿಕರ್ಮಣ ಕಮುಗಮುದ್ದೇಶಂ ಜನಯೋಪನಂ। ಸರ್ವಸ್ಮಾದ್ಯ
ಇಂದ್ರ ಉತ್ತರ ಸ್ತಮೇತದ್ಬ್ರೂಮ ಆದಿತ್ಯಂ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮೃಗಃ ಎಂಬಲ್ಲಿ ಮೃಜೂಧಾತು. ಇದು ಗತ್ಯರ್ಥದಲ್ಲಿ (ನಿಘ—೨—೧೪) ಪಠಿತವಾಗಿದೆ. ಘಞರ್ಥೇ ಕವಿಧಾನಂ ಎದುದರಿಂದ ಕರ್ಮಣಿಯಲ್ಲಿ ಕಪ್ರತ್ಯಯ ಬಂದಿದೆ. ಅಥವಾ ಕರ್ತ್ರರ್ಥದಲ್ಲಿಯೇ ಇಗುಪಧಧಾತುವಾದುದರಿಂದ ಕಪ್ರತ್ಯಯ, ಇವನು ಎಲ್ಲಿಯೂ ನಿಲ್ಲುವುದಿಲ್ಲ. ಸತತವಾಗಿ ಚಲಿಸುತ್ತಲೇ ಇರುತ್ತಾನೆ. ಉಳಿದ ಪದಗಳ ಅರ್ಥವು ಸ್ಪಷ್ಟವಾಗಿದೆ.

ಅಥ—ಏಷಾಽಽದಿತ್ಯರಶ್ಮೀನಾಂ ॥ ೩ ॥

ಮುಂದೆ ಉದಾಹರಿಸುವ ಮಂತ್ರವು ಆದಿತ್ಯರಶ್ಮಿಗಳ ಅತಿಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ

ಮೂರನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಚತುರ್ಥಖಂಡಃ

## ನಾಲ್ಕನೆಯ ಖಂಡವು

ವಿ ಹಿ ಸೋತೋರಸೃಕ್ಷತ ನೇಂದ್ರಂ ದೇವಮಮಂಸತ। ಯತ್ರಾಮದದ್ವೃಷಾ
ಕಪಿರರ್ಯಃಪುಷ್ಟೇಷು ಮತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ। (ಋ. ಸಂ. ೧೦-೮೬-೧) ॥

ವ್ಯಸಕ್ಷತ ಹಿ ಪ್ರಸವಾಯ ನ ಚೇಂದ್ರಂ ದೇವಮಮದ್‍ವಸತ ಯತ್ರಾಮಾದ್ಯದ್-ವೃಷಾಕಪಿರರ್ಯ್ಯ ಈಶ್ವರಃ ಪುಷ್ಟೇಷು ಪೋಷೇಷು ಮತ್ಸಖಾ ಮಮ ಸಖಾ ಮದನಸಖಾ ಯೇ ನಃ ಸಖಾಯಸ್ತೈಃ ಸಹೇತಿ ವಾ ಸರ್ವಸ್ಮಾದ್ಯ ಇಂದ್ರ ಉತ್ತರ-ಸ್ತಮೇತದ್ ಬ್ರೂಮ ಆದಿತ್ಯಮಥೈಷಾಶ್ವಿನೋಃ ॥ ೪ ॥

ವಿಹಿ ಸೋತೋರಸೃಕ್ಷತ ನೇಂದ್ರಂ ದೇವಮಮಂಸತ । ಯಾತ್ರಾಮ-
ದದ್ವೃಷಾಕಪಿರರ್ಯಃ ಪುಷ್ಟೇಷು ಮತ್ಸಖಾ ವಿಶ್ವಸ್ಮಾದಿಂದ್ರ
ಉತ್ತರಃ ॥

(ಋ. ಸಂ. ೮-೪-೧)

ಆದಿತ್ಯರಶ್ಮಿಗಳ ಅತಿಸ್ತುತಿ ಪ್ರತಿಪಾದಕ ಮಂತ್ರಗಳನ್ನು ಉದಾಹರಿಸುತ್ತಾರೆ. ಆದಿತ್ಯನು ಸಕಲಲೋಕವೂ ಕಾರ್ಯನಿರತವಾಗಲೂ ಪ್ರತಿ ಹಗಲಿನಲ್ಲಿಯೂ ರಶ್ಮಿಗಳನ್ನು ಸೃಷ್ಟಿಮಾಡಿದನು. ಆದರೆ ಆ ರಶ್ಮಿಗಳು ತಮ್ಮನ್ನು ಸೃಷ್ಟಿಸಿರುವ ಮತ್ತು ತಮ್ಮನ್ನು ಬೆಳಗಿಸುವ ಆದಿತ್ಯನನ್ನು ತಿಳಿಯಲಿಲ್ಲ. ತಮ್ಮ ಮಹಿಮೆಯಿಂದಲೇ ತಾವು ಬೆಳಗುತ್ತೇವೆಂದು ತಿಳಿದವು. ಸೋಮದಿಂದ ಈ ರಶ್ಮಿಗಳು ಏಕೀಭೂತವಾದಾಗ ಎಲ್ಲರಿಗೂ ಸ್ನೇಹಿತನಂತಿರುವ ಈ ವೃಷಾಕಪಿಪದವಾಚ್ಯನಾದ ಸೂರ್ಯನು ಸೋಮಪಾನದಿಂದ ಹರ್ಷಗೊಂಡನು. ಕೊನೆಯ ಪಾದದ ಅರ್ಥವನ್ನು ಹಿಂದಿನಂತೆ ತಿಳಿಯಬೇಕು.

ವ್ಯಸೃಕ್ಷತ ಹಿ ಪ್ರಸವಾಯ, ನ ಚೇಂದ್ರಂ ದೇವಮಮಂಸತ, ಯತ್ರಾ-
ಮದದ್ವೃಷಾಕಪಿರರ್ಯ ಈಶ್ವರಃ ಪುಷ್ಟೇಷು ಮತ್ಸಖಾ ಮಮ-
ಸಖಾ, ಮದನಸಖಾ, ಯೇನಃ ಸಖಾಯಸ್ತೈಃ ಸಹೇತಿ ವಾ,
ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಮ್ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮತ್ಸಖಾ ಅಂದರೆ ನನಗೆ ಮಿತ್ರನೆಂದು ಮಂತ್ರದೃಷ್ಟೃವಾದ ಮಹರ್ಷಿಯು ಹೇಳುವುದು ಮದನಸಖಾ ಅಂದರೆ ಹರ್ಷವನ್ನುಂಟುಮಾಡುವುದರಲ್ಲಿ ಸ್ನೇಹಿತನೆಂದರ್ಥ. ಅಥವಾ ಯಾರು ನನ್ನ ಆರಶ್ಮಿಗಳೆಂದರ್ಥ. ಅವುಗಳೊಡನೆ ಸೇರಿರುವುದರಿಂದ ಉತ್ಕೃಷ್ಟನಾಗಿರುತ್ತಾನೆ.

ಅಥೈಷಾಽಶ್ವಿನೋಃ ॥ ೪ ॥

ಮುಂದೆ ಹೇಳುವ ಮಂತ್ರವು ಅಶ್ವಿನೀ ದೇವತೆಗಳ ಅತಿಸ್ತುತಿಯನ್ನು ತಿಳಿಸುತ್ತದೆ. ಇವರು ಯಾವಾಗಲೂ ಯಮಳರಾಗಿರುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ನಾಲ್ಕನೆಯ ಖಂಡವು ಸಮಾಪ್ತವಾಗಿದೆ.

# ಅಥ ಪಂಚಮ ಖಂಡಃ

## ಐದನೆಯ ಖಂಡವು

ಸೃಣ್ಯೇವ ಜರ್ಭರೀ ತುರ್ಫರೀತು ನೃತೋಶೇವ ತುರ್ಫರೀ ಪರ್ಫರೀಕಾ। ಉದನ್ಯಜೇವ ಜೇಮನಾ ಮದೇರೂ ತಾ ಮೇ ಜರಾಯ್ವಜರಂ ಮರಾಯು (ಋ. ಸಂ. ೧೦-೧೦೬-೬) ॥ ಸೃಣ್ಯೇವೇತಿ ದ್ವಿವಿಧಾ ಸೃಣಿರ್ಭವತಿ ಭರ್ತಾ ಚ ಹಂತಾ ಚ ತಥಾಶ್ವಿನೌ ಚಾಪಿ ಭರ್ತಾರೌ ಜರ್ಭರೀ ಭರ್ತಾರಾವಿತ್ಯರ್ಥಸ್ತುರ್ಫರೀತೂ ಹಂತಾರೌ। ನೈತೋಶೇವ ತುರ್ಫರೀ ಪರ್ಫರೀಕಾ। ನಿತೋಶಸ್ಯಾಪತ್ಯಂ ನೈತೋಶಂ ನೈತೋಶೇವಕ್ಷಿಪ್ರಹಂತಾರೌ । ಉದ್ಯನಜೇವ ಜೇಮನಾ ಮದೇರೂ। ಉದನ್ಯಜೇ-ವೇತ್ಯುದಕಜೇ ಇವ ರತ್ನೇ ಸಾಮುದ್ರೇ ಚಾಂದ್ರಮಸೇ ವಾ ಜೇಮನೇ ಜೇಮನಾ ಮದೇರೂ। ತಾ ಮೇ ಜರಾಯ್ವಜರಂ ಮರಾಯು। ಏತಜ್ಜರಾಯುಜಂ ಶರೀರಂ ಶರಮಜೀರ್ಣಮಥೈಷಾ ಸೋಮಸ್ಯ ॥ ೫ ॥

ಸೃಣ್ಯೇವ ಜರ್ಭರೀ ತುರ್ಫರೀತೂ ನೈತೋಶೇ ವ ತುರ್ಫರೀ ಪರ್ಫ-
ರೀಕಾ॥ ಉದನ್ಯಜೇವ ಜೇಮನಾ ಮದೇರೂ ತಾ ಮೇ
ಜರಾಯ್ವಜರಂ ಮರಾಯು ॥

(ಋ. ಸಂ. ೮-೬-೨)

ಅಶ್ವಿನೀ ದೇವತೆಗಳ ಅತಿಸ್ತುತಿಯನ್ನು ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಮದಿಸಿದ ಆನೆಯನ್ನು ಒಂದು ಕಡೆ ನಿಲ್ಲಿಸುವ ಮತ್ತು ಪೀಡೆಯನ್ನುಂಟುಮಾಡುವ ಅಂಕುಶಗಳಂತೆ ಈ ಅಶ್ವಿನೀ ಕುಮಾರರೂ ಪ್ರಪಂಚವನ್ನು ಒಂದು ವ್ಯವಸ್ಥೆಗೊಳಿಸಿದವರೂ, ಶತ್ರುಗಳನ್ನು ನಾಶಮಾಡುವವರೂ ಆಗಿರುತ್ತಾರೆ. ಕಟುಕರಂತೆ ಶತ್ರುಗಳನ್ನು ಕುರಿತು ಬೇಗ ಹೋಗಿ ಅವರನ್ನು ಸೀಳಿ ಹಾಕುತ್ತಾರೆ. ಸಮುದ್ರದಲ್ಲಿ ಹುಟ್ಟಿದ ರತ್ನಗಳಂತೆ ಕಾಂತಿಯುಕ್ತರಾಗಿ ಜಯಶೀಲರಾಗಿರುತ್ತಾರೆ. ಬಲಾತಿಶಯದಿಂದ ಮತ್ತರಾಗಿರುತ್ತಾರೆ. ಪೂರ್ವೋಕ್ತಗುಣಯುಕ್ತರಾದ ಅಶ್ವಿನೀದೇವತೆಗಳೇ ನೀವು ನಮ್ಮ ಜರಾಯುಜವಾದ ಈ ಶರೀರವನ್ನು ಮರಣ ಶೀಲವಾದರೂ ಜರಾಮರಣರನ್ನಾಗಿ ಮಾಡಿರಿ.

ಸೃಣ್ಯೇವೇತಿ ದ್ವಿವಿಧಾ ಸೃಣಿರ್ಭವತಿ ಭರ್ತಾ ಚ ಹಂತಾ ಚ। ತಾಥಾ
ಚಾಶ್ವಿನೌ ಚಾಪಿ ಭರ್ತಾರೌ। ಜರ್ಭರೀ ಭರ್ತಾರಾವಿತ್ಯರ್ಥಸ್ತು-
ರ್ಫರೀತೂ ಹಂತಾರೌ। ನೈತೋಶೇ ವ ತುರ್ಫರೀ ಪರ್ಫರೀಕಾ।



ನಿತೋಶಸ್ಯಾಪತ್ಯಂ ನೈತೋಶಂ, ನೈತೋಶೇ ವ ತುರ್ಫರೀತೂ

**ಕ್ಷಿಪ್ರಹಂತಾರೌ। ಉದನ್ಯಜೇವ ಜೇಮನಾ ಮದೇರೂ। ಉದನ್ಯ-ಜೇ ವೇತ್ಯುದಕಜೇ ಇವ ರತ್ನೇ ಸಾಮುದ್ರೇ ಚಾಂದ್ರಮಸೇ ಇತಿ ವಾ ಜೇಮನೇ ಜಯಮಾನೇ (ಜೇಮನಾ ಮದೇರೂ) ತಾ ಮೇ ಜರಾಯ್ವಜರಂ ಮರಾಯು। ಏಕಜ್ಜರಾಯುಜಂ ಶರೀರಂ ಶರದಮ-ಜೀರ್ಣಂ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಅಂಕುಶವು ಎರಡು ರೀತಿಯಾಗಿರುತ್ತದೆ. ಒಂದು ಸ್ಥಿತಿಯನ್ನುಂಟುಮಾಡಿ ಪೋಷಿಸುವುದು. ಇನ್ನೊಂದು ಶಿಕ್ಷೆಗೆ ಹಿಂಸಾದಾಯಕವಾದುದು. ಅದರಂತೆ ಅಶ್ವಿನೀದೇವತೆಗಳೂ ಲೋಕ ಪೋಷಕರಾಗಿರುತ್ತಾರೆ. ವಿಲಕ್ಷಣ ಶಬ್ದಗಳಾದುದರಿಂದ ಪ್ರತಿಯೊಂದು ಶಬ್ದವನ್ನೂ ಹೇಳಿ ವ್ಯಾಖ್ಯಾನ ಮಾಡುತ್ತಾರೆ. ಭೃಧಾತುವಿಗೆ ಯಙ್‌ಲುಗಂತದ ಮೇಲೆ ಈ ಪ್ರತ್ಯಯ. ಛಾಂದಸವಾಗಿ ಜಕಾರ ಬಂದಿದೆ. ಜರ್ಭರೀ. ಪ್ರಪಂಚವನ್ನು ಒಂದುಕಡೆ ನಿಲ್ಲಿಸಿದವರು. ಭರ್ತಾಚ ಹಂತಾಚ ಎಂದು ಹರ್ಷವಾಗಿ ಪುಲ್ಲಿಂಗದಿಂದ ನಿರ್ದೇಶಿಸಿರುತ್ತಾರೆ. 'ಅಂಕುಶೋಽಸ್ತ್ರೀ ಸೃಣಿ : ಸ್ತ್ರೀಯೂಂ'ಎಂದು ಅಮರ. ಸೃಣಿಯೆಂಬುದು ಸ್ತ್ರೀಲಿಂಗವಾದುದರಿಂದ ದ್ವಿವಿಧಾ ಎಂದು ಸ್ತ್ರೀಲಿಂಗ ನಿರ್ದೇನ ಮಾಡಿರುತ್ತಾರೆ. ಹಿಂಸಾರ್ಥಕ ತೃಪಧಾತ. ವಿನಿಂದ ತುರ್ಫರೀತೂ ಪದವಾಗಿದೆ. ಶತ್ರುನಾಶಕರೆಂದರ್ಥ. ನಿತೋಶನೆಂದರೆ ಒಬ್ಬ ವಧಕನು ಆವನ ಮಕ್ಕಳ ನೈತೋಶರು. 'ವವಾ ಯಥಾತಥೈವೈವಂ ಸಾಮ್ಯೇ ಹೋ ಹೋ ಚ ವಿಸ್ಮಯೇ' ಎಂದು ವಶಬ್ದವು ಸಾದೃಶ್ಯಾರ್ಥದಲ್ಲಿ ಹೇಳಿದೆ. ತುರ್ಫರೀ. ಹಿಂಸಾರ್ಥಕ ತೃಫಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ಪರ್ಫರೀಕಾ. ಪೂರಣಾರ್ಥಕಪ ಧಾತುವಿನಿಂದ ನಿಷ್ಪನ್ನವಾಗಿದೆಯೆಂದರೆ ಸ್ತೋತೃಜನರಿಗೆ ಧನಾದಿದಾನದಿಂದ ತೃಪ್ತಿಪಡಿಸುವದೆಂದರ್ಥ. ಉದನ್ಯಜವೆಂದರೆ ಸಮುದ್ರದಲ್ಲಿ ಹುಟ್ಟಿದ ರತ್ನವೆಂದು ಹಿಂದೆ ಹೇಳಿದೆ. ಸಮುದ್ರದಲ್ಲಿ ಹುಟ್ಟಿರುವುದರಿಂದ ಚಂದ್ರನೂ ಉದನ್ಯಜನಾಗುತ್ತಾನೆ. ಚಂದ್ರನ ಸಂಬಂಧವಾದ ಬೆಳದಿಂಗಳು ಮುಂತಾದವುಗಳೂ ಆಗುತ್ತವೆ. ಜೇಮನಾ. ಜಯಾರ್ಥಕ ಜಿಧಾತುವಿಗೆ ಮನಿನ್ ಪ್ರತ್ಯಯ, ಶರೀರಂ ಎಂಬುದಕ್ಕೆ ಶರದಂ ಎಂದು ವ್ಯಾಖ್ಯಾನ. ಶರ ಅಂದರೆ ಬಾಣದಂತೆ ತುಂಡರಿಸಲು ಯೋಗ್ಯವಾದುದು. ದೋ ಅವಖಂಡನೇ. ಧಾತು. ಕರ್ಮಣಿಯಲ್ಲಿ ಕಪ್ರತ್ಯಯ ಆತ್ವಲೋಪಗಳು ಬಂದಿವೆ.

**ಅಥ—ಏಷಾ ಸೋಮಸ್ಯ ॥ ೫ ॥**

ಮುಂದೆ ಹೇಳುವ ಮಂತ್ರವು ಸೋಮದ ಅತಿಸ್ತುತಿಯನ್ನು ತಿಳಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ

ಐದನೆಯ ಖಂಡವು ಸಮಾಪ್ತವಾಗಿದೆ.

## ಅಥ ಷಷ್ಠಃ ಖಂಡಃ

## ಆರನೆಯ ಖಂಡವು

ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ । ತರತ್ಸ ಮಂದೀ ಧಾವತಿ । (ಋ. ಸಂ. ೯-೫೮-೧) ॥ ತರತಿ ಸ ಪಾಪಂ ಸರ್ವಂ ಮಂದೀ ಯಃ ಸ್ತೌತಿ ಧಾವತಿ ಗಚ್ಛ-ತ್ಯೂರ್ಧ್ವಾಂ ಗತಿಂ । ಧಾರಾ ಸುತಸ್ಯಾಂಧಸಃ । ಧಾರಯಾಭಿಷುತಸ್ಯ ಸೋಮಸ್ಯ ಮಂತ್ರ ಪೂತಸ್ಯ ವಾಚಾ ಸ್ತುತಸ್ಯಾಥೈಷಾ ಯಜ್ಞಸ್ಯ ॥ ೬ ॥

ತರತ್ಸಮಂದೀ ಧಾವತಿ ಧಾರಾ ಸುತಸ್ಯಾಂಧಸಃ । ತರತ್ಸಮಂದೀ
ಧಾವತಿ ॥

ಋ. ಸಂ. ೭-೧-೧೫

ಸೋಮದ ಅತಿಸ್ತುತಿ ಪ್ರತಿಪಾದಕ ಮಂತ್ರವನ್ನು ಉದಾಹರಿಸುತ್ತಾರೆ. ದೇವತೆಗಳ ಸ್ತೋತ್ರದಿಂದ, ಹರ್ಷಪಡುವ ಆ ಸೋಮವು ಸಕಲಪಾಪಗಳನ್ನೂ ಹೋಗಲಾಡಿಸುತ್ತದೆ. ಅಭಿಷುತವಾದ, ಭಕ್ಷಿಸಲು ಯೋಗ್ಯವಾದ ಮಂತ್ರಪೂತವಾದ ಸೋಮದ ಧಾರೆಯಿಂದ ಉನ್ನತಗತಿಯನ್ನು ಹೊಂದುತ್ತಾನೆ.

**ತರತ್ಸ ಮಂದೀ ಧಾವತಿ ॥**

ಆದಾಶಯವನ್ನು ಸೂಚಿಸಲು ಪೂರ್ವೋಕ್ತವಾದುದನ್ನೇ ಪುನಃ ಹೇಳಿರುತ್ತಾರೆ.

**ತರತಿ ಸ ಪಾಪಂ ಸರ್ವಂ ಮಂದೀ ಯಃ ಸ್ತೌತಿ । ಧಾತಿ ಗಚ್ಛತ್ಯೂರ್ಧ್ವಾ ಗತಿಂ 'ಧಾರಾ ಸುತಸ್ಯಾಂಧಸಃ' ಧಾರಯಾಭಿಷುತಸ್ಯ ॥ ಸೋಮಸ್ಯ ಮಂತ್ರ ಪೂತಸ್ಯವಾಚಾ ಸ್ತುತಸ್ಯ ॥**

ಮಂತ್ರಾರ್ಥವನ್ನು ವಿವರಿಸುತ್ತಾರೆ. ಮಂದಃ ಅಂದರೆ ಸ್ತೋತ್ರ. ಹರ್ಷದಾಯಕವಾದುದು. ಸ್ತುತ್ಯರ್ಥಕ ಮದಿಧಾತುವಿಗೆ ಘಞಪ್ರತ್ಯಯ. ಮಂದವುಳ್ಳದ್ದು ಮಂದೀ ಆಗುತ್ತದೆ. ಗತ್ಯರ್ಥದಲ್ಲಿ ಧಾವು ಧಾತು ಹೇಳಿದೆ. ಊರ್ಧ್ವಗತಿಯನ್ನು ಹೊಂದುವುದೆಂದರ್ಥ.

**ಅಥ—ಏಷಾ ಯಜ್ಞಸ್ಯ ॥ ೬ ॥**

ಮುಂದೆ ಹೇಳುವ ಮಂತ್ರವು ಯಜ್ಞದ ಅತಿಸ್ತುತಿಯನ್ನು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ಆರನೆಯ ಖಂಡವು ಸಮಾಪ್ತವಾಗಿದೆ.

# ಅಥ ಸಪ್ತಮಃ ಖಂಡಃ

## ಏಳನೆಯ ಖಂಡವು

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ। ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಂ ಆ ವಿವೇಶ (ಋ. ಸಂ. ೪-೫೮-೩)॥ ಚತ್ವಾರಿ ಶೃಂಗೇತಿ ವೇದ ವಾ ಏತ ಉಕ್ತಾಸ್ತ್ರಯೋಽಸ್ಯ ಪಾದಾ ಇತಿ ಸವನಾನಿ ತ್ರೀಣಿ ದ್ವೇ ಶೀರ್ಷೇ ಪ್ರಾಯಣೀಯೋದಯನೀಯೇ ಸಪ್ತ ಹಸ್ತಾಸಃ ಸಪ್ತ ಚ್ಛಂದಾಂಸಿ ತ್ರಿಧಾ ಬದ್ಧಸ್ತ್ರೇಧಾ ಬದ್ಧೋ ಮಂತ್ರ ಬ್ರಾಹ್ಮಣಕಲ್ಪೈರ್ವೃಷಭೋ ರೋರವೀತಿ ರೋರವಣಮಸ್ಯ ಸವನಕ್ರಮೇಣ ಋಗ್ಭಿರ್ಯಜುರ್ಭಿಃ ಸಾಮಭಿರ್ಯದೇನ-ಮೃಗ್ಭಿಃ ಶಂಸಂತಿ ಯಜುರ್ಭಿರ್ಯಜಂತಿ ಸಾಮಭಿಸ್ತುವಂತಿ ಮಹೋ ದೇವ ಇತ್ಯೇಷ ಹಿ ಮಹಾನ್ದೇವೋ ಯದ್ಯಜ್ಞೋ ಮರ್ತ್ಯಾಂ ಆ ವಿವೇಶೇತ್ಯೇಷ ಹಿ ಮನುಷ್ಯಾನಾವಿಶತಿ ಯಜನಾಯ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೭ ॥

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ
ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ
ಮರ್ತ್ಯಾ ಅವಿವೇಶ ॥

(ಋ. ಸಂ. ೩-೮-೧೦)

ಯಜ್ಞದಸ್ತುತಿ ಪ್ರತಿಪಾದಕವಾದ ಮಂತ್ರವನ್ನು ಉದಾಹರಿಸುತ್ತಾರೆ. ಅಗ್ನಿಯೇ ಯಜ್ಞಸ್ವರೂಪನಾದುದರಿಂದ ಯಜ್ಞಸ್ತುತಿಯು ಈ ಮಂತ್ರದಲ್ಲಿ ಹೇಳಿದೆ. ಯಜ್ಞಸ್ವರೂಪನಾದ ಅಗ್ನಿಗೆ ನಾಲ್ಕು ವೇದಗಳೇ ಶೃಂಗ (ಕೊಂಬು) ಗಳಾಗುತ್ತವೆ. ಯದ್ಯಪಿ ಆಪಸ್ತಂಬರು ಯಜ್ಞಂ ವ್ಯಾಖ್ಯಾಸ್ಯಾಮಃ ಸ ತ್ರಿಭಿರ್ವೇದೈರ್ವಿಧೀಯತೇ ಎಂದು ಮೂರು ವೇದಗಳಿಂದಲೇ ಯಜ್ಞವು ನಿರ್ವಹಿಸಲ್ಪಡುತ್ತದೆಂದು ಹೇಳುತ್ತಾರೆ. ಆದರೂ ಅಥರ್ವಣವೇದದಲ್ಲಿ ಇತರಾಪೇಕ್ಷಿತವಾಗಿ ಏಕಾಗ್ನಿಸಾಧ್ಯವಾದ ಸಕಲ ಕರ್ಮವೂ ಅಭಿಹಿತವಾದುದರಿಂದ ಆಶ್ರಯಿಸಿ ನಾಲ್ಕು ವೇದಗಳೆಂದು ಹೇಳಿದೆ. ಪ್ರವೃತ್ತಿ ಸಾಧನವಾದುದರಿಂದ ಪ್ರಾತಃ ಸವನಾದಿ ಮೂರು ಸವನಗಳು ಈ ಯಜ್ಞಪುರುಷನ ಪಾದಗಳು. ಇಷ್ಟಿಸೋಮ ಪ್ರಧಾನ್ಯದಿಂದ ಪ್ರಾಯಣೀಯ ಉದಯನೀಯ, ಬಹ್ವೌದನ, ಪ್ರವರ್ಗ್ಯರೂಪವಾದ ಎರಡು ತಲೆಗಳು. ದೇವತಾತೃಪ್ತಿ ಕಾರ್ಯದಲ್ಲಿ ಮುಖ್ಯ ಸಾಧನವಾದುದರಿಂದ ಗಾಯತ್ರ್ಯಾದಿ ಏಳು ಛಂದಸ್ಸುಗಳನ್ನು ಇವನ ಕೈಗಳು. ಇವನು ಮಂತ್ರ, ಬ್ರಾಹ್ಮಣ ಕಲ್ಪಸೂತ್ರ ರೂಪವಾಗಿ ಮೂರು ಸಾಧನಗಳಿಂದ ಕಟ್ಟಲ್ಪಟ್ಟಿರುತ್ತಾನೆ. ಆ ಮೂರರಿಂದ ಅವನ ನಿಷ್ಪತ್ತಿಯೆಂದು ತಾತ್ಪರ್ಯ. ಈ ಸ್ವರೂಪದಿಂದ ಕೂಡಿರುವ ಯಜ್ಞಪುರುಷನು ಸಕಲಕಾಮನೆಯನ್ನು ಕೊಡುತ್ತಾನೆ. ಸವನಕ್ರಮದಿಂದ ಶಸ್ತ್ರಯಾಗಸ್ತುತಿ ರೂಪಗಳಾದ ಋಗ್ಯಜುಃ

ಸಾಮಗಳಿಂದ ಹೋತ್ರಾದಿಗಳು ಶಬ್ದಮಾಡುವುದರಿಂದ ಅದು ಇದರಲ್ಲಿ ಉಪಚರಿತವಾಗಿದೆ. ಮಹಾನುಭಾವನಾದ ಯಜ್ಞದೇವನು ಯಜನಕಾರ್ಯಕ್ಕೋಸ್ಕರ ಮನುಷ್ಯರನ್ನು ಪ್ರವೇಶಿಸಿದನು. ಮನುಷ್ಯರೂಪಿ ಯಜಮಾನರಿಂದ ಅವರನ್ನು ಹೊಂದಿರುವನೆಂದು ಉಪಚಾರದಿಂದ ಹೇಳಿದೆ.

ಚತ್ವಾರಿ ಶೃಂಗೇತಿ ವೇದಾ ವಾ ಏತ ಉಕ್ತಾಃ ತಯೋ ಅಸ್ಯ ಪಾದಾ ಇತಿ-ಸವನಾನಿ ತ್ರೀಣಿ । ದ್ವೇ ಶೀರ್ಷೇ-ಪ್ರಾಯಣೀಯೋದಯನೀಯೇ । ಸಪ್ತ ಹಸ್ತಾಸಃ ಸಪ್ತ ಛಂದಾಂಸಿ । ತ್ರಿಧಾ ಬದ್ಧಸ್ತ್ರೇಧಾ ಬದ್ಧೋ ಮಂತ್ರ-ಬ್ರಾಹ್ಮಣ-ಕಲ್ಪೈಃ । ವೃಷಭೋ ರೋರವೀತಿ । ರೋರವಣಮಸ್ಯ ಸವನಕ್ರಮೇಣ । ಋಗ್ಭಿರ್ಯಜುರ್ಭಿಃ ಸಾಮಭಿಃ ಸ್ತುವಂತಿ । ಮಹೋದೇವ ಇತಿ । ಏಷಹಿ ಮಹಾನ್ದೇವೋ ಯದ್ಯಜ್ಞೋ, ಮರ್ತ್ಯಾನ್ ಆವಿವೇಶೇತಿ-ಏಷಹಿ ಮನುಷ್ಯಾನಾವಿಶತಿ ಯಜನಾಯ, ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೭ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಪ್ರಾತಃ ಸವನ, ಮಾಧ್ಯಂದಿನಸವನ, ಸಾಯಂಸವನವೆಂದು ಮೂರು ಸವನಗಳು ಯಜ್ಞಪುರುಷನ ಪಾದಗಳು. ಗಾಯತ್ರೀ, ಉಷ್ಣಿಕ್ ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಎಂದು ಏಳು ಛಂದಸ್ಸುಗಳು ಇವನ ಪಾದಗಳು. ಕಲ್ಪಪದಕ್ಕೆ ಕಲ್ಪಸೂತ್ರಗಳೆಂದರ್ಥ. ಋಕ್ಕುಗಳಿಂದ ಹೋತೃ ಶಂಸನಮಾಡುತ್ತಾನೆ. ಅಧ್ವರ್ಯು ಯಜುಸ್ಸುಗಳಿಂದ ಯಜನ ಮಾಡುತ್ತಾನೆ. ಉದ್ಗಾತೃ ಸಾಮಗಳಿಂದ ಸ್ತುತಿಸುತ್ತಾನೆ. ಈ ಯಜ್ಞರೂಪಿಯಾದ ಅಗ್ನಿಯ ಬಹುತರಸ್ತುತಿಯನ್ನು ಮುಂದೆ ಹೇಳುವ ಋಕ್ಕು ಪ್ರತಿಪಾದಿಸುತ್ತದೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹದಿಮೂರನೆಯ ಅಧ್ಯಾಯದಲ್ಲಿ

ಏಳನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಅಷ್ಟಮ ಖಂಡಃ

### ಎಂಟನೆಯ ಖಂಡವು

ಸ್ವರ್ಯಂತೋ ನಾಪೇಕ್ಷಂತ ಆ ದ್ಯಾಂ ರೋಹಂತಿ ರೋದಸೀ । ಯಜ್ಞಂ ಯೇ ವಿಶ್ವತೋಧಾರಂ ಸುವಿದ್ವಾಂಸೋ ವಿತೇನಿರೇ ॥ ಸ್ವರ್ಗಚ್ಛಂತ ಈಜಾನಾ ನಾ ನೇಕ್ಷಂತೇ

ತೇಽಮುಮೇವ ಲೋಕಂ ಗತವಂತ ಈಕ್ಷಂತ ಇತಿ । ಆ ದ್ಯಾಂ ರೋಹಂತಿ ರೋದಸೀ । ಯಜ್ಞಂ ಯೇ ವಿಶ್ವತೋಧಾರಂ ಸರ್ವತೋಧಾರಂ ಸುವಿದ್ವಾಂಸೋ ವಿತೇನಿರ ಇತ್ಯಥೈಷಾ ವಾಚಃ ಪ್ರವಲ್ಹಿತೇವ ॥ ೮ ॥

ಸ್ವರ್ಯಂತೋ ನಾಪೇಕ್ಷಂತ ಆದ್ಯಾಂ ರೋಹಂತಿ ರೋದಸೀ ।
ಯಜ್ಞಂ ಯೇ ವಿಶ್ವತೋಧಾರಂ ಸುವಿದ್ವಾಂಸೋ ವಿತೇನಿರೇ ॥

ಯಜ್ಞರೂಪಿಯಾದ ಅಗ್ನಿಯ ವಿಶೇಷ ಸ್ತುತಿಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಸುಖವಾಗಿ ಯಜ್ಞ ದೇವತಾಸ್ವರೂಪವನ್ನು ತಿಳಿದಿರುವ ವಿದ್ವಾಂಸರು ಎಲ್ಲಾ ರೀತಿಯಿಂದಲೂ ಅಪ್ರತಿಹತವಾದ ಗತಿಯುಳ್ಳ ಯಜ್ಞವನ್ನು ವಿಧಿವತ್ತಾಗಿ ಮಾಡಿ ಯಾವ ಅಪೇಕ್ಷೆಯೂ ಇಲ್ಲದೆ ದ್ಯುಲೋಕವನ್ನು ಹೊಂದುತ್ತಾರೆ. ದ್ಯಾವಾಪೃಥಿವಿಯನ್ನತಿಕ್ರಮಿಸಿ ಅವರು ಸ್ವರ್ಗವನ್ನು ಪಡೆಯುತ್ತಾರೆ.

ಸ್ವರ್ಯಂತ ಈಜಾನಾ ವಾ ನೇಕ್ಷಂತೇ ತೇಽಮುಮೇವ ಲೋಕಂ
ಗತವಂತ ಮೀಕ್ಷಂತಮಿತಿ । ಆದ್ಯಾಂ ರೋಹಂತಿ ರೋದಸೀ ।
ಯಜ್ಞಂ ಯೇ ವಿಶ್ವತೋಧಾರಂ ಸರ್ವತೋಧಾರಂ । ಸುವಿದ್ವಾಂ-
ಸೋ ವಿತೇನಿರೇ ಇತಿ ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ವಿಧಿವತ್ತಾಗಿ ತಿಳಿದು ಯಾಗಮಾಡಿದವರು ಸ್ವರ್ಗಕ್ಕೆ ಹೋಗುತ್ತಾ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಸರ್ವಸಮರ್ಥವಾಗಿ ದ್ಯುಲೋಕವನ್ನು ಹೊಂದುತ್ತಾರೆಂದು ತಾತ್ಪರ್ಯ.

ಅಥೈಷಾ ವಾಚಃ ಪ್ರವಲ್ಹಿತೇವ ॥ ೮ ॥

ಮುಂದೆ ಉದಾಹರಿಸುವ ಮಂತ್ರವು ವಾಗ್ದೇವತೆಯ ಅತಿಸ್ತುತಿಯನ್ನು ಪ್ರತಿಪಾದಿಸುತ್ತದೆ. ಆದರೆ ಅದು ಪ್ರಹೇಳಿಕಾ ಇದ್ದಂತೆ ಇರುತ್ತದೆ. ಅಂದರೆ ಸ್ಪಷ್ಟವಾಗಿ ತೋರದಿರುವ ವಾಕ್ಯಾರ್ಥವುಳ್ಳದ್ದಾಗುತ್ತದೆ. ಪ್ರವಲ್ಹಿತಾ ಅಂದರೆ ಒಗಟು ಅಥವಾ ಸಮಸ್ಯೆ. ಪರರು ನೋಡಿ ಸಂದೇಹಪಡಬೇಕು ಹಾಗೆ ನಿಗೂಢಾರ್ಥಗರ್ಭಿತವಾಗಿರುತ್ತದೆ. ವಲ್ಹ ಪರಿಭಾಷಣ ಹಿಂಸಾಚ್ಛಾದನೇಷು, ಧಾತು, ಇದರಮೇಲೆ ಕ್ತಪ್ರತ್ಯಯ ಬಂದಿದೆ.

ವ್ಯಕ್ತೀಕೃತ್ಯ ಕಮಪ್ಯರ್ಥಂ ಸ್ವರೂಪಾರ್ಥಸ್ಯ ಗೋಪನಾತ್
ಯತ್ರ ಬಾಹ್ಯಾರ್ಥ ಸಂಬಂಧಃ ಕಥ್ಯತೇ ಸಾ ಪ್ರಹೇಳಿಕಾ ॥

ಎಂದು ಪ್ರಹೇಳಿಕಾಲಕ್ಷಣ. ಸ್ವಸ್ವರೂಪವನ್ನು ಮರೆಮಾಚಿ ಎದುರಿಗೆ ಯಾವುದೋ ಒಂದು ಬೇರೆ ಅರ್ಥ ತೋರುತ್ತಿದ್ದು ಬಾಹ್ಯಾರ್ಥ ಸಂಬಂಧ ಹೊಂದಿರುವುದಕ್ಕೆ ಪ್ರಹೇಳಿಕಾ ಎಂದು ಕರೆಯುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ಎಂಟನೆಯ ಖಂಡವು ಸಮಾಪ್ತವಾದಿದೆ.

ಮೊದಲು ಬ್ರಹ್ಮನನ್ನು ಪಡೆಯೋಣ ಎಂದು ವೇದಾಧ್ಯಯನವನ್ನು ಮಾಡತಕ್ಕವನು ಓಂಕಾರೋಚ್ಚಾರಣದಿಂದ ಬ್ರಹ್ಮನನ್ನೇ ಪಡೆಯುತ್ತಾನೆ. ಓಂ ಎಂದರೆ ಪರಮಾತ್ಮನು. ಇದರ ಉಚ್ಚಾರಣೆಯಿಂದ ಪರಮಾತ್ಮನ ಪ್ರಾಪ್ತಿಯಾಗುತ್ತದೆಯೆಂದು ತಿಳಿಸಿದೆ.

ಓಂಕಾರಪೂರ್ವಂ ಪ್ರವೃತ್ತಾನಾಂ ಕ್ರಿಯಾಣಾಂ ಫಲವತ್ತ್ವಂ ಯಸ್ಮಾತ್, ತಸ್ಮಾತ್ ಓಂಕಾರಂ ಬ್ರಹ್ಮೇತ್ಯುಪಾಸೀತ ಇತ್ಯರ್ಥಃ।

ಪ್ರಣವೋಚ್ಚಾರಣೆಗೆ ಬ್ರಹ್ಮಸಾಕ್ಷಾತ್ಕಾರವೇ ಫಲವೆಂದು ಶಂಕರಾಚಾರ್ಯರು ಮೇಲಿನ ವಾಕ್ಯಕ್ಕೆ ಭಾಷ್ಯವನ್ನು ಹೇಳುವಾಗ ತಿಳಿಸಿರುತ್ತಾರೆ.

ಓಂಕಾರರೂಪವಾದ ಪ್ರಣವವು ಅಮೃತತತ್ತ್ವಸಾಧಕವೆಂದು ತಿಳಿಸಲು ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಕಥೆಯನ್ನು ಹೇಳಿದೆ. (ಛಾ. ೧-೪)

ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಂಸ್ತೇ ಛಂದೋಭಿರಚ್ಛಾದಯನ್ಯದೇಭಿರಚ್ಛಾದಯಂಸ್ತಚ್ಛಂದಸಾಂ ಛಂದಸ್ತ್ವಂ ॥ ೨ ॥

ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇದೇವಂ ಪರ್ಯಪಶ್ಯದೃಚಿ ಸಾಮ್ನಿ ಯಜುಷಿ। ತೇನು ವಿದಿತ್ವೋರ್ಧ್ವಾ ಋಚಃ ಸಾಮ್ನೋ ಯಜುಷಃ ಸ್ವರಮೇವ ಪ್ರಾವಿಶನ್ ॥ ೩ ॥

ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾತಿಸ್ವರತ್ಯೇವಂ ಸಾಮೈವಂ ಯಜುರೇಷ ಉ ಸ್ವರೋ ಯದೇತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭಯಾ ಅಭವನ್ ॥ ೪ ॥'

ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ ಸ್ವರಮಮೃತಮಭಯಂ ಪ್ರವಿಶತಿ ತತ್ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ ॥ ೫ ॥

ದೇವತೆಗಳು ಮೃತ್ಯುವಿಗೆ ಹೆದರಿ ತ್ರಯೀರೂಪವಾದ ವಿದ್ಯೆಯಲ್ಲಿ ಆಶ್ರಯವನ್ನು ಪಡೆದು ಅದನ್ನು ಛಂದಸ್ಸುಗಳಿಂದ ಮರೆಸಿದರು. (ಆದುದರಿಂದಲೇ ಅದಕ್ಕೆ ಛಂದಸ್ಸೆಂದು ಹೆಸರು) ಆದರೆ ನೀರಿನೊಳಗೆ ಮೀನುಗಳನ್ನು ಸುಲಭವಾಗಿ ಕಂಡುಹಿಡಿಯುವಂತೆ ಮೃತ್ಯುವು ಋಗಾದಿಗಳಲ್ಲಿ ಅಡಗಿದ್ದ ದೇವತೆಗಳನ್ನು ಕಂಡುಕೊಂಡಿತು. ಆಗ ಅವರು ಋಕ್ಕಿನಿಂದಲೂ ಯಜುಸ್ಸಿನಿಂದಲೂ, ಸಾಮದಿಂದಲೂ ಹೊರಕ್ಕೆದ್ದು ಸ್ವರದಲ್ಲಿ ಅಡಗಿಕೊಂಡು ಅದರ ಆಶ್ರಯವನ್ನು ಪಡೆದರು. (ಆದುದರಿಂದಲೇ ಋಗಾದಿಗಳ ಸಮಾಪ್ತಿಕಾಲದಲ್ಲಿ ಓಂಕಾರವನ್ನು ಪಠಿಸುತ್ತಾರೆ). ಈ ಓಂಕಾರರೂಪವಾದ ಸ್ವರವು ಅಮೃತವೂ ಅಭಯರೂಪವೂ ಆಗಿದೆ. ದೇವತೆಗಳೂ ಸಹ ಇದರ ಆಶ್ರಯವನ್ನು ಪಡೆದು ಅಮೃತತ್ವವನ್ನೂ ಅಭಯವನ್ನೂ ಹೊಂದಿದರು. ಯಾರು ಈ ತತ್ತ್ವವನ್ನರಿತು ಈ ಓಂಕಾರರೂಪವಾದ ಸ್ವರದ ಆಶ್ರಯವನ್ನು ಪಡೆಯುತ್ತಾರೆಯೋ ಅವರು ಅಮೃತರಾಗುತ್ತಾರೆ. ಅಭಯವನ್ನು ಪಡೆಯುತ್ತಾರೆ.

ಯಸ್ಮಿನ್ ವಿಶ್ವೇ ಸರ್ವೇ ದೇವಾ ಅಧಿ ನಿಷೇದುಃ । ಪ್ರಣವಸ್ಯ ಸರ್ವಮಂತ್ರಾತ್ಮಕತ್ವಾತ್ ಮಂತ್ರೇಷು ಸರ್ವದೇವತಾನಾಂ ನಿವಾಸಾತ್ ಸರ್ವದೇವನಿವಾಸತ್ವಂ । ಬ್ರಹ್ಮಾಧಿಷ್ಠಾನತ್ವಾದ್ವಾ ಬ್ರಹ್ಮಣಿ ಸರ್ವದೇವಾನಾಂ ನಿವಾಸಾತ್ ॥ ಪ್ರಣವದಲ್ಲಿ ಸಕಲವಾದ ದೇವತೆಗಳೂ ಅಧಿಷ್ಠಿತರಾಗಿದ್ದಾರೆ. ಹೇಗೆಂದರೆ, ಇದನ್ನು ಎರಡು ವಿಧದಲ್ಲಿ ಹೇಳಬಹುದು. ಮಂತ್ರಗಳು ದೇವತೆಗಳ ನಿವಾಸಸ್ಥಾನವು. ಪ್ರಣವವು ಸರ್ವಮಂತ್ರಾತ್ಮಕವಾಗಿದೆ. ಆದುದರಿಂದ ಪ್ರಣವವು ದೇವತೆಗಳ ನಿವಾಸಸ್ಥಾನವು ಎಂದು ಒಂದು ವಿಧವಾಗಿ ಹೇಳಬಹುದು. ಅಥವಾ, ಪ್ರಣವವು ಬ್ರಹ್ಮನ ಅಧಿಷ್ಠಾನವು. ಬ್ರಹ್ಮನು ಸಕಲ ದೇವತೆಗಳ ಅಧಿಷ್ಠಾನವು. ಆದುದರಿಂದ ಪ್ರಣವವು ದೇವತೆಗಳಿಗೆಲ್ಲಾ ಅಧಿಷ್ಠಾನವು.

ಆದುದರಿಂದ ಪ್ರಣವದ ಉಪಾಸನೆಯಿಲ್ಲದೆ ಬ್ರಹ್ಮಸಾಕ್ಷಾತ್ಕಾರವಿಲ್ಲವೆಂದು ತಿಳಿಸುವುದಕ್ಕಾಗಿ "ಕಿಮೃಚಾಕರಿಷ್ಯತಿ" ಎಂದು ಪ್ರಕೃತವಾದ ಋಕ್ಕಿನಲ್ಲಿ ವಿವರಿಸಿ, ಯ ಇತ್ತದ್ವಿದುಸ್ತ ಇಮೇ ಸಮಾಸತೇ । ಯಾರು ಇದನ್ನು ಅರಿಯುವರೋ ಅವರು ಆತ್ಮಸಾಮರಸ್ಯವನ್ನು ಪಡೆಯುವರೆಂದಿದೆ. ಪ್ರಕೃತವಾದ ಋಕ್ಕಿನಲ್ಲಿ ಅಕ್ಷರಶಬ್ದಕ್ಕೆ ಪ್ರಣವವೆಂದರ್ಥಮಾಡಿದರೆ ಆಗ ಪ್ರಣವರೂಪವಾದ ಬ್ರಹ್ಮನನ್ನು ಸಾಕ್ಷಾತ್ಕರಿಸಲು ಪ್ರಣವರೂಪವಾದ ಸಾಧನದಿಂದಲೇ ಸಾಧ್ಯವೆಂಬುದನ್ನು ಮುಂಡಕೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ ।
ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥

(ಮು. ಉ. ೨-೨-೨)

ಯಾವ ಪರತತ್ತ್ವದಲ್ಲಿ ಸಕಲ ಲೋಕಗಳೂ ಅಡಗಿರುವುವೋ ಅದೇ ಅಕ್ಷರವೆಂಬ ಬ್ರಹ್ಮನು. ಅದೇ ಪ್ರಾಣವು. ಅದೇ ವಾಙ್ಮನಸ್ಸು. ಅದೇ ಸತ್ಯವು. ಅದೇ ಅಮೃತವು. ಅದನ್ನೇ ಲಕ್ಷ್ಯವನ್ನಾಗಿ ಮಾಡಿಕೊಂಡು ಅದನ್ನು (ಗುರಿಯನ್ನು ಸಾಧಿಸಬೇಕು. ಅದು ಹೇಗೆಂದರೆ

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂಧಯೀತ ।
ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥

(ಮು. ಉ. ೨-೨-೩)

ಔಪನಿಷದ ಮಹಾಸ್ತ್ರವಾದ ಧನುಸ್ಸನ್ನು ತೆಗೆದುಕೊಂಡು ಉಪಾಸನೆಯೆಂಬ ಹರಿತವಾಗಿರುವ ಬಾಣವನ್ನು ಜೋಡಿಸಬೇಕು. ಅದನ್ನು ಎಳೆದುಕೊಂಡು ಅದರ ಭಾವನೆಯಲ್ಲಿಯೇ ಇರುವ ಚಿತ್ತದಿಂದ ಲಕ್ಷ್ಯವಾದ ಅಕ್ಷರವನ್ನು ಹೊಡೆಯಬೇಕು.

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇಧ್ಧವ್ಯಂ ಶರವತ್ತನ್ಮಯೋ ಭವೇತ್ ॥

(ಮು. ಉ. ೨-೨-೪)

ಪ್ರಣವವೇ ಧನುಸ್ಸು. ಆತ್ಮನೇ ಬಾಣ. ಬ್ರಹ್ಮವೇ ಲಕ್ಷ್ಯ. ಅದನ್ನು ಎಚ್ಚರತಪ್ಪದೆ ಹೊಡೆಯಬೇಕು. ಬಾಣದಂತೆ ತನ್ಮಯನಾಗಿರಬೇಕು. ಹೇಗೆ ಧನುಸ್ಸು ಗುರಿಯಲ್ಲಿ ಬಾಣವು ಹೋಗಿ ಸೇರುವುದಕ್ಕೆ ಕಾರಣವಾಗಿರುವುದೋ ಅದರಂತೆ ಆತ್ಮ

ನೆಂಬ ಬಾಣವು ಅಕ್ಷರವೆಂಬ ಗುರಿಯಲ್ಲಿ ಸೇರುವುದಕ್ಕೆ ಓಂಕಾರರೂಪವಾದ ಪ್ರಣವವು ಕಾರಣವು. ಜೀವನು ಪ್ರಣವವನ್ನು ಅಭ್ಯಾಸಮಾಡಿದರೆ ಎಂದರೆ ಉಪಾಸನೆಮಾಡಿದರೆ ಅದರಿಂದ ಸಂಸ್ಕಾರವುಂಟಾಗಿ ಅದನ್ನು ಆಶ್ರಯಿಸಿಕೊಂಡು ಯಾವ ಅಡ್ಡಿಯೂ ಇಲ್ಲದೆ ಅಕ್ಷರವನ್ನು ಸೇರಿ ಅಲ್ಲಿ ನೆಲೆಸುತ್ತಾನೆಂದರ್ಥ.

ಈ ರೀತಿಯಾಗಿ ಸಾಯಣರು ಪ್ರಕೃತವಾದ ಋಕ್ಕಿಗೆ ನಾಲ್ಕುವಿಧವಾದ ಅರ್ಥವನ್ನು ತೋರಿಸಿ ಅವೆಲ್ಲಕ್ಕೂ ನಿರುಕ್ತ ದಿಂದಲೂ ಉಪನಿಷತ್ತುಗಳಿಂದಲೂ ಆಧಾರಗಳನ್ನು ಕೊಟ್ಟಿರುತ್ತಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹದಿಮೂರನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ಏಕಾದಶ ಖಂಡಃ

## ಹನ್ನೊಂದನೆಯ ಖಂಡವು

ಆದಿತ್ಯ ಇತಿ ಪುತ್ರಃ ಶಾಕಪೂಣೇರೇಷರ್ಗ್ಭವತಿ ಯದೇನಮರ್ಚಂತಿ ಪ್ರತ್ಯೃಚಃ ಸರ್ವಾಣಿ ಭೂತಾನಿ ತಸ್ಯ ಯದನ್ಯನ್ಮಾತ್ರೇಭ್ಯಸ್ತದಕ್ಷರಂ ಭವತಿ ರಶ್ಮಯೋಽತ್ರ ದೇವಾ ಉಚ್ಯಂತೇ ಯ ಏತಸ್ಮಿನ್ನಧಿನಿಷಣ್ಣಾ ಇತ್ಯಧಿದೈವತ ಮಥಾಧ್ಯಾತ್ಮಂ ಶರೀರಮತ್ರ ಋಗು-ಚ್ಯತೇ ಯದೇನೇನಾರ್ಚಂತಿ ಪ್ರತ್ಯೃಚಃ ಸರ್ವಾಣೀಂದ್ರಿಯಾಣಿ ತಸ್ಯ ಯದವಿನಾಶಿ-ಧರ್ಮ ತದಕ್ಷರಂ ಭವತೀಂದ್ರಿಯಾಣ್ಯತ್ರ ದೇವಾ ಉಚ್ಯಂತೇ ಯಾನ್ಯಸ್ಮಿನ್ನಾತ್ಮನ್ಯೇಕಂ ಭವಂತೀತ್ಯಾತ್ಮಪ್ರವಾದಾಃ ॥ ೧೧ ॥

ಆದಿತ್ಯ ಇತಿ ಪುತ್ರಃ ಶಾಕಪೂಣೇರೇಷರ್ಗ್ಭವತಿ । ಯದೇನಮು-
ರ್ಚಂತಿ ಪ್ರತ್ಯೃಚಃ ಸರ್ವಾಣಿ ಭೂತಾನಿ । ತಸ್ಯ ಯದನ್ಯನ್ಮಂತ್ರೇ-
ಭ್ಯಸ್ತದಕ್ಷರಂ ಭವತಿ । ರಶ್ಮಯೋಽತ್ರ ದೇವಾ ಉಚ್ಯಂತೇ
ಯಏತಸ್ಮಿನ್ನಧಿನಿಷಣ್ಣಾ ಇತ್ಯಧಿದೈವತಮ್ ॥

ಶಾಕಪೂಣ್ಯಾಚಾರ್ಯರ ಪುತ್ರರ ಮತದಲ್ಲಿ ಈ ಋಕ್ಕು ಆದಿತ್ಯನನ್ನು ಪ್ರತಿಪಾದಿಸುತ್ತದೆ. ಋಕ್ ಅಂದರೆ ಪೂಜಿಸಲ್ಪಡುವ ಆದಿತ್ಯನೆಂದರ್ಥ. ಋಙ್ಮಂತ್ರಗಳಿಂದ ಸೂರ್ಯನನ್ನು ಸಕಲರೂ ಪೂಜಿಸುತ್ತಾರೆ. ಅಥವಾ—ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಆದಿತ್ಯೋ ವಾಏಷ ಏತನ್ಮಂಡಲಂ ತಪತಿ ತತ್ರ ತಾ ಋ ಚಃ (ತೈ—ನಾ—ಉ) ಎಂಬ ಶ್ರುತಿ ಪ್ರಾಮಾಣ್ಯದಿಂದ ಋಕ್ಕೆಂದರೆ

ಋಗಾದಿಮಯವಾದ ಆದಿತ್ಯಮಂಡಲವು ಅಭಿಪ್ರೇತವಾಗಿದೆ. ತತ್ಸಂಬಂಧಿಯಾದ ಅವಿನಾಶಿಯಾದ, ನಿರತಿಶಯವಾದ, ಸರ್ವರಕ್ಷಕ ಬ್ರಹ್ಮನಲ್ಲಿ ಪ್ರಕಾಶಕವಾದ ರಶ್ಮಿಗಳು ಹೊಂದಿರುತ್ತವೆ. ಯ ಏಷೋಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ (ತೈ. ಆ. ೧೦-೧೩) ಎಂಬ ಶ್ರುತಿಯನ್ನನುಸರಿಸಿ ಸೂರ್ಯಮಂಡಲದಲ್ಲಿ ರಶ್ಮಿಗಳು ಸಂಬದ್ಧವಾಗಿವೆ. ಈ ಆದಿತ್ಯ ಮಂಡಲವನ್ನು ಅಕ್ಷರಸ್ವರೂಪದಿಂದ ಯಾರು ತಿಳಿಯಲಿಲ್ಲವೋ ಅವರು ಏನುಮಾಡಲು ಸಮರ್ಥರು ? ಅವರು ಯಥಾವತ್ತಾಗಿ ಆದಿತ್ಯನನ್ನು ತಿಳಿಯಲಿಲ್ಲವೆಂದು ತಾತ್ಪರ್ಯ. ತಿಳಿದವರು ಹಿಂದೆ ಹೇಳಿದಂತೆ ಪುನರಾವೃತ್ತಿಯಿಲ್ಲದೆ ಆದಿತ್ಯಸ್ವರೂಪದಿಂದ ಪ್ರತಿಷ್ಠಿತರಾಗಿ ಪ್ರಕಾಶಮಾನರಾಗಿರುತ್ತಾರೆ ಎಂದು ತಿಳಿಯಬೇಕು.

ಅಥಾಧ್ಯಾತ್ಮಂ ಶರೀರಮತ್ರ ಋಗುಚ್ಯತೇ ಯದೇನೇನಾರ್ಚಂತಿ
ಪ್ರತ್ಯೃಚಃ ಸರ್ವಾಣೀಂದ್ರಿಯಾಣಿ ತಸ್ಯ ಯದವಿನಾಶಿಧರ್ಮ
ತದಕ್ಷರಂ ಭವತಿ । ಇಂದ್ರಿಯಾಣ್ಯತ್ರ ದೇವಾ ಉಚ್ಯಂತೇ
ಯಾನ್ಯಸ್ಮಿನ್ನಧಿ ನಿಷಣ್ಣಾನೀತ್ಯಾತ್ಮ ಪ್ರವಾದಾಃ ॥ ೧೧ ॥

ಈ ಅಧ್ಯಾತ್ಮನನ್ನಾಶ್ರಯಿಸಿ ವ್ಯಾಖ್ಯಾನಮಾಡುತ್ತಾರೆ. ಅರ್ಚಂತಿ ಅನೇನ ಇತಿ ಋಕ್ ಅಂದರೆ ಶರೀರ, ಮತ್ತು ಇಂದ್ರಿಯಗಳು. ಇವು ಜೀವಾತ್ಮನಿಗೆ ತಮ್ಮಿಂದ ವಿಷಯಸುಖವನ್ನು ಕೊಡುತ್ತವೆ. ಆತ್ಮನು ಮನಸ್ಸಿನ ಸಂಬಂಧ ಹೊಂದುತ್ತಾನೆ. ಮನಸ್ಸು ಇಂದ್ರಿಯ ಸಂಬಂಧವನ್ನು ಹೊಂದುತ್ತದೆ. ಇಂದ್ರಿಯಗಳು ವಿಷಯವಾದ ಅರ್ಥದೊಡನೆ ಸಂಬಂಧ ಹೊಂದಿದಾಗ ಪ್ರತ್ಯಕ್ಷ ವಾಗುತ್ತದೆ. ಹೀಗೆ ನ್ಯಾಯಸ್ಥಿತಿಯಿರುವುದರಿಂದ ಮನಸ್ಸಿಂದ ಪ್ರೇರಣೆ ಹೊಂದಿದ ಇಂದ್ರಿಯಗಳು ವಿಷಯಗಳಲ್ಲಿ ಸಂಬದ್ಧ ವಾಗಿ ಆದರಿಂದುಂಟಾಗುವ ಸುಖವನ್ನು ಆತ್ಮನಿಗೆ ಕೊಡುತ್ತವೆ. ಜೀವನ ಚೇತನಾಸತತ್ವವಿಜ್ಞಾನವು ಅಕ್ಷರ ಅಂದರೆ ಅವಿನಾಶಿಯಾದ, ನಿರತಿಶಯವಾದ ಶರೀರಾದಿರಕ್ಷಕವಾದ ಜೀವನಲ್ಲಿ ಗಮನವುಳ್ಳ ಅಥವಾ ವಿಷಯದ್ಯೋತಕಗಳಾದ ಇಂದ್ರಿಯಗಳು ಆಶ್ರಯಿಸಿ ಇರುತ್ತವೆ. ಯಾವನು ಅಂತರಾತ್ಮನನ್ನು ತಿಳಿದಿಲ್ಲವೋ ಅವನು ಆತ್ಮಾರ್ಚನೆಗೆ ಸಾಧನವಾದ ಶರೀರದಿಂದ ಏನು ಮಾಡಲು ಸಮರ್ಥನು ? ಅವನ ಜೀವನಸಾಫಲ್ಯವಿಲ್ಲವೆಂದು ತಾತ್ಪರ್ಯ. ಉಳಿದ ಪದಗಳ ಅರ್ಥ ಹಿಂದಿನಂತೆಯೇ ತಿಳಿಯಬೇಕು.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ
ಹನ್ನೊಂದನೆಯ ಖಂಡವು ಸಮಾಪ್ತವಾಗಿದೆ.

---

## ಅಥ ದ್ವಾದಶ ಖಂಡಃ

## ಹನ್ನೆರಡನೆಯ ಖಂಡವು

ಅಕ್ಷರಂ ನ ಕ್ಷರತಿ ನ ಕ್ಷೀಯತೇ ವಾಕ್ಕ್ಷಯೋ ಭವತಿ ವಾಚೋಽಕ್ಷ ಇತಿ ವಾಕ್ಷೋ ಯಾನಸ್ಯಾಂಜನಾತ್ ಪ್ರಕೃತೀತರದ್ವರ್ತನ ಸಾಮಾದಿತ್ಯಯಂ ಮಂತ್ರಾರ್ಥ-

ಚಿಂತಾಭ್ಯೂಹೋಽಭ್ಯೂಢೋಽಪಿ ಶ್ರುತಿತೋಽಪಿ ತರ್ಕತೋ ನ ತು ಪೃಥಕ್ತ್ವೇನ ಮಂತ್ರಾ ನಿರ್ವಕ್ತವ್ಯಾಃ ಪ್ರಕರಣಶ ಏವ ತು ನಿರ್ವಕ್ತವ್ಯಾ ನ ಹ್ಯೇಷು ಪ್ರತ್ಯಕ್ಷಮಸ್ತ್ಯನೃಷೇರತಪಸೋ ವಾ ಪಾರೋವರ್ಯವಿತ್ಸು ತು ಖಲು ವೇದಿತೃಷು ಭೂಯೋವಿದ್ಯಃ ಪ್ರಶಸ್ಯೋ ಭವತೀತ್ಯುಕ್ತಂ ಪುರಸ್ತಾನ್ಮನುಷ್ಯಾ ವಾ ಋಷಿಷೂತ್ಕ್ರಾಮತ್ಸು ದೇವಾನಬ್ರುವನ್ಕೋ ನ ಋಷಿರ್ಭವಿಷ್ಯತೀತಿ ತೇಭ್ಯ ಏತಂ ತರ್ಕಮೃಷಿಂ ಪ್ರಾಯಚ್ಛನ್ಮಂತ್ರಾರ್ಥ ಚಿಂತಾಭ್ಯೂಹಂ ತಸ್ಮಾದ್ಯದೇವಂ ಕಿಂಚಾನೂಚಾನೋಽಭ್ಯೂಹತ್ಯಾರ್ಷಂ ತದ್ಭವತಿ ॥ ೧೨ ॥

ಅಕ್ಷರಂ ನ ಕ್ಷರತಿ ನ ಕ್ಷೀಯತೇ ವಾ ವಾಕ್ಕ್ಷಯೋ ಭವತಿ।
ವಾಚೋಽಕ್ಷ ಇತಿ ವಾ ॥

ಅಕ್ಷರ ಪದದ ನಿರ್ವಚನವನ್ನು ತೋರಿಸುತ್ತಾರೆ. ಅಕ್ಷರವು ಯಾವಾಗಲೂ ಅನ್ಯಥಾಭಾವವನ್ನು ಹೊಂದುವುದಿಲ್ಲ. ಎಂದೂ ಮೂಲದಿಂದ ನಾಶಹೊಂದುವುದಿಲ್ಲ. ಇದರ ಧ್ವನಿಯು ನಾಶವಾಗುತ್ತದೆ ಅಂದರೆ ಅಕ್ಷರವನ್ನು ವ್ಯಕ್ತಪಡಿಸುವ ಧ್ವನಿಯು ಉತ್ಪತ್ತಿ ವಿನಾಶವನ್ನು ಹೊಂದುತ್ತದೆ. ಅಕ್ಷರಂ ನಕ್ಷರಂ ವಿದ್ಯಾತ್, ಅಶ್ನೋತೇರ್ವಾಸರೋಽಕ್ಷರ ಎಂದು ಮಹಾಭಾಷ್ಯ ಕಾರರು ಅಕ್ಷರಪದದ ನಿರ್ವಚನಮಾಡಿರುತ್ತಾರೆ. ಅಥವಾ ಅಕ್ಷರವೆಂಬಲ್ಲಿ ರ ಎಂಬುದು ಉಪಮಾರ್ಥದಲ್ಲಿ ಹೇಳಿದೆಯೆಂದು ತಿಳಿಯಬೇಕು. ಅಕ್ಷರಗಳು ಅಂದರೆ ಅಚ್ಚಿನ ಮರಗಳು ಅವುಗಳಂತಿರುವ ಸ್ವರಗಳು ವ್ಯಂಜನಗಳನ್ನು ಹೊಂದಿ ಇರುತ್ತವೆ.

ಅಕ್ಷೋ ಯಾನಸ್ಯಾಂಜನಾತ್। ತತ್ಪ್ರಕೃತೀತರದ್ವರ್ತನಸಾಮಾನ್ಯಾದಿತಿ ॥

ಅಕ್ಷಶಬ್ದದ ನಿರ್ವಚನವನ್ನು ತೋರಿಸುತ್ತಾರೆ. ಅಕ್ಷ ಅಂದರೆ ಅಚ್ಚುಮರ. ರಥದ ಅಚ್ಚುಮರಕ್ಕೆ ತೈಲಾದಿಗಳಿಂದ ಲೇಪನ ಮಾಡುತ್ತಾರೆ. ಆದರಂತೆ ಸ್ವರಗಳು ಇರುವುದರಿಂದ ಇವುಗಳಿಗೆ ಅಕ್ಷರವೆಂದು ಹೆಸರು ಬಂದಿದೆ. ಸ್ವರಗಳು ಯಾವಾಗಲೂ ವ್ಯಂಜನಾರೂಢವಾಗಿಯೇ ಇರುತ್ತವೆ. ಇತಿ ಶಬ್ದವು ನಿರ್ವಚನ ಸಮಾಪ್ತಿಯನ್ನು ತಿಳಿಸುತ್ತದೆ. ಅಥವಾ ಗ್ರಂಥಸಮಾಪ್ತಿ ಯನ್ನು ಸನ್ನಿಹಿತವಾಗಿದೆಯೆಂದು ತಿಳಿಸುತ್ತದೆ. ಕೆಲವರು ಅದಕ್ಕೆ ಉತ್ತರವಾಕ್ಯದೊಡನೆ ಅನ್ವಯ ಹೇಳುತ್ತಾರೆ.

(ಇತಿ)ಅಯಂ ಮಂತ್ರಾರ್ಥ ಚಿಂತಾವ್ಯೂಹೋಽಭ್ಯೂಹ್ಯೋಽಪಿ ಶ್ರುತಿ
ತೋಽಪಿ ತರ್ಕತಃ ॥

ನಿರುಕ್ತಶಾಸ್ತ್ರದ ಸಮಾಪ್ತಿಯನ್ನು ತಿಳಿಸುತ್ತಾರೆ. ಚಿಂತಿಸಲ್ಪಡುವ ಈ ಮಂತ್ರಾರ್ಥಗಳ ಸಮೂಹವು ಸಕಲರೀತಿಯಿಂದಲೂ ನಾನು ವಿಚಾರಿಸಿರುತ್ತೇನೆ. ಇದರಿಂದ ಮಂತ್ರಾರ್ಥವನ್ನು ಊಹಿಸಿ ತಿಳಿದುಕೊಳ್ಳಬಹುದು. ಕೆಲವು ಕಡೆ ಶ್ರುತಿಯಿಂದಲೂ ಇನ್ನು ಕೆಲವು ಸ್ಥಳದಲ್ಲಿ ಬ್ರಾಹ್ಮಣದಿಂದಲೂ, ನಿಗಮವಿಶೇಷಗಳಿಂದಲೂ ವಿಮರ್ಶಿಸಿ ಅರ್ಥ ವಿವರಣೆ ಕೊಟ್ಟಿದೆ. ಹೀಗೆಯೇ ಹೇಳದಿರುವ ಸ್ಥಳದಲ್ಲಿ ವಿಚಾರಿಸಿ ಅರ್ಥವನ್ನು ನಿರ್ಧರಿಸಿ ತಿಳಿಯಬೇಕು. ಆದುದರಿಂದಲೇ ಈ ನಿರುಕ್ತಶಾಸ್ತ್ರವನ್ನು ಮಂತ್ರಾರ್ಥ ಚಿಂತಾಭ್ಯೂಹಲಕ್ಷಣ ಆಗಮವೆಂದು ಕರೆಯುತ್ತಾರೆ.

ನ ತು ಪೃಥಕ್ತ್ವೇನ ಮಂತ್ರಾ ನಿರ್ವಕ್ತವ್ಯಾಃ । ಪ್ರಕರಣಶ ಏವ ತು ನಿರ್ವಕ್ತವ್ಯಾಃ । ನ ಹ್ಯೇಷು ಪ್ರತ್ಯಕ್ಷಮಸ್ತ್ಯನೃಷೇರತಪಸೋ ವಾ । ಪಾರೋವರ್ಯವಿತ್ಸು ಖಲು ವೇದಿತೃಷು ಭೂಯೋವಿದ್ಯಃ ಪ್ರಶಸ್ಯೋ ಭವತೀತ್ಯುಕ್ತಂ ಪುರಸ್ತಾತ್ ॥

ಬೇರೆಬೇರೆಯಾಗಿ ಮಂತ್ರನಿರ್ವಚನವಮಾಡುವುದು ಅಸಾಧ್ಯ. ಪ್ರಕರಣದಿಂದಲೇ ಆಯಾ ಮಂತ್ರಾರ್ಥವನ್ನು ನಿರ್ಣಯಿಸ ಬೇಕು. ಮಂತ್ರವಿಷಯದಲ್ಲಿ ಯಾಜ್ಞದೈವತ, ಅಧ್ಯಾತ್ಮ, ಇತಿಹಾಸಾನುಪ್ರವೇಶವೆಂದು ಮೂರು ಪ್ರಕರಣ ಹೇಳುತ್ತಾರೆ. ಇವುಗಳ ಆಧಾರದಮೇಲೆಯೇ ಮಂತ್ರಾರ್ಥವನ್ನು ತಿಳಿಯುತ್ತಾರೆ ಏಕೆಂದರೆ ಈ ಮಂತ್ರಗಳಲ್ಲಿ ಪ್ರತ್ಯಕ್ಷಾರ್ಥದರ್ಶನ ವಿರುವುದಿಲ್ಲ. ಅಂದರೆ ಯಾರು ತಪಸ್ವಿಗಳಲ್ಲವೋ ಯಾರು ಋಷಿತ್ವವನ್ನು ಹೊಂದಲಿಲ್ಲವೋ ಅವರಿಗೆ ಪ್ರತ್ಯಕ್ಷಾರ್ಥದರ್ಶನವಿಲ್ಲ ದಿರುವುದರಿಂದ ಮಂತ್ರಾರ್ಥನಿರ್ಣಯವನ್ನು ಅವರು ಅರ್ಥನಿಶ್ಚಾಯಕ ಪ್ರಮಾಣಗಳಿಂದಲೇ ತಿಳಿಯಬೇಕಾಗುತ್ತದೆ. ಋಷಿಯೂ ತಪಸ್ವಿಯೂ ಆದವರು ಸಕಲ ಕಲ್ಮಷಗಳನ್ನು ಹೋಗಲಾಡಿಸಿಕೊಂಡುದುದರಿಂದ ಅವರಿಗೆ ಯಥಾವತ್ತಾಗಿ ಮಂತ್ರಾರ್ಥದರ್ಶನವಾಗುತ್ತದೆ. ಹಾಗೆ ತಿಳಿಯಲು ಅವರಿಗೆ ಯಾವ ಪ್ರತಿಬಂಧಕವೂ ಇರುವುದಿಲ್ಲ. ಪಾರೋವರ್ಯ ವಿದರು ಅಂದರೆ ಉಪದೇಶದಿಂದ ಹೆಚ್ಚುಕಡಿಮೆಯಾಗಿ ತಿಳಿಯುವವರು. ಪರೋವರಭಾವದಿಂದ ಅವರು ಮಂತ್ರಾರ್ಥವನ್ನು ಗುರೂಪದೇಶದಿಂದ ತಿಳಿಯುತ್ತಾರೆ. ಪೂರ್ವಜನ್ಮದ ಸುಕೃತಾತಿಶಯವುಳ್ಳವರು ಉಪದೇಶದವಾದೊಡನೆ ಆ ವಿಷಯವನ್ನು ಸಂಪೂರ್ಣವಾಗಿ ಅನಾಯಾಸವಾಗಿ ತಿಳಿಯುತ್ತಾರೆ. ಸುಕೃತಕಡಿಮೆಯಾದವರು ತಮ್ಮ ಯೋಗ್ಯತಾನುಸಾರವಾಗಿ ತಿಳಿಯು ತ್ತಾರೆ. ಇವರಲ್ಲಿ ಚನ್ನಾಗಿ ತಿಳಿದವನೇ ಮಂತ್ರಾರ್ಥಪರಿಜ್ಞಾನದಲ್ಲಿ ಪ್ರಶಸ್ಯನಾಗುತ್ತಾನೆ. ಮಂತ್ರಾರ್ಥವೇ ವಿದ್ಯಾವಸ್ಥಾನ ಭಾವದಿಂದ ಸಕಲಕಡೆಯಲ್ಲಿಯೂ, ಲೋಕವ್ಯವಹಾರದಲ್ಲಿಯೂ ವ್ಯಾಪಿಸಿ ಶೋಭಿಸಿರುತ್ತದೆ. ಇದರ ವ್ಯಾಪಕತ್ವವನ್ನು ಬಹು ಶ್ರುತನಾಗದಿದ್ದರೆ ತಿಳಿಯಲು ಅಸಮರ್ಥನಾಗುತ್ತಾನೆ. ಈ ವಿಷಯವೆಲ್ಲಾ ಹಿಂದೆ ಹೇಳಿದ್ದರೂ ಇಲ್ಲಿ ಪ್ರಸಂಗ ಸಂಗತಿಯಿಂದ ಪುನಃ ಹೇಳಿದೆ.

ಮನುಷ್ಯಾ ವಾ ಋಷಿಷೂತ್ಕ್ರಾಮತ್ಸು ದೇವಾನಬ್ರುವನ್ಕೋ ನ ಋಷಿರ್ಭವಿಷ್ಯಂತೀತಿ ? ತೇಭ್ಯ ಏತಂ ತರ್ಕಮೃಷಿಂ ಪ್ರಾಯಚ್ಛನ್ ಮಂತ್ರಾರ್ಥಚಿಂತಾಭ್ಯೂಹಮಭ್ಯೂಢಂ ತಸ್ಮಾದ್ಯದೇವ ಕಿಂ ಚಾನೂಚಾನೋಽಭ್ಯೂಹತ್ಯಾರ್ಷಂ ತದ್ಭವತಿ ॥

ಪೂರ್ವ ಋಷಿಗಳೆಲ್ಲಾ ಕಾಲಧರ್ಮವನನ್ನುಸರಿಸಿದಮೇಲೆ ಮನುಷ್ಯರು ದೇವತೆಗಳನ್ನು ಕುರಿತು—ನಮಗೆ ಮಂತ್ರಾರ್ಥವನ್ನು ತಿಳಿಸುವ ಋಷಿಗಳು ಯಾರು ? ಎಂದು ಕೇಳಿದರು. ಋಷಿಗಳೆಂದರೆ ಸಾಕ್ಷಾತ್ಕೃತವಾದ ಧರ್ಮವುಳ್ಳವರು (ನಿ-೧-೬-೫.) ಎಂದು ಹಿಂದೆ ಹೇಳಿದೆ. ಮನುಷ್ಯರು ಆ ಧರ್ಮವನ್ನು ಹೊಂದದಿರುವುದರಿಂದ ಮಂತ್ರಾರ್ಥವನ್ನು ತಿಳಿಯಲು ಅಸಮರ್ಥ ರಾದರು. ಅವರಿಗೆ ಉಪದೇಶಿಸಲು ಋಷಿಗಳಿಲ್ಲ. ಆದುದರಿಂದ ಶಾಸ್ತ್ರಾವತಾರಸ್ತುತಿಯನ್ನು ತಿಳಿಸಲು ಹೀಗೆ ವರ್ಣಿಸಿದೆ. ಆ ಮನುಷ್ಯರಿಗೋಸ್ಕರ ದೇವತೆಗಳು ನಿರುಕ್ತಶಾಸ್ತ್ರವನ್ನೇ ಋಷಿಯಸ್ಥಾನದಲ್ಲಿ ಒದಗಿಸಿಕೊಟ್ಟರು. ಇದೇ ಮಂತ್ರಾರ್ಥಚಿಂತಾ ಭ್ಯೂಹಲಕ್ಷಣವಾದ ನಿಗಮವು. ಯಾಸ್ಕರೇ ಆಗಲೀ ಶಾಕಪೂಣಿ ಮುಂತಾದ ಇತರ ಆಚಾರ್ಯರಾಗಲಿ ತಪಸ್ಸಿನಿಂದ ಮಂತ್ರಾರ್ಥ

ದೇವತಾಸತತ್ವವನ್ನು ತಿಳಿದವರಾದದುರಿಂದ ಗಹನವಾದ ಮಂತ್ರಾರ್ಥವನ್ನು ನಿರುಕ್ತಶಾಸ್ತ್ರದಿಂದ ವಿವರಿಸಿರುತ್ತಾರೆ. ಆದುದರಿಂದ ನಿಖಿಲವೇದಾರ್ಥವನ್ನು ನೀವು ಮನುಷ್ಯರು ಆ ನಿರುಕ್ತಶಾಸ್ತ್ರದಿಂದ ತಿಳಿಯಲು ಶಕ್ತರಾಗುವಿರೆಂದು ದೇವತೆಗಳು ಅವರಿಗೆ ಅದನ್ನು ಕರುಣಿಸಿರುತ್ತಾರೆ. ಈ ಕಾರಣದಿಂವ ಗುರೂಪದೇಶವನ್ನು ಹೊಂದಿ ಸಂಪ್ರದಾಯವನ್ನನುಸರಿಸಿ ಬಂದಿರುವವರು ನಿರುಕ್ತಶಾಸ್ತ್ರಾಧ್ಯಯನದಿಂದ ಮಂತ್ರಾರ್ಥವನ್ನು ಊಹಿಸಲು ಸಮರ್ಥರಾಗುತ್ತಾರೆ. ಅನೂಚಾನಪದ್ಧತಿಯನ್ನನುಸರಿಸುವುದರಿಂದ ಅವನ್ನು ತರ್ಕಿಸಿರುವುದು ಋಷಿಸಂಮತವೇ ಆಗಿರುತ್ತದೆ. ಯಾಸ್ಕರು ಕೆಲವೆಡೆಗಳಲ್ಲಿ ವಿವರಿಸದಿದ್ದಲ್ಲಿ ಆಗ ಸಂಪ್ರದಾಯದಿಂದ ಬಂದಿರುವ ಮಾರ್ಗವನ್ನನುಸರಿಸಿದವನು ಗುರೂಪದೇಶದಿಂದಲೂ, ಕರ್ಮಾನುಷ್ಠಾನದಿಂದಲೂ ಚಿತ್ತಶುದ್ಧಿಯನ್ನು ಪಡೆದುದರಿಂದ ತಾನಾಗಿ ವಿಚಾರಿಸಿ ಬಂದು ನಿರ್ಣಯಕ್ಕೆ ಬಂದರೆ ಆಗ ಅದು ತಪ್ಪಾಗುವುದಿಲ್ಲ. ಯಾವುದೂ ಇಲ್ಲದವನು ಲೌಕಿಕರೀತಿಯಿಂದ ಮಂತ್ರಾರ್ಥವನ್ನು ನಿರ್ಣಯಿಸಲು ಹೋದರೆ ಅದು ತಪ್ಪಾಗುತ್ತದೆ. ಆರ್ಷಮಾರ್ಗವಾಗುವುದಿಲ್ಲ.

ಈರೀತಿ ಶ್ರೀಮದ್ಯಾಸ್ಕಮುನಿಪ್ರಣೀತ ನಿರುಕ್ತಶಾಸ್ತ್ರದ ದೈವತಾಕಾಂಡದ ಹದಿನೆರಡನೆಯ ಅಧ್ಯಾಯದಲ್ಲಿ

ಹನ್ನೆರಡನೆಯ ಖಂಡವು ಸಮಾಪ್ತವಾಗಿದೆ,

---

## ಅಥ ತ್ರಯೋದಶ ಖಂಡಃ

### ಹದಿಮೂರನೆಯ ಖಂಡವು

ಹೃದಾ ತಷ್ಟೇಷು ಮನಸೋ ಜವೇಷು ಯದ್ಬ್ರಾಹ್ಮಣಾಃ ಸಂಯಜಂತೇ ಸಖಾಯಃ। ಅತ್ರಾಹ ತ್ವಂ ವಿಜಹುರ್ವೇದ್ಯಾಭಿರೋಹ ಬ್ರಹ್ಮಾಣೋ ವಿ ಚರಂತ್ಯು ತ್ವೇ (ಋ. ಸಂ. ೧೦-೭೧-೮)॥ ಹೃದಾತಷ್ಟೇಷು ಮನಸಾಂ ಪ್ರಜವೇಷು ಯದ್ಬ್ರಾಹ್ಮಣಾಃ ಸಂಯಜಂತೇ ಸಮಾನಖ್ಯಾನಾ ಋತ್ವಿಜೋಽತ್ರಾಹ ತ್ವಂ ವಿಜಹುರ್ವೇದಾಭಿರ್ವೇದಿತ-ವ್ಯಾಭಿಃ ಪ್ರವೃತ್ತಿಭಿರೋಹಬ್ರಹ್ಮಾಣ ಊಹ ಏಷಾಂ ಬ್ರಹ್ಮೇತಿ ವಾ ಸೇಯಂ ವಿದ್ಯಾ ಶ್ರುತಿಮತಿ ಬುದ್ಧಿಸ್ತಸ್ಯಾಸ್ತಪಸಾ ಪಾರಮೀಪ್ಸಿತವ್ಯಂ ತದಿದಮಾಯುಚ್ಛಿತಾ ನ ನಿರ್ವಕ್ತವ್ಯಂ ತಸ್ಮಾಚ್ಛಂದಃಸು ಶೇಷಾ ಉಪೇಕ್ಷಿತವ್ಯಾ ಅಥಾಗಮೋ ಯಾಂ ಯಾಂ ದೇವತಾಂ ನಿರಾಹ ತಸ್ಯಾಸ್ತಸ್ಯಾಸ್ತಾದ್ಭಾವ್ಯ ಮನುಭವತ್ಯನುಭವತಿ ॥ ೧೩ ॥

ಹೃದಾ ತಷ್ಟೇಷು ಮನಸೋ ಜವೇಷು ಯದ್ಬ್ರಾಹ್ಮಣಾಃ ಸಂ-
ಯಜಂತೇ ಸಖಾಯಃ । ಅತ್ರಾಹ ತ್ವಂ ವಿಜಹುರ್ವೇದ್ಯಾಭಿರೋಹ
ಬ್ರಹ್ಮಾಣೋ ವಿಚರತ್ಯುತ್ವೇ ॥

(ಋ-ಸಂ-೮-೨-೨೪)

ಪೂರ್ವೋಕ್ತವಿಷಯವು ಸ್ವಕಪೋಲಕಲ್ಪಿತವಾದುದಲ್ಲ. ಮಂತ್ರಾರ್ಥವೂ ಇದನ್ನು ಪುಷ್ಟೀಕರಿಸುತ್ತದೆಂದು ತಿಳಿಸಲು ಆ ಮಂತ್ರವನ್ನು ಉದಾಹರಿಸುತ್ತಾರೆ. ಇದು ಬೃಹಸ್ಪತಿಯಿಂದ ದೃಷ್ಟವಾದುದು. ಅಥವಾ ಬ್ರಹ್ಮನು ತಾನಾಗಿ ಹೇಳುತ್ತಾನೆಂದು ತಿಳಿಯಬೇಕು. ಈ ಮಂತ್ರದ ಸೂಕ್ತದಿಂದ ಋಷಿಯು ಪರಮಪುರುಷಾರ್ಥಸಾಧನವಾದ ಪರಬ್ರಹ್ಮಜ್ಞಾನವನ್ನು ಸ್ತುತಿಸಿರುತ್ತಾನೆ. ಬ್ರಾಹ್ಮಣರೆಂದರೆ ಇಲ್ಲಿ ತತ್ವ ಯಾವುದು ? ಅತತ್ವಯಾವುದು ? ಎಂದು ಪ್ರವಚನಾದಿಗಳಿಂದ ವಿಚಾರಿಸಿ ತಿಳಿದ ಮಂತ್ರಾರ್ಥಜ್ಞಾನವುಳ್ಳವರು. ಪ್ರಯೋಗದಲ್ಲಿ ಅಭಿಯುಕ್ತರಾದುದರಿಂದ ವಿದ್ವಾಂಸರಾದ ಇವರು ಬುದ್ಧಿಯಿಂದ ಸೂಕ್ಷ್ಮತೆಯನ್ನು ಪಡೆದಿರುವ ಮನಸ್ಸಿಗೂ ಅಗೋಚರವಾದ ಅಚಿಂತ್ಯವಾದ ಅಧ್ಯಾತ್ಮಾದಿತತ್ವಗಳನ್ನು ತಿಳಿದವರಾಗಿ ಪರಸ್ಪರವಾಗಿ ಪೂಜಿಸುತ್ತಾರೆ. ಪರಸ್ಪರ ಸಂಗತರಾಗಿ ವಿಚಾರಿಸಿ ತಿಳಿದು ಗೌರವಿಸುತ್ತಾರೆ. ಈ ರೀತಿಯಾದ ಬ್ರಾಹ್ಮಣ ಸಂಘನಲ್ಲಿ ಅಥವಾ ಮಂತ್ರಾರ್ಥವಾಖ್ಯಾನದಲ್ಲಿ ತಿಳಿಯದವರು ಯಾರು ಇರುವರೋ ಅಂದರೆ ಅವಿದ್ವಾಂಸರೋ ಅವರು ಈ ವಿದ್ಯೆಯಿಂದ ವಂಚಿತರಾಗುತ್ತಾರೆ. ಅವರನ್ನು ಎಲ್ಲರೂ ಬಿಡುತ್ತಾರೆ. ಯಾರು ಈ ನಿರುಕ್ತಶಾಸ್ತ್ರವನ್ನು ತಿಳಿಯುತ್ತಾರೋ ಅವರೇ ವಿದ್ವಾಂಸರು ಅವರೇ ಸರಿಯಾದ ವೇದಾರ್ಥವನ್ನು ತಿಳಿದವರೆಂದು ತಿಳಿಯಬೇಕು.

ಹೃದಾ ತಷ್ಟೇಷು ಮನಸಾಂ ಪ್ರಜವೇಷು ಯದ್ಬ್ರಾಹ್ಮಣಾಃ ಸಂ
ಯಜಂತೇ ಸಮಾನಖ್ಯಾನಾ ಋತ್ವಿಜೋಽತ್ರಾಹತ್ವಂ ವಿಜ-
ಹುರ್ವೇದ್ಯಾಭಿರ್ವೇದಿತವ್ಯಾಭಿಃ ಪ್ರವೃತ್ತಿಭಿ-ರೋಹಬ್ರಹ್ಮಾಣ
ಊಹಬ್ರಹ್ಮಾಣ, ಊಹ ಏಷಾಂ ಬ್ರಹ್ಮೇತಿ ವಾ॥

ಮಂತ್ರಾರ್ಥವನ್ನು ವಿವರಿಸುತ್ತಾರೆ. ಬೃಹದ್ದೇವತಾಕಾಂಡದಲ್ಲಿ ಈ ಸೂಕ್ತವನ್ನು ಪಕ್ರಮಿಸಿ ಹೀಗೆ ಹೇಳಿರುತ್ತಾರೆ. ಯಜ್ಜ್ಯೋತಿಃ ಪರಮಂ ಬ್ರಹ್ಮ ಯದ್ಯೋಗಾತ್ ಸಮುಪಾಶ್ನುತೇ । ತತ್‌ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ ॥ ಎಂದು ಇದು ಬ್ರಹ್ಮಜ್ಞಾನಸ್ತುತಿಪ್ರತಿಪಾದಕವೆಂದು ವಿವರಿಸಿರುತ್ತಾರೆ. ಈ ನಿರುಕ್ತಶಾಸ್ತ್ರಕ್ಕೆ ಊಹಬ್ರಹ್ಮವೆಂದು ಹೆಸರು. ಉಹ್ಯತೇ ಅತ್ರ ಬ್ರಹ್ಮ ವೇದಾರ್ಥಃ ಇತಿ ಊಹಬ್ರಹ್ಮಃ ವೇದಾರ್ಥ ವಿಮರ್ಶಾತ್ಮಕವಾದ ಗ್ರಂಥವೆಂದರ್ಥ. ಓಹಂ, ಊಹಂ ಎಂಬುದು ಪರ್ಯಾಯಪದಗಳು. ಇವುಗಳಿಗೆ ಭಿನ್ನಾರ್ಥವಿರುವುದಿಲ್ಲ. ಓಹವೆಂಬಲ್ಲಿ ಅರ್ದನಾರ್ಥಕವಾದ ಉಹಿ (ರ್) ಧಾತುವಿಗೆ ಕರ್ಮಣಿಯಲ್ಲಿ ಘೇಞಪ್ರತ್ಯಯ ಬಂದಿದೆ. ಊಹವೆಂಬಲ್ಲಿ ಊಹ–ವಿತರ್ಕೇ, ಧಾತು. ಹಿಂದಿನಂತೆ ಘೇಞಪ್ರತ್ಯಯ. ಬ್ರಹ್ಮ ಪದಕ್ಕೆ ವೇದಾರ್ಥವೆಂದೇ ಆಚಾರ್ಯರ ಸಿದ್ಧಾಂತ. ಆದುದರಿಂದ ಊಹಃ ಏಷಾಂ ಇತಿ ಎಂದು ಪುಲ್ಲಿಂಗದಿಂದಲೇ ವಿಗ್ರಹವನ್ನು ತೋರಿಸಿರುತ್ತಾರೆ. ವೇದಾರ್ಥಕುಶಲರಾದ ಇವರು ಎಲ್ಲೆಡೆಗಳಲ್ಲಿಯೂ ಪೂಜಿತರಾಗಿ ತಿರುಗುತ್ತಾರೆ. ಅಥವಾ ವೇದಾರ್ಥ ನಿಶ್ಚಯಕ್ಕೋಸ್ಕರ ಅವರು ಇಚ್ಛೆಬಂದಂತೆ ಸಂಚರಿಸಿ, ವಿಚಾರಿಸಿ ತತ್ವವನ್ನು ನಿರ್ಧರಿಸುತ್ತಾರೆ ಎಂದರ್ಥ. ಹೀಗೆ ಈ

ಮಂತ್ರವು ಪ್ರಕೃತಾರ್ಥವನ್ನು ದೃಢೀಕರಿಸುತ್ತಾ ಮಂತ್ರಾರ್ಥಚಿಂತಾಭ್ಯೂಹಶಾಸ್ತ್ರವಾದ ಈ ನಿರುಕ್ತಕ್ಕೆ ಬ್ರಹ್ಮತ್ವವನ್ನು ಪ್ರತಿಪಾದಿಸುತ್ತದೆ. ಆದುದರಿಂದ ಈ ನಿರುಕ್ತಶಾಸ್ತ್ರವನ್ನು ಬ್ರಹ್ಮವೆಂದೇ ತಿಳಿಯುತ್ತಾರೆ.

## ಸೇಯಂ ವಿದ್ಯಾ ಶ್ರುತಿ ಮತಿ ಬುದ್ಧಿಃ ||

ಗ್ರಂಥದ ಉಪಸಂಹಾರವನ್ನು ತಿಳಿಸುತ್ತಾರೆ. ಈ ನಿರುಕ್ತ ಶಾಸ್ತ್ರ ವಿಜ್ಞಾನದಿಂದ ಉಂಟಾಗಿರುವ ವೇದಾರ್ಥ ವಿಜ್ಞಾನಲಕ್ಷಣವಾದ ವಿದ್ಯೆಗೆ ಶ್ರುತಿಮತಿ ಬುದ್ಧಿಯೆಂದು ಕರೆಯುತ್ತಾರೆ. ದುರ್ಗಾಚಾರ್ಯರು ಶ್ರುತ್ಯರ್ಥಜ್ಞಾನಕ್ಕೋಸ್ಕರ ಈ ನಿರುಕ್ತ ಶಾಸ್ತ್ರವೊಂದೇ ವಿದ್ಯೆಯೆಂದೂ, ಎಲ್ಲಾ ವಿದ್ಯೆಗಳಿಗಿಂತಲೂ ಪ್ರಶಸ್ತವಾದುದೆಂದೂ, ಇದೇ ಬುದ್ಧಿವಿಕಾಸಕ್ಕೆ ಕಾರಣವಾದುದೆಂದೂ ವ್ಯಾಖ್ಯಾನ ಮಾಡುತ್ತಾರೆ.

## ತಸ್ಯಾಸ್ತಪಸಾ ಪಾರಮೀಪ್ಸಿತವ್ಯಂ ||

ಪಾದವಾಕ್ಯ ಪ್ರಮಾಣವನ್ನು ತಿಳಿದ ಬ್ರಾಹ್ಮಣನು ಈ ವಿದ್ಯೆಯ ಪಾರವನ್ನು ಹೊಂದಬೇಕಾದರೆ ಅತಿಶಯವಾದ ತಪಸ್ಸನ್ನು ಹೊಂದಿರಬೇಕು. ಪಾರಂ ಎಂಬಲ್ಲಿ ಗಂತುಂ—ಹೊಂದಲು ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ವಿಧಿ, ನಿಷೇಧ, ಪ್ರತಿಪ್ರಸವ, ನಿಯಮ, ಪರಿಸಂಖ್ಯಾಪುನರ್ವಚನ, ಪರಾರ್ಥವಾದಾದಿಗಳಿಂದ ವೇದವು ಅತಿ ಗಹನವಾದುದರಿಂದ ಅದನ್ನು ತಪಸಿಲ್ಲದೆ ಕರ್ಮಾನುಷ್ಠಾನವಿಲ್ಲದೆ, ಚಿತ್ತಶುದ್ಧಿಯಿಲ್ಲದೆ ಮಾನವನು ತನ್ನಬುದ್ಧಿಶಕ್ತಿಯಿಂದಲೇ ತಿಳಿಯುವುದು ಅಸಾಧ್ಯವು. ವೇದದಲ್ಲಿಅರ್ಥವಾದ ಭಾಗಗಳೇ ಅಧಿಕವಾಗಿರುತ್ತವೆ. ಪ್ರಾಶಸ್ತ್ಯವನ್ನಾಗಲೀ ನಿಂದೆಯನ್ನಾಗಲೀ ತಿಳಿಸುವ ವಾಕ್ಯಸಮುದಾಯಕ್ಕೆ ಅರ್ಥವಾದವೆಂದು ಕರೆಯುತ್ತಾರೆ. ಲಕ್ಷಣೆಯಿಂದ ಪ್ರಯೋಜನವುಳ್ಳ ಅರ್ಥದಲ್ಲಿ ಪರ್ಯವಸಾನಹೊಂದುತ್ತದೆ. ಅದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯ ವಿಲ್ಲದಿರುವುದರಿಂದ ವಿಧಿನಿಷೇಧಗಳ ಪ್ರಾಶಸ್ತ್ಯ ಅಥವಾ ನಿಂದೆಯನ್ನು ವ್ಯಕ್ತಪಡಿಸುತ್ತದೆ. ವೇದಾಧ್ಯಯನ ಯಾವಾಗಲೂ ಪ್ರಯೋಜನ ವಿಶಿಷ್ಟವಾದುದರಿಂದ ಅರ್ಥವಾದಾತ್ಮಕ ವೇದಾಧ್ಯಯನಕ್ಕೆ ಪೂರ್ವೋಕ್ತರೀತಿಯಿಂದ ಸಾರ್ಥಕ್ಯ ಹೇಳಬೇಕು. ಅದರ ಯಥಾಶ್ರುತವಾದ ಅರ್ಥವನ್ನಂಗೀಕರಿಸಿದರೆ ಪ್ರಯೋಜನವಿಲ್ಲ. ಯಥಾಶ್ರುತಾರ್ಥಪ್ರಮಾಣಗ್ರಾಹಿಗಳಾದ ಅರ್ಥವಾದಗಳು ವಿದ್ವಾಂಸನಿಗೂ ಅಧಿಕಭ್ರಾಂತಿ ಕಾರಣವಾಗಿರುತ್ತವೆ. ಆದುದರಿಂದ ವೇದವಾಕ್ಯಗಳನ್ನು ತಿಳಿಯುವುದು ತುಂಬಾಕಷ್ಟಸಾಧ್ಯವಾಗಿರುತ್ತದೆ. ಇಂತಹ ನಿರುಕ್ತ ಶಾಸ್ತ್ರಾಧ್ಯಯನವಿಲ್ಲದೆ ತಿಳಿಯಲು ಸಾಧ್ಯವೇ ಇಲ್ಲ. ಅಖಿಲ ಪುರುಷಾರ್ಥೋಪಕಾರಕ್ಕಾಗಿ ಪ್ರವೃತ್ತವಾದ ಈ ನಿರುಕ್ತ ಶಾಸ್ತ್ರಜ್ಞಾನವಿಲ್ಲದೇ ತಪಸ್ಸಿನ ಪಾರವನ್ನು ಹೊಂದುವುದು ಅಸಾಧ್ಯವಾದುದರಿಂದ ವಿದ್ಯೆಯ ಪಾರಗಮನೋಪಾಯರೂಪವಾಗಿರುತ್ತದೆ.

## ಇದಿದ ಮಾಯುರಿಚ್ಛತಾ ನ ನಿರ್ವಕ್ತವ್ಯಮ್ ||

ಈ ನಿರುಕ್ತ ಶಾಸ್ತ್ರವನ್ನು ಆಯುಸ್ಸನ್ನು ಬಯಸುವವನು ಅಂದರೆ ತಪೋನುಷ್ಠಾನವಿಲ್ಲದವನು ಓದಬಾರದು. ತಿಳಿಯಲು ಪ್ರಯತ್ನಿಸಬಾರದು. ವೇದವನ್ನೋದಿದವನಾದರೂ ಆಚಾರ, ತಪೋನುಷ್ಠಾನವಿಲ್ಲದಿದ್ದರೆ ಅವನು ಕಲುಷಿತ ಮನಸ್ಕನಾಗಿರುತ್ತಾನೆ. ತಪೋನುಷ್ಠಾನದಿಂದಲೇ ಅಂತಃಕರಣ ಶುದ್ಧಿಯಾಗುತ್ತದೆ. ಮಲಿನಾಂತಃಕರಣವುಳ್ಳವನು ಈ ಶಾಸ್ತ್ರವನ್ನು ತಿಳಿದು ನಿರ್ವಚನಮಾಡಲು ಅಸಮರ್ಥನಾಗಿರುತ್ತಾನೆ. ಹಾಗೆ ಅವನು ಹಠದಿಂದ ಪ್ರವರ್ತಿಸಿದರೆ ಅವನ ಆಯುಸ್ಸು ಕಡಿಮೆಯಾಗುತ್ತದೆ. ದೀರ್ಘಾಯಸ್ಸು ತನಗೆಬೇಕೆಂದು ಬಯಸುವವನು ಮೊದಲು ತಪೋನುಷ್ಠಾನಾದಿಗಳಿಂದ ಅಂತಃಕರಣ ಶುದ್ಧಿಯನ್ನು ಹೊಂದಿ ಆಮೇಲೆ ನಿರ್ವಚನಕ್ಕೆ ಪ್ರಾರಂಭಿಸಬೇಕು.

## ತಸ್ಯಾಚ್ಛಂದಃ ಸು ಶೇಷಾ ಉಪೇಕ್ಷಿತವ್ಯಾಃ ॥

ಈ ನಿರುಕ್ತಶಾಸ್ತ್ರದಲ್ಲಿ ಹೇಳದಿರುವುದು ಅಥವಾ ನಿಗಮೋದಾರಣೆಗಳು ಆಕಾಂಕ್ಷಿತವಾಗಿದ್ದರೆ ನಿರಾಕಾಂಕ್ಷಪ್ರತಿಪತ್ತಿಗೋಸ್ಕರ ಛಂದಸ್ಸುಗಳಲ್ಲಿ ಅಂದರೆ ಶಾಖಾಂತರಗಳಲ್ಲಿ ಹೇಳಿರುವುದನ್ನು ಚೆನ್ನಾಗಿ ವಿಚಾರಿಸಿ ತಿಳಿಯಬೇಕು. ಅಲ್ಲಿ ಹೇಳಿರುವ ವಾಕ್ಯ ಶೇಷದ ಪಾದಗಳನ್ನೂ ಅರ್ಧರ್ಚಾದಿಗನ್ನು ಉಪೇಕ್ಷಿಸಬೇಕು. ಅಂದರೆ ಅದನ್ನು ಸಮೀಪಿಸಿ ಚನ್ನಾಗಿ ತಿಳಿದು ವೇದಗಳನ್ನೂ ವೇದಾರ್ಥಗಳನ್ನು ನಿರ್ಣಯಿಸಿ ತಿಳಿದುಕೊಳ್ಳಬೇಕು. ಉಪ—ಉಪಗಮ್ಯ,—ತವ್ಯಾಃ—ಆಲೋಚಿತವ್ಯಾಃ ।

## ಅಥಾಗಮೋ ಯಾಂ ಯಾಂ ದೇವತಾಂ ನಿರಾಹ ತಸ್ಯಾಸ್ತಸ್ಯಾಸ್ತಾ-
## ದ್ಭಾವ್ಯ ಮನುಭವತ್ಯನುಭವತಿ ॥ ೧೩ ॥

ನಿರುಕ್ತಶಾಸ್ತ್ರದ ಅಧ್ಯಯನಜ್ಞಾನದಿಂದ ಪ್ರಯೋಜನ ತೋರಿಸುತ್ತಾರೆ. ಈ ತಪಸ್ವಿಯಾದ ನೈರುಕ್ತಾಗಮವನ್ನು ಗುರುಮುಖ ದಿಂದಲೇ ಪಡೆಯಬೇಕು. ಶ್ರದ್ಧೋಪಾಸನಾದಿಗಳಿಂದ ಸಂಪಾದಿಸಿದ ಈ ಸಕಲನಿಗಮವ್ಯೂಹವು ಪ್ರತ್ಯೇಕವಾಗಿ ಆಯಾಮಂತ್ರ ಪ್ರತಿಪಾದ್ಯವಾಗಿ ಯಾವ ಯಾವ ದೇವತೆಯನ್ನು ಯಾವರೀತಿ ವಿವರಿಸಿದೆಯೋ ಅದನ್ನು ಹಾಗೆಯೇ ಭಾವಿಸುವುದರಿಂದ ಆಯಾ ಆ ದೇವತಾಸಾಯುಜ್ಯವನ್ನು ಶರೀರತ್ಯಾಗವಾದೊಡನೆ ಹೊಂದುತ್ತಾರೆ. ಯೋ ಯೋ ಯಾಂ ಯಾಂ ತನುಂ ಭಕ್ತ್ಯಾ ಶ್ರದ್ಧಯಾರ್ಚಿತು ಮಿಚ್ಛತಿ" ಎಂದು ಈ ವಿಷಯವನ್ನು ಗೀತೆಯಲ್ಲಿಯೂ ವಿವರಿಸಿರುತ್ತಾರೆ. ಗ್ರಂಥಸಮಾಪ್ತಿಯನ್ನು ತಿಳಿಸಲು ಅನುಭವತಿಯೆಂಬ ಕ್ರಿಯಾಪದದ ದ್ವಿರುಕ್ತಿಯನ್ನು ಹೇಳಿರುತ್ತಾರೆ.

**ಅಥೇಮಾಯುದ್ ದ್ಯಾವೋಯದುದಂಚೋ ವಿ ಹಿ ಸೋತೋಃ ಸೃಣ್ಯೇವತರತ್ಸ ಚತ್ವಾರಿ ಶೃಂಗಾ ಸ್ವರ್ಯಂತಶ್ಚತ್ವೋರಿವಾಗೃಚೋ ಅಕ್ಷರ ಆದಿತ್ಯ ಇತ್ಯಕ್ಷರಂ ನ ಕ್ಷರತಿ ಹೃದಾ ತಷ್ಟೇಷು ತ್ರಯೋದಶ**

## ಇತಿ ನಿರುಕ್ತೇ ಉತ್ತರಷಟ್ಕೇ ಸಪ್ತಮೋಽಧ್ಯಾಯಃ

## ತ್ರಯೋದಶಾಧ್ಯಾಯಃ ಸಂಪೂರ್ಣಃ

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿ

ಹದಿಮೂರನೆಯ ಖಂಡವು ಸಮಾಪ್ತವಾಗಿದೆ.

# ನಿರುಕ್ತಂ

## ಅಥ ಚತುರ್ದಶೋಽಧ್ಯಾಯಃ ಪ್ರಥಮಪಾದಃ

ಸೂಚನೆ—ಈ ಅಧ್ಯಾಯದಲ್ಲಿ ಕೇವಲ ಅಧ್ಯಾತ್ಮ ವಿಚಾರಗಳನ್ನೊಳಗೊಂಡ ಮಂತ್ರಗಳು ಮಾತ್ರ ಇವೆ. ಆ ಮಂತ್ರಗಳು ಋಗ್ವೇದಕ್ಕೆ ಇತರ ಗ್ರಂಥಗಳಿಗೂ ಸೇರಿದವುಗಳು ಆದ್ದರಿಂದ ಅವುಗಳನ್ನು ಸಂಹಿತೆಯಲ್ಲಿ ನೋಡಿ ತಿಳಿದುಕೊಳ್ಳಬಹುದು.

### ಅಥ ಪ್ರಥಮಃ ಖಂಡಃ

### ಒಂದನೆಯ ಖಂಡವು

ಓಂ ವ್ಯಾಖ್ಯಾತಂ ದೈವತಂ ಯಜ್ಞಾಂಗಂ ಚಾಥಾತ ಊರ್ಧ್ವಮಾರ್ಗಗತಿಂ ವ್ಯಾಖ್ಯಾಸ್ಯಾಮಃ ಸೂರ್ಯ ಆತ್ಮೇತ್ಯುದಿತಸ್ಯ ಹಿ ಕರ್ಮದ್ರಷ್ಟಾಥೈತದನುಪ್ರವದತ್ಯಥೈತಂ ಮಹಾಂತಮಾತ್ಮಾನಮೇಷಗ್ರ್ಗಣಃ ಪ್ರವದತೀಂದ್ರಂ ಮಿತ್ರಂ ವರುಣಮಗ್ನಿಮಾಹುರಿತ್ಯ-ಥೈಷ ಮಹಾನಾತ್ಮಾತ್ಮ ಜಿಜ್ಞಾಸಯಾತ್ಮಾನಂ ಪ್ರೋವಾಚಾಗ್ನಿರಸ್ಮಿ ಜನ್ಮನಾ ಜಾತವೇದಾ ಅಹಮಸ್ಮಿ ಪ್ರಥಮಜಾ ಇತ್ಯೇತಾಭ್ಯಾಂ ॥ ೧ ॥

ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗುರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥ ೪೬ ॥

ಯಜ್ಞಾಗ್ನಿಯಿಂದ ಸುಡಲ್ಪಟ್ಟ ಒಣಗಿದ ಬೆರಣಿಯಿಂದ ಉತ್ಪನ್ನವಾದ ಧೂಮವನ್ನು ಸಮೀಪದಲ್ಲಿಯೇ ನೋಡಿದ್ದೇನೆ. ವ್ಯಾಪಿಸಿರುವುದೂ, ಸಮೀಪದಲ್ಲಿರುವುದೂ ಆದ ಈ ಧೂಮದಿಂದ ಈ ಧೂಮಕ್ಕೆ ಕಾರಣವಾದ ಅಗ್ನಿಯನ್ನೂ ನೋಡಿದ್ದೇನೆ. ಫಲವನ್ನು ಸುರಿಸತಕ್ಕದ್ದೂ, ಶುಕ್ಲರೂಪವುಳ್ಳದ್ದೂ ಆದ ಸೋಮನನ್ನು ಋತ್ವಿಕ್ಕುಗಳು ಸಂಪಾದಿಸಿದ್ದಾರೆ. ಅದಕ್ಕೆ ಸಾಧನಗಳಾದ ಅನುಷ್ಠಾನಾದಿಗಳು ಅತಿಶಯವಾಗಿ ಸಂಪಾದಿತವಾದವು.

ಅದಕ್ಕೆ ಋಕ್ಕಿಗೆ ಮೇಲೆ ಭಾವಾರ್ಥದಲ್ಲಿ ಹೇಳಿರುವುದಲ್ಲದೆ ಇನ್ನೊಂದರ್ಥವನ್ನೂ ಹೇಳಬಹುದೆಂದು ಸಾಯಣರು ತಿಳಿಸಿದ್ದಾರೆ.

ಸೋಮ ಉತಾಕ್ಷಾಭವತ್ಪೂರ್ವಂ ತಂ ದೇವಾಃ ಶಕೃತಾಪಚನ್ ।
ಯಜ್ಞಾರ್ಥೇ ತತ್ಪ್ರವೋ ಧೂಮೋ ಮೇಘ ಆಸ್ಮೀತ್ ತದುಚ್ಯತೇ ।
ತತ್ಪರತ್ವೇನ ವಾ ಮಂತ್ರೋ ವ್ಯಾಖ್ಯೇಯೋಽಯಂ ವಿಚಕ್ಷಣೈಃ ।

ಫಲಗಳ ಸೇಕ್ತೃವಾದ ಸೋಮನನ್ನು ಪೂರ್ವದಲ್ಲಿ ದೇವತೆಗಳು ಶಕೃತ್ತಿನಿಂದ ಪಾಕಮಾಡಿದರು. ಯಜ್ಞಾರ್ಥವಾಗಿ ಉತ್ಪನ್ನವಾದ ಆ ಧೂಮವು ಮೇಘವಾಗಿ ಪರಿಣಮಿಸಿತು. ಆ ವಿಷಯವನ್ನು ಇಲ್ಲಿ ತಿಳಿಸಿದೆ. ಈ ಮಂತ್ರಕ್ಕೆ ಆ ಸಂದರ್ಭವನ್ನೂ ಸೂಚಿಸಿ ತಿಳಿದವರು ಅರ್ಥಮಾಡಬಹುದು, ಎಂದು ಹೇಳಿದೆ.

ಪ್ರಕೃತವಾದ ಋಕ್ಕಿನ ವಿವರಣೆಯು ಶಕಮಯಂ ಧೂಮಂ ಎಂಬುದರ ಅರ್ಥವನ್ನನುಸರಿಸುತ್ತದೆ. ಶಕ್ಛನ್ಮಯಂ ಶುಷ್ಕಗೋಮಯಸಂಭೂತಂ ಧೂಮಂ ಒಣಗಿದ ಬೆರಣಿಯಿಂದ ಉತ್ಪನ್ನವಾದ ಧೂಮವೆಂದು ಸಾಯಣರ ಅರ್ಥ. ಅವರು ಹೇಳಿರುವ ಕಥಾಸಂದರ್ಭವೂ ಸಹ ಇದೇ ಅರ್ಥವನ್ನು ಸೂಚಿಸುತ್ತದೆ. ಆದರೆ ಶಕಧೂಮ ಎಂಬ ಹೆಸರು ಇತರ ಕಡೆಗಳಲ್ಲಿ ಅಂಕಿತನಾಮವಾಗಿಯೂ ಅನ್ವರ್ಥನಾಮವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಪದದಿಂದ ಶ್ರುತ್ಯಂತರಗಳಲ್ಲಿ ನಿರ್ದಿಷ್ಟವಾಗಿರುವ ಬೇರೆ ಬೇರೆ ಅರ್ಥಗಳೇನೆಂಬುದನ್ನು ಪರಿಶೀಲಿಸಬೇಕಾಗಿದೆ.

Monier-Williams ಎಂಬ ಪಂಡಿತನು ತನ್ನ Sanskrit—English Dictionary ಯಲ್ಲಿ ಈ ಪದಕ್ಕೆ ಮೂರು ಅರ್ಥಗಳನ್ನು ಹೇಳಿ ಎಲ್ಲಾ ಅರ್ಥಗಳಿಗೂ ಆಧಾರಗಳನ್ನೂ ತೋರಿಸಿದ್ದಾನೆ.

೧) The smoke of burnt or burning cow-dung. ಗೋಮಯ (ಬೆರಣಿ) ದಿಂದ ಉತ್ಪನ್ನವಾದ ಧೂಮ. Atharva–Veda.

೨) Name of a Nakshatra ಒಂದುನಕ್ಷತ್ರ ಹೆಸರು. Atharva-Veda.

೩) A Priest who argues by means of-dung. ಗೋಮಯವನ್ನು ಸಾಕ್ಷಿಯಾಗಿಟ್ಟುಕೊಂಡು ವಾದಿಸುವ ಬ್ರಾಹ್ಮಣ.

(ಕೌಶಿಕಪರಿಭಾಷಾಸೂತ್ರ.)

ಬೃಹದ್ದೇವತೆಯಲ್ಲಿ ಪ್ರಕೃತವಾದ ಋಕ್ಕನ್ನು ನಿರ್ದೇಶಿಸಿ ಶಕಕ್ಕೆ ಮೇಘವೆಂದರ್ಥಮಾಡಿದೆ.

ಮೇಘೋ ಶಕಸ್ತಸ್ಯ ಧೂಮಃ ಸಲಿಲಂ ವಾಸ ಏವ ವಾ ।
ಸೋಮ ಉಕ್ಷಾ ಭವಂತಸ್ಯ ಪಾವಕಾಶ್ಚ ತ್ರಯೋಽಧಿಪಾಃ ॥

(ಬೃ. ದೇ. ೧–೪೧)

ಶಕವೆಂಬ ಪದವು ಮೇಘವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಉದಕವೇ ಅದರ ಧೂಮವು. ಅಥವಾ ಮೇಘದ ಆಚ್ಛಾದಕರೂಪವಾದ ವಸ್ತ್ರವಾಗಬಹುದು. ಸೋಮವು ವೃಷಭವು. [ಸೇಕ್ತೃವು] ಎಂದು ಶಕ, ಧೂಮ, ಸೋಮ ಎಂಬ ಪದಗಳ ಅರ್ಥಗಳನ್ನು ತಿಳಿಸಿದೆ. Mocdonell ಎಂಬ ಪಂಡಿತನು ಬೃಹದ್ದೇವತೆಯ ಈ ವಾಕ್ಯವನ್ನು ಪರಿವರ್ತಿಸುವಾಗ ತನ್ನ ಟಿಪ್ಪಣಿಯನ್ನು ಮೇಘದೂತದ ವಾಕ್ಯವನ್ನು ಉದಹರಿಸಿ,

" ಧೂಮಜ್ಯೋತಿಸ್ಸಲಿಲಮರುತಾಂ ಸನ್ನಿಪಾತಃ ಕ್ವ ಮೇಘಃ .... .... .... .... " ||

(ಮೇಘದೂತ. ೫)

ಎಂಬ ವರ್ಣನೆಯಲ್ಲಿಯೂ ಸಹ ಶಕಧೂಮದಿಂದ ಸೂಚಿತವಾಗಿರುವ ಭಾವವು ಅಭಿವ್ಯಕ್ತವಾಗಿದೆಯೆಂದು ತಿಳಿಸಿದ್ದಾನೆ. ಆದರೆ ಬೃಹದ್ದೇವತೆಯಲ್ಲಿ ಧೂಮನೇ ಸಲಿಲವೆಂದು ಹೇಳಿದೆ. ಅಥರ್ವವೇದದಲ್ಲಿ ಶಕಧೂಮನು ನಕ್ಷತ್ರ ರಾಜನೆಂದು ವರ್ಣಿತನಾಗಿದ್ದಾನೆ.

ಯದ್ರಾಜಾನಂ ಶಕಧೂಮಂ ನಕ್ಷತ್ರಾಣ್ಯಕೃಣ್ವತ |
ಭದ್ರಾಹಮಸ್ಮೈ ಪ್ರಾಯಚ್ಛನ್ನಿತೋ ರಾಷ್ಟ್ರಮಜಾಯತ ||

ನಕ್ಷತ್ರಗಳೆಲ್ಲವೂ ಶಕಧೂಮನನ್ನು ತಮ್ಮ ರಾಜನನ್ನಾಗಿ ಮಾಡಿ ಅವನಿಗೆ ಮಂಗಳಾತ್ಮಕವಾದ ಅಹಸ್ಸನ್ನುಂಟುಮಾಡಿ " ಇದು ನಿನ್ನ ಸಾರ್ವಭೌಮತ್ವವು " ಎಂದು ಹೇಳಿದವು.

ಭದ್ರಾಹಮಸ್ತು ನಃ ಸಾಯಂ ಭದ್ರಾಹಂ ಪ್ರಾತರಸ್ತು ನಃ |
ಭದ್ರಾಹಮಸ್ಮಭ್ಯಂ ತ್ವಂ ಶಕಧೂಮ ಸದಾ ಕೃಣು ||

ನಮಗೂ ಸಹ ಮಧ್ಯಾಹ್ನಕಾಲದಲ್ಲೂ, ಸಾಯಂಕಾಲದಲ್ಲೂ, ಪ್ರಾತಃಕಾಲದಲ್ಲೂ ನಮ್ಮ ಅಹಸ್ಸು ಮಂಗಳಾತ್ಮಕವಾದ ವಾತಾವರಣದೊಂದಿರುವಂತೆ ಮಾಡು.

ಯೋ ನೋ ಭದ್ರಾಹಮಕರಸ್ಸಾಯಂಪ್ರಾತರಥೋ ದಿವಾ |
ತಸ್ಮೈ ತೇ ನಕ್ಷತ್ರರಾಜ ಶಕಧೂಮ ಸದಾ ನಮಃ ||

(ಅಥರ್ವವೇದ. ೬-೧೨೮-೧ ರಿಂದ ೩)

ಸಾಯಂಕಾಲದಲ್ಲೂ, ಪ್ರಾತಃಕಾಲದಲ್ಲೂ, ಮಧ್ಯಾಹ್ನಕಾಲದಲ್ಲೂ ನಮಗೆಲ್ಲಾ ಮಂಗಳವನ್ನುಂಟುಮಾಡತಕ್ಕವನೂ, ನಕ್ಷತ್ರ ರಾಜನೂ ಆದ ಶಕಧೂಮನೆ, ನಿನಗೆ ಸರ್ವದಾ ನಮಸ್ಕರಿಸುವೆವು.
[ಇಲ್ಲಿ ಉದಾಹೃತವಾಗಿರುವ ವಾಕ್ಯಗಳಲ್ಲಿ ಪಾಠಾಂತರಗಳೂ ಇವೆ.]

ಅಥರ್ವವೇದದ ಈ ವಾಕ್ಯಗಳಲ್ಲಿ ನಿರ್ದಿಷ್ಟವಾಗಿರುವ ಶಕಧೂಮನ ವಿಷಯವನ್ನು ವಿಮರ್ಶಿಸುವಾಗ Bloomfield ಎಂಬ ಪಂಡಿತನು ಇತರ ಕೆಲವು ಪಾಶ್ಚಾತ್ಯಪಂಡಿತರ ಅಭಿಪ್ರಾಯಗಳನ್ನೂ ಚರ್ಚಿಸಿ ತನ್ನ ವಿವರಣೆಯನ್ನು ಕೊಟ್ಟಿರುತ್ತಾನೆ. ಅವುಗಳಲ್ಲಿ Weber ಎಂಬುವನ ಅಭಿಪ್ರಾಯವನ್ನು ತಿಳಿಸುತ್ತಾ,

"Weber, recognising ಶಕಧೂಮ, as the word on which the interpretation depends, takes it has equivalent to the ಶಕಮಯಧೂಮ of R. V. I-164-43, 'the smoke that rises from burning cow-dung' a well-known fuel and surmises that it may bc the first morning fire, kindled while the stars are still shining, and indicating by its rising or falling smoke the weather of the breaking day."

(American journal of of Philology. Vol. VII. P. 486)

ವೀಬರ್ ಎಂಬ ಪಂಡಿತನ ಮತದಂತೆ, ಅಥರ್ವವೇದೋಕ್ತವಾಗಿರುವ **ಶಕಧೂಮವೂ** ಋಕ್ಸಂಹಿತೆಯಲ್ಲಿ ಹೇಳಿರುವ **ಶಕಮಯಧೂಮವೂ** ಒಂದೇ ಅರ್ಥವುಳ್ಳ ಪದಗಳು. ಪ್ರಾತಃಕಾಲದಲ್ಲಿ ಇನ್ನೂ ನಕ್ಷತ್ರಗಳು ಪ್ರಕಾಶಿಸುತ್ತಿರುವಾಗಲೇ ಬೆರಣಿಯಿಂದ ಉತ್ಪನ್ನವಾದ ಹೊಗೆಯು ಅಂತರಿಕ್ಷಕ್ಕೆ ಹತ್ತುವುದನ್ನು ಇಲ್ಲಿ ವರ್ಣಿಸಿದೆ. ಈ ಧೂಮವು ಮೇಲಕ್ಕೆ ಹೋಗುವ ಕ್ರಮದಿಂದ ಆಯಾ ದಿನದ ಸ್ವರೂಪವು ತಿಳಿಯುತ್ತದೆ. ಆದುದರಿಂದ **ಶಕಧೂಮವು** ಪ್ರತಿದಿನದ ಹಣವನ್ನು ತಿಳಿಸುವ ಸಾಧನವು. ಮೇಲೆ ಉದಾಹೃತವಾಗಿರುವ ಅಥರ್ವವೇದ ೬-೧೨೮-೩ನೇ ಮಂತ್ರದ ಅರ್ಥವನ್ನು ವಿವರಿಸುತ್ತಾ ಅಥರ್ವವೇದವನ್ನು ಆಂಗ್ಲಭಾಷೆಗೆ ಪರಿವರ್ತಿಸಿರುವ Whitney ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾನೆ.

One may conjecture that it is the Milkly-way, which is not unlike a thin line of smoke drawd across the sky, that is the real king of asterisms, and that its imitation by a column of the heavy smoke of burning is what was relied on to counteract any evil influences from the asterisms; or the behaviour of such smoke, as rising upward or honging low, may have been really a weather-sign.

(Harvard Oriental Series. Vol. 7. P. 378.)

ಗೋಮಯದಿಂದ ಉತ್ಪನ್ನವಾದ ಧೂಮವು ಯಾವ ಆಕಾರದಲ್ಲಿರುವುದೋ ಅದೇ ಆಕಾರವನ್ನು ಹೋಲುತ್ತಿರುವ ನಕ್ಷತ್ರಪುಂಜವು (Milky-way) ಇಲ್ಲಿ ಶಕಧೂಮವೆಂದು ನಿರ್ದಿಷ್ಟವಾಗಿದೆ. ನಕ್ಷತ್ರಗಳಿಂದ ಉಂಟಾಗತಕ್ಕ ದುಷ್ಪರಿಣಾಮಗಳು ಇದನ್ನು ಆರಾಧಿಸುವುದರಿಂದ ತಪ್ಪುತ್ತವೆ. ಆದುದರಿಂದಲೇ "ಭದ್ರಾಹಮಸ್ಮೈ ನಃ ಸಾಯಂ" ಎಂದು ಪ್ರಾರ್ಥಿತವಾಗಿದೆ. ಅಥವಾ Weber ಎಂಬುವನು ಹೇಳುವಂತೆಯೇ ಧೂಮದ ಆರೋಹಣಾವರೋಹಣಗಳು ಇಲ್ಲಿ ವರ್ಣಿತವಾಗಿರಬಹುದು. ಆಯಾ ದಿನದ ಹವದ ಸ್ವರೂಪವನ್ನು ಅಂತರಿಕ್ಷದಲ್ಲಿ ಊರ್ಧ್ವಮುಖವಾಗಿ ಪ್ರಸರಿಸುವ ಧೂಮರೇಖೆಯು ತನ್ನ ನೇರವಾದ ಆರೋಹಣದಿಂದಲೂ, ಹವಾಗುಣಕ್ಕನುಗುಣವಾದ ವಕ್ರವಾದ ಪ್ರಸರಣದಿಂದಲೂ ತಿಳಿಸುತ್ತದೆ. ಆ ಶಕಧೂಮವು ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿತವಾಗಿರುವುದೆಂದರ್ಥವು.

ಕೌಶಿಕಪರಿಭಾಷಾಸೂತ್ರದಲ್ಲಿ (VIII. 17) : **ಶಕಧೂಮವೆಂಬ** ಪದವನ್ನು ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಬ್ರಹ್ಮನಿಗೆ ಪರ್ಯಾಯಪದವಾಗಿ ಉಪಯೋಗಿಸಿದೆ.

" ಪ್ರಮುಂದೋ ಶೀರಶಲಲುಪಪಧಾನಶಕಕೆಧೂಮು ಜರಂತೇಃ .... .... .... "

ಎಂಬ ಈ ವಾಕ್ಯಕ್ಕೆ ದಾರಿಲನು ವ್ಯಾಖ್ಯಾನಮಾಡುತ್ತಾ ಶಕಧೂಮ (?) ಬ್ರಾಹ್ಮಣಃ .... .... .... .... ಏತಾನಿ ಜೀರ್ಣಾನಿ ಪ್ರತ್ಯೈತವ್ಯಾನಿ ಎಂದರ್ಥಮಾಡಿದ್ದಾನೆ. ಅಲ್ಲದೆ ಇದೇ ಕೌಶಿಕಸೂತ್ರದಲ್ಲಿ, ಶಕಧೂಮದ ಸ್ತುತಿಯಿರುವ ಅ. ವೇ. ೬–೧೨೮ನೇ ಅಧ್ಯಾಯವನ್ನು ಪರಸ್ಥಳಕ್ಕೆ ಪ್ರಯಾಣಮಾಡುವ ವ್ಯಾಪಾರಿಯು ತನ್ನ ಪೂಜಾಕಾಲಗಳಲ್ಲಿ ಪಠಿಸಿ ಶಕಧೂಮನನ್ನು ಪ್ರಾರ್ಥಿಸಬೇಕೆಂದೂ ತಿಳಿಸಿದೆ. (ಕೌ. ಸೂ. ೫೦–೧೩)

ಈ ರೀತಿ ಶಕಧೂಮವೆಂಬ ಪದಕ್ಕೆ ಒಂದೊಂದು ಕಡೆ ಒಂದೊಂದರ್ಥವನ್ನು ಹೇಳಿದೆ. ಆದರೆ ಪ್ರಕೃತವಾದ ಋಕ್ಕಿನ ವರ್ಣನೆಯಲ್ಲಿ ಯಾವ ಅರ್ಥವೆಂದು ನಿಷ್ಕೃಷ್ಟವಾಗಿ ಹೇಳಲು ಕಷ್ಟವಾದರೂ ಸಹ ನಮಗೆ ಬೃಹದ್ದೇವತೆಯೇ ಈ ಸಂದರ್ಭದಲ್ಲಿ ಪ್ರಮಾಣವಾಗಿರುತ್ತದೆ. ಆ ಪ್ರಮಾಣದಂತೆ, ಶಕಶಬ್ದಕ್ಕೆ ಮೇಘವೆಂದೂ, ಧೂಮಶಬ್ದಕ್ಕೆ ಸಲಿಲವೆಂದೂ ಅಥವಾ ಅದರ ವಾಸವೆಂದೂ ಅರ್ಥಮಾಡಿದರೇ ಈ ಸಂದರ್ಭದಲ್ಲಿ ಅರ್ಥವು ಹೊಂದಿಕೊಳ್ಳುತ್ತದೆ. ಅದೂ ಅಲ್ಲದೆ ಹಿಂದಿನ ಮಂತ್ರಗಳೂ ಸಹ ವೃಷ್ಟಿಪತನದ ವರ್ಣನೆಯಿರುತ್ತದೆ. ಅಥವಾ ಸಾಯಣರು ವಿವರಿಸಿರುವಂತೆ ಮೇಘದ ಉತ್ಪತ್ತಿಗೆ ಕಾರಣವಾದುದೂ, ಗೋಮಯದ ಜ್ವಾಲೆಯಿಂದ ಉತ್ಪನ್ನವಾದ ದೂಮರೇಖೆಹೆಂದೂ ಹೇಳಬಹುದು.

ವಿಷೂವತಾ–ವ್ಯಾಪ್ತಿಮತಾ । ವ್ಯಾಪಿಸಿರುವ ಧೂಮರೇಖೆಯಿಂದ ಎಂದರ್ಥ.

ಉಕ್ಷಾಣಂ–ಫಲಸ್ಯ ಸೇಕ್ತಾರಂ-ಇಷ್ಟಾರ್ಥಗಳನ್ನು ಸುರಿಸಿಕೊಡುವವನು ಎಂದರ್ಥ. ಸೇಚನ ಎಂದರೆ ಸುರಿಸು ಎಂಬರ್ಥವನ್ನು ಕೊಡುವ ಉಕ್ಷ್ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಭಕ್ತರಿಗೆ ಇಷ್ಟಾರ್ಥವನ್ನು ಕೊಡುವ ದೇವತೆಯೆಂದರ್ಥ. ಉಕ್ಷನ್ ಶಬ್ದವನ್ನು ನಿರುಕ್ತಕಾರರು ವೃಷನ್ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩–೧೩) ಅಲ್ಲದೇ ಋಕ್ಸಂಹಿದೆತೆಯ.

ವೃಷಾಕಪಾಯಿ ರೇವತಿ ಸುಪುತ್ರೆ ಆದು ಸುಸ್ನುಷೇ ।
ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ।

(ಋ. ಸಂ. ೧೦–೮೬–೧೩)

ಎಂಬ ಋಕ್ಕನ್ನುದಹರಿಸಿ ಅದಲ್ಲಿರುವ ಉಕ್ಷಣಶಬ್ದಕ್ಕೆ ಅರ್ಥವನ್ನು ಹೇಳುವಾಗ ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ (ನಿ. ೧೨–೯) ವೃದ್ಧಿಯಾಗು ಎಂಬರ್ಥವನ್ನು ಕೊಡುವ ಉಕ್ಷ್ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಉದಕದೊಂದಿಗೆ ವೃದ್ಧಿಯಾಗತಕ್ಕ ಎಂಬರ್ಥವನ್ನು ಆ ಸಂದರ್ಭದಲ್ಲಿ ಹೇಳಿರುತ್ತಾರೆ. ಸಾಧಾರಣವಾಗಿ ಉಕ್ಷ ಶಬ್ದವು ಶಕ್ತಿ, ಸಾಮರ್ಥ್ಯ ಎಂಬರ್ಥಗಳಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಎಂದರೆ, ಸೇಚನದ ಸಾಮರ್ಥ್ಯದಲ್ಲಿ ತಾತ್ಪರ್ಯವುಳ್ಳದ್ದಾಗುತ್ತದೆ.

ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ ಅಸುರಾ ಅರೇಪಸಃ ।
ಪಾವಕಾಸಃ ಶುಚಯಃ ಸೂರಾ ಇವ ಸತ್ವಾನೋ ನ ದ್ರಪ್ಸಿನೋ ಘೋರವರ್ಪಸಃ ॥

(ಋ. ಸಂ. ೧–೬೪–೨)

ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಂ ಹವಿಷ್ಮಂತ ಈಳತೇ ಸಪ್ತ ವಾಜಿನಂ ।
ಶೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ ॥
(ಋ. ಸಂ. ೧೦-೧೨೨-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಉಕ್ಷಶಬ್ದಕ್ಕೆ ಸೇಚನ ಅಥವಾ ಸೇಚನಸಾಮರ್ಥ್ಯ ಎಂದು ಅದರ ಶಕ್ತಿಯನ್ನು ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸೇಚನ ಸಾಮರ್ಥ್ಯವುಳ್ಳ, ಎಂದರೆ ಇಷ್ಟಾರ್ಥಗಳನ್ನು ಒದಗಿಸಿಕೊಡುವ ಸಾಮರ್ಥ್ಯವುಳ್ಳ ಸೋಮವೆಂದು ತಾತ್ಪರ್ಯ.

ಪೃಶ್ನಿಂ—ಪೃಶ್ನಿಃ ವಲ್ಲೀರೂಪಃ ಸೋಮಃ । ಸೋಮಕ್ಕೆ ವಿಶೇಷಣವಾಗಿದೆ. ಸಾಧಾರಣವಾಗಿ ಪೃಶ್ನಿ ಶಬ್ದವು ಆದಿತ್ಯನಿಗೆ ಪರ್ಯಾಯವಾಗಿ ಉಪಯೋಗಿಸಲ್ಪಡುತ್ತದೆ, ನಿರುಕ್ತಕಾರರು ಈ ಪದವನ್ನು ದ್ಯುನಾಮಗಳಲ್ಲಿಯೂ ಆದಿತ್ಯ ನಾಮಗಳಲ್ಲಿಯೂ ಪಠಿಸಿದ್ದಾರೆ. (ನಿ. ೧-೧೩) ಅನಂತರ, ಆದಿತ್ಯಪರವಾಗಿ ಈ ಪದದ ನಿರ್ವಚನವನ್ನು ತಿಳಿಸುತ್ತಾ ಈ ರೀತಿ ವಿವರಿಸಿದ್ದಾರೆ.

ಪೃಶ್ನಿರಾದಿತ್ಯೋ ಭವತಿ । ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ ಸಂಸ್ಪ್ರಷ್ಟಾ ರಸಾನ್ ।
ಸಂಸ್ಪ್ರಷ್ಟಾಭಾಸಂ ಜ್ಯೋತಿಷಾಂ । ಸಂಸ್ಪೃಷ್ಟೋ ಭಾಸೇತಿ ವಾ ।
(ನಿ. ೨-೧೪)

ಪ್ರಭೆಯಿಂದ ವ್ಯಾಪ್ತವಾಗಿರುವುದರಿಂದ ಆದಿತ್ಯನಿಗೆ ಪೃಶ್ನಿಯೆಂಬ ಹೆಸರೆಂದು ಪ್ರಾಚೀನ ನಿರುಕ್ತಕಾರರ ಮತ । ಪ್ರವಿಸುವ ರಸಗಳನ್ನು ಒಂದುಗೂಡಿಸುತ್ತದಾದ್ದರಿಂದಲೂ, ತೇಜೋಮಂಡಲಗಳ ಪ್ರಭೆಗಳನ್ನೆಲ್ಲಾ ಒಟ್ಟುಗೂಡಿಸುತ್ತದಾದ್ದರಿಂದಲೂ ಈ ವಿಶೇಷಣವು ಆದಿತ್ಯನ ಸ್ವರೂಪವನ್ನು ವರ್ಣಿಸುತ್ತದೆಯೆಂದು ಯಾಸ್ಕರ ವಿವರಣೆಯಿದೆ.

ಅಥ ದ್ಯೌರಾವಿಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ ।
(ನಿ. ೨-೧೪)

ತೇಜಸ್ಸುಗಳಿಂದಲೂ, ಸುಕೃತಗಳಿಂದಲೂ ಕೂಡಿರುವುದರಿಂದ ದ್ಯುಲೋಕಕ್ಕೂ ಪೃಶ್ನಿಯೆಂಬ ವಿಶೇಷಣವಿದೆಯೆಂದು ನಿರುಕ್ತಕಾರರು ಈ ಪದದ ಅರ್ಥವನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪ್ರಾಶ್ನುತೇ ತೇನ ಫಲಂ ಇತ್ಯಾದಿಯಾಗಿ ಇದೇ ಅರ್ಥವು ಸೋಮದ ಸ್ವರೂಪವನ್ನು ತಿಳಿಸಿ ಅವನಿಗೆ ವಿಶೇಷಣವಾಗಿದೆ.

ವೀರಾಃ— ವಿವಿಧೇರಣಕುಶಲಾ ಋತ್ವಿಜಃ । ನಾನಾ ವಿಧವಾದ ಯಜ್ಞಾದಿಕಾರ್ಯಗಳಲ್ಲಿ ಪ್ರವೃತ್ತಿಯುಳ್ಳ ಋತ್ವಿಕ್ಕುಗಳಿಗೆ ವಿಶೇಷಣವಾಗಿದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

ವೀರವಂತಃ । ಕಲ್ಯಾಣವೀರಾ ವಾ । ವೀರೋ ವೀರಯತ್ಯಮಿತ್ರಾನ್ । ವೇತೇರ್ವಾಸಾದ್ಗತಿಕರ್ಮಣೋ ವೀರಯತೇರ್ವಾ ॥
(ನಿ. ೧-೭)

ಶತ್ರುಗಳನ್ನು ಚದುರಿಸಿ ಅಟ್ಟುತ್ತಾರಾದ್ದರಿಂದ ಈ ವಿಶೇಷಣವಿದೆ. ಅಥವಾ ಚಲನಾರ್ಥಕವಾದ ವೀ ಧಾತುವಿನಿಂದಾಗಲಿ ಅಥವಾ ಶಕ್ತ್ಯರ್ಥಕವಾದ ವಿರ್ ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿರಬಹುದು ಎಂದು ತಿಳಿಸಿದ್ದಾರೆ. ಋತ್ವಿಕ್ಕುಗಳಿಗೂ ಈ ಸಾಮರ್ಥ್ಯವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಅವರಿಗೆ ವಿಶೇಷಣವಾಗಿದೆ.

ದ್ವಾದಶ ಪ್ರಧಯಶ್ಚಕ್ರಮೇಕಂ ತ್ರೀಣಿ ನಭ್ಯಾನಿ ಕ ಉ ತಚ್ಚಿಕೇತ |
ತಸ್ಮಿನ್ತ್ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿರ್ನ ಚಲಾಚಲಾಸಃ ||
|| ೪೮ ||

ಒಬ್ಬನೇ ಆದ ಆದಿತ್ಯನನ್ನು ಇಂದ್ರನೆಂದು, ಮಿತ್ರನೆಂದೂ, ಅಗ್ನಿಯೆಂದೂ ಕರೆಯುತ್ತಾರೆ. ಅಲ್ಲದೆ, ದಿವ್ಯಾತ್ಮನೂ, ಶ್ರೇಷ್ಠವಾದ ಪತನವುಳ್ಳವನೂ, ಆದ ಗುರುತ್ಮಂತನಾಗಿದ್ದಾನೆ. ಮೇಧಾವಿಗಳಾದ ವಿಪ್ರರು ಏಕಾತ್ಮನಾದ ಒಬ್ಬ ಪರಮಾತ್ಮನನ್ನೇ ಅಗ್ನಿಯೆಂದೂ, ಯಮನೆಂದೂ, ಮಾತರಿಶ್ವನೆಂದೂ ನಾನಾ ವಿಧವಾಗಿ ಕರೆಯುತ್ತಾರೆ.

ವರ್ಷಕಾಮೇಷ್ಟಿಯೆಂಬ ಯಾಗದಲ್ಲಿ ಮೂರು ಪಿಂಡಗಳನ್ನು ಹೋಮಮಾಡಬೇಕಾಗಿರುವುದು. ಅವುಗಳಲ್ಲಿ ಮೂರನೆಯದನ್ನು ಹೋಮಮಾಡುವಾಗ ಕೃಷ್ಣಂ ನಿಯಾನಾಂ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಕೃಷ್ಣಂ ನಿಯಾನಾಂ ಹರಯಃ ಸುಪರ್ಣಾ ನಿಯುತ್ವಂತೋ ಗ್ರಾಮಜಿತೋ ಯಥಾ ನರಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ- ೨-೧೩)

ಈ ಋಕ್ಕಿಗೆ ಸಾಯಣರು ಹೇಳಿರುವ ಅರ್ಥವು ನಿರುಕ್ತಕಾರರ ವಿವರಣೆಗಿಂತ ಕೊಂಚ ವ್ಯತ್ಯಸ್ತವಾಗಿದೆ. ಸಾಯಣರು ಕೃಷ್ಣಂ ನಿಯಾನಂ ಎಂಬುದಕ್ಕೆ ಕೃಷ್ಣವರ್ಣಂ ಮೇಘಂ | ಕೃಷ್ಣವರ್ಣದ ಮೇಘವೆಂದರ್ಥಮಾಡಿದ್ದಾರೆ. ನಿರುಕ್ತದಲ್ಲಿ ಕೃಷ್ಣಂ ನಿರಯಣಂ ರಾತ್ರಿಂ ಎಂದರ್ಥಮಾಡಿದೆ. ಈ ಋಕ್ಕಿಗೆ ನಿರುಕ್ತವು ಈ ರೀತಿಯಿದೆ.—

ಕೃಷ್ಣಂ ನಿರಯಣಂ ರಾತ್ರಿರಾದಿತ್ಯಸ್ಯ ಹರಯಃ ಸುಪರ್ಣಾ ಹರಣಾ ಆದಿತ್ಯರಶ್ಮಯಸ್ತೇ ಯದಾಮುತೋಽರ್ವಾಚಃ ಪರ್ಯಾವರ್ತಂತೇ ಸಹಸ್ಥಾನಾದುದಕಸ್ಯಾದಿತ್ಯಾದಥ ಘೃತೇನೋದಕೇನ ಪೃಥಿವೀ ವ್ಯುದ್ಯತೇ |.

(ನಿ. ೭-೨೪)

ನಿರಯಣವೆಂದರೆ ಇಲ್ಲಿ ಸಂಚಾರಮಾರ್ಗವೆಂದು ಹೇಳಬಹುದು. (ನಿರ್ಗಮನ ಮಾರ್ಗವೆಂದು ಈ ಪದಕ್ಕೆ ಸಾಧಾರಣವಾದ ಅರ್ಥವಿರುತ್ತದೆ.) ಆದಿತ್ಯನ ಸಂಚಾರಮಾರ್ಗಗಳೆರಡು. ಒಂದು ಕೃಷ್ಣವರ್ಣದ್ದು ಇನ್ನೊಂದು ಶುಕ್ಲವರ್ಣದ್ದು. ಕೃಷ್ಣವರ್ಣದ ಸಂಚಾರಮಾರ್ಗಕ್ಕೆ ರಾತ್ರಿಯೆಂದಾಗಲಿ ಅಥವಾ ದಕ್ಷಿಣಾಯನವೆಂದಾಗಲಿ ಅರ್ಥಮಾಡಬಹುದು. ಅಥವಾ ದಕ್ಷಿಣಾಯನದ ಸಂಚಾರವನ್ನೇ ಆದಿತ್ಯನ ರಾತ್ರಿಸಂಚಾರವೆಂದಾಗಲಿ ಹೇಳಬಹುದು. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ವ್ಯಾಖ್ಯಾನವನ್ನು ಈ ರೀತಿ ಬರೆದಿರುತ್ತಾರೆ.

ನಿಯಾನಂ ನಿರಯಣಂ ನಿರ್ಗತಿಃ [ನಿರ್ಯಾತಿ] ನಿರ್ಗಚ್ಛಂತ್ಯೇತದಿತಿ ನಿಯಾನಂ ವರ್ತ್ಮ ಪಂಥಾಃ | ತಚ್ಚ ಪುನರೇತತ್ | ರಾತ್ರಿಃ ಆದಿತ್ಯಸ್ಯ | ದ್ವೇಹ್ಯಸ್ಯಾಯನೇ ಶುಕ್ಲಂ ಚೋತ್ತರಂ ಕೃಷ್ಣಂ ಚ ದಕ್ಷಿಣಂ |

ಸಾ ಹಿ ದೈನೀರಾತ್ರಿರಭಿಪ್ರೇತಾ | ತತೋ ಬ್ರವೀತಿ ರಾತ್ರಿರಾದಿತ್ಯಸ್ಯ ಜ್ಯೋತಿಷಃ | ಸ ಏಷ ಭಗವಾನಾದಿತ್ಯೋ ಯದಾ ಜಗದನುಗ್ರಹಾಯ ಗರ್ಭಮುದಕಮಾತ್ಮಾನ್ಯಾಧಿತ್ಸುರುತ್ತಸ್ಮಾದಸ್ಮಾರಾಯಣಂ ಪ್ರತಿಪದ್ಯತೇ ತದೈತೇ

ಹರಯಃ ರಸ ಹರಣಾಃ ಸುಪರ್ಣಾಃ ತಸ್ಯ ರಶ್ಮಯಃ ಸರ್ವಸ್ಮಾದಸ್ಮಾಲ್ಲೋಕಾತ್ ಅಪೋವಸಾನಾಃ ಆತ್ಮನ್ಯಾಚ್ಛಾದಯಂತಃ ಆದಧಾನಾಃ ದಿವಂ ದ್ಯೋತನವಂತಮೇತಮಾದಿತ್ಯಂ ಪ್ರತಿಉತ್ಪತಂತಿ ||

(ನಿರುಕ್ತವ್ಯಾಖ್ಯಾ. ೭-೪)

ಆದಿತ್ಯನ ಗತಿಯು ಎರಡು ವಿಧವಾಗಿರುತ್ತದೆ. ಒಂದು ಉತ್ತರಾಯಣಕ್ಕೂ ಇನ್ನೊಂದು ದಕ್ಷಿಣಾಯನಕ್ಕೂ ಸಂಬಂಧಿಸಿದುದು. ಒಂದನ್ನು ಶುಕ್ಲವೆಂದೂ ಇನ್ನೊಂದನ್ನು ಕೃಷ್ಣವೆಂದೂ ಕರೆದಿದೆ. ಇಲ್ಲಿ ರಾತ್ರಿಯೆಂಬುದು ಕೃಷ್ಣಾಯನಕ್ಕೆ ಪರ್ಯಾಯವಾದ ಪದವಾಗಿದೆ. ಎಂದು ವಿವರಿಸಿರುವುದನ್ನೇ ಸಾಯಣರೂ ಸಹ ತಮ್ಮ ಎರಡನೇ ಅರ್ಥದಲ್ಲಿ ತಿಳಿಸಿದ್ದಾರೆ. ಯದ್ವಾ| ಕೃಷ್ಣಂ ನಿಯಾನಾಂ ನಿಯಮನಂ ರಾತ್ರಿಃ | ದೇವಾನಾಂ ಹಿ ರಾತ್ರಿರ್ದಕ್ಷಿಣಾಯನಂ | ತತ್ಪ್ರತಿ ತಸ್ಮಿನ್ವರ್ಷಾಕಾಲೇ ಇತ್ಯರ್ಥಃ | ದೇವತೆಗಳ ರಾತ್ರಿಕಾಲಕ್ಕೆ ದಕ್ಷಿಣಾಯನವೆಂದು ಹೆಸರು. ಆದಿತ್ಯನು ಉತ್ತರಾಯಣದ ಗತಿಯನ್ನನುಸರಿಸುತ್ತಿದ್ದಾಗ ಅವನ ರಶ್ಮಿಗಳೆಲ್ಲವೂ ಪ್ರಪಂಚದಲ್ಲಿ ಪ್ರಸರಿಸಿ ಎಲ್ಲಾ ಪ್ರದೇಶಗಳಿಂದಲೂ ಉದಕವನ್ನು ಸಂಗ್ರಹಿಸಿ ಈ ರಾತ್ರಿಕಾಲಕ್ಕೆ ಸರಿಯಾಗಿ ಪುನಃ ಆದಿತ್ಯನನ್ನು ಸೇರುವುವು. ಇದೇ ವರ್ಷಾಕಾಲವು, ಈ ಕಾಲದಲ್ಲಿ ವೃಷ್ಟಿಯು ಪ್ರಭೂತವಾಗಿ ಸುರಿಯುವುವೆಂದರ್ಥವು. ಈ ಶುಕ್ಲಕೃಷ್ಣಗಳನ್ನು ಭಗವದ್ಗೀತೆಯಲ್ಲಿ ವಿವರಿಸುತ್ತಾ,

ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಂ |
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ||
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ |
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ||
ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಶ್ಶಾಶ್ವತೇ ಮತೇ |
ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ||

(ಭಗವದ್ಗೀತಾ. -೮೨೪-೨೬)

ಎಂಬ ವಾಕ್ಯಗಳಿಂದ ವರ್ಣಿಸಿದೆ. ಇಲ್ಲಿ ಕೇವಲ ಭೌತಿಕವಾದ ವರ್ಣನೆಯು ಮಾತ್ರವಲ್ಲದೇ, ನೈತಿಕವ್ಯವಹಾರಕ್ಕೆ ಸಂಬಂಧಿಸಿದ ಫಲಾಫಲಗಳನ್ನೂ ತಿಳಿಸಿದೆ. ಇದಕ್ಕೆ ಅರ್ಚಿರಾದಿ ಮಾರ್ಗವೆಂದೂ ಧೂಮಮಾರ್ಗವೆಂದೂ ವ್ಯವಹಾರವಿರುವುದಾಗಿ ಹಿಂದೆ ದೇವಯಾನ ಮತ್ತು ಪಿತೃಯಾನಗಳ ವಿಷಯವನ್ನು ವಿವರಿಸುವಾಗ ಹೇಳಿದೆ. [of ಛಾ. ಉ. ೫-೧೦-೩; ಬೃ. ಉ. ೬-೨-೧೯]. ಈ ವಿಧವಾದ ಆಧಾರಗಳಿಂದ ಕೃಷ್ಣಂ ನಿರಯಣಂ ಎಂಬುದಕ್ಕೆ ನಿರುಕ್ತಕಾರರು ಕೇವಲ ರಾತ್ರಿಯೆಂದು ಅರ್ಥಮಾಡಿದ್ದರೂ ಸಹ ಸಾಯಣರು "ದೇವಾನಾಂ ರಾತ್ರಿರ್ದಕ್ಷಿಣಾಯನಂ" ಎಂದು ಅರ್ಥಮಾಡಿದ್ದಾರೆ.

ಋತಸ್ಯ ಸದನಾತ್—ಉದಕಸ್ಯ ಸ್ಥಾನಾದಾದಿತ್ಯಮಂಡಲಾತ್ | ಉದಕಕ್ಕೆ ಉತ್ಪತ್ತಿಸ್ಥಾನವಾದ ಆದಿತ್ಯಮಂಡಲದಿಂದ ಎಂದರ್ಥಮಾಡಿದೆ. ಋತಶಬ್ದಕ್ಕೆ ಇಲ್ಲಿ ಉದಕವೆಂದರ್ಥ. [ಋತಶಬ್ದಕ್ಕೆ ಸತ್ಯ, ಆದಿತ್ಯನ ಪಥ ಇತ್ಯಾದ್ಯನೇಕವಾದ ಅರ್ಥಗಳಿರುವುದನ್ನು ಹಿಂದೆ ಆಯಾ ಸಂದರ್ಭಗಳಲ್ಲಿ ತಿಳಿಸಿದೆ.] ನಿರುಕ್ತಕಾರರು ಋತ ಶಬ್ದವನ್ನು ಉದಕನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೨೪). ಋಕ್ಸಂಹಿತೆಯಲ್ಲಿ ಸುಮಾರು ಎಪ್ಪತ್ತು ಋಕ್ಕುಗಳಲ್ಲಿ ಋತಶಬ್ದಕ್ಕೆ ಉದಕವೆಂದೇ ಅರ್ಥವಾಗಿದೆ. ನಿರುಕ್ತದಲ್ಲಿ ಋತಂ ಯೋನಿ | ಋತಸ್ಯ ಯೋನಿಃ | ಸತ್ಯಂ | ನೀರಂ | ಎಂಬ ಪದಗಳನ್ನೆಲ್ಲಾ ಒಟ್ಟಿಗೆ

ಸೇರಿಸಿದೆ. ಋತಶಬ್ದಕ್ಕೆ ಸತ್ಯವೆಂಬರ್ಥವನ್ನು ಮಾಡಿದರೂ ಸಹ ಆಗ ಉದಕವೇ ವಿಶ್ವದ ಮೂಲತತ್ತ್ವ ಎಂಬ ಕೆಲವು ತಾತ್ತ್ವಿಕರ ಮತದಂತೆ ಸತ್ಯಾತ್ಮಕವಾಗಿರುವ ಉದಕವೆಂದು ಅರ್ಥವಾಗುತ್ತದೆ. ಆದರೆ,

> ಯದ್ಧ ತ್ಯನ್ಮಿತ್ರಾವರುಣಾವೃತಾದಧ್ಯಾದದಾಥೇ ಅನೃತಂ ಸ್ವೇನ ಮನ್ಯುನಾ ದಕ್ಷಸ್ಯ ಸ್ವೇನ ಮನ್ಯುನಾ ।
> ಯುವೋ ರಿತ್ಥಾಧಿ ಸದ್ಮಸ್ವಪಶ್ಯಾಮ ಹಿರಣ್ಯಯಂ .... .... .... .... ।
> ಧೀಭಿಶ್ಚನ ಮನಸಾ ಸ್ವೇಭಿರಕ್ಷಭಿಃ ಸೋಮಸ್ಯ ಸ್ವೇಭಿರಕ್ಷಭಿಃ ॥
>
> (ಋ. ಸಂ. ೧-೧೩೯-೨)

ಎಂಬ ಋಕ್ಕಿನಲ್ಲಿ ಋತಾದನೃತಮಾದದಾಥೇ ಎಂಬುದಕ್ಕೆ ಋತಾತ್—ಆದಿತ್ಯಾತ್ । ಅನೃತಂ ಶೋಷಣಸ್ವಭಾವಂ (ಉದಕಂ) ಎಂದು ಋತಶಬ್ದಕ್ಕೆ ಆದಿತ್ಯನೆಂದೂ, ಅನೃತಶಬ್ದಕ್ಕೆ ಉದಕವೆಂದೂ, ಅರ್ಥವಾಗುತ್ತದೆ. ಮತ್ತು ಉದಕಕ್ಕೆ ಅನೃತವೆಂಬ ವಿಶೇಷಣವು ನೀರಿನ ಅಶಾಶ್ವತವಾದ ಸ್ಥಿತಿಯನ್ನು ತೋರಿಸುತ್ತದೆಯೆಂದು ಸಾಯಣರು ವಿವರಿಸಿದ್ದಾರೆ. ಉಪನಿಷದಾದಿಗಳಲ್ಲಿ ಹೇಳುವಂತೆ ಶಾಶ್ವತವಾದುದೇ ಸತ್ಯವೆಂದೂ, ಅಶಾಶ್ವತವಾದುದೇ ಅಸತ್ಯವೆಂದೂ ಸಹ ಅರ್ಥವಾಗ ಬಹುದು. ಈ ಅಭಿಪ್ರಾಯವು ಉದಾಹೃತವಾದ ಋಕ್ಕಿನ ಅರ್ಥಕ್ಕೆ ಮಾತ್ರ ಹೊಂದಿಕೊಂಡರೂ ಸಹ ಅನೃತಶಬ್ದವನ್ನು ಉದಕಪರ್ಯಾಯವಾಗಿ ಉಪಯೋಗಿಸಿರುವುದು ಅಪರೂಪ.

ಘೃತೇನ—ಘೃತಮಿತ್ಯುದಕನಾಮ (ನಿ. ೭-೬೩) ಘೃತವೆಂಬುದು ಉದಕಪರ್ಯಾಯವಾದ ನಾಮವಾಗಿದೆ. ಸೇಚನಾರ್ಥಕವಾದ ಘೃ ಧಾತುವಿನಿಂದ ನಿಷ್ಪನ್ನವಾಗಿದೆ. "ಜಿಘರ್ತೇಃ ಸಿಂಚತಿ ಕರ್ಮಣಃ"

ಅಪವೃತ್ರನ್ನ್ಸದನಾದೃತಸ್ಯಾದಿದ್ ಘೃತೇನ ಪೃಥಿವೀ ವ್ಯುದ್ಯತೇ—ಎಂಬ ಉತ್ತರಾರ್ಧಕ್ಕೆ ನಿರುಕ್ತಕಾರರು ಬೇರೊಂದು ಅರ್ಥವೂ ಸಾಧ್ಯವೆಂದು ತಿಳಿಸಿದ್ದಾರೆ.

> ಅಥಾ ಪ ಬ್ರಾಹ್ಮಣಂ ಭವತ್ಯಗ್ನಿರ್ವಾ ಇತೋ ವೃಷ್ಟಿಂ ಸಮೀರಯತೀತಿ ಧಾಮಚ್ಛದ್ದಿವಿ ಖಲುಭೂತಾ ವರ್ಷತಿ ಮರುತಃ ಸೃಷ್ಟಾಂ ವೃಷ್ಟಿಂ ನಯಂತಿ । ಯದಾಖಲು ಆಸಾವಾದಿತ್ಯೋಽಗ್ನಿಂ ರಶ್ಮಿಭಿಃ ಪರ್ಯಾವರ್ತತೇಽಥ ವರ್ಷತೀತಿ ।

'ಅಗ್ನಿಯು ಈ ಲೋಕದಿಂದ ಮಳೆಯನ್ನು ಸುರಿಸುತ್ತಾನೆ' ಎಂಬ ಬ್ರಾಹ್ಮಣವಾಕ್ಯವಿದೆ. ಅದು ಹೇಗೆಂದರೆ ಅಗ್ನಿಯು ಧೂಮರೂಪದಿಂದ ಅಂತರಿಕ್ಷವನ್ನು ಸೇರಿ ಮೇಘವಾಗಿ ಪರಿಣಮಿಸಿ ವೃಷ್ಟಿಯನ್ನು ಸುರಿಸುತ್ತದೆ. 'ಆದಿತ್ಯನು ತನ್ನ ರಶ್ಮಿಗಳಿಂದ ಅಗ್ನಿಯನ್ನು ಪ್ರತಿನಿವೃತ್ತನಾಗುವಂತೆ ಮಾಡಿದಾಗ ವೃಷ್ಟಿಪತನವಾಗುತ್ತದೆ.' ಎಂಬುದೂ ಸಹ ಇನ್ನೊಂದು ಬ್ರಾಹ್ಮಣವಾಕ್ಯ ವಿದೆಯೆಂದು ಅಗ್ನಿಪರವಾದ ಅರ್ಥವನ್ನೂ ಮಾಡಿದೆ.

ಆ ಅವವೃತ್ರನ್ :— ಅರ್ವಾಜ್ ಆಗಚ್ಛತಿ । ಅಭಿಮುಖವಾಗಿ ಎಂದಾಗಲಿ ಅಥವಾ ಅಧೋಮುಖವಾಗಿ ಬಂದಾಗ ಎಂದಾಗಲಿ ಅರ್ಥವಾಗುತ್ತದೆ.

ಸುವರ್ಣಾಃ—ಶೋಭನಪತನಾ ರಶ್ಮಯಃ । ಆಕರ್ಷಕವಾಗಿ ಸಂಚರಿಸತಕ್ಕವು ಎಂದು ರಶ್ಮಿಗಳಿಗೆ ಪರ್ಯಾಯ ನಾಮವಾಗಿದೆ. ಸುವರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫), ಅಶ್ವನಾಮಗಳಲ್ಲಿಯೂ (ನಿ. ೨-೨೭) ಪಠಿತವಾಗಿದೆ.

ಪಕ್ಷಿ, ಬಾಣ ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ, ಗರ್ಧವಾದ ಕಂಪನವುಳ್ಳವು ಎಂದರ್ಥ, ಈ ಪದಕ್ಕೆ ಇರುವ ನಾನಾರ್ಥಗಳನ್ನೂ ಈ ವಿಶೇಷಣದ ವೈಶಿಷ್ಟ್ಯವನ್ನೂ ಸಹ ಇದೇ ಭಾಗದ 421 ನೇ ಪುಟದಲ್ಲಿ ವಿಶದವಾಗಿ ತಿಳಿಸಿದೆ.

## ಅಥ ದ್ವಿತೀಯ ಖಂಡಃ

### ಎರಡನೆಯ ಖಂಡವು

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ । ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ (ಋ. ಸಂ. ೩-೨೬-೭) ॥ ಅಹಮಸ್ಮಿ ಪ್ರಥಮಜಾ ಋತಸ್ಯ ಪೂರ್ವಂ ದೇವೇಭ್ಯೋ ಅಮೃತಸ್ಯ ನಾಮ । ಯೋ ಮಾ ದದಾತಿ ಸ ಇದೇವ ಮಾವದಹಮನ್ನ ಮನ್ನ-ಮದಂತಮದ್ಮಿ ॥ ಇತಿ ಸಹಜ್ಞಾತಾ ಪ್ರಾದುರ್ಬಭೂವೈವಂ ತಂ ವ್ಯಾಜಹಾರಾಯಂ ತಮಾತ್ಮಾನ ಮಧ್ಯಾತ್ಮಜಮಂತಿಕಮನ್ಯಸ್ಮಾ ಯಾ ಚಚಕ್ಷೇತಿ ॥ ೧ ॥

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥೨॥

ಅಗ್ನಿ ಎಂಬ ಹೆಸರಿನಿಂದ ಪ್ರಸಿದ್ಧನಾದ ನಾನು ನನ್ನ ಉತ್ಪತ್ತಿಯ ಸ್ವರೂಪದಿಂದಲೇ ಸಕಲವನ್ನೂ ತಿಳಿದವನಾಗಿದ್ದೇನೆ. ಘೃತವೇ ನನ್ನ ಪ್ರಕಾಶಾತ್ಮಕವಾದ ಕಣ್ಣು. ಅಮೃತವು ನನ್ನ ಮುಖದಲ್ಲಿದೆ. ವಾಯುರೂಪದಲ್ಲಿ ಮೂರು ಭಾಗವಾಗಿ ವಿಂಗಡಿಸಲ್ಪಟ್ಟ ಪ್ರಾಣವೂ ನಾನೇ. ನಾನು ಅಂತರಿಕ್ಷದ ಅಧಿಷ್ಠಾತೃವೂ ಆಗಿದ್ದೇನೆ. ಕ್ಷಯರಹಿತನೂ, ಪ್ರಕಾಶಾತ್ಮನೂ ಆದ ಆದಿತ್ಯನು ನನ್ನ ರೂಪಾಂತರವು ಮತ್ತು ಭೋಗಿಸಲು ಯೋಗ್ಯವಾದ ಹವಿಸ್ಸೂ ನಾನೇ ಆಗಿದ್ದೇನೆ.

ಸಾಯಣರು ಈ ಋಕ್ಕಿನ ಅರ್ಥವನ್ನು ಎರಡು ವಿಧವಾಗಿ ವರ್ಣಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಅಗ್ನಿಯು ತನ್ನ ಪರತತ್ತ್ವಾತ್ಮಭಾವದಿಂದ ಇರುವನೆಂದೂ, ಭೋಕ್ತೃಭೋಗ್ಯರೂಪದಿಂದ ಪೃಥಿವೀ ಅಂತರಿಕ್ಷದ್ಯುಲೋಕಗಳನ್ನು ವ್ಯಾಪಿಸಿ ಇರುವನೆಂದೂ ವಿವರಿಸಿ, ಎರಡನೆಯ ಅರ್ಥದಲ್ಲಿ ಅಗ್ನಿಯ ಸರ್ವಾತ್ಮಭಾವವೂ ವಿವೃತವಾಗಿರುವುದೆಂದು ಹೇಳಿದ್ದಾರೆ. ಮತ್ತು—

ಕುಶಿಕಗೋತ್ರೋತ್ಪನ್ನರಾದ ಋಷಿಗಳಿಂದ ಅಗ್ನಿಯು ಸ್ತುತನಾಗಿ ತನ್ನ ಪರತತ್ತ್ವಾನುಭವವನ್ನು ಅಹಮಸ್ಮಿ ಜನ್ಮನಾ ಜಾತವೇದಾಃ ಎಂಬ ಮಂತ್ರದಿಂದಲೂ, ತ್ರಿಭಿಃ ಪವಿತ್ರೈಃ ಎಂಬ ಮಂತ್ರದಿಂದಲೂ ತಾನೇ ವಿವರಿಸಿರುವನು ಎಂದು ವ್ಯಾಖ್ಯಾನಮಾಡಿದ್ದಾರೆ.

ಸಾಕ್ಷಾತ್ಕೃತಪರತತ್ತ್ವರೂಪಃ ಅಗ್ನಿಃ ದ್ವ್ಯೃಚೇನ ಸ್ವಾತ್ಮನಃ ಸರ್ವಾತ್ಮಕತ್ವಾನುಭವಮಾವಿಷ್ಕರೋತಿ ಅಗ್ನಿಯು ಪರಬ್ರಹ್ಮಸ್ವರೂಪವನ್ನು ಸಾಕ್ಷಾತ್ಕಾರಮಾಡಿ ಆದರಿಂದ ತನಗೆ ಉಂಟಾಗಿರುವ ಸರ್ವಾತ್ಮಸ್ಥಿತಿಯನ್ನು ಎರಡು ಋಕ್ಕುಗಳಿಂದ ವಿಶದಮಾಡಿದ್ದಾನೆ.

> ಭೋಕ್ತೃಭೋಗ್ಯಭಾವೇನ ದ್ವಿವಿಧಂ ಹಿ ಇದಂ ಜಗತ್ । ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ (ಬೃ. ಉ. ೧-೪-೬) ತತ್ರ ಸಕಲ ಭೋಕ್ತೃವರ್ಗ ರೂಪೇಣಾನ್ನಾದೋಽಗ್ನಿಃ । ಸ ಚ ಅಗ್ನಿವಾಯ್ವಾದಿತ್ಯಭೇದೇನ ತ್ರೇಧಾ ಭೂತ್ವಾ ಪೃಥಿವ್ಯಂತರಿಕ್ಷದ್ಯುಲೋಕಾನಧಿತಿಷ್ಠತಿ । ಸ ತ್ರೇಧಾ ಆತ್ಮಾನಂ ವ್ಯಭಜತ । ಆದಿತ್ಯಂ ತೃತೀಯಂ ವಾಯುಂ ತೃತೀಯಂ ಇತಿ. (ಬೃ. ಉ. ೧-೨-೩).

ಈ ಪ್ರಪಂಚವು ಭೋಕ್ತೃರೂಪದಿಂದಲೂ, ಭೋಗ್ಯರೂಪದಿಂದಲೂ, ಎರಡುವಿಧವಾಗಿ ಇರುವುದು. ಈ ವಿಷಯವನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಅನ್ನ, ಅನ್ನವನ್ನು ಭೋಜನಮಾಡುವವನು ಎಂದು ಎರಡು ವಿಧವಾಗಿರುವ ಈ ಪ್ರಪಂಚದಲ್ಲಿ ಸೋಮನೇ ಅನ್ನವೆಂದೂ, ಅಗ್ನಿಯು ಅನ್ನವನ್ನೂ ಭೋಜನಮಾಡುವವನೆಂದೂ ವಿವರಿಸಿದೆ. ಭೋಕ್ತೃವಾಗಿರುವ ಅಗ್ನಿಯು ಅಗ್ನಿ ವಾಯು ಆದಿತ್ಯರೆಂಬ ಮೂರು (ವಿಧದಿಂದ) ವಿಧವಾದ ರೂಪದಿಂದ ಪೃಥಿವೀ ಅಂತರಿಕ್ಷದ್ಯುಲೋಕವೆಂಬ ಮೂರೇ ಲೋಕಗಳಲ್ಲಿಯೂ ವ್ಯಾಪಿಸಿರುವನೆಂದು ಅದಕ್ಕೆ ಆಧಾರವಾದ ಬೃಹದಾರಣ್ಯಕ ಉಪನಿಷತ್ತಿನ ವಾಕ್ಯವನ್ನೂ ಉದಹರಿಸಿದೆ.

ಅಹಮಸ್ಮಿ ಜನ್ಮನಾ ಜಾತವೇದಾ—ಶ್ರವಣಮನನಾದಿಸಾಧನನಿರಪೇಕ್ಷಣ ಸ್ವಭಾವತ ಏವ ಸಾಕ್ಷಾತ್ಕೃತಪರತತ್ತ್ವರೂಪಃ ಅಸ್ಮಿ । ಈ ವಾಕ್ಯದಲ್ಲಿ ಜಾತವೇದಶಬ್ದಕ್ಕೆ ಪ್ರತ್ಯಕ್ಷವಾಗಿ ಜಾತವಾಗಿ ಪರತತ್ತ್ವರೂಪವುಳ್ಳವನೆಂದು ಅರ್ಥವನ್ನು ವರ್ಣಿಸಿದೆ. ಪರಬ್ರಹ್ಮನ ತತ್ತ್ವಸ್ವರೂಪವು ಜ್ಞಾತವಾಗಲು ಉಪನಿಷದಾದಿಗಳಲ್ಲಿ ಉಕ್ತವಾದ ಅರ್ಥವನ್ನು ಶ್ರವಣಮಾಡುವುದು, ಶ್ರವಣಮಾಡಿದುದನ್ನು ಮನನಮಾಡುವುದು (ಮನಸ್ಸಿನಿಂದ ವಿಮರ್ಶೆಮಾಡುವುದು) ಅನಂತರದಲ್ಲಿ ಸರ್ವದಾ ಆ ಸ್ವರೂಪವನ್ನು ಧ್ಯಾನಮಾಡುವುದು ಎಂಬ ಸಾಧನಗಳು ಪ್ರಸಿದ್ಧವಾಗಿವೆ. ಆದರೆ ಅಗ್ನಿಯು ಈ ವಿಧವಾದ ಪರತತ್ತ್ವಸಾಕ್ಷಾತ್ಕಾರಸಾಧನಗಳ ಸಹಾಯವನ್ನು ಅಪೇಕ್ಷಿಸದೆ ಸ್ವಭಾವದಿಂದಲೇ ಪರತತ್ತ್ವವನ್ನು ಸಂಪೂರ್ಣವಾಗಿ ತಿಳಿದು, ಪ್ರತ್ಯಕ್ಷಮಾಡಿಕೊಂಡು ಇರುವನೆಂದು ಆ ಅನುಭವವನ್ನು ಅಹಮಸ್ಮಿ ಎಂದು ವಿವರಿಸಿದೆ.

ಘೃತಂ ಮೇ ಚಕ್ಷುಃ—ವಿಶ್ವಸ್ಯ ವಿಭಾಸಕಂ ಮಮ ಸ್ವಭಾವಭೂತಪ್ರಕಾಶಾತ್ಮಕಂ ಚಕ್ಷುಸ್ತದ್ ಘೃತಂ ಇದಾನೀಂ ತತ್ ಅತ್ಯಂತಂ ದೀಪ್ತಂ ॥ ಘೃತಶಬ್ದವು ಉದಕನಾಮಗಳಲ್ಲಿ (ನಿ. ೨-೧೪) ಉಕ್ತವಾಗಿದೆ. ಚಕ್ಷುಶಬ್ದವು ಚಕ್ಷುಃ ಖ್ಯಾತೇರ್ವಾ ಚಷ್ಟೇರ್ವಾ (ನಿ. ೪-೩) ಪ್ರಕಟನಮಾಡು ಎಂಬ ಅರ್ಥವನ್ನು ಬೋಧಿಸುವ ಖ್ಯಾಧಾತುವಿನಿಂದಾಗಲಿ ಅಥವಾ ದರ್ಶನಾತ್ಮಕವಾದ ಚಕ್ಷಿಙ್‌ಧಾತುವಿನಿಂದಾಗಲಿ ಉತ್ಪನ್ನವಾಗಿರುವುದೆಂದು ವ್ಯಾಖ್ಯಾತವಾಗಿದೆ. ಪ್ರಪಂಚವೆಲ್ಲವನ್ನು ಪ್ರಕಾಶಗೊಳಿಸುವ ಪರಬ್ರಹ್ಮಸ್ವರೂಪವಾದ ತನ್ನನ್ನೂ ಇತರವೆಲ್ಲವನ್ನೂ ಪ್ರಕಾಶಗೊಳಿಸಿ ಪ್ರಕಾಶದಿಂದ ಇರುವ ಸ್ವರೂಪವು (ವೈದ್ಯುತಾಗ್ನಿಸ್ವರೂಪವು) ನಿರತಿಶಯವಾದ ಪ್ರಕಾಶರೂಪದಿಂದ ಬೆಳಗುತ್ತಿರುವುದು. ಈ ಸ್ವರೂಪದಿಂದಲೇ ಅಗ್ನಿಯು ತನ್ನ ದ್ಯುಲೋಕಸ್ಥಿತಿಯಲ್ಲಿ ಇರುವ ಅಗ್ನಿಸ್ವರೂಪವನ್ನು ವ್ಯಕ್ತಗೊಳಿಸಿರುವನೆಂದು ಅರ್ಥವನ್ನು ವಿವರಿಸಿದೆ. ಹಿಂದಿನವಾಕ್ಯದಲ್ಲಿ ಜ್ಞಾನಸ್ವರೂಪವನ್ನು ಹೇಳಿದೆ ಈ ವಾಕ್ಯದಿಂದ ಸನ್ಮಾತ್ರರೂಪದಿಂದ ಇರುವಿಕೆಯು ಉಕ್ತವಾಗಿದೆ.

**ಅಮೃತಂ ಮ ಆರ್ಸ**—ಅಮೃತಶಬ್ದವು ನಿರುಕ್ತಕಾರರಿಂದ ಮರಣಧರ್ಮರಹಿತಂ ಎಂದು (ನಿ. ೨-೨೦) ವ್ಯಾಖ್ಯಾತವಾಗಿದೆ. ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿದೆ. ಇಲ್ಲಿ ದಿವ್ಯಾದಿವ್ಯವಿವಿಧವಿಷಯೋಪ-ಭೋಗಾತ್ಮಕಂ ಕರ್ಮಫಲಂ ಸ್ವರ್ಗಾದಿಲೋಕಗಳಲ್ಲಿ ಅನುಭವಿಸಬಹುದಾದ ಅಥವಾ ಈ ಲೋಕದಲ್ಲಿ ಅನುಭವಿಸ ಬಹುದಾದ ಸ್ವರೂಪದಿಂದ ಇರುವ ಆಯಾಯ ಪ್ರಕಾರಗಳಿಂದ ಸರ್ವರಿಂದಲೂ ಅನುಭವಗೋಚರವಾದ ಸುಖವನ್ನು ಉಂಟು ಮಾಡುವ ಆಯಾಯ ಕರ್ಮಫಲವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, ಈ ವಿಧವಾದ ಕರ್ಮ ಫಲಸ್ವರೂಪವೂ ಮಮ ಆರ್ಸ ಪರಬ್ರಹ್ಮಸ್ವರೂಪದಿಂದ ಇರುವ ಅಗ್ನಿಯ ಮುಖದಿಂದಲೇ ಇರುವುದು ಎಂದು ವರ್ಣಿಸಿ, ಅಗ್ನಿಯು ಆನಂದ ರೂಪದಿಂದ ಇರುವನೆಂದು ಸ್ಪಷ್ಟವಾಗಿ ಹೇಳಿದೆ. ಇದರಿಂದ ಆತ್ಮನ ಸಚ್ಚಿದಾನಂದರೂಪಾವಸ್ಥಾನವು ಅಗ್ನಿಯಲ್ಲಿ ಉಕ್ತ ವಾಗಿರುವ ಕಾರಣ ಅಗ್ನಿಯು **ಸಕಲ ಭೋಕ್ತೃವರ್ಗಾತ್ಮನಾ ಅವಸ್ಥಾನಾತ್** ಧರ್ಮವು ಧರ್ಮಿಯನ್ನು ಹೊರತಾಗಿ ಬೇರೆ ಯಾಗಿಲ್ಲದಿರುವುದರಿಂದ ಭೋಗ್ಯವಾದ ರೂಪಾಂತರವನ್ನು ಹೊಂದಿರುವ ಅಗ್ನಿಯೇ ತನಗಿಂತಲೂ ಬೇರೆಯಾದ ಭೋಕ್ತೃವಿನ ರೂಪವನ್ನು ಹೊಂದಬಹುದಾಗಿದ್ದರೂ, ತನ್ನ ನೈಜವಾದ ರೂಪದಿಂದ ಸರ್ವ ವಿಧವಾದ ಭೋಗ್ಯವನ್ನೂ ಅನುಭವಿಸಲರ್ಹವಾದ ಭೋಕ್ತೃವಿನ ರೂಪದಿಂದಲೇ ಇರುವನು ಎಂದು ವಿವರಿಸಿ, ಅಗ್ನಿಯ ಧರ್ಮ-ಧರ್ಮಿಗಳ ತಾದಾತ್ಮ್ಯರೂಪದಿಂದ ಇರುವ ಪರ ಬ್ರಹ್ಮಭಾವವು ವಿವೃತವಾಗಿದೆ.

**ಅರ್ಕಃ–ಜಗತ್ಸ್ರಷ್ಟಾಪ್ರಾಣಃ।** ಅರ್ಕಶಬ್ದವು ಅನ್ನನಾಮಗಳಲ್ಲಿಯೂ (ನಿ.೩–೯) ವಜ್ರನಾಮಗಳಲ್ಲಿಯೂ (ನಿ. ೩–೧೧) ಉಕ್ತವಾಗಿ, ದೇವ, ಮಂತ್ರ, ಅನ್ನ, ವೃಕ್ಷ, ಎಂಬ ಅರ್ಥದಲ್ಲಿ (ನಿ. ೫–೪) ಪ್ರಯುಕ್ತವಾಗಿದೆ. ಇಲ್ಲಿ ಜಗತ್ತನ್ನು ಸೃಷ್ಟಿಮಾಡುವುದು ಪ್ರಾಣರೂಪದಿಂದ ಇರುವ ವಾಯುವು ಎಂದು ಅರ್ಥವನ್ನು ವಿವರಿಸಿ, "**ಸೋಽರ್ಚನಚರತ್ತಸ್ಯಾರ್ಚತ ಆಪೋ ಅಜಾಯಂತ ಅರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯ ಅರ್ಕತ್ವಂ** (ಶ. ಬ್ರಾ. ೧೦–೬–೫) ಈ ಅರ್ಥವನ್ನು ಉಪಪಾದಿಸಿರುವ ಬ್ರಾಹ್ಮಣವಾಕ್ಯವನ್ನು ಉದಾಹರಿಸಿದೆ.

**ತ್ರಿಧಾತುಃ ರಜಸೋ ವಿಮಾನಃ**—**ಸಃ ಪ್ರಾಣಃ ಅಹಂ ತ್ರೇಧಾ ಆತ್ಮಾನಂ ವಿಭಜ್ಯ ತತ್ರ ವಾಯ್ವಾತ್ಮನಾ ಅಂತರಿಕ್ಷಸ್ಯ ವಿಮಾತಾ ಅಧಿಷ್ಠಾತಾ ಅಸ್ಮಿ।** ಹಿಂದಿನ ವಾಕ್ಯದಲ್ಲಿ ಸಕಲ ಭೋಕ್ತೃರೂಪದಿಂದ ಅಗ್ನಿಯ ಸ್ಥಿತಿಯು ಪೃಥಿವಿಯಲ್ಲಿ ಇರುವುದೆಂದು ಉಕ್ತವಾಗಿದೆ. ವಾಯುವಿನರೂಪದಿಂದ ಅಗ್ನಿಯ ಅಂತರಿಕ್ಷಸ್ಥಿತಿಯು ಇಲ್ಲಿ ಉಕ್ತವಾಗಿದೆ ಎಂಬ ಅರ್ಥವನ್ನು ಸಾಯಣರು ಪ್ರಾಣರೂಪದಿಂದ ಇರುವ ಅಗ್ನಿಯು (ಅಗ್ನಿ ವಾಯು ಆದಿತ್ಯ) ಮೂರು ರೂಪಗಳಿಂದ ಇರುವ ಕಾರಣ ಅವುಗಳಲ್ಲಿ ಒಂದು ರೂಪವಾದ ವಾಯುವಿನ ರೂಪದಿಂದ ಅಂತರಿಕ್ಷದಲ್ಲಿ ಇರುವನು ಎಂದು ವಿವರಿಸಿದ್ದಾರೆ. ರಜಸ್ ಎಂಬ ಪದವು ನಾನಾರ್ಥಬೋಧಕವಾಗಿರುವುದು. ಇಲ್ಲಿ **ರಜೋ ರಜತೇಃ ಜ್ಯೋತಿಃ ರಜ ಉಚ್ಯತೇ, ಉದಕಂ ರಜ ಉಚ್ಯತೆ, ಲೋಕಾ ರಜಾಂಸ್ಯುಚ್ಯಂತೇ, ಅಸೃಗಹನೀ ರಜಸೀ ಉಚ್ಯೇತೆ,** (ನಿ. ೪–೧೯) ಎಂಬ ನಿರುಕ್ತ ಕಾರರ ವಚನದಂತೆ, ರಜಶ್ಶಬ್ದಕ್ಕೆ ಲೋಕವೆಂದು ಅರ್ಥವನ್ನು ಹೇಳಿ, ಅದರಲ್ಲಿಯೂ ಅಂತರಿಕ್ಷಲೋಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿದೆ.

**ಅಜಸ್ರೋ ಘರ್ಮಃ**—**ಅಜಸ್ರೋ ಅನುಪಕ್ಷೀಣೋ ಪ್ರಕಾಶಾತ್ಮಾ ದ್ಯುಲೋಕಾಧಿಷ್ಠಾತಾ ಆದಿತ್ಯೋಽಹಮಸ್ಮಿ।** ಘರ್ಮಶಬ್ದವು ಅಹರ್ನಾಮಗಳಲ್ಲಿ (ನಿ. ೩–೧೯) ಯೂ ಉಕ್ತವಾಗಿದೆ. ಇಲ್ಲಿ (ಸರ್ವಕಾಲದಲ್ಲಿಯೂ) ಒಂದೇ ವಿಧವಾಗಿರುವ ಅಥವಾ ನಾಶವನ್ನು ಹೊಂದದೆ ಇರುವ ಪ್ರಕಾಶರೂಪದಿಂದ ಇರುವ ದ್ಯುಲೋಕದಲ್ಲಿ ಬೆಳಗುತ್ತಿರುವ

ಆದಿತ್ಯನೆಂದು ಅರ್ಥವನ್ನು ವಿವರಿಸಿ, ಅಗ್ನಿಯು ಈ ಆದಿತ್ಯರೂಪದಿಂದಲೇ ದ್ಯುಲೋಕದಲ್ಲಿರುವನು ಎಂದು ಅಗ್ನಿಗೆ ಆದಿತ್ಯ ರೂಪದಿಂದ ಇರುವ ಸ್ಥಿತಿಯನ್ನು ವಿವರಿಸಿದ್ದಾರೆ.

ಹವಿಃ ಅಸ್ಮಿ—ಭೋಗ್ಯಂ ಪ್ರಸಿದ್ಧಮಸ್ತಿ ತದಪ್ಯಹಮಸ್ಮಿ. ಹವಿಃ ಎಂಬ ಪದವು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಅಗ್ನಿಯ ಪ್ರಾಣವಾಯುರೂಪ, ಅಗ್ನಿಸ್ವರೂಪ, ಆದಿತ್ಯರೂಪ ಇವುಗಳು ಭೋಕ್ತೃ ರೂಪಗಳಾಗಿರುತ್ತವೆ ಎಂದು ಹಿಂದೆ ಉಕ್ತವಾಗಿದೆ. ಈಗ (ಆತ್ಮನ ಭೋಕ್ತೃರೂಪ ಭೋಗ್ಯರೂಪಗಳನ್ನು ವಿವರಿಸಿರುವಂತೆ) ಅಗ್ನಿಯ ಭೋಗ್ಯರೂಪದ ಸ್ಥಿತಿಯನ್ನು ಹವಿಃ ಅಸ್ಮಿ ಎಂಬ ವಾಕ್ಯದಿಂದ ವರ್ಣಿಸಿದೆ. ಭೋಕ್ತೃವಾದವನಿಗೆ ಅವಶ್ಯವಾಗಿ ಬೇಕಾಗಿರುವ ಭೋಗ್ಯವಸ್ತುವು ಭೋಕ್ತೃರೂಪದಿಂದ ಬೇರೆಯಾಗಿರುವುದು. ನಿಯತವಾಗಿರುವುದು. ಪರಬ್ರಹ್ಮಸಾಕ್ಷಾತ್ಕಾರಾನುಭವದಿಂದ ಇರುವ ಬ್ರಹ್ಮಾತ್ಮಸ್ವರೂಪಾನುಭವದಲ್ಲಿ ಭೋಕ್ತೃಭೋಗ್ಯವೆಂಬ ಭೇದವು ಪ್ರತೀತವಾಗದೆ ಇರುವುದರಿಂದ ಆ ಅನುಭವವನ್ನು ಅಗ್ನಿಯು ಹೊಂದಿ ತಾನು ಭೋಕ್ತೃಬೋಗ್ಯರೂಪದಿಂದ ಇರುವಿಕೆಯನ್ನು ವ್ಯಕ್ತಗೊಳಿಸಿದ್ದಾನೆ ಎಂದು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ—ಸಾಯಣರ ವ್ಯಾಖ್ಯಾನವು ಇನ್ನೊಂದು ವಿಧವಾಗಿದೆ—ಈ ಅರ್ಥದಲ್ಲಿ ಅಗ್ನಿಯು ಸಾಕ್ಷಾತ್ಕೃತ ಪರಬ್ರಹ್ಮರೂಪನಾಗಿರುವ ಕಾರಣ ಅವನ ಸರ್ವಾತ್ಮಭಾವವು ವಿವೃತವಾಗಿದೆ.

ಅಗ್ನಿರಸ್ಮಿ— ಈ ವಾಕ್ಯಕ್ಕೆ ದೇವಾನಾಂ ಹವಿಃಪ್ರಾಪಣಾತ್ ಅಂಗನಾದಿಗುಣಯುಕ್ತೋಽಸ್ಮಿ। ಯಜಮಾನರು ಅರ್ಪಿಸಿರುವ ಹವಿಸ್ಸುಗಳನ್ನು ದೇವತೆಗಳಿಗೆ ತಲಪಿಸುವ ಕಾರಣ ಅಂಗಾಂಗಭಾವರೂಪವಾದ ಧರ್ಮಗಳಿಂದ ಯುಕ್ತನಾಗಿರುವೆನು ಎಂದು ಅಗ್ನಯ ಸ್ವರೂಪವು ಉಕ್ತವಾಗಿದೆ.

ಜನ್ಮನಾ ಜಾತವೇದಾಃ—ಈ ವಾಕ್ಯದಲ್ಲಿ ಜಾತವೇದಶಬ್ದವು ಜಾತಪ್ರಜ್ಞನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವೃತವಾಗಿದೆ. ಅಗ್ನಿಯು ಉತ್ಪನ್ನನಾದ ಕ್ಷಣದಿಂದಲೂ ಸರ್ವಜ್ಞನಾಗಿರುವನೆಂದು ಅರ್ಥವನ್ನು ವರ್ಣಿಸಿದೆ ಅಥವಾ ಜಾತಂ ಸರ್ವಂ ಸ್ವಾತ್ಮತಯಾ ವೇತ್ತೀತಿ ಉತ್ಪನ್ನವಾದುದೆಲ್ಲವನ್ನು ಆತ್ಮಸ್ವರೂಪದಿಂದಲೇ ಇರುವುದೆಂದು ಅಗ್ನಿಯ ಸರ್ವಾತ್ಮಭಾವವನ್ನು ಉಪಪಾದನೆಮಾಡಿದೆ.

ಘೃತಂ ಮೇ ಚಕ್ಷುಃ—ಲೋಕದಲ್ಲಿ ಆಜ್ಯವೆಂದು ಪ್ರಸಿದ್ಧವಾಗಿರುವುದು ಅಗ್ನಿಗೆ ಚಕ್ಷುಸ್ಸಿನರೂಪದಿಂದ ಇರುವುದೆಂದು ಈ ವಾಕ್ಯಕ್ಕೆ ಅರ್ಥವನ್ನು ವಿವರಿಸಿ, ಯಥಾ ಲೋಕೇ ಚಕ್ಷುರ್ಭಾಸಕಂ ಏವಂ ಮಯಿ ಪ್ರಕ್ಷಿಪ್ತಂ ಘೃತಂ ಮಯಿ ಜ್ವಾಲಾಮುತ್ಪಾದಯನ್ ಮಮ ಭಾಸಕಂ। ಲೋಕದಲ್ಲಿ ನೇತ್ರವು (ಕಣ್ಣು) ಎಲ್ಲಾ ಪದಾರ್ಥಗಳನ್ನು ನೋಡುವ ಸಾಮರ್ಥ್ಯವನ್ನು ಪ್ರಕಟಮಾಡುವ ಹಾಗೆ, ಅಗ್ನಿಯಲ್ಲಿ ಅರ್ಪಿಸಿದ ಘೃತವು ಜ್ವಾಲೆಯನ್ನು ಉಂಟುಮಾಡಿ, ಅಗ್ನಿಯ ಸ್ವರೂಪವನ್ನು ಪ್ರಕಾಶಗೊಳಿಸುವುದು ಎಂದು ಘೃತಕ್ಕೆ ಚಕ್ಷುಸ್ಸಿನ ರೂಪವನ್ನು ಸಮರ್ಥನೆ ಮಾಡಿದೆ.

ಅಮೃತಂ ಮ ಆಸನ್—ಅಮೃತಪದವು ಪ್ರಭಾರೂಪಂ ಅವಿನಾಶಿ ಜ್ಯೋತಿಃ ನಾಶವನ್ನು ಹೊಂದದೆ ಸ್ವರೂಪವನ್ನು ತ್ಯಜಿಸದೆ ಇರುವ ಪ್ರಭಾರೂಪದಿಂದ ಪ್ರಕಾಶಿಸುವ ಜ್ಯೋತೀರೂಪವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, ಈ ಪ್ರಕಾಶಿಸುವ ಜ್ಯೋತಿಸ್ಸ್ವರೂಪವು ಅಗ್ನಿಯ ಮುಖದಲ್ಲಿರುವುದು ಎಂದು ವರ್ಣಿಸಿದೆ.

ತ್ರಿಧಾತುಃ ಅರ್ಕಃ ರಜಸೋ ವಿಮಾನಃ—ಪ್ರಾಣ ಅಪಾನ, ವ್ಯಾನ ಎಂಬ ಮೂರು ವಿಧವಾಗಿರುವ ಪ್ರಾಣವಾಯುವಿನ ಸ್ವರೂಪವೂ ಅಗ್ನಿಯೇ ಆಗಿರುವುದು. ಪೂಜ್ಯವಾದ ವಾಯುಸ್ವರೂಪವು ಅಗ್ನಿಯ ರೂಪದಿಂದಲೇ

ಅಂತರಿಕ್ಷದಲ್ಲಿ ವಿಶೇಷವಾಗಿ ಪ್ರಕಾಶಿಸುತ್ತಿರುವುದು ಎಂದು ವರ್ಣಿಸಿ, ಅಗ್ನಿಗೆ ವಾಯುವಿನ ರೂಪದಿಂದ ಅಂತರಿಕ್ಷದಲ್ಲಿ ಸ್ಥಿತಿಯು ಉಕ್ತವಾಗಿದೆ.

**ಅಜಸ್ರೋ ಘರ್ಮಃ**—ಎಂಬ ವಾಕ್ಯದಿಂದ **ನೈರಂತರ್ಯೇಣ ಸಂತಾಪಕಾರೀ ಸೂರ್ಯಶ್ಚಾಹಮಸ್ಮಿ।** ಸರ್ವಕಾಲದಲ್ಲಿಯೂ ಸರ್ವರಿಗೂ ಸಂತಾಪವನ್ನು (ಸೆಕೆಯನ್ನು) ಅತಿಶಯವಾಗಿ ಉಂಟುಮಾಡುವ ಸೂರ್ಯರೂಪದಿಂದಲೂ ಅಗ್ನಿಯೇ ಇರುವನು ಎಂದು ಅಗ್ನಿಗೆ ಸೂರ್ಯರೂಪಾವಸ್ಥಿತಿಯು ಉಕ್ತವಾಗಿದೆ.

**ಹವಿರಸ್ಮಿ ನಾಮ**—ಈ ವಾಕ್ಯವು ಅಗ್ನಿಯು ಹವಿಸ್ಸಿನ ರೂಪದಿಂದ ಇರುವನೆಂಬ ಅರ್ಥವನ್ನು ಬೋಧಿಸುವುದೆಂದು ವರ್ಣಿಸಿ, **ಆಜ್ಯಪುರೋಡಾಶಾದಿರೂಪಂ ಹವಿರಸ್ಮಿ ತದುಪಲಕ್ಷಿತಂ ಸರ್ವಮಪ್ಯಹಮಸ್ಮಿ** ಆಜ್ಯ, ಪುರೋಡಾಶ ಇವೇ ಮೊದಲಾದ ರೂಪದಿಂದ ಇರುವ ಹವಿಸ್ಸುಗಳೂ ಮತ್ತು ಇತರ ವಿಧವಾದ ಭೋಗ್ಯವಸ್ತುಗಳೂ ಕೂಡ ಅಗ್ನಿಯು ರೂಪದಿಂದಲೇ ಇರುವುವು ಎಂದು ವಿವರಿಸಿದೆ. ಇದರಿಂದ "ಸರ್ವಂ ಖಲ್ವಿದಂ ಬ್ರಹ್ಮ" (ಛಾ. ಉ. ೩-೧೪-೧) ಎಂಬ ಶ್ರುತಿಯಲ್ಲಿ ಉಕ್ತವಾಗಿರುವ ಪರಬ್ರಹ್ಮನ ಸರ್ವಾತ್ಮಭಾವವೂ ಅಗ್ನಿಯ ವಿಷಯದಲ್ಲಿ ಉಕ್ತವಾಗಿ, **ಅನೇನಾಗ್ನೇಃ ಸರ್ವಾತ್ಮಕತ್ವಪ್ರತಿಪಾದನೇನ ಪರಬ್ರಹ್ಮತ್ವಂ ಉಕ್ತಂ ಭವತಿ।** ಅಗ್ನಿಯು ಸರ್ವಾತ್ಮಕತ್ವವು ಪ್ರತಿಪಾದಕವಾಗಿರುವುದರಿಂದ ಪರಬ್ರಹ್ಮಭಾವವು ಅಗ್ನಿಗೆ ಇಲ್ಲಿ ಉಕ್ತವಾಗಿದೆ ಎಂದು ವಿವರಿಸಿದೆ.

ನಿರುಕ್ತಕಾರರು **ಅಥಾತ ಊರ್ಧ್ವಗತಿಂ ವ್ಯಾಖ್ಯಾಸ್ಯಾಮಃ** ಎಂದು ಪ್ರತಿಜ್ಞೆಯನ್ನು ಮಾಡಿ, **ಮಹಾಂತಮಾತ್ಮಾನಮೇಷರ್ಗ್ಗಣಃ ಪ್ರವದಂತಿ,** ಮಹತ್ತ್ವಪೂರಿತವಾದ ಪರಮಾತ್ಮಸ್ವರೂಪವನ್ನು ಋಕ್ಕುಗಳು ವರ್ಣಿಸಿರುತ್ತವೆ, ಎಂದು ಹೇಳಿ, **ಆತ್ಮಜಿಜ್ಞಾಸಯಾ ಆತ್ಮಾನಂ ಪ್ರೋವಾಚಾಗ್ನಿರಸ್ಮಿ ಜನ್ಮನಾ ಜಾತವೇದಾಃ** (ನಿ. ಖಂ-೪) ಆತ್ಮಸ್ವರೂಪವನ್ನು ತಿಳಿಸುವ ವಿಷಯದಲ್ಲಿ ಅಗ್ನಿಯು ತನಗೆ ಇರುವ ಪರಬ್ರಹ್ಮಾನುಭವವನ್ನು ಹೇಳಿರುವನು ಎಂದು ಈ ಋಕ್ಕನ್ನು ಉದಹರಿಸಿದ್ದಾರೆ.

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತದ ಹದಿಮೂರನೆಯ ಅಧ್ಯಾಯದಲ್ಲಿ

ಹತ್ತನೆಯ ಖಂಡವು ಸಮಾಪ್ತವಾಗಿದೆ.

---

## ಅಥ ತೃತೀಯ ಖಂಡಃ

## ಮೂರನೆಯ ಖಂಡವು

**ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ। ಸ ಸಧ್ರೀಚೀಃ ಸವಿಷೂಚೀರ್ವಸಾನ ಆವರೀವರ್ತಿ ಭುವನೇಷ್ವಂತಃ (ಋ. ಸಂ. ೧-೧೬೪-೩೧) ॥ ಆವರೀವರ್ತಿ ಭುವನೇಷ್ವಂತರಿತ್ಯಥೈಷ ಮಹಾನಾತ್ಮಾ ಸತ್ವಲಕ್ಷಸ್ತತ್ಪರಂ ತದ್ಬ್ರಹ್ಮ**

ತತ್ಸತ್ಯಂ ತತ್ಸಲಿಲಂ ತದವ್ಯಕ್ತಂ ತದಸ್ಪರ್ಶಂ ತದರೂಪಂ ತದರಸಂ ತದಗಂಧಂ ತದಮೃತಂ ತಚ್ಛುಕ್ಲಂ ತನ್ನಿಷ್ಠೋ ಭೂತಾತ್ಮಾ ಸೈಷಾ ಭೂತಪ್ರಕೃತಿರಿತ್ಯೇಕೇ ತತ್‌ಕ್ಷೇತ್ರಂ ತತ್‌ಜ್ಞಾನಾತ್ ಕ್ಷೇತ್ರಜ್ಞಮನುಪ್ರಾಪ್ಯ ನಿರಾತ್ಮಕಮಥೈಷ ಮಹಾನಾತ್ಮಾ ತ್ರಿವಿಧೋ ಭವತಿ ಸತ್ವಂ ರಜಸ್ತಮ ಇತಿ ಸತ್ವಂ ತು ಮಧ್ಯೇ ವಿಶುದ್ಧಂ ತಿಷ್ಠತ್ಯಭಿತೋ ರಜಸ್ತಮಸೀ ರಜ ಇತಿ ಕಾಮದ್ವೇಷಸ್ತಮ ಇತ್ಯವಿಜ್ಞಾತಸ್ಯ ವಿಶುಧ್ಯತೋ ವಿಭೂತಿಂ ಕುರ್ವತಃ ಕ್ಷೇತ್ರಜ್ಞ ಪೃಥಕ್ತ್ವಾಯ ಕಲ್ಪತೇ ಪ್ರತಿಭಾತಿಲಿಂಗೇ ಮಹಾನಾತ್ಮಾ ತಮೋಲಿಂಗೋ ವಿದ್ಯಾಪ್ರಕಾಶಲಿಂಗಸ್ತಮೋಽಪಿ ನಿಶ್ಚಯಲಿಂಗ ಆಕಾಶಃ ॥ ೩ ॥

ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ ।
ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥ ೩೧ ॥

ವಿಶ್ವರಕ್ಷಕನೂ, ಯಾವಾಗಲೂ ಖಿನ್ನನಾಗದಿರುವವನೂ, ಅಂತರಿಕ್ಷಾದಿ ಮಾರ್ಗಗಳಿಂದ ಸಂಚರಿಸುವವನೂ, ಗಮನಾಗಮನಾದಿ ರೂಪಗಳಿಂದ ಲೋಕಕ್ಕೆ ಅಭಿಮುಖವಾಗಿಯೂ ಮತ್ತು ಪರಾಙ್ಮುಖವಾಗಿಯೂ ಸಹ ಪರ್ಯಾಯ ರೂಪವಾದ ಸಂಚಾರವುಳ್ಳವನೂ ಆದ ಆದಿತ್ಯನನ್ನು ನಾನು ತಿಳಿಯುತ್ತೇನೆ. ಅದೇ ಆದಿತ್ಯನು ತನ್ನಲ್ಲಿ ಒಟ್ಟಿಗೆ ಸೇರಿರುವುವೂ ಮತ್ತು ನಾನಾ ರೂಪಗಳಲ್ಲಿ ಹರಡಿ ವಿಶ್ವವನ್ನು ವ್ಯಾಪಿಸುವುವೂ ಆದ ಕಿರಣಗಳಿಂದ ಲೋಕಗಳನ್ನು ಆಚ್ಛಾದನೆಮಾಡುತ್ತಾ ಲಿಂಗರೂಪವಾದ ಭುವನಗಳ ಮಧ್ಯಭಾಗದಲ್ಲಿ ಉದಯಾಸ್ತಮಯರೂಪದಲ್ಲಿ ಪರಿಭ್ರಮಣವನ್ನು ಹೊಂದುತ್ತಾನೆ.

ಪ್ರವರ್ಗ್ಯದಲ್ಲಿ ಅಭಿಷ್ಟವಕಾಲದಲ್ಲಿ ಅಪಶ್ಯಂ ಗೋಪಾಂ ಎಂಬ ಈ ಋಕ್ಕಿನ ವಿನಿಯೋಗವಿರುವುದರಿಂದ ಆಶ್ವಲಾಯನಶ್ರೌತಸೂತ್ರದ ಅಪಶ್ಯಂ ಗೋಪಾಮನಿಪದ್ಯಮಾನಂ ಸ್ರಕ್ವೇ ದ್ರಪ್ಸಸ್ಯ ಎಂಬ ಸೂತ್ರದಿಂದ ವಿವೃವಾಗಿರುವುದು (ಆ. ೪–೬)

ಪ್ರವರ್ಗ್ಯೇ ಅಭಿಷ್ಟವೇ 'ಅಪಶ್ಯಂ ಗೋಪಾಂ' ಇತ್ಯೇಕಾ ವಿನಿಯುಕ್ತಾ । ಎಂದು ಸಾಯಣರು 'ಅಪಶ್ಯಂ ಗೋಪಾಮನಿಪದ್ಯಮಾನಃ ಸ್ರಕ್ವೇ ದ್ರಪ್ಸಸ್ಯ' (ಆಶ್ವ. ಶ್ರೌ. ೪–೬) ಎಂಬ ಆಶ್ವಲಾಯನಶ್ರೌತ ಸೂತ್ರವನ್ನು ಉದಹರಿಸಿ ಈ ಮಂತ್ರದ ವಿನಿಯೋಗವನ್ನು ತಿಳಿಸಿದ್ದಾರೆ. ಪ್ರವರ್ಗ್ಯಯಾಗಕಾಲದಲ್ಲಿ ಪಠಿಸಬೇಕಾದ ಮಂತ್ರವಿದು. ಆದರೆ ಅದರಲ್ಲೂ ನಿರ್ದಿಷ್ಟವಾದ ಕಾಲವಾವುದೆಂಬುದನ್ನು ತೈತ್ತಿರೀಯಾರಣ್ಯಕದ ಭಾಷ್ಯದಲ್ಲಿ ಸಾಯಣರು ತಿಳಿಸಿದ್ದಾರೆ. ಅಥ ಸಪ್ತಮೋ ಮಹಾವೀರಾವೇಕ್ಷಣಮುಚ್ಯತೇ । ಇದು ಮಹಾವೀರಾವೇಕ್ಷಣಕಾಲದಲ್ಲಿ ಪಠಿಸತಕ್ಕ ಮಂತ್ರವು ಎಂದು ಇದೇ ಮಂತ್ರವನ್ನು ಆರಣ್ಯಕದಲ್ಲಿ ವ್ಯಾಖ್ಯಾನಮಾಡುವ ಪೀಠಿಕಾಭಾಗದಲ್ಲಿ ಹೇಳಿದೆ. ಆದುದರಿಂದ ಈ ಮಂತ್ರಕ್ಕೆ ಪ್ರವರ್ಗ್ಯರೂಪವಾದ ಕರ್ಮಪರವಾಗಿಯೂ ಮತ್ತು ಆಧ್ಯಾತ್ಮಿಕಜ್ಞಾನವಾದ ಪರವಾಗಿಯೂ ಅರ್ಥವನ್ನು ಹೇಳಬೇಕು ಮೊದಲು ಕರ್ಮಪರವಾಗಿ ಅರ್ಥವನ್ನು ಮಾಡಿದರೆ ಮಹಾವೀರವೆಂಬ ಕುಂಭವನ್ನು ಇಲ್ಲಿ ಲೋಕಸಂಚಾರಿಯಾದ ಆದಿತ್ಯನಿಗೆ ಹೋಲಿಸಿದೆ. ಅಥವಾ ಮಹಾವೀರಕ್ಕೂ ಆದಿತ್ಯನಿಗೂ ತಾದಾತ್ಮ್ಯವನ್ನೇ ಹೇಳಿದೆ

ಲೌಕಿಕವಾದ ಪ್ರತ್ಯಕ್ಷಕ್ಕೆ ಗೋಚರವಾಗುವ ಆದಿತ್ಯನ ಉದಯಾಸ್ತಮಯರೂಪವಾದ ಸಂಚಾರವು ಲೋಕಕ್ಕೆಲ್ಲಾ ವಿದಿತವಾಗಿರುವ ಅಂಶವೇ ಆಗಿದೆ. ಆದರೂ ಸಹ, ವಿಶ್ವಸ್ಯ ಗೋಪಾಂ ಅನಿಪದ್ಯಮಾನಂ ಇತ್ಯಾದಿ ವಿಶೇಷಣಗಳು ಆದಿತ್ಯನ ಲೋಕರಕ್ಷಣಸ್ವರೂಪವನ್ನೂ, ಅದಕ್ಕಾಗಿ ಅವನು ನಿರಂತರವಾಗಿ ಸಂಚರಿಸುತ್ತಿದ್ದರೂ ಸಹ ಅಕುಂಠಿತವಾದ ಸ್ವರೂಪವನ್ನು ಹೊಂದಿರುವುದನ್ನೂ ವರ್ಣಿಸುತ್ತದೆ.

ಅಸೌ ವಾ ಆದಿತ್ಯೋ ಲೋಕಂಪೃಣಾಯಾತಯಾಮಾ ।

(ಶ. ಬ್ರಾ. ೮-೭-೨-೭)

ಇತ್ಯಾದಿವಾಕ್ಯಗಳಿಂದ ಶತಪಥಾದಿಗಳಲ್ಲಿ ಆದಿತ್ಯನ ಅಕುಂಠಿತವಾದ ಸ್ವರೂಪವನ್ನು ವರ್ಣಿಸಿರುವಂತೆ ಇಲ್ಲಿಯೂ ಸಹ ಅನಿಪದ್ಯಮಾನಂ ಅನುಸ್ಯೂತವಾದ ಸಂಚಾರವನ್ನಿಟ್ಟುಕೊಂಡಿದ್ದರೂ ಸಹ ಕೊಂಚವೂ ಖಿನ್ನನಾಗದ ಸ್ವರೂಪವುಳ್ಳ ಆದಿತ್ಯನನ್ನು ಎಂದು ತಿಳಿಸಿದೆ.

ಗೋಪಾಂ—ಸರ್ವಸ್ಯ ಲೋಕಸ್ಯ ವೃಷ್ಟಿಪ್ರಕಾಶಾದಿನಾ ಗೋಪಯಿತಾರಂ । ವೃಷ್ಟಿದಾನದಿಂದಲೂ, ಪ್ರಕಾಶವನ್ನು ಪ್ರಸರಿಸುವುದರಿಂದಲೂಸಹ ಸಕಲ ಲೋಕಗಳನ್ನು ಕಾಪಾಡತಕ್ಕವನೆಂದರ್ಥವು. ಇದನ್ನೇ ತೈತ್ತಿರೀಯಾರಣ್ಯಕದಲ್ಲಿ,

ಅಪಶ್ಯಂ ಗೋಪಾಮಿತ್ಯಾಹ । ಅಸೌ ವಾ ಆದಿತ್ಯೋ ಗೋಪಾಃ । ಸ ಹೀಮಾಃ ಪ್ರಜಾ ಗೋಪಾಯತಿ । ತಮೇವ ಪ್ರಜಾನಾಂ ಗೋಪ್ತಾರಂ ಕುರುತೇ ।

(ತೈ. ಆ. ೫-೬-೪)

ಎಂಬ ವಾಕ್ಯಗಳಿಂದ ಸ್ತುತಿಸಿದೆ. ಉದಯೇನ ಪ್ರಕಾಶಂ ಕೃತ್ವಾ ಸರ್ವಾಃ ಪ್ರಜಾ ಗೋಪಾಯತಿ । ಎಂದು ಸಾಯಣರು ವಿವರಿಸಿದ್ದಾರೆ.

ಅನಿಪದ್ಯಮಾನಂ.... ಕದಾಚಿದಪಿ ಅವಿಷಣ್ಣಂ । ಯಾವಾಗಲೂ ಖಿನ್ನನಾಗದಿರತಕ್ಕ ಎಂದು ಆದಿತ್ಯನ ಧ್ರುವ ಸ್ಥಿತಿಯನ್ನು ತಿಳಿಸಿದೆ.

ಅನಿಪದ್ಯಮಾನಮಿತ್ಯಾಹ । ನ ಹ್ಯೇಷ ನಿಪದ್ಯತೇ ।

(ತೈ. ಆ. ೫-೬-೪, ೫)

ಇಲ್ಲಿ ಭೂಮೌ ಪತನಾಭಾವಃ। ಅಂತರಿಕ್ಷಸ್ಥನಾದ ಆದಿತ್ಯನಿಗೆ ಭೂಮಿಯಮೇಲೆ ಪತನವಾಗುವ ಸಂಭವವಿಲ್ಲವೆಂದು ಆರಣ್ಯಕದ ವಿವರಣೆಯಿದೆ ಎಂದು ಸಾಯಣರು ತಿಳಿಸಿದ್ದಾರೆ. (ಸಾ. ಭಾ).

ಸಧ್ರೀಚೀಃ ವಿಷೂಚೀಃ—ಎಂಬೆರಡುಪದಗಳೂ ಆದಿತ್ಯರಶ್ಮಿಗಳಿಗೆ ವಿಶೇಷಣಗಳಾಗಿವೆ. ವಿಷೂಚೀಃ ಎಂದರೆ ವಿವಿಧವಾಗಿ ನಾನಾ ಕಡೆಗಳಲ್ಲಿಯೂ ಹರಡಿ ಜಗತ್ತಿಗೆ ಕ್ಲೇಶವನ್ನುಂಟುಮಾಡುವುವು ಎಂದರ್ಥ. ಸಾಕ್ಷಾತ್ತಾಗಿ ಆದಿತ್ಯನ ಸನ್ನಿಧಿಯಿಂದಲೇ ಪ್ರಸರಿಸುವುದು ಮಾತ್ರವಲ್ಲದೇ ಚಂದ್ರಾದಿಗ್ರಹಗಳಲ್ಲಿಯೂ ಕೇಂದ್ರಿತವಾಗಿ ಅಲ್ಲಿಯೂ ಬೇರೆ ಬೇರೆ ರೀತಿಗಳಲ್ಲಿ ಜಗತ್ತನ್ನು ವ್ಯಾಪಿಸಿ ಪ್ರಕಾಶರೂಪವಾದ ಹೊದ್ದಿಕೆಯನ್ನು ಹೊದಿಸತಕ್ಕ ಕಿರಣಗಳು ಎಂಬುದನ್ನು ತಿಳಿಸಲು ಚಂದ್ರಭೌಮಾದಿತ್ಯಾನಾಂ ರಾತ್ರಾವಪಿ ಪ್ರಕಾಶಯಿತ್ರೀಃ ತ್ವಿಷಃ ಎಂದು ಸಾಯಣರು ವಿಷೂಚೀಃ ಎಂಬ ಪದಕ್ಕೆ ಅರ್ಥವನ್ನು ವಿವರಿಸಿದ್ದಾರೆ. ಇದನ್ನೇ ತೈತ್ತಿರೀಯಾರಣ್ಯಕದಲ್ಲಿ

ಸ ಸಧ್ರೀಚೀಸ್ಸವಿಷೂಚೀರ್ವಸಾನ ಇತ್ಯಾಹ । ಸಧ್ರೀಚೀಶ್ಚ ಹ್ಯೇಷ ವಿಷೂಚೀಶ್ಚವಸಾನಃ ಪ್ರಜಾ ಅಭಿ ವಿಪಶ್ಯತಿ ॥

(ತೈ. ಆ. ೫-೬-೫)

ಎಂದು ವಿವರಣರೂಪದಲ್ಲಿ ತಿಳಿಸಿದೆ. ಇದೆಲ್ಲಾ ಆದಿತ್ಯಪರವಾದರೆ—ಪ್ರವರ್ಗ್ಯಯಾಗದಲ್ಲಿ ಆದಿತ್ಯನೊಡನೆ ತಾದಾತ್ಮ್ಯ ವನ್ನು ತೋರಿಸಿ ಮಹಾವೀರ ಪರವಾದ ಅರ್ಥವನ್ನು ತೈತ್ತಿರೀಯಾರಣ್ಯಕದ ವ್ಯಾಖ್ಯಾನದಲ್ಲಿ ಸಾಯಣರು ಹೇಳಿದ್ದಾರೆ. ಗೋಪಾಂ ಎನ್ನುವದಕ್ಕೆ ಕರ್ಮನಿಷ್ಪಾದನೇನ ರಕ್ಷಕಂ । ಕರ್ಮವು ನಿರ್ವಿಘ್ನವಾಗಿ ನೆರವೇರುವಂತೆ ಮಾಡುವುದ ರಿಂದ ಈ ವಿಶೇಷಣವು ಮಹಾವೀರಪರವಾಗಿದೆ. ಅನಿಪದ್ಯಮಾನಂ ಎಂಬ ಪದಕ್ಕೆ ವಿನಾಶರಹಿತಂ ಅಥವಾ ಆದಿತ್ಯರೂಪೇಣ ಪತನರಹಿತಂ । ನಾಶರಹಿತವಾದುದು ಅಥವಾ ಆದಿತ್ಯರೂಪದಿಂದಿದ್ದು ಪತನವಿಲ್ಲದಿರತಕ್ಕದ್ದು ಎಂದರ್ಥ. ಇವೆಲ್ಲವು ಕರ್ಮಪರವಾದ ಅರ್ಥವಾಗಿದೆ. ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಈ ವಿಶೇಷಣಗಳ ಔಚಿತ್ಯವನ್ನು ತೋರಿಸಿ ಪರಬ್ರಹ್ಮನೇ ಆದಿತ್ಯಸ್ವರೂಪನು ; ಆದುದರಿಂದ ಈ ವರ್ಣನಗಳೆಲ್ಲವೂ ಪರಬ್ರಹ್ಮನ ವರ್ಣನ ಗಳು ಎಂದೂ ಅರ್ಥಮಾಡಬಹುದು.

ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿ ತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛತೀಮಂ ಚಾಮುಂ ಚಾಮುಷ್ಮಾದಾದಿತ್ಯಾತ್ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯಂತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ ।

(ಛಾ. ಉ. ೮-೬-೨)

ಎಂದು ಪ್ರಕೃತವಾದ ಋಕ್ಕಿನಲ್ಲಿ ಸಧ್ರೀಚೀಃ ವಿಷೂಚೀಃ ಎಂಬ ವಿಶೇಷಣಗಳಿಂದ ತಿಳಿಸುವ ಗುಣಗಳು ವರ್ಣಿತವಾಗಿವೆ. ಎರಡು ಮಹಾಗ್ರಾಮಗಳಿಗೆ ದಾರಿಯನ್ನು ತೋರಿಸುವ ಎರಡು ಮಹಾಪಥಗಳು ವಿಸ್ತೃತವಾಗಿ ಹರಡಿರುವಂತೆ, ಈ ಆದಿತ್ಯ ರಶ್ಮಿಗಳಿಗೂ ಸಹ ಎರಡು ಮಹಾಪಥಗಳಿದ್ದು ಆ ರಶ್ಮಿಗಳ ಪ್ರಸರಣವು ಎರಡು ವಿಧಗಳಲ್ಲಿರುತ್ತದೆ ಆದಿತ್ಯನಿಂದ ಉಳಿದೆಲ್ಲಾ ಲೋಕಗಳಿಗೂ ಹರಡುವುದೂ, ಪುನಃ ಅವೆಲ್ಲವೂ ಅಲ್ಲಿಂದ ಹೊರಟು ಆದಿತ್ಯನಲ್ಲಿಗೇ ಸೇರಿ ಕೇಂದ್ರೀ ಕೃತವಾಗುವುದೂ ಸಹ ಇಲ್ಲಿ ವಿವರಿಸಲ್ಪಟ್ಟಿದೆ. ಇಲ್ಲಿ ನಾಡಿಗಳೆಂದರೆ ಕೇವಲ ಪುರುಷ ವ್ಯಕ್ತಿಯ ದೇಹದಲ್ಲಿರುವ ಸಕಲ ನಾಡಿಗಳೆಂದರ್ಥಮಾಡಬಹುದು. ಅಥವಾ ಇದನ್ನೇ ರೂಪಕವಾಗಿ ತೆಗೆದುಕೊಂಡರೆ ವಿಶ್ವವನ್ನೇ ಶರೀರವನ್ನಾಗಿ ತಿಳಿದು ಅಲ್ಲಿರುವ ಅವಯವಗಳನ್ನೇ ನಾಡಿಗಳಿಗೆ ಹೋಲಿಸಿ ಅರ್ಥಮಾಡಬಹುದು. ಆದುದರಿಂದಲೇ ಉಭೌ ಲೋಕೌ ಗಚ್ಛಂತಿ ಎಂದು ಹೇಳಿದೆ. ಆದಿತ್ಯನಿಂದ ಪ್ರಸರಿಸಿ ವಿಸೂಚಿಗಳಾದ ಈ ರಶ್ಮಿಗಳ ರೂಪಗಳೂ ಕ್ರಿಯೆಗಳೂ ವಿವಿಧಾತ್ಮಕಗಳಾಗಿರುವುವು ಹೀಗೆ ವರ್ಣಿಸುತ್ತಾ—

ಅಸೌ ವಾ ಆದಿತ್ಯಃ ಪಿಂಗಲಃ ಏಷ ನೀಲ ಏಷ ಪೀತ ಏಷ ಲೋಹಿತಃ ।

(ಛಾ. ಉ. ೮-೬-೧)

ಇತ್ಯಾದಿಯಾಗಿ ತಿಳಿಸಿದೆ. ಇಂತಹ ಜಗದ್ರಕ್ಷಕನೂ ಜಗದ್ವ್ಯಾಪಿಯೂ ಸಕಲಭುವನಾಂತರ್ವರ್ತಿಯೂ ಆದ ಆದಿತ್ಯನ ಸ್ವರೂಪವನ್ನು ತಿಳಿಯಬೇಕೆಂಬ ಉದ್ದಿಶ್ಯದಿಂದ ಅಪಶ್ಯಂ ಎಂದು ಹೇಳಿದೆ. ಇಲ್ಲಿ ಅಪಶ್ಯಂ ಎಂದರೆ ಕೇವಲ ಭೌತಿಕವಾದ

ಚಕ್ಷುಸ್ಸಿಗೆ ಮಾತ್ರ ಗೋಚರವಾಗತಕ್ಕ ಆದಿತ್ಯನ ಸ್ವರೂಪವಲ್ಲ ಎಂಬುದನ್ನು ತಿಳಿಸಲು ಸಾಯಣರು "ಅಪಶ್ಯಂ— ಯಾತ್ಮೈಯೇವ ಪಶೇಯಂ" ಆದಿತ್ಯನ ಸತ್ಯಸ್ವರೂಪವನ್ನು ಅರಿಯುವೆನು ಎಂದು ವಿವರಿಸಿದ್ದಾರೆ. ಆದಿತ್ಯನ ಸತ್ಯಸ್ವರೂಪವು ಕೇವಲ ರಶ್ಮಿಗಳ ದ್ವಾರಾ ಪ್ರಸರಣವೂ, ಸಂಗ್ರಹವೂ ಆಗಿರುವುದು ಮಾತ್ರವಲ್ಲದೆ ಸಕಲವಾದ ವಿಶ್ವವೂ ಯಾರಲ್ಲಿ ಅಂತರ್ಗತ ವಾಗಿದೆಯೋ ಅಂತಹ ಪರಬ್ರಹ್ಮನೇ ಎಂದು ಅರಿಯಬೇಕು.

ಸ ಹೋವಾಚ ಗಾರ್ಗ್ಯೋ ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ।

(ಬೃ. ಉ. ೩–೧–೨)

ಈ ಆದಿತ್ಯನಲ್ಲಿ ಮಧ್ಯವರ್ತಿಯಾಗಿರುವ ಮಹಾಪುರುಷನೇ ಪರಬ್ರಹ್ಮನು ಎಂದು ಉಪಾಸನೆಯನ್ನು ಮಾಡಬೇಕು ಏತಕ್ಕೆಂದರೆ:—

ಅಯಮಾದಿತ್ಯಃಸರ್ವೇಷಾಂ ಭೂತಾನಾಂ ಮಧ್ವಸಾವಾದಿತ್ಯಸ್ಯ ಸರ್ವಾಣಿ ಭೂತಾನಿ ಮಧುಯಶ್ಚಾಯ ಮಸ್ಮಿನ್ನಾದಿತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಚಾಕ್ಷುಷ ಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥

(ಬೃ. ಉ. ೨–೫–೫)

ಈ ಆದಿತ್ಯನು ಸಕಲಭೂತಗಳಿಗೂ ಮಧುವಾಗಿದ್ದಾನೆ' ಸಕಲ ಭೂತಗಳೂ ಈ ಆದಿತ್ಯನಿಗೆ ಮಧುವಾಗಿವೆ. ಈ ಆದಿತ್ಯಾಂತರ್ಗತನಾದವನೂ, ಅಮೃತಮಯನೂ ಆದ ಪುರುಷನೇ ಪರಬ್ರಹ್ಮನಾಗಿದ್ದಾನೆ. ಎಂಬ ತತ್ತ್ವವನ್ನು ತಿಳಿಯುತ್ತೇನೆ ಎಂಬುದೇ ಅಪಶ್ಯಂ ಎಂಬುದರ ಅರ್ಥವೆಂದು ತಿಳಿಸಿದೆ.

ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ ದದರ್ಶ
ಹಿರುಗಿನ್ನು ತಸ್ಮಾತ್ ।
ಸ ಮಾತುರ್ಯೋನಾ ಪರಿವೀತೋ ಅಂತರ್ಬಹುಪ್ರಜಾ ನಿರ್ಋತಿಮಾ
ವಿವೇಶ ॥ ೩೨ ॥

ಈ ರೀತಿ ಶ್ರೀಯಾಸ್ಕಮುನಿ ವಿರಚಿತ ನಿರುಕ್ತಭಾಷ್ಯದ ಹದಿನಾಲ್ಕನೆಯ ಅಧ್ಯಾಯದಲ್ಲಿ

ಮೂರನೆಯ ಖಂಡವು ಸಮಾಪ್ತವಾಗಿದೆ.

## ಅಥ ಚತುರ್ಥಃ ಖಂಡಃ

## ನಾಲ್ಕನೆಯ ಖಂಡವು

ಆಕಾಶಗುಣಃ ಶಬ್ದ ಆಕಾಶಾದ್ವಾಯುರ್ದ್ವಿಗುಣಃ ಸ್ಪರ್ಶೇನ ವಾಯೋರ್ಜ್ಯೋತಿಸ್ತ್ರಿಗುಣಂ ರೂಪೇಣ ಜ್ಯೋತಿಷ ಆಪಶ್ಚತುರ್ಗುಣಾ ರಸೇನಾದ್ಭ್ಯಃ ಪೃಥಿವೀ ಪಂಚಗುಣಾ ಗಂಧೇನ ಪೃಥಿವ್ಯಾ ಭೂತಗ್ರಾಮ ಸ್ಥಾವರಜಂಗಮಾ ಸ್ತದೇತದಹರ್ಯುಗಸಹಸ್ರಂ ಜಾಗರ್ತಿ ತಸ್ಯಾಂತೇ ಸುಷುಪ್ಸ್ಯನ್ನಂಗಾನಿ ಪ್ರತ್ಯಾಹರತಿ ಭೂತಗ್ರಾಮಾಃ ಪೃಥಿವೀಮಪಿಯಂತಿ ಪೃಥಿವ್ಯಪ ಆಪೋ ಜ್ಯೋತಿಷಂ ಜ್ಯೋತಿರ್ವಾಯುಂ ವಾಯುರಾಕಾಶಮಾಕಾಶೋ ಮನೋ ಮನೋ ವಿದ್ಯಾಂ ವಿದ್ಯಾ ಮಹಾಂತಮಾತ್ಮಾನಂ ಮಹಾನಾತ್ಮಾ ಪ್ರತಿಭಾಂ ಪ್ರತಿಭಾ ಪ್ರಕೃತಿಂ ಸಾ ಸ್ವಪಿತಿ ಯುಗಸಹಸ್ರಂ ರಾತ್ರಿಸ್ತಾವೇತಾವಹೋರಾತ್ರಾವಜಸ್ರಂ ಪರಿವರ್ತೇತೇ ಸ ಕಾಲಸ್ತದೇತದಹರ್ಭವತಿ ಯುಗಸಹಸ್ರಪರ್ಯಂತಮಹರ್ಯದ್ಬ್ರಹ್ಮಣೋ ವಿದೂ ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾ ಇತಿ ॥ ೪ ॥

ತಂ ಪರಿವರ್ತಮನ್ಯೋಽನುಪ್ರವರ್ತತೇ ಸ್ರಷ್ಟಾ ದ್ರಷ್ಟಾ ವಿಭಕ್ತಾತಿಮಾತ್ರೋಽಹಮಿತಿ ಗಮ್ಯತೇ ಸ ಮಿಥ್ಯಾದರ್ಶನೇದಂ ಪಾವಕಂ ಮಹಾಭೂತೇಷು ಚಿರೋಣ್ವಾಕಾಶಾದ್ವಾಯೋಃ ಪ್ರಾಣಶ್ಚಕ್ಷುಶ್ಚ ವಕ್ತಾರಂ ಚ ತೇಜಸೋದ್ಭ್ಯಃ ಸ್ನೇಹಂ ಪೃಥಿವ್ಯಾ ಮೂರ್ತಿಃ ಪಾರ್ಥಿವಾಂಸ್ತ್ವಷ್ಟೌ ಗುಣಾನ್ ವಿದ್ಯಾತ್ರೀನ್ ಮಾತೃತಸ್ತ್ರೀನ್ ಪಿತೃತೋಽಸ್ಥಿಸ್ನಾಯುಮಜ್ಜಾನಃ ಪಿತೃತಸ್ತ್ವಙ್ಮಾಂಸಶೋಣಿತಾನಿ ಮಾತೃತೋಽನ್ನಂ ಪಾನಮಿತ್ಯಷ್ಟೌ ಸೋಽಯಂ ಪುರುಷಃ ಸರ್ವಮಯಃ ಸರ್ವಜ್ಞಾನೋಪಿ ಕ್ಲೃಪ್ತಃ ॥ ೫ ॥

ಸ ಯದ್ಯನುರುಧ್ಯತೇ ತದ್ಭವತಿ ಯದಿ ಧರ್ಮೋಽನುರುಧ್ಯತೇ ತದ್ದೇವೋ ಭವತಿ ಯದಿ ಜ್ಞಾನಮನುರುಧ್ಯತೇ ತದಮೃತೋ ಭವತಿ ಯದಿ ಕಾಮಮನುರುಧ್ಯತೇ ಸಂಚ್ಯವತ ಇಮಾಂ ಯೋನಿಂ ಸಂದಧ್ಯಾತ್ತದಿದಮತ್ರ ಮತಂ ಶ್ಲೇಷ್ಮಾ ರೇತಸಃ ಸಂಭವತಿ ಶ್ಲೇಷ್ಮಣೋ ರಸೋ ರಸಾಚ್ಛೋಣಿತಂ ಶೋಣಿತಾನ್ಮಾಂಸಂ ಮಾಂಸಾನ್ಮೇದೋ ಮೇದಸಃ ಸ್ನಾವಾ ಸ್ನಾವ್ನೋಽಸ್ಥೀನ್ಯಸ್ಥಿನ್ಯಸ್ಥಿಭ್ಯೋ ಮಜ್ಜಾ ಮಜ್ಜಾತೋ ರೇತಸ್ತದಿದಂ ಯೋನೌ ರೇತಃ ಸಿಕ್ತಂ ಪುರುಷಃ ಸಂಭವತಿ ಶುಕ್ರಾತಿರೇಕೇ ಪುಮಾನ್ ಭವತಿ

